ಶ್ರೀ ಶಿವಯೋಗಿ ಶಿವಾಚಾರ್ಯ ವಿರಚಿತಃ

# ಸಿದ್ಧಾಂತಶಿಖಾಮಣಿಃ

ಸೋಪಲೆ ಶ್ರೀ ರೇವಣಾರಾಧ್ಯ ವಿರಚಿತ
ಸಿದ್ಧಾಂತಬೋಧಿನೀ ಕನ್ನಡ ವ್ಯಾಖ್ಯಾ ಸಹಿತ

ಸಂಪಾದಕ
ಪಂಡಿತ ಡಿ. ಸಿದ್ಧಗಂಗಯ್ಯ, ಎಂ.ಎ.

ಪ್ರಕಾಶಕರು
ವಿಜಯ ಪ್ರಕಾಶನ
ಲಕ್ಕೇನಹಳ್ಳಿ, ಗುಬ್ಬಿ ತಾಲ್ಲೂಕು
ತುಮಕೂರು ಜಿಲ್ಲೆ - ೫೭೨ ೨೧೬

ಶ್ರೀ ಶಿವಯೋಗಿ ಶಿವಾಚಾರ್ಯ ವಿರಚಿತಃ

# ಸಿದ್ಧಾಂತಶಿಖಾಮಣಿಃ

**ಸೋಸಲೆ ಶ್ರೀ ರೇವಣಾರಾಧ್ಯವಿರಚಿತ**
**ಸಿದ್ಧಾಂತಬೋಧಿನೀ ಕನ್ನಡ ವ್ಯಾಖ್ಯಾಸಹಿತ**

ಸಂಪಾದಕ

**ಪಂಡಿತ ಡಿ. ಸಿದ್ಧಗಂಗಯ್ಯ** ಎಂ.ಎ.

ಪ್ರಕಾಶಕರು :

**ವಿಜಯ ಪ್ರಕಾಶನ**

ಲಕ್ಕೇನಹಳ್ಳಿ, ಗುಬ್ಬಿ ತಾಲ್ಲೂಕು,
ತುಮಕೂರು ಜಿಲ್ಲೆ - **೫೭೨ ೨೧೬.**

SHRI SHIVAYOGI SHIVACHARYA VIRACHITA
SIDDHANTHA SHIKAMANI - with Siddhantabodhini Vyakhya of
Sosale Shri Revanaradhya.
Edited by : Pandita D. Siddagangaiah, M.A.,
Published by : Shri Vijaya Prakashana ✆ : 0816-222284
Lakkenahalli, Gubbi Tq, Tumkur Dist., KARNATAKA-572 216
Pages : XLVIII + 623 Rs. 123/-
First Edition : 1100 Copies



"Published with Financial Assistance from the Central Institute of Indian Languages (Ministry of Human Resource Development, Department of Secondary & Higher Education, Govt of India), Manasagangotri, Mysore-570 006 vide sanction letter No. F. 51-4(6)/2003-04/KAN/GRNT dated 31st August, 2004 under the scheme of Grant-in-Aid".

"ಈ ಗ್ರಂಥವು ಕೇಂದ್ರೀಯ ಭಾರತೀಯ ಭಾಷಾ ಸಂಸ್ಥೆ (ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆ ಸಚಿವಾಲಯ, ಸೆಕೆಂಡರಿ ಮತ್ತು ಉನ್ನತ ಶಿಕ್ಷಣ ಇಲಾಖೆ, ಭಾರತ ಸರ್ಕಾರ), ಮಾನಸ ಗಂಗೋತ್ರಿ, ಮೈಸೂರು-570 006 ಇವರ ಮಂಜೂರಾತಿ ಆದೇಶ ಸಂಖ್ಯೆ ನಂ. ಎಫ್. 51-4(6)/2003-04/ಕೆಎಎನ್/ಜಿಆರ್ಎನ್‌ಟಿ ದಿನಾಂಕ 31 ಆಗಸ್ಟ್, 2004ರ ಅನುದಾನದ ಯೋಜನೆಯಡಿಯಲ್ಲಿ ಪ್ರಕಟಿತ".

ಪುಸ್ತಕಗಳು ದೊರೆಯುವ ಸ್ಥಳ :
S. Prathap, 2nd Main, 2nd Cross,
Kuvempu Nagar, Tumkur-572 102.
Ph : 0816-2277731

M. Mallikarjunaiah, Advocate,
2nd Main, I Cross,
Kuvempu Nagar, Tumkur-572 102.
Ph : 0816-2270397

ಅಕ್ಷರ ಜೋಡಣೆ
ಬೆನಕ ಡಿ.ಟಿ.ಪಿ ಕಾಟೇಜ್, ತುಮಕೂರು

ಮುದ್ರಕರು :
ಇಳಾ ಮುದ್ರಣ
ನಂ. 36, 40 ಅಡಿರಸ್ತೆ, ರಾಘವನಗರ, ನ್ಯೂ ಟಿಂಬರ್‌ಯಾರ್ಡ್ ಲೇಔಟ್,
ಬೆಂಗಳೂರು-560 026. ದೂ : 26757159/30615773

ಗ್ರಂಥ ಸಮರ್ಪಣೆ

ಶ್ರೀ

ಕಾರುಣ್ಯಮೂರ್ತಿಗಳೂ ಶ್ರೀ ಸಿದ್ಧಗಂಗಾ ಮಠಾಧ್ಯಕ್ಷರೂ ಆದ

**ಪರಮಪೂಜ್ಯ ಡಾ. ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ**

ಭಕ್ತಿಪೂರ್ವಕವಾಗಿ ಸಮರ್ಪಿಸಲಾಗಿದೆ.

# ಮುನ್ನುಡಿ

ಶಿವಯೋಗಿ ಶಿವಾಚಾರ್ಯವಿರಚಿತ ಸಿದ್ಧಾಂತಶಿಖಾಮಣಿಯು ವೀರಶೈವ ಸಿದ್ಧಾಂತ ಪ್ರತಿಪಾದಕ ಸರ್ವೋತ್ಕೃಷ್ಟ ಗ್ರಂಥ. ವೇದಾಗಮೋಪನಿಷತ್ತುಗಳಲ್ಲಿ ಪ್ರತಿಪಾದಿತವಾಗಿರುವ ಆಚಾರ ವಿಚಾರಗಳನ್ನು ರೇಣುಕಾಗಸ್ತ್ಯ ಸಂವಾದ ರೂಪದಲ್ಲಿ ಶಿವಯೋಗಿ ಶಿವಾಚಾರ್ಯರು ನಿರೂಪಿಸಿದ್ದಾರೆ. ಸಿದ್ಧಾಂತಶಿಖಾಮಣಿ ವೀರಶೈವ ಸಿದ್ಧಾಂತ ಪ್ರತಿಪಾದಕ ಆಚಾರ್ಯ ಗ್ರಂಥ; ಆರಾಧ್ಯಗ್ರಂಥ. ಈ ಕೃತಿಯ ಕರ್ತೃ ಕಾಲ ದೇಶ ವರ್ತಮಾನಗಳ ಬಗೆಗೆ ಏಕಾಭಿಪ್ರಾಯ ಇನ್ನೂ ಒಡಮೂಡಿಲ್ಲ. ಈ ಕೃತಿಯ ಪ್ರಥಮ ಪರಿಚ್ಛೇದದ ಎಂಟು ಶ್ಲೋಕಗಳು ಕವಿಯ ಸ್ವವಿಷಯದ ಮೇಲೆ ಬೆಳಕು ಚೆಲ್ಲುವಂತಿವೆ: ಅವು ಇಂತಿವೆ. ಆಚಾರ ನಿಷ್ಣಾತನಾದ ಶಿವಜ್ಞಾನಕ್ಕೆ ಸಮುದ್ರದೋಪಾದಿಯಂತಿದ್ದ ಶಿವಯೋಗಿಗಳು ಮೂಲಪುರುಷರು. ಇವರಿಗೆ ಮುದ್ದುದೇವ ನೆಂಬ ಸುತನಾದನು. ಈ ಮುದ್ದುದೇವನಿಗೆ ಶಿವಾದ್ವೈತ ನಿರ್ಣಾಯಕನೆನಿಸಿದ ಸಿದ್ಧನಾಥನೆಂಬ ಪುತ್ರನಾದನು. ಈತನ ಮಗನೇ ಶಿವಯೋಗಿ. ಸಿದ್ಧಾಂತಶಿಖಾಮಣಿಯ ಕರ್ತೃ ಈತನೇ. ಇಷ್ಟನ್ನು ಬಿಟ್ಟು ಮತ್ತಾವ ವಿವರಗಳೂ ಇಲ್ಲ.

ವೀರಶೈವ ಸಿದ್ಧಾಂತ ನಿರ್ಣಾಯಕ ಗ್ರಂಥವಾದ ಸಿದ್ಧಾಂತಶಿಖಾಮಣಿ ಅಂದಿನ ಕಾಲಕ್ಕೆ ತುಂಬ ಪ್ರಸಿದ್ಧವಾಗಿ ಪ್ರಚಲಿತವಾಗಿದ್ದಂತೆ ಕಂಡುಬರುತ್ತದೆ. ಈ ಗ್ರಂಥ ಹಲವಾರು ಭಾಷೆಗಳಲ್ಲಿ ಅನುವಾದಗೊಂಡಿರುವುದೂ ಹಲವಾರು ಭಾಷೆಗಳಲ್ಲಿ ಈ ಗ್ರಂಥಕ್ಕೆ ವ್ಯಾಖ್ಯಾನ ಟೀಕೆ ಟಿಪ್ಪಣಿಗಳು ರಚಿತವಾಗಿರುವುದೂ ಈ ಗ್ರಂಥದ ಮಹತ್ವಕ್ಕೂ ಪ್ರಾಚಾರ್ಯಕ್ಕೂ ದೃಷ್ಟಾಂತವೆನಿಸಿದೆ. ಕನ್ನಡದಲ್ಲಿ ಕೆಲವಾರು ಟೀಕುಗಳೂ ವ್ಯಾಖ್ಯಾನಗಳೂ ರಚಿತವಾಗಿವೆ. ಇವೆಲ್ಲವೂ ಪ್ರಕಟವಾಗಿವೆ. ಇವುಗಳ ವಿವರಗಳನ್ನು ಈ ಗ್ರಂಥದ ಸಂಪಾದಕರು ನೀಡಿದ್ದಾರೆ. ಕ್ರಿ.ಶ. ಸುಮಾರು 1450ರಲ್ಲಿ ರಚಿತವಾದ ಉಜ್ಜನೀಶನ ವ್ಯಾಖ್ಯೆಯೇ (೫ನೆಯ ಪರಿಚ್ಛೇದ ದಿಂದ ೨೧ನೆಯ ಪರಿಚ್ಛೇದದವರೆಗೆ ಮಾತ್ರ) ಮೊದಲನೆಯದು. ಕ್ರಿ.ಶ.1623ರಲ್ಲಿ ಸೋಸಲೆ ರೇವಣಾರಾಧ್ಯರು ಕನ್ನಡದಲ್ಲಿ ಸಿದ್ಧಾಂತಬೋಧಿನೀ (ಸಿದ್ಧಾರ್ಥ ಸಂಬೋಧಿನೀ) ಎಂಬ ಟೀಕನ್ನು ಬರೆದರು. ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿದ್ದ ಮರಿತೋಂಟದಾರ್ಯರು 'ತತ್ತ್ವ ಪ್ರದೀಪಿಕಾ ವ್ಯಾಖ್ಯಾ' ಎಂಬ ಹೆಸರಿನಿಂದ ಸಂಸ್ಕೃತದಲ್ಲಿ ರಚಿಸಿದರು. ಈ ವ್ಯಾಖ್ಯೆ ಸೋಸಲೆ ರೇವಣಾರಾಧ್ಯರ ಕನ್ನಡ ಟೀಕಿನ ಸಂಸ್ಕೃತಾನುವಾದ ಎಂಬುದನ್ನು ಈ ಗ್ರಂಥದ ಸಂಪಾದಕರು ದೃಷ್ಟಾಂತಗಳಿಂದ ಸ್ಪಷ್ಟಪಡಿಸಿದ್ದಾರೆ. ಈ ಇಬ್ಬರು ವ್ಯಾಖ್ಯಾನಕಾರರು ತಮ್ಮ ವ್ಯಾಖ್ಯಾನದ ಆರಂಭದ ಅವತರಣಿಕೆಗಳಲ್ಲಿ ಶ್ರೀ ಸಿದ್ಧರಾಮೇಶ್ವರರ

ಸಂಪ್ರದಾಯದಲ್ಲಿ ಶಿವಯೋಗಿಗಳು ಬಂದರು ಎಂಬ ಅಂಶವೇ ಮುಂದಿನ ಎಲ್ಲ ಗೊಂದಲ ಗಳಿಗೂ ಮೂಲಕಾರಣವಾಯಿತು. ಈ ಅಂಶದ ಬಗ್ಗೆ ಸಂಪಾದಕರ ಪ್ರಸ್ತಾವನೆಯನ್ನು ಪರಿಶೀಲಿಸಬಹುದು. ಈ ವಿಚಾರಕ್ಕೆ ಸಂಬಂಧಿಸಿದ ವಿಚಾರಕ್ಕಾಗಿಯೋ ಏನೋ ಹಲವಾರು ವ್ಯಾಖ್ಯಾನಕಾರರು ೧ ರಿಂದ ೪ ನೆಯ ಪರಿಚ್ಛೇದಗಳನ್ನು ಬಿಟ್ಟಿರಬಹುದೆಂದು ತೋರುತ್ತದೆ.

ಶಿವಯೋಗಿಗಳ ಸಿ.ಶಿ.ಯು ಒಂದು ಸ್ವತಂತ್ರ ಕೃತಿಯಲ್ಲ; ಇದೊಂದು ಸಂಕಲನ ಕೃತಿ ಯೆಂದು ಕೆಲವು ವಿದ್ವಾಂಸರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಶಿವಯೋಗಿಗಳೇ "ವೇದಾಗಮೋಪನಿಷತ್ತು ಪುರಾಣಾದಿ ಗ್ರಂಥಗಳಿಂದ ವೀರಶೈವ ಸಿದ್ಧಾಂತ ಪರವಾದ ತತ್ತ್ವಗಳನ್ನು ಸಂಕಲಿಸಿ ರಚಿಸಿದ್ದೇನೆಂದು ಹೇಳಿಕೊಂಡಿದ್ದರೂ ಇದೊಂದು ಸ್ವತಂತ್ರ ಕೃತಿಯೇ ಹೊರತು ಸಂಗ್ರಹ, ಸಂಕಲನ ಕೃತಿಯಲ್ಲವೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ."

ಬಸವಾದಿ ಶರಣರ ವಚನಗಳಲ್ಲಿ ಕಂಡುಬರುವ ಸಂಸ್ಕೃತ ಉಲ್ಲೇಖಗಳು ಸಿದ್ಧಾಂತ ಶಿಖಾಮಣಿಯಲ್ಲಿರುವಂತೆಯೇ ಬೇರೆ ಕಡೆಗಳಲ್ಲಿಯೂ ಕಂಡಬರುವುದರಿಂದ ಇವುಗಳ ಮೂಲವನ್ನು ಇಲ್ಲಿಂದಲೇ ತೆಗೆದುಕೊಂಡಿದ್ದಾರೆಂದು ಹೇಳಲು ಬರುವಂತಿಲ್ಲ.

ವೀರಶೈವ ಸಿದ್ಧಾಂತದಲ್ಲಿ ಪ್ರಮುಖ ವಿಷಯಗಳಾದ ಷಟ್ಸ್ಥಲ ಸಿದ್ಧಾಂತ ಹಾಗೂ ಏಕೋತ್ತರ ಶತಸ್ಥಲಗಳ ಪರಿಕಲ್ಪನೆ ವೀರಶೈವಾಗಮಗಳಲ್ಲಿ ನಿರೂಪಿತವಾಗಿದ್ದು ಸಿದ್ಧಾಂತ ಶಿಖಾಮಣಿಯಲ್ಲಿ ಅವು ಕ್ರಮಬದ್ಧವಾಗಿ ಸಂಯೋಜನೆಗೊಂಡು ಮುಂದಿನ ವಚನಕಾರರಲ್ಲಿ ಅವುಗಳು ಹೆಚ್ಚು ಪ್ರಚಾರಗೊಂಡಿವೆ ಎಂಬುದಾಗಿ ಭಾವಿಸಬಹುದು.

ಶಿವಯೋಗಿ ಶಿವಾಚಾರ್ಯರಿಂದ ರಚಿತವಾದ ಸಿ.ಶಿ.ಯ ಹಲವಾರು ಆವೃತ್ತಿಗಳು ಹಲವಾರು ಭಾಷೆಗಳಲ್ಲಿ ಪ್ರಕಟಿತವಾಗಿರುವುದು ಸರ್ವವಿದಿತ. ಪ್ರಸ್ತುತ ಶ್ರೀ ಡಿ. ಸಿದ್ಧಗಂಗಯ್ಯ ನವರು ಶಿವಯೋಗಿಗಳ ಸಿ.ಶಿ.ಯನ್ನು ಶ್ರೀ ಸೋಸಲೆ ರೇವಣಾರಾಧ್ಯರ ಸಿದ್ಧಾಂತಬೋಧಿನೀ ಎಂಬ ಕನ್ನಡ ವ್ಯಾಖ್ಯಾನವನ್ನೊಳಗೊಂಡ ಆವೃತ್ತಿಯನ್ನು ಪ್ರಕಟಿಸಿರುವುದು ಅತ್ಯಂತ ಸ್ವಾಗತಾರ್ಹವಾದದ್ದು. ಕೆಲವಾರು ವರ್ಷಗಳ ನಿರಂತರ ಪರಿಶ್ರಮದಿಂದ, ಹಲವಾರು ಆಕರ-ಪರಿಕರಗಳಿಂದ ಸಂಪಾದಿಸಿರುವುದು ಅಭಿನಂದನೀಯ. ಪ್ರಸ್ತಾವನೆಯಲ್ಲಿ ಜ್ವಲಂತ ವಿಷಯಗಳ ಬಗ್ಗೆ ಸಾಕಷ್ಟು ಆಧಾರಗಳಿಂದ ಅವುಗಳ ಪರಿಹಾರೋಪಾಯ ಮಾರ್ಗಗಳನ್ನು ಸೂಚಿಸಿದ್ದಾರೆ. ಸಿ.ಶಿ.ಯ ಕಾಲ ವಿಚಾರವಾಗಿ ಶ್ರೀಯುತರು ಹೇಳಿರುವ ಅಭಿಪ್ರಾಯಕ್ಕೆ ಮತ್ತಷ್ಟು ಪುರಾವೆಗಳು ಲಭ್ಯವಾಗಬೇಕಾಗಿವೆ. ಈ ಗ್ರಂಥದ ಅನುಬಂಧವಾಗಿ ಕೊಟ್ಟಿರುವ ಅಂಶಗಳು ಗ್ರಂಥ ಪರಿಶೀಲಕರಿಗೆ, ಸಂಶೋಧಕರಿಗೆ ಸಹಾಯಕವಾಗಿವೆ. ಮೂಲಗ್ರಂಥದ ಅಕಾರಾದಿಯಿಂದ ಪ್ರಾರಂಭಗೊಂಡು ಸಿದ್ಧಾಂತಶಿಖಾಮಣಿ ವ್ಯಾಖ್ಯೆಯಲ್ಲಿ ಬಂದಿರುವ ಉದ್ಧೃತ ಶ್ಲೋಕಗಳ ಅಕಾರಾದಿ, ಮೂಲಗ್ರಂಥಗಳಾಗಿರಬಹುದಾದ ಗ್ರಂಥಸೂಚಿ, ಪದಕೋಶ ಇವೇ ಮೊದಲಾದ ಪರಿಕರಗಳು ಸಿದ್ಧಾಂತಶಿಖಾಮಣಿಯನ್ನು ಪರಿಶೀಲಿಸುವವರಿಗೆ ಮಾರ್ಗಸೂಚಿಗಳಾಗಿವೆ. ಈಗಾಗಲೇ ಹಲವಾರು ಗ್ರಂಥಗಳನ್ನು ಶಾಸ್ತ್ರೀಯವಾಗಿ ಪ್ರಕಟಿಸಿರುವ

ಇವರು 'ಸಿದ್ಧಾಂತಶಿಖಾಮಣಿ'ಯಂತಹ ಉದ್ಗ್ರಂಥವನ್ನು ಶಾಸ್ತ್ರೀಯವಾಗಿ ಸಂಪಾದಿಸಿರು ವುದು ಸಾಹಿತ್ಯಲೋಕಕ್ಕೆ, ಧಾರ್ಮಿಕ ಪ್ರಪಂಚಕ್ಕೆ ಹೆಚ್ಚು ಉಪಕಾರವನ್ನು ಮಾಡಿದಂತಾಗಿದೆ. ವೀರಶೈವ ಸಿದ್ಧಾಂತ ಪ್ರತಿಪಾದಕದಂತಹ ಗ್ರಂಥವನ್ನು ಸಂಪಾದಿಸಿ ಕೃತಕೃತ್ಯರಾಗಿದ್ದಾರೆ. ಇದು ಅವರಿಗೆ ಶ್ರೇಯಸ್ಸನ್ನೂ ಪ್ರೇಯಸ್ಸನ್ನೂ ಉಂಟುಮಾಡಲೆಂದು ಹಾರೈಸುತ್ತೇನೆ. ಕೊನೆಯದಾಗಿ ಸಿ.ಶಿ.ಯು ವಚನಗಳ ತರುವಾಯವಾಗಲೀ ವಚನಗಳ ಪೂರ್ವದಲ್ಲಾಗಲೀ ರಚಿತವಾಗಿದೆ ಯೆಂಬುದು ಗೌಣ. ಈ ಗ್ರಂಥದಲ್ಲಿ ಪ್ರತಿಪಾದಿತ ವಿಷಯಗಳನ್ನು ಸಹೃದಯ ಮನಸ್ಸಿನಿಂದ ಅನುಷ್ಠಾನಕ್ಕೆ ತರುವುದು ಪ್ರಧಾನ. ಯಾವ ಪೂರ್ವಾಗ್ರಹವಿಲ್ಲದೆ ಯಾವ ಅಭಿನಿವೇಶವೂ ಇಲ್ಲದೆ ನಿಷ್ಕಳಂಕ ಮನಸ್ಸಿನಿಂದ ಪರಿಭಾವಿಸಿದಾಗ ಸಂಪಾದಕರ ಶ್ರಮ ಸಾರ್ಥಕವಾಗುತ್ತದೆಂದು ನಾನು ಭಾವಿಸಿದ್ದೇನೆ.

ಇಷ್ಟಾದರೂ ಈವರೆಗೆ ಲಭ್ಯವಾಗಿರುವ 'ಸಿದ್ಧಾಂತಶಿಖಾಮಣಿ'ಗೆ ಲಭ್ಯವಾಗಿರುವ ಆಕರ-ಪರಿಕಗಳನ್ನು ಆಧಾರವಾಗಿಟ್ಟುಕೊಂಡು ಮುಂದೆ ಲಭ್ಯವಾಗಬಹುದಾದ ಪರಿಕಗಳನ್ನು ಸಂಪಾದಿಸಿಕೊಂಡು - ಇವೆಲ್ಲವನ್ನು ಒಳಗೊಂಡ ಮತ್ತೊಂದು ಪರಿಷ್ಕೃತ ಆವೃತ್ತಿಯನ್ನು ಹೊರತರಬೇಕೆಂಬ ಅವರ ನಿಷ್ಕಳಂಕ ಮನೋಭಾವವು ಸ್ವಾಗತಾರ್ಹವಾದದ್ದು; ವಿದ್ವತ್ ಲೋಕಕ್ಕೆ ಅನುಸರಣೀಯವಾದದ್ದು.

ಬೆಂಗಳೂರು
ದಿನಾಂಕ ೨೦-೧೨-೨೦೦೪

*ಪ್ರೊ. ಎನ್. ಬಸವಾರಾಧ್ಯ*

# ವಿಷಯಾನುಕ್ರಮಣಿಕೆ

# ಪ್ರಸ್ತಾವನೆ

## ಕವಿ ವಿಚಾರ :

ಶಿವಾದ್ವೈತ ಸಿದ್ಧಾಂತ ಪ್ರತಿಪಾದಕವಾದ ಸಿದ್ಧಾಂತ ಶಿಖಾಮಣಿಯು ವೀರಶೈವಧರ್ಮದ ಶ್ರೇಷ್ಠ ದರ್ಶನ ಗ್ರಂಥವಾಗಿದೆ. ಪೌರಾಣಿಕ ಕಲ್ಪನೆಯಂತೆ ಆದಿಯಲ್ಲಿ ಪರಮೇಶ್ವರನು ಪಾರ್ವತಿ ಮತ್ತು ಷಣ್ಮುಖರಿಗೆ ಉಪದೇಶ ಮಾಡಿದ ವೀರಶೈವ ಸಿದ್ಧಾಂತವನ್ನೆ ರೇಣುಕ ಗಣೇಶ್ವರರು ಅಗಸ್ತ್ಯರಿಗೆ ಉಪದೇಶ ಮಾಡಿದರು. ಈ ಉಪದೇಶವನ್ನೇ ಶ್ರೀ ಶಿವಯೋಗಿಗಳು ವೇದಾಗಮ ಪುರಾಣೋಪನಿಷತ್ತುಗಳಿಂದ ವೀರಶೈವ ಸಿದ್ಧಾಂತಪರವಾದ ತತ್ತ್ವಗಳನ್ನು ಸಂಗ್ರಹಿಸಿ 'ಸಿದ್ಧಾಂತಶಿಖಾಮಣಿ'ಯನ್ನು ರಚಿಸಿದರು. ತಮ್ಮ ಈ ಗ್ರಂಥದ ಪ್ರಥಮ ಪರಿಚ್ಛೇದದ ಎಂಟು ಶ್ಲೋಕಗಳಲ್ಲಿ ಸ್ವವಿಷಯಿಕವಾದ ಕೆಲವು ಅಂಶಗಳನ್ನು ನಿರೂಪಿಸಿದ್ದಾರೆ. ಆ ಶ್ಲೋಕಗಳು ಹೀಗಿವೆ:-

ಕಶ್ಚಿದಾಚಾರಸಿದ್ಧಾನಾಮಗ್ರಣೀಃ ಶಿವಯೋಗಿನಾಮ್ ।
ಶಿವಯೋಗೀತಿ ವಿಖ್ಯಾತಃ ಶಿವಜ್ಞಾನಮಹೋದಧಿಃ ।। 13 ।।

ಶಿವಭಕ್ತಿಸುಧಾಸಿಂಧುಜೃಂಭಣಾಮಲಚಂದ್ರಿಕಾ ।
ಭಾರತೀ ಯಸ್ಯ ವಿದಧೇ ಪ್ರಾಯಃ ಕುವಲಯೋತ್ಸವಮ್ ।। 14 ।।

ತಸ್ಯ ವಂಶೇ ಸಮುತ್ಪನ್ನೋ ಮುಕ್ತಾಮಣಿರಿವಾಮಲಃ ।
ಮುದ್ದದೇವಾಭಿದಾಚಾರ್ಯೋ ಮೂರ್ಧನ್ಯಃ ಶಿವವೇದಿನಾಮ್ ।। 15 ।।

ಮುದ್ದಾನಾತ್ಸರ್ವಜಂತೂನಾಂ ಪ್ರಣತಾನಾಂ ಪ್ರಬೋಧತಃ ।
ಮುದ್ದದೇವೇತಿ ವಿಖ್ಯಾತಸಮಾಖ್ಯಾ ಯಸ್ಯ ವಿಶ್ರುತಾ ।। 16 ।।

ತಸ್ಯಾಸೀನ್ನಂದನಶ್ಶಾಂತಃ ಸಿದ್ಧನಾಥಾಭಿದಃಶ್ಶುಚಿಃ ।
ಶಿವಸಿದ್ಧಾಂತನಿರ್ಣೇತಾ ಶಿವಾಚಾರ್ಯಃ ಶಿವಾತ್ಮಕಃ ।। 17 ।।

ವೀರಶೈವಶಿಖಾರತ್ನಂ ವಿಶಿಷ್ಟಾಚಾರ ಸಂಪದಮ್ ।
ಶಿವಜ್ಞಾನಮಹಾಸಿಂಧುಂ ಯಂ ಪ್ರಶಂಸಂತಿ ದೇಶಿಕಾಃ ।। 18 ।।

ಯಸ್ಯಾಚಾರ್ಯಕುಲಾಜ್ಜಾತಾಸ್ಸತಾಮಾಚಾರಮಾತೃಕಾ ।
ಶಿವಭಕ್ತಿಃ ಸ್ಥಿರಾ ಯಸ್ಮಿನ್ ಜಜ್ಞೇ ವಿಗತವಿಪ್ಲವಾ ।। 19 ।।

ತಸ್ಯ ವೀರಶಿವಾಚಾರ್ಯಶಿಖಾರತ್ನಸ್ಯ ನಂದನಃ ।
ಅಭವಚ್ಛಿವಯೋಗೀತಿ ಸಿಂಧೋರಿವ ಸುಧಾಕರಃ[1] ।। 20 ।।

---

ಪ್ರಸಕ್ತ ಸಿದ್ಧಾಂತಶಿಖಾಮಣಿ : ಪುಟ : 8 ರಿಂದ 10. ಶ್ಲೋಕ ಸಂ : 13–20

ಮೇಲಿನ ಶ್ಲೋಕಗಳ ಸಾರಾಂಶವನ್ನು ಹೀಗೆ ಸಂಗ್ರಹಿಸಬಹುದು :

"ಆಚಾರದಲ್ಲಿ ನಿಷ್ಣಾತರಾದ ಶಿವಯೋಗಿಗಳಲ್ಲಿ ಅಗ್ರಣಿಯಾದ ಶಿವಜ್ಞಾನ ಮಹಾಸಮುದ್ರನಾದ ಒಬ್ಬನು ಪ್ರಸಿದ್ಧನಾಗಿದ್ದನು".

"ಯಾವಾತನ ವಚನವು ಶಿವಭಕ್ತಿಯೆಂಬ ಕ್ಷೀರಸಮುದ್ರವನ್ನು ಉಕ್ಕೇರಿಸುವುದರಲ್ಲಿ ಶುಭ್ರವಾದ ಬೆಳದಿಂಗಳಿನಂತಿರುವ ಹಾಗೂ ಭೂಮಂಡಲವೆಂಬ ಕನ್ನೈದಿಲೆಗೆ ಉತ್ಸವವನ್ನು ಮಾಡಿತ್ತು."

"ಆತನ ವಂಶದಲ್ಲಿ ಪರಿಶುದ್ಧವಾದ ಮುತ್ತಿನಂತೆ ಶಿವಯೋಗಿಗಳಿಗೆ ಶಿಖಾಮಣಿಯಾದ ಮುದ್ದದೇವನೆಂಬಾಚಾರ್ಯನು ಜನಿಸಿದನು."

"ಶರಣಾಗತವಾದ ಸಮಸ್ತ ಪ್ರಾಣಿಗಳಿಗೆ ಸಂತೋಷವನ್ನುಂಟುಮಾಡುವ ಕಾರಣದಿಂದ ಈತನಿಗೆ ಮುದ್ದದೇವನೆಂಬ ಹೆಸರು ಪ್ರಖ್ಯಾತವಾಯಿತು."

"ಈತನಿಗೆ ಶಾಂತನೂ, ಪರಿಶುದ್ಧನೂ, ಶಿವಸ್ವರೂಪನೂ, ಶಿವಾದ್ವೈತ ಸಿದ್ಧಾಂತ ನಿರ್ಣಾಯಕನೂ ಆದ ಸಿದ್ದನಾಥನೆಂಬ ಹೆಸರುಳ್ಳ ಪುತ್ರನು ಆದನು."

"ಸದಾಚಾರ ಸಂಪನ್ನನೂ ಶಿವಜ್ಞಾನಕ್ಕೆ ಮಹಾಸಮುದ್ರನೂ ಆದ ಸಿದ್ಧನಾಥಾಚಾರ್ಯನನ್ನು 'ವೀರಶೈವ ಶಿಖಾರತ್ನ' ಎಂದು ಪ್ರಶಂಸಿಸುತ್ತಿದ್ದರು."

"ಆವ ಆಚಾರ್ಯನ ವಂಶದಲ್ಲಿ ಸದಾಚಾರಗಳು ಉತ್ಪನ್ನವಾದವೋ ಆ ಆಚಾರ್ಯನಲ್ಲಿ ಶಿವಭಕ್ತಿಯು ಸ್ಥಿರವಾಗಿದ್ದುದಾಗಿ ಆಯಿತು."

"ವೀರಶೈವ ಶಿಖಾಮಣಿಯಾದ ಆತನಿಗೆ ಸಮುದ್ರಕ್ಕೆ ಚಂದ್ರನಂತೆ 'ಶಿವಯೋಗಿ'ಯೆಂಬ ಪುತ್ರನು ಜನಿಸಿದನು."

ಮೇಲಿನಂತೆ ಶಿವಯೋಗಿಯ ಪರಂಪರೆ ಹೀಗಿದೆ : ಶಿವಯೋಗಿ > ಮುದ್ದದೇವ > ಸಿದ್ಧನಾಥ - ಶಿವಯೋಗಿ. ಇವರಲ್ಲಿ ಎರಡನೆಯ ಶಿವಯೋಗಿಯೇ ಸಿದ್ಧಾಂತಶಿಖಾಮಣಿಯ ಸಂಗ್ರಹ ಕರ್ತೃ.

ಮೊದಲನೆಯದಾಗಿ : ಪ್ರಸಕ್ತ ಶಿವಯೋಗಿಗಳ ಸಿದ್ಧಾಂತಶಿಖಾಮಣಿಗೆ ಕ್ರಿ.ಶ. ಸು. 1623ರಲ್ಲಿದ್ದ ಚಿಕ್ಕನಾಯಕನಹಳ್ಳಿಯ ಪಾಳೆಯಪಟ್ಟನ್ನಾಳಿದ ಮೊದಲನೆ ಹಿರಿಯ ಮುದಿಯಪ್ಪನಾಯಕನ ಆಶ್ರಯದಲ್ಲಿದ್ದ, ಆತನ ರಾಜಗುರುವೂ ಧರ್ಮಗುರುವೂ ಆದ ಶ್ರೀ ಸೋಸಲೆ ರೇವಣಾರಾಧ್ಯರು (ಕ್ರಿ.ಶ. 1263) 'ಸಿದ್ಧಾಂತಬೋಧಿನೀ' (ಸಿದ್ಧಾರ್ಥಸಂಬೋಧಿನೀ) ಎಂಬ ಹೆಸರಿನ ಕನ್ನಡ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇದರಲ್ಲಿ ಪ್ರಥಮಬಾರಿಗೆ 'ಸಿದ್ಧಾಂತಶಿಖಾಮಣಿ'ಯ ಇಪ್ಪತ್ತೊಂದು ಪರಿಚ್ಛೇದಗಳಿಗೂ ವ್ಯಾಖ್ಯಾನವಿದ್ದು 'ಶಿವಯೋಗಿ'ಗಳು ಈ ಕೃತಿಯ ಕರ್ತೃಗಳು ಎಂಬುದಾಗಿ ತಿಳಿದು ಬರುವ ಹೆಗ್ಗಳಿಕೆ ಸೋಸಲೆಯರ ಈ ಆವೃತ್ತಿಗಿದೆ. ಈ ವ್ಯಾಖ್ಯಾನದ ರೀತ್ಯಾ ಶಿವಯೋಗಿಯ ವಂಶಪರಂಪರೆಯನ್ನು ಹೀಗೆ ಸಂಗ್ರಹಿಸಬಹುದು.

ವ್ಯಾಖ್ಯಾನಕಾರರ ವಂಶವಿವರಣಾತ್ಮಕ ಶ್ಲೋಕಾನಂತರದಲ್ಲಿ "ಕಲಿಕಾಲಪ್ರವೇಶಾನಂತರದಲ್ಲಿ ರೇಣುಕಗಣೇಶ್ವರನೆಂದು ಪ್ರಸಿದ್ಧವಾದ ರೇವಣಾಸಿದ್ಧೇಶ್ವರನು ಕುಂಭ ಸಂಭವನಿಗೆ ಬೋಧಿಸಿದ ವೀರಶೈವ ಶಾಸ್ತ್ರದ ಬೋಧಾನಂತರದಲ್ಲಿ ಆ ರೇವಣಾಸಿದ್ಧೇಶ್ವರನ ದೃಷ್ಟಿಗರ್ಭಸಂಭವನಾದ ಸಿದ್ಧರಾಮೇಶ್ವರನ

ಸಾಂಪ್ರದಾಯ ಪ್ರಸಿದ್ಧವಾದ ಸಕಲನಿಗಮಾಗಮ ಪಾರಂಗತನಾದ ಶಿವಯೋಗೀಶ್ವರನೆಂಬಾಚಾರ್ಯನು ಆ ರೇಣುಕಾಗಸ್ತ್ಯ ಸಂವಾದವನು ತನ್ನ ಶಿಷ್ಯರುಗಳಿಗೆ ಬೋಧಿಸಲೋಸುಗವಾಗಿ ಸಪ್ತಶ್ಲೋಕಗಳಿಂದೆ ಸಮಸ್ತ ಸಮಯಶಾಸ್ತ್ರಂಗಳಿಗುತ್ತರವಾದ ನಿಗಮಾಗಮವಾಕ್ಯವನು ಗರ್ಭೀಕರಿಸಿ ಇಷ್ಟದೇವತಾ ನಮಸ್ಕಾರಮಂ ಮಾಡುತ್ತಿರ್ದಪಂ"[1] ಎಂಬ ಈ ಅವತರಣಿಕೆಯಲ್ಲಿ ಶಿವಯೋಗಿ ಶಿವಾಚಾರ್ಯರು ಶ್ರೀ ಸಿದ್ಧರಾಮೇಶ್ವರರ ಸಂಪ್ರದಾಯದವರೆಂದು ತಿಳಿದುಬರುತ್ತದೆ.

ಮೇಲಿನ ಎಂಟು ಶ್ಲೋಕಗಳ ಶ್ರೀ ಸೋಸಲೆಯವರ ವ್ಯಾಖ್ಯಾನವನ್ನು :

"ರೇವಣಾಸಿದ್ಧೇಶ್ವರನ ದೃಷ್ಟಿಗರ್ಭಸಂಭವನಾದ ಶಿವಯೋಗೀಶ್ವರರಿಗೆ ಶ್ರೇಷ್ಠನಾದ ಶಿವಜ್ಞಾನಕ್ಕೆ ಮಹಾಸಮುದ್ರನಾದ ಸಿದ್ಧರಾಮೇಶ್ವರನ ಸದಾಚಾರ ಸಂಪನ್ನರ ವಂಶದಲ್ಲಿ ಶಿವಯೋಗಿಯೆಂದು ಪ್ರಸಿದ್ಧವಾಗಿದ್ದಾತನು ಆದನು. ಶಿವಯೋಗಿಯೆಂದು ಪ್ರಸಿದ್ಧವಾದ ಆವ ಸಿದ್ಧರಾಮೇಶ್ವರನ ವಚನವು ಶಿವಭಕ್ತಿಯೆಂಬ ಅಮೃತಸಮುದ್ರವನ್ನು ಹೆಚ್ಚಿಸುವುದಕ್ಕೆ ಶುದ್ಧವಾದ ಬೆಳದಿಂಗಳಿನಂತಿರುತ್ತಲು ಮಿಗಿಲಾಗಿ ಭೂಮಂಡಲವೆಂಬ ನೈದಿಲುಗಳಿಗೆ ಉತ್ಸವವನ್ನುಂಟುಮಾಡಿತ್ತು. ಆ ಸಿದ್ಧರಾಮೇಶ್ವರನ ವಂಶವೆಂಬ ಸಮುದ್ರದಲ್ಲಿ ಶಿವಜ್ಞಾನಿಗಳ ಉತ್ತಮಾಂಗದಂತೆ ಶ್ರೇಷ್ಠನಾದ ಮುದ್ದದೇವನೆಂಬಾಚಾರ್ಯನು ನಿರ್ಮಲವಾದ ಮುಕ್ತಾಮಣಿಯೋಪಾದಿಯಲ್ಲಿ ಜನಿಸಿದನು. ಸಮಸ್ತ ಪ್ರಾಣಿಗಳಿಗೆ ಸಂತೋಷವನ್ನುಂಟು ಮಾಡುವುದರಿಂದ, ನಮಸ್ಕರಿಸುವವರಿಗೆ ಬೋಧಿಸುವ ಕಾರಣವಾಗಿ ಮುದ್ದದೇವನೆಂಬ ನಾಮವು ಅನ್ವರೂಢಿನಾಮುಗಳಿಂದೆ ಲೋಕಪ್ರಸಿದ್ಧವಾಯಿತು. ಆ ಮುದ್ದದೇವಾಚಾರ್ಯನಿಗೆ ಶುದ್ಧಾತ್ಮನಾದ, ರಾಗದ್ವೇಷರಹಿತನಾದ, ಶಿವಸ್ವರೂಪವಾದ ತ್ರಿಪದಾರ್ಥ ಚತುಷ್ಪಾದಯುಕ್ತನಾದ, ಶಿವಾಗಮ ರಹಸ್ಯವನ್ನು ನಿಶ್ಚಯಿಸುತ್ತಿದ್ದ ಶಿವಸಮಯಸ್ಥಾಪನಾಚಾರ್ಯನಾದ ಸಿದ್ಧರಾಮೇಶ್ವರನ ಹೆಸರಾದ 'ಸಿದ್ಧನಾಥಾಚಾರ್ಯ'ನೆಂಬ ಹೆಸರುಳ್ಳ ಪುತ್ರನಾದನು. ಶ್ರೇಷ್ಠವಾದ ಆಚಾರಸಂಪತ್ತಿಯುಳ್ಳ ಶಿವಜ್ಞಾನಕ್ಕೆ ಮಹಾಸಮುದ್ರಸ್ಥಾನವಾದ ಆವ ಸಿದ್ಧನಾಥಾಚಾರ್ಯನನ್ನು ಆಚಾರ್ಯರು ವೀರಶೈವರಿಗೆ ಶಿರೋಮಣಿಯನಾಗಿ ಕೊಂಡಾಡುತ್ತಿದ್ದರು. ಸತ್ಪುರುಷರ ಸದಾಚಾರ ಮಾತೃಕೆಗಳು ಆಚಾರ್ಯ ವಂಶದಿಂದೆ ತೊಲಗಲ್ಪಟ್ಟ ದುಃಖವುಳ್ಳವುಗಳಾದವು. ಅಷ್ಟವಿಧವಾದ ಶಿವಭಕ್ತಿಯು ಸ್ಥಿರವಾಯಿತು. ವೀರಶೈವಾಚಾರ್ಯರಿಗೆ ಶಿಖಾಮಣಿಯಾದ ಸಿದ್ಧನಾಥಾಚಾರ್ಯನಿಗೆ ಸಮುದ್ರರಾಜನಿಗೆ ಚಂದ್ರನೋಪಾದಿಯಲ್ಲಿ ಶಿವಯೋಗಿಯು ಜನಿಸಿದನು". ಈ ಶಿವಯೋಗಿಯೇ ಸಿದ್ಧಾಂತಶಿಖಾಮಣಿಯ ಸಂಗ್ರಹ ಕರ್ತೃ.

ಎರಡನೆಯದಾಗಿ : ಶ್ರೀ ಮರಿತೋಂಟದಾರ್ಯರು ಕ್ರಿ.ಶ. 1750ರಲ್ಲಿ ಕೆಳದಿಯನ್ನಾಳಿದ ಎರಡನೆಯ ಬಸವಪ್ಪನಾಯಕನಿಂದ (ಕ್ರಿ.ಶ. 1667) ಪರಿಪೋಷಿತರಾಗಿದ್ದರು. ಉಭಯಭಾಷಾಕೋವಿದರೂ ಉದ್ದಾಮಪಂಡಿತರೂ ಆಗಿದ್ದ ಇವರು ವೀರಶೈವಾನಂದ ಚಂದ್ರಿಕಾ ಎಂಬ ಸಂಸ್ಕೃತ ಪ್ರೌಢ ಗ್ರಂಥವನ್ನು ರಚಿಸಿದರಲ್ಲದೆ ಸಿದ್ಧಾಂತಶಿಖಾಮಣಿಗೆ 'ತತ್ತ್ವಪ್ರದೀಪಿಕಾ' ಎಂಬ ವ್ಯಾಖ್ಯಾನವನ್ನು ರಚಿಸಿದ್ದಾನೆ. ತಮ್ಮ ವ್ಯಾಖ್ಯಾನದಲ್ಲೂ ಇದೇ ಅಭಿಪ್ರಾಯಪಟ್ಟಿದ್ದಾರೆ. ಗ್ರಂಥಾರಂಭದ ಅವಕರಣಿಕೆ ಹೀಗಿದೆ.

---

2. ಪುಟ 3

"ಅತ್ರ ಕಲಿಕಾಲಪ್ರವೇಶಾನಂತರಂ ಲೋಕಹಿತಾರ್ಥಂ ರೇಣುಕಗಣೇಶ್ವರೋ ಇತಿ ಪ್ರಸಿದ್ಧೋ ರೇವಣಸಿದ್ಧೇಶ್ವರಃ ಕುಂಭಸಂಭವಾಯ ವೀರಶೈವಶಾಸ್ತ್ರಮುಪದಿಷ್ಟವಾನ್ । ತದನಂತರಂ ರೇವಣಸಿದ್ಧೇಶ್ವರ ದೃಷ್ಟಿಗರ್ಭಸಂಭೂತಸಿದ್ಧರಾಮೇಶ್ವರಸಂಪ್ರದಾಯಪ್ರಸಿದ್ಧಃ ಸಕಲನಿಗಮಾಗಮಪಾರಗಃ ಶಿವಯೋಗೀಶ್ವರ ಇತ್ಯಭಿಧಾನವಾನ್ ಕಶ್ಚಿತ್ ಮಾಹೇಶ್ವರಃ ತದ್ರೇಣುಕಾಗಸ್ತ್ಯಸಂವಾದಂ ನಿರ್ವಿಘ್ನೇನ ಸ್ವಶಿಷ್ಯಾನ್ ಬೋಧಯಿತುಂ ಸ್ವಮನಸಿ ಕೃತಸಕಲಸಿದ್ಧಾಂತಶ್ರೇಷ್ಠ ನಿಗಮಾಗಮೈಕ್ಯಗರ್ಭೀಕಾರಲಕ್ಷಣ ಸ್ವೇಷ್ಟದೇವತಾ ನಮಸ್ಕಾರರೂಪಂ ಮಂಗಲಂ ಶಿಷ್ಯಶಿಕ್ಷಾರ್ಥಂ ಸಪ್ತಭಿಃ ಶ್ಲೋಕೈಃ ನಿಬಧ್ನಾತಿ"[1] - ಎಂಬ ಈ ಹೇಳಿಕೆಯಲ್ಲಿ ಸಿ.ಶಿ. ಕರ್ತೃ ಶಿವಯೋಗಿಗಳು ಶ್ರೀ ಸಿದ್ಧರಾಮೇಶ್ವರರ ವಂಶಸ್ಥರೆಂದು ತಿಳಿದು ಬರುತ್ತದೆ. ಹಾಗೂ ಮೇಲಿನ ಎಂಟು ಶ್ಲೋಕಗಳಿಗೂ ಸೋಸಲೆಯವರ ವ್ಯಾಖ್ಯಾನದಂತೆಯೇ ವ್ಯಾಖ್ಯಾನವಿದೆ.[2]

ಮೂರನೆಯದಾಗಿ : ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸಗಂಗೋತ್ರಿ ಮೈಸೂರು ಇಲ್ಲಿನ ಹಸ್ತಪ್ರತಿ ಭಂಡಾರದ ಕ್ರಮ ಸಂಖ್ಯೆ ಕೆ. 1150 ಹಸ್ತಪ್ರತಿಯು ಸಿದ್ಧಾಂತಶಿಖಾಮಣಿಗೆ ಸಂಬಂಧಿಸಿದ್ದು, ಸುಪ್ರಬೋಧಿನೀ ಎಂಬ ಕನ್ನಡ ವ್ಯಾಖ್ಯಾನವನ್ನೊಳಗೊಂಡಿದೆ. ಈ ವ್ಯಾಖ್ಯಾನವೂ ಸಹ ಮೇಲಿನ ಎರಡು ವ್ಯಾಖ್ಯಾನಗಳಿಗಿಂತಲೂ ಭಿನ್ನವಾಗಿಲ್ಲ. ಈ ಹಸ್ತಪ್ರತಿಯನ್ನು ಮೂಲವನ್ನಾಗಿಟ್ಟುಕೊಂಡು ವಿದ್ವಾಂಸರಾದ ಶ್ರೀ ಜಿ.ಜಿ. ಮಂಜುನಾಥನ್‌ರವರು ಪರಿಷ್ಕರಿಸಿದ್ದು ಈ ಕೃತಿಯನ್ನು ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-ಇವರು ಪ್ರಕಟಿಸಲಿದ್ದಾರೆ. ಈ ಆವೃತ್ತಿಯ ಗ್ರಂಥಾರಂಭದಲ್ಲಿ ಬರುವ ಅವತರಣಿಕೆ ಹೀಗಿದೆ.

---

ಪುಟ

೨. ಪುಟ : -೧೧- ೮-೧೦ ಶ್ಲೋಕಗಳು : ೧೩-೨೦

ಏವಂ ಸಂಗ್ರಹೇಣ ಪಾರ್ವತೀ ಪರಮೇಶ್ವರೌ ನಮಸ್ಕೃತ್ವಾ ಅನಂತರಂ ಅಷ್ಟಭಿಃ ಶ್ಲೋಕೈಃ ಶಿವಯೋಗಿ ವಂಶಾನುಗತಾಚಾರ್ಯಾನ್ ಪ್ರಕಟಯತಿ :

ಶಿವಯೋಗಿನಾಂ ಮಧ್ಯೇ ಅಗ್ರಣೀಃ ಶ್ರೇಷ್ಠಃ ಶಿವಜ್ಞಾನಮಹೋದಧಿಃ ಶಿವಜ್ಞಾನಸ್ಯ ಸಮುದ್ರಃ ಕಶ್ಚಿತ್ ರೇವಣಸಿದ್ಧೇಶ್ವರ ದೃಷ್ಟಿಗರ್ಭಸಂಭೂತಃ ಸಿದ್ಧರಾಮೇಶ್ವರಃ ಆಚಾರಸಿದ್ಧಾನಾಂ ಸದಾಚಾರ ಸಂಪನ್ನಾನಾಂ ವಂಶೇ ಶಿವಯೋಗೀತಿ ವಿಖ್ಯಾತಃ ಆಸೀತ್ ಇತ್ಯರ್ಥಃ ॥ ೧೩ ॥

ಯಸ್ಯ ಶಿವಯೋಗೀತಿಪ್ರಸಿದ್ಧಸ್ಯ ಸಿದ್ಧರಾಮೇಶ್ವರಸ್ಯಭಾರತೀವಾಕ್ ಶಿವಭಕ್ತಿಸುಧಾಸಮುದ್ರವರ್ಧನಸ್ಯ ಅಮಲಚಂದ್ರಕಾಪ್ರಾಯಃ ಆಧಿಕ್ಯೇನ ಕುವಲಯೋತ್ಸವಂ ಭೂಮಂಡಲಾಖ್ಯನೀಲೋತ್ಪಲಸ್ಯ ಉತ್ಸವಂ ವಿದಧೇ ಕೃತವತೀತ್ಯರ್ಥಃ ॥ ೧೪ ॥

ತದೇವ ವಿವೃಣೋತಿ ।

೧೫ ತಸ್ಯ ಸಿದ್ಧರಾಮೇಶ್ವರಸ್ಯ ವಂಶೇ ಶಿವವೇದಿನಾಂ ಶಿವಜ್ಞಾನಿನಾಂ ಮಧ್ಯೇ ಮೂರ್ಧನ್ಯಃ ಶ್ರೇಷ್ಠಃ ಮುದ್ದದೇವಾಖ್ಯಾಯ್ಃ ನಿರ್ಮಲಮುಕ್ತಾಮಣಿರಿವ ಸಮುತ್ಪನ್ನಃಉದ್ಭೂತವಾನ್ ಇತ್ಯರ್ಥಃ ॥ ೧೫ ॥

ಸಿದ್ಧಾಂತಶಿಖಾಮಣಿಃ ಶ್ರೀ ಮರಿತೋಂಟದಾರ್ಯ ವಿರಚಿತಯಾ ತತ್ತ್ವಪ್ರದೀಪಿಕಾ ವ್ಯಾಖ್ಯಾ ಪು. ೧೧-೧೨ ಪ್ರಾಚ್ಯಾ ವಿದ್ಯಾ ಸಂಶೋಧನಾಲಯ, ಮೈಸೂರು - ೧೯೯೫.

ಈ ಜಗತ್ತಿನೊಳ್ ಕಲಿಕಾಲ ಪ್ರವೇಶಾನಂತರದಲ್ಲಿ ಲೋಕಹಿತಾರ್ಥವಾಗಿ ಶ್ರೀ ರೇಣುಕಗಣೇಶ್ವರನೆಂದು ಪ್ರಸಿದ್ಧನಾದ ರೇವಣಸಿದ್ಧೇಶ್ವರಂ ಕುಂಭಸಂಭವಂಗೋಸ್ಕರ ಶ್ರೀ ವೀರಶೈವ ಮಹಾಶಾಸ್ತ್ರವನುಪದೇಶಂಗೈದನು. ಆಮೇಲೆ ರೇವಣಸಿದ್ಧೇಶ್ವರನ ದೃಷ್ಟಿಗರ್ಭಸಂಭವನಾದ ಸಿದ್ಧರಾಮೇಶ್ವರನ ಸಂಪ್ರದಾಯದಲ್ಲಿ ಪ್ರಸಿದ್ಧನಾಗಿ ಸಕಲನಿಗಮಾಗಮ ಪಾರಂಗತನಾದ ಶಿವಯೋಗಿಯೆಂಬೋರ್ವ ಮಾಹೇಶ್ವರಂ ತದ್ರೇಣುಕಾಗಸ್ತ್ಯಸಂವಾದಮಂ ನಿರ್ವಿಘ್ನದಿಂ ತನ್ನ ಶಿಷ್ಯರಂ ತಿಳುಹಲೋಸುಗ ತನ್ನ ಮನಸ್ಸಿನಲ್ಲೇ ಮಾಡಲ್ಪಟ್ಟ ಸಕಲಸಿದ್ಧಾಂತಶ್ರೇಷ್ಠನಿಗಮಾಗಮೈಕ್ಯಗರ್ಭೀಕಾರ ಲಕ್ಷಣಸ್ವೇಷ್ಟದೇವತಾನಮಸ್ಕಾರರೂಪಮಂಗಲಮಂ ಶಿಷ್ಯಶಿಕ್ಷಾರ್ಥವಾಗಿ ಸಪ್ತಶ್ಲೋಕಂಗಳಿಂ ಪ್ರಕಾಶಿಸುತ್ತಿರ್ದ್ದಪಂ" ಎಂಬ ಹೇಳಿಕೆಯಲ್ಲಿಯೂ ಶಿವಯೋಗಿಗಳು ಶ್ರೀ ಸಿದ್ಧರಾಮೇಶ್ವರರ ವಂಶಸ್ಥರೆಂದು ತಿಳಿದು ಬರುತ್ತದೆ[1]. ಹಾಗೂ ಶಿವಯೋಗಿಗಳ ವಂಶವಿವರಣೆಗೆ ಸಂಬಂಧಿಸಿದ ಶ್ಲೋಕಗಳೂ ಮೇಲಿನ ವ್ಯಾಖ್ಯಾನವನ್ನೇ ಹೋಲುತ್ತವೆ[1].

ನಾಲ್ಕನೆಯದಾಗಿ, ಹಸ್ತಪ್ರತಿ ಸಂ. ಕೆ. 472 ಸಿದ್ಧಾಂತಶಿಖಾಮಣಿ ಟೀಕು - ಸೋಸಲೆ ರೇವಣಾರ್ಯ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮಾನಸಗಂಗೋತ್ರಿ, ಮೈಸೂರು ಇದರ ಆರಂಭದಲ್ಲಿ.

"ಅಥ ಕಲಿಕಾಲ ಪ್ರವೇಶಾನಂತರದಲ್ಲಿ ರೇಣುಕಗಣೇಶ್ವರನೆಂದು ಪ್ರಸಿದ್ಧವಾದ ರೇವಣಾಸಿದ್ಧೇಶ್ವರನು ಕುಂಭಸಂಭವನಿಗೆ ಬೋಧಿಸಿದ ಯೀ ವೀರಶೈವಶಾಸ್ತ್ರದ ಬೋಧಾನಂತರದಲ್ಲಿ ಆ ರೇವಣಸಿದ್ಧೇಶ್ವರನ ದೃಷ್ಟಿಗರ್ಭಸಂಭವನಾದ ಸಿದ್ಧರಾಮೇಶ್ವರನ ಸಾಂಪ್ರದಾಯಸಿದ್ಧವಾದ

---

**ಶ್ಲೋಕ 13, 14, 15ರ ವ್ಯಾಖ್ಯಾಸ**

ಶಿವಯೋಗಿನಾಂ=ಶಿವಯೋಗಿಗಳ ಮಧ್ಯದಲ್ಲಿ, ಅಗ್ರಣೀಃ=ಶ್ರೇಷ್ಠನಾದ, ಶಿವಜ್ಞಾನ ಮಹೋದಧಿಃ= ಶಿವಜ್ಞಾನಕ್ಕೆ ಪ್ರಸಿದ್ಧನಾದ, ಕಶ್ಚಿತ್=ರೇವಣಸಿದ್ಧೇಶ್ವರನ ದೃಷ್ಟಿಗರ್ಭಸಂಭೂತನಾದ ಸಿದ್ಧರಾಮೇಶ್ವರನೊಂಬೋರ್ವನು, ಆಸೀದಾಚಾರ ಸಿದ್ಧಾನಾಂ=ಸದಾಚಾರ ಸಂಪನ್ನರ ವಂಶದಲ್ಲಿ, ಶಿವಯೋಗೀತಿ=ಶಿವಯೋಗಿಯೆಂದು, ವಿಖ್ಯಾತಃ=ಪ್ರಸಿದ್ಧನಾದಾತನು, ಆಸೀತ್=ಆದನೆಂಬುದರ್ಥ ॥ ೧೩ ॥

ಆಮೇಲೆ ತನ್ನ ಸ್ವರೂಪಮಂ ಹೇಳುತ್ತಿರ್ದ್ದಪಂ.

ಯಸ್ಯ=ಶಿವಯೋಗಿಯೆಂದು ಪ್ರಸಿದ್ಧನಾದ ಯಾವನೊಬ್ಬ ಸಿದ್ಧರಾಮೇಶ್ವರನ, ಭಾರತೀ=ವಾಕ್ಯವು, ಶಿವಭಕ್ತಿಸುಧಾಸಿಂಧುಜ್ರುಂಭಣಾಮಲಚಂದ್ರಿಕಾ ಸತಿ=ಶಿವಭಕ್ತಿಯೆಂಬ ಸುಧಾಸಮುದ್ರವ ಮರ್ಧಿಸುವದಕ್ಕೆ ನಿರ್ಮಲವಾದ ಬೆಳದಿಂಗಳಂಥಾ, ದಾನಿಪ್ರಾಯಃ=ವೆಗ್ಗಳವಾಗಿ ಕುವಲಯೋತ್ಸವಂ=ಭೂಮಂಡಲವೆಂಬ ಕನ್ನೈದಿಲೆಗೆ ಸತೋಷಮಂ, ವಿದಧೇ= ಮಾಡಿದಂತಾಗುತ್ತಿತ್ತೆಂಬುದರ್ಥಂ ॥ ೧೪ ॥

ಆಮೇಲೆ

ತಸ್ಯವಂಶೇ=ಆ ಸಿದ್ಧಾರಾಮೇಶ್ವರನ ವಂಶದಲ್ಲಿ, ಶಿವವೇದಿನಾಶಿವಜ್ಞಾನಿಗಳಾದವರ ಮಧ್ಯದಲ್ಲಿ, ಮೂರ್ಧನ್ಯಃ=ಶ್ರೇಷ್ಠನಾದ ಮುದ್ದದೇವಾಭಿದ್‌ಚಾರ್ಯಃ=ಮುದ್ದದೇವನೆಂಬ ಹೆಸರುಳ್ಳಾಚಾರ್ಯನು, ವಂಶೇ=ವೇಣುವಿನಲ್ಲಿ, ಅಮಲಃ=ನಿರ್ಮವಾದ ಮುಕ್ತಾಮಣಿರಿವ=ಮುತ್ತಿನ ಮಣಿಯಂತೆ, ಸಮುತ್ಪನ್ನಃ=ಉದ್ಭವಿಸಿದನೆಂಬುದರ್ಥ ॥ ೧೫ ॥

ಸಕಲನಿಗಮಾಗಮ ಪಾರಂಗತನಾದ ಶಿವಯೋಗೀಶ್ವರನೆಂಬಾಚಾರ್ಯನು ಆ ರೇಣುಕಾಗಸ್ತ್ಯ ಸಂವಾದವನು ತನ್ನ ಶಿಷ್ಯರುಗಳಿಗೆ ಬೋಧಿಸಲೋಸುಗವಾಗಿ ಸಪ್ತಶ್ಲೋಕಂಗಳಿಂದೆ ಸಮಸ್ತ ಸಮಯಶಾಸ್ತ್ರಂಗಳಿಗುತ್ತರವಾದ ನಿಗಮಾಗಮ ವಾಕ್ಯವನು ಗರ್ಭೀಕರಿಸಿ ಇಷ್ಟದೇವತಾ ನಮಸ್ಕಾರಮಂ ಮಾಡುತ್ತಿರ್ದ್ದಪಂ" ಎಂಬ ಈ ಅವತರಣಿಕೆಯಲ್ಲಿಯೂ ರೇವಣಸಿದ್ಧೇಶ್ವರನ ದೃಷ್ಟಿಗರ್ಭಸಂಭವನಾದ ಶ್ರೀ ಸಿದ್ಧರಾಮೇಶ್ವರನ ವಂಶದಲ್ಲಿ ಶ್ರೀ ಶಿವಯೋಗಿಗಳು ಜನಿಸಿದರೆಂದು ತಿಳಿದುಬರುತ್ತದೆ. ಹಾಗೂ ೧೩, ೧೪, ೧೫ನೆಯ ಶ್ಲೋಕಗಳಲ್ಲಿಯೂ 'ಸಿದ್ಧರಾಮೇಶ್ವರ'ನ ವಂಶವೆಂದೇ ತಿಳಿದು ಬರುತ್ತದೆ[1].

---

1. ಸೂತ್ರ ॥ ಈ ಪ್ರಕಾರದಿಂದಾಚಾರ್ಯನು ಸಂಗ್ರಹಾರ್ಥವನು ಗರ್ಭೀಕರಿಸಿ ಪಾರ್ವತಿ ಪರಮೇಶ್ವರರಂ ನಮಸ್ಕರಿಸಿದ ನಂತರದಲ್ಲಿ ಅಷ್ಟಸೂತ್ರಂಗಳಿಂದೆ ವಂಶಪಾರಂಪರ್ಯವನು ಪ್ರಕಟಿಸುತ್ತಿರ್ದ್ದನು ॥

ಆಸೀದಾಚಾರ ಸಿದ್ಧಾನಾಮಗ್ರಣೀಃ ಶಿವಯೋಗಿನಾಂ ।
ಶಿವಯೋಗೀತಿ ವಿಖ್ಯಾತಃ ಶಿವಜ್ಞಾನಮಹೋದಧಿಃ ॥

ಟೀಕು ॥ ಶಿವಯೋಗಿನಾಂ=ಶಿವಯೋಗೀಶ್ವರರಿಗೆ, ಅಗ್ರಣೀಃ=ಶ್ರೇಷ್ಠನಾದ, ಶಿವಾಜ್ಞಾನ ಮಹೋದಧಿಃ=ಶಿವಜ್ಞಾನಕ್ಕೆ ಸಮುದ್ರನಾದ, ಕಶ್ಚಿತ್=ಒಬ್ಬಾನೊಬ್ಬ ರೇವಣಸಿದ್ಧೇಶ್ವರನ ದೃಷ್ಟಿಗರ್ಭಸಂಭವನಾದ ಸಿದ್ಧರಾಮೇಶ್ವರನು, ಆಚಾರಸಿದ್ಧಾನಾಂ=ಸದಾಚಾರ ಸಂಪನ್ನರ, ವಂಶೇ=ವಂಶದಲ್ಲಿ, ಶಿವಯೋಗಿತಿ ವಿಖ್ಯಾತಃ=ಶಿವಯೋಗಿ ಎಂದು ಪ್ರಸಿದ್ಧವಾಗಿರ್ದಾತನು, ಆಸೀತ್=ಆದನು ॥ ೧೩ ॥

ಶಿವಭಕ್ತಸುಧಾಸಿಂಧುಜೃಂಭಣಾಮಲಚಂದ್ರಿಕಾ ।
ಭಾರತೀಸ್ಯ ವಿಧದೇ ಪ್ರಾಯಃ ಕುವಲಯೋತ್ಸವಂ ॥

ಟೀಕು ॥ ಯಸ್ಯ= ಶಿವಯೋಗಿಯೆಂದು ಪ್ರಸಿದ್ಧವಾದ ಆವನಾನೋರ್ವ ಸಿದ್ಧರಾಮೇಶ್ವರನ, ಭಾರತೀ= ವಚನವು, ಶಿವಭಕ್ತಿಸುಧಾಸಿಂಧು=ಶಿವಭಕ್ತಿಯೆಂಬ ಅಮೃತ ಸಮುದ್ರವನು, ಜೃಂಭಣಾ=ಹೆಚ್ಚಿಸುವುದಕ್ಕೆ, ಅಮಲಚಂದ್ರಿಕಾ ಸತಿ=ನಿರ್ಮಲವಾದ ಬೆಳುದಿಂಗಳಾಗುತಲು, ಪ್ರಾಯುಂ=ಮಿಗಿಲಾಗಿ, ಕುವಲಯೋತ್ಸವಂ=ಕುವಲಯ ಭೂಮಂಡಲವೆಂಬ, ನೆಯ್ದಿಲೆಗಳ, ಉತ್ಸವಂ=ಉತ್ಸವವನು, ವಿಧದೇ=ಮಾಡಿತ್ತು ॥ ೧೪ ॥

ತಸ್ಯವಂಶೇ ಸಮುತ್ಪನ್ನೊ ಮುಕ್ತಾಮಣಿರಿವಾಮಲಃ ।
ಮುದ್ದದೇವಾಭಿದಾಚಾರ್ಯೋ ಮೂರ್ಧನ್ಯಃ ಶಿವಯೋಗಿನಾಂ ॥

ಟೀಕು ॥ ತಸ್ಯವಂಶೇ ತಸ್ಯ=ಆ ಸಿದ್ಧರಾಮೇಶ್ವರನ ವಂಶೇ=ವಂಶವೆಂಬ ಸಮುದ್ರದಲ್ಲಿ, ಶಿವವೇದಿನಾಂ=ಶಿವಜ್ಞಾನಿಗಳ, ಮೂರ್ಧನ್ಯಃ=ಉತ್ತಮಾಂಗದಂತೆ ಶ್ರೇಷ್ಠವಾದ, ಮುದ್ದದೇವಾ ಭಿದಾಚಾರ್ಯಃ=ಮುದ್ಧದೇವನೆಂಬ ಹೆಸರುಳ್ಳ ಆಚಾರ್ಯನುಂ, ಅಮಲಃ=ನಿರ್ಮಲವಾದ, ಮುಕ್ತಾಮಣಿರಿವ=ಮುತ್ತಿನಮಣಿಯೋಪಾದಿಯಲ್ಲಿ, ಸಮುತ್ಪನ್ನಃ=ಹುಟ್ಟಿದನು ॥ ೧೫ ॥

ಮೊದಲ ಬಾರಿಗೆ ತಾರಣಾಬ್ದ ಮಾಘ ಕೃಷ್ಣಪಂಚಮೀ ಸೌಮ್ಯವಾಸರದಂದು (ಇದು 1885ನೆ ಇಸವಿ ಫೆಬ್ರವರಿ 04ನೆಯ ದಿನಾಂಕವಾಗುತ್ತದೆ) ಆಸ್ಥಾನ ಮಹಾ ವಿದ್ವಾನ್ ಪಿ.ಆರ್. ಕರಿಬಸವಶಾಸ್ತ್ರಿಗಳು ಮರಿತೋಂಟದಾರ್ಯರ ತತ್ತ್ವಪ್ರದೀಪಿಕಾ ವ್ಯಾಖ್ಯಾನಸಹಿತ ಸಿದ್ಧಾಂತಶಿಖಾಮಣಿ ಯನ್ನು ಪರಿಶೋಧಿಸಿ ಪ್ರಕಟಮಾಡಿದಂದಿನಿಂದ ಇಂದಿನವರೆಗೂ ಹಲವಾರು ವಿದ್ವಾಂಸರು **ಅದೇ ಆವೃತ್ತಿಯನ್ನು** ಪರಿಶೋಧಿಸಿ, ಸಂಶೋಧಿಸಿ ತಮಗೆ ಬೇಕಾದ ರೀತಿಯಲ್ಲಿ ಹಾಗೂ ನಾನಾ ವಿಧವಾದ ಪ್ರಕ್ಷೇಪಗಳನ್ನೂ, ತಿದ್ದುಪಡಿಗಳನ್ನೂ ಮಾಡಿ ಪ್ರಕಟಿಸಿದ್ದಾರೆ. ಶ್ರೀಮಾನ್ ಪಿ.ಆರ್. ಸಂಗತಿಯು

---

ಮುಖಪುಟದ ಮೇಲೆ

ಶ್ರೀರಸ್ತು
ಶ್ರೀಮತ್ ರೇಣುಕಾಚಾರ್ಯಾಯ ನಮಃ
ಶ್ರೀಮತ್ಷಟ್ಸ್ಥಲಂಬ್ರಹ್ಮಿನಾ ಶಿವಯೋಗಿನಾಮ್ನಾ ರೇಣುಕಾಚಾರ್ಯೇಣ
ಪ್ರಣೀತಂ
ಸಿದ್ಧಾಂತಶಿಖಾಮಣ್ಯಾಖಂ
ವೀರಶೈವಮತಬೋಧಕಶಾಸಿದಂ
ಶ್ರೀಮತ್ಪದವಾಕ್ಯಪ್ರಮಾಣಪಾರಾವಾರಾಧುರೀಣಮರಿತೋಂಟದಾರ್ಯೇಣ
ವಿರಚಿತಯಾ
ತತ್ತ್ವಪ್ರದೀಪಿಕಾಖ್ಯಾಯಾ
ವ್ಯಾಖ್ಯಯಾ ಸಹ
ಕರಿಬಸವಶಾಸ್ತ್ರಿ ಸಾಹಾಯ್ಯೇನ
ಲೇಖಕ ಪ್ರಮಾದಾದಿದೋಷರಹಿತಂ ಯಥಾತಥಾ ಸಮ್ಯಕ್ಯಂಶೋಧ್ಯ
ವೈ. ವೀರಸಂಗಪ್ಪನಾಮ್ನಾ ವೀರಮಾಹೇಶ್ವರೇಣ
ಸ್ವಕೀಯ ವಾಣೀವಿಲಾಸಮುದ್ರಾಶಾಲಾಯಾಂ ಮುದ್ರಯಿತ್ವಾ
ತಾರಣಾಬ್ದ ಮಾಘಕೃಷ್ಣಪಂಚಮೀ ಸೌಮ್ಯವಾಸರೇ ಪ್ರಕಟಿತಮಭೂತ್ - ಎಂದಿದೆ.

ತಸ್ಯ ಮುದ್ದದೇವಸ್ಯ ಶುಚಿಃ ಪವಿತ್ರಃ ಶಾಂತಃ ೩. ಶಿವಯೋಗಿನಾಂ ಮಧ್ಯೇ ಅಗ್ರಣೀಃ ಶ್ರೇಷ್ಠಃ ಶಿವಜ್ಞಾನಮಹೋದಧಿಃ ಶಿವಜ್ಞಾನಸ್ಯ ಸಮುದ್ರಸ್ಯ ಕಶ್ಚಿತ್ ರೇವಣಾಸಿದ್ಧೇಶ್ವರ ದೃಷ್ಟಿಗರ್ಭಸಂಭೂತ ಸಿದ್ಧರಾಮೇಶ್ವರಃ ಆಚಾರಸಿದ್ಧಾನಾಂ ಸದಾಚಾರ ಸಂಪನ್ನಾನಾಂ ವಂಶೇ ಶಿವಯೋಗೀತಿ ವಿಖ್ಯಾತಃ ಆಸೀದಿತ್ಯರ್ಥಃ ॥ ೧೩ ॥

೨. "ಇತಿ ಶ್ರೀ ಸಿದ್ಧಾಂತ ಶಿಖಾಮಣಿ ವ್ಯಾಖ್ಯಾಯಾಂ ಪ್ರಕಾಶತರಂಗಿಣೀ ವ್ಯಾಖ್ಯಾಯಾಂ ಚತುರ್ಥಪರಿಚ್ಛೇದಃ" - ಎಂದಿದೆ. ಪುಟ ೩೫ ಶ್ರೀಪಿ.ಆರ್. ಕರಿಬಸವಶಾಸ್ತ್ರಿಗಳ ಆವೃತ್ತಿ ಅದೇ : ಪುಟ : ೫ : ಶ್ಲೋಕ ೧೩

೧. ಇತಿ ಶ್ರೀ ಮಹಾವೀರಶೈವಮಾಹೇಶ್ವರಾಚಾರ್ಯ ಶಿವಯೋಗಿ ಸಂಗೃಹೀತೇ ವೇದಾಗಮ ಪುರಾಣಾದಿ ಸಾರಭೂತೇ ಸಿದ್ಧಾಂತಶಿಖಾಮಣಿವನುಕ್ರಮ ಪ್ರಸಂಗೋನಾಮ ಪ್ರಥಮಃ ಪರಿಚ್ಛೇದಃ - ಎಂದಿದೆ. ೪ ಅದೇ : ಪುಟ : ೮ ಮತ್ತು ಪ್ರಥಪರಿಚ್ಛೇದ ೧೩ ಮತ್ತು ೧೭ನೆಯ ಶ್ಲೋಕಗಳಲ್ಲಿ ಶಿವಾತ್ಮಕಃ ಶಿವಸ್ವರೂಪಃ ಶಿವಸಿದ್ಧಾಂತನಿರ್ಣೇತಾ ತ್ರಿಪದಾರ್ಥಚತುಷ್ಪಾದಯುಕ್ತ ಶಿವಾಗಮಾರ್ಥನಿರ್ಣಾಯಕ ಶಿವಾಚಾರ್ಯಃ ಶಿವಸಮಯ ಸ್ಥಾಪನಾಚಾರ್ಯಃ ಸಿದ್ಧನಾಥಾಭಿದಃ ಸಿದ್ಧರಾಮೇಶ್ವರಾಭಿದಾನ ಸಂಯುಕ್ತಸ್ಸಿದ್ಧನಾಥಾಚಾರ್ಯಾಖ್ಯಃ ನಂದನಃ ಕುಮಾರಃ ಆಸೀತ್ ಅಭವದಿತ್ಯರ್ಥ್ಯ ॥ ಪುಟ ೬ - ಶ್ಲೋ ೧೭.

ಕರಿಬಸವಶಾಸ್ತ್ರಿಗಳ ಆವೃತ್ತಿಯ ಮುಖಪುಟದ ಮೇಲೆ ಗ್ರಂಥ ಕರ್ತೃವು "ಶ್ರೀ ಷಟ್ಸ್ಥಲಬ್ರಹ್ಮಿನಾ ಶಿವಯೋಗಿನಾಮ್ನಾ ರೇಣುಕಾಚಾರ್ಯೇಣ ಪ್ರಣೀತಂ ಸಿದ್ಧಾಂತಶಿಖಾಮಣ್ಯಾಖ್ಯಂ ಮತಬೋಧಕ ಶಾಸ್ತ್ರಂ" ಎಂದಿದೆ. ಕವಿವಂಶ ವಿವರಣೆಯಲ್ಲಿ ಶಿವಯೋಗಿ ಶಿವಾಚಾರ್ಯರು ಗ್ರಂಥ ಕರ್ತೃವೆಂದಿದ್ದರೂ ಷಟ್ಸ್ಥಲಬ್ರಹ್ಮಿನಾ ಶಿವಯೋಗಿನಾಮ್ನಾ ರೇಣುಕಾಚಾರ್ಯೇಣ ಎಂದು ಹೇಳುವುದರ ಮೂಲಕ ಶಿವಯೋಗಿಗಳಿಗೂ ರೇಣುಕಾಚಾರ್ಯರಿಗೂ ಅಭೇದವನ್ನು ಕಲ್ಪಿಸಿದ್ದಾರೆ (ಈ ಆವೃತ್ತಿಯ ವ್ಯಾಖ್ಯಾನಕ್ಕೆ ಪ್ರಕಾಶ ತರಂಗಿಣೀ ಎಂಬ ಹೆಸರಿರಬಹುದೆಂದೂ ತಿಳಿದು ಬರುತ್ತದೆ)[1]. ಇದು ಇನ್ನೂ ಮುಂದುವರಿಯುತ್ತಲೇ ಇದ್ದು ೧೯೬೫ರಲ್ಲಿ ಮೈಸೂರು ವಿಶ್ವವಿದ್ಯಾಲಯದ ಪ್ರಾಚ್ಯವಿದ್ಯಾಸಂಶೋಧನಾಲಯದಿಂದ, ಶ್ರೀ ಹೆಚ್.ಪಿ. ಮಲ್ಲೇದೇವರ ಸಂಪಾದಕತ್ವದಲ್ಲಿ ಪ್ರಕಟಗೊಂಡ ಶ್ರೀ ಮರಿತೋಂಟದಾರ್ಯರ ತತ್ತ್ವಪ್ರದೀಪಿಕಾ ವ್ಯಾಖ್ಯಾನದ ಸಿ.ಶಿಯಲ್ಲೂ ಒಂಭತ್ತನೆಯ ಪರಿಚ್ಛೇದದಿಂದ ಆರಂಭಗೊಂಡು ಇಪ್ಪತ್ತೊಂದನೆಯ ಪರಿಚ್ಛೇದದವರೆಗೂ 'ಇತಿ ಶ್ರೀಮತ್ ಷಟ್ಸ್ಥಲ ಬ್ರಹ್ಮಿನಾ ಶಿವಯೋಗಿನಾಮ್ನಾ ರೇಣುಕಾಚಾರ್ಯೇಣ ವಿರಚಿತೇ ಸಿದ್ಧಾಂತಶಿಖಾಮಣೌ.... ಪರಿಚ್ಛೇದಃ ಸಮಾಪ್ತಃ' ಎಂದೇ ಇದೆ.

ಶ್ರೀ ಶಿವಯೋಗಿ ಶಿವಾಚಾರ್ಯರು ಸಿದ್ಧಾಂತಶಿಖಾಮಣಿಯ ಸಂಗ್ರಹ ಕರ್ತೃ ಎಂಬುದು ಸ್ಪಷ್ಟವಾಗಿದ್ದರೂ ಇಂತಹ ಗೊಂದಲದ ಹೇಳಿಕೆಗಳು ಇಂದಿಗೂ ಉಳಿದು ಬಂದಿವೆ. ಈ ಕಾರಣದಿಂದಲೇ ಸಿದ್ಧಾಂತಶಿಖಾಮಣಿಯ ಕರ್ತೃ ಕಾಲಾದಿಗಳು ಗೊಂದಲದ ಗೂಡುಗಳಾಗಿವೆ.

ನಂತರದಲ್ಲಿ ಆಸ್ಥಾನ ವಿದ್ವಾನ್ ಶ್ರೀ ಎನ್.ಆರ್. ಕರಿಬಸವಶಾಸ್ತ್ರಿಗಳು ಪಿ.ಆರ್. ಕರಿಬಸವಶಾಸ್ತ್ರಿಗಳವರ ತೆಲುಗು ಲಿಪಿಯ ಮರಿತೋಂಟದಾರ್ಯರ ತತ್ತ್ವಪ್ರದೀಪಿಕಾ ವ್ಯಾಖ್ಯಾನದ ಪ್ರತಿಗಳು ಮುಗಿದು ಓದುಗರ ಕೋರಿಕೆಯ ಮೇರೆಗೆ ಈ ಆವೃತ್ತಿಯನ್ನು ಪರಿಷ್ಕರಿಸಿ ಎರಡನೆಯ ಮುದ್ರಣವನ್ನು "ತಾತ್ಪರ್ಯ ದೀಪಿಕೆ" ಎಂಬ ಕರ್ಣಾಟಕ ಟಿಪ್ಪಣದಿಂದ ಕೂಡಿದ 1921ರಲ್ಲಿ ಪ್ರಕಟಿಸಿರುತ್ತಾರೆ. ಈ ಮುದ್ರಣದ ಪ್ರಸ್ತಾವನೆಯಲ್ಲಿ... "ಆ ಅಗಸ್ತ್ಯರ ಸೂತ್ರವೃತ್ತಿಯು ಈಗ ಉಪಲಬ್ಧವಾಗಿಲ್ಲ ಮತ್ತು ಏಕೋರಾಮ ಶಿಖಾಚಾರ್ಯರೂ ಕೂಡ ಬ್ರಹ್ಮಸೂತ್ರಕ್ಕೆ ಅಧಿಕರಣ ಭಾಷ್ಯವನ್ನು ಬರೆದಿರುವರೆಂದು ಶ್ರೀಪತಿಪಂಡಿತರ ವಾಕ್ಯಗಳಿಂದ ಗೊತ್ತಾಗುತ್ತದೆ. ಅದೂ ದೊರೆದಿಲ್ಲ. ಮತ್ತು ರೇಣುಕ ಪೂಜ್ಯಪಾದರು ಮತ ಪ್ರಸರಣ ಕಾರ್ಯದಲ್ಲಿ ತೊಡಗಿ ಚೋಳರ ಕಾಲದಲ್ಲಿ ಎಷ್ಟೋ ವಾದಾನುವಾದಗಳನ್ನು ನಡೆಯಿಸಿರುವರೆಂಬುದು ಪ್ರಖ್ಯಾತವಾಗಿದೆ. ಇಂತಹ ಸಮಯಗಳಲ್ಲೆಲ್ಲಾ ಎಷ್ಟೋ ಗ್ರಂಥಗಳು ರಚಿತವಾಗಿರಬೇಕು. ಆದರೆ ಈಗಣ ನಮ್ಮ ದುರ್ದೈವದಿಂದ ಅವು ನಮಗೆ ಇದುವರೆಗೂ ಗೋಚರಿಸಿಲ್ಲ. ಅದಂತಿರಲಿ.

ಶ್ರೀ ಶಿವಯೋಗಿ ಶಿವಾಚಾರ್ಯರು ಪ್ರಯತ್ನಪಟ್ಟು ಆ ರೇಣುಕೋಪದಿಷ್ಟವಾದ ಶಾಸ್ತ್ರವನ್ನೇ ರೇಣುಕಾಗಸ್ತ್ಯ ಸಂವಾದರೂಪವಾಗಿ ಈ ಗ್ರಂಥದಲ್ಲಿ ಸಂಗ್ರಹಿಸಿ ಇಟ್ಟಿದ್ದುದರಿಂದ ವೀರಶೈವ ಜಗತ್ತಿಗೆ ಎಷ್ಟೋ ಉಪಕಾರವಾಯಿತು. ಶ್ರೀ ರೇಣುಕರು ಅಗಸ್ತ್ಯರಿಗೆ ಸಿದ್ಧಾಂತೋಪದೇಶ ಮಾಡಿದರೆಂಬ

---

1. ಇತಿ ಶ್ರೀ ಸಿದ್ಧಾಂತಶಿಖಾಮಣಿ ವ್ಯಾಖ್ಯಾಯಾಂ ಪ್ರಕಾಶತರಂಗಿಣ್ಯಾಖ್ಯಾಯಾ ಚತುರ್ಥಪರಿಚ್ಛೇದಃ - ಎಂದಿದೆ. ಈ ವ್ಯಾಖ್ಯಾನಕ್ಕೆ 'ಪ್ರಕಾಶ ತರಂಗಿಣಿ' ವ್ಯಾಖ್ಯಾನ ಎಂಬ ಹೆಸರೂ ಇರುವುದೆಂದು ತೋರುತ್ತದೆ.

ಸ್ಮಾರಕವಾಗಿಯಾದರೂ ಉಳಿಯಿತು.

ಈ ಗ್ರಂಥಕರ್ತರಾದ ಶಿವಯೋಗಿ ಶಿವಾಚಾರ್ಯರು ಪೀಠಿಕಾ ಭಾಗದಲ್ಲಿ ತಮ್ಮ ವಂಶಾನುಕ್ರಮವನ್ನು ಹೇಳಿಕೊಂಡಿದ್ದರೂ, ಅದರಿಂದ ಇವರು ಯಾವ ಕಾಲದವರು, ಯಾವ ಸ್ಥಲದವರು ಎಂಬ ವಿಷಯವು ಸ್ಪಷ್ಟವಾಗುವುದಿಲ್ಲ. ಸೊಲ್ಲಾಪುರದ ಸಿದ್ಧರಾಮ ಶಿವಯೋಗಿಗಳ ಸಂತತಿಯವರೆಂದು ಹೇಳುವುದಕ್ಕೆ ಸಮಂಜಸವಾದ ಆಧಾರವಿಲ್ಲ. ಮತ್ತು ಈ ಗ್ರಂಥವು ಬಸವಾದಿ ಪ್ರಮಥರ ಅವತಾರಕ್ಕಿಂತಲೂ ಹಿಂದಣದಾಗಿರಬೇಕು" ಎಂಬಂತಹ ನಿರಾಧಾರ ಹೇಳಿಕೆಯನ್ನಿತ್ತರು.

ಮಹಾರಾಷ್ಟ್ರ ತಾತ್ಪರ್ಯದಿಂದ ಕೂಡಿದ ಸಿದ್ಧಾಂತಶಿಖಾಮಣಿಯು ವೇದಮೂರ್ತಿ ಮಣೂರ ಮಠಾಧ್ಯಕ್ಷ ಮಲ್ಲಿಕಾರ್ಜುನಶಾಸ್ತ್ರಿಗಳಿಂದ ರಚಿಸಲ್ಪಟ್ಟು ರಾವ ಸಾಹೇಬ ಮಲ್ಲಪ್ಪಾ ಬಸಪ್ಪಾ ವಾರದ ಇವರ ಆಶ್ರಯದಲ್ಲಿನ ಲಿಂಗಿ ಬ್ರಾಹ್ಮಣ ಗ್ರಂಥಮಾಲೆಯಿಂದ ಎರಡು ಭಾಗಗಳಲ್ಲಿ (ಭಾಗ1 - 1 ರಿಂದ 11 ; ಭಾಗ 2 : 12ರಿಂದ 21ರವರೆಗೆ) 1905 ರಲ್ಲಿ ಪ್ರಸಿದ್ಧಗೊಂಡಿತು. ಈ ಆವೃತ್ತಿಗೆ ಪಿ.ಆರ್. ಕರಿಬಸವಶಾಸ್ತ್ರಿಗಳ ಆವೃತ್ತಿಯು ಮೂಲವಾಗಿದೆ. ಮರಿತೋಂಟದಾರ್ಯರ 'ತತ್ತ್ವಪ್ರದೀಪಿಕಾ' ವ್ಯಾಖ್ಯಾನವೇ 'ಮಹಾರಾಷ್ಟ್ರ ತಾತ್ಪರ್ಯ'ವಾಗಿರುವುದರಿಂದ ಶಿವಯೋಗಿಯು ಸಿದ್ಧರಾಮೇಶ್ವರರ ವಂಶದವರೆಂದೇ ಇಲ್ಲಿಯೂ ಲಿಖಿತವಾಗಿದೆ[2].

ಶ್ರೀ ಆರ್.ಸಿ. ಹಿರೇಮಠ ಅವರು ತಮ್ಮ ಮಹಾಯಾತ್ರೆ ಎಂಬ ಗ್ರಂಥದಲ್ಲಿ ಸಿದ್ಧಾಂತ ಶಿಖಾಮಣಿಯ ಕುರಿತಾದ ಎಲ್ಲಾ ಗೊಂದಲಕ್ಕೂ ಮರಿತೋಂಟದಾರ್ಯರ ಈ ಅವತರಣಿಕೆಯೇ ಕಾರಣವೆನ್ನುತ್ತಾ ಮೂಲ ಸಿದ್ಧಾಂತ ಶಿಖಾಮಣಿಯ ಯಾವ ಹಸ್ತಪ್ರತಿಯಲ್ಲಾಗಲೀ ಇತರ ವಿದ್ವಾಂಸರು ಬರೆದ ಟೀಕೆಗಳಲ್ಲಾಗಲೀ ಈ ಅವತಾರಿಕೆ ಇರುವುದಿಲ್ಲ. ಮರಿತೋಂಟದಾರ್ಯರು ಸ್ವಕಪೋಲಕಲ್ಪಿತವಾದ ಈ ಅವತರಣಿಕೆಯನ್ನು ಬರೆದು ಅಪಾರ್ಥವನ್ನು ಕಲ್ಪಿಸಿ ಸಂದೇಹ ಗೊಂದಲಗಳುಂಟಾಗುವುದಕ್ಕೆ ಕಾರಣರಾದಂತಿದೆ ಎಂದು ಕಟುವಾಗಿ ಟೀಕಿಸಿದ್ದಾರೆ[3].

ಶ್ರೀ ಮರಿತೋಂಟದಾರ್ಯರೇ ಶಿವಯೋಗಿ ಶಿವಾಚಾರ್ಯರು, ಶರಣ ಶಿವಯೋಗಿ ಎಂಬ ಪರ್ಯಾಯ ನಾಮವುಳ್ಳ ಸಿದ್ಧರಾಮೇಶ್ವರರ ವಂಶಸ್ಥರು ಎಂಬ ಕಲ್ಪನೆಯನ್ನು ಬಿತ್ತಿದ್ದಾರೆ. ಇದನ್ನು ಮಾನ್ಯ ಮಾಡಬಾರದೆಂಬುದು ಇವರ ಅಭಿಪ್ರಾಯ. ಆದರೆ ಈ ಅವತರಣಿಕೆಯನ್ನು ಮೊದಲ ಬಾರಿಗೆ ಹೇಳಿದವರು ಶ್ರೀ ಸೋಸಲೆ ರೇವಣಾರಾಧ್ಯರು. ಶ್ರೀ ಸೋಸಲೆ ರೇವಣಾರಾಧ್ಯರ ಸಿದ್ಧಾಂತ ಶಿಖಾಮಣಿಗೆ ಬರೆದ ಸಿದ್ಧಾಂತಬೋಧಿನೀ (ಸಿದ್ಧಾರ್ಥ ಸಂಬೋಧಿನೀ) ವ್ಯಾಖ್ಯಾನವನ್ನೇ ಶ್ರೀಮರಿತೋಂಟದಾರ್ಯರು ಸಂಪೂರ್ಣವಾಗಿ ಸಂಸ್ಕೃತೀಕರಣಗೊಳಿಸಿದ್ದಾರೆಂದರೆ ಅತಿಶಯೋಕ್ತಿಯೇನಲ್ಲ. ಆದರೂ ಶ್ರೀಮರಿತೋಂಟದಾರ್ಯರು ಕೆಲವೊಮ್ಮೆ ದೀರ್ಘವಾಗಿ ವ್ಯಾಖ್ಯಾನವನ್ನೂ ಮಾಡಿರುವುದುಂಟು. ಈ ದೀರ್ಘ ವ್ಯಾಖ್ಯಾನ ಸೋಸಲೆಯವರಿಲ್ಲ ಇನ್ನು ಕೆಲವು

---

1. ನೋಡಿ : ಪ್ರಸ್ತಾವನೆ ಪುಟ 5

ನೋಡಿ : ಪ್ರಸ್ತಾವನಾ : ಪು 4 ಭಾಗ - 1, ಭಾಗ 2 - ಪು.

3. ನೋಡಿ : ಲಿಂಗೀ ಬ್ರಾಹ್ಮಣ ಧರ್ಮಗ್ರಂಥಮಾಲಾ, ಸೊಲ್ಲಾಪುರ - 1905

ನೋಡಿ - ಮಹಾಯಾತ್ರೆ - ಪೂರ್ವೋಕ್ತ ಪುಟ : ೧೧೯

ಕಡೆ ಸುಲಭವಾಗಿರುವ ಶ್ಲೋಕಗಳನ್ನು 'ಇತಿ ಸ್ಪಷ್ಟಮ್' ಎಂದು ಹೇಳಿ ಮುಂದುವರಿಯುತ್ತಾರೆ. ಶ್ರೀ ಸೋಸಲೆಯವರು ವೇದಾಗಮ ಪುರಾಣೋಪನಿಷತ್ತುಗಳಿಂದ ಉದ್ಧರಿಸಿರುವ ಸುಮಾರು ನಾಲ್ಕು ನೂರಕ್ಕೂ ಹೆಚ್ಚಿನ ಶ್ಲೋಕಗಳು, ಶ್ಲೋಕ ಪಾದಗಳನ್ನು ಬಳಸಿಕೊಂಡಿರುವುದರ ಜೊತೆಗೆ ಇನ್ನೂ ಕೆಲವು ಹೆಚ್ಚಿನ ಶ್ಲೋಕಗಳನ್ನು ಪೂರ್ವೋಕ್ತ ಗ್ರಂಥಗಳಿಂದ ಆರಿಸಿಕೊಂಡಿರುವುದೂ ಉಂಟು. ಸೋಸಲೆಯವರು ಸಿದ್ಧಾಂತ ಶಿಖಾಮಣಿಯ ಶ್ಲೋಕಗಳನ್ನು ವ್ಯಾಖ್ಯಾನಮಾಡುವ ಮೊದಲಿಗೆ ಮೂಲ ಶ್ಲೋಕಗಳಿಗನುಗುಣವಾಗಿ ಸೂತ್ರವನ್ನು ರಚಿಸಿ ಆ ಶ್ಲೋಕದ ಆಶಯವನ್ನು ತಿಳಿಸುತ್ತಾರೆ. ಹಾಗೆ ತಿಳಿಸುವಲ್ಲಿ ಕೆಲವೊಮ್ಮೆ ಆಗಮಾದಿ ಗ್ರಂಥಗಳಿಂದ ಶ್ಲೋಕಗಳನ್ನು ಉದ್ಧರಿಸಿ ಮೂಲ ಶ್ಲೋಕಗಳ ಪದಶಃ ಅರ್ಥವನ್ನು ಕೊಡುತ್ತಾರೆ. ಅರ್ಥವನ್ನು ವಿವರಿಸುವಲ್ಲಿಯೂ ಕೆಲವೊಮ್ಮೆ ಬೇರೆ ಬೇರೆಯ ಆಗಮಾದಿ ಆಕರಗಳ ಶ್ಲೋಕಗಳನ್ನೂ ಉದ್ಧರಿಸಿ ಶ್ಲೋಕಾರ್ಥವನ್ನು ಪುಷ್ಟೀಕರಿಸುತ್ತಾರೆ. ಕೆಲವೊಮ್ಮೆ ಅರ್ಥವಿವರಣೆಯಾದ ನಂತರದಲ್ಲಿ ತಾತ್ಪರ್ಯವನ್ನು ಬರೆದು ಅಲ್ಲಿಯೂ ವಿವರಣೆಯನ್ನು ಕೊಟ್ಟು 'ಶ್ರುತಿಗುರುಸ್ವಾನುಭವಗಳಿಂದವು ನಿಶ್ಚಯಿಸುವುದು' ಎಂದು ಹೇಳಿ ಆ ಶ್ಲೋಕವನ್ನು ಮುಕ್ತಾಯ ಮಾಡುತ್ತಾರೆ. ಇದೇ ಕ್ರಮವನ್ನು ಶ್ರೀ ಮರಿತೋಂಟದಾರ್ಯರೂ ತಮ್ಮ 'ತತ್ತ್ವಪ್ರದೀಪಿಕಾ' ವ್ಯಾಖ್ಯಾನದಲ್ಲೂ ಅನುಸರಿಸಿರುವುದನ್ನು ಕಾಣಬಹುದು. ಸಾಮಾನ್ಯವಾಗಿ ಸಂಸ್ಕೃತ ಭಾಷೆಯಿಂದ ದೇಶೀಯ ಭಾಷೆಗಳಿಗೆ ಅನುವಾದಗೊಳ್ಳುವುದು ಸಹಜ. ಆದರೆ ದೇಶೀಯ ಭಾಷೆಯಿಂದ ಸಂಸ್ಕೃತ ಭಾಷೆಗೆ ಅನುವಾದಗೊಳ್ಳುವುದು ವಿಶೇಷ. ಇಂತಹ ಒಂದು ಅನುವಾದ ಕಾರ್ಯ ಶ್ರೀ ಸೋಸಲೆಯವರು ಸಿದ್ಧಾಂತ ಶಿಖಾಮಣಿಗೆ ಬರೆದ 'ಸಿದ್ಧಾಂತಬೋಧಿನೀ' ವ್ಯಾಖ್ಯಾನವು ಶ್ರೀ ಮರಿತೋಂಟದಾರ್ಯರ ಸಂಸ್ಕೃತ 'ತತ್ತ್ವಪ್ರದೀಪಿಕಾ' ವ್ಯಾಖ್ಯಾನಕ್ಕೆ ಆಧಾರವಾಗಿರುವುದು ಚಾರಿತ್ರಿಕ ಸಂಗತಿ. ಶ್ರೀ ಸೋಸಲೆಯವರ ವ್ಯಾಖ್ಯಾನವನ್ನು ಶ್ರೀ ಮರಿತೋಂಟದಾರ್ಯರು ಹೇಗೆ ಸಂಸ್ಕೃತೀಕರಣಗೊಳಿಸಿ ದ್ದಾರೆಂಬುದನ್ನು ಕಾಣಬಹುದು.

---

| ಶ್ರೀ ಸೋಸಲೆಯವರ ವ್ಯಾಖ್ಯಾನ | ಶ್ರೀ ಮರಿತೋಂಟದಾರ್ಯರ ವ್ಯಾಖ್ಯಾನ |
|---|---|
| 1. "ಶ್ರೀ ಸೋಸಲೆಯವರು ಗ್ರಂಥಾರಂಭದಲ್ಲಿ ಇಷ್ಟದೇವತಾ ನಮಸ್ಕಾರ ಹಾಗೂ ತಮ್ಮ ವಂಶಪಾರಂಪರ್ಯವನ್ನು ಹೇಳಿದ ನಂತರದಲ್ಲಿ ತಮ್ಮ ವ್ಯಾಖ್ಯಾನವನ್ನು ಈ ಗದ್ಯದಿಂದ ಪ್ರಾರಂಭಿಸುತ್ತಾರೆ.<br>ಕಲಿಕಾಲ ಪ್ರವೇಶಾನಂತರದಲ್ಲಿ ರೇಣುಕಗಣೇಶ್ವರನೆಂದು ಪ್ರಸಿದ್ಧವಾದ ರೇವಣಸಿದ್ಧೇಶ್ವರನು ಕುಂಭಸಂಭವನಿಗೆ ಬೋಧಿಸಿದ ವೀರಶೈವಶಾಸ್ತ್ರದ ಬೋಧಾನಂತರದಲ್ಲಿ ಆ ರೇವಣಸಿದ್ಧೇಶ್ವರನ | ಶ್ರೀ ಮರಿತೋಂಟದಾರ್ಯರು ಇಷ್ಟದೇವತಾ ಪ್ರಾರ್ಥನಾನಂತರದಲ್ಲಿ ಈ ಗದ್ಯದಿಂದ ತಮ್ಮ ವ್ಯಾಖ್ಯಾನವನ್ನು ಪ್ರಾರಂಭಿಸುತ್ತಾರೆ.<br>ಅತ್ರ ಕಲಿಕಾಲಪ್ರವೇಶಾನಂತರಂ ಲೋಕಹಿತಾರ್ಥಂ ರೇಣುಕಗಣೇಶ್ವರಃ ಇತಿ ಪ್ರಸಿದ್ಧಃ ರೇವಣಸಿದ್ಧೇಶ್ವರಃ ಕುಂಭಸಂಭವಾಯ ವೀರಶೈವಶಾಸ್ತ್ರಂ ಉಪದೇಷ್ಟವಾನ್ ತದನಂತರಂ ರೇವಣಸಿದ್ಧೇಶ್ವರದೃಷ್ಟಿ ಗರ್ಭಸಂಭೂತ ಸಿದ್ಧರಾಮೇಶ್ವರ ಸಂಪ್ರದಾಯ ಪ್ರಸಿದ್ಧಃ ಸಕಲನಿಗಮಾಗಮಪಾರಗಃ |

ದೃಷ್ಟಿಗರ್ಭಸಂಭವನಾದ ಸಿದ್ಧರಾಮೇಶ್ವರನ ಸಾಂಪ್ರದಾಯು ಪ್ರಸಿದ್ಧವಾದ ಸಕಲ ನಿಗಮಾಗಮಪಾರಂಗತನಾದ ಶಿವಯೋಗೀ ಶ್ವರನೆಂಬಾಚಾರ್ಯನು ಆ ರೇಣುಕಾಗಸ್ತ ಸಂವಾದವನು ತನ್ನ ಶಿಷ್ಯರುಗಳಿಗೆ ಬೋಧಿಸ ಲೋಸುಗವಾಗಿ ಸಪ್ತಶ್ಲೋಕಂಗಳಿಂದೆ ಸಮಸ್ತ ಸಮಯಶಾಸ್ತ್ರಂಗಳಿಗುತ್ತರವಾದ ನಿಗಮಾಗಮ ವಾಕ್ಯವನು ಗರ್ಭೀಕರಿಸಿ ಇಷ್ಟ ದೇವತಾ ನಮಸ್ಕಾರಮಂ ಮಾಡುತ್ತಿರ್ದ್ದಪಂ".

ಶಿವಯೋಗೀಶ್ವರ ಇತ್ಯಭಿಧಾನವಾನ್ ಕಶ್ಚಿತ್ ಮಾಹೇಶ್ವರಃ ತದ್ರೇಣುಕಾಗಸ್ತ್ಯ ಸಂವಾದಂ ನಿರ್ವಿಘ್ನೇನ ಸ್ವಶಿಷ್ಯಾನ್ ಬೋಧಯಿತುಂ ಸ್ವಮನಸಿ ಕೃತ ಸಕಲ ಸಿದ್ಧಾಂತಶ್ರೇಷ್ಠ ನಿಗಮಾಗಮೈಕ್ಯಗರ್ಭೀಕಾರಲಕ್ಷಣಸ್ವೇಷ್ಟ ದೇವತಾನಮಸ್ಕಾರರೂಪಂ ಮಂಗಲಂ ಶಿಷ್ಯ ಶಿಕ್ಷಾರ್ಥಂ ಸಪ್ತಭಿಃ ಶ್ಲೋಕೈಃ ನಿಬಧ್ನಾತಿ.
(ಪುಟ 4, ಪ್ರಾ.ವಿ.ಸಂ. ಮೈಸೂರು - 1995)

2. ಶಿವಯೋಗಸಮಾಧಿಸ್ಥಲದ ಮೂರು ಶ್ಲೋಕಗಳು :
ಸೂತ್ರ ।। ಬಳಿಕ "ಗುದಮವಷ್ಟಭ್ಯಾಧಾರಾ ದ್ವಾಯುಮುತ್ಥಾಪ್ಯ ಸ್ವಾಧಿಷ್ಠಾನಂ ತ್ರಿಃ ಪದಕ್ಷಿಣೀ ಕೃತ್ಯ ಮಣಿಪೂರಕಂ ಗತ್ವಾ ಅನಾಹತಮತಿ ಕ್ರಮ್ಯ ವಿಶುದ್ಧೌ ಪ್ರಾಣಲಿಂಗಂ ನಿರುಧ್ಯ ಆಜ್ಞಾಮನುಯಾನ್, ಬ್ರಹ್ಮರಂಧ್ರಂ ಧ್ಯಾಯನ್, ತ್ರಿಮಾತ್ರೋऽಹಮಿತಿ ಸರ್ವದಾ ಧ್ಯಾಯೇತ್' ಯೆಂಬ ಹಂಸೋಪನಿಷದರ್ಥ ವನು ಪ್ರಕಟಿಸುತ್ತಿರ್ದ್ದಪಂ.

ಅಥ - ಗುದಮವಷ್ಟಭ್ಯಧಾರಾದ್ವಾಯು ಮುತ್ಥಾಪ್ಯ, ಸ್ವಾಧಿಷ್ಠಾನಂ ತ್ರಿಃಪ್ರದಕ್ಷಿಣೀಕೃತ್ಯ, ಮಣಿಪೂರಕಂ ಗತ್ವಾ, ಅನಾಹತಮತಿಕ್ರಮ್ಯ, ವಿಶುದ್ಧೌಪ್ರಾಣಲಿಂಗಂನಿರುಧ್ಯ, ಆಜ್ಞಾಮನು ಯಾನ್, ಬ್ರಹ್ಮರಂಧ್ರಂ ಧ್ಯಾಯನ್, ತ್ರಿಮಾತ್ರೋऽಹಮಿತಿ ಸರ್ವದಾ ಧ್ಯಾಯೇತ್‌ಇತಿ ಹಂಸೋಪನಿಷದ್ವಚನಾನು ಸಾರೇಣ ಸಕಲ ಸಮಾಧಿಂ ಪ್ರಕಾಶಯತಿ -

ಗ್ರಂಥ ।। ಅಂತಃಷಟ್‌ಚಕ್ರರೂಢಾನಿ ಪಂಕಜಾನಿ ವಿಭಾವಯೇತ್ ।
ಬ್ರಹ್ಮಾದಿಸ್ಥಾನಭೂತಾನಿ ಭ್ರೂಮಧ್ಯಾಂತಾನಿ ಮೂಲತಃ ।।

ಭ್ರೂಮಧ್ಯಾದೂರ್ಧ್ವಭಾಗೇ ತು ಸಹಸ್ರದಲಮಂಬುಜಮ್ ।
ಭಾವಯೇತ್ತತ್ರ ವಿಮಲಂ ಚಂದ್ರಬಿಂಬಂ ತದಂತರೇ ।।

ಸೂಕ್ಷ್ಮರಂಧ್ರಂ ವಿಜಾನೀಯಾತ್ತತ್ಕೈಲಾಸಪದಂ ವಿದುಃ ।
ತತ್ರಸ್ಥಂ ಭಾವಯೇಚ್ಛಂಭುಂ ಸರ್ವಕಾರಣಕಾರಣಮ್ ।।

ಟೀಕು।। ಅತಃ=ಜೀವೇಶ್ವರರಿಗಾಶ್ರಯವಾದ ಸೂಕ್ಷ್ಮ ಶರೀರಮಧ್ಯೇ ಷಟ್ಚಕ್ರರೂಢಾನಿ= ಸೂಕ್ಷ್ಮ ದೇಹಮಧ್ಯದಲ್ಲಿ ಷಟ್ಚಕ್ರಂಗಳಲ್ಲಿ ಹುಟ್ಟಿರ್ದ್ದ, ಪಂಕಜಾನಿ= ಷಟ್ಕಮಲಂಗಳನು,

ಪುಟ ೨೬೯ / ೨೫-೨೬-೨೭
ಅತಃ=ಜೀವೇಶ್ವರಾ ಶ್ರಯಿಭೂತ ಸೂಕ್ಷ್ಮ ಶರೀರಮಧ್ಯೆ ಷಟ್‌ಚಕ್ರರೂಢಾನಿ ಷಟ್‌ಚಕ್ರೋತ್ಪನ್ನಾನಿ ಪಂಕಜಾನಿ

ಮೂಲತಃ=ಆಧಾರ ತೊಡಗಿ, ಭ್ರೂಮಧ್ಯಾಂತಾನಿ=ಆಜ್ಞಾಚಕ್ರವೆ ಕಡೆಯಾಗುಳ್ಳ, ಬ್ರಹ್ಮಾದಿಸ್ಥಾನಭೂತಾನಿ= ಬ್ರಹ್ಮಾದಿಸ್ಥಾನಂಗಳನಾಗಿ, ಭಾವಯೇತ್= ಗುರೂಪದೇಶದಿಂದೆ ಭಾವಿಸುವುದು. ಭ್ರೂಮಧ್ಯಾತ್= ಆಜ್ಞಾಚಕ್ರದದೆಸೆಯಿಂದೆ, ಊರ್ಧ್ವಭಾಗೇತು= ಊರ್ಧ್ವಭಾಗವಾದ ಬ್ರಹ್ಮರಂಧ್ರದಲ್ಲಿಯಾಯಿತ್ತಾದೊಡೆ, ಸಹಸ್ರದಲಮಂಬುಜಂ= ಸಹಸ್ರದಳಕಮಲವನು, ಭಾವಯೇತ್= ಭಾವಿಸುವುದು.ತತ್ರ=ಆ ಸಹಸ್ರದಳಕಮಲದಲ್ಲಿ, ವಿಮಲಂ ಚಂದ್ರಬಿಂಬಂ= ನಿರ್ಮಲವಾದ ಚಂದ್ರಮಂಡಲವನು, ಭಾವಯೇತ್= ಧ್ಯಾನಿಸುವುದು. ತದಂತರೇ=ಆ ಚಂದ್ರಮಂಡಲ ಮಧ್ಯದಲ್ಲಿ, ಸೂಕ್ಷ್ಮರಂಧ್ರಂ= ವಾಲಾಗ್ರಮಾತ್ರದೋಪಾದಿಯಲ್ಲಿ ಪರಮಸೂಕ್ಷ್ಮವಾದ ರಂಧ್ರವನು, ವಿಜಾನೀಯಾತ್= ಉಪದೇಶದಿಂದೆ ಅರಿವುದು. ತತ್=ಆ ಸೂಕ್ಷ್ಮರಂಧ್ರನೆ, ಕೈಲಾಸಪದಂ=ಕೈಲಾಸಸ್ಥಾನವಾಗಿ, ವಿದುಃ=ಅರಿವುತ್ತಿರ್ದ್ದಪರು. ತತ್ರಸ್ಥಂ=ಆ ಕೈಲಾಸ ದಲ್ಲಿರುತ್ತಿರ್ದ್ದ, ಶಂಭುಂ=ಪರಮೇಶ್ವರನನು, ಸರ್ವಕಾರಣಕಾರಣಂ=ಸಮಸ್ತ ಕಾರಣಂಗಳಿಗೆ ಕಾರಣವಾಗಿದ್ದಾತನಾಗಿ, ಭಾವಯೇತ್= ಧ್ಯಾನಿಸುವುದು.

(ತಾತ್ಪರ್ಯ : ಚಿತ್ಕ್ರಿಯೇಂದ್ರಿಯರೂಪವಾದ ಲಿಂಗೋದ್ಧಾರಪ್ರಸಿದ್ಧವಾದ ಷಟ್ಚಕ್ರ ಕಮಲಾದಿ ಸಂಜ್ಞೆಗಳನು ಸೋಸಲಿ ರೇವಣಾರಾಧ್ಯರಿಂದೆ ಸಂಗ್ರಹಿಸಲುಪಟ್ಟ 'ಉಪದೇಶಮಂಜರಿ' ಯಿಂದೆಯು, ಸ್ವಾನುಭವ ಗುರೂಕ್ತಿಗಳಿಂದೆಯು ನಿಶ್ಚೈಸುವುದು. ಗ್ರಂಥಬಾಹುಲ್ಯವಾದೀತೆಂದು ಸಂಮತಿಯ ಬರೆದುದಿಲ್ಲ).

ಷಟ್‌ಕಮಲಾಗಿ ಮೂಲತ ಆಧಾರಮಾರಭ್ಯ ಭ್ರೂಮಧ್ಯಾಂತಾನಿ ಆಜ್ಞಾಚಕ್ರಾಂತಾನಿ ಬ್ರಹ್ಮಾದಿಸ್ಥಾನಭೂತಾನಿ ಭಾವಯೇತ್ ಗುರೂಪದಿಷ್ಟ ಪ್ರಕಾರೇಣ ಚಿಂತಯೇತ್ ॥

ಭ್ರೂಮಧ್ಯಾದೂರ್ಧ್ವಭಾಗೇ ತು ಬ್ರಹ್ಮರಂಧ್ರೇ ಇತ್ಯರ್ಥಃ, ಸಹಸ್ರದಲಮಂಬುಜ ಸಹಸ್ರ ಶಕ್ತಿದಲಂಕೃತ ಕಮಲಂ ಭಾವಯೇತ್, ತತ್ರ ತತ್ಕಮಲಮಧ್ಯೇ, ವಿಮಲಂ ನಿರ್ಮಲಂ ಚಂದ್ರಬಿಂಬಂ ಸೋಮಮಂಡಲಂ ಭಾವಯೇತ್। ಏತದಂತರೇ ತಚ್ಚಂದ್ರಮಂಡಲಮಧ್ಯೇ ಸೂಕ್ಷ್ಮರಂಧ್ರಂ ವಾಲಾಗ್ರಸಮಾನಾತಿ ಸೂಕ್ಷ್ಮರಂಧ್ರಂ ವಿಜಾನೀಯಾತ್ ಉಪ ದೇಶಾಜ್ಜಾನೀಯಾತ್ । ತತ್ ಸೂಕ್ಷ್ಮ ರಂಧ್ರಂ ಕೈಲಾಸಪದಂ ಕೈಲಾಸಸ್ಥಾನಂ ಸತ್ ವಿದುಃ ಶಾಸ್ತ್ರಜ್ಞಾಃ ಜಾನೀಯುಃ । ತತ್ರಸ್ಥಂ ಶಂಭುಂ ಶಿವಂ ಸರ್ವಕಾರಣಕಾರಣಂ ಬ್ರಹ್ಮಾದಿಕಾರಣೇಶಾನಮಪಿ ಕಾರಣೀ ಭೂತಂಸಂತಂ ಭಾವಯೇತ್ ಸ್ವಾತ್ಮಾಭೇ ದೇನ ಧ್ಯಾಯೇತ್ ಇತ್ಯರ್ಥಃ ।

(ಪು-353-12/830, 831, 832 ಸಿ.ಶಿ. ಪ್ರಾ.ವಿ.ಸಂ.ಮೈಸೂರು - 1995.)

ಸೂತ್ರ ॥ ಬಳಿಕ ಆಧಾರಸ್ವಾಧಿಷ್ಠಾನದ ಪೃಥುವೀಜಲಸಂಘಟ್ಟದಿಂದಲಾದ ಪಂಕದಲ್ಲಿ ಮಣಿಪೂರಕರೂಪವಾದ ನಾಭಿಕಂದ ಹುಟ್ಟಿ ಆ ಕಂದದಿಂದೆ ಹುಟ್ಟಿದ ಅನಾಹತರೂಪವಾದ ಹೃದಯಕಮಲದ ದ್ವಾದಶಗಳಕಮಲದಲ್ಲಿ ದ್ವಾದಶಕಲಾಯುಕ್ತವಾದ ಸೂರ್ಯಮಂಡಲವಿಹುದು. ಆದರ ಮೇಲೆ ಷೋಡಶದಳದೊಡನೆ ಕೂಡಿ ವಿಶುದ್ಧಿಕಮಲದಲ್ಲಿ ಷೋಡಶಕಲೆಯುಳ್ಳ ಚಂದ್ರಮಂಡಲವಿಹುದು. ಆದಗ ಮೇಲೆ ದ್ವಿದಳವಾದಾಜ್ಞಾಕಮಲದಲ್ಲಿ ದ್ವಿಶಿರಸ್ಸು ದಶಕಲೆಗಳುಳ್ಳ ವಹ್ನಿಮಂಡಲವಿಹುದು. ಆದರ ಮೇಲೆ ಸಹಸ್ರದಳಕಮಲವಾದ ಬ್ರಹ್ಮರಂಧ್ರದಲ್ಲಿ ಈ ಅಷ್ಟತ್ರಿಂಶತ್ ಕಲೆಯೊಡನೆ ಕೂಡಿದ ಕುಂಡಲಿಮಂಡಲದ ಮೇಲೆ ಲಿಂಗಾಂಗ ಸಮರಸ ರೂಪವಾದ ಶಿವಯೋಗಸಮಾಧಿಯುಳ್ಳ ಪ್ರಾಣಲಿಂಗಿಗೆ ಶಿವಾನಂದವಲ್ಲದೆ ಮಾಯಾಜನ್ಯವಾದಸುಖವಿಲ್ಲವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ ॥

ಅಥ - ಆಧಾರಸ್ವಾಧಿಷ್ಠಾನಗತ ಪೃಥ್ವೀಜಲ ಸಂಘಟ್ಟನೇನ ಮಣಿಪೂರಕಾಖ್ಯನಾಭಿಕಂದ ಮುತ್ಪತ್ಯ, ತದದ್ಭುತಾನಾಹತಾಖ್ಯಹೃದಯ - ದ್ವಾದಶಕಮಲೇ ತಾಪಿನ್ಯಾದಿ ದ್ವಾದಶ ಕಲಾಯುಕ್ತ ಸೂರ್ಯಮಂಡಲಂ ಭಾತಿ । ತದುಪರಿಷೋಡಶದಲಯುಕ್ತ ವಿಶುದ್ಧ ಕಮಲೇ ಅಮೃತಾದಿಷೋಡಶ ಕಾಲಾಯುಕ್ತ ಚಂದ್ರಮಂಡಲಂ ವಿಭಾತಿ । ತದುಪರಿ -ದ್ವಿದಲಯುಕ್ತಾಜ್ಞಾಚಕ್ರೇ ಜ್ವಲಿನ್ಯಾದಿದಶ -ಕಲಾತ್ಮಕವಹ್ನಿ ಮಂಡಲಮ್ ಪ್ರಕಾಶತೇ। ತದುಪರಿ ಸಹಸ್ರದಲಾಲಂಕೃತಬ್ರಹ್ಮಚಕ್ರೇ ತದಷ್ಟತ್ರಿಂಶತ್ಕಲೋಪೇತ ಕುಂಡಲೀ ಮಂಡಲೋಪರಿಲಿಂಗಾಂಗಸಾಮರಸ್ಯ ಲಕ್ಷಣಶಿವಯೋಗಸಮಾಧಿಸಂಪನ್ನಸ್ಯ ಪ್ರಾಣಲಿಂಗಿನಃ ಶಿವಾನಂದವ್ಯತಿರೇಕೇಣ ಮಾಯಿಕಸುಖಾನುಭವೋ ನಾಸ್ತಿ - ಇತಿ ಸೂತ್ರದ್ವಯೇನಾಹ - ಇತ್ಯಾದಿ.

3. ಇಪ್ಪತ್ತನೆಯ ಪರಿಚ್ಛೇದದ ಜ್ಞಾನಶೂನ್ಯಸ್ಥಲದ ಅಂತ್ಯ ಶ್ಲೋಕಕ್ಕೆ ಸಂಬಂಧಿಸಿದ ವ್ಯಾಖ್ಯಾನ ಈ ರೀತಿ ಇದೆ:

ಸೂತ್ರ - ಬಳಿಕ 'ನೇತಿ ನೇತಿ', "ಅಸ್ಥೂಲಂ ಅನಣು, ಅಹ್ರಸ್ವದೀರ್ಘಪ್ಲುತಮ್" ಯೆಂಬ ಬೃಹದಾರಣ್ಯಕ ಶ್ರುತ್ಯರ್ಥನು, "ಅನಾಖ್ಯೇತು । ನಿರಾಲಂಬೇ ಹ್ಯಗ್ರಾಹ್ಯೇ ಮಾನವರ್ಜಿತೇ । ನಿಸ್ತವೇ ಯೋ ಜಿತೋ ಮುಕ್ತಃ ಇತಿಶಾಸ್ತ್ರಸ್ಯ ನಿಶ್ಚಯಃ ॥ -ಯೆಂಬ

ಅಥ - "ನೇತಿ ನೇತಿ", "ಅಸ್ಥೂಲಂ ಅನಣು ಅಹ್ರಸ್ವ ದೀರ್ಘಪ್ಲುತಮ್" - ಇತಿ ಬೃಹದಾರಣ್ಯಕ ಶ್ರುತ್ಯನುಸಾರೇಣ, "ಅನಾಖ್ಯೇ ತು ನಿರಾಲಂಬೇಹ್ಯಗ್ರಾಹ್ಯೇ ಮಾನವರ್ಜಿತೇ । ನಿಸ್ತವೇ ಯೋ ಜಿತೋ ಮುಕ್ತಃ ಇತಿ ಶಾಸ್ತ್ರಸ್ಯ ನಿಶ್ಚಯಃ - ಇತಿ

ನಿಃಶ್ವಾಸಕಾರಿಕಾ ತಂತ್ರಾರ್ಥವನು,

"ಪಶುಪಶುಪತಿಯೋಗೋ ದೃಗ್ಯುಗೈಕ್ಯಪ್ರ ಯೋಗೋ
ಗಗನಗಗನದೇಶಃ ಸಿಂಧುಸಿಂಧುಪ್ರದೇಶಃ ।
ಸಮಸಮರಸರೂಪೋ ಭಿನ್ನಭಿನ್ನ ಸ್ವರೂಪೋ
ನಿಶಿ ಸಮರಸಕಾಂತಾವಲ್ಲಭಾಶ್ಲೇಷಕಾಂತಃ" ॥

ಯೆಂಬ ತ್ರಯೀತಂತ್ರಯುಕ್ತಿಯುಕ್ತಾಭಿಯು-ಕ್ತೋಕ್ತಾರ್ಥವನು ಪ್ರಕಟಿಸುತ್ತ ಪರಮುಕ್ತನ ಲಕ್ಷಣವನು ಹೇಳಿ ಜ್ಞಾನಶೂನ್ಯಸ್ಥಲವನು ಸಮಾಪ್ತಿಯ ಮಾಡುತ್ತಿರ್ದಪಂ.

ಗ್ರಂಥ ॥

ಯಸ್ಯ ಕಾರ್ಯದಶಾ ನಾಸ್ತಿ ಕಾರಣತ್ವಮಥಾಪಿ ವಾ।
ಶೇಷತ್ವಂ ನೈವ ಶೇಷಿತ್ವಂ ಸಮುಕ್ತಃ ಪರ ಉಚ್ಯತೇ॥

ಪು. 488/20/70

ಟೀಕು ॥ ಯಸ್ಯ=ಸರ್ವವನೇತಿಗಳೆದು ತತ್ತ್ವಾತೀತನಾದ ಆವನಾನೊರ್ವಸ್ವಸ್ವರೂಪಸಂಪನ್ನನಿಗೆ, ಕಾರ್ಯದಶಾ=ಕಾರ್ಯಾವಸ್ಥೆಯು, ಅಥಾಪಿ ವಾ=ಅಹಗಲ್ಲವೆ?ಕಾರಣತ್ವಂ=ಕಾರಣವಹತನವು, ನ=ಇಲ್ಲ;ಯಸ್ಯ=ಪರಬ್ರಹ್ಮಪರಶಿವಪರಲಿಂಗಾದಿ ಪರ್ಯಾಯನಾಮೋಪಚಾರತೆಯುಳ್ಳ ಆವನಾನೊಬ್ಬ ಸ್ವಸ್ವರೂಪಸಂಪನ್ನನಿಗೆ, ಶೇಷತ್ವಂ=ಉಳುವೆಯಹತನವು, ಶೇಷಿತ್ವಂ=ಉಳುಮೆಯಿಲ್ಲದಿಹತನವು, ನ=ಇಲ್ಲ. ಸಃ=ನಿತ್ಯಪರಿಪೂರ್ಣಸಚ್ಚಿದಾನಂದಸ್ವರೂಪನಾದ ಆತನು, ಪರಮುಕ್ತ ಏವ=ಪರಮುಕ್ತನೆಂದು, ಉಚ್ಯತೇ=ಹೇಳಲುಪಡುತ್ತಿರ್ದಪನು.

ತಾತ್ಪರ್ಯ ॥ "ಅನೀಶಶ್ಚಾತ್ಮಾ ಬಧ್ಯತೇ ಭೋಕ್ತೃಭಾವಾತ್", "ಜ್ಞಾತ್ವಾ ದೇವಂ ಮುಚ್ಯತೇ ಸರ್ವ ಪಾಶೈಃ"ಯೆಂಬ ಶ್ವೇತಾಶ್ವತರಶ್ರುತಿಯಿಂದಲು,

ನಿಃಶ್ವಾಸಕಾರಿಕಾವಚನಾನುಸಾರೇಣ,

"ಪಶುಪಶುಯೋಗೋದೃಗ್ಯುಗೈಕ್ಯಪ್ರಯೋಗಃ
ಗಗನಗಗನದೇಶಃ ಸಿಂಧುಸಿಂಧುಪ್ರದೇಶಃ ।
ಸಮಸಮರಸರೂಪೋ ಭಿನ್ನಭಿನ್ನಸ್ವರೂಪಃ
ನಿಶಿ ಸಮರಸಕಾಂತಾವಲ್ಲಭಾಶ್ಲೇಷಕಾಂತಃ"॥

ಇತಿತ್ರಯೀತಂತ್ರಯುಕ್ತಿಯುಕ್ತಾಭಿಯುಕ್ತೋಕ್ತವಚನಾನುಸಾರೇಣ ಚ ಪರಮುಕ್ತ ಲಕ್ಷಣಂ ಉಕ್ತ್ವಾ ಜ್ಞಾನಶೂನ್ಯಸ್ಥಲಂ ಸಮಾಪಯತಿ-

ಶ್ಲೋಕ ॥

ಯಸ್ಯ ಕಾರ್ಯದಶಾ ನಾಸ್ತಿ ಕಾರಣತ್ವಮ ಥಾಪಿ ವಾ ।
ಶೇಷತ್ವಂ ನೈವ ಶೇಷಿತ್ವಂ ಸಮುಕ್ತಃ ಪರ ಉಚ್ಯತೇ

ಪು : (೬೮೭-೨೦/೧೪೬೧)

ಯಸ್ಯ ಸರ್ವಂ 'ನೇತಿ ನೇತಿ' ನಿವಾರ್ಯ ತತ್ತ್ವಾತೀತಸ್ಯ ಸ್ವಸ್ವರೂಪಸಂಪನ್ನಸ್ಯ ಕಾರ್ಯಾವಸ್ಥಾ ನಾಸ್ತಿ । ಅಥಾಪಿ ವಾ ತನ್ನ ಚೇತ್ ಕಾರಣತ್ವಂ ಚ ನಾಸ್ತಿ । ಯಸ್ಯ ಪರಬ್ರಹ್ಮಪರಶಿವ ಪರಲಿಂಗಾದಿಪರ್ಯಾ ಯನಾಮೋಚ್ಚಾರವತಃ ಸ್ವಸ್ವರೂಪಸಂಪ ನ್ನಸ್ಯ ಶೇಷತ್ವಂ ಅವಶೇಶತ್ವಂ ಶೇಷಿತ್ವಂ ಶೇಷವತ್ತ್ವಂ ಚ ನಾಸ್ತಿ । ಸಃ ನಿತ್ಯಪರಿಪೂರ್ಣಃ ಸಚ್ಚಿದಾನಂದಸ್ವರೂಪ ಪರಮುಕ್ತ ಏವೇತ್ಯುಚ್ಯತೇ ಇತ್ಯರ್ಥಃ ।

ಅಯಂ ಭಾವಃ -

"ಅನೀಶಶ್ಚಾತ್ಮಾ ಬಧ್ಯತೇ ಭೋಕ್ತೃ ಭಾವಾತ್"
- ಇತಿ,
"ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ।"
- ಇತಿ ಚ ಶ್ವೇತಾಶ್ವತರಶ್ರುತ್ಯಾ,

"ಪಾಶಬದ್ಧೋ ಭವೇಜ್ಜೀವಃ
ಪಾಶಮುಕ್ತಃ ಪರಃ ಶಿವಃ"ಯೆಂಬ
ವೀರಾಗಮ ವಾಕ್ಯದಿಂದಲು ದೇಶಿಕೋಪದೇಶ
ಸ್ವಾನುಭವಂಗಳಿಂದೆಯು ನಿಶ್ಚೈಸಲುಪಟ್ಟ ಮಾಯಾ
- ಮಲಬಿಂದುತಿರೋಭಾವ ಕರ್ಮಪಾಶಂಗಳಿಂದೆ
ಬಿಡಲುಪಟ್ಟ ಪರಶಿವ ಶಬ್ದವಾಚ್ಯವಾದ
ಸ್ವಸ್ವರೂಪಾಭಿವ್ಯಕ್ತಿಯೆ ಪರಮುಕ್ತಿಯೆಂಬುದರ್ಥ.
ಈ ಲಿಂಗತ್ರಯವನು ಶಿವಲಿಂಗೈಕ್ಯನ ಅಂಗತ್ರಯಕ್ಕೆ
ಕ್ರಮದಿಂದೆ ಸಂಬಂಧಿಸಿಕೊಂಬುದು.
ಇತಿ ಜ್ಞಾನಶೂನ್ಯಸ್ಥಲಮ್

"ಪಾಶಬದ್ಧೋ ಭವೇಜ್ಜೀವಃ
ಪಾಶಮುಕ್ತಃ ಪರಃ ಶಿವಃ । " - ಇತಿ
ವೀರಾಗಮ ವಚನೇನ ಚ, ದೇಶಿಕೋಪ
ದೇಶೇನ ಚ ಮಾಯಾಮಲಬಿಂದು
ತಿರೋಭಾವ ಕರ್ಮಪಾಶವಿಮುಕ್ತ
ಪರಶಿವಶಬ್ದ ವಾಚ್ಯ ಸ್ವಸ್ವರೂಪಾಭಿ
ವ್ಯಕ್ತಿರೇವ ಪರಮುಕ್ತಿಃ ಇತಿ ।
ಏತಲ್ಲಿಂಗತ್ರಯಂ ಶಿವಲಿಂಗೈಕ್ಯಸ್ಯ ಅಂಗತ್ರ
ಯಸ್ಯ ಕ್ರಮೇಣ ಸಂಯೋಜನೀಯಮ್।
ಇತಿ ಜ್ಞಾನಶೂನ್ಯಸ್ಥಲಮ್

ಮೇಲಿನ ಪ್ರಮುಖವಾದ ನಾಲ್ಕೂ ವ್ಯಾಖ್ಯಾನಗಳ ಸಿದ್ಧಾಂತಶಿಖಾಮಣಿಗಳಿಂದ ದೊರಕುವ ಮಾಹಿತಿಯಂತೆ ಅದರ ಕರ್ತೃ ಶ್ರೀ ಶಿವಯೋಗಿಗಳ ವಂಶವೃಕ್ಷವನ್ನು ಹೀಗೆ ರಚಿಸಬಹುದು.

(ಮೊದಲನೆಯ) ಶಿವಯೋಗಿ
ಈತನ ವಂಶದಲ್ಲಿ ಹುಟ್ಟಿದಾತ
|
ಮುದ್ದದೇವ
|
ಸಿದ್ಧನಾಥ
|
(ಎರಡನೆಯವ) ಶಿವಯೋಗಿ

ಶ್ರೀ ಸಿದ್ಧರಾಮೇಶ್ವರರು, ಆಜನ್ಮಬ್ರಹ್ಮಚಾರಿಗಳಾಗಿದ್ದರೂ ಆತನಿಗೆ ಬೊಮ್ಮಣ್ಣನೆಂಬ ಅಣ್ಣನಿದ್ದನೆಂಬ ಸಂಗತಿ ರಾಘವಾಂಕನ ಸಿದ್ಧರಾಮ ಚಾರಿತ್ರದಿಂದ ತಿಳಿದು ಬರುವುದರಿಂದ ಆತನ ವಂಶವೆಂಬುದು ಸತ್ಯಸಂಗತಿಯಾಗಿದೆ. ಎಷ್ಟೋ ವೇಳೆ ತಾತ-ಮುತ್ತಾತಂದಿರ ಹೆಸರನ್ನು ಇಟ್ಟುಕೊಳ್ಳುವುದು ಲೋಕರೂಢಿಯಾಗಿದೆ. ಇಲ್ಲಿಯೂ ಶಿವಯೋಗಿಗಳ ವಂಶದ ಮೂಲ ವ್ಯಕ್ತಿ ಶಿವಯೋಗಿ. ಆತನ ಮುಂದಿನ ತಲೆಮಾರಿನವನೇ ಮುದ್ದದೇವ; ಮುದ್ದದೇವನ ನಂದನನೇ ಸಿದ್ಧನಾಥ. ಈ ಸಿದ್ಧನಾಥನ ನಂದನನೇ ಎರಡನೆಯ 'ಶಿವಯೋಗಿ' ಈತನೇ 'ಸಿದ್ಧಾಂತ ಶಿಖಾಮಣಿ'ಯ ಸಂಗ್ರಹ ಕರ್ತೃ. ಈ ಎರಡನೆಯ ಶಿವಯೋಗಿಯು ಸೊನ್ನಲಿಗೆಯ ಶ್ರೀ ಸಿದ್ಧರಾಮೇಶ್ವರರ ಸಂಪ್ರದಾಯಕ್ಕೆ ಸೇರಿದವರೆಂದು 'ಸಿದ್ಧಾಂತಬೋಧಿನೀ' ವ್ಯಾಖ್ಯಾನಕಾರರಾದ ಶ್ರೀ ಸೋಸಲೆಯವರು ಅಭಿಪ್ರಾಯಪಡುತ್ತಾರೆ. ಶ್ರೀ ಮರಿತೋಂಟದಾರ್ಯರೂ ಇದನ್ನು ಅನುಮೋದಿಸಿದ್ದಾರೆ. ಇದೇ ಅಭಿಪ್ರಾಯವನ್ನು ಡಾ।। ಎಂ. ಚಿದಾನಂದಮೂರ್ತಿಯವರು ವ್ಯಕ್ತಪಡಿಸಿದ್ದಾರೆ. ಸಿದ್ಧನಾಥನಿಗೆ ಸಿದ್ಧರಾಮ ಎಂಬ ಪರ್ಯಾಯ ನಾಮವಿರುವುದೆಂದೂ ತಿಳಿದು ಬರುತ್ತದೆ. ಸಿದ್ಧರಾಮಚಾರಿತ್ರದಲ್ಲಿ

ಸಿದ್ಧರಾಮನನ್ನು ಸಿದ್ಧ, ಸಿದ್ಧಪತಿ, ಶಿವಯೋಗಿಸಿದ್ಧ ಸಿದ್ಧರಾಮನಾಥಾ ಇತ್ಯಾದಿಯಾಗಿ ಉಲ್ಲೇಖಗಳಿವೆ. ಸಿದ್ಧರಾಮೇಶ್ವರರ ತ್ರಿಪದಿಗಳ ಅಂಕಿತ 'ಯೋಗಿನಾಥಾ' ಎಂಬುದು. ಈ ನಾಮಸದೃಶ್ಯದಿಂದ ಶಿವಯೋಗಿ ಸಿದ್ಧರಾಮನಿಗೆ 'ನಾಥಾ' ಎಂಬ ಪದ 'ಸಿದ್ಧ'ನಿಗೆ ಸೇರಿ 'ಸಿದ್ಧನಾಥಾ' ಎಂಬ ಹೆಸರಾಗಿರಬಹುದು.

ಮೇಲಿನ ಮೂರೂ ವ್ಯಾಖ್ಯಾನ ಗ್ರಂಥಗಳು ಹಾಗೂ ಸೋಸಲೆಯವರ ವ್ಯಾಖ್ಯಾನವಿರುವ ಒಂದು ಹಸ್ತಪ್ರತಿ ಇವುಗಳಿಂದ ತಿಳಿದು ಬರುವ ಅಂಶವೆಂದರೆ ಸಿದ್ಧಾಂತಶಿಖಾಮಣಿಯ ಸಂಗ್ರಹಕರ್ತರು ವಚನಕಾರ ಸೊನ್ನಲಿಗೆಯ ಸಿದ್ಧರಾಮೇಶ್ವರನ ವಂಶದವರೆಂಬುದು ನಿಶ್ಚಯವೆಂಬುದಾಗಿ ತಿಳಿದುಬರುತ್ತದೆ. ಸಿದ್ಧವಾಮೇಶ್ವರನ (ಕ್ರಿ.ಶ. ೧೧೬೦) ಇವರು ರೇವಣಸಿದ್ಧೇಶ್ವರರ ದೃಷ್ಟಿಗರ್ಭದಿಂದ ಜನಿಸಿದವರೆಂದು ತಿಳಿದುಬರುತ್ತದೆ. ಆದ್ದರಿಂದ ಶಿವಯೋಗಿಗಳು ವಚನಕಾರರಿಗಿಂತ ಈಚಿನವರು ಎಂಬುದರಲ್ಲಿ ಸಂಶಯವಿಲ್ಲ.

**2. ಕಾಲ ವಿಚಾರ :**

ಶ್ರೀ ಮರಿತೋಂಟದಾರ್ಯರ 'ತತ್ತ್ವಪ್ರದೀಪಿಕಾ' ವ್ಯಾಖ್ಯಾನವನ್ನೊಳಗೊಂಡ ಸಿದ್ಧಾಂತಶಿಖಾಮಣಿಯು ಆಸ್ಥಾನ ಮಹಾ ವಿದ್ವಾನ್ ಕೈ॥ ಪಿ.ಆರ್. ಕರಿಬಸವಶಾಸ್ತ್ರಿಗಳಿಂದ ೧೮೮೫ರಲ್ಲಿ ಪ್ರಕಟವಾದಂದಿನಿಂದ ಇಂದಿನವರೆಗೆ ಹಲವಾರು ವಿದ್ವಾಂಸರು ಸಿದ್ಧಾಂತಶಿಖಾಮಣಿಯ ಕರ್ತೃ-ಕಾಲಾದಿಗಳ ಬಗ್ಗೆ ಕುರಿತು ತಮಗೆ ಸರಿದೋರಿದಂತೆ ಚರ್ಚಿಸಿ ನಿರ್ಣಯಿಸಿದ್ದಾರೆ. ಕೆಲವು ಪ್ರಮುಖ ವಿದ್ವಾಂಸರು ನಿರ್ಣಯಿಸಿರುವ ಕಾಲವನ್ನು ಹೀಗೆ ವರ್ಗೀಕರಿಸಬಹುದು :

**1. ಮೊದಲನೆಯ ವರ್ಗ** : ಸಿ.ಶಿಖಾಮಣಿಯು ೨೦೦೦ ವರ್ಷಗಳಿಂಗಿಂತಲೂ ಪ್ರಾಚೀನವಾದುದು. ಅವರು ಕೊಡುವ ಕಾರಣ : ೧ - ಸಿ.ಶಿಯಲ್ಲಿ ಕುರಿತ ಒಂದು ಶ್ಲೋಕ ಅದು ಹೀಗಿದೆ :

ಯೇನ ರಕ್ಷಾವತೀ ಜಾತಾ ಶಿವಭಕ್ತಿಸ್ಸನಾತನೀ ।
ಬೌದ್ಧಾದಿಪ್ರತಿಸಿದ್ಧಾಂತಮಹಾಧ್ವಾಂತಾಂಶುಮಾಲಿನಾ ॥ ೧/೨೩

ಹಾಗೂ ೨೧ನೆಯ ಪರಿಚ್ಛೇದದಲ್ಲಿ ಬಂದಿರುವ ರೇಣುಕ ಗಣೇಶ್ವರ ಮತ್ತು ವಿಭೀಷಣರ ಪ್ರಸಂಗ.

**ಪ್ರತಿಪಾದಿಸಿದವರು**

1. ನಾಗನೂರು ಬೃಹನ್ಮಠಾಧ್ಯಕ್ಷರಾದ ಕೈ॥ ಶ್ರೀ ಕಾಶೀನಾಥ ಶಾಸ್ತ್ರಿಗಳು
2. ಶ್ರೀ ಎಂ.ಎಲ್. ನಾಗಣ್ಣನವರು, ಆಧ್ಯಾತ್ಮ ವಿಚಾರ ಮಂದಿರ, ಮೈಸೂರು-೧೯೫೯.

**ಎರಡನೆಯ ವರ್ಗ** : ಕ್ರಿ.ಶ. ೮೦೦ಕ್ಕೂ ಹಿಂದಿನದು.

1. ಪರಮಪೂಜ್ಯ ಡಾ॥ ಜ.ಚ.ನಿ.ಯವರು

---

ನೋಡಿ - ವಚನಶೋಧ -2 ಪ್ರಿಯದರ್ಶಿನಿ ಪ್ರಕಾಶನ, 138, 7ನೇ 'ಸಿ' ಮುಖ್ಯರಸ್ತೆ, ವಿಜಯನಗರ 2ನೇ ಹಂತ, ಬೆಂಗಳೂರು-40, ಪ್ರಸಕ್ತ ಸಿ.ಶಿ. ಪುಟ : 9 ಶ್ಲೋಕ - ಸಂ 17

ಮೂರನೆಯ ವರ್ಗ : ಬಸವಾದಿ ಪ್ರಮಥರಿಗಿಂತ ಪ್ರಾಚೀನವಾದದ್ದು
ಇವರು ಕೊಡುವ ಕಾರಣಗಳು : ಸಿ.ಶಿಯಲ್ಲಿನ

ಪ್ರಸಾದಾದೇವ ಸಾ ಭಕ್ತಿಃ ಪ್ರಸಾದೋ ಭಕ್ತಿಸಂಭವಃ ।
ಯಥೈವಾಂಕುರತೋ ಬೀಜಂ ಬಿಜತೋ ವಾ ಯಥಾಂಕುರಃ ॥

ಈ ಶ್ಲೋಕ ಬಸವಣ್ಣನವರ
"ನೀನೊಲಿಯಿತ್ತೇ ಪುಣ್ಯ, ನೀನೊಲ್ಲದುದೇ ಪಾಪಕಂಡಯ್ಯಾ
ಸಕಲ ಜಗದೊಳಗೆ ಅನುಶ್ರುತನಾಗಿಪ್ಪೆನಯ್ಯಾ
ನೀನೊಲಿದವನೇ ನಿಮ್ಮನರಿವನು
ಪ್ರಸಾದಾತ್ ದೇವತಾಭಕ್ತಿಃ ಪ್ರಸಾದೋ ಭಕ್ತಿಸಂಭವಃ ।
ಯಥೈವಾಂಕುರತೋ ಬೀಜಂ ಬೀಜತೋ ವಾಯಥಾಂಕುರಃ ॥
ನೀನೊಲಿದವನೇ ಧನ್ಯ, ಜಗಕ್ಕೆ ಪಾವನ
ಕೂಡಲಸಂಗಮದೇವಾ"

ಪ್ರತಿಪಾದಿಸಿದವರು :
1. ಪರಮಪೂಜ್ಯ ಶ್ರೀ ಕಾಶಿ ವಿಶ್ವಾರಾಧ್ಯ ಜ್ಞಾನ ಸಿಂಹಾಸನಾಧೀಶ್ವರ ಶ್ರೀ 1008 ಜಗದ್ಗುರು ಶ್ರೀ ಶ್ರೀ ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮಿಗಳು, ವಾರಣಾಸಿ.
2. ಡಾ।। ಆರ್.ಸಿ. ಹಿರೇಮಠ ಮುಂತಾದವರು (ಶ್ರೀ ಕರಭಾಷ್ಯದ ಕಾಲದ ಆಧಾರದ ಮೇಲೆ ಕ್ರಿ.ಶ. 1115-1130)
3. ಡಾ. ಎಂ. ಶಿವಕುಮಾರಸ್ವಾಮಿಯವರು

ನಾಲ್ಕನೆಯ ವರ್ಗ : ಶ್ರೀಕರಭಾಷ್ಯಕರ್ತೃ ಮಹಾನುಭಾವ ಶ್ರೀಪತಿ ಪಂಡಿತರು (ಕ್ರಿ.ಶ 1170) ಹಾಗೂ ಶ್ರೀಕಂಠಭಾಷ್ಯಕತೃ ಶ್ರೀಕಂಠಶಿವಾಚಾರ್ಯ (ಕ್ರಿ. 1270) ಇವರಿಗಿಂತ ಪ್ರಾಚೀನವಾದದ್ದು. ಇವರು ಕೊಡುವ ಸಿ.ಶಿಯಲ್ಲಿನ ಶ್ಲೋಕ ಹೀಗಿದೆ :

ಪ್ರಸನ್ನೇ ಸತಿ ಮುಕ್ತೋऽಭೂನ್ಮುಕ್ತಃ ಶಿವಸಮೋಭವೇತ್ ।
ಅಲ್ಪಭಕ್ತ್ಯಾऽಪಿ ಯೋ ಮರ್ತ್ಯಸ್ತಸ್ಯ ಜನ್ಮತ್ರಯಾತ್ಪರಮ್ ॥ 9/13-14

ಇಲ್ಲಿ ಬಂದಿರುವ 'ಮುಕ್ತಃ ಶಿವಸಮೋಭವೇತ್ ಎಂಬ ಪಾದ ಭಾಗವು ಶ್ರೀಕಂಠ ಭಾಷ್ಯದಲ್ಲಿ 'ಅವಿಭಾಗೇನ ದೃಷ್ಟತ್ವಾತ್' (ಬ್ರ.ಸೂ. 4-4-4) ಎಂಬ ಸೂತ್ರವನ್ನು ವಿವರಿಸುವಲ್ಲಿ ಬಂದಿರುವುದರಿಂದ ಈತನಿಗಿಂತ ಪೂರ್ವದ್ದು.

ಪ್ರತಿಪಾದಿಸಿದವರು :
1. ಪರಮಪೂಜ್ಯ ಮುರುಘರಾಜೇಂದ್ರ ಮಹಾಸ್ವಾಮಿಗಳವರು
2. ಕೈ।। ಕಾಶೀನಾಥಶಾಸ್ತ್ರಿಗಳು, ನಾಗನೂರು ಬೃಹನ್ಮಠಾಧ್ಯಕ್ಷರು
3. ಪ್ರಸಕ್ತ ಕಾಶೀ ಪರಮಪೂಜ್ಯ ಮಹಾಸ್ವಾಮಿಗಳವರು

**ಐದನೆಯ ವರ್ಗ** : ಕ್ರಿ.ಶ. 13-14ನೆಯ ಶತಮಾನ :

ಇವರು ಕೊಡುವ ಕಾರಣ :

1. ಎಲ್ಲಾ ವ್ಯಾಖ್ಯಾನಕಾರರ ಅವತರಣಿಕೆಯಲ್ಲಿ ಉಕ್ತವಾಗಿರುವ "ರೇವಣಾಸಿದ್ಧೇಶ್ವರನ ದೃಷ್ಟಿಗರ್ಭಸಂಭವನಾದ ಸಿದ್ಧರಾಮೇಶ್ವರನ ಸಂಪ್ರದಾಯ ಪ್ರಸಿದ್ಧನಾದ ಸಕಲ ನಿಗಮಾಗಮ ಪಾರಂಗತನಾದ ಶಿವಯೋಗೀಶ್ವರನೆಂಬಾರ್ಚರ್ಯನು...."

2. ರೇವಣಸಿದ್ಧ (ಕ್ರಿ.ಶ. 1120)ರಿಗಿಂತ, ಸಿದ್ಧರಾಮನಿಗಿಂತ (ಕ್ರಿ.ಶ. 1160) ಈಚಿನ ಕೃತಿಯೆಂಬುದು.

3: ವಚನಕಾರರು ಕನ್ನಡ ಪದಗಳಿಗೆ ಸಂಸ್ಕೃತದ ಪಾರಿಭಾಷಿಕ ಅರ್ಥಗಳನ್ನು ತುಂಬಿ, ಆ ಅರ್ಥಗಳಲ್ಲಿ ಬಳಸಿ ಕನ್ನಡವನ್ನು ಬಳಸಿದ್ದು ಹಾಗೆ ಬಳಸಿದ ಪದಗಳಲ್ಲಿ 'ಮಾಟ' ಎಂಬ ಶಬ್ದ. ಇದು 'ಕ್ರಿಯೆ, ದಾನ' - ಎಂಬ ಅರ್ಥಗಳಲ್ಲಿ ಬಳಕೆಯಾಗಿದೆ. 'ಮಾಡು' ಎಂಬುದರ ಭಾವ 'ಮಾಟ'. ಶಿವಾಚಾರ್ಯರು 'ಉಪಾಧಿಮಾಟಸ್ಥಲ', 'ನಿರುಪಾಧಿಮಾಟಸ್ಥಲ', 'ಸಹಜಮಾಟ ಸ್ಥಲ' - ಎಂಬುದಾಗಿ ಬಳಸಿಕೊಳ್ಳಲು ಕಾರಣ ವಚನಕಾರರಿಂದ ಪ್ರಭಾವಿತವಾಗಿರುವುದು.

ಪ್ರತಿಪಾದಿಸಿದವರು : ಡಾ॥ ಶ್ರೀ ಎಂ. ಚಿದಾನಂದಮೂರ್ತಿಯವರು

**ಆರನೆಯ ವರ್ಗ** : ತಟಸ್ಥರು. ಇವರು - ಪ್ರಥಮಬಾರಿಗೆ ಮರಿತೋಂಟದಾರ್ಯರ ತತ್ತ್ವಪ್ರದೀಪಿಕಾ ವ್ಯಾಖ್ಯಾನವನ್ನು ಪರಿಷ್ಕರಿಸಿದ ಆಸ್ಥಾನ ಮಹಾ ವಿದ್ವಾನ್ ಕೈ॥ ಪಿ. ಆರ್. ಕರಿಬಸವಶಾಸ್ತ್ರಿಗಳು.

**ಏಳನೆಯ ವರ್ಗ** : ಹರಿಹರನ ರಗಳೆಯಲ್ಲಿ ಸಿ.ಶಿಯಲ್ಲಿ ಹೇಳಿದ 101 ಸ್ಥಲಗಳ ವಿಚಾರವಿಲ್ಲದಿರುವುದು ಹಾಗೂ ಸಾಸಲ ಚಿಕ್ಕಣಾರಾಧ್ಯರ ಪಂಚಬ್ರಹ್ಮೋದಯ ಭಾಷ್ಯವು ಸಿದ್ಧಾಂತಶಿಖಾಮಣಿಯನ್ನು ನೋಡಿ ಅದರ ಆಧಾರದ ಮೇಲೆ ರಚಿಸಿರುವುದು. ಇದರಲ್ಲಿ ರೇವಣಸಿದ್ಧರ ವಿಷಯವನ್ನು ಬರೆಯುವಾಗ ಸಿದ್ಧಾಂತಶಿಖಾಮಣಿ ಎಂದು ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಹರೀಶ್ವರನ ಕಾಲ ಕ್ರಿ.ಶ. 1220 ಮತ್ತು ಪಂಚಬ್ರಹ್ಮೋದಯ ಭಾಷ್ಯದ ಕಾಲ ಕ್ರಿ.ಶ. 1450 ಈ ಕಾಲಗಳ ಮಧ್ಯೆ ರಚಿತವಾದದ್ದು.

---

1. "ಮುಕ್ತಃ ಶಿವಸಮೋಭವೇತ್" ಈ ಪಾದಭಾಗವನ್ನೊಳಗೊಂಡ ಒಂದು ಶ್ಲೋಕವು

ಕೇನಚಿತ್‌ಸಾಧನೇನೈವ ಮುಕ್ತಃಶಿವಸಮೋಭವೇತ್ ।

ಇತ್ಯೇವಂ ಕೇಚಿದಿಚ್ಛಂತಿ ವಾದಿನೋ ಮುನಿಪುಂಗವಾಃ ॥

ವಿದ್ಯಾಪಾದ ಪುಟ ೧, ಶ್ಲೋಕ : ೭

ಸರ್ವಜ್ಞಾನೋತ್ತರಾಗಮಃ

General Editor K. Kunjunni Raje. The Adya Library and Research Centre, Chennai -1999

ಪ್ರತಿಪಾದಿಸಿದವರು :
ಮಹಾನುಭಾವಿ ಶ್ರೀ ಚನ್ನಮಲ್ಲಿಕಾರ್ಜುನರು.

ಎಂಟನೆಯ ವರ್ಗ : ಬಸವಾದಿ ಶರಣರಿಗಿಂತ ಈಚಿನ ಕಾಲ : ಸು. ಕ್ರಿ.ಶ ೧೪೫೦ ರಿಂದ ಕ್ರಿ.ಶ ೧೫೫೦. ಇವರು ಕೊಡುವ ಕಾರಣ : ವಚನ ಸಾಹಿತ್ಯ, ಮಹಾಲಿಂಗದೇವರ ಏಕೋತ್ತರಶತಸ್ಥಲ. ಮಹಾಲಿಂಗದೇವರು ತಮ್ಮ ಏಕೋತ್ತರಶತಸ್ಥಲದಲ್ಲಿ, ಉಪಾಧಿಮಾಟ, ನಿರುಪಾಧಿಮಾಟ, ಸಹಜಮಾಟ, ಕೊಂಡುದು ಪ್ರಸಾದ, ನಿಂದುದೋಗರ-ಎಂದೇ ಬಳಸಿದ್ದಾರೆ. ಕಕಚ : ಪು (೧೩). ಹಾಗೂ ಸಿ.ಶಿಯ ಎಲ್ಲ ವ್ಯಾಖ್ಯಾನ ಗ್ರಂಥಗಳಲ್ಲಿಯೂ ಉಪಾಧಿ ಮಾಟ, ನಿರುಪಾಧಿಮಾಟ, ಸಹಜಮಾಟ ಸ್ಥಲಗಳೆಂದೂ, ಕೊಂಡುದು ಪ್ರಸಾದಸ್ಥಲ, ನಿಂದುದೋಗರಸ್ಥಲ - ಎಂದೇ ಬಳಕೆಯಾಗಿದೆ. ಮತ್ತು ನೀಲಕಂಠ ಶಿವಾಚಾರ್ಯರ (ಕ್ರಿ.ಶ. ೧೪೦೦) ಕ್ರಿಯಾಸಾರ, ಜಕ್ಕಣಾರ್ಯನ ಏಕೋತ್ತರಶತಸ್ಥಲಿ (ಗಿರೀಂದ್ರನ ವ್ಯಾಖ್ಯಾನ), ವೀರಣಾರ್ಯನ ದಶಗ್ರಂಥಿ, ಗುಬ್ಬಿ ಮಲ್ಲಣ್ಣಗಳ ಗಣಭಾಷಿತ ರತ್ನಮಾಲೆ, ವಿರಕ್ತತೋಂಟದಾರ್ಯರ ಕೈವಲ್ಯಸಾರ-ಇವುಗಳಲ್ಲಿ ಪ್ರತಿಪಾದಿತವಾಗಿರುವ ನೂರೊಂದು ಸ್ಥಲಗಳನ್ನು ಕುರಿತು ವಿವೇಚಿಸಿರುವ ಗ್ರಂಥಗಳ ಆಧಾರದ ಮೇಲೆ -
ಪ್ರತಿಪಾದಿಸಿದವರು : ಪರಮಪೂಜ್ಯ ಡಾ|| ಶ್ರೀ ಇಮ್ಮಡಿ ಶಿವಬಸವಸ್ವಾಮಿಗಳು ಕುಂದೂರು ಮಠ, ಮೈಸೂರು. ಅವರು ಹೀಗೆ ಅಭಿಪ್ರಾಯಪಡುತ್ತಾರೆ;
"ಹೀಗೆ ಗ್ರಂಥಗಳ ಕಾಲದ ಆಧಾರದ ಮೇಲೆ ನಿರ್ಧರಿಸುವುದಾದರೆ 'ಕ್ರಿಯಾಸಾರ' ಹಾಗೂ 'ಏಕೋತ್ತರ ಶತಸ್ಥಲಿ'ಯ ನಂತರವೇ ಸಿ.ಶಿ.ಯ ರಚನೆಯಾಗಿದೆ ಎನ್ನಬಹುದು. ಜಕ್ಕಣನ "ಏಕೋತ್ತರಶತಸ್ಥಲಿ" (ಕ್ರಿ.ಶ. 1430) ಹಾಗೂ ವಿರಕ್ತ ತೋಂಟದಾರ್ಯನ "ಕೈವಲ್ಯಸಾರ" ಕ್ರಿ.ಶ. 1616ಗಳ ನಡುವೆ ರಚನೆಯಾದ ಗ್ರಂಥ ಸಿ.ಶಿ. ಎನ್ನಬಹುದು. ಇನ್ನು ಸಿ.ಶಿ. ಗೆ ಪ್ರಪ್ರಥಮವಾಗಿ ಟೀಕೆಯನ್ನು ಬರೆದ ಉಜ್ಜನೀಶನ ಕಾಲದ ಬಗೆಗೆ ಸ್ವಲ್ಪ ಚರ್ಚಿಸಬೇಕಾಗುತ್ತದೆ. ಈತನ ಕಾಲದ ಬಗೆಗೆ ಗೊಂದಲಗಳಿವೆ. ಆದರೆ ಈತನು ಮಗ್ಗೆಯ ಮಾಯಿದೇವರ (ಕ್ರಿ.ಶ. 1430) 'ವಿಶೇಷಾರ್ಥ ಪ್ರಕಾಶಿಕೆ'ಗೂ ಟೀಕೆಯನ್ನು ಬರೆದಿರುವುದರಿಂದ, ಈತನ ಕಾಲ ಕ್ರಿ.ಶ. ಸು. 1530 ಎಂದು ನಿರ್ಧರಿಸಬಹುದು. ಕವಿಚರಿತೆಕಾರರು ಸಹ ಉಜ್ಜನೀಶನ ಕಾಲ ಕ್ರಿ.ಶ.ಸು. 1550 ಎಂದಿದ್ದಾರೆ. ಈ ಕಾರಣಗಳಿಂದ ಕ್ರಿ.ಶ. 1450 ರಿಂದ 1500 ರ ಮಧ್ಯಭಾಗದಲ್ಲಿ ಸಿದ್ಧಾಂತಶಿಖಾಮಣಿಯ ರಚನೆಯಾಗಿದೆ ಎನ್ನಬಹುದು."
(ಸಿದ್ಧಾಂತಶಿಖಾಮಣಿ ಹಾಗೂ ಶ್ರೀಕರಭಾಷ್ಯ : ನಿಜದ ನಿಲವು : ಪುಟ : 51 ಪೂಜ್ಯ ಇಮ್ಮಡಿ ಶಿವಬಸವ ಸ್ವಾಮಿಗಳು)

ಈ ಮೇಲಿನ ಪೂಜ್ಯ ಮಹಾಸ್ವಾಮಿಗಳವರ ಅಭಿಪ್ರಾಯವನ್ನು ಸ್ವಲ್ಪಮಟ್ಟಿಗೆ ಹೀಗೆ ಬದಲಿಸಬಹುದು.

ಪ್ರಪ್ರಥಮವಾಗಿ ಸಿದ್ಧಾಂತಶಿಖಾಮಣಿಗೆ ವ್ಯಾಖ್ಯಾನ ಮಾಡಿದ ಉಜ್ಜನೀಶನ ಕ್ರಿ.ಶ. 1550ರ ಕಾಲವನ್ನು ಶ್ರೀಮಾನ್ ಹೆಚ್. ದೇವೀರಪ್ಪನವರು ಪರಿಷ್ಕರಿಸಿ ಕ್ರಿ.ಶ. 1460 ಎಂದು ತಿಳಿಯಬಹುದಾಗಿದೆಯೆಂದು ಉಜ್ಜನೀಶನ ವ್ಯಾಖ್ಯಾನದ ಸಿದ್ಧಾಂತಶಿಖಾಮಣಿಯನ್ನು

ಪರಿಷ್ಕರಿಸಿದ ಶ್ರೀ ಜಿ.ಜಿ. ಮಂಜುನಾಥನ್‌ರವರು ಅಭಿಪ್ರಾಯಪಡುತ್ತಾರೆ. (ಅನುಬಂಧ - ಪುಟ XI - ಅಜ್ಞಾತ ವಿರಚಿತ ಸಿದ್ಧಾಂತಶಿಖಾಮಣಿ ವ್ಯಾಖ್ಯೆ, ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು-2000) ಆದ್ದರಿಂದ ಜಕ್ಕಣಾರ್ಯನ ಏಕೋತ್ತರಶತಸ್ಥಲಿ ಕ್ರಿ.ಶ. 1430 ಹಾಗೂ ಉಜ್ಜನೀಶನ ಸಿದ್ಧಾಂತಶಿಖಾಮಣಿ ವ್ಯಾಖ್ಯಾನದ ನಡುವಿನ ಕ್ರಿ.ಶ. 1460ರ ಅವಧಿಯಲ್ಲಿ ಶಿವಯೋಗಿ ಶಿವಾಚಾರ್ಯರು ಸಿದ್ಧಾಂತ ಶಿಖಾಮಣಿಯನ್ನು ರಚಿಸಿದ್ದಾರೆಂಬುದರಲ್ಲಿ ಸಂದೇಹವಿಲ್ಲ.

ಗ್ರಂಥ ಕರ್ತೃಗಳಾದ ಶ್ರೀ ಶಿವಯೋಗಿಗಳು "ಈ ಸಿ.ಶಿಯು ಒಂದು ಸಂಗ್ರಹ ಕೃತಿ ಎಂದೂ ಸಮಸ್ತ ಆಗಮಗಳನ್ನು ಪುರಾಣಗಳನ್ನು ನೋಡಿ ವೇದಮಾರ್ಗಕ್ಕೆ ವಿರೋಧವಿಲ್ಲದಂತೆ ಅವುಗಳಿಂದ ಸಂಕಲಿಸಿ ಪಿಂಡಾದಿಜ್ಞಾನಶೂನ್ಯಾಂತವಾದ ನೂರೊಂದು ಸ್ಥಲಗಳನ್ನು ಪ್ರತಿಪಾದಿಸುವ ಸಿದ್ಧಾಂತಶಿಖಾಮಣಿಯನ್ನು ಲೋಕಾನುಗ್ರಹಾರ್ಥವಾಗಿ ರಚಿಸಿದ್ದೇನೆಂದು ಪೀಠಿಕಾ ಭಾಗದಲ್ಲಿ ನಿರೂಪಿಸಿದ್ದಾರೆ. ಹೀಗಿದ್ದರೂ ಸಿ.ಶಿಯ ಎಲ್ಲ ಶ್ಲೋಕಗಳಿಗೂ ಶಿವಯೋಗಿಗಳೇ ಕರ್ತೃಗಳೆಂದು ಹೇಳ ಹೊರಟು ಕರ್ತೃ ಕಾಲಾದಿಗಳನ್ನು ಕುರಿತ ಇಂತಹ ಗೊಂದಲದ ಹೇಳಿಕೆಗಳು ಸರ್ವಥಾ ಉಚಿತವಲ್ಲ."

ಸಂಗ್ರಹ ಕರ್ತೃ ಶಿವಯೋಗಿಯ ವಂಶ ಹಾಗೂ ಕಾಲಾದಿಗಳು ಎಷ್ಟೇ ಗೊಂದಲ ಕ್ಕೊಳಗಾಗಿದ್ದರೂ ಸಿದ್ಧಾಂತಶಿಖಾಮಣಿಯ ಬಗ್ಗೆ ಯಾವ ಗೊಂದಲಗಳೂ ಇರಲಾರವು. ಪೂಜ್ಯಶ್ರೀ ಇಮ್ಮಡಿ ಶಿವಬಸವಸ್ವಾಮಿಗಳವರ "ಸಿ.ಶಿ. ವೀರಶೈವ ದಾರ್ಶನಿಕ ಸಾಹಿತ್ಯದ ಪ್ರಮುಖ ಗ್ರಂಥಗಳಲ್ಲೊಂದು ಎನ್ನುವುದರಲ್ಲಿ ಯಾವುದೇ ಅನುಮಾನವಿಲ್ಲ. ಇದು ಶ್ರೀ ಶಿವಯೋಗಿಯ ಸ್ವಂತರಚನೆಯಲ್ಲದಿದ್ದರೂ ಪುರಾಣ, ಶಿವಾಗಮಗಳಲ್ಲಿರುವ ವೀರಶೈವ ಪರವಾದ ಶ್ಲೋಕಗಳನ್ನು ಆರಿಸಿ ಅದನ್ನು ಏಕೋತ್ತರ ಶತಸ್ಥಲಗಳಲ್ಲಿ ಸಮಾವೇಶಗೊಳಿಸಿರುವ ರೀತಿಯನ್ನು ಯಾರಾದರೂ ಮೆಚ್ಚಲೇಬೇಕು. ಆದರೆ, ಅವರು ಅವುಗಳ ಮೂಲವನ್ನು ಹೆಸರಿಸುವ ಔದಾರ್ಯವನ್ನು ಪ್ರಕಟಿಸಿಲ್ಲ. ಇಂತಾದರೂ ಸಿ.ಶಿ. ವೀರಶೈವ ಸಿದ್ಧಾಂತವನ್ನು ಕ್ರಬದ್ಧವಾಗಿ ನಿರೂಪಿಸುವ ಸಂಸ್ಕೃತದ ಶ್ರೇಷ್ಠ ಕೃತಿಗಳಲ್ಲೊಂದು. ಇಲ್ಲಿ ವಿವಿಧ ವಿಷಯಗಳಿಗನುಗುಣವಾಗಿ ಒಂದು ಸಿದ್ಧಾಂತವನ್ನು ಮಂಡಿಸಲು ಅನೇಕ ಕೃತಿಗಳಿಂದ ಶ್ಲೋಕಗಳನ್ನು ಆರಿಸಿಕೊಂಡಿದ್ದರೂ ಅದನ್ನು ಪೂರ್ವಾಪರ ವಿರೋಧವಿಲ್ಲದಂತೆ, ಓರ್ವ ವ್ಯಕ್ತಿಯಿಂದ ರಚಿತವಾದ ಸ್ವತಂತ್ರಗ್ರಂಥವೋ ಎಂಬ ಭ್ರಮೆಯುಂಟಾಗುವಂತೆ ಮಾಡುವುದು ಒಂದು ಅಸಾಧಾರಣವಾದ ಕಾರ್ಯ." ಈ ಹೇಳಿಕೆಯು ಸರ್ವಥಾ ಮಾನ್ಯವಾದದ್ದು.

**ಇದುವರೆಗೆ ಪ್ರಕಟವಾಗಿರುವ ಶಿವಯೋಗಿ ಶಿವಾಚಾರ್ಯ ವಿರಚಿತ ಸಿದ್ಧಾಂತಶಿಖಾಮಣಿಯ ಪ್ರಮುಖ ಆವೃತ್ತಿಗಳು ಹಾಗೂ ವ್ಯಾಖ್ಯಾನ ಗ್ರಂಥಗಳು :**

1. ಸಿದ್ಧಾಂತಶಿಖಾಮಣಿ : ಉಜ್ಜನೀಶ ವಿರಚಿತ 'ಸಿದ್ಧಾಂತಶಿಖಾಮಣಿ'. ವ್ಯಾಖ್ಯಾನಕ್ಕೆ ಹೆಸರಿಲ್ಲ. ಈತನ ಕಾಲ ಕ್ರಿ.ಶ. ಸು. 1460 ಆರಂಭದ ನಾಲ್ಕು ಪರಿಚ್ಛೇದಗಳು ಹಾಗೂ ಇಪ್ಪತ್ತೊಂದನೆಯ ಪರಿಚ್ಛೇದವಿಲ್ಲ. ಪಂಚಮಪರಿಚ್ಛೇದದಿಂದ ಕನ್ನಡ ವ್ಯಾಖ್ಯಾನ ಪ್ರಾರಂಭಗೊಂಡು ಇಪ್ಪತ್ತನೆಯ ಪರಿಚ್ಛೇದಕ್ಕೆ ಮುಕ್ತಾಯವಾಗುತ್ತದೆ.

2. ಸಿದ್ಧಾಂತಶಿಖಾಮಣಿ : ಅಜ್ಞಾತ ವಿರಚಿತ ಸಿದ್ಧಾಂತಶಿಖಾಮಣಿ ವ್ಯಾಖ್ಯೆ. ಇದರಲ್ಲಿಯೂ ಆರಂಭದ ನಾಲ್ಕು ಪರಿಚ್ಛೇದಗಳು ಹಾಗೂ ಇಪ್ಪತ್ತೊಂದನೆಯ ಪರಿಚ್ಛೇದವೂ ಇಲ್ಲ. 15 ರಿಂದ 20 ಪರಿಚ್ಛೇದಗಳಿಗೆ ಕನ್ನಡ ವ್ಯಾಖ್ಯಾನವಿದೆ. ಈ ಎರಡೂ ಗ್ರಂಥಗಳ ಪರಿಷ್ಕರಣಕಾರರು : ಜಿ.ಜಿ. ಮಂಜುನಾಥನ್ ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-18.

3. ಸಿದ್ಧಾಂತಶಿಖಾಮಣಿ : ಶ್ರೀ ಸೋಸಲೆ ರೇವಣಾರಾಧ್ಯ ವಿರಚಿತ 'ಸಿದ್ಧಾಂತಬೋಧಿನೀ ವ್ಯಾಖ್ಯಾ' ಇವರ ಕಾಲ ಕ್ರಿ.ಶ. 1623. ಪ್ರಥಮ ಪರಿಚ್ಛೇದದಿಂದ ಪ್ರಾರಂಭಗೊಂಡು 21 ಪರಿಚ್ಛೇದಗಳಿಗೂ ಕನ್ನಡದಲ್ಲಿ ವ್ಯಾಖ್ಯಾನವನ್ನು ಬರೆಯಲಾಗಿದೆ. ದೊರಕಿರುವ ಕನ್ನಡ ವ್ಯಾಖ್ಯಾನ ಗ್ರಂಥಗಳಲ್ಲಿ ಇಪ್ಪತ್ತೊಂದು ಪರಿಚ್ಛೇದಗಳಿಗೂ ವ್ಯಾಖ್ಯಾನವಿರುವುದು ಇದೇ ಪ್ರಪ್ರಥಮವಾದದ್ದು.

4. ಸಿದ್ಧಾಂತಶಿಖಾಮಣಿ : ಶ್ರೀ ಮರಿತೋಂಟದಾರ್ಯರಿಂದ ಸಂಸ್ಕೃತದಲ್ಲಿ ರಚಿತವಾದ 'ತತ್ತ್ವ ಪ್ರದೀಪಿಕಾ' ವ್ಯಾಖ್ಯಾನ. ಇವರ ಕಾಲ ಕ್ರಿ.ಶ. 1740. ಇಪ್ಪತ್ತೊಂದು ಪರಿಚ್ಛೇದಗಳಿಗೂ ವ್ಯಾಖ್ಯಾನವಿದೆ. ಈ ಗ್ರಂಥವು ಪ್ರೊ. ಎಚ್.ಪಿ. ಮಲ್ಲೇದೇವರ ಸಂಪಾದಕತ್ವದಲ್ಲಿ ಸಂಪಾದಿತವಾಗಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚ್ಯವಿದ್ಯಾ ಸಂಶೋಧನಾಲಯದಿಂದ 1995ರಲ್ಲಿ ಪ್ರಕಾಶನಗೊಂಡಿದೆ.

5. ಸಿದ್ಧಾಂತಶಿಖಾಮಣಿ : ಶ್ರೀ ಮರಿತೋಂಟದಾರ್ಯರ ವ್ಯಾಖ್ಯಾನದೊಂದಿಗೆ ಆಸ್ಥಾನ ಮಹಾ ವಿದ್ವಾನ್ ಪಂಡಿತ ಕೈ|| ಪಿ.ಆರ್. ಕರಿಬಸವ ಶಾಸ್ತ್ರಿಗಳು ಕ್ರಿ.ಶ 1885ರಲ್ಲಿ ಪರಿಷ್ಕರಿಸಿ ತೆಲುಗು ಲಿಪಿಯಲ್ಲಿ ಮುದ್ರಿಸಿದ್ದಾರೆ. ಇದರ ಪ್ರಕಾಶಕರು ಶ್ರೀ ಯಜಮಾನ್ ವೀರಸಂಗಪ್ಪನವರು, ಮೈಸೂರು.

6. ಸಿದ್ಧಾಂತಶಿಖಾಮಣಿ : ಮೂಲ ಸಂಸ್ಕೃತ ಮತ್ತು ಮರಾಠಿ ಟೀಕೆಯೊಂದಿಗೆ ಸೊಲ್ಲಾಪುರದ ರಾವಸಾಹೇಬ ಮಲ್ಲಪ್ಪಾ ಬಸಪ್ಪಾ ವಾರದರವರ ವೀರಶೈವ ಲಿಂಗಿ ಬ್ರಾಹ್ಮಣ ಗ್ರಂಥಮಾಲೆಯಲ್ಲಿ ಪ್ರಕಟಿಸಲಾಗಿದೆ. ಸಂಪಾದಕರು ವೇದಮೂರ್ತಿ ಮಣ್ಣೂರ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳವರು, ಇಸವಿ 1905.

7. ಸಿದ್ಧಾಂತಶಿಖಾಮಣಿ : ಶ್ರೀ ಮರಿತೋಂಟದಾರ್ಯರ "ತತ್ತ್ವಪ್ರದಿಪಿಕಾ" ವ್ಯಾಖ್ಯಾನವನ್ನು ಭಾಗ 1959ರಲ್ಲಿ 1; ಭಾಗ 2-1961 ರಲ್ಲಿ ಮೈಸೂರಿನ "ಆತ್ಮವಿಚಾರ" ಪತ್ರಿಕೆಯ ಸಂಪಾದಕರಾದ ಶ್ರೀ

ಎಂ.ಎಲ್. ನಾಗಣ್ಣನವರು ಕನ್ನಡಕ್ಕೆ ಅನುವಾದ ಮಾಡಿ ಎರಡು ಸಂಪುಟಗಳಲ್ಲಿ ಮುದ್ರಣ ಮಾಡಿದ್ದಾರೆ.

8. ಸಿದ್ಧಾಂತಶಿಖಾಮಣಿ : ನಾಗನೂರು ಬೃಹನ್ಮಠಾಧ್ಯಕ್ಷರಾದ ಪಂಡಿತ ಶ್ರೀ ಕಾಶೀನಾಥ ಶಾಸ್ತ್ರಿಗಳವರಿಂದ ವಿರಚಿತವಾದ 'ಭಾವಪ್ರಕಾಶ' ವ್ಯಾಖ್ಯಾನದಿಂದ ಅಲಂಕೃತವಾದುದು. ಇದರ ಮುದ್ರಕರು ಮತ್ತು ಪ್ರಕಾಶಕರು ನಾಗನೂರು ಬೃಹನ್ಮಠಾಧ್ಯಕ್ಷ ಶ್ರೀ ಬಿ.ಎಂ. ಸಿದ್ಧೇಶ್ವರಯ್ಯ, ಪಂಚಾಚಾರ್ಯ ಪ್ರೆಸ್, ಮೈಸೂರು (ಪರಿಷ್ಕೃತ ಮುದ್ರಣ) 1998. ಇದರಲ್ಲಿ 21 ಸ್ಥಲಗಳೂ ಇವೆ. ಆದರೆ ಹಲವು ಶ್ಲೋಕಗಳನ್ನು ತಿದ್ದುಪಡಿ ಮಾಡಿದ್ದಾರೆ. ಹಾಗೂ ವೀರಶೈವ ಸಿದ್ಧಾಂತಕ್ಕೂ ಅತ್ಯಂತ ವಿರುದ್ಧವಾಗಿರುವ ಶ್ಲೋಕಗಳು ಈ ಗ್ರಂಥದಿಂದ ಬೇರ್ಪಡಿಸಲ್ಪಟ್ಟ ವಿವರ : ಎಂದು ಹೇಳಿ 54 ಶ್ಲೋಕಗಳನ್ನು ಅಂತ್ಯದಲ್ಲಿ ಕೊಟ್ಟಿದ್ದಾರೆ. ಪುಟ : i - ii

9. ಸಿದ್ಧಾಂತಶಿಖಾಮಣಿ : ಗದಗಿನ ಶಿವಾನಂದ ಸ್ವಾಮಿಗಳವರ ಶಿಷ್ಯರಾದ ವೇದಾಂತಕೇಸರಿ ಶ್ರೀ ಮಲ್ಲಿಕಾರ್ಜುನ ಸ್ವಾಮಿಗಳವರ ಸಿದ್ಧಾಂತಶಿಖಾಮಣಿ ಪ್ರವಚನವನ್ನು ಆಧರಿಸಿ ಅವರ ಶಿಷ್ಯಂದಿರಾದ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳವರು ಸಂಪಾದಿಸಿದ್ದಾರೆ. ಇದರಲ್ಲಿ ಸಿದ್ಧಾಂತಶಿಖಾಮಣಿಯ ಮೂಲ ಅನ್ವಯಾರ್ಥ ಮತ್ತು ತಾತ್ಪರ್ಯಗಳೊಂದಿಗೆ ಬಸವಾದಿ ಶರಣರ ವಚನಗಳನ್ನು ನೂರೊಂದು ಸ್ಥಲಗಳಿಗನುಗುಣವಾಗಿ ನಿರೂಪಿಸಿದ್ದಾರೆ. ಈ ಆವೃತ್ತಿಯಲ್ಲಿ ಪ್ರಥಮ ಪರಿಚ್ಛೇದದ ಆರಂಭದ ಶಿವಸ್ತುತಿ ಮತ್ತು ಶಕ್ತಿಸ್ತುತಿಗೆ ಸಂಬಂಧಿಸಿದ 12 ಮಂಗಳ ಶ್ಲೋಕಗಳನ್ನು ವ್ಯಾಖ್ಯಾನಿಸಿ ಉಳಿದ ಮುಂದಿನ ಶ್ಲೋಕಗಳನ್ನು ಹಾಗೂ 2, 3, 4ನೆಯ ಪರಿಚ್ಛೇದಗಳನ್ನು ಹಾಗೂ 21ನೆಯ ಪರಿಚ್ಛೇದವನ್ನು ಅನುಬಂಧದಲ್ಲಿ ಕೊಡಲಾಗಿದೆ ಹಾಗೂ ಒಂದೆರಡು ಸ್ಥಲಗಳಲ್ಲಿ ಕೆಲವೊಂದು ಶ್ಲೋಕಗಳನ್ನು ಬಿಡಲಾಗಿದೆ. ಪರಿಷ್ಕೃತ ಆವೃತ್ತಿಯ ಪ್ರಕಾಶಕರು : ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ, ಮೈಸೂರು 1999.

10. ಸಿದ್ಧಾಂತಶಿಖಾಮಣಿ : ಶ್ರೀ ಮರಿತೋಂಟದಾರ್ಯರ ವ್ಯಾಖ್ಯಾನವನ್ನು ಆಧರಿಸಿ "ತಾತ್ಪರ್ಯ ದೀಪಿಕೆ" ಯೆಂಬ ಟೀಕನ್ನು ಬರೆದು ಸಂಪಾದಿಸಿದವರು ಆಸ್ಥಾನ ವಿದ್ವಾನ್ ಪಂಡಿತ ಎನ್.ಆರ್. ಕರಿಬಸವಶಾಸ್ತ್ರಿಗಳು. ಇದು 1921ರಲ್ಲಿ ಪ್ರಕಟವಾಗಿದೆ. ಪ್ರಕಾಶಕರು ಹಾಗೂ ಮುದ್ರಣಮಾಡಿಸಿದವರು ಸ್ಟಾರ್ ಪತ್ರಿಕೆಯ ಯಜಮಾನರು, ಮೈಸೂರು.

11. ಸಿದ್ಧಾಂತಶಿಖಾಮಣಿ : ಶ್ರೀ ಶಿವಕುಮಾರಸ್ವಾಮಿ ಎಂ.ಎ., ಇವರು 1988ರಲ್ಲಿ ಇಂಗ್ಲಿಷಿಗೆ ಭಾಷಾಂತರಿಸಿದ್ದಾರೆ.

12. ಸಿದ್ಧಾಂತಶಿಖಾಮಣಿ ; ಡಾ|| ಪುಟ್ಟರಾಜ ಗವಾಯಿಗಳು, ಗದಗ ಇವರಿಂದ 1977ರಲ್ಲಿ ಹಿಂದಿಗೆ ಅನುವಾದಗೊಂಡು ಪ್ರಕಟವಾಗಿದೆ.

13. ಸಿದ್ಧಾಂತಶಿಖಾಮಣಿ : ತಿರುವಣ್ಣಾಮಲೆಯ ಶಿವಪ್ರಕಾಶಸ್ವಾಮಿಗಳು 17ನೆಯ ಶತಮಾನದಲ್ಲಿ ತಮಿಳು ಭಾಷೆಗೆ ಅನುವಾದಿಸಿದ್ದಾರೆ ಎಂದು ತಿಳಿದು ಬರುತ್ತದೆ.

14. ಸಿದ್ಧಾಂತಶಿಖಾಮಣಿ ಪ್ರಸಿದ್ಧಿ ಎಂದು ತೆಲುಗಿನಲ್ಲಿ ಕೆಲವು ಭಾಷಾಂತರಗಳು ಬಂದಿವೆ. 1927.

15. ಪರಮಪೂಜ್ಯ ಡಾ।। ಜಚನಿ ಅವರು ಸಿದ್ಧಾಂತಶಿಖಾಮಣಿಯನ್ನು ಆಧರಿಸಿ ಬರೆದಿರುವ ಕನ್ನಡ ಗ್ರಂಥಗಳು : 1. ಮಣಿಕಾಂತಿ (1951) 2. ಮಣಿಮುಕುರ (1956) 3. ಮಣಿ ವಚನಗಳು (1967) ಹಾಗೂ ಸಿದ್ಧಾಂತಶಿಖಾಮಣಿಯ ಸೌಂದರ್ಯ ದರ್ಶನ ಮತ್ತು ಜೀವನ ಸಿದ್ಧಾಂತ (1976).

16. ವೀರಶೈವ ಸಿದ್ಧಾನ್ತಶಿಖಾಮಣಿ : ಪಂಡಿತ ಎನ್.ಆರ್. ಕರಿಬಸವಶಾಸ್ತ್ರಿಗಳವರ "ತಾತ್ಪರ್ಯದೀಪಿಕೆ"ಯೊಂದಿಗೆ : (ಸಂ) ಪ್ರೋ.ಸಂ.ಶಿ.ಭೂಸನೂರ ಮಠ ಡಾ।। ಜಿ.ಎಸ್. ಥಿವಾರಿ
ಪ್ರಕಾಶಕರು : ಶ್ರೀಮದ್ವೀರಶೈವ ಶಿವಯೋಗ ಮಂದಿರ
ತಾ. ಬದಾಮಿ 1992

ಶ್ರೀ ಶಿವಯೋಗಿ ಶಿವಾಚಾರ್ಯ ವಿರಚಿತ ಸಿದ್ಧಾಂತಶಿಖಾಮಣಿಗೆಯು ಮೇಲೆ ಕಾಣಿಸಿದ ಕನ್ನಡ, ಸಂಸ್ಕೃತ, ತಮಿಳು, ಮರಾಠಿ, ಹಿಂದಿ ಹಾಗೂ ಇಂಗ್ಲಿಷ್ ಭಾಷೆಗಳಿಗೆ ಸಂಪಾದಿಸಲ್ಪಟ್ಟು/ ವ್ಯಾಖ್ಯಾನಗೊಂಡು ಪ್ರಕಟಣೆಯನ್ನು ಕಂಡಿವೆ.



# ವ್ಯಾಖ್ಯಾನಕಾರ ಶ್ರೀ ಸೋಸಲೆ ರೇವಣಾರಾಧ್ಯರು

ಶ್ರೀ ಸೋಸಲೆ ರೇವಣಾರಾಧ್ಯರು ಇಂದಿನ ಟಿ. ನರಸೀಪುರ ತಾಲ್ಲೂಕಿಗೆ ಸೇರಿದ ಸೋಸಲೆ ಗ್ರಾಮದವರಾಗಿದ್ದು ತಮ್ಮ ಬಹುಪಾಲು ಕಾಲವನ್ನು ಚಿಕ್ಕನಾಯಕಹಳ್ಳಿಯನ್ನು ಆಳಿದ ಹಾಗಲವಾಡಿಯ ಪಾಳೆಯಗಾರರ ಆಶ್ರಯದಲ್ಲಿ ಕಳೆದಿರಬಹುದೆಂದು ತಿಳಿದು ಬರುತ್ತದೆ. ಉಭಯ ಭಾಷಾವಿದ್ವಾಂಸರಾದ ಶ್ರೀ ಸೋಸಲೆಯವರಿಗೆ ಧಾರ್ಮಿಕ ಪರಂಪರೆಯಲ್ಲಿ ವಿಶಿಷ್ಟವಾದ ಸ್ಥಾನವಿದೆ. ವಿದ್ವತ್ ಪರಂಪರೆಯನ್ನು ಹೊಂದಿರುವ ಇವರು ಮಹಿಮ್ನಸ್ತವ ಟೀಕೆಯಲ್ಲಿ

ಚಿಕನಾಯಕಪೂಷ್ಕರ್ತುಮುದಿನಾಯಕಬೂಭುಜಃ ।
ಮುದೇ ಟೀಕಾಕಾರಿತೇಯಂ ಸೋಮಶೇಖರಯೋಗಿನಾ ॥

ಎಂಬ ಶ್ಲೋಕದಿಂದ ಚಿಕನಾಯಕಪುರದ ಅರಸನಾದ ಮುದಿನಾಯಕನ ಸಂತೋಷಾರ್ಥವಾಗಿ ಸೋಮಶೇಖರಯೋಗಿ ತನ್ನಿಂದ 'ಮಹಿಮ್ನಸ್ತವ' ಟೀಕೆಯನ್ನು ಮಾಡಿಸಿದಂತೆ ಹೇಳಿಕೊಂಡಿದ್ದಾರೆ. ಈ ಮಹಿಮ್ನಸ್ತವ ಟೀಕೆಗೆ ಮಹಿಮ್ನಃ ಪ್ರದೀಪಿಕಾ ಎಂಬ ಹೆಸರಿದೆ. ಈ ಮುದಿಯನಾಯಕನು ಹಾಗಲವಾಡಿಯನ್ನಾಳಿದ ಪಾಳೆಯಗಾರರಲ್ಲಿ ನಾಲ್ಕನೆಯ ದೊರೆ. ಕ್ರಿ.ಶ. 1552 ರಿಂದ 1591ರವರೆಗೆ ಆಳಿದ ಭೈರಪ್ಪನಾಯಕನ ಪುತ್ರ. ಇವರು ಶ್ರೀ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಅನುಗ್ರಹಪಾತ್ರರೆಂದು ಹೇರಂಬಕವಿಯ ಸಿದ್ಧಲಿಂಗೇಶ್ವರಸಾಂಗತ್ಯದಿಂದ ತಿಳಿದು ಬರುತ್ತದೆ[1]. ಈತನು ಕ್ರಿ.ಶ. 1623ರಲ್ಲಿದ್ದಂತೆ ಚಿಕ್ಕನಾಯಕನಹಳ್ಳಿಯ 1ನೆಯ ಶಾಸನದಿಂದ ತಿಳಿಯುತ್ತದೆ. ಆದ್ದರಿಂದ ಕವಿಯ ಕಾಲವೂ ಇದೇ ಆಗಿರಬೇಕೆಂದು ಕವಿಚರಿತೆಕಾರರು ಅಭಿಪ್ರಾಯಪಡುತ್ತಾರೆ[2]. ತಾನು ಭೋಗಮಲ್ಲೇಶ್ವರನ ಶಿಷ್ಯ ಸಿದ್ಧವೃಷೇಶ್ವರನಿಗಾಗಿ ಸಿದ್ಧಾಂತಶಿಖಾಮಣಿಗೆ ವ್ಯಾಖ್ಯಾನವನ್ನು ಬರೆದಿದ್ದಾನೆಂದು ತಿಳಿದು ಬರುತ್ತದೆ. ಸಿದ್ಧಾಂತಶಿಖಾಮಣಿಯ ಪ್ರಥಮ ಪರಿಚ್ಛೇದ, ದ್ವಿತೀಯ, ಪರಿಚ್ಛೇದ ಹಾಗೂ ಇಪ್ಪತ್ತೊಂದನೆಯ ಪರಿಚ್ಛೇದಾಂತ್ಯ ಗದ್ಯದಲ್ಲಿ ತನ್ನನ್ನು

"ಇತಿ ಶ್ರೀಮದ್ವೇದವೇದ ಶಿರಶ್ಶಿವಾಗಮ ಪುರಾಣ ಪ್ರಭೃತಿ ಪ್ರಭೂತವಿದ್ಯಾಪ್ರತಿಪಾದಿತ ಶ್ರೀ ಶಿವಾದ್ವೈತಸನ್ಮಾರ್ಗ ಪ್ರಸಿದ್ಧ ಶ್ರೀ ವೀರಶೈವಷಟ್ಸ್ಥಲಶಿವಯೋಗಸ್ಥಾಪನಾಚಾರ್ಯವರ್ಯ" ಎಂದು ವಿಶ್ಲೇಷಿಸಿಕೊಂಡಿದ್ದಾರೆ. ಹಾಗೂ ಶಾಂತಮೂರ್ತಿ ಪ್ರಕಾಶಿಕೆಯ ಅಂತ್ಯ ಗದ್ಯದಲ್ಲಿ ತನ್ನನ್ನು "ಇತಿ ಶ್ರೀಮದ್ವೇದವೇದಶಿರಶ್ಶಿವಾಗಮ ಪುಣ್ಯಪುರಾಣ ಪ್ರಭೃತಿ ಪ್ರಭೂತ ಪ್ರಥಿತಪ್ರಮಕ್ತ ಸಂಗೀತ ಗೀತ ವಿದ್ಯಾನವದ್ಯಶ್ರೀ ವೀರಶೈವ ಷಟ್ಸ್ಥಲ ಶಿವಯೋಗ ಶಿವಾದ್ವೈತ ಸತ್ಪಥಪ್ರತಿಷ್ಠಾಪನಾಚಾರ್ಯ ಶ್ರೀ ಸೋಸಲೀ ವೀರಣಾರಾಧ್ಯ ದೇವಶಿವಯೋಗಿಸಾರ್ವಭೌಮ ತನೂಭವ ಶ್ರೀ ರೇವಣಾಸಿದ್ಧೇಶದೇಶಿಕ ಕುಂಜರಾತ್ಮಜ ಶ್ರೀ ರೇವಣಾರಾಧ್ಯದೇವಾಗಮಾಚಾರ್ಯವರ್ಯ...." ಎಂದೂ ವಿಶ್ಲೇಷಿಸಿಕೊಂಡಿರುವುದು

---

1. ಸಿದ್ಧಲಿಂಗೇಶ್ವರ ಸಾಂಗತ್ಯ : ಹೇರಂಬ ಕವಿ. (ಸಂ) ಎನ್. ಬಸವಾರಾಧ್ಯ, ಪ್ರಕಾಶಕರು ; ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ ಸೇವಾ ಸಂಘ, ಎಡೆಯೂರು - ಗದಗ - 1981 - ಪುಟ : 19ನೆಯ ಸಂಧಿ 42 ರಿಂದ 46.
2. ಕರ್ಣಾಟಕ ಕವಿ ಚರಿತೆ : ಆರ್. ನರಸಿಂಹಾಚಾರ್ಯ ವಿರಚಿತ ತಿದ್ದಿದ ದ್ವಿತೀಯ ಸಂಪುಟ. ಕನ್ನಡ ಸಾಹಿತ್ಯ ಪರಿಷತ್ತು - 1973 ಪುಟ 320.

ಕಂಡುಬರುತ್ತದೆ.

ಎಲ್ಲ ವ್ಯಾಖ್ಯಾನ ಗ್ರಂಥಗಳಲ್ಲೂ

ನತ್ವಾ ಶ್ರೀವೀರಣಾರಾಧ್ಯಂ ರೇವಣಾಸಿದ್ಧಯೋಗಿನಮ್ ।
ಟೀಕಾಂ ಕುರ್ವೇ ರೇವಣಾರ್ಯಂ ಶ್ರೀ ಸಿದ್ಧಾಂತಶಿಖಾಮಣೇಃ ॥

ಎಂದು ತನ್ನ ಗುರು ವೀರಣಾರಾಧ್ಯರನ್ನು ನಮಸ್ಕರಿಸಿದ್ದಾರೆ. ಇವರ ಅಜ್ಜನೇ ಗುರುವೂ ಆಗಿರಬಹುದೆಂದು ತಿಳಿಯಬಹುದು[1].

ಶಿವಾಧಿಕ್ಯ ಶಿಖಾಮಣಿ ಟೀಕೆಯನ್ನು ಕಳಿಲೆ ಕೆಂಪನಂಜಾರ್ಯ, ನಮಸ್ಕಾರಪುರೀ ಸಿದ್ಧನಂಜಾರ್ಯ, ಸುತ್ತೂರು ಸಿಂಹಾಸನದ ಗುರುನಂಜಾರ್ಯನ ಶಿಷ್ಯ ಚೆನ್ನಬಸವ ಈ ಮೂವರುಗಳ ಇಷ್ಟಾನುಸಾರವಾಗಿ ಬರೆದಂತೆ ಹೇಳುತ್ತಾನೆ. ಚನ್ನಪಟ್ಟಣ ತಾಲ್ಲೂಕಿನ ಮುದಿಗೆರೆಯ ರಘುವಪ್ಪನಾಯಕನು ಈ ಗ್ರಂಥ ರಚನೆಗೆ ಕಾರಣಭೂತನೆಂಬ ಅಂಶವು ಈ ಗ್ರಂಥದಿಂದ ತಿಳಿಯಬರುತ್ತದೆ[2].

ಪ್ರಸ್ತುತ ಸಿದ್ಧಾಂತ ಶಿಖಾಮಣಿಯ ಪ್ರಾರಂಭದಲ್ಲಿನ ಈ ಕೆಳಕಂಡ ಶ್ಲೋಕಗಳಲ್ಲಿ ತಮ್ಮ ವಂಶ ಪರಂಪರೆಯನ್ನು ಹೀಗೆ ಹೇಳಿಕೊಂಡಿದ್ದಾರೆ.

ಶ್ರೀ ರೇಣುಕಕುಲಖ್ಯಾತಾನ್ಪಂಚಲಿಂಗಾತ್ಮಕ್ರಾನ್ಕ್ರಮಾತ್।
ಶ್ರೀ ವಿಶ್ವನಾಥಾದಿ[2] ವಾರಣಾಸೀಶಾನ್ ಸರ್ವದೇಶಿಕಾನ್ ॥

ನತ್ವಾ ಶ್ರೀವೀರಣಾರಾಧ್ಯಂ ರೇವಣಾಸಿದ್ಧಯೋಗಿನಮ್ ।
ಟೀಕಾಂ ಕುರ್ವೇ ರೇವಣಾರ್ಯಂ ಶ್ರೀ ಸಿದ್ಧಾಂತಶಿಖಾಣೇಃ ॥

ಸಕಲಸಮಯಮೂರ್ದ್ಧಾಮಾಯತಂತ್ರೋರ್ಧ್ವಭಾಗಮ್
ಪರಮವನಿತಲೈಕಂ ವೀರಶೈವಾದಿಶಾಸ್ತ್ರಮ್ ।
ಇಮಮಹಮಪಿ ಕುರ್ವೇವೀರಣಾರ್ಯಸ್ಯಪೌತ್ರಃ
ಶಿವಯಮಿಷುಸುಟೀಕಾಂ ರೇವಣಃಸಿದ್ಧಸೂನುಃ ॥

ಸಿದ್ಧಾಂತಬೋಧಿನ್ಯಾಖ್ಯಾತಂ ಕುರ್ವೇಸತ್ಸ್ಫೂರ್ತಿತಃ ಪುನಃ
ಸಂತೋ ಭವಂತು ಸದಯಾ ಮುದಾ ಸಂಪ್ರತಿ ಮಾಂ ಪ್ರತಿ ॥

---

1. ಗುರುಂ ವೀರೇಶ್ವರಂ ನತ್ವಾ ರೇವಣಾಸಿದ್ಧಯೋಗಿನಮ್ ।
ಸ್ತುತ್ವಾ ತನ್ನಾಮಕಃ ಕುರ್ವೇ ಶ್ರೀ ಶಾರೀರ ಪ್ರಕಾಶಿಕಾಂ ॥

2. ಗುರುಂ ವಿಶ್ವೇಶ್ವರಂ ನತ್ವಾ ರೇವಣಂಸಿದ್ಧಪುಂಗವಮ್
ಸ್ತುತ್ವಾತನ್ನಾಮಕಃ ಕುರ್ವೇ ಪರಮಾತ್ಮಪ್ರಕಾಶಿಕಾಂ ।
ಪರಮಾತ್ಮ ಪ್ರಕಾಶಿಕೆ : ಪುಟ 1-3

2. ಅದೇ ಕಕಚ - ಪುಟ : 321

ಇವುಗಳಿಂದ ತಿಳಿದು ಬರುವುದೇನೆಂದರೆ ಶ್ರೀ ರೇಣುಕಾಚಾರ್ಯ ವಂಶೋದ್ಭವ ವಿಶ್ವನಾಥಾಚಾರ್ಯ, ವಾರಣಾಸೀಶ (ಕಾಶೀನಾಥ), ಈತನ ಮಕ್ಕಳು, ವೀರಾರ್ಯ ಹಾಗೂ ಸರ್ವೇಶ್ವರ ಪುತ್ರ ವೀರಣಾರಾಧ್ಯ, ರೇವಣಾರ್ಯ, ಕವಿ ಸೋಸಲೆ ರೇವಣಾಚಾರ್ಯ ಅಥವಾ ರೇವಣಾರಾಧ್ಯ.

ಈತನ ವಂಶದಲ್ಲಿ ವಿಶ್ವನಾಥನು ಬಹು ಪ್ರತಿಭಾವಂತನಾಗಿದ್ದು ಕೇವಲ ಹತ್ತು ಶ್ಲೋಕಗಳಲ್ಲಿ 'ಸಾಸವೆಯಂ ಕೊರೆದಬ್ಧಿಯೊಳ್ಸೆಸಂ ಸಲೆ ತುಂಬುವಂತೆ ಸಕಲಾಗಮದೊಳ್ ಲೇಸೆನಿಸಿದರ್ಥವೆಲ್ಲವ' ತುಂಬಿ ವೀರಶೈವ ಸಿದ್ಧಾಂತವನ್ನು ಅಡಕಮಾಡಿರುವ 'ದಶಗ್ರಂಥಿ'ಯನ್ನು ರಚಿಸಿದ್ದಾನೆ. ಈತನ ಮಗನಾದ ವೀರಣಾರಾಧ್ಯನು ಆತನೇ ಹೇಳಿಕೊಂಡಿರುವಂತೆ, ತನ್ನ ತಂದೆ ವಿಶ್ವನಾಥನ 'ದಶಗ್ರಂಥಿಗೆ' ಪೌಷ್ಕರ, ಯೋಗಜ, ಮೃಗೇಂದ್ರ ಮೊದಲಾದ ಆಗಮಗಳಿಂದ ಉದಾಹರಿಸಿ 'ಶಿವಜ್ಞಾನಪ್ರದೀಪಿಕೆ'ಯೆಂಬ ಪ್ರೌಢವ್ಯಾಖ್ಯಾನವನ್ನು ಕನ್ನಡದಲ್ಲಿ ಬರೆದಿದ್ದಾನೆ. ಜಕ್ಕಣಾರ್ಯನ ಏಕೋತ್ತರಶಸ್ಥಲಿಯ ವ್ಯಾಖ್ಯಾನದಲ್ಲಿ ಶ್ರೀ ಗಿರೀಂದ್ರನಿಗೆ ಏಕೋತ್ತರಶತಸ್ಥಲಗಳನ್ನು ಬೋಧಿಸುವವನು ಆತನ ಗುರು "ವಾರಣಾಸೀಶ" ಇವನೇ ಗಿರೀಂದ್ರನಿಗೆ ಜಕ್ಕಣನ ಏಕೋತ್ತರಶಸ್ಥಲಿಯನ್ನು ವ್ಯಾಖ್ಯಾನಿಸುವಂತೆ ಆದೇಶಿಸುತ್ತಾನೆ[1].

ಹೀಗೆ ವಿದ್ವತ್ ಪರಂಪರೆಯುಳ್ಳ ಶ್ರೀ ಸೋಸಲೆಯವರು ಅನೇಕ ಸಂಸ್ಕೃತ ಮತ್ತು ಕನ್ನಡ ಗ್ರಂಥಗಳಿಗೆ ಕನ್ನಡದಲ್ಲಿ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಸೃಜನಶೀಲ ಕೃತಿಗಳಿಗಿಂತಲೂ ವ್ಯಾಖ್ಯಾನ ಕೃತಿಗಳು ಅಧಿಕವಾಗಿವೆ. ಸುಮಾರು 23ಕ್ಕಿಂತಲೂ ಹೆಚ್ಚಿನ ಕೃತಿಗಳು ಇವರ ಹೆಸರಿನಲ್ಲಿವೆ. ಇವರ ಗ್ರಂಥ ಸಮೂಹವನ್ನು :

1. ಸಂಸ್ಕೃತ ಸಂಕಲನ ಕೃತಿಗಳು
2. ಕನ್ನಡ ವ್ಯಾಖ್ಯಾನ ಕೃತಿಗಳು
3. ಕನ್ನಡ ಸೃಜನ ಕೃತಿಗಳು ಎಂಬುದಾಗಿ ವರ್ಗೀಕರಿಸಬಹುದು.

### ೧. ಸಂಸ್ಕೃತ ಸಂಕಲನ ಕೃತಿಗಳು

1. ಶಾರೀರ ಪ್ರಕಾಶಿಕೆ - ಧಾರವಾಡ ಕರ್ನಾಟಕ ವಿ.ವಿ. ಕನ್ನಡ ಅಧ್ಯಯನ ಪೀಠ 586/2, ಕೆ.ಎ. 177 ಕುವೆಂಪು ಕನ್ನಡ ಅಧ್ಯಯನ ಕೇಂದ್ರ ಮಾನಸಗಂಗೋತ್ರಿ, ಮೈಸೂರು.
2. ಅಂತಃಕರಣ ಪ್ರಕಾಶಿಕೆ - ಅದೇ ಕೆ.ಎ. 586/3
3. ಸ್ವಸ್ವರೂಪ ಪ್ರಕಾಶಿಕೆ[1] - ಅದೇ ಕೆ.ಎ. 587/4
4. ಪರಮಾತ್ಮ ಪ್ರಕಾಶಿಕೆ - ಅದೇ ಕೆ.ಎ. 588/5
5. ನಿಜದೀಪ್ತಿ ಪ್ರಕಾಶಿಕೆ - ಅದೇ ಕೆ.ಎ. 588/6
6. ಶಿವಜ್ಞಾನ ಪ್ರಕಾಶಿಕೆ - ಅದೇ ಕೆ.ಎ. 589/7
7. ಷಟ್ಸ್ಥಲ ಬ್ರಹ್ಮದೀಪಿಕೆ - ಪ್ರಕಟಿತ ಶಿವಾನುಭವ ಸಂ. 8, ಸಂ. 3 ವಿಜಾಪುರ
8. ಕವಿ ಸಮಯ ವಿಲಾಸ ಅಥವಾ ಶತರತ್ನ ಸಂಗ್ರಹ-ಡಿ.ಸಿ. VIII- ಪ್ರಾವಿಸಂ, ಮೈಸೂರು ಪು-506, No. G 1060

**2. ಕನ್ನಡ ವ್ಯಾಖ್ಯಾನ ಕೃತಿಗಳು**

1. ಸಿದ್ಧಾಂತಶಿಖಾಮಣಿ ಟೀಕು ಕೆ.ಎ. 427 ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು.

2. ಮಹಿಮ್ನಸ್ತವ ಟೀಕೆ (ಮಹಿಮ್ನಃ ಪ್ರದೀಪಿಕಾ) ಅದೇ ಕೆ.ಎ. 35/8

3. ಶ್ರೀ ರುದ್ರಭಾಷ್ಯ ಟೀಕೆ ಕೆ.ಎ. 335/8, ಕ.ವಿ.ವಿ ವ.ಭಾಂ 87/2, ಕೆ. 323/2 (ಗದಗ)[2]

4. ಶಿವಾಧಿಕ್ಯ ಶಿಖಾಮಣಿ ಟೀಕೆ ಕೆ. 190 ಕ.ಅ.ಪೀ. ಜ್ಞಾನಭಾರತಿ, ಬೆಂಗಳೂರು[1].

5. ಸದ್ಗುರು ರಗಳೆ (ಪಾಲ್ಕುರಿಕೆ ಸೋಮನಾಥ) ಟೀಕೆ - 501/1, 371/4, ಕ.ವಿ.ವಿ ಅ.ಪೀ. ಧಾರವಾಡ

6. ಶರಣುಬಸವ ರಗಳೆ (ಪಾಲ್ಕುರಿಕೆ ಸೋಮನಾಥ) ಟೀಕೆ - 1475 ಕುವೆಂಪು ವಿ.ವಿ. ಮೈಸೂರು ಟೀಕು 440/2, ಬೃಹನ್ಮಠ, ಚಿತ್ರದುರ್ಗ ಪಂಚಪ್ರಕಾರಗದ್ಯ (ಪಾಲ್ಕುರಿಕೆ ಸೋಮನಾಥ) 1475 ಕೆ.ಕ.ಅ.ಸಂ.

7. ಚನ್ನಬಸವರಗಳೆ (ಪಾಲ್ಕುರಿಕೆ ಸೋಮನಾಥ) ಟೀಕು ಮಹಾರಾಜ ಸಂಸ್ಕೃತ ಪಾಠಶಾಲೆ, ಮೈಸೂರು, ಕ.ವಿ.ವಿ. ವ.ಭಾ 502/2 ಧಾರವಾಡ.

8. ನಮಸ್ಕಾರ ಗದ್ಯ (ಪಾಲ್ಕುರಿಕೆ ಸೋಮನಾಥ) ಟೀಕು ಕೆ. 77/5 ಕ.ವಿ.ವಿ. ಧಾರವಾಡ ಕೆ.ಆರ್.ಐ. V 42

9. ಅಕ್ಷರಮಾಲಿಕಾ ಗದ್ಯ (ಪಾಲ್ಕುರಿಕೆ ಸೋಮನಾಥ) ಟೀಕೆ - 77/4, ಕ.ವಿ.ವಿ.ಧಾ ಕೆ.ಆರ್.ಐ V-5

10. ಅಕ್ಷರಾಂಕ ಗದ್ಯ (ಪಾಲ್ಕುರಿಕೆ ಸೋಮನಾಥ) ಟೀಕೆ - 77/3, ಕ.ವಿ.ವಿ. ಧಾ

11. ಉದಾಹರಣಗದ್ಯ (ಪಾಲ್ಕುರಿಕೆ ಸೋಮನಾಥ) ಟೀಕು 207/5-ಬೃಹನ್ಮಠ, ಚಿತ್ರದುರ್ಗ ಕೆ.ಆರ್.ಐ V- 8

12. ರುದ್ರಭಾರತದ ಟೀಕು ಕ.ಕ.ಚ ಭಾಗ-3 428 496 (ಕನ್ನಡ ಅಧ್ಯಯನ ಕೇಂದ್ರ K 355/8

**3. ಕನ್ನಡ ಸೃಜನ ಕೃತಿಗಳು**

1. ಸ್ವರವಚನ 586 ಕ.ಅ.ಪೀ ಕ.ವಿ.ವಿ (ವೀರಣಾರ್ಯ ಅಂಕಿತ)

2. ಯೋಗತಾರಾವಳಿ ಕ.ಕ.ಚ ಭಾಗ 3 - ಅನುಕ್ತ ಪುಟ 54

ಇವುಗಳಲ್ಲದೆ ಪ್ರಸ್ತುತ ಸಿ.ಶಿ ಟೀಕೆಯಲ್ಲಿ, ಶ್ರುತ್ಯಂತ ಶಿರೋಮಣಿ ಹಾಗೂ 'ಸಿದ್ಧಾಂತ ಚಿಂತಾಮಣಿ' (ಪುಟ-92 ಶ್ಲೋಕ : 51) 'ಉಪದೇಶ ಮಂಜರಿ' (ಪುಟ-269-ಶ್ಲೋ-27) ಈ ಮೂರು ಸಂಕಲನ ಕೃತಿಗಳು ಇವರ ಹೆಸರಿನಲ್ಲಿವೆಯೆಂದು ತಿಳಿದು ಬರುತ್ತವೆ. ಇವುಗಳು ಬೇರೆಲ್ಲೂ ಉಲ್ಲೇಖವಾಗಿಲ್ಲ.

---

1. ಇದು ಶ್ರೀ ಸೋಮಶೇಖರ ಸ್ವಾಮಿಗಳು ಇವರಿಂದ ಸಂಪಾದಿತವಾಗಿ ಶ್ರೀಮತ್ಕನ್ಯಕಾ ಪರಮೇಶ್ವರಿ ಪ್ರೆಸ್, ಮೈಸೂರು 1925ರಲ್ಲಿ ಪ್ರಕಟವಾಗಿದೆ.

1. ಶ್ರೀ ರೇಣುಕೀಯ ಭಾಷ್ಯಾನುಸಾರಾತ್ಸಂಕ್ಷಿಪ್ಯಸಂಮತಾಂ ।
ಕುರ್ವೇ ಶ್ರೀರುದ್ರಟೀಕಾಂತು ಶಾಂತಮೂರ್ತಿಪ್ರಕಾಶಿಕಾಂ ॥ 10 ॥
ಅತಶ್ರೀರುದ್ರಮಂತ್ರಾರ್ಥೋರ್ಭವದ್ಭಿರ್ಭಣ್ಯತಾಮಿತಿ ।
ಉಕ್ತೇ ಶ್ರೀ ಶಾಂತಯೋಗೀಶೇತತ್ಸಂಶಯ ನಿವೃತ್ತಯೇ ॥ 8 ॥
ಶ್ರೀ ಹಂಪಯ್ಯಾರ್ಯ ಪ್ರಿತ್ಯರ್ಥಂ ಪ್ರೀತ್ಯೈ ಸರ್ವಮಹಾತ್ಮನಾಂ ।
ಭ್ರಾಂತಿ ಜ್ಞಾನನಿರಾಸಾರ್ಥ ಶೈವವೈದಿಕಮಾರ್ಗಿಣಾಂ ॥ 9 ॥

ಇದರಿಂದ 'ರೇಣುಕೀಯ'ವೆಂಬ ಶ್ರೀರುದ್ರಭಾಷ್ಯ ಟೀಕೆಯೂ ಇದೆಯೆಂದು ತಿಳಿದು ಬರುತ್ತದೆ. ಇದು ಶ್ರೀ ಶಾಂತಯೋಗೀಶ್ವರರು ಶ್ರೀ ಸೋಸಲೆ ರೇವಣಾರಾಧ್ಯರನ್ನು ಕುರಿತು ನಿಮ್ಮಿಂದ ಶ್ರೀ ರುದ್ರಸೂಕ್ತಕ್ಕೆ 'ಶಕ್ತಿವಿಶಿಷ್ಟಾದ್ವೈತ'ಮತಕ್ಕನುಸಾರವಾಗಿ ಕರ್ಣಾಟಕ ಭಾಷೆಯಲ್ಲಿ ಟೀಕೆಯು ರಚಿಸಲ್ಪಡಬೇಕೆಂದು ಹೇಳಿದ ಪ್ರಕಾರ ಶ್ರೀ ಸೋಸಲೆ ರೇವಣಾರಾಧ್ಯರು ತಾವು ಸಂಸ್ಕೃತ ಭಾಷೆಯಲ್ಲಿ ರಚಿಸಿರುವ ರೇಣುಕೀಯವೆಂಬ ಶ್ರೀ ರುದ್ರಭಾಷ್ಯದಿಂದ ಸಂಕ್ಷೇಪಿಸಿ 'ಶಾಂತಮೂರ್ತಿ ಪ್ರಕಾಶಿಕಾ' ಎಂಬ ಹೆಸರಿನಿಂದ ಈ ಗ್ರಂಥವನ್ನು ರಚಿಸಿದ್ದಾರೆ[1]. ಇವರು ವೀರಶೈವ ಧರ್ಮಪರವಾದ ಸಂಸ್ಕೃತ ಶಾಂತಮೂರ್ತಿ ಪ್ರಕಾಶಿಕಾ ಎಂಬ ಶ್ರೀರುದ್ರ ಕರ್ಣಾಟಕ ಟೀಕೆಯು ಪಿರಿಯಾಪಟ್ಟಣದ ಕನ್ನಡ ಸ್ಕೂಲ್ ಹೆಡ್ಮಾಸ್ಟರ್ ಆರ್. ಶ್ರೀಕಂಠಾರಾಧ್ಯರಿಂದ ಪರಿಷ್ಕರಿಸಲ್ಪಟ್ಟು 1911ನೆಯ ಇಸವಿಯಲ್ಲಿ ಪ್ರಕಟವಾಗಿದೆ. ಮೇಲಿನ ಗ್ರಂಥ ಸಮೂಹವನ್ನು ಅವಲೋಕಿಸಿದಾಗ ಬಹುಪಾಲು ಗ್ರಂಥಗಳಿಗೆ ಇವರು ಟೀಕೆಯನ್ನು ಬರೆದಿರುವುದರಿಂದ ಇವರನ್ನು 'ಟೀಕಾಕಾರ'ರೆಂದೇ ಕರೆಯಬಹುದಾಗಿದೆ.

ಇವರು ವೀರಶೈವ ಧರ್ಮಪರವಾದ ಸಂಸ್ಕೃತ ಗ್ರಂಥಗಳಿಗೆ ಬರೆದಿರುವ ಕನ್ನಡ ವ್ಯಾಖ್ಯಾನಗಳು ಪ್ರೌಢವಾಗಿರುವುದರ ಜೊತೆಗೆ 'ವ್ಯಾಖ್ಯಾನ'ದ ಸಮಸ್ತ ಗುಣಗಳನ್ನೂ ಹೊಂದಿವೆ. ಈ ವ್ಯಾಖ್ಯಾನಗಳಲ್ಲಿ ಅವರ ಅಪಾರ ವಿದ್ವತ್ತು, ಬಹುಶ್ರುತತ್ವ ಹಾಗೂ ಅವರ ಸಂಯೋಜನೆ ಅವರ ಪ್ರತಿಭೆಗೆ ಸಾಕ್ಷಿಯಾಗಿವೆ. ಅವರ ಸಂಸ್ಕೃತ ಗ್ರಂಥಗಳ ಟೀಕೆಗಳಂತೆಯೇ ಕನ್ನಡ ಗ್ರಂಥಗಳ ಟೀಕೆಗಳೂ ಅಷ್ಟೇ ಪ್ರೌಢವಾಗಿವೆ. ಕನ್ನಡ ಟೀಕಾ ಪ್ರಪಂಚಕ್ಕೆ ಶ್ರೀ ಸೋಸಲೆಯವವ ಕೊಡುಗೆ ಅನನ್ಯವಾದದ್ದು.

---

1. ನೋಡಿ. ಅದೇ ಸಿ.ಶಿ. ಹಾಗೂ ಶ್ರೀಕರಭಾಷ್ಯ : ನಿಜದ ನಿಲುವು : ಪುಟ : 48, 50.

1. ಪರಮಾತ್ಮ ಪ್ರಕಾಶಿಕೆ, ಸ್ವಸ್ವರೂಪ ಪ್ರಕಾಶಿಕೆ ಈ ಎರಡೂ ಗ್ರಂಥಗಳು ಮೈಸೂರು ಹೊಸಮಠದ ಚರಮೂರ್ತಿ ಶ್ರೀ ಬಸವಲಿಂಗಸ್ವಾಮಿಗಳಿಂದ ಪರಿಷ್ಕರಿಸಲ್ಪಟ್ಟು 1911ನೆಯ ಇಸವಿಯಲ್ಲಿ ಪ್ರಕಟವಾಗಿವೆ.

2. ಶಾಂತಮೂರ್ತಿ ಪ್ರಕಾಶಿಕಾ -ಉಪೋದ್ಘಾತ - ಪು ||| (ಸಂ) ಆರ್. ಶ್ರೀಕಂಠಾರಾಧ್ಯ 1911.

4. ನೋಡಿ : ಪಾಲ್ಕುರಿಕೆ ಸೋಮನಾಥಕೃತ 'ಸದ್ಗುರು ರಗಳೆ' (ವ್ಯಾ) ಸೋಸಲೆ ರೇವಣಾರಾಧ್ಯಕೃತ ಮಾಲಾಟೀಕಾಸಹಿತ : (ಸಂ) ಎಸ್. ಶಿವಣ್ಣ ಪ್ರಸಾದ : (24-3) ಜನವರಿ-ಫೆಬ್ರವರಿ-ಮಾರ್ಚ್-ಏಪ್ರಿಲ್ : 1986 ಜಗದ್ಗುರು ಶ್ರೀ ಶಿವರಾತ್ರೀಶ್ವರ ಮಹಾವಿದ್ಯಾಪೀಠ, ರಾಮಾನುಜ ರಸ್ತೆ, ಮೈಸೂರು.

**ಹಸ್ತಪ್ರತಿಯ ವಿವರ :**

ಇದು ತಾಡೋಲೆಯ ಪ್ರತಿ. 1 ರಿಂದ 205 ಪತ್ರಗಳಿವೆ. 205ನೆಯ ಪತ್ರದ ಒಂದು ಬದಿಯಲ್ಲಿ 1 1/2 ಸಾಲು ಇದ್ದು ಗ್ರಂಥ ಮುಕ್ತಾಯಗೊಂಡಿದೆ. ಪ್ರತಿಯೊಂದು ಪತ್ರವೂ 12.5 ಅಂಗುಲ ಉದ್ದವಾಗಿಯೂ 2 ಅಂಗುಲ ಅಗಲವಾಗಿಯೂ ಇದೆ. ಆರಂಭದ 1-20 ಪುಟದವರೆಗೆ ಪ್ರತಿ ಪುಟದಲ್ಲಿಯೂ 14 ಸಾಲುಗಳಿದ್ದು ಪ್ರತಿ ಸಾಲಿನಲ್ಲಿಯೂ ಸುಮಾರು 80 ಅಕ್ಷರಗಳಿವೆ. ಮುಂದಿನ ಪುಟಗಳಲ್ಲಿ ಪ್ರತಿ ಪುಟದಲ್ಲಿ 11 ಸಾಲುಗಳಿದ್ದು ಪ್ರತಿ ಸಾಲಿನಲ್ಲಿ 60 ರಿಂದ 65 ಅಕ್ಷರಗಳಿವೆ. ಪ್ರತಿಯು ಸುಸ್ಥಿತಿಯಲ್ಲಿದೆ. ಪ್ರತಿಯು ಕೈ॥ ಪಿ.ಆರ್. ಕರಿಬಸವಶಾಸ್ತ್ರಿಗಳವರ ಸಂಗ್ರಹದಿಂದ ಶ್ರೀ ಸಿದ್ಧಗಂಗಾ ಕ್ಷೇತ್ರದ ಶ್ರೀ ಸಿದ್ಧಲಿಂಗೇಶ್ವರ ಮಹಾಪಾಠಶಾಲೆಯ ಶ್ರೀ ಶಾರದಾ ಭಂಡಾರಕ್ಕೆ ಕೊಡುಗೆಯಾಗಿ ಬಂದದ್ದು ಎಂಬುದಾಗಿ ತಿಳಿದುಬರುತ್ತದೆ. ಈ ಪ್ರತಿಯನ್ನು ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವಸ್ವರೂಪಿಗಳಾದ ಡಾ॥ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶೀರ್ವಾದವನ್ನು ಪಡೆದು ಭಂಡಾರದಿಂದ ಎರವಲು ಪಡೆಯಲಾಯಿತು. ಪ್ರತಿಯನ್ನು ತರುವಲ್ಲಿ ನೆರವಾದವರು ಸನ್ಮಾನ್ಯರಾದ ವಿದ್ವಾನ್ ಶ್ರೀ ಟಿ.ಕೆ. ನಂಜುಂಡಪ್ಪನವರು ಮತ್ತು ತುಮಕೂರಿನ ತಾರಾನಾಥ ಆಯುರ್ವೇದ ಚಿಕಿತ್ಸಾಲಯದ ಡಾ॥ ಬಿ. ನಂಜುಂಡಸ್ವಾಮಿಯವರು ಹಾಗೂ ಸಂಸ್ಕೃತ ಮಹಾಪಾಠಶಾಲೆಯ ಪ್ರಾಚಾರ್ಯರಾದ ವಿದ್ವಾನ್ ಪಿ.ಎನ್. ಚಂದ್ರಶೇಖರಯ್ಯನವರು ತಮ್ಮ ಕೆಲಸಗಳ ನಡುವೆ ಬಿಡುವು ಮಾಡಿಕೊಂಡು ನೆರವಾದರು. ಇವರಿಗೆ ನನ್ನ ಹೃತ್ಪೂರ್ವಕ ನಮನಗಳು.

ಪ್ರತಿಯ ಆದಿಯಲ್ಲಿ "ಶ್ರೀ ಗುರುಬಸವಲಿಂಗಾಯ ನಮಃ ಸಿದ್ಧಾಂತಶಿಖಾಮಣಿಯ ಪುಸ್ತಕವ ಬರೆವುದಕ್ಕೆ ಶುಭಮಸ್ತು" ಎಂದಿದ್ದು ಅಂತ್ಯದಲ್ಲಿ "ಇತಿ ಶ್ರೀಮದ್ವೇದವೇದಶಿರಃ ಶಿವಾಗಮಪುರಾಣ ಪ್ರಭೃತಿಪ್ರಭೂತವಿದ್ಯಾಪ್ರತಿಪಾದಿತ ಶ್ರೀವೀರಶೈವಷಟ್ಸ್ಥಲಶಿವಯೋಗಶಿವಾದ್ವೈತ ಸನ್ಮಾರ್ಗಸ್ಥಾಪನಾಚಾರ್ಯವರ್ಯ ಶ್ರೀಸೋಸಲಿ ವೀರಣಾರಾಧ್ಯದೇಶಿಕಸಾರ್ವಭೌಮ ಕರಕಂಜಸಂಜಾತ ತದಾತ್ಮಜ ಶ್ರೀರೇವಣಾಸಿದ್ಧೇಶ್ವರಾತ್ಮಜ ಶ್ರೀರೇವಣಾರಾಧ್ಯಾನಾಮಾಚಾರ್ಯ ವಿರಚಿತಾಯಾಂ ಶ್ರೀವೀರಶೈವಧರ್ಮನಿರ್ಣಯಸಿದ್ಧಾಂತಶಿಖಾಮಣಿಟೀಕಾಯಾಂ ಸಿದ್ಧಾರ್ಥಸಂಬೋಧಿನೀ ವ್ಯಾಖ್ಯಾಯಾಂ ರೇಣುಕವಿಭೀಷಣ ಸಂವಾದೋ ರೇಣುಕೇಶ್ವರಸ್ಯ ಶಿವಲಿಂಗೈಕ್ಯಸ್ಯ ಏಕವಿಂಶತಿ ಪರಿಚ್ಛೇದಃ" ಎಂದಿದ್ದು ,

ಶ್ರೀ ರುಣುಕೇಶ್ವರಸ್ತಮೇವತೇ ಅಂಗಜಂಗಮಸ್ವರೂಪಿಣೇ ।
ಚಿತ್ರವಾಣಿ ಸುತನೋ ಭಜಸ್ವ ಮೇ ಚಿಂತನೇನ ನುತಿ ವಾ ಸುಪೂಜಯಾ ॥
ಭೃಂಗಯೇನಂಗರಿಪವೇ ವೃಷ ಯಾ ವೃಷರೂಪಿಣೇ ।
ವೀರಾಯ ವೀರಭದ್ರಾಯ ಪ್ರಭು ಪ್ರಭೃತಯೇ ನಮಃ ॥

ಭದ್ರಂ ಭೂಯಾತ್ ಸಿದ್ಧಾಂತಶಿಖಾಮಣಿಯ ಪುಸ್ತಕ ಬರದಾತ ವಿಶ್ವನಾಥ ಪುರದ ಅಗ್ರಹಾರದ ತೂಪರಾಣಿ ಲಿಂಗಾಭಟ್ಟರ ಪುತ್ರ ನಾಗಾಭಟ್ಟ ಬರದ ಪುಸ್ತಕಕ್ಕೆ ಮಂಗಲ ಮಹಾ ಶ್ರೀ ಶ್ರೀ ಶ್ರೀ ಶ್ರೀ ಎಂದಿದೆ. ಪ್ರತಿಯು ಶುದ್ಧವಾಗಿದ್ದರೂ ಕೆಳಗಿನ ಲಿಪಿಕಾರನ ದೋಷಗಳನ್ನು ಗಮನಿಸಬಹುದಾಗಿದೆ:

ಸ್ವರಾಕ್ಷರಗಳಿಗೆ ವ್ಯಂಜನಾಕ್ಷರಗಳ ಬಳಕೆ

ಈಶ್ವರ > ಯೀಶ್ವರಃ, ಈಗ > ಯಿೂಗ;

ಇತಿ > ಯಿತಿ ; ಈ > ಯಿೂ — ಇ > ಯಿ

ಈ > ಯಿೂ

ಒಂದೆ > ವೊಂದೆ; ಉವಾಚ > ವುವಾಚ - ಒ > ವೋ

ಉ > ವು

ಋಗ್ವೇದ, ರುಗ್ವೇದ, ಋಷಿ, ರುಷಿ - ಋ > ರು

2. ವರ್ಣಯಿತುಂ, ವರ್ನಯಿತುಂ
   ಘಂಟಾಕರ್ಣಃ, ಘಂಟಾಕರ್ನಃ — ಣ > ನ

3. ವಿಲಾಸಯಾ, ವಿಲಾಶಯಾ
   ಸರ್ವಾತ್ಮಾ ಶರ್ವಾತ್ಮಾ — ಸ > ಶ

4. ಮಹಾಕಾಲಃ, ಮಹಾಕಾಳಃ
   ಧೂಲಿತ, ಧೂಳಿತ — ಲ > ಳ

5. ಅಲ್ಪಪ್ರಾಣಕ್ಕೆ ಮಹಾಪ್ರಾಣಗಳ ಬಳಕೆ :
   ಮತ - ಮಥ, ಅರ್ಥ - ಅರ್ತ್ಥ — ತ > ಥ
   ಒಂದು ಬಾರಿ - ವೊಂದು ಭಾರಿ — ಬ > ಭ

6. ಅನಾವಶ್ಯಕ ಒತ್ತಕ್ಷರಗಳ ಬಳಕೆ :
   ಗೀಯತೇ - ಗೀಯ್ಯತೇ; ಯಾಂತಿ - ಯಾಂತ್ತಿ
   ಪರಿಗೀಯತೇ - ಪರಿಗೀಯ್ಯತೇ, ಪ್ರಸೀದತಿ - ಪ್ರಸಿದ್ಧತಿ - ಇತ್ಯಾದಿ

7. ವರ್ಣವಿಪರ್ಯಕ್ಕೆ — ಪತಂತಿ > ತಪಂತಿ

8. ದ್ವಿರುಕ್ತಿಗೆ : ಸಂಸ್ಕೃತದಿಂದ ಕನ್ನಡಕ್ಕೆ ಅರ್ಥ ಹೇಳುವಲ್ಲಿ :
   ವದಸ್ವ = ಉಪದೇಶಿಸಿ ಹೇಳು
   ಕಥಯ = ಉಪದೇಶಿಸಿ ಹೇಳು
   ಬ್ರೂಯಾತ್ = ಉಪದೇಶಿಸಿ ಹೇಳು
   ಬ್ರೂಹಿ = ಉಪದೇಶಿಸಿ ಹೇಳು

9. (ವಿಧಿ) ಲಿಂಜ್‌ಲಕಾರದ ಕ್ರಿಯಾರೂಪಕ್ಕೆ ಕನ್ನಡದಲ್ಲಿ ಸಾಮಾನ್ಯ ಕ್ರಿಯಾರ್ಥವನ್ನೇ ಬಳಸಲಾಗಿದೆ.
   ಗಚ್ಛೇತ್ = ಹೋಗುವುದು
   ಭವೇತ್ = ಅಹುದು
   ಆಚರೇತ್ = ಆಚರಿಸುವುದು

10. ಓಲೆಯ ಕಟ್ಟಿನಲ್ಲಿ ಪ್ರತಿಸ್ಥಲದ ನಾಮನಿರ್ದೇಶನವನ್ನು ಮಗ್ಗುಲಲ್ಲಿ ಬರೆದಿದೆ.

11. ದೀಕ್ಷಾಪಾದೋದಕಸ್ಥಲದಲ್ಲಿ ಪು. 429-19ನೆಯ ಶ್ಲೋಕಾ ನಂತರದ

ಅಥವಾ ಪಾದಶಬ್ದೇನ ಗುರುರೇವ ನಿಗದ್ಯತೇ ।
ಶಿಷ್ಯಶ್ಚೋದಕಶಬ್ದೇನ ತಯೋರೈಕ್ಯಂ ತು ದೀಕ್ಷಯಾ ॥

ಜಂಗಮಮಾಹಾತ್ಮ್ಯಸ್ಥಲದಲ್ಲಿ ಪು. 245/11/37ನೆಯ ಶ್ಲೋಕಾ ನಂತರದ

ಘೋರಸಂಸಾರತಿಮಿರಪರಿಧ್ವಂಸನಕಾರಣಮ್ ।
ಯೇಷಾಮಸ್ತಿ ಶಿವಜ್ಞಾನಂ ತೇ ಮತಾಃ ಶಿವಯೋಗಿನಃ ॥

ಈ ಎರಡೂ ಶ್ಲೋಕಗಳು ಲಿಪಿಕಾರನ ಕಣ್ತಪ್ಪಿನಿಂದ ಬಿಟ್ಟಿರಬಹುದೆಂದು ತೋರುತ್ತದೆ.

ಹಸ್ತಪ್ರತಿಯ ಪ್ರಥಮ ಪರಿಚ್ಛೇದ, ಚತುರ್ದಶ ಪರಿಚ್ಛೇದ, ಪಂಚದಶ ಪರಿಚ್ಛೇದಗಳ ಅಂತ್ಯ ಪುಷ್ಪಿಕೆಗಳಲ್ಲಿ "ಸಿದ್ಧಾರ್ಥ ಸಂಬೋಧಿನೀ" ಎಂಬ ವ್ಯಾಖ್ಯಾನದ ಹೆಸರಿದ್ದರೂ ಗ್ರಂಥಾರಂಭದ-

ಸಿದ್ಧಾಂತಬೋಧಿನ್ಯಾಖ್ಯಾತಂ ಕುರ್ವೇ ಸತ್ಸ್ಫೂರ್ತಿತಃ ಪುನಃ ।
ಸಂತೋ ಭವಂತು ಸದಯಾ ಮುದಾ ಸಂಪ್ರತಿ ಮಾಂ ಪ್ರತಿ ।

ಎಂಬ ಶ್ಲೋಕದಲ್ಲಿನ ವ್ಯಾಖ್ಯಾನಕಾರರ 'ಸಿದ್ಧಾಂತಬೋಧಿನೀ' ಎಂಬ ಹೆಸರೇ ಹೆಚ್ಚು ಔಚಿತ್ಯಪೂರ್ಣವಾಗಿರುವುದರಿಂದ 'ಸಿದ್ಧಾಂತಬೋಧಿನೀ' ಎಂಬ ಹೆಸರನ್ನೇ ಉಳಿಸಿಕೊಳ್ಳಲಾಗಿದೆ.

ಅಲ್ಲಲ್ಲಿ 'ಗ್ರಂಥ ವಿಸ್ತಾರವಾದೀತೆಂದು ಸಂಮತಿಯ ಬರದುದಿಲ್ಲ' ಎಂಬ ಹೇಳಿಕೆಯಿಂದ 'ಸಂಮತಿ'ಯ ಶ್ಲೋಕಗಳನ್ನೊಳಗೊಂಡ ಮತ್ತೊಂದು ಮೂಲಪ್ರತಿ ಇರಬಹುದೆಂಬ ಶಂಕೆ ತಲೆದೋರುತ್ತದೆ. ಅದು ದೊರೆತರೆ ಹೆಚ್ಚು ಪ್ರಯೋಜನವಾದೀತು.

ಸಿದ್ಧಾಂತಶಿಖಾಮಣಿಯಲ್ಲಿ 'ಮೂಲಶ್ಲೋಕ'ಗಳಿಗೆ ಪರ್ಯಾಯವಾಗಿ 'ಗ್ರಂಥ' ಶಬ್ದದ ಬಳಕೆಯಾಗಿದೆ. ಆದ್ದರಿಂದ 'ಗ್ರಂಥ' ಎಂಬುದನ್ನು ಉಳಿಸಿಕೊಳ್ಳಲಾಗಿದೆ.

ಮೇಲಿನ ಈ ಏಕೈಕ ಹಸ್ತಪ್ರತಿಯು ಮೂಲವಾಗಿದ್ದರೂ ಇದರ ಪರಿಷ್ಕರಣ ಕಾರ್ಯಕ್ಕೆ ಮೈಸೂರು ವಿಶ್ವವಿದ್ಯಾಲಯದ ಪ್ರಾಚ್ಯವಿದ್ಯಾ ಸಂಸ್ಥೆಯಿಂದ ವಿದ್ವಾನ್ ಡಾ॥ ಹೆಚ್.ಪಿ. ಮಲ್ಲೇದೇವರ ಸಂಪಾದಕತ್ವದಲ್ಲಿ 1995ರಲ್ಲಿ ಪ್ರಕಟವಾಗಿರುವ ಶ್ರೀ ಮರಿತೋಂಟದಾರ್ಯರ "ತತ್ತ್ವಪ್ರದೀಪಿಕಾ" ವ್ಯಾಖ್ಯಾನವನ್ನು ಹಾಗೂ ಮೈಸೂರಿನ ಆತ್ಮವಿಚಾರ ಗ್ರಂಥಮಾಲೆಯ ಅಧ್ಯಕ್ಷರಾಗಿದ್ದ ಕೈ॥ ಶ್ರೀ ಎಂ.ಎಲ್. ನಾಗಣ್ಣನವರಿಂದ ಅನುವಾದಗೊಂಡ ಶ್ರೀಮರಿತೋಂಟದಾರ್ಯರ ಕರ್ಣಾಟಕ ಭಾಷೆಯ ಪ್ರತಿಯನ್ನೂ, 1959ರಲ್ಲಿ ಪ್ರಕಟಗೊಂಡ ಮೊದಲನೆಯ ಭಾಗ (ಒಂದರಿಂದ ಹತ್ತು ಪರಿಚ್ಛೇದಗಳು) ಮತ್ತು 1961ರಲ್ಲಿ ಪ್ರಕಟಗೊಂಡ ಎರಡನೆಯ ಭಾಗ (ಹನ್ನೊಂದನೆಯ ಪರಿಚ್ಛೇದದಿಂದ ಇಪ್ಪತ್ತೊಂದನೆಯ ಪರಿಚ್ಛೇದದವರೆಗಿನ)ವನ್ನು ಬಳಸಿಕೊಳ್ಳಲಾಗಿದೆ.

ಈ ಆವೃತ್ತಿಯನ್ನು ಪರಿಷ್ಕರಿಸುವಲ್ಲಿ ಯಾವ ಪೂರ್ವಗ್ರಹಪೀಡಿತ ಅಭಿನಿವೇಶಕ್ಕೊಳಗಾಗದೆ ಯಥಾವತ್ತಾದ ಮೂಲಗ್ರಂಥವನ್ನು ಸಹೃದಯ ವಿದ್ವಾಂಸರ, ಧರ್ಮಾಭಿಮಾನಿಗಳ ಮುಂದಿಡುತ್ತಿದ್ದೇನೆ. ಮುಕ್ತ ಮನಸ್ಸಿನಿಂದ 'ಶ್ರೀ ಸೋಸಲೆ ರೇವಣಾರಾಧ್ಯ'ರ ಈ ಸಿದ್ಧಾಂತಬೋಧಿನೀ ವ್ಯಾಖ್ಯಾನದಿಂದ ಇನ್ನು ಮುಂದಾದರೂ ಈ ಗ್ರಂಥದ ಬಗೆಗಿನ ವಾದ-ಪ್ರತಿವಾದಗಳನ್ನು ಬದಿಗೊತ್ತಿ ಇಲ್ಲಿಯವರೆಗೆ ಬಂದಿರುವ ಎಲ್ಲ ಪ್ರಕಟಿತ ಆವೃತ್ತಿಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿ ಮುಂದೆ ದೊರಕಬಹುದಾದ ಹಸ್ತಪ್ರತಿಗಳನ್ನು ಸಂಗ್ರಹಿಸಿ ಸಿದ್ಧಾಂತಶಿಖಾಮಣಿಯ ಮತ್ತೊಂದು ಆವೃತ್ತಿಯನ್ನು ಹೊರತರಬೇಕೆಂದು ವಿದ್ವಾಂಸ ಮಹನೀಯರಲ್ಲಿ ನನ್ನ ವಿನಮ್ರ ಪ್ರಾರ್ಥನೆ.

ಈ ಗ್ರಂಥ ಪ್ರಕಟಣೆಗೆ ಕೇಂದ್ರ ಸರಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯ ಸಚಿವಾಲಯವು ಉದಾರ ಧನ ಸಹಾಯವನ್ನು ನೀಡುವಲ್ಲಿ ಮಾರ್ಗದರ್ಶನವನ್ನು ನೀಡಿದ ಭಾರತೀಯ ಭಾಷಾ ಸಂಸ್ಥೆಯಲ್ಲಿ ಕನ್ನಡ ವಿಭಾಗದ ಪ್ರೊ. ಡಾ।। ಶ್ರೀ ಬಿ. ಮಲ್ಲಿಕಾರ್ಜುನ ಅವರಿಗೆ ಹಾಗೂ ಇದೇ ಸಂಸ್ಥೆಯ ಕನ್ನಡ ಪ್ರೊ. ಶ್ರೀ ಲಿಂಗದೇವರು ಹಳೇಮನೆ ಅವರಿಗೆ ನನ್ನ ಅನಂತ ನಮನಗಳು.

ಈ ಗ್ರಂಥವನ್ನು ತಮಗೆ ಅರ್ಪಣೆ ಮಾಡಬೇಕೆಂದು ಪ್ರಾರ್ಥಿಸಿದಾಗ ಒಪ್ಪಿ ಆಶೀರ್ವದಿಸಿದ ಪರಮಪೂಜ್ಯ ಡಾ।। ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಪಾದಾರವಿಂದಗಳಿಗೆ ಭಕ್ತಿಪೂರ್ವಕ ಪ್ರಣಾಮಗಳು.

ನನ್ನ ಸಂಪಾದಿತ ಎಲ್ಲಾ ಕೃತಿಗಳಿಗೂ 'ಮುನ್ನುಡಿ'ಯನ್ನು ಬರೆದು ಹರಸಿ ಆಶೀರ್ವದಿಸಿ ಗ್ರಂಥ ಸಂಪಾದನೆಯ ಕ್ಷೇತ್ರದಲ್ಲಿ ಹೆಚ್ಚು ಆಸಕ್ತಿಯನ್ನು ಮೂಡಿಸಿ ಈ ಗ್ರಂಥಕ್ಕೂ ಮೌಲಿಕವಾದ ಮುನ್ನುಡಿಯನ್ನು ಬರೆದು ಆಶೀರ್ವದಿಸಿದ, ಗ್ರಂಥ ಸಂಪಾದನಾ ಕ್ಷೇತ್ರದಲ್ಲಿ ಅಭೂತಪೂರ್ವವಾದ ಕೆಲಸವನ್ನು ಮಾಡಿರುವ, ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಪ್ರೊ. ಎನ್. ಬಸವಾರಾಧ್ಯ ಅವರಿಗೆ ಹೃತ್ಪೂರ್ವಕ ನಮನಗಳು.

ಗ್ರಂಥ ಸಂಪಾದನೆಯ ಸಮಯದಲ್ಲಿ ಸೂಕ್ತ ಸಲಹೆಗಳನ್ನು ನೀಡಿ ಗ್ರಂಥ ಹೊರಬರುವವರೆಗೂ ಆಸಕ್ತಿಯನ್ನು ತಳೆದು ಆಶೀರ್ವದಿಸಿದ ಮೈಸೂರಿನ ಕುಂದೂರು ಮಠಾಧ್ಯಕ್ಷರಾದ ಪೂಜ್ಯ ಶ್ರೀ ಡಾ।। ಇಮ್ಮಡಿ ಶಿವಬಸವ ಮಹಾಸ್ವಾಮಿಗಳ ಅಡಿದಾವರೆಗಳಿಗೆ ಅನಂತ ನಮನಗಳು.

ನನ್ನ ಬಂಧುಗಳೂ ತುಮಕೂರು ಜಿಲ್ಲೆಯ ಮಾಜಿ ಲೋಕಸಭಾ ಸದಸ್ಯರೂ ಆದ ಶ್ರೀ ಜಿ.ಎಸ್. ಬಸವರಾಜು, ಗಂಗಸಂದ್ರ ಇವರು ಈ ಗ್ರಂಥ ಪ್ರಕಟಣೆಯಲ್ಲಿ ಆಸಕ್ತಿಯನ್ನು ಹೊಂದಿ ಪ್ರೋತ್ಸಾಹಿಸಿದ್ದಾರೆ ಅವರಿಗೆ

ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಜನಪ್ರಿಯ ಶಾಸಕರೂ, ಸಾಹಿತ್ಯಾಭಿಮಾನಿಗಳೂ ಆದ ಶ್ರೀ ಜೆ.ಸಿ. ಮಾಧುಸ್ವಾಮಿಯವರು ಗ್ರಂಥ ಪ್ರಕಟಣೆಗೆ ನೆರವನ್ನಿತ್ತಿದ್ದಾರೆ ಅವರಿಗೆ

ಈ ಗ್ರಂಥ ಪ್ರಕಟಣೆಯಲ್ಲಿ ಹೆಚ್ಚು ಆಸಕ್ತಿಯನ್ನು ತೋರಿ ಕೊನೆಯವರೆಗೂ ಪ್ರೋತ್ಸಾಹಿಸಿ ಗ್ರಂಥ ಪ್ರಕಟಣೆಗೆ ನೆರವು ನೀಡಿದ ತುಮಕೂರಿನ ಪ್ರಸಿದ್ಧ ವರ್ತಕರೂ ಮತ್ತು ಸಂಸ್ಕೃತಿ, ಸಾಹಿತ್ಯಗಳ ಅಭಿವೃದ್ಧಿಯ ಬಗ್ಗೆ, ಸಮಾಜದ ಬಗ್ಗೆ, ಹೆಚ್ಚು ಕಾಳಜಿಯನ್ನು ಹೊಂದಿರುವ ವಿದ್ವಾನ್ ಶ್ರೀ ಟಿ.ಕೆ. ನಂಜುಂಡಪ್ಪನವರಿಗೆ,

ಸದಾಕಾಲದಲ್ಲಿಯೂ ಧರ್ಮಕಾರ್ಯಗಳಲ್ಲಿ ನಿರತರಾಗಿ ಧರ್ಮಕಾರ್ಯಗಳಿಗೆ ನೆರವು ನೀಡುತ್ತಿರುವ ತುಮಕೂರು ಜಿಲ್ಲಾ ಹೋಟೆಲು ಮತ್ತು ಉಪಹಾರ ಮಂದಿರಗಳ ಅಧ್ಯಕ್ಷರೂ, ಶ್ರೀ ನಂಜುಂಡೇಶ್ವರ ಹೋಟೆಲು ಮತ್ತು ಉಪಹಾರ ಮಂದಿರಗಳ ಮಾಲೀಕರೂ ಆದ ಕೈ।। ವೇದಮೂರ್ತಿ ಶ್ರೀ ವೀರಭದ್ರಯ್ಯ ಮತ್ತು ಶ್ರೀಮತಿ ದೇವೀರಮ್ಮ ಪುತ್ರರಾದ ಶ್ರೀ ಸಿ.ವಿ. ಮಹದೇವಯ್ಯನವರಿಗೆ,

ಸಮಾಜದ ಬಗ್ಗೆ ಅದರಲ್ಲಿಯೂ ಯುವಜನದ ಬಗ್ಗೆ ಚಿಂತಿಸುವ, ಧರ್ಮದ ಉಳಿವಿನ ಬಗ್ಗೆ ಯೋಚಿಸುವ, ಸಾಮಾಜಿಕ, ಸಾಂಸ್ಕೃತಿಕ ಅಭಿವೃದ್ಧಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕಿನ ಸಾಗರನಹಳ್ಳಿ ನಿವೃತ್ತ ಇಂಜಿನಿಯರ್ ಶ್ರೀ ಎಸ್. ಮಹದೇವಯ್ಯನವರಿಗೆ ನಾನು ಆಭಾರಿಯಾಗಿದ್ದೇನೆ.

ಉಪ ನಿರ್ದೇಶಕರು ಹಾಗೂ ಅವರ ಕಛೇರಿಯ ಸಿಬ್ಬಂದಿ ವರ್ಗದವರು, ಕೇಂದ್ರೀಯ ಭಾರತೀಯ ಭಾಷಾ ಸಂಸ್ಥೆ (ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆ ಸಚಿವಾಲಯ, ಸೆಕೆಂಡರಿ ಮತ್ತು ಉನ್ನತ ಶಿಕ್ಷಣ ಇಲಾಖೆ, ಭಾರತ ಸರ್ಕಾರ), ಮಾನಸ ಗಂಗೋತ್ರಿ, ಮೈಸೂರು ಇವರಿಗೆ ಹೃತ್ಪೂರ್ವಕ ವಂದನೆಗಳು.

ಗುಬ್ಬಿ ತಾಲ್ಲೂಕ್, ಎನ್. ರಾಂಪುರದ ಜಮೀನ್ದಾರ್ ಶ್ರೀ ಆರ್. ಷಣ್ಮುಖಯ್ಯ ಇವರು ಗ್ರಂಥ ಪ್ರಕಟಣೆಗೆ ನೆರವಾಗಿದ್ದಾರೆ. ಇವರಿಗೆ,

ಅನವದಾನ, ಆಲಸ್ಯ, ಕಣ್ತಪ್ಪಿನಿಂದಾದ ಮುದ್ರಣ ದೋಷಗಳು ಹಾಗೂ ಪ್ರಾಚೀನ ವಾಕ್ಯಗಳಲ್ಲಿರಬಹುದಾದ ತಪ್ಪುಗಳನ್ನು ಸಹೃದಯ ವಾಚಕರು ತಿದ್ದಿಕೊಳ್ಳಬೇಕೆಂದು ವಿನಮ್ರ ನಿವೇದನೆ.

ಈ ಪುಸ್ತಕದ ಪ್ರಕಟಣೆಯ ಭಾರವನ್ನು ಹೊತ್ತಿರುವ ಶ್ರೀ ಡಿ.ಎಸ್. ಶಂಕರಕುಮಾರ್, ಬಿ.ಎ., ಅವರಿಗೆ,

ಈ ಗ್ರಂಥವನ್ನು ಅಂದವಾಗಿ ಬೆರಳಚ್ಚು ಮಾಡಿಸಿಕೊಟ್ಟ ತುಮಕೂರಿನ `ಬೆನಕ ಡಿ.ಟಿ.ಪಿ. ಕಾಟೇಜ್'ನ ಮಾಲೀಕರಾದ ಶ್ರೀ ಕೆ.ಎಸ್. ಸತೀಶ್ ಮತ್ತು ಅವರ ಸಹೋದ್ಯೋಗಿಗಳಾದ ಸುಜಾತ ಮತ್ತು ಸುಮಾ ಇವರಿಗೆ,

ಇಳಾ ಪ್ರಿಂಟರ್ಸ್‌ನ ಮಾಲೀಕರಾದ ಶ್ರೀ ಗುರುಮೂರ್ತಿಯವರಿಗೆ, ಈ ಗ್ರಂಥವನ್ನು ಸುಂದರವಾಗಿ ಹಾಗೂ ಸಕಾಲಕ್ಕೆ ಮುದ್ರಿಸಿಕೊಟ್ಟು ಉಪಕರಿಸಿದ ಇಳಾ ಕಾರ್ಮಿಕ ಬಂಧುಗಳಿಗೆ ಕೃತಜ್ಞತೆಗಳು.

**ನ ಕ್ರಿಯಾರಹಿತಂ ಜ್ಞಾನಂ ನ ಜ್ಞಾನರಹಿತಾ ಕ್ರಿಯಾ ।**
**ಅಪಶ್ಯನ್ ಅಂಧಕೋ ದಗ್ಧೋಽಗಚ್ಛನ್ ಪಂಗುಶ್ಚ ದಹ್ಯತೇ ॥**

ಸ್ಥಳ : ಲಕ್ಕೇನಹಳ್ಳಿ
ದಿನಾಂಕ : 6-11-2004

ಡಿ. ಸಿದ್ಧಗಂಗಯ್ಯ
ಸಂಪಾದಕ

ಓಂ ಶ್ರೀ ಗುರುಬಸವಲಿಂಗಾಯ ನಮಃ

ಶ್ರೀ ಶಿವಯೋಗಿ ಶಿವಾಚಾರ್ಯ ವಿರಚಿತಃ

# ಸಿದ್ಧಾಂತಶಿಖಾಮಣಿಃ

ಸೋಸಲೆ ಶ್ರೀ ರೇವಣಾರಾಧ್ಯವಿರಚಿತ ಸಿದ್ಧಾಂತಬೋಧಿನೀ ವ್ಯಾಖ್ಯಾ ಸಹಿತಮ್

ಅಂಗಸ್ಥಲ ನಿರೂಪಣಾತ್ಮಕಃ ಪೂರ್ವಭಾಗಃ ॥

ಯಃ ಸೋಮೇಶ್ವರಲಿಂಗಭೂಸ್ತ್ರಿಜಗತಾಂ[ಯಂ]ದೇಶಿಕೇಂದ್ರಂ [ವಿದುಃ]
[ಯೇನಾ]ಬೋಧಿ ಸ ಕುಂಭಸಂಭವಮುನಿರ್ಯಸ್ಮೈ ನಮಸ್ಕುರ್ವತೇ ।
ಯಸ್ಮಾದ್ದೀಪ್ಯತಿ ವೀರಶೈವಸಮಯೋ ಯಸ್ಯಾಮೃತಂ ಪೂಜಯಾ
ಯಸ್ಮಿನ್ ಲಿಂಗನಿಜೈಕ್ಯತಾ ತ್ವಮವ ಸ ಶ್ರೀರೇಣುಕಾಚಾರ್ಯ ಮಾಮ್ ॥

ತ್ರಯೀತಂತ್ರಸತ್ತ್ವಂ ದೃಢಾಶ್ವಾಸಮೇನಂ ಶಿವಾದ್ವೈತಸಾಕಾರಸಿದ್ಧಾಂತಸಿದ್ಧಮ್ ।
ಸ್ಫುರದ್ವೀರಶೈವಾಯನಂ ಷಟ್ಸ್ಥಲಸ್ಥಂ ಯಮೀಂದ್ರಂ ಭಜೇ ರೇಣುಕೇಂದ್ರಂ ಗಣೇಂದ್ರಮ್ ॥

ರೇಣುಕೇಶ್ವರ ನಮೋ ಮಮಾಸ್ತು ತೇ ಲಿಂಗಜಂಗಮಗುರುಸ್ವರೂಪಿಣೇ ।
ಚಿತ್ತವಾಣಿಸುತನೂರ್ಭಜಸ್ವ ಮೇ ಚಿಂತನೇನ ನುತಿನಾ ಸುಪೂಜಯಾ ॥

ವಂದೇ ಸಾಂಖ್ಯಂ ಪರಬ್ರಹ್ಮ ಶಿವಲಿಂಗಾಖ್ಯಮೀಶ್ವರಮ್ ।
ಶಾಂತಮಲ್ಲೇಶ್ವರಂ ವೇದತಂತ್ರಷಟ್ಸ್ಥಲವರ್ಧಕಮ್ ॥

ನಮಾಮ್ಯಸಂಖ್ಯಮಾಯಂ ಮಾ ಚಿಚ್ಛಕ್ತ್ಯಾಖ್ಯಾ ಚಿದೀಶ್ವರಮ್ ।
ಶಾಂತಮಲ್ಲೇಶ್ವರಂ ವೇದಾಗಮ ಷಟ್ಸ್ಥಲ ಶೀರ್ಷಗಮ್ ॥

ವೀರಭದ್ರಾಯ ಭದ್ರಾಯ ವೃಷಾಯ ವೃಷಭಾಯ ಚ ।
ಭೃಂಗಯೇ ತುಂಗಮವ್ಯಯೇ ಪ್ರಭುಪ್ರಭೃತಯೇ ನಮಃ ॥

ಪಿಪೀಲಿಕಾಮರ್ಕಟಪಕ್ಷಿಗತ್ಯಾ ಸ್ನೇಹೇನ ಗೋಮತ್ಸ್ಯಕಕಚ್ಛಪಾನಾಮ್ ।
ಯೇ ವೀರಶೈವಾ ಭುವಿ ಷಟ್ಸ್ಥಲಾಢ್ಯ ಲಿಂಗಾಂಗಸಂಬಂಧಯುಜೋ ನುಮಸ್ತಾನ್ ॥

ಶ್ರೀರೇಣುಕಕುಲಖ್ಯಾತಾನ್ಪಂಚಲಿಂಗಾತ್ಮಕಾನ್ಕ್ರಮಾತ್ ।
ಶ್ರೀವಿಶ್ವನಾಥಾದಿವಾರಣಾಸೀಶಾನ್ ಸರ್ವದೇಶಿಕಾನ್ ॥

ನತ್ವಾ ಶ್ರೀವೀರಣಾರಾಧ್ಯಂ ರೇವಣಾಸಿದ್ಧಯೋಗಿನಮ್ ॥
ಟೀಕಾಂ ಕುರ್ವೇ ರೇವಣಾರ್ಯಃ ಶ್ರೀ ಸಿದ್ಧಾಂತಶಿಖಾಮಣೇಃ ॥

ಸಕಲಸಮಯಮೂರ್ದ್ಧಾಮಾಯತಂತ್ರೋರ್ಧ್ವಭಾಗಮ್
ಪರಮವನಿತಲೈಕಂ ವೀರಶೈವಾದಿಶಾಸ್ತ್ರಮ್ ।
ಇಮಮಹಮಪಿ ಕುರ್ವೇ ವೀರಣಾರ್ಯಸ್ಯ ಪೌತ್ರಃ
ಶಿವಯಮಿಷು ಸುಟೀಕಾಂ ರೇವಣಃ ಸಿದ್ಧಸೂನುಃ ॥

ಭೋಗಮಲ್ಲೇಶ ಹಸ್ತಾಬ್ಜ[ಜಾತಃ] ಸಿದ್ಧವೃಷೇಶ್ವರಃ ।
ಮಯಾ ಟೀಕಾಂ ಕಾರಯತಿ ಶ್ರೀಸಿದ್ಧಾಂತಶಿಖಾಮಣೇಃ ॥

ಸಿದ್ಧಾಂತಬೋಧಿನ್ಯಾಖ್ಯಾತಂ ಕುರ್ವೇ ಸತ್ಸೂಕ್ತಿತಃ ಪುನಃ ।
ಸಂತೋ ಭವಂತು ಸದಯಾ ಮುದಾ ಸಂಪ್ರತಿ ಮಾಂ ಪ್ರತಿ ॥

* ಕಲಿಕಾಲ ಪ್ರವೇಶಾನಂತರದಲ್ಲಿ ರೇಣುಕಗಣೇಶ್ವರನೆಂದು ಪ್ರಸಿದ್ದವಾದ ರೇವಣಾಸಿದ್ಧೇಶ್ವರನು ಕುಂಭಸಂಭವನಿಗೆ ಬೋಧಿಸಿದ ವೀರಶೈವ ಶಾಸ್ತ್ರದ ಬೋಧಾನಂತರದಲ್ಲಿ ಆ ರೇವಣಾಸಿದ್ಧೇಶ್ವರನ ದೃಷ್ಟಿಗರ್ಭಸಂಭವನಾದ ಸಿದ್ಧರಾಮೇಶ್ವರನ ಸಾಂಪ್ರದಾಯ ಪ್ರಸಿದ್ಧವಾದ ಸಕಲನಿಗಮಾಗಮ ಪಾರಂಗತನಾದ ಶಿವಯೋಗೀಶ್ವರನೆಂಬಾಚಾರ್ಯನು ಆ ರೇಣುಕಾಗಸ್ತ್ಯ ಸಂವಾದವನು ತನ್ನ ಶಿಷ್ಯರುಗಳಿಗೆ ಬೋಧಿಸಲೋಸುಗವಾಗಿ ಸಪ್ತಶ್ಲೋಕಂಗಳಿಂದೆ ಸಮಸ್ತ ಸಮಯಶಾಸ್ತ್ರಂಗಳಿಗುತ್ತರವಾದ ನಿಗಮಾಗಮವಾಕ್ಯವನು ಗರ್ಭೀಕರಿಸಿ ಇಷ್ಟದೇವತಾ ನಮಸ್ಕಾರಮಂ ಮಾಡುತ್ತಿರ್ದಪಂ.

**ಶಿವಸ್ತುತಿಃ**

**ಗ್ರಂಥ॥** ತ್ರೈಲೋಕ್ಯಸಂಪದಾಲೇಖ್ಯಸಮುಲ್ಲೇಖನಭಿತ್ತಯೇ ।
ಸಚ್ಚಿದಾನಂದರೂಪಾಯ ಶಿವಾಯ ಬ್ರಹ್ಮಣೇ ನಮಃ ॥

**ಟೀಕು॥** ತ್ರೈಲೋಕ್ಯ=ಸ್ವರ್ಗ ಮರ್ತ್ಯ ಪಾತಾಳವೆಂಬ ಮೂರುಲೋಕಂಗಳ, ಸಂಪದಾಲೇಖ್ಯ=ಮಾಯಾವಿಲಾಸರೂಪವಾದ ಸಂಪತ್ತೆಂಬ ಚಿತ್ರವನು, ಸಮುಲ್ಲೇಖನ=ಬರವುದಕ್ಕೆ ಭಿತ್ತಯೇ=ಆಧಾರಭಿತ್ತಿಯಾದ, ಸಚ್ಚಿದಾನಂದರೂಪಾಯ=ಸತ್ತುಚಿತ್ತಾನಂದ ಸ್ವರೂಪವಾದ, ಬ್ರಹ್ಮಣೇ=ವೇದಾಂತ ಸಿದ್ಧವಾದ ಪರಬ್ರಹ್ಮವೆಂಬ ಸಂಜ್ಞೆಯುಳ್ಳ, ಶಿವಾಯ=ಸಿದ್ಧಾಂತ ಪ್ರಸಿದ್ಧವಾದ ಪರಶಿವನಿಗೋಸುಗ, ನಮಃ=ನಮಸ್ಕಾರವು. ॥೧॥

**ಗ್ರಂಥ॥** ಬ್ರಹ್ಮೇತಿ ವ್ಯಪದೇಶಸ್ಯ ವಿಷಯಂ ಯಂ ಪ್ರಚಕ್ಷತೇ ।
ವೇದಾಂತಿನೋ ಜಗನ್ಮೂಲಂ ತಂ ನಮಾಮಿ ಪರಂ ಶಿವಮ್ ॥

**ಟೀಕು||** ಬ್ರಹ್ಮೇತಿ=ಪರಬ್ರಹ್ಮವೆಂಬ, ವ್ಯಪದೇಶಸ್ಯ='ಲಕ್ಷ್ಯೇಸೋಽಯಮಾತ್ಮಾ ಬ್ರಹ್ಮ' ವೆಂಬ ಶ್ರುತಿಯಿಂದೆ ಸಿದ್ಧವಾದ ಆವನಾನೊರ್ವ ಪರಮಾತ್ಮನನು, ವಿಷಯಂ=ವಿಷಯವನಾಗಿ, ವೇದಾಂತಿನಃ=ವೇದಾಂತಜ್ಞಾನಿಗಳು, ಪ್ರಚಕ್ಷತೇ=ಹೇಳುತ್ತಿರ್ದಪರು. ಜಗನ್ಮೂಲಂ=ಜಗತ್ತಿಗೆ ಮೂಲಕಾರಣವಾದ, ಪರಂ ಶಿವಂ=ಪರಮ ಶಿವಾಗಮಸಿದ್ಧಾಂತವಾದ, ತಂ=ಆ ಪರಶಿವನನಂ, ಅಹಂ=ನಾನು, ನಮಾಮಿ=ನಮಸ್ಕರಿಸುತ್ತಿದ್ದೇನು. ||೨||

ಗ್ರಂಥ|| ಯಸ್ಯೋರ್ಮಿಬುದ್ಬುದಾಭಾಸಃ ಷಟ್ತ್ರಿಂಶತ್ತತ್ತ್ವಸಂಚಯಃ ।
ನಿರ್ಮಲಂ ಶಿವನಾಮಾನಂ ತಂ ವಂದೇ ಚಿನ್ಮಹೋದಧಿಮ್ ॥

**ಟೀಕು||** ಷಟ್ತ್ರಿಂಶತ್ತತ್ತ್ವಸಂಚಯಃ=ಶಿವತತ್ತ್ವಾದಿ ಪೃಥಿವ್ಯಾಂತವಾದ ಮೂವತ್ತಾರು ತತ್ತ್ವಂಗಳ ಸಮೂಹವು, ಯಸ್ಯ=ಆವುದಾನೊಂದು ಪರಶಿವನೆಂಬ ಸಮುದ್ರಕ್ಕೆ, ಊರ್ಮಿಬುದ್ಬುದಾಭಾಸಃ= ಘೃತಕಾಠಿನ್ಯನ್ಯಾಯದಿಂದ ಏಕದೇಶದಲ್ಲಿ ತೆರೆಬೊಬ್ಬುಳಿಕೆಗಳೋಪಾದಿಯಲ್ಲಿ ಒಪ್ಪುತ್ತಿರ್ದಪುದು. ನಿರ್ಮಲಂ=ಮಲರಹಿತವಾದ, ಶಿವನಾಮಾನಂ=ಪರಮಶಿವನೆಂಬ ಹೆಸರನುಳ್ಳ, ತಂ ಚಿನ್ಮಹೋದಧಿಂ=ಆ ಚಿತ್ತೆಂಬ ಮಹಾಸಮುದ್ರವನು, ಅಹಂ=ನಾನು, ವಂದೇ=ನಮಸ್ಕರಿಸುತ್ತಿರ್ದಪೆನು. ||೩||

ಗ್ರಂಥ|| ಯದ್ಭಾಸಾ ಭಾಸತೇ ವಿಶ್ವಂ ಯತ್ಸುಖೇನಾನುಮೋದತೇ ।
ನಮಸ್ತಸ್ಮೈ ಗುಣಾತೀತವಿಭವಾಯ ಪರಾತ್ಮನೇ ॥

**ಟೀಕು||** ವಿಶ್ವಂ=ಸಮಸ್ತ ಜಗತ್ತು "ಯದ್ಭಾಸಾ ತಸ್ಯ ಭಾಸಾ ಸರ್ವಮಿದಂ ವಿಭಾತಿ" ಯೆಂಬ ಶ್ರುತಿಯುಂಟಾಗಿ, ಯತ್=ಆವುದಾನೊಂದು ಪರಬ್ರಹ್ಮದ, ಭಾಸಾ=ತೇಜಸ್ಸಿನಿಂದವೆ, ಭಾಸತೇ=ಪ್ರಕಾಶಿಸುತ್ತಿರ್ದಪುದು. ಯತ್ಸುಖೇನ= "ಆನಂದಂ ಆತ್ಮಾ"ಯೆಂಬ ಶ್ರುತಿಯುಂಟಾಗಿ ಆವನಾನೊರ್ವ ಪರಶಿವನು, ಸುಖೇನ=ಸುಖದಿಂದೆ, ವಿಶ್ವಂ=ಸಮಸ್ತವು, ಅನುಮೋದತೇ= ಬಳಿವಿಡಿದು ಸಂತೋಷಿಸುತ್ತಿರ್ದಪುದು.ಗುಣಾತೀತವಿಭವಾಯ="ಗುಣಾತೀತೋಽಪಿಶಃ"ಯೆಂಬ ಶ್ರುತಿಯುಂಟಾಗಿ ಚಿಂತಾಮಣಿವಾಕ್ಯವುಂಟಾಗಿ ಗುಣತ್ರಯಾತೀತವಾದ ಸಂಪತ್ತಿಯುಳ್ಳ, ಪರಾತ್ಮನೇ=ಪರಮಾತ್ಮನೆಂಬ ಸಂಜ್ಞೆಯುಳ್ಳ, ತಸ್ಮೈ=ಆ ಪರಶಿವಗೋಸುಗ, ನಮಃ=ನಮಸ್ಕಾರವು ||೪||

ಗ್ರಂಥ|| ಸದಾಶಿವಮುಖಾಶೇಷತತ್ತ್ವೋನ್ಮೇಷವಿಧಾಯಿನೇ ।
ನಿಷ್ಕಲಂಕಸ್ವಭಾವಾಯ ನಮಶ್ಯಾಂತಾಯ ಶಂಭವೇ ॥

**ಟೀಕು||** ಸದಾಶಿವಮುಖಾಶೇಷತತ್ತ್ವೋನ್ಮೇಷವಿಧಾಯಿನೇ=ಸದಾಶಿವತತ್ತ್ವವೇ ಮೊದಲಾಗುಳ್ಳ ಪೃಥಿವ್ಯಾಂತ ಸಮಸ್ತ ತತ್ತ್ವಂಗಳ ವಿಕಸನವ ಮಾಡುತ್ತಿರ್ದ, ನಿಷ್ಕಲಂಕ ಸ್ವಭಾವಾಯ=ಕಲಂಕರಹಿ

ತವಾದ ಸ್ವಭಾವವುಳ್ಳ, ಶಾಂತಾಯ=ರಾಗದ್ವೇಷರಹಿತನಾದ, ಶಂಭವೇ=ಶಂಭುವಿಗೋಸುಗ, ನಮಃ=ನಮಸ್ಕಾರವು. ||೫||

ಗ್ರಂಥ|| ಸ್ವೇಚ್ಛಾವಿಗ್ರಹಯುಕ್ತಾಯ ಸ್ವೇಚ್ಛಾವರ್ತನವರ್ತಿನೇ ।
ಸ್ವೇಚ್ಛಾಕೃತತ್ರಿಲೋಕಾಯ ನಮಸ್ಸಾಂಬಾಯ ಶಂಭವೇ ॥

**ಟೀಕು||** ಸ್ವೇಚ್ಛಾವಿಗ್ರಹಯುಕ್ತಾಯ="ಸ್ಥಿರೇಭಿರಂಗೈಃ ಪುರುಹೂತ ಉಗ್ರಃ" ಯೆಂಬ ಶ್ರುತಿಯುಂಟಾಗಿ ತನ್ನಿಚ್ಛೆಗೆ ಬಂದ ಶರೀರದೊಡನೆ ಕೂಡಿರ್ದ್ದ, ಸ್ವೇಚ್ಛಾವರ್ತನವರ್ತಿನೇ=ಸ್ವೇಚ್ಛಾವೃತ್ತಿಯಲ್ಲಿ ವರ್ತಿಸುತ್ತಿರ್ದ್ದ, ಸ್ವೇಚ್ಛಾಕೃತತ್ರಿಲೋಕಾಯ=ಸ್ವೇಚ್ಛೆಯಿಂದ ಮಾಡಲ್ಪಟ್ಟ ಮೂರುಲೋಕಂಗಳುಳ್ಳ, ಸಾಂಬಾಯ=ಪಾರ್ವತಿಯೊಡನೆ ಕೂಡಿ ವರ್ತಿಸುತ್ತಿರ್ದ್ದ, ಶಂಭವೇ=ಪರಶಿವನಿಗೋಸುಗ, ನಮಃ=ನಮಸ್ಕಾರವು. ||೬||

ಗ್ರಂಥ|| ಯತ್ರ ವಿಶ್ರಾಮ್ಯತೀಶತ್ವಂ ಸ್ವಾಭಾವಿಕಮನುತ್ತಮಮ್ ।
ನಮಸ್ತಸ್ಮೈ ಮಹೇಶಾಯ ಮಹಾದೇವಾಯ ಶೂಲಿನೇ ॥

**ಟೀಕು||** ಯತ್ರ=ಆವುದಾನೊಂದು ಸಿದ್ಧಾಂತವಾದ ಪರಬ್ರಹ್ಮ ಪರಶಿವನೆಂಬ ಸಂಜ್ಞೆಯುಳ್ಳ ಘನವಸ್ತುವಿನಲ್ಲಿ, ಅನುತ್ತಮಂ=ಶ್ರೇಷ್ಠವಾದ, ಸ್ವಾಭಾವಿಕಂ=ಸ್ವಭಾವಸಿದ್ಧವಾದ, ಈಶತ್ವಂ=ಉಮಾಮಹೇಶ್ವರನಹತನವು, ವಿಶ್ರಾಮ್ಯತಿ=''ಘೃತಕಾಠಿನ್ಯವನ್ಮೂರ್ತಿಃ ಸಚ್ಚಿದಾನಂದ ಲಕ್ಷಣಾ ಶಿವಾಭಿಧೇನ ಸೈವಾಸ್ತಿ ಶಿವ ಏವ ಹಿ ಸಾ ಸದಾ ॥ ''ಯೆಂಬ ಸೂತಗೀತೋಕ್ತಿಯುಂಟಾಗಿ ವಿಶ್ರಮಿಸುತ್ತಿರ್ದ್ದಪುದು. ಶೂಲಿನೇ=ತ್ರಿಶೂಲವುಳ್ಳ, ಮಹಾದೇವಾಯ=ಮಹಾದೇವನೆಂಬ ನಾಮವುಳ್ಳ, ತಸ್ಮೈ ಮಹೇಶಾಯ=ಆ ಮಹೇಶ್ವರನಿಗೋಸುಗ, ನಮಃ=ನಮಸ್ಕಾರವು.

**ತಾತ್ಪರ್ಯ||** ಈ ಸಪ್ತ ಶ್ಲೋಕಂಗಳಿಂದೆ ಪ್ರತಿಪಾದಿಸಲ್ಪಟ್ಟ ವಸ್ತುವು "ತತ್ಪರಂ ಬ್ರಹ್ಮ ಸ ಏಕಃ, ಸ ಏಕೋ ರುದ್ರಃ, ಸ ಈಶಾನಃ, ಸ ಭಗವಾನ್, ಸ ಮಹೇಶ್ವರಃ, ಸ ಮಹಾದೇವಃ" ಯೆಂಬ ಅಥರ್ವಶಿರಸ್ಸಿನಿಂದೆಪೊಂದೆಯೆಂದು ಶಿವಾದ್ವೈತಜ್ಞಾನಿಗಳು ನಿಶ್ಚೈಸುವುದು. ||೭||

ಈ ಪ್ರಕಾರದಿಂದಾಚಾರ್ಯನು ಸಂಗ್ರಹಾರ್ಥವನು ಗರ್ಭೀಕರಿಸಿ ಪರಮಶಿವನ ನಮಸ್ಕಾರಮಂ ಮಾಡಿ ಈಗ ಹಾಗೆಯೆ ವೇದಾಗಮ ಸಿದ್ಧವಾದ ಪರಮಶಿವಸಮವೇತಶಕ್ತಿಯನು ಪಂಚಶ್ಲೋಕಂಗಳಿಂದೆ ನಮಸ್ಕರಿಸುತ್ತಿರ್ದ್ದಪಂ.

**ಶಕ್ತಿಸ್ತುತಿಃ**

**ಗ್ರಂಥ||** **ಯಾಮಾಹುಃ ಸರ್ವಲೋಕಾನಾಂ ಪ್ರಕೃತಿಂ ಶಾಸ್ತ್ರಪಾರಗಾಃ ।**
**ತಾಂ ಧರ್ಮಚಾರಿಣೀಂ ಶಂಭೋಃ ಪ್ರಣಮಾಮಿ ಪರಾಂ ಶಿವಾಮ್ ॥**

**ಟೀಕು||** ಶಾಸ್ತ್ರಪಾರಗಾಃ=ವೇದಾಗಮಶಾಸ್ತ್ರಪಾರಂಗತರಾದ ಜ್ಞಾನಿಗಳು, ಯಾಂ=ಆವಳಾಳೊರ್ವ ಪರಶಿವಸಮವೇತಶಕ್ತಿಯನು, ಸರ್ವಲೋಕಾನಾಂ=ಸಮಸ್ತ ಲೋಕಂಗಳಿಗೆ, ಪ್ರಕೃತಿಂ=ಮೂಲಪ್ರಕೃತಿಯನಾಗಿ, ಆಹುಃ=ಹೇಳುತ್ತಿರ್ದಪರು. ಶಂಭೋಃ=ಪರಮೇಶ್ವರನ, ಧರ್ಮಚಾರಿಣೀಂ=ಪತ್ನಿಯಾದ, ಪರಾಂ=ಸರ್ವೋತ್ಕೃಷ್ಟೆಯಾದ, ತಾಂ ಶಿವಾಂ= ಆ ಪಾರ್ವತಿದೇವಿಯನು, ಅಹಂ=ನಾನು, ಪ್ರಣಮಾಮಿ=ನಮಸ್ಕರಿಸುತ್ತಿರ್ದಪೆನು. ||೮||

**ಗ್ರಂಥ||** **ಯಯಾ ಮಹೇಶ್ವರಶ್ಶಂಭುರ್ನಾಮರೂಪಾದಿಸಂಯುತಃ ।**
**ತಸ್ಯೈ ಮಾಯಾಸ್ವರೂಪಾಯೈ ನಮಃ ಪರಮಶಕ್ತಯೇ ॥**

**ಟೀಕು||** ಮಹೇಶ್ವರಃ=ಸಮಸ್ತಲೋಕಂಗಳಿಗೊಡೆಯನಾದ, ಶಂಭುಃ=ಪರಮೇಶ್ವರನು, ಯಯಾ='ಶಕ್ತ್ಯಾ ಯಯಾ ಸ ಶಂಭುರ್ಭುಕ್ತೌ ಮುಕ್ತೌ ಚ ಪಶುಗಣಸ್ಯಾಸ್ಯ'ಯೆಂಬ ತತ್ತ್ವ ಪ್ರಕಾಶವುಂಟಾಗಿ ಆವಳಾಳೊರ್ವ ಸಮವೇತ ಶಕ್ತಿಯಿಂದೆ, ನಾಮರೂಪಾದಿಸಂಯುತಃ=ನಾಮ ರೂಪು ಮೊದಲಾದ ಗುಣಂಗಳೊಡನೆ ಕೂಡಿದ್ದಾತನು, ಮಾಯಾಸ್ವರೂಪಾಯೈ="ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್"|| ಯೆಂಬ ಶ್ರುತಿಯುಂಟಾಗಿ ಮಹಾಮಾಯಾ ಸ್ವರೂಪವಾದ, ತಸ್ಯೈ ಪರಮಶಕ್ತಯೇ=ಆ ಪರಶಿವಶಕ್ತಿಗೋಸುಗ, ನಮಃ=ನಮಸ್ಕಾರವು. ||೯||

**ಗ್ರಂಥ||** **ಶಿವಾದ್ಯಾದಿಸಮುತ್ಪನ್ನಶಾಂತ್ಯತೀತಪರೋತ್ತರಾಮ್ ।**
**ಮಾತರಂ ತಾಂ ಸಮಸ್ತಾನಾಂ ವಂದೇ ಶಿವಕರೀಂ ಶಿವಾಮ್ ॥**

**ಟೀಕು||** ಶಿವಾತ್=ಪರಶಿವನದೆಸೆಯಿಂದೆ, ಆದ್ಯಾದಿಸಮುತ್ಪನ್ನ=ಪಟಗತಶುಕ್ಲತ್ವದೋಪಾದಿಯಲ್ಲಿ ಮೊದಮೊದಲೆ ಪುಟ್ಟಿರ್ದ್ದ, ಶಾಂತ್ಯತೀತ=ನಿವೃತ್ತಿ ಪ್ರತಿಷ್ಠೆ ವಿದ್ಯೆ ಶಾಂತಿ ಶಾಂತ್ಯತೀತವೆಂಬ ಕಲೆಗಳಿಗೆ, ಪರಾ=ಶ್ರೇಷ್ಠವಾದ ಕುಂಡಲಿನಿದೆಸೆಯಿಂದೆ, ಉತ್ತರಾಂ=ಶ್ರೇಷ್ಠವಾದ, ಸಮಸ್ತಾನಾಂ=ಸಕಲಕ್ಕೂ, ಮಾತರಂ=ತಾಯಿಯಾಗಿರ್ದ್ದ, ಶಿವಕರೀಂ=ಮಂಗಳವನು ಮಾಡುತ್ತಿರ್ದ್ದ, ತಾಂ ಶಿವಾಂ=ಆ ಪಾರ್ವತಿದೇವಿಯನು, ಅಹಂ=ನಾನು, ವಂದೇ=ನಮಸ್ಕರಿಸುತ್ತಿರ್ದ್ದಪೆನು. ||೧೦||

**ಗ್ರಂಥ||** **ಇಚ್ಛಾಜ್ಞಾನಾದಿರೂಪೇಣ ಯಾ ಶಂಭೋರ್ವಿಶ್ವಭಾವಿನೀ ।**
**ವಂದೇ ತಾಂ ಪರಮಾನಂದಪ್ರಬೋಧಲಹರೀಂ ಶಿವಾಮ್ ॥**

**ಟೀಕು||** ಶಂಭೋಃ=ಪರಮೇಶ್ವರನ, ಯಾ=ಆವಳಾಳೊರ್ವ ಸಮವೇತಶಕ್ತಿಯ, ಇಚ್ಛಾಜ್ಞಾನಾದಿ ರೂಪೇಣ="ಪರಾಽಸ್ಯಶಕ್ತಿರ್ವಿಮಲಾ ವಿತರ್ಕಾಸ್ವಾಭಾವಿಕೀ ರುದ್ರಸಮಾನಧರ್ಮಿಣೀ।

ಜ್ಞಾನಕ್ರಿಯೇಚ್ಛಾದಿಸಹಸ್ರರೂಪಾ ತನ್ಮೇ ಮನಶ್ಶಿವಸಂಕಲ್ಪಮಸ್ತು"॥ ಯೆಂಬ ಶ್ರುತಿಯುಂಟಾಗಿ ಇಚ್ಛಾಜ್ಞಾನ ಕ್ರಿಯೆ ಮೊದಲಾದ ಸ್ವರೂಪಿನಿಂದೆ, ವಿಶ್ವಭಾವಿನೀ=ಸಮಸ್ತವನು ಪ್ರಕಾಶಿಸುತ್ತಿರ್ದ್ದಪಳು;ಪರಮಾನಂದ ಪ್ರಬೋಧಲಹರೀಂ="ಆನಂದವಿಶ್ರವಣಾಸ ಕಲ್ಪವಲ್ಲೀಮ್"ಯೆಂಬ(?) ಶಿವಾಚಾರ್ಯವಾಕ್ಯವುಂಟಾಗಿ ಪರಮಾನಂದ ಪ್ರಕಾಶಕ್ಕೆ ಲಹರಿಯಾದ, ತಾಂ ಶಿವಾಂ=ಆ ಪಾರ್ವತಿದೇವಿಯನು ಅಹಂ=ನಾನು, ವಂದೇ=ನಮಸ್ಕರಿಸುತ್ತಿರ್ದ್ದಪೆನು. ॥೧೧॥

ಗ್ರಂಥ॥ **ಅಮೃತಾರ್ಥಂ ಪ್ರಪನ್ನಾನಾಂ ಯಾ ಸುವಿದ್ಯಾಪ್ರದಾಯಿನೀ ।**
**ಅಹರ್ನಿಶಮಹಂ ವಂದೇ ತಾಮೀಶಾನಮನೋರಮಾಮ್ ॥**

**ಟೀಕು॥** ಯಾ=ಆವಳಾಳೊರ್ವ ಪಾರ್ವತಿದೇವಿಯು, ಅಮೃತಾರ್ಥಂ= ಪರಮುಕ್ತಿಗೋಸುಗ, ಪ್ರಪನ್ನಾನಾಂ=ತನ್ನ ಮರೆಹೊಕ್ಕವರಿಗೆ, ಸುವಿದ್ಯಾಪ್ರದಾಯಿನೀ='ವೇದಾಂತ ವಾಕ್ಯಜಾಂ ವಿದ್ಯಾಮ್' ಯೆಂಬ ಸೂತಸಂಹಿತೋಕ್ತಿಯುಂಟಾಗಿ ಅಪ್ರತ್ಯಕ್ಷವಾಗಿ ಅಪರೋಕ್ಷವಾದ ಜೀವೇಶ್ವರೈಕ್ಯ ಜ್ಞಾನವನು ಕೊಡುತ್ತಿರ್ದ್ದಪಳು. ಈಶಾನಮನೋರಮಾಂ=ಪರಮೇಶ್ವರನ ಪ್ರಾಣಕಾಂತೆಯಾದ, ತಾಂ=ಆ ಪರಶಿವಶಕ್ತಿಯನು, ಅಹಂ=ನಾನು, ಅಹರ್ನಿಶಂ=ಹಗಲಿರುಳು, ವಂದೇ=ನಮಸ್ಕರಿಸುತ್ತಿರ್ದ್ದಪೆನು.

**ತಾತ್ಪರ್ಯ॥** 'ಆಖುಸ್ಥೇ ರುದ್ರ ಪಶುಸ್ತಂಜುಷಸ್ವೈಷತೇ ರುದ್ರಭಾಗಃ ಸಹಸ್ವಸ್ರಾಂಬಿಕಯಾ ಇತಿ' ಯೆಂಬ ಯಜುರ್ವೇದದಿಂದೆಯೂ, "ಅನನ್ಯಾ ಸ್ಯಾತ್ ಶಿವಾ ಸೈವ ವಸ್ತುತೋ ಮೂರ್ತಿರೈಶ್ವರೀ"ಯೆಂಬ ಪೌಷ್ಕರವಾಕ್ಯದಿಂದೆಯು, ಮೊದಲು ಪಂಚಸೂತ್ರ ಪ್ರತಿಪಾದಿತವಾದ, ಶಿವಶಕ್ತಿಯನು ಶಿವನೆಂದೇ ಶಿವಾದ್ವೈತಜ್ಞಾನಿಗಳು ನಿಶ್ಚೈಸುವುದು. ॥೧೨॥

**ಸೂತ್ರ॥** ಇಂತು ಈ ಪ್ರಕಾರದಿಂದಾಚಾರ್ಯನು ಸಂಗ್ರಹಾರ್ಥವನು ಗರ್ಭೀಕರಿಸಿ ಪಾರ್ವತಿಪರಮೇಶ್ವರರನು ನಮಸ್ಕರಿಸಿ ತದನಂತರದಲ್ಲಿ ಅಷ್ಟಸೂತ್ರಂಗಳಿಂದೆ ವಂಶಪಾರಂಪರ್ಯಾ ಚಾರ್ಯವನು ಪ್ರಕಟಿಸುತ್ತಿರ್ದ್ದಪಂ.

ಗ್ರಂಥ॥ **ಕಶ್ಚಿದಾಚಾರಸಿದ್ಧಾನಾಮಗ್ರಣೀಃ ಶಿವಯೋಗಿನಾಮ್ ।**
**ಶಿವಯೋಗೀತಿ ವಿಖ್ಯಾತಃ ಶಿವಜ್ಞಾನಮಹೋದಧಿಃ ॥**

**ಟೀಕು॥** ಶಿವಯೋಗಿನಾಂ=ಶಿವಯೋಗೀಶ್ವರರಿಗೆ, ಅಗ್ರಣೀಃ=ಶ್ರೇಷ್ಠನಾದ, ಶಿವಜ್ಞಾನ ಮಹೋದಧಿಃ=ಶಿವಜ್ಞಾನಕ್ಕೆ ಮಹಾಸಮುದ್ರನಾದ, ಕಶ್ಚಿತ್=ಒಬ್ಬಾನೊಬ್ಬ ರೇವಣಾಸಿದ್ಧೇಶ್ವರನ ದೃಷ್ಟಿಗರ್ಭಸಂಭವನಾದ ಸಿದ್ಧರಾಮೇಶ್ವರನ, ಆಚಾರಸಿದ್ಧಾನಾಂ=ಸದಾಚಾರಸಂಪನ್ನರ ವಂಶದಲ್ಲಿ, ಶಿವಯೋಗೀತಿ ವಿಖ್ಯಾತಃ=ಶಿವಯೋಗಿಯೆಂದು ಪ್ರಸಿದ್ಧವಾಗಿದ್ದಾತನು, ಆಸೀತ್=ಆದನು. ॥೧೩॥

**ಗ್ರಂಥ||** **ಶಿವಭಕ್ತಿಸುಧಾಸಿಂಧುಜೃಂಭಣಾಮಲಚಂದ್ರಿಕಾ ।**
**ಭಾರತೀ ಯಸ್ಯ ವಿದಧೇ ಪ್ರಾಯಃ ಕುವಲಯೋತ್ಸವಮ್ ॥**

**ಟೀಕು||** ಯಸ್ಯ=ಶಿವಯೋಗಿಯೆಂದು ಪ್ರಸಿದ್ಧವಾದ ಆವನಾನೊರ್ವ ಸಿದ್ಧರಾಮೇಶ್ವರನ, ಭಾರತೀ=ವಚನವು, ಶಿವಭಕ್ತಿಸುಧಾಸಿಂಧು=ಶಿವಭಕ್ತಿಯೆಂಬ ಅಮೃತಸಮುದ್ರವನು,ಜೃಂಭಣಾ= ಹೆಚ್ಚಿಸುವುದಕ್ಕೆ, ಅಮಲಚಂದ್ರಿಕಾ=ಶುದ್ಧವಾದ ಬೆಳದಿಂಗಳಿನಂತಿರುತ್ತಲು, ಪ್ರಾಯಃ=ಮಿಗಿಲಾಗಿ, ಕುವಲಯೋತ್ಸವಂ=ಭೂಮಂಡಲವೆಂಬ ನೈದಿಲುಗಳ ಉತ್ಸವವನು, ವಿದಧೇ= ಮಾಡಿತ್ತು. ||೧೪||

**ಗ್ರಂಥ||** **ತಸ್ಯ ವಂಶೇ ಸಮುತ್ಪನ್ನೋ ಮುಕ್ತಾಮಣಿರಿವಾಮಲಃ ॥**
**ಮುದ್ದದೇವಾಭಿದಾಚಾರ್ಯೋ ಮೂರ್ಧನ್ಯಃ ಶಿವವೇದಿನಾಮ್ ॥**

**ಟೀಕು||** ತಸ್ಯ=ಆ ಸಿದ್ಧರಾಮೇಶ್ವರನ, ವಂಶೇ=ವಂಶವೆಂಬ ಸಮುದ್ರದಲ್ಲಿ, ಶಿವವೇದಿನಾಂ= ಶಿವಜ್ಞಾನಿಗಳ, ಮೂರ್ಧನ್ಯಃ=ಉತ್ತಮಾಂಗದಂತೆ ಶ್ರೇಷ್ಠನಾದ, ಮುದ್ದದೇವಾಭಿದಾಚಾರ್ಯಃ= ಮುದ್ದದೇವನೆಂಬ ಹೆಸರುಳ್ಳಾಚಾರ್ಯನು, ಅಮಲಃ=ನಿರ್ಮಲವಾದ, ಮುಕ್ತಾಮಣಿರಿವ= ಮುಕ್ತಾಮಣಿಯೋಪಾದಿಯಲ್ಲಿ, ಸಮುತ್ಪನ್ನಃ=ಹುಟ್ಟಿದನು. ||೧೫||

**ಗ್ರಂಥ||** **ಮುದ್ದಾನಾತ್ಸರ್ವಜಂತೂನಾಂ ಪ್ರಣತಾನಾಂ ಪ್ರಬೋಧತಃ ।**
**ಮುದ್ದದೇವೇತಿ ವಿಖ್ಯಾತಸಮಾಖ್ಯಾ ಯಸ್ಯ ವಿಶ್ರುತಾ ॥**

**ಟೀಕು||** ಸರ್ವಜಂತೂನಾಂ=ಸಮಸ್ತ ಪ್ರಾಣಿಗಳಿಗೆ, ಮುತ್=ಸಂತೋಷವನು, ದಾನಾತ್= ಕೊಂಡುವುದರದೆಸೆಯಿಂದೆ, ಪ್ರಣತಾನಾಂ=ನಮಸ್ಕರಿಸುವರಿಗೆ, ಪ್ರಬೋಧತಃ= ಬೋಧಿಸುವ ಕಾರಣವಾಗಿ, ಮುದ್ದದೇವೇತಿ=ಮುದ್ದದೇವನೆಂದು, ಯಸ್ಯ=ಆವಾತಂಗೆ, ವಿಖ್ಯಾತಸಮಾಖ್ಯಾ= ಅನ್ವರೂಢಿನಾಮಂಗಳಿಂದೆ ಪ್ರಸಿದ್ಧವಾದ ನಾಮವು, ವಿಶ್ರುತಾ=ಲೋಕ ಪ್ರಸಿದ್ಧವಾಯಿತ್ತು. ||೧೬||

**ಗ್ರಂಥ||** **ತಸ್ಯಾಸೀನ್ನಂದನಶ್ಶಾಂತಃ ಸಿದ್ಧನಾಥಾಭಿಧಶ್ಶುಚಿಃ ।**
**ಶಿವಸಿದ್ಧಾಂತನಿರ್ಣೇತಾ ಶಿವಾಚಾರ್ಯಃ ಶಿವಾತ್ಮಕಃ ॥**

**ಟೀಕು||** ತಸ್ಯ=ಆ ಮುದ್ದದೇವನೆಂಬಾಚಾರ್ಯನಿಗೆ, ಶುಚಿಃ=ಶುದ್ಧಾತ್ಮನಾದ, ಶಾಂತಃ= ರಾಗದ್ವೇಷರಹಿತನಾದ, ಶಿವಾತ್ಮಕಃ=ಶಿವಸ್ವರೂಪವಾದ, ಶಿವಸಿದ್ಧಾಂತನಿರ್ಣೇತಾ=ತ್ರಿಪದಾರ್ಥ ಚತುಷ್ಪಾದಯುಕ್ತವಾದ ಶಿವಾಗಮ ರಹಸ್ಯವನು ನಿಶ್ಚೈಸುತ್ತಿರ್ದ್ದ, ಶಿವಾಚಾರ್ಯಃ=ಶಿವಸಮಯ ಸ್ಥಾಪನಾಚಾರ್ಯನಾದ, ಸಿದ್ಧನಾಥಾಭಿಧಃ=ಸಿದ್ಧರಾಮೇಶ್ವರನ ಹೆಸರಾದ ಸಿದ್ಧನಾಥಾಚಾರ್ಯನೆಂಬ ಹೆಸರುಳ್ಳ, ನಂದನಃ=ಪುತ್ರನು, ಆಸೀತ್=ಆದನು. ||೧೭||

**ಗ್ರಂಥ||** **ವೀರಶೈವಶಿಖಾರತ್ನಂ ವಿಶಿಷ್ಟಾಚಾರಸಂಪದಮ್ ।**
**ಶಿವಜ್ಞಾನಮಹಾಸಿಂಧುಂ ಯಂ ಪ್ರಶಂಸಂತಿ ದೇಶಿಕಾಃ ॥**

**ಟೀಕು||** ವಿಶಿಷ್ಟ=ಶ್ರೇಷ್ಠವಾದ, ಆಚಾರಸಂಪದಂ=ಸದಾಚಾರಸಂಪತ್ತಿಯುಳ್ಳ, ಶಿವಜ್ಞಾನ ಮಹಾಸಿಂಧುಂ=ಶಿವಜ್ಞಾನಕ್ಕೆ ಮಹಾಸಮುದ್ರಸ್ಥಾನವಾದ, ಯಂ=ಆವನಾನೊರ್ವ ಸಿದ್ಧನಾಥಾಚಾರ್ಯನನು, ದೇಶಿಕಾಃ=ಆಚಾರ್ಯರು, ವೀರಶೈವಶಿಖಾರತ್ನಂ=ವೀರಶೈವರಿಗೆ ಶಿರೋಮಣಿಯನಾಗಿ, ಪ್ರಶಂಸಂತಿ=ಕೊಂಡಾಡುತ್ತಿರ್ದಪರು. ||೧೮||

**ಗ್ರಂಥ||** **ಯಸ್ಯಾಚಾರ್ಯಕುಲಾಜ್ಜಾತಾಸ್ಸತಾಮಾಚಾರಮಾತೃಕಾ ।**
**ಶಿವಭಕ್ತಿಃ ಸ್ಥಿರಾ ಯಸ್ಮಿನ್ ಜಜ್ಞೇ ವಿಗತವಿಪ್ಲವಾ ॥**

**ಟೀಕು||** ಸತಾಂ=ಸತ್ಪುರುಷರ, ಆಚಾರಮಾತೃಕಾಃ=ಸದಾಚಾರಮಾತೃಕೆಗಳು, ಯಸ್ಯ=ಆವನಾನೊರ್ವ ಸಿದ್ಧನಾಥಾಚಾರ್ಯನ, ಆಚಾರ್ಯಕುಲಾತ್=ಆಚಾರವಂಶದದೆಸೆಯಿಂದೆ, ವಿಗತವಿಪ್ಲವಾಃ=ತೊಲಗಲ್ಪಟ್ಟ ದುಃಖವುಳ್ಳವು, ಜಾತಾಃ=ಆದವು. ಯಸ್ಮಿನ್=ಆವಾಚಾರ್ಯನಲ್ಲಿ, ಶಿವಭಕ್ತಿಃ ಸ್ಥಿರಾ=ಅಷ್ಟವಿಧವಾದ ಶಿವಭಕ್ತಿಯು ಸ್ಥಿರವಾಗಿದ್ದದು, ಜಜ್ಞೇ=ಆಯಿತ್ತು. ||೧೯||

**ಗ್ರಂಥ||** **ತಸ್ಯ ವೀರಶಿವಾಚಾರ್ಯಶಿಖಾರತ್ನಸ್ಯ ನಂದನಃ ।**
**ಅಭವಚ್ಛಿವಯೋಗೀತಿ ಸಿಂಧೋರಿವ ಸುಧಾಕರಃ ॥**

**ಟೀಕು||** ವೀರಶಿವಾಚಾರ್ಯಶಿಖಾರತ್ನಸ್ಯ=ವೀರಶೈವಾಚಾರ್ಯರಿಗೆ ಶಿಖಾಮಣಿಯಾದ ತಸ್ಯ=ಸಿದ್ಧನಾಥಾಚಾರ್ಯನ, ನಂದನಃ=ಪುತ್ರನು, ಸಿಂಧೋಃ=ಸಮುದ್ರರಾಜನಿಗೆ, ಸುಧಾಕರಃ ಇವ=ಚಂದ್ರನೋಪಾದಿಯಲ್ಲಿ, ಶಿವಯೋಗೀತಿ=ಶಿವಯೋಗಿಯೆಂದು, ಅಭವತ್=ಪ್ರಸಿದ್ಧನಾದನು. ||೨೦||

**ಸೂತ್ರ||** ಇನ್ನು ಸಂಗ್ರಹಕರ್ತೃವಾದಾಚಾರ್ಯನು ದ್ವಾದಶ ಸೂತ್ರಂಗಳಿಂದೆ ತಮ್ಮ ಪ್ರಶಸ್ತಿ ಪುರಸ್ಸರವಾಗಿ ಸಂಗ್ರಹನಾಮಮಂ ಪೇಳುತ್ತಿರ್ದಪಂ.

**ಗ್ರಂಥ||** **ಚಿದಾನಂದಪರಾಕಾಶಶಿವಾನುಭವಯೋಗತಃ ।**
**ಶಿವಯೋಗೀತಿ ನಾಮೋಕ್ತಿರ್ಯಸ್ಯ ಯಾಥಾರ್ಥ್ಯಯೋಗಿನೀ ॥**

**ಟೀಕು||** ಯಸ್ಯ=ಆವನಾನೊರ್ವ ಆಚಾರ್ಯನಿಗೆ, ಚಿದಾನಂದಪರಾಕಾಶ="ಸತ್ಯಂಜ್ಞಾನ -ಮನಂತಂ ಬ್ರಹ್ಮ"ಯೆಂಬ ಶ್ರುತಿಯಿಂದೆ; "ಆಕಾಶ ಶರೀರಂ ಬ್ರಹ್ಮ"ಯೆಂಬ ಶ್ರುತಿಯುಂಟಾಗಿ ಸಚ್ಚಿದಾನಂದ

ಪರಮಾಕಾಶರೂಪವಾದ, ಶಿವಾನುಭವಯೋಗತಃ=ಶಿವಾನುಭಾವಯೋಗದದೆಸೆಯಿಂದ, ಶಿವಯೋಗೀತಿ=ಶಿವಯೋಗಿಯೆಂಬ, ನಾಮೋಕ್ತಿಃ=ಹೆಸರ ಹೇಳುವತನವು, ಯಾಥಾರ್ಥ್ಯಯೋಗಿನೀ= ಯಥಾರ್ಥ್ಯದೊಡನೆ ಕೂಡಿರ್ದುದು. ॥೨೧॥

ಗ್ರಂಥ॥ **ಶಿವಾಗಮಪರಿಜ್ಞಾನಪರಿಪಾಕಸುಗಂಧಿನಾ ।**
**ಯದೀಯಕೀರ್ತಿಪುಷ್ಪೇಣ ವಾಸಿತಂ ಹರಿತಾಂ ಮುಖಮ್ ॥**

**ಟೀಕು॥** ಶಿವಾಗಮಪರಿಜ್ಞಾನ="ತ್ರಿಪದಾರ್ಥಂ ಚತುಷ್ಪಾದ ಮಹಾತಂತ್ರಂ ಜಗತ್ಪತಿಃ"ಯೆಂಬ ಮೃಗೇಂದ್ರೋಕ್ತಿಯುಂಟಾಗಿ ತ್ರಿಪದಾರ್ಥ ಚತುಷ್ಪಾದದೊಡನೆ ಕೂಡಿದ ಶಿವಾಗಮಜ್ಞಾನದ, ಪರಿಪಾಕಸುಗಂಧಿನಾ=ಪರಿಪಾಕವಾದ ಸುಂಗಧಿಯುಳ್ಳ, ಯದೀಯ=ಆವನಾನೊರ್ವ ಆಚಾರ್ಯನ ಸಂಬಂಧವಾದ, ಕೀರ್ತಿಪುಷ್ಪೇಣ=ಕೀರ್ತಿಯೆಂಬ ಪುಷ್ಪದಿಂದೆ, ಹರಿತಾಂ=ದಿಕ್ಕುಗಳ, ಮುಖಂ=ಮುಖವು, ವಾಸಿತಂ=ಪೊರೆಯಲುಪಟ್ಟಿತ್ತು. ॥೨೨॥

ಗ್ರಂಥ॥ **ಯೇನ ರಕ್ಷಾವತೀ ಜಾತಾ ಶಿವಭಕ್ತಿಸ್ಸನಾತನೀ ।**
**ಬೌದ್ಧಾದಿಪ್ರತಿಸಿದ್ಧಾಂತಮಹಾಧ್ವಾಂತಾಂಶುಮಾಲಿನಾ ॥**

**ಟೀಕು॥** ಬೌದ್ಧಾದಿ=ಬೌದ್ಧಾಗಮಾದಿಯಾದ, ಪ್ರತಿಸಿದ್ಧಾಂತ=ಶಿವಸಮಯಕ್ಕೆ ಪ್ರತಿಕೂಲವಾದ ಸಿದ್ಧಾಂತಂಗಳೆಂಬ, ಮಹಾಧ್ವಾಂತ=ಮಹಾಂಧಕಾರಕ್ಕೆ, ಅಂಶುಮಾಲಿನಾ= ಚಂಡಸೂರ್ಯನಾದ, ಯೇನ=ಆವನಾನೊರ್ವ ಆಚಾರ್ಯನಿಂದೆ, ಸನಾತನೀ=ಕೇಡಿಲ್ಲದೆಯಿರ್ದ, ಶಿವಭಕ್ತಿಃ=ಶಿವಭಕ್ತಿಯು, ರಕ್ಷಾವತೀ=ರಕ್ಷವುಳ್ಳದು, ಜಾತಾ=ಆಯಿತ್ತು. ॥೨೩॥

ಗ್ರಂಥ॥ **ಸ ಮಹಾವೀರಶೈವಾನಾಂ ಧರ್ಮಮಾರ್ಗಪ್ರವರ್ತಕಃ ।**
**ಶಿವತತ್ತ್ವಪರಿಜ್ಞಾನಚಂದ್ರಿಕಾವೃತಚಂದ್ರಮಾಃ ॥**

**ಟೀಕು॥** ಶಿವತತ್ತ್ವಪರಿಜ್ಞಾನ=ಶಿವತತ್ತ್ವಜ್ಞಾನವೆಂಬ, ಚಂದ್ರಿಕಾವೃತಚಂದ್ರಮಾಃ=ಬೆಳುದಿಂಗಳಿಂದೆ ಬಳಸಲುಪಟ್ಟಿದ್ದ ಚಂದ್ರನಾಗಿರ್ದ, ಸಃ=ಮೊದಲು ಮೂರು ಸೂತ್ರಂಗಳಿಂದೆ ಪೇಳಲ್ಪಟ್ಟ ಆ ಶಿವಯೋಗಿಯೆಂಬಾಚಾರ್ಯನು, ಮಹಾವೀರಶೈವಾನಾಂ=ಮಹಾವೀರಶೈವರ ಧರ್ಮಮಾರ್ಗ ಪ್ರವರ್ತಕಃ=ಆಚಾರಮಾರ್ಗದಲ್ಲಿಯೇ ವರ್ತಿಸುತ್ತಿರ್ದಾತನು. ॥೨೪॥

ಗ್ರಂಥ॥ **ಆಲೋಕ್ಯ ಶೈವತಂತ್ರಾಣಿ ಕಾಮಿಕಾದ್ಯಾನಿ ಸಾದರಮ್ ।**
**ವಾತುಲಾಂತಾನಿ ಶೈವಾನಿ ಪುರಾಣಾನ್ಯಖಿಲಾನಿ ತು ॥**

**ಟೀಕು॥** ಸಃ=ಆ ಆಚಾರ್ಯನು, ಕಾಮಿಕಾದ್ಯಾನಿ=ಕಾಮಿಕ ಮೊದಲಾಗಿ, ವಾತುಲಾಂತಾನಿ= ವಾತುಲಾಗಮವೇ ಕಡೆಯಾಗುಳ್ಳ, ಶೈವತಂತ್ರಾಣಿ=ಶಿವಸಿದ್ಧಾಂತಂಗಳನು, ಅಖಿಲಾನಿ=ಸಮಸ್ತವಾದ,

ಶೈವಾನಿ=ಶಿವಸಂಬಂಧವಾದ, ಪುರಾಣಾನಿ ತು=ಪುರಾಣಂಗಳನಾಯಿತ್ತಾದೊಡೆಯು, ಸಾದರಂ=ಪ್ರೀತಿಯೊಡನೆಕೂಡಿ ಪರ್ತಿಸುತ್ತಿಪ್ಪನು ಹೆಂಗಪುದು ಹಾಂಗೆ, ಆಲೋಕ್ಯ=ನೋಡಿ. ||೨೫||

ಗ್ರಂಥ|| ವೇದಮಾರ್ಗಾವಿರೋಧೇನ ವಿಶಿಷ್ಟಾಚಾರಸಿದ್ಧಯೇ ।
ಅಸನ್ಮಾರ್ಗನಿರಾಸಾಯ ಪ್ರಮೋದಾಯ ವಿವೇಕಿನಾಮ್ ॥

**ಟೀಕು||** ವೇದಮಾರ್ಗಾವಿರೋಧೇನ=ವೇದಮಾರ್ಗವಿರೋಧವಿಲ್ಲದಿಹುದರಿಂದೆ, ವಿಶಿಷ್ಟಾಚಾರ ಸಿದ್ಧಯೇ=ಶ್ರೇಷ್ಠವಾದ ಸದಾಚಾರ ಸಿದ್ಧಿಗೋಸುಗ, ಅಸನ್ಮಾರ್ಗನಿರಾಸಾಯ=ದುರ್ಜನರಾದ ಜೈನ ಬೌದ್ಧಾದಿ ಶಾಸ್ತ್ರಮಾರ್ಗವನು ನಿರಾಕರಿಸಲೋಸುಗ, ವಿವೇಕಿನಾಂ=ವೇದಾಗಮ ವಿವೇಕಿಗಳ, ಪ್ರಮೋದಾಯ=ಸಂತೋಷಕ್ಕೋಸುಗ, ||೨೬||

ಗ್ರಂಥ|| ಸರ್ವಸ್ವಂ ವೀರಶೈವಾನಾಂ ಸಕಲಾರ್ಥಪ್ರಕಾಶನಮ್ ।
ಅಸ್ಪೃಷ್ಟಮಖಿಲೈರ್ದೋಷೈರಾದೃತಂ ಶುದ್ಧಮಾನಸೈಃ ॥

**ಟೀಕು||** ವೀರಶೈವನಾಂ=ವೀರಶೈವರಿಗೆ, ಸರ್ವಸ್ವಂ=ಸರ್ವಸ್ವವಾದ, ಸಕಲಾರ್ಥಪ್ರಕಾಶನಂ= ಸಮಸ್ತಾರ್ಥವನು ಪ್ರಕಾಶಿಸುತ್ತಿರ್ದ್ದ, ಅಖಿಲೈಃ ದೋಷೈಃ=ಸಮಸ್ತ ದೋಷಂಗಳಿಂದೆ, ಅಸ್ಪೃಷ್ಟಂ= ಸೋಂಕಲ್ಪಡದೆಯಿರ್ದ್ದ, ಶುದ್ಧಮಾನಸೈಃ=ನಿರ್ಮಲಬುದ್ಧಿಯುಳ್ಳ ನಿಗಮಾಗಮಜ್ಞಾನಿಗಳಿಂದೆ, ಆದೃತಂ= ಸಂತೋಷಿಸಲ್ಪಟ್ಟ, ||೨೭||

ಗ್ರಂಥ|| ತೇಷ್ವಾಗಮೇಷು ಸರ್ವೇಷು ಪುರಾಣೇಷ್ವಖಿಲೇಷು ಚ ।
ಪುರಾ ದೇವೇನ ಕಥಿತಂ ದೇವ್ಯೈ ತನ್ನಂದನಾಯ ಚ ॥

**ಟೀಕು||** ಸರ್ವೇಷು=ಸಮಸ್ತವಾದ, ತೇಷ್ವಾಗಮೇಷು=ಆ ಕಾಮಿಕಾದ್ಯಾಗಮಂಗಳಲ್ಲಿ ಅಖಿಲೇಷು=ಸಮಸ್ತವಾದ, ಪುರಾಣೇಷು ಚ=ಪುರಾಣಂಗಳಲ್ಲಿಯು, ಪುರಾ=ಮೊದಲು, ದೇವೇನ= ಪರಮೇಶ್ವರನಿಂದೆ, ದೇವ್ಯೈ=ಪಾರ್ವತಿದೇವಿಗೋಸುಗ, ತನ್ನಂದನಾಯ ಚ=ಆ ಪಾರ್ವತಿ ನಂದನನಾದ ಷಣ್ಮುಖನಿಗೋಸುಗ, ಕಥಿತಂ=ಅನುಗ್ರಹಿಸಿ ಹೇಳಲುಪಟ್ಟಿತು. ||೨೮||

ಗ್ರಂಥ|| ತತ್ಸಂಪ್ರದಾಯಸಿದ್ಧೇನ ರೇಣುಕೇನ ಮಹಾತ್ಮನಾ ।
ಗಣೇಶ್ವರೇಣ ಕಥಿತಮಗಸ್ತ್ಯಾಯ ಪುನಃ ಕ್ಷಿತೌ ॥

**ಟೀಕು||** ತತ್ಸಂಪ್ರದಾಯಸಿದ್ಧೇನ=ಆ ಶಿವಸಂಪ್ರದಾಯಸಿದ್ಧನಾದ, ಮಹಾತ್ಮನಾ=ಮಹಾ ಪುರುಷನಾದ, ರೇಣುಕೇನ ಗಣೇಶ್ವರೇಣ=ರೇಣುಕಗಣೇಶ್ವರನಿಂದೆ, ಪುನಃ=ಶಿವನು ಪಾರ್ವತಿ ಕುಮಾರಸ್ವಾಮಿಗೆ

ಬೋಧಿಸಿದ ವೇದಾಗಮ ರಹಸ್ಯಾರ್ಥವನೆ ಮರಳಿ, ಅಗಸ್ತ್ಯಾಯ=ಅಗಸ್ತ್ಯ ಮುನಿಗೋಸುಗ, ಕ್ಷಿತೌ=ಭೂಮಿಯಲ್ಲಿ, ಕಥಿತಂ=ಉಪದೇಶಿಸಿ ಹೇಳಲುಪಟ್ಟ, ॥೨೯॥

**ಗ್ರಂಥ॥** **ವೀರಶೈವಮಹಾತಂತ್ರಮೇಕೋತ್ತರಶತಸ್ಥಲಮ್ ।**
**ಅನುಗ್ರಹಾಯ ಲೋಕಾನಾಮಭ್ಯಧಾತ್ಸುಧಿಯಾಂ ವರಃ ॥**

**ಟೀಕು॥** ಏಕೋತ್ತರಶತಸ್ಥಲಂ=ಪಿಂಡಾದಿಜ್ಞಾನಶೂನ್ಯಾಂತವಾದ ನೂರೊಂದು ಸ್ಥಲರೂಪವಾದ, ವೀರಶೈವಮಹಾತಂತ್ರಂ=ವೀರಶೈವ ಸಿದ್ಧಾಂತವನೆ, ಸುಧಿಯಾಂ=ನಿಗಮಾಗಮಂಗಳಲ್ಲಿ ನಿರ್ಮಲಬುದ್ಧಿಯುಳ್ಳ ಜ್ಞಾನಿಗಳಿಗೆ, ವರಃ=ಶ್ರೇಷ್ಠನಾದ ಆ ಶಿವಯೋಗಿಯೆಂಬಾಚಾರ್ಯನು, ಲೋಕಾನಾಂ ಅನುಗ್ರಹಾಯ=ಲೋಕಾನುಗ್ರಹಾರ್ಥವಾಗಿ, ಅಭ್ಯದಾತ್=ಸಂಗ್ರಹರೂಪಿನಿಂದೆ ಪ್ರಕಟಮಾಡಿ ಹೇಳಿದನು.

ಈ ಆರು ಸೂತ್ರಗಳನು ಪ್ರಾಕುಳಕವ ಮಾಡಿ ಅಭಿಪ್ರಾಯವ ತಿಳಿವುದು. ॥೩೦॥

**ಗ್ರಂಥ॥** **ಸರ್ವೇಷಾಂ ಶೈವತಂತ್ರಾಣಾಮುತ್ತರತ್ವಾನ್ನಿರುತ್ತರಮ್ ।**
**ನಾಮ್ನಾ ಪ್ರತೀಯತೇ ಲೋಕೇ ಯತ್ಸಿದ್ಧಾಂತಶಿಖಾಮಣಿಃ ॥**

**ಟೀಕು॥** ಯತ್=ಆವುದಾನೊಂದು, ಸರ್ವೇಷಾಂ=ಸಮಸ್ತವಾದ, ಶೈವತಂತ್ರಾಣಾಂ= ಶಿವಾಗಮಂಗಳಿಗೆ, ಉತ್ತರತ್ವಾತ್=ಉತ್ತರವಾದ ಕಾರಣವಾಗಿ, ನಿರುತ್ತರಂ=ತನ್ನದೆಸೆಯಿಂದುತ್ತರ ವಿಲ್ಲದೆಯಿದ್ದ, ಸಿದ್ಧಾಂತಶಿಖಾಮಣಿಃ=ಸಿದ್ಧಾಂತಶಿಖಾಮಣಿಯೆಂದು, ನಾಮ್ನಾ=ನಾಮಧೇಯದಿಂದೆ, ಲೋಕೇ=ಲೋಕದಲ್ಲಿ, ಪ್ರತೀಯತೇ=ಪ್ರಸಿದ್ಧವಾಗುತ್ತಿರ್ದ್ದಪುದು. ॥೩೧॥

**ವೃತ್ತ॥** **ಅನುಗತಸಕಲಾರ್ಥೇ ಶೈವತಂತ್ರೈಸ್ಸಮಸ್ತೈಃ**
**ಪ್ರಕಟಿತಶಿವಬೋಧಾದ್ವೈತಭಾವಪ್ರಸಾದೇ ।**
**ವಿದಧತು ಮತಿಮಸ್ಮಿನ್ ವೀರಶೈವಾ ವಿಶಿಷ್ಟಾಃ**
**ಪಶುಪತಿಮತಸಾರೇ ಪಂಡಿತಶ್ಲಾಘನೀಯೇ ॥**

**ಟೀಕು॥** ಸಮಸ್ತೈಃ=ಸಮಸ್ತವಾದ, ಶೈವತಂತ್ರೈಃ=ಶಿವಸಿದ್ಧಾಂತಂಗಳಿಂದೆ, ಅನುಗತಸಕಲಾರ್ಥೇ= ಬಳಿವಿಡಿದೈದಲುಪಟ್ಟ ಸಮಸ್ತ ರಹಸ್ಯಾರ್ಥವುಳ್ಳ, ಪ್ರಕಟಿತ=ಪ್ರಕಟಿಸಲ್ಪಟ್ಟ, ಶಿವಬೋಧ=ಶಿವಜ್ಞಾನ, ಅದ್ವೈತ=ಶಿವಾದ್ವೈತವಾದ, ಭಾವಪ್ರಸಾದೇ=ಶಿವನಲ್ಲಿ ಸಮರಸವಾದ ಭಾವಪ್ರಸನ್ನತೆಯುಳ್ಳ, ಪಶುಪತಿಮತಸಾರೇ=ಶಿವಸಿದ್ಧಾಂತಮತಕ್ಕೆ ಸಾರವಾದ, ಪಂಡಿತ ಶ್ಲಾಘನೀಯೇ=ವಿದ್ವಾಂಸರಿಂದೆ ಕೊಂಡಾಡಲು ಯೋಗ್ಯವಾದ, ಅಸ್ಮಿನ್=ಈ ಸಿದ್ಧಾಂತಶಿಖಾಮಣಿಯಲ್ಲಿ, ವಿಶಿಷ್ಟಾಃ=ಶ್ರೇಷ್ಠರಾದ,

ವೀರಶೈವಾಃ=ವೀರಶೈವಾಚಾರ್ಯರು, ಮತಿಂ=ಬುದ್ಧಿಯನು, ಪಿದಧತು=ಮಾಡಲಿ. ॥೩೨॥

ಇತಿ ಶ್ರೀಮದ್ವೇದವೇದಶಿರಶ್ಶಿವಾಗಮಪುರಾಣಪ್ರಭೃತಿಪ್ರಭೂತವಿದ್ಯಾಪ್ರತಿಪಾದಿತ ಶ್ರೀ ಶಿವಾದ್ವೈತಸನ್ಮಾರ್ಗಪ್ರಸಿದ್ಧಶ್ರೀವೀರಶೈವಷಟ್ಸ್ಥಲಶಿವಯೋಗಸ್ಥಾಪನಾಚಾರ್ಯವರ್ಯ ಶ್ರೀ ಸೋಸಲಿ ವೀರಣಾರಾಧ್ಯದೇಶಿಕಸಾರ್ವಭೌಮಪಾಣಿಪದ್ಮಸಂಭವೇನ ತದಾತ್ಮಜರೇವಣಸಿದ್ಧೇಶ್ವರಾತ್ಮಜೇನ ರೇವಣಾರಾಧ್ಯನಾಮ್ನಾಚಾರ್ಯೇಣ ವಿರಚಿತಾಯಾಂ ಶ್ರೀ ವೀರಶೈವಧರ್ಮನಿರ್ಣಯೇ ರೇಣುಕಾಗಸ್ತ್ಯ ಸಂವಾದನಾಮ ಸಿದ್ಧಾಂತಶಿಖಾಮಣಿಟೀಕಾಯಾಂ ಸಿದ್ಧಾಂತಬೋಧಿನ್ಯಾಖ್ಯಾಯಾಮನುಕ್ರಮಪ್ರಸಂಗೋ ನಾಮ ಪ್ರಥಮಃ ಪರಿಚ್ಛೇದಃ ಸಮಾಪ್ತಃ.

**ಸೂತ್ರ||** ಅನಂತರದಲ್ಲಿ ಆಚಾರ್ಯನು ಸೂತ್ರದ್ವಯದಿಂದೆ ವೇದಾಗಮೈಕ್ಯವನು ಗರ್ಭೀಕರಿಸಿ ಪಾರ್ವತಿಪರಮೇಶ್ವರರನು ನಮಸ್ಕರಿಸುತ್ತಿರ್ದಪಂ.

ಗ್ರಂಥ|| **ಸಚ್ಚಿದಾನಂದರೂಪಾಯ ಸದಸದ್ವ್ಯಕ್ತಿಹೇತವೇ ।**
**ನಮಶ್ಶಿವಾಯ ಸಾಂಬಾಯ ಸಗಣಾಯ ಸ್ವಯಂಭುವೇ ॥**

**ಟೀಕು||** ಸಚ್ಚಿದಾನಂದರೂಪಾಯ=ಸತ್ತು ಚಿತ್ತು ಆನಂದವೇ ಸ್ವರೂಪವಾಗುಳ್ಳ, ಸದಸದ್ವ್ಯಕ್ತಿಹೇತವೇ=ಸತ್ತು ಅಸತ್ತುಗಳ ವ್ಯಕ್ತಿಗೆ ಕಾರಣವಾಗಿರ್ದ್ದ, ಸಾಂಬಾಯ= ಪಾರ್ವತಿಯೊಡನೆ ಕೂಡಿ ವರ್ತಿಸುತ್ತಿರ್ದ್ದ, ಸಗಣಾಯ=ಪ್ರಮಥಗಣಂಗಳೊಡನೆ ಕೂಡಿ ವರ್ತಿಸುತ್ತಿರ್ದ್ದ, ಸ್ವಯಂಭುವೇ=ಸ್ವಯಂಭುವಾದ, ಶಿವಾಯ=ಶಿವನಿಗೋಸುಗ, ನಮಃ=ನಮಸ್ಕಾರವು. ||೧||

ಗ್ರಂಥ|| **ಸದಾಶಿವಮುಖಾಶೇಷತತ್ತ್ವಮೌಕ್ತಿಕಶುಕ್ತಿಕಾಮ್ ।**
**ವಂದೇ ಮಾಹೇಶ್ವರೀಂ ಶಕ್ತಿಂ ಮಹಾಮಾಯಾದಿರೂಪಿಣೀಮ್ ॥**

**ಟೀಕು||** ಸದಾಶಿವಮುಖ=ಸದಾಶಿವತತ್ತ್ವವೇ ಮೊದಲಾದ, ಅಶೇಷತತ್ತ್ವಮೌಕ್ತಿಕ=ಪೃಥಿವ್ಯಾಂತವಾದ ಸಮಸ್ತ ತತ್ತ್ವಂಗಳೆಂಬ ಮೌಕ್ತಿಕಂಗಳಿಗೆ, ಶುಕ್ತಿಕಾಂ=ಚಿಪ್ಪಾಗಿರ್ದ್ದ, ಮಹಾಮಾಯಾದಿರೂಪಿಣೀಂ= ಶುದ್ಧಮಾಯೆಯೆ ಮೊದಲಾಗುಳ್ಳ ಮಾಯಾ ಪ್ರಕೃತಿಗಳಿಗೆ ಸ್ವರೂಪವಾಗುಳ್ಳ, ಮಾಹೇಶ್ವರೀಂ ಶಕ್ತಿಂ=ಶಿವಶಕ್ತಿಯನು, ವಂದೇ=ಸಮಸ್ಕರಿಸುತ್ತಿರ್ದ್ದಪೆನು. ||೨||

**ಸೂತ್ರ||** ಇಂತು ಈ ಪ್ರಕಾರದಿಂದೆ ಶಿವಶಕ್ತಿಗಳನು ನಮಸ್ಕರಿಸಿ ಮುಂದೆ ಸೃಷ್ಟಿಕ್ರಮವನು ತೊಡಗಲೋಸುಗವಾಗಿ ನಾಲ್ಕು ಸೂತ್ರಂಗಳಿಂದೆ, ವಸ್ತುನಿರ್ದೇಶಮಂ ಮಾಡುತ್ತಿರ್ದಪಂ.

ಗ್ರಂಥ|| **ಅಸ್ತಿ ಸಚ್ಚಿತ್ಸುಖಾಕಾರಮಲಕ್ಷಣಪದಾಸ್ಪದಮ್ ।**
**ನಿರ್ವಿಕಲ್ಪಂ ನಿರಾಕಾರಂ ನಿರಸ್ತಾಶೇಷವಿಪ್ಲವಮ್ ॥**

**ಪರಿಚ್ಛೇದಕಥಾಶೂನ್ಯಂ ಪ್ರಪಂಚಾತೀತವೈಭವಮ್ ।**
**ಪ್ರತ್ಯಕ್ಷಾದಿಪ್ರಮಾಣಾನಾಮಗೋಚರಪದೇ ಸ್ಥಿತಮ್ ॥**

**ಸ್ವಪ್ರಕಾಶವಿರಾಜಂತಮನಾಮಯಮನೌಪಮಮ್ ।**
**ಸರ್ವಜ್ಞಂ ಸರ್ವಗಂ ಶಾಂತಂ ಸರ್ವಶಕ್ತಿ ನಿರಂಕುಶಮ್ ॥**

**ಶಿವರುದ್ರಮಹಾದೇವಭವಾದಿಪದಸಂಜ್ಞಕಮ್ ।**
**ಅದ್ವಿತೀಯಮನಿರ್ದೇಶ್ಯಂ ಪರಂ ಬ್ರಹ್ಮ ಸನಾತನಮ್ ॥**

**ಟೀಕು॥** ಸಚ್ಚಿತ್ಸುಖಾಕಾರಂ=ಸಚ್ಚಿತ್ತಾನಂದವೇ ಸ್ವರೂಪವಾಗುಳ್ಳ, ಅಲಕ್ಷಣಪದಾಸ್ಪದಂ=ಕುರುಹಿ-ಡಬಾರದ ಪದಕ್ಕೆ ಆಸ್ಪದವಾಗಿರ್ದ್ದ, ನಿರ್ವಿಕಲ್ಪಂ=ವಿಕಲ್ಪರಹಿತವಾದ, ನಿರಾಕಾರಂ= ಆಕಾರವಿಲ್ಲದೆಯಿರ್ದ್ದ, ನಿರಸ್ತ=ತೊಲಗಿಸಲ್ಪಟ್ಟ, ಅಶೇಷವಿಪ್ಲವಂ=ಸಮಸ್ತಬೋಧೆಯುಳ್ಳ, ಪರಿಚ್ಛೇದಕಥಾಶೂನ್ಯಂ=ಪರಿಪಂಚಿಸಪ್ರಸಂಗವಿಲ್ಲದೆಯಿರ್ದ್ದ, ಪ್ರಪಂಚಾತೀತ=ಜಗತ್ಪ್ರಪಂಚನು ಮೀರಿ ವರ್ತಿಸುತ್ತಿರ್ದ್ದ, ವೈಭವಂ=ಸಂಪತ್ತಿಯುಳ್ಳ, ಪ್ರತ್ಯಕ್ಷ=ಪ್ರತ್ಯಕ್ಷಪ್ರಮಾಣವೆ, ಆದಿಪ್ರಮಾಣಾನಾಂ= ಅನುಮಾನ್ಯೋಪಮಾನಾಗಮಾರ್ಥಾಪತ್ಯಭಾವಪ್ರಮಾಣಂಗಳೆ ಮೊದಲಾಗುಳ್ಳ ಪ್ರಮಾಣಂಗಳಿಗೆ, ಅಗೋಚರಪದೇ=ವಿಷಯವಲ್ಲದ ಸ್ಥಾನದಲ್ಲಿ, ಸ್ಥಿತಂ=ಇರುತ್ತಿರ್ದ್ದ, ಸ್ವಪ್ರಕಾಶ=ನಿಜಪ್ರಕಾಶದಿಂದವೆ, ವಿರಾಜಂತಂ=ಪ್ರಕಾಶಿಸುತ್ತಿರ್ದ್ದ, ಅನಾಮಯಂ=ದೋಷರಹಿತವಾದ, ಅನೌಪಮಂ=ಉಪಮಾತೀತವಾದ, ಸರ್ವಜ್ಞಂ=ಸರ್ವವನು ಅರಿವುತ್ತಿರ್ದ್ದ, ಸರ್ವಗಂ=ಸರ್ವವನುಯೆಯ್ದಿರ್ದ್ದ, ಶಾಂತಂ=ರಾಗದ್ವೇಷರಹಿತನಾದ, ಸರ್ವಶಕ್ತಿ=ಸಕಲಸಾಮರ್ಥ್ಯವುಳ್ಳ, ನಿರಂಕುಶಂ=ತಡೆಹಿಲ್ಲದೆಯಿರ್ದ್ದ ಶಿವರುದ್ರಮಹಾದೇವಭವಾದಿ=ಶಿವರುದ್ರಮಹಾದೇವಭವಯೆಂಬ ಶಬ್ದವೇ ಆದಿಯಾಗುಳ್ಳ, ಪದಸಂಜ್ಞಕಂ=ಅನೇಕಪದಂಗಳೆ ಸಂಜ್ಞೆಯಾಗುಳ್ಳ, ಅದ್ವಿತೀಯಂ=ಎರಡಿಲ್ಲದೆಯಿರ್ದ್ದ, ಅನಿರ್ದೇಶ್ಯಂ=ನಿರ್ದೇಶಿಸಬಾರದೆಯಿರ್ದ್ದ, ಸನಾತನಂ=ಕೇಡಿಲ್ಲದೆಯಿರ್ದ್ದ, ಪರಂ ಬ್ರಹ್ಮ="ಏಕಮೇವಾದ್ವಿತೀಯಂ ಬ್ರಹ್ಮ"ಯೆಂದು ಶ್ರುತಿಸಿದ್ಧವಾದ ಪರಬ್ರಹ್ಮವು, ಅಸ್ತಿ=ಉಂಟು. ॥೬॥

**ಸೂತ್ರ॥** ಇನ್ನು ಆ ಪರಬ್ರಹ್ಮದ ದೆಸೆಯಿಂದೆ ಬೀಜವೃಕ್ಷನ್ಯಾಯವಾದ ಜಗತ್ಸೃಷ್ಟಿಯನು 'ಸದೇವ ಸೌಮ್ಯೇದಮಗ್ರ ಆಸೀತ್''ಯೆಂಬ ಶ್ರುತಿಯ ಗರ್ಭೀಕರಿಸಿ ತೋರಿಸುತ್ತಿರ್ದ್ದಪಂ.

**ಗ್ರಂಥ॥** **ತತ್ರ ಲೀನಮಭೂತ್ಪೂರ್ವಂ ಚೇತನಾಚೇತನಂ ಜಗತ್ ।**
**ಸ್ವಾತ್ಮಲೀನಂ ಜಗತ್ಕಾರ್ಯಂ ಸ್ವಪ್ರಕಾಶಂ ತದದ್ಭುತಮ್ ॥**

**ಟೀಕು॥** ತತ್ರ=ಆ ಪ್ರಸಿದ್ಧವಾದ ಪರಬ್ರಹ್ಮದಲ್ಲಿ, ಚೇತನಾಚೇತನಂ=ಚೇತನಾಚೇತನಾತ್ಮಕ-ವಾದ, ಜಗತ್=ಜಗತ್ತು, ಪೂರ್ವಂ=ಮೊದಲ ಕಲ್ಪದಲ್ಲಿ, ಲೀನಂ=ಅಡಗಿರ್ದ್ದುದು, ಅದ್ಭುತಂ=ಆಶ್ಚರ್ಯವಾಗಿ, ಸ್ವಾತ್ಮಲೀನಂ=ತನ್ನಲ್ಲಿ ಅಡಗಿರ್ದ್ದ, ತತ್ ಜಗತ್=ಆ ಜಗತ್ತು, ಸ್ವಪ್ರಕಾಶಂ=ತನ್ನಿಂದವೆ ಪ್ರಕಾಶವಾಗಿ, ಕಾರ್ಯಂ=ಮಾಡಲು ಯೋಗ್ಯವಾದುದು, ಅಭೂತ್=ಆಯಿತ್ತು. ॥೭॥

**ಸೂತ್ರ॥** ಇನ್ನು ಆರು ಸೂತ್ರಂಗಳಿಂದೆ ಘೃತಕಾಠಿನ್ಯನ್ಯಾಯದಿಂದೆ ಸೃಷ್ಟಿಗುನ್ಮುಖವಾದ ಶಿವಶಕ್ತಿ ಸ್ವರೂಪವನು ತೋರಿಸುತ್ತಿರ್ದ್ದಪಂ.

**ಗ್ರಂಥ||** ಶಿವಾಭಿಧಂ ಪರಂ ಬ್ರಹ್ಮ ಜಗನ್ನಿರ್ಮಾತುಮಿಚ್ಛಯಾ ।
ಸ್ವರೂಪಮಾದಧೇ ಕಿಂಚಿತ್ಸುಖಸ್ಫೂರ್ತಿವಿಜೃಂಭಿತಮ್ ॥

**ಟೀಕು||** ಶಿವಾಭಿಧಂ=ಪರಶಿವತತ್ತ್ವವೆಂಬ ಹೆಸರುಳ್ಳ, ಪರಂ ಬ್ರಹ್ಮ=ಪರಬ್ರಹ್ಮವು, ಜಗತ್=ಲೋಕವನು, ನಿರ್ಮಾತುಂ=ಮಾಡಲು, ಇಚ್ಛಯಾ=ಇಚ್ಛೆಯಿಂದೆ, ಸುಖಸ್ಫೂರ್ತಿಃ=ಸುಖದ ಬಾಹುಲ್ಯದಿಂದೆ, ವಿಜೃಂಭಿತಂ=ಹೆಚ್ಚಿಸಲುಪಟ್ಟ, ಕಿಂಚಿತ್ ಸ್ವರೂಪಂ=ಒಂದಾನೊಂದು ಉಮಾಮಹೇಶ್ವರ ಸ್ವರೂಪವನು, ಆದಧೇ=ಸ್ವೀಕರಿಸಿತ್ತು. ||೮||

**ಸೂತ್ರ||** ಆ ಮೂರ್ತಿಸ್ವರೂಪವನು ಕುಳಕವಾಗಿ ಹೇಳುತ್ತಿರ್ದ್ದಪಂ.

**ಗ್ರಂಥ||** ನಿರಸ್ತದೋಷಸಂಬಂಧಂ ನಿರುಪಾಧಿಕಮವ್ಯಯಮ್ ।
ದಿವ್ಯಮಪ್ರಾಕೃತಂ ನಿತ್ಯಂ ನೀಲಕಂಠಂ ತ್ರಿಲೋಚನಮ್ ॥

ಚಂದ್ರಾರ್ಧಶೇಖರಂ ಶುದ್ಧಂ ಶುದ್ಧಸ್ಫಟಿಕಸಂನಿಭಮ್ ।
ಶುದ್ಧಮುಕ್ತಾಫಲಾಭಾಸಮುಪಾಸ್ಯಂ ಗುಣಮೂರ್ತಿಭಿಃ ॥

ವಿಶುದ್ಧಜ್ಞಾನಕರಣಂ ವಿಷಯಂ ಸರ್ವಯೋಗಿನಾಮ್ ।
ಕೋಟಿಸೂರ್ಯಪ್ರತೀಕಾಶಂ ಚಂದ್ರಕೋಟಿಸಮಪ್ರಭಮ್ ।
ಅಪ್ರಾಕೃತಗುಣಾಧಾರಮನಂತಮಹಿಮಾಸ್ಪದಮ್ ॥

**ಟೀಕು||** ನಿರಸ್ತದೋಷಸಂಬಂಧಂ=ತೊಲಗಿಸಲ್ಪಟ್ಟ ದೋಷಸಂಬಂಧವುಳ್ಳ, ನಿರುಪಾಧಿಕಂ=ಉಪಾಧಿರಹಿತವಾದ, ಅವ್ಯಯಂ=ಕೇಡಿಲ್ಲದೆಯಿರ್ದ್ದ, ದಿವ್ಯಂ=ಕೊಂಡಾಡಲು ಯೋಗ್ಯವಾದ, ಅಪ್ರಾಕೃತಂ=ಪ್ರಕೃತಿಜನ್ಯವಲ್ಲದೆಯಿರ್ದ್ದ, ನಿತ್ಯಂ=ನಿತ್ಯವಾದ, ನೀಲಕಂಠಂ=ಕಪ್ಪಾದ ಕೊರಳುಳ್ಳ, ತ್ರಿಲೋಚನಂ=ಮೂರುನಯನವುಳ್ಳ, ಚಂದ್ರಾರ್ಧಶೇಖರಂ=ಚಂದ್ರಖಂಡವೆ ಮಸ್ತಕದಲ್ಲುಳ್ಳ, ಶುದ್ಧಂ=ನಿರ್ಮಲವಾದ, ಶುದ್ಧಸ್ಫಟಿಕಸನ್ನಿಭಂ=ಶುದ್ಧಸ್ಫಟಿಕಕ್ಕೆ ಸಮಾನವಾದ, ಶುದ್ಧಮುಕ್ತಾಫಲ=ನಿರ್ಮಲವಾದ ಮೌಕ್ತಿಕದ, ಆಭಾಸಂ=ಕಾಂತಿಯೋಪಾದಿಯ ಕಾಂತಿಯುಳ್ಳ, ಗುಣಮೂರ್ತಿಭಿಃ=ಗುಣಮೂರ್ತಿಗಳಾದ ಬ್ರಹ್ಮವಿಷ್ಣುರುದ್ರರಿಂದೆ, ಉಪಾಸ್ಯಂ=ಸೇವಿಸಲು ಯೋಗ್ಯವಾದ, ವಿಶುದ್ಧಜ್ಞಾನ=ನಿರ್ಮಲಜ್ಞಾನವೆ, ಕರಣಂ=ಇಂದ್ರಿಯಂಗಳಾಗುಳ್ಳ, ಸರ್ವಯೋಗಿನಾಂ= ಸಮಸ್ತಯೋಗೀಶ್ವರರಿಗೆ, ವಿಷಯಂ=ಸಾಕ್ಷಾತ್ಕಾರವು, ಕೋಟಿಸೂರ್ಯಪ್ರತೀಕಾಶಂ= ಕೋಟಿಸೂರ್ಯರಿಗೆ ಸಮಾನವಾದ, ಚಂದ್ರಕೋಟಿ= ಕೋಟಿ ಚಂದ್ರರಿಗೆ, ಸಮಪ್ರಭಂ=ಸಮಾನವಾದ ಕಾಂತಿಯುಳ್ಳ, ಅಪ್ರಾಕೃತ=ಪ್ರಕೃತಿಸಂಬಂಧವಲ್ಲದೆಯಿರ್ದ್ದ, ಗುಣಾಧಾರಂ=ಗುಣಂಗಳಿಗೆ ಆಧಾರವಾಗಿರ್ದ್ದ, ಅನಂತ=ಕಡೆಯಿಲ್ಲದೆಯಿರ್ದ್ದ, ಮಹಿಮಾಸ್ಪದಂ=ಮಹತ್ವಕ್ಕೆ ಆಶ್ರಯವಾದ, ಕಿಂಚಿತ್ ಸ್ವರೂಪಂ=ಒಂದಾನೊಂದು ಉಮಾಮಹೇಶ್ವರ ಸ್ವರೂಪವನು, ಆದಧೇ=ಸ್ವೀಕರಿಸಿತ್ತು. ||೧೧||

**ಸೂತ್ರ||** ಇನ್ನು ಶಿವಶಕ್ತಿಸ್ವರೂಪವ ತೋರಿಸುತ್ತಿರ್ದಪಂ.

**ಗ್ರಂಥ||** ತದೀಯಾ ಪರಮಾ ಶಕ್ತಿಸ್ಸಚ್ಚಿದಾನಂದಲಕ್ಷಣಾ ।
ಸಮಸ್ತಲೋಕನಿರ್ಮಾಣಸಮವಾಯಸ್ವರೂಪಿಣೀ ।
ತದಿಚ್ಛಯಾಽಭವತ್ಸಾಕ್ಷಾತ್ ತತ್ಸ್ವರೂಪಾನುಸಾರಿಣೀ ॥

**ಟೀಕು||** ತದೀಯಾ=ಆ ಶಿವಸಂಬಂಧಿನಿಯಾದ, ಪರಮಾ ಶಕ್ತಿಃ=ಪರಶಕ್ತಿಯು, ಸಚ್ಚಿದಾನಂದ ಲಕ್ಷಣಾ ಸತಿ=ಸತ್ತು ಚಿತ್ತಾನಂದವೆ ಕುರುಹಾಗುಳ್ಳಾಕಿಯಾಗುತ್ತಲು, ಸಮಸ್ತಲೋಕನಿರ್ಮಾಣ= ಸರ್ವಲೋಕಂಗಳನು ಸೃಷ್ಟಿಮಾಡುವಲ್ಲಿ, ಸಮವಾಯಸ್ವರೂಪಿಣೀ ಸತೀ=ತಂತುಪಟದೋಪಾದಿಯಲ್ಲಿ ಸಮವಾಯ ಸ್ವರೂಪವುಳ್ಳಾಕಿಯಾಗುತ್ತಲು, ತದಿಚ್ಛಯಾ=ಆ ಪರಮೇಶ್ವರನಯಿಚ್ಛೆಯಿಂದೆ, ಸಾಕ್ಷಾತ್=ಪ್ರತ್ಯಕ್ಷವಾಗಿ, ತತ್ಸ್ವರೂಪಾನುಸಾರಿಣೀ=ಆ ಪರಮೇಶ್ವರನ ಸ್ವರೂಪವನು ಸದೃಶವ ಮಾಡುತ್ತಿರ್ದ್ದಳು, ಅಭವತ್=ಆದಳು. ||೧೨||

**ಗ್ರಂಥ||** ಸ ಶಂಭುರ್ಭಗವಾನ್ ದೇವಸ್ಸರ್ವಜ್ಞಸ್ಸರ್ವಶಕ್ತಿಮಾನ್ ।
ಜಗತ್ ಸಿಸೃಕ್ಷುಃ ಪ್ರಥಮಂ ಬ್ರಹ್ಮಾಣಂ ಸರ್ವದೇಹಿನಾಮ್ ।
ಕರ್ತಾರಂ ಸರ್ವಲೋಕಾನಾಂ ವಿದಧೇ ವಿಶ್ವನಾಯಕಃ ॥

**ಟೀಕು||** ಭಗವಾನ್=ಷಡ್ಗುಣೈಶ್ವರ್ಯ ಸಂಪನ್ನನಾದ, ದೇವಃ=ಕ್ರೀಡಾಶೀಲನಾದ, ಸರ್ವಜ್ಞಃ= ಸರ್ವವನು ಅರಿವುತ್ತಿರ್ದ್ದ, ಸರ್ವಶಕ್ತಿಮಾನ್=ಸಮಸ್ತ ಸಾಮರ್ಥ್ಯವುಳ್ಳ, ವಿಶ್ವನಾಯಕಃ=ಸರ್ವೇಶ್ವರನಾದ, ಶಂಭುಃ=ಆ ಪರಮೇಶ್ವರನು, ಜಗತ್=ಲೋಕವನು, ಸಿಸೃಕ್ಷುಃ ಸನ್=ಸೃಷ್ಟಿಸಲಿಚ್ಛೈಸುತ್ತಿರ್ದ್ದಾತ ನಾಗುತ್ತಲು, ಸರ್ವದೇಹಿನಾಂ=ಸಮಸ್ತದೇಹಿಗಳಿಗೆ, ಪ್ರಥಮಂ=ಮೊದಲೆ, ಬ್ರಹ್ಮಾಣಂ=ಬ್ರಹ್ಮನನು, ಸರ್ವಲೋಕಾನಾಂ=ಸಮಸ್ತಜನರಿಗೆ, ಕರ್ತಾರಂ=ಒಡೆಯನನಾಗಿ, ವಿದಧೇ=ಮಾಡಿದನು. ಇದಕ್ಕೆ ಯಾಜುಷ ಶ್ರುತಿ ನಾರಾಯಣೋಪನಿಷತ್ತಿನಲ್ಲಿಯ ''ವಿಶ್ವಾಧಿಕೋ ರುದ್ರೋ ಮಹರ್ಷಿಃ ಹಿರಣ್ಯಗರ್ಭಂ ಜನಯಾಮಾಸ ಪೂರ್ವಮ್। ಸ ನೋ ಬುಧನ್ಯಾ ಶುಭಯಾ ಸಂಯುನಕ್ತು''. ||೧೩||

**ಸೂತ್ರ||** ಇನ್ನು ಶ್ವೇತಾಶ್ವತರೋಪನಿಷತ್ತಿನಲ್ಲಿ "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ। ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ" ಯೆಂಬ ಶ್ರುತ್ಯರ್ಥವನೆ ಪ್ರಕಟಿಸುತ್ತಿರ್ದ್ದಪಂ.

**ಗ್ರಂಥ||** ತಸ್ಮೈ ಪ್ರಥಮಪುತ್ರಾಯ ಶಂಕರಃ ಶಕ್ತಿಮಾನ್ವಿಭುಃ ।
ಸರ್ವಜ್ಞಸ್ಸಕಲಾ ವಿದ್ಯಾಃ ಸಾನುಗ್ರಹಮುಪಾದಿಶತ್ ॥

**ಟೀಕು||** ಶಂಕರಃ=ಸುಖವನು ಮಾಡುತ್ತಿರ್ದ್ದ, ಶಕ್ತಿಮಾನ್=ಸಮವೇತ ಶಕ್ತಿಯುಳ್ಳ, ವಿಭುಃ= ಸ್ವತಂತ್ರಶೀಲನಾದ, ಸರ್ವಜ್ಞಃ=ಪರಮೇಶ್ವರನು, ಸಕಲಾ ವಿದ್ಯಾಃ=ವೇದಮೊದಲಾದ ಸಮಸ್ತ

ಶಾಸ್ತ್ರಂಗಳನು, ತಸ್ಮೈ ಪ್ರಥಮ ಪುತ್ರಾಯ=ಆ ಹಿರಿಯ ಮಗನಾದ ಬ್ರಹ್ಮನಿಗೋಸುಗ, ಸಾನುಗ್ರಹಂ=ಅನುಗ್ರಹದೊಡನೆ ಕೂಡಿ ವರ್ತಿಸುತಿಹನು ಹೇಗಹುದು ಅಹಗೆ, ಉಪಾದಿಶತ್=ಉಪದೇಶವನು ಮಾಡಿಕೊಟ್ಟನು. ॥೧೪॥

ಗ್ರಂಥ॥ **ಪ್ರಾಪ್ತವಿದ್ಯೋ ಮಹಾದೇವಾದ್ಬ್ರಹ್ಮಾ ವಿಶ್ವನಿಯಾಮಕಾತ್ ।**
**ಸಮಸ್ತಲೋಕಾನ್ನಿರ್ಮಾತುಮುದ್ಯೋಗಮಪರೋಽಭವತ್ ॥**

**ಟೀಕು॥** ವಿಶ್ವನಿಯಾಮಕಾತ್=ಸರ್ವಕರ್ತೃವಾದ, ಮಹಾದೇವಾತ್=ಪರಮೇಶ್ವರನ ದೆಸೆಯಿಂದೆ, ಪ್ರಾಪ್ತವಿದ್ಯಃ=ಪಡೆಯಲ್ಪಟ್ಟ ವಿದ್ಯೆಯುಳ್ಳ, ಬ್ರಹ್ಮಾ=ಬ್ರಹ್ಮನು, ಸಮಸ್ತಲೋಕಾನ್=ಸಮಸ್ತ ಜನರನು, ನಿರ್ಮಾತುಂ="ಸೂರ್ಯಾಚಂದ್ರಮಸೌಧಾತಾ, ಯಥಾಪೂರ್ವಮಕಲ್ಪಯತ್"ಯೆಂಬ ಶ್ರುತಿಪ್ರಮಾಣಮುಂಟಾಗಿ ಮೊದಲ ಸೃಷ್ಟಿಯೋಪಾದಿಯಲ್ಲಿಯೇ ಸೃಷ್ಟಿಯ ಮಾಡಲು, ಉದ್ಯೋಗಮಪರಃ=ಉದ್ಯುಕ್ತನಾಗಿ, ಅಭವತ್=ಆದನು. ॥೧೫॥

ಗ್ರಂಥ॥ **ಕೃತೋದ್ಯೋಗೋಽಪಿ ನಿರ್ಮಾಣೇ ಜಗತಾಂ ಶಂಕರಾಜ್ಞಯಾ ।**
**ಅಜ್ಞಾತೋಪಾಯಸಂಪತ್ತಿರಭವನ್ಮಾಯಯಾವೃತಃ ॥**

**ಟೀಕು॥** ಸಃ=ಆ ಬ್ರಹ್ಮನು, ಶಂಕರಾಜ್ಞಯಾ=ಶಿವಾಜ್ಞೆಯಿಂದೆ, ಜಗತಾಂ=ಲೋಕಂಗಳನು, ನಿರ್ಮಾಣೇ=ಸೃಷ್ಟಿಯ ಮಾಡುವಲ್ಲಿ, ಕೃತೋದ್ಯೋಗೋಽಪಿ=ಮಾಡಲುಪಟ್ಟ ಉದ್ಯೋಗವುಳ್ಳಾತನಾದೊಡೆಯು, ಮಾಯಯಾ=ಮಾಯೆಯಿಂದೆ. ಆವೃತಃ=ಆಧರಿಸಲ್ಪಟ್ಟವನಾಗಿ, ಅಜ್ಞಾತೋಪಾಯ ಸಂಪತ್ತಿಃ=ಅರಿಯಲ್ಪಡದೆಯಿದ್ದ ಸಾಧನಸಂಪತ್ತಿಯುಳ್ಳಾತನು, ಅಭವತ್=ಆದನು. ॥೧೬॥

**ಬ್ರಹ್ಮಾ=** ಬ್ರಹ್ಮನು ಬೇಡಿಕೊಳ್ಳುತ್ತಿದ್ದಾನು.

ಗ್ರಂಥ॥ **ವಿಧಾತುಮಖಿಲಾನ್ ಲೋಕಾನುಪಾಯಂ ಪ್ರಾಪ್ತುಮಿಚ್ಛಯಾ ।**
**ಪುನಸ್ತಂ ಪ್ರಾರ್ಥಯಾಮಾಸ ದೇವದೇವಂ ತ್ರಿಯಂಬಕಮ್ ॥**

**ಟೀಕು॥** ಅಖಿಲಾನ್ ಲೋಕಾನ್=ಸಮಸ್ತ ಜಗತ್ತುಗಳನು, ವಿಧಾತುಂ=ಸೃಷ್ಟಿಯನು ಮಾಡಲು, ಉಪಾಯಂ=ಸಾಧನಸಂಪತ್ತಿಯನು, ಪ್ರಾಪ್ತುಮಿಚ್ಛಯಾ=ಪಡೆಯಲು ಇಚ್ಛೆಯಿಂದೆ, ತ್ರಿಯಂಬಕಂ=ಮೂರುನಯನಂಗಳುಳ್ಳ, ದೇವದೇವಂ=ದೇವಾಧಿದೇವನಾದ, ತಂ=ಆ ಪರಮೇಶ್ವರನನು, ಪುನಃ=ಮರಳಿ, ಪ್ರಾರ್ಥಯಾಮಾಸ=ಬೇಡಿಕೊಂಡನು. ॥ ೧೭ ॥

ಗ್ರಂಥ॥ **ನಮಸ್ತೇ ದೇವದೇವೇಶ ನಮಸ್ತೇ ಕರುಣಾಕರ ।**
**ಅಸ್ಮದಾದಿಜಗತ್ಸರ್ವನಿರ್ಮಾಣನವಿಧಿಕ್ಷಮ ॥**

**ಟೀಕು॥** ದೇವದೇವೇಶ=ದೇವಾಧಿದೇವನಾದ, ಭೋ ಈಶಾನ=ಎಲೈ ಪರಮೇಶ್ವರನೆ! ತೇ=ನಿನಗೋಸುಗ, ನಮಃ=ನಮಸ್ಕಾರವು. ಅಸ್ಮದಾದಿಜಗತ್ಸರ್ವಂ=ನಾವು ಮೊದಲಾದ ಸಮಸ್ತ ಜಗತ್ತನು, ನಿರ್ಮಾಣನವಿಧಿಕ್ಷಮ=ಸೃಷ್ಟಿಮಾಡುವ ವಿಧಾನದಲ್ಲಿ ಸಮರ್ಥನಾದ, ಭೋ ಕರುಣಾಕರ= ಎಲೈ ಕೃಪಾಸಮುದ್ರನಾದ ಶಿವನೆ! ತೇ=ನಿನಗೋಸುಗ, ನಮಃ=ನಮಸ್ಕಾರವು. ॥೧೮॥

**ಗ್ರಂಥ॥** **ಉಪಾಯಂ ವದ ಮೇ ಶಂಭೋ ಜಗತ್ಸೃಷ್ಟೌ ಜಗತ್ಪತೇ ।**
**ಸರ್ವಜ್ಞಃ ಸರ್ವಶಕ್ತಿಸ್ತ್ವಂ ಸರ್ವಕರ್ತಾ ಸನಾತನಃ ॥**

**ಟೀಕು॥** ಜಗತ್ಪತೇ=ಸರ್ವಜಗತ್ತಿನೊಡೆಯನಾದ, ಭೋ ಶಂಭೋ=ಎಲೈ ಪರಮೇಶ್ವರನೆ! ಸರ್ವಜ್ಞಃ=ಸರ್ವವನು ಅರಿವುತ್ತಿರ್ದ್ದ, ಸರ್ವಕರ್ತಾ=ಸರ್ವವನು ಮಾಡುತ್ತಿರ್ದ್ದ, ಸರ್ವಶಕ್ತಿಃ= ಸಕಲಸಾಮರ್ಥ್ಯವುಳ್ಳ, ಸನಾತನಃ=ನಿತ್ಯವಾದ, ತ್ವಂ=ನೀನು, ಮೇ=ನನಗೋಸುಗ, ಜಗತ್ಸೃಷ್ಟೌ= ಜಗತ್ತನು ಸೃಷ್ಟಿಮಾಡುವಲ್ಲಿಯ, ಉಪಾಯಂ=ಉಪಾಯವನು, ವದ=ಉಪದೇಶಿಸಿ ಹೇಳು. ॥೧೯॥

**ಗ್ರಂಥ॥** **ಇತಿ ಸಂಪ್ರಾರ್ಥಿತಶ್ಶಂಭುಃ ಬ್ರಹ್ಮಣಾ ವಿಶ್ವನಾಯಕಃ ।**
**ಉಪಾಯಮವದತ್ತಸ್ಮೈ ಲೋಕಸೃಷ್ಟಿಪ್ರವರ್ತನಮ್ ॥**

**ಟೀಕು॥** ವಿಶ್ವನಾಯಕಃ=ಸರ್ವೇಶ್ವರನಾದ, ಶಂಭುಃ=ಪರಮೇಶ್ವರನು, ಬ್ರಹ್ಮಣಾ=ಬ್ರಹ್ಮನಿಂದೆ, ಇತಿ=ಈ ಪೂರ್ವೋಕ್ತ ಪ್ರಕಾರದಿಂದೆ, ಸಂಪ್ರಾರ್ಥಿತಃ ಸನ್= ಬೇಡಿಕೊಳ್ಳಲುಪಟ್ಟಾತನಾಗುತ್ತಲು, ತಸ್ಮೈ=ಆ ಬ್ರಹ್ಮನಿಗೋಸುಗ, ಲೋಕಸೃಷ್ಟಿಪ್ರವರ್ತನಂ= ಲೋಕಸೃಷ್ಟಿಯಲ್ಲಿ ಪ್ರವರ್ತಕವಾಗಿರ್ದ್ದ, ಉಪಾಯಂ=ಉಪಾಯವನು, ಅವದತ್=ಉಪದೇಶಿಸಿ ಹೇಳಿದನು. ॥೨೦॥

**ಗ್ರಂಥ॥** **ಉಪಾಯಮೀಶ್ವರೇಣೋಕ್ತಂ ಲಬ್ಧ್ವಾಽಪಿ ಚತುರಾನನಃ ।**
**ನ ಸಮರ್ಥೋಽಭವತ್ ಕರ್ತುಂ ನಾನಾರೂಪಮಿದಂ ಜಗತ್ ।**
**ಪುನಸ್ತಂ ಪ್ರಾರ್ಥಯಾಮಾಸ ಬ್ರಹ್ಮಾ ವಿಹ್ವಲಮಾನಸಃ ॥**

**ಟೀಕು॥** ಚತುರಾನನಃ=ಚತುರ್ಮುಖನಾದ ಬ್ರಹ್ಮನು, ಈಶ್ವರೇಣ=ಪರಮೇಶ್ವರನಿಂದೆ, ಉಕ್ತಂ=ಉಪದೇಶಿಸಿ ಹೇಳಲುಪಟ್ಟ, ಉಪಾಯಂ=ಸೃಷ್ಟ್ಯುಪಾಯವನು, ಲಬ್ಧ್ವಾಽಪಿ=ಪಡಮ ಯತ್ತಾದೊಡೆಯು, ನಾನಾರೂಪಂ=ಹಲವು ರೂಪಾದ, ಇದಂ ಜಗತ್=ಈ ಜಗತ್ತನು, ಕರ್ತುಂ= ಸೃಷ್ಟಿಮಾಡಲು, ಸಮರ್ಥಃ=ಸಮರ್ಥನು, ನ ಅಭವತ್=ಆದುದಿಲ್ಲ. ಪುನಃ=ಮರಳಿ, ಬ್ರಹ್ಮಾ=ಬ್ರಹ್ಮನು, ವಿಹ್ವಲಮಾನಸಃ ಸನ್=ಬೆದರುತ್ತಿದ್ದ ಚಿತ್ತವುಳ್ಳಾತನಾಗುತ್ತಲು, ತಂ=ಆ ಪರಮೇಶ್ವರನನು, ಪ್ರಾರ್ಥಯಾಮಾಸ=ಬೇಡಿಕೊಂಡನು. ॥೨೧॥

**ಬ್ರಹ್ಮಾ**=ಬ್ರಹ್ಮನು ನುಡಿವುತ್ತಿದ್ದಾನು.

ಗ್ರಂಥ॥ **ದೇವದೇವ ಮಹಾದೇವ ಜಗತ್ಪ್ರಥಮಕಾರಣ ।**
**ನಮಸ್ತೇ ಸಚ್ಚಿದಾನಂದ ಸ್ವೇಚ್ಛಾವಿಗ್ರಹರಾಜಿತ ॥**

**ಟೀಕು॥** ದೇವದೇವ=ದೇವಾಧಿದೇವನಾದ, ಜಗತ್ಪ್ರಥಮಕಾರಣ=ಜಗತ್ ಸೃಷ್ಟಿಗೆ ಮೂಲ ಕಾರಣವಾದ, ಸಚ್ಚಿದಾನಂದ=ಸತ್ತು ಚಿತ್ತಾನಂದಸ್ವರೂಪವಾದ, ಸ್ವೇಚ್ಛಾವಿಗ್ರಹರಾಜಿತ=ಸ್ವೇಚ್ಛಾ ಶರೀರದಿಂದೊಪ್ಪುತ್ತಿರ್ದ್ದ, ಭೋ ಮಹಾದೇವ=ಎಲೈ ಪರಮೇಶ್ವರನೇ! ತೇ=ನಿನಗೋಸುಗ, ನಮಃ=ನಮಸ್ಕಾರವು. ॥೨೨॥

ಗ್ರಂಥ॥ **ಭವ ಶರ್ವ ಮಹೇಶಾನ ಸರ್ವಕಾರಣಕಾರಣ ।**
**ಭವದುಕ್ತೋ ಹ್ಯುಪಾಯೋ ಮೇ ನ ಕಿಂಚಿತ್ ಜ್ಞಾಯತೇಽಧುನಾ ॥**

**ಟೀಕು॥** ಭವಃ=ಸೃಷ್ಟಿಯನು ಮಾಡುತ್ತಿರ್ದ್ದ, ಶರ್ವಃ=ಸಂಹಾರವನು ಮಾಡುತ್ತಿರ್ದ್ದ, ಸರ್ವಕಾರಣ ಕಾರಣ=ಬಿಂದು ಮಾಯಾದಿ ಸಕಲಕಾರಣಂಗಳಿಗೆ ಕಾರಣನಾಗಿರ್ದ, ಭೋ ಮಹೇಶಾನ=ಎಲೈ ಪರಮೇಶ್ವರನೆ!, ಭವದುಕ್ತಃ=ನಿನ್ನಿಂದೆ ಉಪದೇಶಿಸಿ ಹೇಳಲುಪಟ್ಟ, ಉಪಾಯಃ= ಸೃಷ್ಟ್ಯುಪಾಯವಾಯಿತ್ತಾದೊಡೆ, ಅಧುನಾ=ಈಗ, ಮೇ=ಎನ್ನಿಂದೆ, ಕಿಂಚಿತ್=ಒಪ್ಪಚಿಯೂ, ನ ಜ್ಞಾಯತೇ=ಅರಿಯಲ್ಪಡುತ್ತಿರದು. ॥೨೩॥

ಗ್ರಂಥ॥ **ಸೃಷ್ಟಿಂ ವಿಧೇಹಿ ಭಗವನ್ ಪ್ರಥಮಂ ಪರಮೇಶ್ವರ ।**
**ಜ್ಞಾತೋಪಾಯಸ್ತತಃ ಕುರ್ಯಾಂ ಜಗತ್ಸೃಷ್ಟಿಮುಮಾಪತೇ ॥**

**ಟೀಕು॥** ಭಗವನ್=ಷಡುಗುಣೈಶ್ವರ್ಯ ಸಂಪನ್ನನಾದ, ಭೋ ಪರಮೇಶ್ವರ=ಎಲೆ ಪರಮೇಶ್ವರನೆ! ಪ್ರಥಮಂ=ಮೊದಲು, ಸೃಷ್ಟಿಂ=ಜಗತ್ಸೃಷ್ಟಿಯನು, ವಿಧೇಹಿ=ಮಾಡು. ತತಃ=ಅನಂತರದಲ್ಲಿ, ಭೋ ಉಮಾಪತೇ=ಎಲೈ ಪಾರ್ವತಿ ಪತಿಯಾದ ಶಿವನೆ! ಅಹಂ=ನಾನು, ಜ್ಞಾತೋಪಾಯಃ ಸನ್= ಅರಿಯಲ್ಪಟ್ಟ ಉಪಾಯನಾಗುತ್ತಲು, ಜಗತ್ಸೃಷ್ಟಿಂ=ಜಗತ್ ಸೃಷ್ಟಿಯನು, ಕುರ್ಯಾಂ=ಮಾಡಿಹೆನು.

**ಶಿವಯೋಗೀ ಉವಾಚ**

ಶಿವಯೋಗಿ ನುಡಿವುತ್ತಿದ್ದಾನು

ಗ್ರಂಥ ॥ **ಇತ್ಯೇವಂ ಪ್ರಾರ್ಥಿತಶ್ಶಂಭುಃ ಬ್ರಹ್ಮಣಾ ವಿಶ್ವಯೋನಿನಾ ।**
**ಸಸರ್ಜಾತ್ಮಸಮಪ್ರಖ್ಯಾನ್ ಸರ್ವಗಾನ್ ಸರ್ವಶಕ್ತಿಮಾನ್ ॥**

**ಪ್ರಬೋಧಪರಮಾನಂದಪರಿವಾಹಿತಮಾನಸಾನ್ ।**
**ಪ್ರಮಥಾನ್ವಿಶ್ವನಿರ್ಮಾಣಪ್ರಲಯಾಪಾದನಕ್ಷಮಾನ್ ॥**

**ಟೀಕು॥** ಪಿತ್ರಯೋನಿನಾ=ಸಮಸ್ತ ಸೃಷ್ಟಿಗೆ ಕಾರಣವಾದ, ಬ್ರಹ್ಮಣಾ=ಬ್ರಹ್ಮನಿಂದೆ, ಇತ್ಥಂ=ಈ ಪ್ರಕಾರದಿಂದವೆ, ಪ್ರಾರ್ಥಿತಃ=ಬೇಡಿಕೊಳ್ಳಲುಪಟ್ಟ, ಶಂಭುಃ=ಪರಮೇಶ್ವರನು, ಆತ್ಮಸಮಪ್ರಖ್ಯಾನ್= ತನಗೆ ಸಮಾನವಾದ ತೇಜಸ್ಸುಳ್ಳ, ಸರ್ವಗಾನ್=ಸರ್ವಜ್ಞರಾದ, ಸರ್ವಶಕ್ತಿಮಾನ್=ಸಕಲ ಸಾಮರ್ಥ್ಯವುಳ್ಳ, ಪ್ರಬೋಧಪರಮಾನಂದ=ಪ್ರಕರ್ಷವಾದ ಚಿದಾನಂದಗಳಿಂದೆ, ಪರಿಪಾಹಿತ ಮಾನಸಾನ್= ಪ್ರವಹಿಸಲುಪಟ್ಟ ಚಿತ್ತವುಳ್ಳ, ವಿಶ್ವ=ಸಮಸ್ತ ಜಗತ್ತುಗಳ, ನಿರ್ಮಾಣಪ್ರಲಯಾಪಾದನ= ಸೃಷ್ಟಿಸಂಹಾರವನು ಮಾಡುವಲ್ಲಿ, ಕ್ಷಮಾನ್=ಸಮರ್ಥರಾದ ಪ್ರಮಥಾನ್=ಪ್ರಮಥಗಣಂಗಳನು, ಸಸರ್ಜ=ಸೃಷ್ಟಿಸಿದನು. ॥೨೬॥

ಗ್ರಂಥ॥ **ತೇಷು ಪ್ರಮಥವರ್ಗೇಷು ಸೃಷ್ಟೇಷು ಪರಮಾತ್ಮನಾ ।**
**ರೇಣುಕೋ ದಾರುಕಶ್ಚೇತಿ ದ್ವಾವಭೂತಾಂ ಶಿವಪ್ರಿಯೌ ॥**

**ಟೀಕು॥** ಪರಮಾತ್ಮನಾ=ಪರಬ್ರಹ್ಮಸ್ವರೂಪವಾದ ಉಮಾಮಹೇಶ್ವರನಿಂದೆ, ಸೃಷ್ಟೇಷು=ಸೃಷ್ಟಿಸಲ್ಪಟ್ಟ, ತೇಷು ಪ್ರಮಥವರ್ಗೇಷು=ಆ ಪ್ರಮಥಗಣಂಗಳ ಸಮೂಹದಲ್ಲಿ, ರೇಣುಕೋ ದಾರುಕಶ್ಚೇತಿ=ರೇಣುಕ ದಾರುಕರೆಂಬ, ದ್ವೌ=ಇಬ್ಬರು ಗಣೇಶ್ವರರೆ, ಶಿವಪ್ರಿಯೌ= ಶಿವನಿಗಿಷ್ಟರಾಗಿದ್ದವರು, ಅಭೂತಾಂ=ಆದರು. ॥೨೭॥

**ಸೂತ್ರ॥** ಇನ್ನು ಆ ಗಣೇಶ್ವರರ ಮಹತ್ವವನು ಅಯಿದು ಸೂತ್ರಂಗಳಿಂದೆ ತೋರಿಸುತ್ತಿರ್ದಪಂ.

ಗ್ರಂಥ॥ **ಸರ್ವವಿದ್ಯಾವಿಶೇಷಜ್ಞೌ ಸರ್ವಕಾರ್ಯವಿಚಕ್ಷಣೌ ।**
**ಮಾಯಾಮಲವಿನಿರ್ಮುಕ್ತೌ ಮಹಿಮಾತಿಶಯೋಜಜ್ಜ್ವಲೌ ॥**

**ಟೀಕು॥** ಸರ್ವವಿದ್ಯಾವಿಶೇಷಜ್ಞೌ=ಸಮಸ್ತಶಾಸ್ತ್ರಂಗಳ ವಿಶೇಷವನು ಬಲ್ಲ, ಸರ್ವಕಾರ್ಯ ವಿಚಕ್ಷಣೌ=ಸಕಲಕಾರ್ಯಂಗಳಲ್ಲಿ ಕುಶಲರಾದ, ಮಾಯಾಮಲವಿನಿರ್ಮುಕ್ತೌ=ಮಾಯಾಮಲಂಗಳಿಂದೆ ಬಿಡಲುಪಟ್ಟ, ಮಹಿಮಾತಿಶಯೋಜ್ಜ್ವಲೌ=ಮಹತ್ವಾತಿಶಯದಿಂದೆ ಪ್ರಕಾಶಿಸುತ್ತಿರ್ದ್ದ, ॥೨೮॥

ಗ್ರಂಥ॥ **ಆತ್ಮಾನಂದಪರಿಸ್ಫೂರ್ತಿರಸಾಸ್ವಾದನಲಂಪಟೌ ।**
**ಶಿವತತ್ತ್ವಪರಿಜ್ಞಾನತಿರಸ್ಕೃತಭವಾಮಯೌ ॥**

**ಟೀಕು||** ಆತ್ಮಾನಂದಪರಿಸ್ಫೂರ್ತಿಃ=ಬ್ರಹ್ಮಾನಂದದಿಂದೆ ಪರಿಪೂರ್ಣವಾದ, ರಸಾಸ್ವಾದನಲಂಪಟೌ=ರಸವನಾಸ್ವಾದಿಸುವಲ್ಲಿ ಲಂಪಟರಾದ, ಶಿವತತ್ತ್ವ ಪರಿಜ್ಞಾನ=ಶಿವತತ್ತ್ವ ಜ್ಞಾನದಿಂದೆ, ತಿರಸ್ಕೃತಭವಾಮಯೌ=ತಿರಸ್ಕರಿಸಲುಪಟ್ಟ ಜನ್ಮವ್ಯಾಧಿಯುಳ್ಳ, ||೩೯||

**ಗ್ರಂಥ||** **ನಾನಾಪಥಮಹಾಶೈವತಂತ್ರನಿರ್ವಾಹತತ್ಪರೌ ।**
**ವೇದಾಂತಸಾರಸರ್ವಸ್ವವಿವೇಚನವಿಚಕ್ಷಣೌ ॥**

**ಟೀಕು||** ನಾನಾಪಥ=ಹಲವು ಮಾರ್ಗವಾದ, ಮಹಾಶೈವತಂತ್ರ= ಮಹಾಶಿವಸಿದ್ಧಾಂತಂಗಳ, ನಿರ್ವಾಹತತ್ಪರೌ=ನಿರ್ವಹಿಸುವಲ್ಲಿ ತತ್ಪರರಾದ, ವೇದಾಂತಸಾರಸರ್ವಸ್ವ=ಶ್ರುತ್ಯಂತದಲ್ಲಿ ಶ್ರೇಷ್ಠವಾದ ಸರ್ವಸ್ವವನು, ವಿವೇಚನವಿಚಕ್ಷಣೌ=ವಿಚಾರಿಸುವಲ್ಲಿ ಕುಶಲರಾಗಿರ್ದ್ದ, ||೩೦||

**ಗ್ರಂಥ||** **ನಿತ್ಯಸಿದ್ಧೌ ನಿರಾತಂಕೌ ನಿರಂಕುಶಪರಾಕ್ರಮೌ ।**
**ತಾದೃಶೌ ತೌ ಮಹಾಭಾಗೌ ಸಂವೀಕ್ಷ್ಯ ಪರಮೇಶ್ವರಃ ॥**

**ಟೀಕು||** ನಿತ್ಯಸಿದ್ಧೌ=ನಿತ್ಯವಾದ ಸಿದ್ಧಿಗಳುಳ್ಳ, ನಿರಾತಂಕೌ=ನಿರಾವಂಕರಾದ, ನಿರಂಕುಶ ಪರಾಕ್ರಮೌ=ತಡಹಿಲ್ಲದೆಯಿದ್ದ ಪರಾಕ್ರಮವುಳ್ಳ, ತಾದೃಶೌ=ಆ ಪ್ರಕಾರವಾದ, ಮಹಾಭಾಗೌ= ಶ್ರೇಷ್ಠರಾದ, ತೌ=ಆ ರೇಣುಕ ದಾರುಕರೆಂಬ ಗಣೇಶ್ವರರನು, ಪರಮೇಶ್ವರಃ=ಶಿವನು, ಸಂವೀಕ್ಷ್ಯ= ವಿಚಾರಿಸಿ ನೋಡಿ, ||೩೧||

**ಗ್ರಂಥ||** **ಸಮರ್ಥೌ ಸರ್ವಕಾರ್ಯೇಷು ವಿಶ್ವಾಸಂ ಪರಮಾಶ್ರಿತೌ ।**
**ಅಂತಃಪುರದ್ವಾರಪಾಲೌ ನಿರ್ಮಮೇ ನಿಯತೌ ವಿಭುಃ ॥**

**ಟೀಕು||** ಸರ್ವಕಾರ್ಯೇಷು=ಸಮಸ್ತಕಾರ್ಯಂಗಳಲ್ಲಿ, ಸಮರ್ಥೌ=ಸಮರ್ಥರಾದ, ತೌ=ಆ ರೇಣುಕ ದಾರುಕರರೆಂಬ ಗಣೇಶ್ವರರನು, ನಿಯತೌ=ಶುದ್ಧಾತ್ಮರಾಗಿ, ಪರಂ ವಿಶ್ವಾಸಂ=ಮಹಾ ವಿಶ್ವಾಸವನು, ಆಶ್ರಿತೌ=ಆಶ್ರೈಸಿರ್ದ್ದ, ಅಂತಃಪುರದ್ವಾರಪಾಲೌ=ಅಂತಃಪುರದ್ವಾರಪಾಲಕರನ್ನಾಗಿ ವಿಭುಃ=ಸ್ವತಂತ್ರಶೀಲನಾದ ಸರ್ವೇಶ್ವರನು, ನಿರ್ಮಮೇ=ನಿರ್ಮಿಸಿದನು. ||೩೨||

**ವೃತ್ತ||** **ಗಣೇಶ್ವರೌ ರೇಣುಕದಾರುಕಾವುಭೌ ।**
**ವಿಶ್ವಾಸಭೂತೌ ನವಚಂದ್ರಮೌಲೇಃ ॥**

ಅಂತಃಪುರದ್ವಾರಗತೌ ಸದಾ ತೌ ।
ವಿತೇನತುರ್ವಿಶ್ವಪತೇಸ್ತು ಸೇವಾಮ್ ॥

**ಟೀಕು॥** ನವಚಂದ್ರಮೌಲೇಃ=ಬಾಲಚಂದ್ರಚೂಡನಾದ ಸರ್ವೇಶ್ವರನಿಗೆ, ವಿಶ್ವಾಸಭೂತೌ= ವಿಶ್ವಾಸಿಗಳಾದ, ರೇಣುಕದಾರುಕಾಖ್ಯೌ=ರೇಣುಕ ದಾರುಕರೆಂಬ ಹೆಸರುಳ್ಳ, ತೌ ಗಣೇಶ್ವರೌ= ಆ ಪ್ರಸಿದ್ಧರಾದ ಗಣೇಶ್ವರರುಗಳು, ಅಂತಃಪುರದ್ವಾರಗತೌ ಸಂತೌ=ಅಂತಃಪುರದ ಬಾಗಿಲನುಯೆಯ್ದಿರ್ದವರಾಗುತ್ತಲು, ವಿಶ್ವಪತೇಃ=ವಿಶ್ವನಾಥನಾದ ಪರಮೇಶ್ವರನ, ಸೇವಾಂ ತು=ಸೇವೆಯನಾಯಿತ್ತಾದೊಡೆ. ಸದಾ=ಎಲ್ಲಾ ಕಾಲದಲ್ಲಿಯೂ. ವಿತೇನತುಃ=ಮಾಡಿದರು. ॥೩೩॥

ಇತಿ ಶ್ರೀಮದ್ವೇದವೇದಶಿರಶ್ಶಿವಾಗಮಪುರಾಣಪ್ರಭೃತಿಪ್ರಭೂತವಿದ್ಯಾನವದ್ಯಶ್ರೀವೀರಶೈವಷಟ್ಸ್ಥಲ
ಶಿವಯೋಗ ಸ್ಥಾಪನಾಚಾರ್ಯವರ್ಯ ಶ್ರೀ ಸೋಸಲಿ ವೀರಣಾರಾಧ್ಯದೇಶಿಕ
ಸಾರ್ವಭೌಮಪಾಣಿಪದ್ಮಸಂಭವೇನ ರೇವಣಾರಾಧ್ಯಾನಾಮಾಚಾರ್ಯೇಣ ವಿರಚಿತಾಯಾಂ
ಶ್ರೀ ವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ
ರೇಣುಕಾವತಾರಕಥನಂ ನಾಮ ದ್ವಿತೀಯ: ಪರಿಚ್ಛೇದಃ ಸಮಾಪ್ತಃ ।

**ಶಿವಯೋಗೀ**=ಸಂಗ್ರಹಕರ್ತೃವಾದ ಶಿವಯೋಗಿಯು ಅಷ್ಟಸೂತ್ರಂಗಳಿಂದ, ಕೈಲಾಸವರ್ಣನೆಯನು ತೋರಿಸುತ್ತಿರ್ದಪಂ.

ಗ್ರಂಥ॥ **ಕದಾಚಿದಥ ಕೈಲಾಸೇ ಕಲಧೌತಶಿಲಾಮಯೇ ।**
**ಗಂಧರ್ವವಾಮನಯನಾಕ್ರೀಡಾಮೌಕ್ತಿಕದರ್ಪಣೇ ॥**

**ಟೀಕು॥** ಅಥ=ಅನಂತರದಲ್ಲಿ, ಕದಾಚಿತ್=ಒಂದಾನೊಂದು ವೇಳೆ, ಕಲಧೌತಶಿಲಾಮಯೇ=ರಜತಶಿಲೆಗಳ ಸ್ವರೂಪವಾಗುಳ್ಳ, ಗಂಧರ್ವವಾಮನಯನಾ=ಗಂಧರ್ವಸ್ತ್ರೀಯರ, ಕ್ರೀಡಾ=ಕ್ರೀಡೆಗೆ, ಮೌಕ್ತಿಕದರ್ಪಣೇ=ಮುತ್ತಿನ ಕನ್ನಡಿಯಾಗಿರ್ದ್ದ, ಕೈಲಾಸೇ=ಕೈಲಾಸಪರ್ವತದಲ್ಲಿ, ॥೧॥

ಗ್ರಂಥ॥ **ಮಂದಾರಬಕುಲಾಶೋಕಮಾಕಂದಪ್ರಾಯಭೂರುಹೇ ।**
**ಮಲ್ಲೀಮರಂದನಿಷ್ಯಂದಪಾನಪೀನಮಧುವ್ರತೇ ॥**

**ಟೀಕು॥** ಮಂದಾರ=ಕಲ್ಪವೃಕ್ಷ, ಬಕುಲ=ಬಕುಳವೃಕ್ಷ, ಅಶೋಕ=ಅಶೋಕೆಯ ವೃಕ್ಷ, ಮಾಕಂದಪ್ರಾಯಭೂರುಹೇ=ಚೂತವೃಕ್ಷವೇ ಮೊದಲಾದ ಅನೇಕ ವೃಕ್ಷಂಗಳು, ಮಲ್ಲೀಮರಂದ=ಮಲ್ಲಿಗೆಯ ಪುಷ್ಪರಸದ, ನಿಷ್ಯಂದ = ಒಸರಿಸುವ, ಪಾನ=ಪಾನದಿಂದೆ, ಪೀನ=ಸ್ಥೂಲವಾದ, ಮಧುವ್ರತೇ=ಭ್ರಮರಂಗಳುಳ್ಳುದೂ, ॥೨॥

ಗ್ರಂಥ॥ **ಕುಂಕುಮಸ್ತಬಕಾಮೋದಕೂಲಂಕಷಹರಿನ್ಝರೇ ।**
**ಕಲಕಂಠಕುಲಾಲಾಪಕಂದಲದ್ರಾಗಬಂಧುರೇ ॥**

**ಟೀಕು॥** ಕುಂಕುಮಸ್ತಬಕಾಮೋದ=ಕುಂಕುಮಕುಸುಮಗಳ ಗುಚ್ಛದಿಂದ ಹೊರಹೊಮ್ಮುವ ಸುವಾಸನೆಯಿಂದೆ ಕೂಡಿದ, ಕೂಲಂಕಷಹರಿನ್ಝರೇ=ನದೀ ದಂಡೆಯ ಪ್ರವಾಹವನ್ನುಳ್ಳುದೂ, ಕಲಕಂಠಕುಲ=ಕೋಗಿಲೆಗಳ ಸಮೂಹದ, ಆಲಾಪ=ದನಿಯ, ಕಂದಲದ್ರಾಗ=ಬಾಹುಲ್ಯದಿಂದಲಾದ ಪಂಚಮಸ್ವರದಿಂದೆ, ಬಂಧುರೇ=ಮನೋಹರವಾದ, ॥೩॥

ಗ್ರಂಥ॥ **ಕಿನ್ನರೀಗೀತಮಾಧುರ್ಯಪರಿವಾಹಿತಗಹ್ವರೇ ।**
**ಸಾನಂದವರಯೋಗೀಂದ್ರವೃಂದಾಲಂಕೃತಕಂದರೇ ॥**

**ಟೀಕು॥** ಕಿನ್ನರೀ=ಕಿನ್ನರಿಸ್ತ್ರೀಯರ, ಗೀತಮಾಧುರ್ಯ=ಸಂಗೀತ ಮಾಧುರ್ಯದಿಂದೆ, ಪರಿವಾಹಿತ=ಪ್ರವಾಹಿಸಲುಪಟ್ಟ, ಗಹ್ವರೇ=ಗುಹೆಗಳುಳ್ಳ, ಸಾನಂದ=ಸಾನಂದಗಣೇಶ್ವರನೆ, ವರ=ಮುಖ್ಯವಾದ, ಯೋಗೀಂದ್ರವೃಂದಾ=ಶಿವಯೋಗೀಶ್ವರರ ಸಮೂಹದಿಂದೆ, ಅಲಂಕೃತಕಂದರೇ=ಅಲಂಕರಿಸಲುಪಟ್ಟ ತಪ್ಪಲುಗಳುಳ್ಳ, ॥೪॥

ಗ್ರಂಥ॥ ಹೇಮಾರವಿಂದಕಲಿಕಾಸುಗಂಧಿರಸಮಾನಸೇ ।
ಶಾತಕುಂಭಮಯಸ್ತಂಭಶತೋತ್ತುಂಗವಿರಾಜಿತೇ ॥

**ಟೀಕು॥** ಹೇಮಾರವಿಂದಕಲಿಕಾ=ಚಿನ್ನದಾವರೆಯ ಮೊಗ್ಗೆಗಳಿಂದೆ, ಸುಗಂಧಿರಸ= ಸುಗಂಧೋದಕವುಳ್ಳ, ಮಾನಸೇ=ಮಾನಸಸ್ಸರಸ್ಸುಳ್ಳ, ಶಾತಕುಂಭಮಯಸ್ತಂಭ=ಸುವರ್ಣಮಯವಾದ ಸ್ತಂಭಗಳುಳ್ಳ, ಶತೋತ್ತುಂಗವಿರಾಜಿತೇ=ಅನೇಕದಿಂದೆವುನ್ನತವಾಗಿ ಪೊಪ್ಪುತ್ತಿರ್ದ್ದ, ॥೫॥

ಗ್ರಂಥ॥ ಮಾಣಿಕ್ಯದೀಪಕಲಿಕಾಮರೀಚಿದ್ಯೋತಿತಾಂತರೇ ।
ದ್ವಾರತೋರಣಸಂರೂಢಶಂಖಪದ್ಮನಿಧಿದ್ವಯೇ ॥

**ಟೀಕು॥** ಮಾಣಿಕ್ಯದೀಪ=ರತ್ನಪ್ರದೀಪಂಗಳ, ಕಲಿಕಾಮರೀಚಿ=ಮೊಗ್ಗೆಯೋಪಾದಿಯ ಶಿಖಿಯಕಿರಣಂಗಳಿಂದೆ, ದ್ಯೋತಿತಾಂತರೇ=ಪ್ರಕಾಶಿಸಲುಪಟ್ಟ ಒಳಗುಳ್ಳ, ದ್ವಾರ=ಬಾಗಿಲ, ತೋರಣಸಂರೂಢ=ತೋರಣಗಂಭದಲ್ಲಿ ಆಸಕ್ತವಾದ, ಶಂಖಪದ್ಮನಿಧಿದ್ವಯೇ=ಶಂಖ ಪದ್ಮವೆಂಬ ನಿಧಿಯುಳ್ಳ, ॥೬॥

ಗ್ರಂಥ॥ ಮುಕ್ತಾತಾರಕಿತೋದಾರವಿತಾನಾಂಬರಮಂಡಿತೇ ।
ಸ್ಪರ್ಶಲಕ್ಷಿತವೈಡೂರ್ಯಮಯಭಿತ್ತಿಪರಂಪರೇ ॥

**ಟೀಕು॥** ಮುಕ್ತಾ=ಮೌಕ್ತಿಕಂಗಳಿಂದೆ, ತಾರಕಿತ=ಸಂಜಾತವಾದ ನಕ್ಷತ್ರಂಗಳುಳ್ಳದಾಗಿ ಮಾಡಲುಪಟ್ಟ, ಉದಾರವಿತಾನಾಂಬರ=ದೊಡ್ಡಿತ್ತಾದ ಮೇಲುಕಟ್ಟಿನ ಸೀರೆಯಿಂದೆ, ಮಂಡಿತೇ= ಅಲಂಕರಿಸಲುಪಟ್ಟ, ಸ್ಪರ್ಶಲಕ್ಷಿತ=ಪರುಷವೇದಿಯಿಂದೆ ಕುರುಹಿಡಲುಪಟ್ಟ, ವೈಡೂರ್ಯಮಯ=ರತ್ನ ಮಯವಾದ, ಭಿತ್ತಿಪರಂಪರೇ=ಗುಪೆಯ ಸಾಲುಗಳುಳ್ಳ, ॥೭॥

ಗ್ರಂಥ॥ ಸಂಚರತ್ಪ್ರಮಥಶ್ರೇಣೀಪದವಾಚಾಲನೂಪುರೇ ।
ಪ್ರವಾಲವಲಭೀಶೃಂಗಶೃಂಗಾರಮಣಿಮಂಟಪೇ ॥

**ಟೀಕು॥** ಸಂಚರತ್=ಸಂಚರಿಸುತ್ತಿರ್ದ್ದ, ಪ್ರಮಥ=ಪ್ರಮಥಗಣಂಗಳ, ಶ್ರೇಣೀ=ಸಮೂಹಂಗಳ, ಪದ=ಪಾದಂಗಳಲ್ಲಿ, ವಾಚಾಲನೂಪುರೇ=ಧ್ವನಿಮಾಡುತ್ತಿರ್ದ್ದ ಪಾದಕಟಕಂಗಳುಳ್ಳ, ಪ್ರವಾಲವಲಭೀ=ಹವಳದ ಲೋವೆಗಳೆ, ಶೃಂಗ=ಮುಖ್ಯವಾದುದರಿಂದೆ, ಶೃಂಗಾರ=ಶೃಂಗಾರವಾದ, ಮಣಿಮಂಟಪೇ=ನವರತ್ನಮಯವಾದ ಮಂಟಪದಲ್ಲಿ, ॥೮॥

**ಸೂತ್ರ॥** ಇನ್ನು ಪಂಚಾದಶ ಸೂತ್ರಂಗಳಿಂದೆ ಸಿಂಹಾಸನ ಮಧ್ಯಸ್ಥನಾದ ಪರಮೇಶ್ವರನನು ವರ್ಣಿಸುತ್ತಿರ್ದ್ದಪಂ.

ಗ್ರಂಥ॥ ವಂದಾರುದೇವಮುಕುಟಮಂದಾರರಸವಾಸಿತಮ್ ।
ರತ್ನಸಿಂಹಾಸನಂ ದಿವ್ಯಮಧ್ಯಸ್ಥಂ ಪರಮೇಶ್ವರಮ್ ॥

ಟೀಕು॥ ವಂದಾರು=ನಮಸ್ಕಾರಶೀಲರಾದ ದೇವತ್ರಯತ್ರಿಂಶತ್ಕೋಟಿ ದೇವದೇವತೆಗಳ, ಮುಕುಟ=ಕಿರೀಟಂಗಳಲ್ಲಿಯ, ಮಂದಾರ=ಕಲ್ಪವೃಕ್ಷದ ಪುಷ್ಪಪರಾಗದಿಂದೆ, ರಸವಾಸಿತಂ= ಹೊರೆಯಲುಪಟ್ಟ, ದಿವ್ಯಂ=ಮನೋಹರವಾದ, ರತ್ನಹಸಿಂಹಾಸನಂ=ನವರತ್ನಮಯವಾದ ಸಿಂಹಾಸನವು, ಮಧ್ಯಸ್ಥಂ ಪರಮೇಶ್ವರಂ=ಮಧ್ಯದಲ್ಲಿ ಇರುತ್ತಿರ್ದ್ದ ಪರಮೇಶ್ವರನನುಳ್ಳುದು, ॥೯॥

ಗ್ರಂಥ॥ ತಮಾಸ್ಥಾನಗತಂ ದೇವಂ ಸರ್ವಲೋಕಮಹೇಶ್ವರಮ್ ।
ತ್ರಯ್ಯಂತಕಮಲಾರಣ್ಯವಿಹಾರಕಲಹಂಸಕಮ್ ॥

ಟೀಕು॥ [ತಂ]=ಆ ಪ್ರಸಿದ್ಧವಾದ, ಆಸ್ಥಾನಗತಂ=ಆಸ್ಥಾನವನುಯೆಯ್ದಿರ್ದ್ದ, ದೇವಂ=ಕ್ರೀಡಾಶೀಲನಾದ, ಸರ್ವಲೋಕಮಹೇಶ್ವರಂ=ಸಮಸ್ತಲೋಕಂಗಳಿಗೆ ಒಡೆಯನಾದ, ತ್ರಯ್ಯಂತ=ವೇದಾಂತವೆಂಬ, ಕಮಲಾರಣ್ಯ=ಕಮಲಸಮೂಹದಲ್ಲಿ, ವಿಹಾರಕಲಹಂಸಕಂ=ಕ್ರೀಡಿಸುವುದಕ್ಕೆ ರಾಜಹಂಸೆಯಾಗಿರ್ದ್ದ, ॥೧೦॥

ಗ್ರಂಥ॥ ಉದಾರಗುಣಮೋಂಕಾರಶುಕ್ತಿಕಾಪುಟಮೌಕ್ತಿಕಮ್ ।
ಸರ್ವಮಂಗಲಸೌಭಾಗ್ಯಸಮುದಾಯನಿಕೇತನಮ್ ॥

ಟೀಕು॥ ಉದಾರಗುಣಂ=ತ್ಯಾಗಶೀಲನಾದಗುಣವುಳ್ಳ, ಓಂಕಾರಶುಕ್ತಿಕಾಪುಟ=ಓಂಕಾರವೆಂಬ ಚಿಪ್ಪಿನ ಪುಟಕ್ಕೆ, ಮೌಕ್ತಿಕಂ=ಮುತ್ತಿನಮಣಿಯಾಗಿರ್ದ್ದ, ಸರ್ವಮಂಗಲಸೌಭಾಗ್ಯ=ಸಕಲಮಾಂಗಲ್ಯ ಸೌಭಾಗ್ಯಂಗಳ, ಸಮುದಾಯ=ಸಮೂಹಕ್ಕೆ, ನಿಕೇತನಂ=ಆಶ್ರಯವಾಗಿರ್ದ್ದ, ॥೧೧॥

ಗ್ರಂಥ॥ ಸಂಸಾರವಿಷಮೂರ್ಛಾಲುಜೀವಸಂಜೀವನೌಷಧಮ್ ।
ನಿತ್ಯಪ್ರಕಾಶನೈರ್ಮಲ್ಯಂ ಕೈವಲ್ಯಸುರಪಾದಪಮ್ ॥

ಟೀಕು॥ ಸಂಸಾರವಿಷಮೂರ್ಛಾಲು=ಸಂಸಾರವೆಂಬ ವಿಷದಿಂದ ಮೂರ್ಛಿತರಾದ, ಜೀವ ಸಂಜೀವನೌಷಧಂ=ಜೀವಾತ್ಮರನು ಬದುಕಿಸುವುದಕ್ಕೆ ಔಷಧವಾಗಿರ್ದ್ದ, ನಿತ್ಯಪ್ರಕಾಶನೈರ್ಮಲ್ಯಂ= ನಿತ್ಯವಾದ ಸ್ವಯಂಪ್ರಕಾಶದಿಂದೆ ನಿರ್ಮಲತೆವುಳ್ಳ, ಕೈವಲ್ಯಸುರಪಾದಪಂ=ಮುಕ್ತಿಯನು ಕೊಡುವುದಕ್ಕೆ ಕಲ್ಪವೃಕ್ಷವಾಗಿರ್ದ್ದ, ॥೧೨॥

ಗ್ರಂಥ॥ ಅನಂತಪರಮಾನಂದಮಕರಂದಮಧುವ್ರತಮ್ ।
ಆತ್ಮಶಕ್ತಿಲತಾಪುಷ್ಯತ್ರಿಲೋಕೀಪುಷ್ಪಕೋರಕಮ್ ॥

**ಟೀಕು॥** ಅನಂತ=ಕಡೆಯಿಲ್ಲದೆಯಿರ್ಪ್ಪ, ಪರಮಾನಂದ=ಪರಮಾನಂದವೆಂಬ, ಮಕರಂದ ಮಧುವ್ರತಂ=ಪರಾಗವನು ಸೇವಿಸುವುದಕ್ಕೆ ತುಂಬಿಯಾಗಿರ್ದ್ದ, ಆತ್ಮಶಕ್ತಿಲತಾ=ತನ್ನ ಸಮವೇತ ಶಕ್ತಿಯೆಂಬ ಕಲ್ಪಲತೆಯಲ್ಲಿ, ಪುಷ್ಯತ್=ಪೆಚ್ಚುತ್ತಿರ್ದ್ದ, ತ್ರಿಲೋಕೀಪುಷ್ಪಕೋರಕಂ=ಮೂರುಲೋಕವೆಂಬ ಪುಷ್ಪಂಗಳ ಮೊಗ್ಗೆಗಳುಳ್ಳ, ॥೧೩॥

ಗ್ರಂಥ॥ ಬ್ರಹ್ಮಾಂಡಕುಂಡಿಕಾಷಂಡಪಿಂಡೀಕರಣಪಂಡಿತಮ್ ।
ಸಮಸ್ತದೇವತಾಚಕ್ರಚಕ್ರವರ್ತಿಪದೇ ಸ್ಥಿತಮ್ ॥

**ಟೀಕು॥** ಬ್ರಹ್ಮಾಂಡ=ಬ್ರಹ್ಮಾಂಡಗಳೆಂಬ, ಕುಂಡಿಕಾಷಂಡ=ಭಾಂಡಸಮೂಹವನು, ಪಿಂಡೀಕರಣಪಂಡಿತಂ=ಒಬ್ಬುಳಿಕೆಯನು ಮಾಡುವಲ್ಲಿ ಪ್ರವೀಣನಾಗಿರ್ದ್ದ, ಸಮಸ್ತದೇವಾತಚಕ್ರ= ನಾರಾಯಣಾದಿ ಸಕಲ ದೇವತಾಸಮೂಹಕ್ಕೆ, ಚಕ್ರವರ್ತಿಪದೇ ಸ್ಥಿತಂ=ಚಕ್ರವರ್ತಿ ಪದದಲ್ಲಿಯಿರುತ್ತಿರ್ದ್ದ, ॥೧೪॥

ಗ್ರಂಥ॥ ಚಂದ್ರಬಿಂಬಾಯುತಚ್ಛಾಯಾದಾಯಾದದ್ಯುತಿವಿಗ್ರಹಮ್ ।
ಮಾಣಿಕ್ಯಮುಕುಟಜ್ಯೋತಿರ್ಮಂಜರೀಪಿಂಜರಾಂಬರಮ್ ॥

**ಟೀಕು॥** ಚಂದ್ರಬಿಂಬ=ಸಂಪೂರ್ಣ ಚಂದ್ರಮಂಡಲದ, ಆಯುತಚ್ಛಾಯಾ=ಹತ್ತುಸಾವಿರ ಕಾಂತಿಗೆ, ದಾಯಾದ=ದಾಯಾದಿಯಾದ, ದ್ಯುತಿವಿಗ್ರಹಂ=ತೇಜೋರೂಪವಾದ ಶರೀರವುಳ್ಳ, ಮಾಣಿಕ್ಯ ಮುಕುಟ=ನವರತ್ನಮಯವಾದ ಕಿರೀಟದ, ಜ್ಯೋತಿರ್ಮಂಜರೀ=ಪ್ರಕಾಶದ ತೊಡಂಬೆಯಿಂದೆ, ಪಿಂಜರಾಂಬರಂ=ಚಿತ್ರವರ್ಣವಾದ ಹೊದಕೆಯುಳ್ಳ, ॥೧೫॥

ಗ್ರಂಥ॥ ಚೂಡಾಲಂ ಸೋಮಕಲಯಾ ಸುಕುಮಾರಬಿಸಾಭಯಾ ।
ಕಲ್ಯಾಣಪುಷ್ಪಕಲಿಕಾಕರ್ಣಪೂರಮನೋಹರಮ್ ॥

**ಟೀಕು॥** ಸುಕುಮಾರ=ಅತ್ಯಂತ ಕೋಮಲವಾದ, ಬಿಸಾಭಯಾ=ತಾವರೆ ಗೆಣಸಿನ ಕಾಂತಿಯೋಪಾದಿಯ ಕಾಂತಿಯುಳ್ಳ, ಸೋಮಕಲಯಾ=ಚಂದ್ರಕಲೆಯಿಂದೆ, ಚೂಡಾಲಂ=ಶಿರೋ ಭೂಷಣವುಳ್ಳ, ಕಲ್ಯಾಣ=ಮಂಗಲವಾದ, ಪುಷ್ಪಕಲಿಕಾ=ಕುಸುಮಕುಟ್ಮಲಂಗಳೆ, ಕರ್ಣಪೂರ= ಕರ್ಣಾಭರಣವಪಹತನದಿಂದೆ, ಮನೋಹರಂ=ಮನೋಹರವಾಗಿರ್ದ್ದ, ॥೧೬॥

ಗ್ರಂಥ|| **ಮುಕ್ತಾವಲಯಸಂಬದ್ಧಮುಂಡಮಾಲಾವಿರಾಜಿತಮ್ ।**
**ಪರ್ಯಾಪ್ತಚಂದ್ರಸೌಂದರ್ಯಪರಿಪಂಥಿಮುಖಶ್ರಿಯಮ್ ॥**

**ಟೀಕು||** ಮುಕ್ತಾ=ಮೌಕ್ತಿಕಂಗಳ, ವಲಯ=ಬಳಸಿನಿಂದೆ, ಸಂಬದ್ಧ=ಕಟ್ಟಲುಪಟ್ಟ, ಮುಂಡಮಾಲಾ ವಿರಾಜಿತಂ=ಮುಂಡಮಾಲೆಯಿಂದೆವೊಪ್ಪುತ್ತಿರ್ದ್ದ, ಪರ್ಯಾಪ್ತಚಂದ್ರ=ಸಂಪೂರ್ಣ ಚಂದ್ರನ, ಸೌಂದರ್ಯ= ಸೌಂದರ್ಯಕ್ಕೆ, ಪರಿಪಂಥಿ=ಶತ್ರುವಾದ, ಮುಖಶ್ರಿಯಂ=ಮುಖದ ಸಂಪತ್ತಿಯುಳ್ಳ, ||೧೭||

ಗ್ರಂಥ|| **ಪ್ರಾತಃಸಂಫುಲ್ಲಕಮಲಪರಿಯಾಯತ್ರಿಲೋಚನಮ್ ।**
**ಮಂದಸ್ಮಿತಮಿತಾಲಾಪಮಧುರಾಧರಪಲ್ಲವಮ್ ॥**

**ಟೀಕು||** ಪ್ರಾತಃ=ಉದಯಕಾಲದಲ್ಲಿ, ಸಂಫುಲ್ಲ=ವಿಕಸನವಾದ, ಕಮಲಪರಿಯಾಯ=ಪದ್ಮ ಪರ್ಯಾಯವಾದ, ತ್ರಿಲೋಚನಂ=ಮೂರುನಯನಂಗಳುಳ್ಳ, ಮಂದಸ್ಮಿತ=ಮುಗುಳುನಗೆ, ಮಿತಾಲಾಪ=ಅಲ್ಪನುಡಿಗಳಿಂದೆ, ಮಧುರ=ಮನೋಹರವಾದ, ಅಧರಪಲ್ಲವಂ=ತಳಿರೋಪಾದಿಯ ಅಧರವುಳ್ಳ, ||೧೮||

ಗ್ರಂಥ|| **ಗಂಡಮಂಡಲಪರ್ಯಂತಕ್ರೀಡನ್ಮಕರಕುಂಡಲಮ್ ।**
**ಕಾಲಿಮ್ನಾ ಕಾಲಕೂಟಸ್ಯ ಕಂಠನಾಲೇ ಕಲಂಕಿತಮ್ ॥**

**ಟೀಕು||** ಗಂಡಮಂಡಲಪರ್ಯಂತ=ಕಪೋಲಸ್ಥಲಪರ್ಯಂತರವಾಗಿ, ಕ್ರೀಡನ್ಮಕರಕುಂಡಲಂ= ಕ್ರೀಡಿಸುತ್ತಿರ್ದ್ದ ಮಕರಕುಂಡಲವುಳ್ಳ, ಕಾಲಕೂಟಸ್ಯ=ವಿಷದ, ಕಾಲಿಮ್ನಾ=ಕಪ್ಪಿನಿಂದೆ, ಕಲಂಕಿತಂ= ಕಳಂಕಾಗಿ ಮಾಡಲುಪಟ್ಟ, ಕಂಠನಾಲೇ=ಕೊರಳಮೆಳೆಯುಳ್ಳ, ||೧೯||

ಗ್ರಂಥ|| **ಮಣಿಕಂಕಣಕೇಯೂರಮರೀಚಿಕರಪಲ್ಲವೈಃ ।**
**ಚತುರ್ಭಿಃ ಸಂವಿರಾಜಂತಂ ಬಾಹುಮಂದಾರಶಾಖಿಭಿಃ ॥**

**ಟೀಕು||** ಮಣಿಕಂಕಣ=ರತ್ನಮಯವಾದ ಹಸ್ತಕಡಗಗಳ, ಕೇಯೂರ=ತೋಳಭಾಪುರಿಗಳ, ಮರೀಚಿ=ಕಿರಣಂಗಳಿಂದೆವೊಪ್ಪುತ್ತಿರ್ದ್ದ, ಕರಪಲ್ಲವೈಃ=ಹಸ್ತಂಗಳೆಂಬ ತಳಿರ್ಗಳುಳ್ಳ, ಚತುರ್ಭಿಃ= ನಾಲ್ಕಾಗಿರ್ದ್ದ, ಬಾಹುಮಂದಾರಶಾಖಿಭಿಃ=ತೋಳುಗಳೆಂಬ ಕಲ್ಪವೃಕ್ಷಂಗಳಿಂದೆ, ಸಂವಿರಾಜಂತಂ= ಲೇಸಾಗಿವೊಪ್ಪುತ್ತಿರ್ದ್ದ, ||೨೦||

ಗ್ರಂಥ|| **ಗೌರೀಪಯೋಧರಾಶ್ಲೇಷಕೃತಾರ್ಥಭುಜಮಧ್ಯಮಮ್ ।**
**ಸುವರ್ಣಬ್ರಹ್ಮಸೂತ್ರಾಂಕಸೂಕ್ಷ್ಮಕೌಶೇಯವಾಸಸಮ್ ॥**

**ಟೀಕು||** ಗೌರೀ=ಪಾರ್ವತಿದೇವಿಯ, ಪಯೋಧರಾಶ್ಲೇಷ=ಸ್ತನಾಲಿಂಗನದಿಂದೆ, ಕೃತಾರ್ಥ=ಕೃತಾರ್ಥವಾದ, ಭುಜಮಧ್ಯಮಂ=ವಕ್ಷಸ್ಥಲವುಳ್ಳ, ಸುವರ್ಣಬ್ರಹ್ಮಸೂತ್ರಾಂಕಂ= ಸುವರ್ಣಮಯವಾದ ಬ್ರಹ್ಮಸೂತ್ರವೆ ಕುರುಹಾಗುಳ್ಳ, ಸೂಕ್ಷ್ಮಕೌಶೇಯವಾಸಸಂ=ಸಣ್ಣನಾದ ದುಕೂಲವಸ್ತ್ರವೆ ಹೊದಕೆಯಾಗುಳ್ಳ, ||೨೧||

**ಗ್ರಂಥ||** **ನಾಭಿಸ್ಥಾನಾವಲಂಬಿನ್ಯಾ ನವಮೌಕ್ತಿಕಮಾಲಯಾ ।**
**ಗಂಗಯೇವ ಕೃತಾಶ್ಲೇಷಂ ಮೌಲಿಭಾಗಾವತೀರ್ಣಯಾ ॥**

**ಟೀಕು||** ನಾಭಿಸ್ಥಾನಾವಲಂಬಿನ್ಯಾ=ನಾಭಿಸ್ಥಾನದಲ್ಲಿ ನೇಲುತ್ತಿರ್ದ್ದ, ನವಮೌಕ್ತಿಕಮಾಲಯಾ=ಹೊಸತಾದ ಮುತ್ತಿನ ಸರದಿಂದೆ, ಮೌಲಿಭಾಗಾವತೀರ್ಣಯಾ=ಮಸ್ತಕ ಪ್ರದೇಶದದೆಸೆಯಿಂದೆ ಇಳಿದು ಬಂದಿರ್ದ, ಗಂಗಯೇವ=ಗಂಗೆಯಿಂದವೇಕ್ಕೈಯೆಂಬ ಹಾಂಗೆ, ಕೃತಾಶ್ಲೇಷಂ=ಮಾಡಲುಪಟ್ಟ ಆಲಿಂಗನವುಳ್ಳ, ||೨೨||

**ಗ್ರಂಥ||** **ಪದೇನ ಮಣಿಮಂಜೀರಪ್ರಭಾಪಲ್ಲವಿತಶ್ರಿಯಾ ।**
**ಚಂದ್ರವತ್ಸ್ಫಾಟಿಕಂ ಪೀಠಂ ಸಮಾಕ್ರಮ್ಯ ಸ್ಥಿತಂ ಪುರಃ ॥**

**ಟೀಕು||** ಮಣಿಮಂಜೀರ=ನವರತ್ನಮಯವಾದ ಪಾದಕಡಹದ, ಪ್ರಭಾ=ಪ್ರಕಾಶದಿಂದೆ, ಪಲ್ಲವಿತಶ್ರಿಯಾ=ಪಲ್ಲವಿಸಲುಪಟ್ಟ ಸಂಪತ್ತಿಯುಳ್ಳ, ಪದೇನ=ಶ್ರೀಪಾದದಿಂದೆ, ಪುರಃಸ್ಥಿತಂ=ರತ್ನ ಸಿಂಹಾಸನದಮುಂದೆಯಿರುತ್ತಿರ್ದ್ದ, ಚಂದ್ರವತ್ಸ್ಫಾಟಿಕಂ ಪೀಠಂ=ಚಂದ್ರಕಾಂತಮಯವಾದ ಸ್ಫಟಿಕದ ಹಲಗೆಯನು, ಸಮಾಕ್ರಮ್ಯ=ಅಧಿಷ್ಠಿಸಿಕೊಂಡು, ||೨೩||

**ಸೂತ್ರ||** ಈ ಪ್ರಕಾರದಿಂದೆ ಶಿವಸ್ವರೂಪವನು ವರ್ಣಿಸಿ, ಈಗ ಆ ಶಿವನ ವಾಮಭಾಗದಲ್ಲಿರುತ್ತಿರ್ದ್ದ ಪಾರ್ವತಿದೇವಿಯ ಸ್ವರೂಪವನು ತ್ರಯೋದಶ ಸೂತ್ರಂಗಳಿಂದೆ ವರ್ಣಿಸುತ್ತಿರ್ದ್ದಪಂ.

**ಗ್ರಂಥ||** **ವಾಮಪಾರ್ಶ್ವನಿವಾಸಿನ್ಯಾ ಮಂಗಲಪ್ರಿಯವೇಷಯಾ ।**
**ಸಮಸ್ತಲೋಕನಿರ್ಮಾಣಸಮವಾಯಸ್ವರೂಪಯಾ ॥**

**ಟೀಕು||** ವಾಮಪಾರ್ಶ್ವನಿವಾಸಿನ್ಯಾ=ಆ ಶಿವನ ವಾಮಭಾಗದಲ್ಲಿಯಿರುತ್ತಿರ್ದ್ದ, ಮಂಗಲ ಪ್ರಿಯವೇಷಯಾ=ಮಾಂಗಲ್ಯದಿಂದೆ ಅನೇಕರೂಪವತಿಯಾಗಿರ್ದ್ದ, ಸಮಸ್ತಲೋಕನಿರ್ಮಾಣ= ಸಕಲಲೋಕಂಗಳನು ಸೃಷ್ಟಿಸುವಲ್ಲಿ, ಸಮವಾಯಸ್ವರೂಪಯಾ=ಪಟಗತಶುಕ್ಲದೋಪಾದಿಯಲ್ಲಿ ಸಮಗತಶಕ್ತಿಸ್ವರೂಪವುಳ್ಳ, ||೨೪||

ಗ್ರಂಥ॥ ಇಚ್ಛಾಜ್ಞಾನಕ್ರಿಯಾರೂಪಬಹುಶಕ್ತಿವಿಲಾಸಯಾ ।
ವಿದ್ಯಾತತ್ತ್ವಪ್ರಕಾಶಿನ್ಯಾ ವಿನಾಭಾವವಿಹೀನಯಾ ॥

**ಟೀಕು॥** ಇಚ್ಛಾಜ್ಞಾನಕ್ರಿಯಾರೂಪ=ಇಚ್ಛಾಜ್ಞಾನಕ್ರಿಯಾರೂಪಗಳೆ ಸ್ವರೂಪವಾಗುಳ್ಳ ಬಹುಶಕ್ತಿವಿಲಾಸಯಾ=ಅತಿಶಕ್ತಿಗಳ ವಿಲಾಸವುಳ್ಳ, ವಿದ್ಯಾತತ್ತ್ವಪ್ರಕಾಶಿನ್ಯಾ=ಶುದ್ಧವಿದ್ಯಾತತ್ತ್ವವನು ಪ್ರಕಾಶಿಸುತ್ತಿರ್ದ್ದ, ವಿನಾಭಾವವಿಹೀನಯಾ=ಶಿವನದೆಸೆಯಿಂದೆಯಿರುತ್ತಿರ್ದ್ದ, ॥೨೫॥

ಗ್ರಂಥ॥ ಸಂಸಾರವಿಷಕಾಂತಾರದಾಹದಾವಾಗ್ನಿಲೇಖಯಾ ।
ಧಮ್ಮಿಲ್ಲಮಲ್ಲಿಕಾಮೋದಝುಂಕುರ್ವದ್ಭೃಂಗಮಾಲಯಾ ॥

**ಟೀಕು॥** ಸಂಸಾರವಿಷಕಾಂತಾರ=ಸಂಸಾರವೆಂಬ ವಿಷಮವಾದ ಘೋರಾರಣ್ಯವನು, ದಾಹದಾವಾಗ್ನಿಲೇಖಯಾ=ಸುಡುವುದಕ್ಕೆ ಕಾಡಗಿಚ್ಚಿನ ಸಾರಿರ್ದ್ದ, ಧಮ್ಮಿಲ್ಲಮಲ್ಲಿಕಾಮೋದ= ಮುಡಿಕಟ್ಟಿನಲ್ಲಿಯಿರುತ್ತಿರ್ದ್ದ ಮಲ್ಲಿಗೆ ಪುಷ್ಪಂಗಳ ಪರಿಮಳಕ್ಕೋಸುಗ, ಝುಂಕುರ್ವದ್ಭೃಂಗಮಾಲಯಾ= ಝೇಂಕರಿಸುತ್ತಿರ್ದ್ದ ತುಂಬಿಗಳ ಸಾಲುಳ್ಳ, ॥೨೬॥

ಗ್ರಂಥ॥ ಸಂಪೂರ್ಣಚಂದ್ರಸೌಭಾಗ್ಯಸಂವಾದಿಮುಖಪದ್ಮಯಾ ।
ನಾಸಾಮೌಕ್ತಿಕಲಾವಣ್ಯನಾಸೀರಸ್ಮಿತಶೋಭಯಾ ॥

**ಟೀಕು॥** ಸಂಪೂರ್ಣಚಂದ್ರಸೌಭಾಗ್ಯ=ಸಂಪೂರ್ಣಚಂದ್ರನ ಸೌಭಾಗ್ಯದೊಡನೆ, ಸಂವಾದಿ ಮುಖಪದ್ಮಯಾ=ಜಗಳವನಾಡುತ್ತಿರ್ದ್ದ ಮುಖಕಮಲವನುಳ್ಳ, ನಾಸಾಮೌಕ್ತಿಕ=ನಾಸಿಕದಲ್ಲಿಯಿರುತ್ತಿರ್ದ್ದ ಮುತ್ತಿನ ಮಣಿಯ, ಲಾವಣ್ಯನಾಸೀರ=ಲಾವಣ್ಯಸೇನೆಯಿಂದೆ, ಸ್ಮಿತಶೋಭಯಾ=ಮುಗುಳುನಗೆಯ ಕಾಂತಿಯುಳ್ಳ, ॥೨೭॥

ಗ್ರಂಥ॥ ಮಣಿತಾಟಂಕರಂಗಾಂತರ್ವಲಿತಾಪಾಂಗಲೀಲಯಾ ।
ನೇತ್ರದ್ವಿತಯಸೌಂದರ್ಯನಿಂದಿತೇಂದೀವರತ್ವಿಷಾ ॥

**ಟೀಕು॥** ಮಣಿತಾಟಂಕ=ಹರಳೋಲೆಯ, ರಂಗಾಂತಃ=ರಂಗಮಂಟಪದ ಮಧ್ಯದಲ್ಲಿ, ವಲಿತಾಪಾಂಗ ಲೀಲಯಾ=ಕುಣಿವುತ್ತಿರ್ದ್ದ ಕಡೆಗಣ್ಣುಗಳ ವಿಲಾಸವುಳ್ಳ, ನೇತ್ರದ್ವಿತಯಸೌಂದರ್ಯ=ನಯನದ್ವಯದ ಸೌಂದರ್ಯದಿಂದೆ, ನಿಂದಿತೇಂದೀವರತ್ವಿಷಾ=ನಿಂದಿಸಲುಪಟ್ಟ ಕನ್ನೈದಿಲುಗಳ ಕಾಂತಿಯುಳ್ಳ, ॥೨೮॥

ಗ್ರಂಥ॥ ಕುಸುಮಾಯುಧಕೋದಂಡಕುಟಿಲಭ್ರೂವಿಲಾಸಯಾ ।
ಬಂಧೂಕಕುಸುಮಚ್ಛಾಯಾಬಂಧುಭೂತಾಧರಶ್ರಿಯಾ ॥

**ಟೀಕು॥** ಕುಸುಮಾಯುಧಕೋದಂಡ=ಕಾಮನ ಬಿಲ್ಲಿನೋಪಾದಿಯಲ್ಲಿ, ಕುಟಿಲಭ್ರೂವಿಲಾಸಯಾ=ಕೊಂಕಾದ ಹುಬ್ಬುಗಳ ವಿಲಾಸವುಳ್ಳ, ಬಂಧೂಕಕುಸುಮಚ್ಛಾಯಾ=ಬಿಂದಿಗೆಹೂವಿನ ಕಾಂತಿಗೆ, ಬಂಧುಭೂತಾಧರಶ್ರಿಯಾ=ನಂಟನಾದ ಅಧರಸಂಪತ್ತಿಯುಳ್ಳ, ॥೧೯॥

**ಗ್ರಂಥ॥** **ಕಂಠನಾಲಜಿತಾನಂಗಕಂಬುಬಿಬ್ಬೋಕಸಂಪದಾ ।**
**ಬಾಹುದ್ವಿತಯಸೌಭಾಗ್ಯವಂಚಿತೋತ್ಪಲಮಾಲಯಾ ॥**

**ಟೀಕು॥** ಕಂಠನಾಲ=ಕಂಠನಾಳದಿಂದೆ, ಜಿತ=ಗೆಲಲುಪಟ್ಟ, ಅನಂಗಕಂಬು=ಕಾಮನಜಯ ಶಂಖಿನ, ಬಿಬ್ಬೋಕಸಂಪದಾ=ವಿಲಾಸಸಂಪತ್ತಿಯುಳ್ಳ, ಬಾಹುದ್ವಿತಯಸೌಭಾಗ್ಯ=ಭುಜದ್ವಯದ ಸೌಭಾಗ್ಯದಿಂದೆ, ವಂಚಿತೋತ್ಪಲಮಾಲಯಾ=ವಂಚಿಸಲುಪಟ್ಟ ನೈದಿಲು ಪುಷ್ಪಮಾಲೆಯುಳ್ಳ, ॥೨೦॥

**ಗ್ರಂಥ॥** **ಸ್ಥಿರಯೌವನಲಾವಣ್ಯಶೃಂಗಾರಿತಶರೀರಯಾ ।**
**ಅತ್ಯಂತಕಠಿನೋತ್ತುಂಗಪೀವರಸ್ತನಭಾರಯಾ ॥**

**ಟೀಕು॥** ಸ್ಥಿರಯೌವನಲಾವಣ್ಯ=ಸ್ಥಿರಯೌವನದಿಂದಲಾದ ಲಾವಣ್ಯದಿಂದೆ, ಶೃಂಗಾರಿತ ಶರೀರಯಾ=ಶೃಂಗರಿಸಲುಪಟ್ಟ ಶರೀರವುಳ್ಳ, ಅತ್ಯಂತಕಠಿನ=ಅತ್ಯಂತ ಕಠಿನವಾಗಿ, ಉತ್ತುಂಗಪೀವರ ಸ್ತನಭಾರಯಾ=ಉನ್ನತವಾಗಿ ಸ್ಥೂಲವಾದ ಸ್ತನಂಗಳ ಭಾರವುಳ್ಳ, ॥೨೧॥

**ಗ್ರಂಥ॥** **ಮೃಣಾಲವಲ್ಲರೀತಂತುಬಂಧುಭೂತಾವಲಗ್ನಯಾ ।**
**ಶೃಂಗಾರತಟಿನೀತುಂಗಪುಲಿನಶ್ರೋಣಿಭಾರಯಾ ॥**

**ಟೀಕು॥** ಮೃಣಾಲವಲ್ಲರೀತಂತು=ತಾವರೆಯಬಳ್ಳಿಯನೂಲಿಗೆ, ಬಂಧುಭೂತಾವಲಗ್ನಯಾ= ಬಂಧುವಾದ ಮಧ್ಯವುಳ್ಳ, ಶೃಂಗಾರತಟಿನೀ=ಶೃಂಗಾರವೆಂಬ ನದಿಗೆ, ತುಂಗಪುಲಿನ=ಉನ್ನತವಾದ ಮಳಲೊಟ್ಟಿಲೋಪಾದಿಯ, ಶ್ರೋಣಿಭಾರಯಾ=ಪೊರವಾರ ಭಾರವುಳ್ಳ, ॥೨೨॥

**ಗ್ರಂಥ॥** **ಕುಸುಂಭಕುಸುಮಚ್ಛಾಯಾಕೋಮಲಾಂಬರಶೋಭಯಾ ।**
**ಶೃಂಗಾರೋದ್ಯಾನಸಂರಂಭರಂಭಾಸ್ತಂಭೋರುಕಾಂಡಯಾ ॥**

**ಟೀಕು॥** ಕುಸುಂಭಕುಸುಮಚ್ಛಾಯಾ=ಕುಸುಬೆಹೂವಿನ ಕಾಂತಿಯುಳ್ಳ, ಕೋಮಲಾಂಬರ ಶೋಭಯಾ=ಮೃದುವಾದ ಸೂಕ್ಷ್ಮವಸ್ತ್ರದಿಂದೆವೊಪ್ಪುತ್ತಿರ್ದ್ದ, ಶೃಂಗಾರೋದ್ಯಾನಸಂರಂಭ=ಶೃಂಗಾರ ವೆಂಬ ಉದ್ಯಾನವನದ ಸಡಗರಕ್ಕೆ, ರಂಭಾಸ್ತಂಭೋರುಕಾಂಡಯಾ=ಬಾಳೆಯಕಂಭದೋಪಾದಿಯ ತೊಡೆಗಳುಳ್ಳ, ॥೨೩॥

ಗ್ರಂಥ ॥ **ಚೂತಪ್ರವಾಲಸುಷುಮಾಸುಕುಮಾರಪದಾಬ್ಜಯಾ ।**
**ಸ್ಥಿರಮಂಗಲಶೃಂಗಾರಭೂಷಣಾಲಂಕೃತಾಂಗಯಾ ॥**

**ಟೀಕು** ॥ ಚೂತಪ್ರವಾಲ = ಮಾವಿನ ತಳಿರಿನೋಪಾದಿಯಲ್ಲಿ, ಸುಷುಮಾ = ಮನೋಹರವಾದ, ಸುಕುಮಾರಪದಾಬ್ಜಯಾ = ಅತ್ಯಂತ ಮೃದುವಾದಪಾದಕಮಲವುಳ್ಳ, ಸ್ಥಿರಮಂಗಲ ಶೃಂಗಾರ ಭೂಷಣ = ಸ್ಥಿರವಾದ ಮಾಂಗಲ್ಯ ಶೃಂಗಾರ ಭೂಷಣದಿಂದೆ, ಅಲಂಕೃತಾಂಗಯಾ = ಅಲಂಕರಿಸಲು ಪಟ್ಟ ಅಂಗವುಳ್ಳ. ॥ **೩೪** ॥

ಗ್ರಂಥ॥ **ಹಾರನೂಪುರಕೇಯೂರಚಮತ್ಕೃತಶರೀರಯಾ ।**
**ಚಕ್ಷುರಾನಂದಲತಯಾ ಸೌಭಾಗ್ಯಕುಲವಿದ್ಯಯಾ ॥**

**ಟೀಕು**॥ ಹಾರ=ಮೌಕ್ತಿಕಮಾಲೆ, ನೂಪುರ=ಪಾದಕಡೆಹ, ಕೇಯೂರ=ತೋಳಭಾಪುರಿಗಳಿಂದೆ, ಚಮತ್ಕೃತಶರೀರಯಾ=ಚಮತ್ಕರಿಸಲುಪಟ್ಟ ಶರೀರವುಳ್ಳ, ಚಕ್ಷುರಾನಂದಲತಯಾ=ನಯನಂಗಳಿಗೆ ಆನಂದಲತೆಯಾಗಿರ್ದ್ದ, ಸೌಭಾಗ್ಯಕುಲವಿದ್ಯಯಾ=ಸೌಭಾಗ್ಯಕ್ಕೆ ಕುಲವಿದ್ಯೆಯಾಗಿರ್ದ್ದ, ॥**೩೫**॥

ಗ್ರಂಥ॥ **ಉಮಯಾ ಸಮಮಾಸೀನಂ ಲೋಕಜಾಲಕುಟುಂಬಯಾ ।**
**ಅಪೂರ್ವರೂಪಮಭಜನ್ ಪರಿವಾರಾಃ ಸಮಂತತಃ ॥**

**ಟೀಕು**॥ ಲೋಕಜಾಲಕುಟುಂಬಯಾ=ಸಕಲಲೋಕಸಮೂಹವೆ ಕುಟುಂಬವಾಗುಳ್ಳ, ಉಮಯಾ=ಪಾರ್ವತಿದೇವಿಯೊಡನೆ, ಸಮಂ=ಕೂಡಿ, ಆಸೀನಂ=ಸಿಂಹಾಸನದಲ್ಲಿ ಕುಳಿತಿರ್ದ್ದ ಪರಮೇಶ್ವರನನು, ಅಪೂರ್ವರೂಪಂ=ಅತ್ಯಂತಪೂರ್ವವಾದ ಸ್ವರೂಪವನು, ಪ್ರಾಪ್ತಂ=ಎಯ್ದಿರ್ದ್ದ ಪಾರ್ವತಿದೇವಿಯನು, ಪರಿವಾರಾಃ=ನಾರಾಯಣಾದಿ ತ್ರಯತ್ರಿಂಶತ್ಕೋಟಿ ಪರಿವಾರ ದೇವತೆಗಳು, ಸಮಂತತಃ=ಎಲ್ಲಾಕಡೆಯಲ್ಲಿ, ಅಭಜನ್=ಸೇವಿಸಿದರು. ॥**೩೬**॥

**ಸೂತ್ರ**॥ ಈ ಪ್ರಕಾರದಿಂದೆ ಪರಮೇಶ್ವರ ಪಾರ್ವತಿದೇವಿಯರನು ವರ್ಣಿಸಿ ಮುಂದೆ ವಿಂಶತಿಸೂತ್ರಂಗಳಿಂದೆ ಪರಿವಾರದೇವತೆಗಳ ಸೇವೆಯನು ವರ್ಣಿಸುತ್ತಿರ್ದ್ದಪಂ.

ಗ್ರಂಥ॥ **ಪುಂಡರೀಕಾಕೃತಿಸ್ಸ್ವಚ್ಛಂ ಪೂರ್ಣಚಂದ್ರಸಹೋದರಮ್ ।**
**ದಧೌ ತಸ್ಯ ಮಹಾಲಕ್ಷ್ಮೀಃ ಸಿತಮಾತಪವಾರಣಮ್ ॥**

**ಟೀಕು**॥ ಪುಂಡರೀಕಾಕೃತಿ=ಬಿಳ್ದಾವರೆಯಾಕಾರವುಳ್ಳ, ಸ್ವಚ್ಛಂ=ನಿರ್ಮಲವಾಗಿರ್ದ್ದ, ಪೂರ್ಣಚಂದ್ರ ಸಹೋದರಂ=ಸಂಪೂರ್ಣಚಂದ್ರನಿಗೆ ಸಹೋದರವಾದ, ಸಿತಮಾತಪವಾರಣಂ= ಬಿಳ್ಗೊಡೆಯನು,

ಮಹಾಲಕ್ಷ್ಮೀಃ=ಮಹಾಲಕ್ಷ್ಮಿಯು, ತಸ್ಯ=ಆ ಪರಮೇಶ್ವರನಿಗೆ, ದಧೌ=ಮಾಡಿದಳು. ॥೩೭॥

ಗ್ರಂಥ॥ ತಂತ್ರೀರಝುಂಕಾರಶಾಲಿನ್ಯಾ ಸಂಗೀತಾಮೃತವಿದ್ಯಯಾ ।
ಉಪತಸ್ಥೇ ಮಹಾದೇವಮುಪಾಂತೇ ಚ ಸರಸ್ವತೀ ॥

ಟೀಕು॥ ತಂತ್ರೀ=ಸ್ವರಮಂಡಲದ ತಂತಿಗಳ, ಝುಂಕಾರಶಾಲಿನ್ಯಾ=ಝಂಕಾರಧ್ವನಿಯಿಂದೆ ವೊಪ್ಪುತ್ತಿರ್ದ್ದ, ಸಂಗೀತಾಮೃತವಿದ್ಯಯಾ ಚ=ಸಂಗೀತದ ಅಮೃತಮಯವಾದ ವಿದ್ಯೆಯಿಂದೆ, ಸರಸ್ವತೀ=ಸರಸ್ವತಿಯು, ಮಹಾದೇವಂ=ಪರಮೇಶ್ವರನನು, ಉಪಾಂತೇ=ಸಮೀಪದಲ್ಲಿ, ಉಪತಸ್ಥೇ=ಸೇವಿಸಿದಳು. ॥೩೮॥

ಗ್ರಂಥ॥ ಝುಣತ್ಕಂಕಣಜಾತೇನ ಹಸ್ತೇನೋಪನಿಷದ್ವಧೂಃ ।
ಓಂಕಾರತಾಲವೃಂತೇನ ವೀಜಯಾಮಾಸ ಶಂಕರಮ್ ॥

ಟೀಕು॥ ಝುಣತ್ಕಂಕಣಜಾತೇನ=ಧ್ವನಿಮಾಡುತ್ತಿರ್ದ್ದ ರತ್ನವಲಯಂಗಳ ಸಮೂಹವುಳ್ಳ, ಹಸ್ತೇನ= ಕರಕಮಲದಿಂದೆ, ಉಪನಿಷದ್ವಧೂಃ=ಉಪನಿಷತ್ತೆಂಬ ಸ್ತ್ರೀಯು, ಓಂಕಾರತಾಲವೃಂತೇನ= ಓಂಕಾರವೆಂಬ ಬಾಲವಟ್ಟಿಗೆಯಿಂದೆ, ಶಂಕರಂ=ಪರಮೇಶ್ವರನನು, ವೀಜಯಾಮಾಸ=ಬೀಸಿದಳು. ॥೩೯॥

ಗ್ರಂಥ॥ ಚಲಚ್ಚಾಮರಿಕಾಹಸ್ತಾಃ ಝುಂಕುರ್ವನ್ಮಣಿಕಂಕಣಾಃ ।
ಆಸೇವಂತ ತಮೀಶಾನಮಭಿತೋ ದಿವ್ಯಕನ್ಯಕಾಃ ॥

ಟೀಕು॥ ಚಲಚ್ಚಾಮರಿಕಾಹಸ್ತಾಃ=ಚಲಿಸುತ್ತಿರ್ದ್ದ ಚಾಮರಂಗಳೆ ಹಸ್ತದಲುಳ್ಳ, ಝುಂಕುರ್ವನ್ಮಣಿಕಂಕಣಾಃ=ಝುಂಕಾರಧ್ವನಿಯನು ಮಾಡುತ್ತಿರ್ದ್ದ ರತ್ನಕಟಕಂಗಳುಳ್ಳ, ದಿವ್ಯಕನ್ಯಕಾಃ= ಇಂದ್ರಾಣಿ ಮೊದಲಾದ ದೇವಸ್ತ್ರೀಯರು, ತಮೀಶಾನಂ=ಆ ಪರಮೇಶ್ವರನನು, ಅಭಿತಃ=ಎಲ್ಲಾಕಡೆಯಲ್ಲಿ, ಆಸೇವಂತ=ಸೇವಿಸಿದರು. ॥೪೦॥

ಗ್ರಂಥ॥ ಚಾಮರಾಣಾಂ ವಿಲೋಲಾನಾಂ ಮಧ್ಯೇ ತನ್ಮುಖಮಂಡಲಮ್ ।
ರರಾಜ ರಾಜಹಂಸಾನಾಂ ಭ್ರಮತಾಮಿವ ಪಂಕಜಮ್ ॥

ಟೀಕು॥ ವಿಲೋಲಾನಾಂ=ಚಂಚಲಂಗಳಾಗಿರ್ದ್ದ, ಚಾಮರಾಣಾಂ=ಚಾಮರಂಗಳ. ಮಧ್ಯೇ= ಮಧ್ಯದಲ್ಲಿ, ತನ್ಮುಖಮಂಡಲಂ=ಆ ಪರಮೇಶ್ವರನ ಮುಖಮಂಡಲವು, ಭ್ರಮತಾಂ=ತಿರುಗುತ್ತಿರ್ದ್ದ, ರಾಜಹಂಸಾನಾಂ=ರಾಜಹಂಸೆಗಳ, ಮಧ್ಯೇ=ಮಧ್ಯದಲ್ಲಿಯ, ಪಂಕಜಮಿವ=ಕಮಲದೋಪಾದಿಯಲ್ಲಿ, ರರಾಜ=ಒಪ್ಪಿತ್ತು. ॥೪೧॥

ಗ್ರಂಥ॥ ಮಂತ್ರೇಣ ತಮಸೇವಂತ ವೇದಾಃ ಸಾಂಗವಿಭೂತಯಃ ।
ಭಕ್ತ್ಯಾ ಚೂಡಾಮಣಿಂ ಕಾಂತಂ ವಹಂತ ಇವ ಮೌಲಿಭಿಃ ॥

**ಟೀಕು॥** ಸಾಂಗವಿಭೂತಯಃ=ಶಿಕ್ಷೆ, ಕಲ್ಪ, ನಿರುಕ್ತಿ, ಛಂದಸ್ಸು, ವ್ಯಾಕರಣ, ಜ್ಯೋತಿಷವೆಂಬ ಷಡಂಗಗಳ ಸಂಪತ್ತಿಯೊಡನೆ ಕೂಡಿ ವರ್ತಿಸುತ್ತಿರ್ದ್ದ, ವೇದಾಃ=ಋಗ್ಯಜುಃಸಾಮಾಥರ್ವಣವೆಂಬ ವೇದಪುರುಷರು, ಮೌಲಿಭಿಃ=ಉಪನಿಷದ್ಭಾಗವಾದ ಮಸ್ತಕಂಗಳಿಂದೆ, ತಂ=ಆ ಪರಮೇಶ್ವರನನು, ಕಾಂತಂ=ಮನೋಹರವಾದ, ಚೂಡಾಮಣಿಮಿವ=ಚೂಡಾರತ್ನದೋಪಾದಿಯಲ್ಲಿ, ವಹಂತಸ್ಸಂತಃ=ಹೊರುತ್ತಿರ್ದ್ದವರಾಗುತವು, ಮಂತ್ರೇಣ=ಪ್ರಣವ ಮಂತ್ರದಿಂದೆ, ಭಕ್ತ್ಯಾ=ಭಕ್ತಿಯಿಂದೆ, ಅಸೇವಂತ=ಸೇವಿಸಿದರು. ॥೪೨॥

ಗ್ರಂಥ॥ ತದೀಯಾಯುಧಧಾರಿಣ್ಯಃ ತತ್ಸಮಾನವಿಭೂಷಣಾಃ ।
ಅಂಗಭೂತಾಃ ಸ್ತ್ರಿಯಃ ಕಾಶ್ಚಿದಾಸೇವಂತ ತಮೀಶ್ವರಮ್ ॥

**ಟೀಕು॥** ತದೀಯ=ಆ ವೇದಪುರುಷರ ಸಂಬಂಧವಾದ, ಆಯುಧಧಾರಿಣ್ಯಃ=ಆಯುಧಂಗಳನು ಧರಿಸುತ್ತಿರ್ದ್ದ, ತತ್ಸಮಾನ=ಆ ವೇದಪುರುಷರಿಗೆ ಸಮಾನವಾದ, ವಿಭೂಷಣಾಃ=ಅಲಂಕಾರಂ-ಗಳುಳ್ಳ, ಅಂಗಭೂತಾಃ=ವೇದಪುರುಷರಿಗೆ ಅಂಗವಾಗಿರ್ದ್ದ, ಕಾಶ್ಚಿತ್ ಸ್ತ್ರಿಯಃ=ಕೆಲವರು ಸ್ತ್ರೀಯರು, ತಮೀಶ್ವರಂ=ಆ ಪರಮೇಶ್ವರನನು, ಆಸೇವಂತ=ಎಲ್ಲಾ ಕಡೆಯಲ್ಲಿಯೂ ಸೇವಿಸಿದರು. ॥೪೩॥

ಗ್ರಂಥ॥ ಆಪ್ತಾಧಿಕಾರಿಣಃ ಕೇಚಿದನಂತಪ್ರಮುಖಾ ಅಪಿ ।
ಅಷ್ಟೌ ವಿದ್ಯೇಶ್ವರಾ ದೇವಮಭಜಂತ ಸಮಂತತಃ ॥

**ಟೀಕು॥** ಆಪ್ತಾಧಿಕಾರಿಣಃ=ಪರಮಾಪ್ತಿಕೆಯಾದಧಿಕಾರವುಳ್ಳ, ಅನಂತಪ್ರಮುಖಾಃ=ಅನಂತೇಶ್ವರ ಮೊದಲಾಗುಳ್ಳ, ಕೇಚಿತ್=ಕೆಲವು, ಅಷ್ಟೌ ವಿದ್ಯೇಶ್ವರಾಃ ಅಪಿ=ಅನಂತ, ಸೂಕ್ಷ್ಮ ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿಗಳೆಂಬ ಅಷ್ಟವಿದ್ಯೇಶ್ವರರು, ದೇವಂ= ಪರಮೇಶ್ವರನನು, ಸಮಂತತಃ=ಎಲ್ಲಾಕಡೆಯಲ್ಲಿ, ಅಭಜಂತ=ಸೇವಿಸಿದರು. ॥೪೪॥

ಗ್ರಂಥ॥ ತತೋ ನಂದೀ ಮಹಾಕಾಲಶ್ಚಂಡೋ ಭೃಂಗಿರಿಟಿಸ್ತತಃ ।
ಸೇನಾನೀರ್ಗಜವಕ್ತ್ರಶ್ಚ ರೇಣುಕೋ ದಾರುಕಸ್ತಥಾ ॥

ಘಂಟಾಕರ್ಣಃ ಪುಷ್ಪದಂತಃ ಕಪಾಲೀ ವೀರಭದ್ರಕಃ ।
ಏವಮಾದ್ಯಾ ಮಹಾಭಾಗಾ ಮಹಾಬಲಪರಾಕ್ರಮಾಃ ।
ನಿರಂಕುಶಮಹಾಸತ್ತ್ವಾ ಭೇಜಿರೇ ತಂ ಮಹೇಶ್ವರಮ್ ॥

**ಟೀಕು॥** ತತಃ=ಆ ಅಷ್ಟವಿದ್ಯೇಶ್ವರರು ಸೇವಿಸಿದನಂತರದಲ್ಲಿ, ನಂದೀ=ನಂದೀಶ್ವರನು, ಮಹಾಕಾಲಃ=ಮಹಾಕಾಳನು, ಚಂಡಃ=ಚಂಡೇಶ್ವರನು, ಭೃಂಗಿರಿಟಿಃ=ಭೃಂಗೀಶ್ವರನು, ತತಃ= ಅನಂತರದಲ್ಲಿ, ಸೇನಾನೀಃ=ಷಣ್ಮುಖನು, ಗಜವಕ್ತ್ರಶ್ಚ=ವಿಘ್ನೇಶ್ವರನು, ರೇಣುಕಃ=ರೇಣುಕಗಣೇಶ್ವರನು, ದಾರುಕಃ=ದಾರುಕಗಣೇಶ್ವರನು, ತಥಾ=ಹಾಂಗೆಯೆ, ಘಂಟಾಕರ್ಣಃ=ಘಂಟಾಕರ್ಣನು, ಪುಷ್ಪದಂತಃ= ಪುಷ್ಪದಂತನು, ಕಪಾಲೀ=ಕಪಾಲಿಯು, ವೀರಭದ್ರಕಃ=ವೀರಭದ್ರೇಶ್ವರನು, ಏವಮಾದ್ಯಾಃ=ಇವರು ಮೊದಲಾಗುಳ್ಳ, ಮಹಾಭಾಗಾಃ=ಶ್ರೇಷ್ಠರಾದ, ಮಹಾಬಲಪರಾಕ್ರಮಾಃ=ದೊಡ್ಡಿತ್ತಾದ ಬಲಪರಾಕ್ರಮಂಗಳುಳ್ಳ, ನಿರಂಕುಶಃ=ತಡಹಿಲ್ಲದೆಯಿರ್ದ್ದ, ಮಹಾಸತ್ತ್ವಾಃ= ಮಹಾಸಾಮರ್ಥ್ಯವುಳ್ಳ ರುದ್ರಗಣೇಶ್ವರು, ತಂ ಮಹೇಶ್ವರಂ=ಆ ಪರಮೇಶ್ವರನನು, ಭೇಜಿರೇ=ಸೇವಿಸಿದರು. ॥೪೬॥

**ಸೂತ್ರ॥** ಮುಂದೆ ಪ್ರಮಥಗಣಂಗಳನು ಅಯಿದು ಸೂತ್ರಂಗಳಿಂದೆ ವರ್ಣಿಸುತ್ತಿರ್ದ್ದಪಂ.

**ಗ್ರಂಥ॥** **ಅಣಿಮಾದಿಕಮೈಶ್ವರ್ಯಂ ಯೇಷಾಂ ಸಿದ್ಧೇರಪೋಹನಮ್ ।**
**ಬ್ರಹ್ಮಾದಯಸ್ಸುರಾ ಯೇಷಾಮಾಜ್ಞಾಲಂಘನಭೀರವಃ ॥**

**ಟೀಕು॥** ಅಣಿಮಾದಿಕಮೈಶ್ವರ್ಯಂ=ಅಣಿಮೆ, ಮಹಿಮೆ ಮೊದಲಾಗುಳ್ಳ ಅಷ್ಟಮಹದೈಶ್ವರ್ಯವು, ಯೇಷಾಂ=ಆರು ಕೆಲಂಬರು ಪ್ರಮಥಗಣಂಗಳ, ಸಿದ್ಧೇಃ=ಸಿದ್ಧಿಯ ದೆಸೆಯಿಂದೆ, ಅಪೋಹನಂ= ತುಷ್ಟವಾಗಿದ್ದುದು;ಬ್ರಹ್ಮಾದಯಃ ಸುರಾಃ=ಬ್ರಹ್ಮ ಮೊದಲಾಗುಳ್ಳ ದೇವತೆಗಳು, ಯೇಷಾಂ=ಆರು ಕೆಲಂಬರು, ಆಜ್ಞಾಲಂಘನ=ಆಜ್ಞೆಯನು ಮೀರುವಲ್ಲಿ, ಭೀರವಃ=ಭಯ ಶೀಲರಾದವರು. ॥೪೭॥

**ಗ್ರಂಥ॥** **ಮೋಕ್ಷಲಕ್ಷ್ಮೀಪರಿಷ್ವಂಗಮುದಿತಾ ಯೇಽಂತರಾತ್ಮನಾ ।**
**ಯೇಷಾಮೀಷತ್ಕರಂ ವಿಶ್ವಸರ್ಗಸಂಹಾರಕಲ್ಪನಮ್ ॥**

**ಟೀಕು॥** ಯೇ=ಆರು ಕೆಲಂಬರು, ಅಂತರಾತ್ಮನಾ=ಅಂತರ್ಮುಖವಾದ ಬುದ್ಧಿಯಿಂದೆ, ಮೋಕ್ಷಲಕ್ಷ್ಮೀಪರಿಷ್ವಂಗ=ಪರಮೋಕ್ಷಲಕ್ಷ್ಮಿಯನಾಲಿಂಗಿಸುವಲ್ಲಿ, ಮುದಿತಾಃ=ಸಂತೋಷಿಸಲುಪಟ್ಟವರು, ಯೇಷಾಂ=ಆರು ಕೆಲಂಬರಿಗೆ, ವಿಶ್ವ=ಸಮಸ್ತ ಲೋಕಂಗಳ, ಸರ್ಗಸಂಹಾರಕಲ್ಪನಂ=ಸೃಷ್ಟಿ ಸಂಹಾರವ ಮಾಡುವತನವು, ಈಷತ್ಕರಂ=ಕ್ಷಣಿಕವು. ॥೪೮॥

**ಗ್ರಂಥ॥** **ಜ್ಞಾನಶಕ್ತಿಃ ಪರಾ ಯೇಷಾಂ ಸರ್ವವಸ್ತುಪ್ರಕಾಶಿನೀ ।**
**ಆನಂದಕಣಿಕಾ ಯೇಷಾಂ ಹರಿಬ್ರಹ್ಮಾದಿಸಂಪದಃ ॥**

**ಟೀಕು॥** ಯೇಷಾಂ=ಆರು ಕೆಲಂಬರಿಗೆ, ಸರ್ವವಸ್ತುಪ್ರಕಾಶಿನೀ=ಸಮಸ್ತವಸ್ತುವನು ಕಾಣಿಸುತ್ತಿರ್ದ್ದ, ಜ್ಞಾನಶಕ್ತಿಃ=ಜ್ಞಾನಶಕ್ತಿಯೆ, ಪರಾ=ಸರ್ವೋತ್ಕರ್ಷವಾಗಿರ್ದ್ದುದು, ಯೇಷಾಂ=ಆರು ಕೆಲಂಬರಿಗೆ, ಹರಿಬ್ರಹ್ಮಾದಿ ಸಂಪದಃ=ನಾರಾಯಣ ಬ್ರಹ್ಮ ಮೊದಲಾಗುಳ್ಳ ದೇವತೆಗಳ ಸಂಪತ್ತಿಗಳು, ಆನಂದಕಣಿಕಾಃ=ಆನಂದದ ಲೇಶಭಾಗಂಗಳು; ॥೪೯॥

ಗ್ರಂಥ॥ ಆಕಾಂಕ್ಷತೇ ಪದಂ ಯೇಷಾಂ ಯೋಗಿನೋ ಯೋಗತತ್ಪರಾಃ ।
ಕಾಂಕ್ಷಣೀಯಫಲೋ ಯೇಷಾಂ ಸಂಕಲ್ಪಃ ಕಲ್ಪಪಾದಪಃ ॥

**ಟೀಕು॥** ಯೋಗತತ್ಪಾರಾಃ=ಶಿವಯೋಗದಲ್ಲಿ ತತ್ಪರರಾದ, ಯೋಗಿನಃ=ಯೋಗೀಶ್ವರರು, ಯೇಷಾಂ =ಆರು ಕೆಲಂಬರು, ಪದಂ=ಪದವನು, ಆಕಾಂಕ್ಷತೇ=ಬಯಸುತ್ತಿರ್ದಪರು, ಯೇಷಾಂ=ಆರು ಕೆಲಂಬರು, ಸಂಕಲ್ಪಃ=ಸಂಕಲ್ಪವು, ಕಾಂಕ್ಷಣೀಯಫಲಃ=ಬಯಸಲು ಯೋಗ್ಯವಾದ ಫಲವುಳ್ಳ, ಕಲ್ಪಪಾದಪಃ=ಕಲ್ಪವೃಕ್ಷವು ॥೫೦॥

ಗ್ರಂಥ॥ ಕರ್ಮಕಾಲಾದಿಕಾರ್ಪಣ್ಯಚಿಂತಾ ಯೇಷಾಂ ನ ವಿದ್ಯತೇ ।
ಯೇಷಾಂ ವಿಕ್ರಮಸನ್ನಾಹಾಃ ಮೃತ್ಯೋರಪಿ ಚ ಮೃತ್ಯವಃ ।
ತೇ ಸಾರೂಪ್ಯಪದಂ ಪ್ರಾಪ್ತಾಃ ಪ್ರಮಥಾಃ ಭೇಜಿರೇ ಶಿವಮ್ ॥

**ಟೀಕು॥** ಕರ್ಮ=ಸಂಚಿತಾದಿ ಕರ್ಮತ್ರಯ, ಕಾಲಾದಿ=ಕಾಲ ಕಾಮ ಮೊದಲಾಗುಳ್ಳವರಿಂದಲಾದ, ಕಾರ್ಪಣ್ಯಚಿಂತಾ=ಕಾರ್ಪಣ್ಯ ಚಿಂತೆಯು, ಯೇಷಾಂ=ಆರು ಕೆಲಂಬರಿಗೆ, ನ ವಿದ್ಯತೇ= ಉಂಟಾಗುತ್ತಿರದು. ಯೇಷಾಂ=ಆರು ಕೆಲಂಬರ, ವಿಕ್ರಮಸನ್ನಾಹಾಃ=ಪರಾಕ್ರಮ ಪ್ರಸಂಗಗಳು, ಮೃತ್ಯೋರಪಿ ಚ=ಮೃತ್ಯುದೇವತೆಗಳಾಯಿತ್ತಾದೊಡೆಯು, ಮೃತ್ಯವಃ=ಕಾಲ ಮೃತ್ಯುಗಳಾಗಿದ್ದಂಥಾವು. ಸಾರೂಪ್ಯಪದಂ ಪ್ರಾಪ್ತಾಃ=ಸಾರೂಪ್ಯಪದವಿಯನೆಯ್ದಿರ್ದ್ದ, ತೇ ಪ್ರಮಥಾಃ=ಆ ಪೂರ್ವೋಕ್ತ ಪ್ರಮಥಗಣಂಗಳು, ಶಿವಂ=ಪರಮೇಶ್ವರನನು, ಭೇಜಿರೇ=ಸೇವಿಸಿದರು. ॥೫೧॥

ಗ್ರಂಥ॥ ಬ್ರಹ್ಮೋಪೇಂದ್ರ ಮಹೇಂದ್ರಾದ್ಯಾ ವಿಶ್ವತಂತ್ರಾಧಿಕಾರಿಣಮ್ ।
ಆಯುಧಾಲಂಕೃತಪ್ರಾಂತಾಃ ಪರಿತಸ್ತಂ ಸಿಷೇವಿರೇ ॥

**ಟೀಕು॥** ಬ್ರಹ್ಮ=ಬ್ರಹ್ಮನು, ಉಪೇಂದ್ರ=ವಿಷ್ಣುವು, ಮಹೇಂದ್ರಾದ್ಯಾಃ=ದೇವೇಂದ್ರನೆ ಮೊದಲಾಗುಳ್ಳ ತ್ರಯಸ್ತ್ರಿಂಶತ್ಕೋಟಿ ದೇವತೆಗಳು, ಆಯುಧಾಲಂಕೃತಪ್ರಾಂತಾಃಸಂತಃ=ಆಯುಧಂಗಳಿಂದೆ ಅಲಂಕರಿಸಲುಪಟ್ಟಯಿಕ್ಕೆಲಂಗಳುಳ್ಳವರಾಗುತವು, ವಿಶ್ವತಂತ್ರಾಧಿಕಾರಿಣಂ=ಸೃಷ್ಟಿಸ್ಥಿತಿಸಂಹಾರ ತಿರೋಭಾವಾನುಗ್ರಹವೆಂಬ ಸಕಲತಂತ್ರವ್ಯಾಪಾರಂಗಳಲ್ಲಿಯ ಅಧಿಕಾರವುಳ್ಳ, ತಂ=ಆ ಪರಮೇಶ್ವರನನು, ಪರಿತಃ=ಎಲ್ಲಾ ಕಡೆಯಲ್ಲಿ, ಸಿಷೇವಿರೇ=ಸೇವಿಸಿದರು. ॥೫೨॥

ಗ್ರಂಥ॥ ಆದಿತ್ಯಾ ವಸವೋ ರುದ್ರಾಃ ಯಕ್ಷಗಂಧರ್ವಕಿನ್ನರಾಃ ।
ದಾನವಾ ರಾಕ್ಷಸಾ ದೈತ್ಯಾಃ ಸಿದ್ಧಾ ವಿದ್ಯಾಧರೋರಗಾಃ ।
ಅಭಜಂತ ಮಹಾದೇವಮಪರಿಚ್ಛಿನ್ನಸೈನಿಕಾಃ ॥

**ಟೀಕು||** ಆದಿತ್ಯಾಃ=ದ್ವಾದಶಾದಿತ್ಯರು, ವಸವಃ=ಅಷ್ಟವಸುಗಳು, ರುದ್ರಾಃ=ಏಕಾದಶ ರುದ್ರರು, ಯಕ್ಷ=ಕುಬೇರಾದಿ ಯಕ್ಷರು, ಗಂಧರ್ವ=ಹಾಹಾಹೂಹೂ ಪ್ರಭೃತಿಗಳು, ಕಿನ್ನರಾಃ=ಅಶ್ವಮುಖರು, ದಾನವಾಃ=ಬಾಣಾದಿ ದಾನವರು, ರಾಕ್ಷಸಾಃ=ರಾವಣಾದಿ ರಾಕ್ಷಸರು, ದೈತ್ಯಾಃ=ತಾರಕಾದಿ ದೈತ್ಯರು, ಸಿದ್ಧಾಃ=ಆದಿನಾಥಾದಿ ಸಿದ್ಧರು, ವಿದ್ಯಾಧರಾಃ=ಮಣಿಭದ್ರಾದಿ ವಿದ್ಯಾಧರರು, ಉರಗಾಃ=ಶೇಷಾದಿ ಸರ್ಪ ರಾಜರು, ಅಪರಿಚ್ಛಿನ್ನಸೈನಿಕಾಃ ಸಂತಃ=ಪರಿಪಂಚಿಲ್ಲದೆಯಿದ್ದ ಸೇನೆವುಳ್ಳವರಾಗುತವು, ಮಹಾದೇವಂ=ಪರಮೇಶ್ವರನನು, ಅಭಜಂತ=ಸೇವಿಸಿದರು. ||೫೪||

**ಗ್ರಂಥ||**

ವಸಿಷ್ಠೋ ವಾಮದೇವಶ್ಚ ಪುಲಸ್ತ್ಯಾಗಸ್ತ್ಯಶೌನಕಾಃ ।
ದಧೀಚಿರ್ಗೌತಮಶ್ಚೈವ ಸಾನಂದಶುಕನಾರದಾಃ ॥

ಉಪಮನ್ಯುಭೃಗುವ್ಯಾಸಪರಾಶರಮರೀಚಯಃ ।
ಇತ್ಯಾದ್ಯಾ ಮುನಯಸ್ಸರ್ವೇ ನೀಲಕಂಠಂ ಸಿಷೇವಿರೇ ॥

**ಟೀಕು||** ವಸಿಷ್ಠಃ=ವಸಿಷ್ಠಋಷಿ, ವಾಮದೇವಃ ಚ=ವಾಮದೇವ ಮುನಿ, ಪುಲಸ್ತ್ಯ=ಪುಲಸ್ತ್ಯ ಋಷಿ, ಅಗಸ್ತ್ಯ=ಅಗಸ್ತ್ಯಮುನಿ, ಶೌನಕಾಃ=ಶೌನಕಮುನಿ, ದಧೀಚಿಃ=ದಧೀಚಿಮುನಿ, ಗೌತಮಃ ಶ್ಚೈವ =ಗೌತಮಋಷಿ, ಸಾನಂದ=ಸಾನಂದಮುನಿ, ಶುಕ=ಶುಕಋಷಿ, ನಾರದಾಃ=ನಾರದಋಷಿ, ಉಪಮನ್ಯು=ಉಪಮನ್ಯು ಮುನಿ, ಭೃಗು=ಭೃಗುಋಷಿ, ವ್ಯಾಸ=ವೇದವ್ಯಾಸ, ಪರಾಶರ=ಪರಾಶರ ಮುನಿ, ಮರೀಚಯಃ=ಮರೀಚಿಋಷಿ, ಇತ್ಯಾದ್ಯಾಃ=ಇವರು ಮೊದಲಾಗುಳ್ಳ, ಸರ್ವೇ ಮುನಯಃ=ಸಮಸ್ತ ಋಷಿಗಳು, ನೀಲಕಂಠಂ=ನೀಲಕಂಠನಾದ ಪರಮೇಶ್ವರನನು, ಸಿಷೇವಿರೇ=ಸೇವಿಸಿದರು. ||೫೫||

**ಸೂತ್ರ||** ಇನ್ನು ಪರಮೇಶ್ವರನ ರಾಜ್ಯವ್ಯಾಪಾರವನು ದಶಸೂತ್ರಂಗಳಿಂದೆ ತೋರಿಸುತ್ತಿರ್ದಪಂ.

**ಗ್ರಂಥ||**

ಪಾರ್ಶ್ವಸ್ಥಪರಿವಾರಾಣಾಂ ವಿಮಲಾಂಗೇಷು ಬಿಂಬಿತಃ ।
ಸರ್ವಾಂತರ್ಗತಮಾತ್ಮಾನಂ ಸ ರೇಜೇ ದರ್ಶಯನ್ನಿವ ॥

**ಟೀಕು||** ಪಾರ್ಶ್ವಸ್ಥ=ಇಕ್ಕೆಲದಲ್ಲಿಯಿರುತ್ತಿರ್ದ್ದ, ಪರಿವಾರಾಣಾಂ=ಪರಿವಾರ ದೇವತೆಗಳ, ವಿಮಾಲಾಂಗೇಷು=ನಿರ್ಮಲಾಂಗಗಳಲ್ಲಿ, ಬಿಂಬಿತಃ=ಪ್ರತಿಬಿಂಬಿಸಲುಪಟ್ಟ, ಸಃ=ಆ ಪರಮೇಶ್ವರನು, ಆತ್ಮಾನಂ=ತನ್ನನು, ಸರ್ವಾಂತರ್ಗತಂ=ಸರ್ವರ ಹೃತ್ಕಮಲವನು ಎಯ್ದಿರ್ದ್ದಾತನಾಗಿ, ದರ್ಶಯನ್ನಿವ=ತೋರಿಸುತ್ತಿರ್ದ್ದಾತನೇಕೈಯೆಂಬ ಹಾಗೆ, ರೇಜೇ=ಒಪ್ಪಿದನು. ||೫೬||

**ಗ್ರಂಥ||**

ಕ್ಷಣಂ ಸ ಶಂಭುರ್ದೇವಾನಾಂ ಕಾರ್ಯಭಾಗಂ ನಿರೂಪಯನ್ ।
ಕ್ಷಣಂ ಗಂಧರ್ವರಾಜಾನಾಂ ಗಾನವಿದ್ಯಾಂ ವಿಭಾವಯನ್ ॥

**ಟೀಕು||** ಸ ಶಂಭುಃ=ಆ ಪರಮೇಶ್ವರನು, ದೇವಾನಾಂ=ದೇವತೆಗಳಿಗೆ, ಕ್ಷಣಂ=ಕ್ಷಣಮಾತ್ರವು, ಕಾರ್ಯಭಾಗಂ=ಕಾರ್ಯಭಾಗವನು, ನಿರೂಪಯನ್=ನಿರೂಪಿಸುತ್ತ, ಕ್ಷಣಂ=ಕ್ಷಣಮಾತ್ರವು, ಗಂಧರ್ವರಾಜಾನಾಂ=ಗಂಧರ್ವರಾಜರ, ಗಾನವಿದ್ಯಾಂ=ಸಂಗೀತವಿದ್ಯೆಯನು, ವಿಭಾವಯನ್=ಲಾಲಿಸುತ್ತ; ||೫೭||

**ಗ್ರಂಥ||** ಬ್ರಹ್ಮವಿಷ್ಣ್ವಾದಿಭಿರ್ದೇವೈಃ ಕ್ಷಣಮಾಲಾಪಮಾಚರನ್ ।
ಕ್ಷಣಂ ದೇವಮೃಗಾಕ್ಷೀಣಾಂ ಲಾಲಯನ್ ನೃತ್ಯವಿಭ್ರಮಮ್ ॥

**ಟೀಕು||** ಕ್ಷಣಂ=ಕ್ಷಣಮಾತ್ರವು, ಬ್ರಹ್ಮ ವಿಷ್ಣ್ವಾದಿಭಿರ್ದೇವೈಃ=ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೊಡನೆ, ಆಲಾಪಂ=ಸಂಭಾಷಣೆಯನು, ಆಚರನ್=ಮಾಡುತ್ತ, ಕ್ಷಣಂ=ಕ್ಷಣಮಾತ್ರವು, ದೇವಮೃಗಾಕ್ಷೀಣಾಂ= ದೇವಸ್ತ್ರೀಯರ, ನೃತ್ಯವಿಭ್ರಮಂ=ಪಾತ್ರಭಾಗವನು, ಲಾಲಯನ್=ಲಾಲಿಸುತ್ತ; ||೫೮||

**ಗ್ರಂಥ||** ವ್ಯಾಸಾದೀನಾಂ ಕ್ಷಣಂ ಕುರ್ವನ್ ವೇದೋಚ್ಚಾರೇಷು ಗೌರವಮ್ ।
ವಿದಧಾನಃ ಕ್ಷಣಂ ದೇವ್ಯಾ ಮುಖೇ ಬಿಂಬಾಧರೇ ದೃಶಃ ॥

**ಟೀಕು||** ಕ್ಷಣಂ=ಕ್ಷಣಮಾತ್ರವು, ವ್ಯಾಸಾದೀನಾಂ=ವೇದವ್ಯಾಸ ಮೊದಲಾದ ಋಷಿಗಳಿಗೆ, ವೇದೋಚ್ಚಾರೇಷು=ವೇದಾಧ್ಯಯನಂಗಳಲ್ಲಿಯ, ಗೌರವಂ=ಗುರುತ್ವವನು, ಕುರ್ವನ್=ಮಾಡುತ್ತ, ಕ್ಷಣಂ=ಕ್ಷಣಮಾತ್ರವು, ದೇವ್ಯಾಃ=ಪಾರ್ವತಿದೇವಿಯ, ಮುಖೇ=ಮುಖದಲ್ಲಿ, ಬಿಂಬಾಧರೇ=ತೊಂಡೆ ಹಣ್ಣಿನೋಪಾದಿಯ ಅಧರದಲ್ಲಿ, ದೃಶಃ=ದೃಷ್ಟಿಗಳನು, ವಿದಧಾನಃ=ಇರಿಸುತ್ತಿರ್ದ; ||೫೯||

**ಗ್ರಂಥ||** ಹಾಸ್ಯನೃತ್ಯಂ ಕ್ಷಣಂ ಪಶ್ಯನ್ ಭೃಂಗಿನಾ ಪರಿಕಲ್ಪಿತಮ್ ।
ನಂದಿನಾ ವೇತ್ರಹಸ್ತೇನ ಸರ್ವತಂತ್ರಾಧಿಕಾರಿಣಾ ॥

ಅಮುಂಚತಾ ಸದಾ ಪಾರ್ಶ್ವಮಾತ್ಮಾಭಿಪ್ರಾಯವೇದಿನಾ ।
ಚೋದಿತಾನ್ವಾಸಯನ್ ಕಾಂಶ್ಚಿದ್ವಿಸೃಜನ್ ಭ್ರೂವಿಲಾಸತಃ ।
ಸಂಭಾವಯಂಸ್ತಥಾ ಚಾನ್ಯಾನನ್ಯಾನಪಿ ನಿಯಾಮಯನ್ ॥

**ಟೀಕು||** ಕ್ಷಣಂ=ಕ್ಷಣಮಾತ್ರವು, ಭೃಂಗಿನಾ=ಭೃಂಗಿಯಿಂದೆ, ಪರಿಕಲ್ಪಿತಂ=ಮಾಡಲುಪಟ್ಟ, ಹಾಸ್ಯನೃತ್ಯಂ=ಪರಿಹಾಸನರ್ತನವನು, ಪಶ್ಯನ್=ನೋಡುತ್ತ, ವೇತ್ರಹಸ್ತೇನ=ಸುವರ್ಣದ ಬೆತ್ತವೆ ಹಸ್ತದಲ್ಲುಳ್ಳ, ಸರ್ವತಂತ್ರಾಧಿಕಾರಿಣಾ=ಸಕಲ ನಿಯೋಗದಲ್ಲಿ ಅಧಿಕಾರವುಳ್ಳ, ಸದಾ=ಆವಾಗಲು, ಪಾರ್ಶ್ವಂ=ಪಾರ್ಶ್ವಭಾಗವನು, ಅಮುಂಚತಾ=ಬಿಡದೆಯಿರ್ದ, ಆತ್ಮಾಭಿಪ್ರಾಯವೇದಿನಾ=ತನ್ನ

ಅಭಿಪ್ರಾಯವನು ಬಲ್ಲ, ನಂದಿನಾ=ನಂದೀಶ್ವರನಿಂದೆ, ಚೋದಿತಾನ್=ಪ್ರೇರಿಸಲುಪಟ್ಟ, ಕಾಂಶ್ಚಿತ್ ವಾಸಯನ್=ಕೆಲಬರನು, ಕುಳ್ಳಿರಿಸುತ್ತ, ಕಾಂಶ್ಚಿತ್=ಕೆಲಬರನು, ಭ್ರೂವಿಲಾಸತಃ=ಭ್ರೂಸಂಜ್ಞೆಯಿಂದೆ, ವಿಸೃಜನ್=ಕಳುಹುತ್ತ, ತಥಾ=ಹಾಗೆಯೇ, ಚ ಅನ್ಯಾನ್=ಮತ್ತೆ ಕೆಲಬರನು, ಸಂಭಾವಯನ್=ಸಂಭಾವನೆಯ ಮಾಡುತ್ತ, ಅನ್ಯಾನಪಿ-ಮತ್ತೆ ಕೆಲಬರನಾಯಿತ್ತಾದೊಡೆ, ನಿಯಾಮಯನ್=ನಿಯಮಿಸುತ್ತಿರ್ದ್ದ; ||೬೧||

ಗ್ರಂಥ|| ಸಮಸ್ತಭುವನಾಧೀಶಮೌಲಿಲಾಲಿತಶಾಸನಃ ।
ಅಕುಂಠಶಕ್ತಿರವ್ಯಾಜಲಾವಣ್ಯಲಲಿತಾಕೃತಿಃ ॥

**ಟೀಕು||** ಸಮಸ್ತಭುವನಾಧೀಶ=ಸಕಲ ಲೋಕೇಶನಾದ ಬ್ರಹ್ಮನಿಂದೆ, ಮೌಲಿಲಾಲಿತಶಾಸನಃ=ಮಸ್ತಕದಲ್ಲಿ ಹೊರಲುಪಟ್ಟ ತನ್ನ ಆಜ್ಞೆಯುಳ್ಳ, ಅಕುಂಠಶಕ್ತಿಃ=ಕುಂಠಿತವಲ್ಲದೆಯಿದ್ದ ಸಾಮರ್ಥ್ಯವುಳ್ಳ, ಅವ್ಯಾಜಲಾವಣ್ಯ=ವ್ಯಾಜವಿಲ್ಲದೆಯಿದ್ದ ಸೌಂದರ್ಯದಿಂದೆ, ಲಲಿತಾಕೃತಿಃ=ಮನೋಹರವಾದಾಕಾರವುಳ್ಳ; ||೬೨||

ಗ್ರಂಥ|| ಸ್ಥಿರಯೌವನಸೌರಭ್ಯಶೃಂಗಾರಿತಕಲೇವರಃ ।
ಆತ್ಮಶಕ್ತ್ಯಮೃತಾಸ್ವಾದರಸೋಲ್ಲಾಸಿತಮಾನಸಃ ॥

**ಟೀಕು||** ಸ್ಥಿರಯೌವನಸೌರಭ್ಯ=ಸ್ಥಿರವಾದ ಯೌವ್ವನದ ಮನೋಹರತ್ವದಿಂದೆ, ಶೃಂಗಾರಿತ ಕಲೇವರಃ=ಶೃಂಗರಿಸಲುಪಟ್ಟ ದೇಹವುಳ್ಳ, ಆತ್ಮಶಕ್ತ್ಯಮೃತ=ಸಮವೇತ ಶಕ್ತಿಯೆಂಬ ಅಮೃತದ, ಆಸ್ವಾದರಸೋಲ್ಲಾಸಿತಮಾನಸಃ=ಆಸ್ವಾದರಸದಿಂದೆ ವಿಕಸನವಾದ ಚಿತ್ತವುಳ್ಳ; ||೬೩||

ಗ್ರಂಥ|| ಸ್ವಾಭಾವಿಕಮಹೈಶ್ವರ್ಯವಿಶ್ರಾಮಪರಮಾವಧಿಃ ।
ನಿಷ್ಕಲಂಕಮಹಾಸತ್ತ್ವನಿರ್ಮಿತಾನೇಕವಿಗ್ರಹಃ ॥

**ಟೀಕು||** ಸ್ವಾಭಾವಿಕಮಹೈಶ್ವರ್ಯ=ಸ್ವಭಾವಸಿದ್ಧವಾದಣಿಮಾದಿಮಹದೈಶ್ವರ್ಯಂಗಳ, ವಿಶ್ರಾಮಪರಮಾವಧಿಃ=ವಿಶ್ರಾಮಕ್ಕೆ ಪರಮಾವಧಿಯಾಗಿರ್ದ್ದ, ನಿಷ್ಕಲಂಕಮಹಾಸತ್ತ್ವ=ಕಲಂಕರಹಿತವಾದ ಮಹಾಸಾಮರ್ಥ್ಯದಿಂದೆ, ನಿರ್ಮಿತಾನೇಕವಿಗ್ರಹಃ=ಮಾಡಲುಪಟ್ಟ ಅನೇಕ ಶರೀರಂಗಳುಳ್ಳ; ||೬೪||

ಗ್ರಂಥ|| ಅಖಂಡಾರಾತಿದೋರ್ದಂಡಕಂಡೂಖಂಡನಪಂಡಿತಃ ।
ಚಿಂತಾಮಣಿಃ ಪ್ರಸನ್ನಾನಾಂ ಶ್ರೀಕಂಠಃ ಪರಮೇಶ್ವರಃ ॥

**ಟೀಕು||** ಅಖಂಡಾರಾತಿ=ಸಮಸ್ತ ಶತ್ರುಗಳ, ದೋರ್ದಂಡಕಂಡೂ=ಭುಜದಂಡಂಗಳ ತೀಟೆಯನು, ಖಂಡನಪಂಡಿತಃ=ಖಂಡನವಮಾಡಿಸುವಲ್ಲಿ ಕುಶಲನಾಗಿರ್ದ್ದ, ಪ್ರಪನ್ನಾನಾಂ= ನಿರ್ಮಲಚಿತ್ತರಿಗೆ,

ಚಿಂತಾಮಣೇಃ=ಚಿಂತಾರತ್ನವಾದ, ಶ್ರೀಕಂಠಃ=ಶ್ರೀಕಂಠೇಶ್ವರನು, ಪರಮೇಶ್ವರಃ=ಸಕಲಲೋಕಂಗಳಿಗೊಡೆಯನಾದಾತನು; ||೬೫||

**ಸೂತ್ರ||** ಈ ಪ್ರಕಾರದಿಂದ ಶಿವನ ಸಾಮರ್ಥ್ಯ ವೈಭವವನು ವರ್ಣಿಸಿ ಮುಂದೆ ಏಕಾದಶಸೂತ್ರಂಗಳಿಂದೆ ರೇಣುಕಗಣೇಶ್ವರನಿಗೆ ಶಿವಭಕ್ತರ ಮಹತ್ವವನು ಶಿವನು ಕಥಾ ಸೂಚನೆಯಿಂದೆ ತೋರಿಸುತ್ತಿರ್ದಪಂ.

**ಗ್ರಂಥ||** **ಸಭಾಂತರಗತಂ ತಂತ್ರಂ ರೇಣುಕಂ ಗಣನಾಯಕಮ್ ।**
**ಪ್ರಸಾದಂ ಸುಲಭಂ ದಾತುಂ ತಾಂಬೂಲಂ ಸ ತಮಾಹ್ವಯತ್ ॥**

**ಟೀಕು||** ಸಃ=ಆ ಶ್ರೀಕಂಠೇಶ್ವರನು, ಸಭಾಂತರಗತಂ=ಸಭಾಮಧ್ಯವನು ಎಯ್ದಿರ್ದ, ತಂತ್ರಂ=ಮುಖ್ಯನಾದ, ತಂ=ಪ್ರಸಿದ್ಧವಾದ, ರೇಣುಕಂ ಗಣನಾಯಕಂ=ರೇಣುಕಗಣೇಶ್ವರನನು, ಸುಲಭಂ=ಪಡೆಯಲು ಯೋಗ್ಯವಾದ, ತಾಂಬೂಲಂ ಪ್ರಸಾದಂ=ತಾಂಬೂಲ ಪ್ರಸಾದವನು, ದಾತುಂ=ಕೊಡಲು, ಆಹ್ವಯತ್=ಶಿರಸ್ಸಂಜ್ಞೆಯಿಂದೆ ಕರೆದನು. ||೬೬||

**ಗ್ರಂಥ||** **ಶಂಭೋರಾಹ್ವಾನಸಂತೋಷಸಂಭ್ರಮೇಣೈವ ದಾರುಕಮ್ ।**
**ಉಲ್ಲಂಘ್ಯಪಾರ್ಶ್ವಮಗಮಲ್ಲೋಕನಾಥಸ್ಯ ರೇಣುಕಃ ॥**

**ಟೀಕು||** ರೇಣುಕಃ=ರೇಣುಕಗಣೇಶ್ವರನು, ಆಹ್ವಾನಸಂತೋಷಸಂಭ್ರಮೇಣೈವ=ಕರೆವುದರಿಂದಲಾದ ಸಂತೋಷದ ಸಂಭ್ರಮದಿಂದಲಾದವೆ, ದಾರುಕಂ=ದಾರುಕಗಣೇಶ್ವರನನು, ಉಲ್ಲಂಘ್ಯ= ದಾಂಟಿ, ಲೋಕನಾಥಸ್ಯ=ಜಗನ್ನಾಥನಾದ, ಶಂಭೋಃ=ಪರಮೇಶ್ವರನ, ಪಾರ್ಶ್ವಂ=ವಾಮಭಾಗವನು, ಅಗಮತ್=ಎಯ್ದಿದನು. ||೬೭||

**ಗ್ರಂಥ||** **ತಮಾಲೋಕ್ಯ ವಿಭುಸ್ತತ್ರ ಸಮುಲ್ಲಂಘಿತದಾರುಕಮ್ ।**
**ಮಾಹಾತ್ಮ್ಯಂ ನಿಜಭಕ್ತಾನಾಂ ದ್ಯೋತಯನ್ನಿದಮಬ್ರವೀತ್ ॥**

**ಟೀಕು||** ವಿಭುಃ=ಸ್ವತಂತ್ರಶೀಲನಾದ ಸರ್ವೇಶ್ವರನು, ತತ್ರ=ಆ ಸಭಾಮಧ್ಯದಲ್ಲಿ, ಸಮುಲ್ಲಂಘಿತ ದಾರುಕಂ=ದಾಂಟಲುಪಟ್ಟ ದಾರುಕಗಣೇಶ್ವರನುಳ್ಳ, ತಂ=ಆ ರೇಣುಕಗಣೇಶ್ವರನನು, ಆಲೋಕ್ಯ=ನೋಡಿ, ನಿಜಭಕ್ತಾನಾಂ=ತನ್ನ ಭಕ್ತರ, ಮಾಹಾತ್ಮ್ಯಂ=ಮಹತ್ವವನು, ದ್ಯೋತಯನ್ ಸನ್=ಪ್ರಕಾಶಿಸುತ್ತಿದ್ದಾತನಾಗುತಲು, ಇದಂ=ಈ ವಕ್ಷ್ಯಮಾಣ ಪ್ರಕಾರವಾದ ವಾಕ್ಯವನು, ಅಬ್ರವೀತ್= ನುಡಿದನು. ||೬೮||

**ಗ್ರಂಥ||** **ರೇ ರೇ ರೇಣುಕ ನಿರ್ಬುದ್ಧೇ ಕಥಮೇಷ ತ್ವಯಾಽಧುನಾ ।**
**ಉಲ್ಲಂಘಿತಃ ಸಭಾಮಧ್ಯೇ ಮಮ ಭಕ್ತೋ ಹಿ ದಾರುಕಃ ॥**

**ಟೀಕು॥** ನಿರ್ಬುದ್ಧೇ=ಬುದ್ಧಿಹೀನನಾದ, ರೇ ರೇ ರೇಣುಕ=ಎಲೆ ರೇಣುಕನೆ! ತ್ವಯಾ=ನಿನ್ನಿಂದ, ಅಧುನಾ=ಈಗ, ಮಮ=ಎನ್ನ, ಭಕ್ತಃ=ಭಕ್ತನಾದ, ಏಷ ದಾರುಕಃ=ಈ ದಾರುಕನು, ಸಭಾಮಧ್ಯೇ=ಸಭಾ ಮಧ್ಯದಲ್ಲಿ, ಕಥಂ=ಏನು ಕಾರಣದಿಂದೆ, ಉಲ್ಲಂಘಿತಃ ಹಿ=ದಾಂಟಲುಪಟ್ಟನು? ॥೧೯॥

**ಗ್ರಂಥ॥** **ಲಂಘನಂ ಮಮ ಭಕ್ತಾನಾಂ ಪರಮಾನರ್ಥಕಾರಣಮ್ ।**
**ಆಯುಃ ಶ್ರಿಯಂ ಕುಲಂ ಕೀರ್ತಿಂ ನಿಹಂತಿ ಹಿ ಶರೀರಿಣಾಮ್ ॥**

**ಟೀಕು॥** ಮಮ ಭಕ್ತಾನಾಂ=ಎನ್ನ ಭಕ್ತರ, ಲಂಘನಂ=ದಾಂಟುವುದು, ಪರಮಾನರ್ಥ ಕಾರಣಂ=ಮಹಾ ಅನರ್ಥಕ್ಕೆ ಕಾರಣವಾಗಲದು, ಆಯುಃ=ಆಯುಷ್ಯವನು, ಶ್ರಿಯಂ=ಸಂಪತ್ತಿಯನು, ಕುಲಂ=ವಂಶವನು, ಕೀರ್ತಿಂ=ಕೀರ್ತಿಯನು, ಶರೀರಿಣಾಂ=ದೇಹಿಗಳಿಗೆ, ನಿಹಂತಿ=ಕೆಡಿಸುತ್ತಿರ್ದಪುದು. ಹಿ=ಪ್ರಸಿದ್ಧವು. ॥೨೦॥

**ಗ್ರಂಥ॥** **ಮಮ ಭಕ್ತಮವಜ್ಞಾಯ ಮಾರ್ಕಂಡೇಯಂ ಪುರಾ ಯಮಃ ।**
**ಮತ್ಪಾದತಾಡನಾದಾಸೀತ್ ಸ್ಮರಣೀಯಕಲೇವರಃ ॥**

**ಟೀಕು॥** ಪುರಾ=ಪೂರ್ವದಲ್ಲಿ ಯಮಃ=ಯಮನು, ಮಮ ಭಕ್ತಂ=ಎನ್ನ ಭಕ್ತನಾದ ಮಾರ್ಕಂಡೇಯಂ=ಮಾರ್ಕಂಡೇಯ ಮುನಿಯನು, ಅವಜ್ಞಾಯ=ಉದಾಸೀನವನು ಮಾಡಿ, ಮತ್ಪಾದ ತಾಡನಾತ್=ಎನ್ನ ಪಾದದ ಹೊಯಿಲದೆಸೆಯಿಂದೆ, ಸ್ಮರಣೀಯಕಲೇವರಃ=ನೆನೆಯಲು ಯೋಗ್ಯವಾದ ಶರೀರ ಉಳ್ಳಾತನು, ಆಸೀತ್=ಆದನು. ॥೨೧॥

**ಗ್ರಂಥ॥** **ಭೃಗೋಶ್ಚ ಶಂಕುಕರ್ಣಸ್ಯ ಮಯಿ ಭಕ್ತಿಮತೋಸ್ತಯೋಃ ।**
**ಕೃತ್ವಾಽನಿಷ್ಟಮಭೂದ್ವಿಷ್ಣುರ್ವಿಕೇಶೋ ದಶಯೋನಿಭಾಕ್ ॥**

**ಟೀಕು॥** ಮಯಿ ಭಕ್ತಿಮತಃ=ಎನ್ನಲ್ಲಿ ಭಕ್ತಿಯುಳ್ಳ, ತಯೋಃ=ಪ್ರಸಿದ್ಧರಾದ, ಶಂಕುಕರ್ಣಸ್ಯ ಭೃಗೋಶ್ಚ=ಶಂಕುಕರ್ಣಗಣೇಶ್ವರ ಭೃಗುಋುಷಿಗಳಿಗೆ, ವಿಷ್ಣುಃ=ವಿಷ್ಣುವು, ಅನಿಷ್ಟಂ=ಅನಿಷ್ಟವನು, ಕೃತ್ವಾ=ಮಾಡಿ, ವಿಕೇಶಃ=ಮುಂದಲೆಯ ಕೀಳಿಸಿಕೊಂಡಾತನು, ದಶಯೋನಿಭಾಕ್=ಮತ್ಸ್ಯಕೂರ್ಮಾದಿ ದಶಯೋನಿಯನು ಭಜಿಸುತ್ತಿದ್ದ ಆತನು, ಅಭೂತ್=ಆದನು. ॥೨೨॥

**ಗ್ರಂಥ॥** **ಮದ್ಭಕ್ತೇನ ದಧೀಚೇನ ಕೃತ್ವಾ ಯುದ್ಧಂ ಜನಾರ್ದನಃ ।**
**ಭಗ್ನಚಕ್ರಾಯುಧಃ ಪೂರ್ವಂ ಪರಾಭವಮುಪಾಗಮತ್ ॥**

**ಟೀಕು||** ಜನಾರ್ದನಃ=ನಾರಾಯಣನು, ಪೂರ್ವಂ=ಮೊದಲು, ಮದ್ಭಕ್ತೇನ ದಧೀಚೇನ=ಎನ್ನ ಭಕ್ತನಾದ ದಧೀಚಿ ಋಷಿಯೊಡನೆ, ಯುದ್ಧಂ=ಯುದ್ಧವನು, ಕೃತ್ವಾ=ಮಾಡಿ, ಭಗ್ನ ಚಕ್ರಾಯುಧಃ ಸನ್=ಮುರಿಯಲುಪಟ್ಟ ಚಕ್ರ ಆಯುಧಂಗಳುಳ್ಳಾತನಾಗುತಲು, ಪರಾಭವಂ=ತಿರಸ್ಕಾರವನು, ಉಪಾಗಮತ್=ಎಯ್ದಿದನು. ||೭೩||

**ಗ್ರಂಥ||** **ಕೃತಾಶ್ವಮೇಧೋ ದಕ್ಷೋಽಪಿ ಮದ್ಭಕ್ತಾಂಶ್ಚ ಗಣೇಶ್ವರಾನ್ ।**
**ಅವಮತ್ಯ ಸಭಾಮಧ್ಯೇ ಮೇಷವಕ್ತ್ರೋಽಭವತ್ಪುರಾ ॥**

**ಟೀಕು||** ಪುರಾ=ಪೂರ್ವದಲ್ಲಿ, ದಕ್ಷಃ=ದಕ್ಷಬ್ರಹ್ಮನು, ಕೃತಾಶ್ವಮೇಧೋಽಪಿ=ಮಾಡಲುಪಟ್ಟ ಅಶ್ವಮೇಧಾದಿ ಯಜ್ಞವುಳ್ಳಾತನಾಯಿತ್ತಾದೊಡೆಯು, ಮದ್ಭಕ್ತಾನ್=ಎನ್ನಭಕ್ತರಾದ, ಗಣೇಶ್ವರಾನ್=. ಗಣೇಶ್ವರರನು, ಸಭಾಮಧ್ಯೇ=ಸಭಾಮಧ್ಯದಲ್ಲಿ, ಅವಮತ್ಯ=ಉದಾಸೀನವಮಾಡಿ, ಮೇಷವಕ್ತ್ರಃ= ಕುರಿದಲೆವುಳ್ಳಾತನು, ಅಭವತ್=ಆದನು. ||೭೪||

**ಗ್ರಂಥ||** **ಶ್ವೇತಸ್ಯ ಮಮ ಭಕ್ತಸ್ಯ ದುರತಿಕ್ರಮತೇಜಸಃ ।**
**ಔದಾಸೀನ್ಯೇನ ಕಾಲೋಽಪಿ ಮಯಾ ದಗ್ಧಃ ಪುರಾಽಭವತ್ ॥**

**ಟೀಕು||** ದುರತಿಕ್ರಮತೇಜಸಃ=ಹಳಿಯಬಾರದೆಯಿದ್ದ ತೇಜಸ್ಸುಳ್ಳ, ಮಮಭಕ್ತಸ್ಯ=ಎನ್ನ ಭಕ್ತನಾದ, ಶ್ವೇತಸ್ಯ=ಶ್ವೇತನ, ಔದಾಸೀನ್ಯೇನ=ಉದಾಸೀನವನು ಮಾಡುವುದರಿಂದೆ, ಕಾಲೋಽಪಿ= ಯಮನಾಯಿತ್ತಾದೊಡೆ, ಮಯಾ=ಎನ್ನಿಂದೆ ಪುರಾ=ಪೂರ್ವದಲ್ಲಿ, ದಗ್ಧಃ=ಸುಡಲುಪಟ್ಟಾತನು ಅಭವತ್= ಆದನು. ||೭೫||

**ಗ್ರಂಥ||** **ಏವಮನ್ಯೇಽಪಿ ಬಹವೋ ಮದ್ಭಕ್ತಾನಾಮತಿಕ್ರಮಾತ್ ।**
**ಪರಿಭೂತಾಃ ಹತಾಶ್ಚಾಸನ್ ಭಕ್ತಾ ಮೇ ದುರತಿಕ್ರಮಾಃ ॥**

**ಟೀಕು||** ಏವಂ=ಈ ಪ್ರಕಾರದಿಂದೆ, ಬಹವಃ=ಅನೇಕವಾಗಿ, ಅನ್ಯೇಽಪಿ=ಉಳಿದಿದ್ದವರಾಯಿತ್ತಾದೊಡೆಯೂ, ಮದ್ಭಕ್ತನಾಂ=ಎನ್ನ ಭಕ್ತರ, ಅತಿಕ್ರಮಾತ್=ಅತಿಕ್ರಮಿಸುವುದರದೆಸೆಯಿಂದೆ, ಪರಿಭೂತಾಃ=ತಿರಸ್ಕರಿಸಲ್ಪಟ್ಟವರು, ಹತಾಃ=ಸಂಹರಿಸಲ್ಪಟ್ಟವರು, ಆಸನ್=ಆದರು. ಅತಃ=ಅದು ಕಾರಣವಾಗಿ, ಮೇ ಭಕ್ತಾಃ=ಎನ್ನ ಭಕ್ತರು, ದುರತಿಕ್ರಮಾಃ=ಅತಿಕ್ರಮಿಸಲು ಯೋಗ್ಯರಲ್ಲ. ||೭೬||

**ಗ್ರಂಥ||** **ಅವಿಚಾರೇಣ ಮದ್ಭಕ್ತೋ ಲಂಘಿತೋ ದಾರುಕಸ್ತ್ವಯಾ ।**
**ಏಷ ತ್ವಂ ರೇಣುಕಾನೇನ ಜನ್ಮವಾನ್ ಭವ ಭೂತಲೇ ॥**

**ಟೀಕು||** ಭೋ ರೇಣುಕ=ಎಲೆ ರೇಣುಕನೆ ! ತ್ವಯಾ=ನಿನ್ನಿಂದೆ, ಮದ್ಭಕ್ತಃ=ಎನ್ನ ಭಕ್ತನಾದ, ಏಷ ದಾರುಕಃ=ಈ ದಾರುಕನು, ಯಥಾ ಅವಿಚಾರೇಣ=ಆವ ಪ್ರಕಾರವಾದ ಅವಿಚಾರದಿಂದೆ, ಲಂಘಿತಃ=ದಾಂಟಲುಪಟ್ಟನು? ಅನೇನ=ಈ ಲಂಘನ ದೋಷದಿಂದೆ, ತ್ವಂ=ನೀನು, ಭೂತಲೇ= ಭೂತಲದಲ್ಲಿ, ಜನ್ಮವಾನ್=ಜನ್ಮವುಳ್ಳಾತನು, ಭವ=ಆಗು. ||೭೭||

**ಸೂತ್ರ||** ಮುಂದೆ ಪಂಚಸೂತ್ರಂಗಳಿಂದೆ ರೇಣುಕಗಣೇಶ್ವರನು ಜನ್ಮಭೀತನಾಗಿ ಪರಮೇಶ್ವರನನು ಬೇಡಿಕೊಳ್ಳುತ್ತಿರ್ದಪಂ.

**ಗ್ರಂಥ||** **ಇತ್ಯುಕ್ತಃ ಪರಮೇಶೇನ ಭಕ್ತಮಾಹಾತ್ಮ್ಯಶಂಸಿನಾ ।**
**ಪ್ರಾರ್ಥಯಾಮಾಸ ದೇವೇಶಂ ಪ್ರಣಿಪತ್ಯ ಸ ರೇಣುಕಃ ॥**

**ಟೀಕು||** ಭಕ್ತಮಾಹಾತ್ಮ್ಯಶಂಸಿನಾ=ಭಕ್ತರ ಮಹತ್ವವನು ಕೊಂಡಾಡುತ್ತಿರ್ದ, ಪರಮೇಶೇನ= ಪರಮೇಶ್ವರನಿಂದೆ, ಇತ್ಯುಕ್ತಃ=ಈ ಪ್ರಕಾರದಿಂದೆ ಜಗದ್ಧಿತಾರ್ಥವಾಗಿ ಬೋಧಿಸಿ ಹೇಳಲುಪಟ್ಟ, ಸ ರೇಣುಕಃ=ಆ ರೇಣುಕಗಣೇಶ್ವರನು, ದೇವೇಶಂ=ದೇವಾಧಿದೇವನಾದ ಪರಮೇಶ್ವರನನು, ಪ್ರಣಿಪತ್ಯ=ನಮಸ್ಕರಿಸಿ, ಪ್ರಾರ್ಥಯಾಮಾಸ=ಬೇಡಿಕೊಂಡನು. ||೭೮||

**ಗ್ರಂಥ||** **ಭವದಾಹ್ವಾನಸಂಭ್ರಾಂತ್ಯಾ ಮಯಾಽಜ್ಞಾನಾದ್ವಿಲಂಘಿತಃ ।**
**ದಾರುಕೋಽಯಂ ತತಶ್ಶಂಭೋ ಪಾಹಿ ಮಾಂ ಭಕ್ತವತ್ಸಲ ॥**

**ಟೀಕು||** ಭೋ ಶಂಭೋ=ಎಲೈ ಪರಮೇಶ್ವರನೆ! ಭವದಾಹ್ವಾನಸಂಭ್ರಾಂತ್ಯಾ=ನೀವು ಕರೆಯಲಾಗಿ ಬೇಗ ಬರುತ್ತಿರ್ದ, ಮಯಾ=ಎನ್ನಿಂದೆ, ಅಯಂ ದಾರುಕಃ=ಈ ದಾರುಕಗಣೇಶ್ವರನು, ಅಜ್ಞಾನಾತ್= ಅಜ್ಞಾನದದೆಸೆಯಿಂದೆ, ವಿಲಂಘಿತಃ=ದಾಂಟಲುಪಟ್ಟನು; ಭೋ ಭಕ್ತವತ್ಸಲ=ಎಲೈ ಭಕ್ತರಲ್ಲಿ ಪ್ರೀತಿಯುಳ್ಳ ಶಿವನೆ! ತತಃ=ಆ ಲಂಘನದೋಷದದೆಸೆಯಿಂದೆ, ಮಾಂ=ಎನ್ನನು, ಪಾಹಿ=ರಕ್ಷಿಸು. ||೭೯||

**ಗ್ರಂಥ||** **ಮಾನುಷೀಂ ಯೋನಿಮಾಸಾದ್ಯ ಮಹಾದುಃಖವಿವರ್ಧಿನೀಮ್ ।**
**ಜಾತ್ಯಾಯುರ್ಭೋಗವೈಷಮ್ಯಹೇತುಕರ್ಮೋಪಪಾದಿನೀಮ್ ॥**

**ಸಮಸ್ತದೇವಕೈಂಕರ್ಯಕಾರ್ಪಣ್ಯಪ್ರಸವಸ್ಥಲೀಮ್ ।**
**ಮಹಾತಾಪತ್ರಯೋಪೇತಾಂ ವರ್ಣಾಶ್ರಮನಿಯಂತ್ರಿತಾಮ್ ।**
**ವಿಹಾಯ ತ್ವತ್ಪದಾಂಭೋಜಸೇವಾಂ ಕಿಂ ವಾ ವಸಾಮ್ಯಹಮ್ ॥**

**ಟೀಕು||** ಭೋ ಶಂಭೋ=ಎಲೈ ಶಿವನೇ! ಮಹಾದುಃಖವಿವರ್ಧಿನೀಂ=ಭೂಮಿಯಲ್ಲಿ ಹುಟ್ಟಿರ್ದ ಸಕಲ ದುಃಖಗಳನು ಹೆಚ್ಚಿಸುತ್ತಿರ್ದ, ಜಾತಿ=ಬ್ರಾಹ್ಮಣಾದಿ ಚಾಂಡಾಲಾಂತವಾದ ಹದಿನೆಂಟು ಜಾತಿ,

ಆಯುಃ=ಶತವರ್ಷಾಥಿ ವಿಚಿತ್ರವಾದಾಯುಷ್ಯ, ಭೋಗ=ಸುಖದುಃಖಾತ್ಮಕವಾದ ಭೋಗಂಗಳು, ವೈಷಮ್ಯಹೇತುಕರ್ಮೋಪಪಾದಿನೀಂ=ವಿಷಮಕ್ಕೆ ಕಾರಣವಾದ ಕರ್ಮವನು ಸಂಪಾದಿಸುತ್ತಿರ್ದ್ದ, ಸಮಸ್ತದೇವ=ಸಕಲದೇವತೆಗಳನು ಕೂರ್ತು, ಕೈಂಕರ್ಯಕಾರ್ಪಣ್ಯಪ್ರಸವ ಸ್ಥಲೀಮ್=ಕಿಂಕರತ್ವ ಕಾರ್ಪಣ್ಯವನು ಪೂರುವುದಕ್ಕೆ ಆಶ್ರಯವಾಗಿರ್ದ್ದ, ಮಹಾತಾಪತ್ರಯೋಪೇತಾಂ= ಆಧ್ಯಾತ್ಮಿಕಾದಿ ಮಹಾತಾಪತ್ರಯದೊಡನೆ ಕೂಡಿರ್ದ್ದ, ವರ್ಣಾಶ್ರಮನಿಯಂತ್ರಿತಾಂ=ಬ್ರಾಹ್ಮಣಾದಿ ಚತುರ್ವರ್ಣ ಬ್ರಹ್ಮಚರ್ಯಾದಿ ಚತುರಾಶ್ರಮಂಗಳಿಂದೆ ನಿಯಮಿಸಲುಪಟ್ಟ, ಮಾನುಷೀಂ ಯೋನಿಂ=ಮನುಷ್ಯ ಯೋನಿಯನು, ಆಸಾದ್ಯ=ಎಯ್ದಿ, ತ್ವತ್ಪದಾಂಭೋಜಸೇವಾಂ=ನಿನ್ನ ಶ್ರೀಪಾದಕಮಲಂಗಳ ಸೇವೆಯನು, ವಿಹಾಯ=ಬಿಟ್ಟು, ಅಹಂ=ನಾನು, ಕಿಂ ವಾ ವಸಾಮಿ=ಇರಲು ಯೋಗ್ಯನೆ ಏನು? ||೮೧||

ಗ್ರಂಥ|| **ಯಥಾ ಮೇ ಮಾನುಷೋ ಭಾವೋ ನ ಭವೇತ್ ಕ್ಷಿತಿಮಂಡಲೇ ।**
**ತಥಾ ಪ್ರಸಾದಂ ದೇವೇಶ ವಿಧೇಹಿ ಕರುಣಾನಿಧೇ ॥**

**ಟೀಕು||** ಕರುಣಾನಿಧೇ=ಕೃಪಾಸಮುದ್ರನಾದ, ಭೋ ದೇವೇಶ=ದೇವಾಧಿದೇವನಾದ ಎಲೆ ಶಿವನೆ! ಮೇ=ಎನಗೆ, ಮಾನುಷೋ ಭಾವಃ=ಮನುಷ್ಯಜನ್ಮವು, ಕ್ಷಿತಿಮಂಡಲೇ=ಭೂಮಂಡಲದಲ್ಲಿ ಯಥಾ=ಹೆಂಗೆ, ನ ಭವೇತ್=ಆಗದು. ತಥಾ=ಹಾಂಗೆಯೆ, ಪ್ರಸಾದಂ=ಕೃಪೆಯನು, ವಿಧೇಹಿ=ಮಾಡು. ||೮೨||

**ಸೂತ್ರ||** ಈ ಪ್ರಕಾರದಿಂದೆ ರೇಣುಕಗಣೇಶ್ವರನಿಂದೆ ಬೇಡಿಕೊಳ್ಳಲುಪಟ್ಟ ಶಿವನು "ಆತ್ಮಾ ಮೇ ಜಜ್ಞೇ ಆತ್ಮನ ಆತ್ಮಾವೈ ಪುತ್ರನಾಮಾಸೀತ್"ಯೆಂದು ಶ್ರುತಿಯುಂಟಾಗಿ, ತನ್ನ ಸೃಷ್ಟಿಯಿಂದೆ ನನ್ನ ಅಪರಮೂರ್ತಿಯಾದ ಆ ರೇಣುಕಗಣೇಶ್ವರನನು ತಾನೆಂದೆ ನಿಶ್ಚೈಸಿ ಅಭಯವನು ಕೊಟ್ಟು ಷಟ್‌ಸೂತ್ರಂಗಳಿಂದೆ ಪ್ರಯೋಜನವನು ಹೇಳುತ್ತಿರ್ದ್ದಪಂ.

ಗ್ರಂಥ|| **ಇತಿ ಸಂಪ್ರಾರ್ಥಿತೋ ದೇವೋ ರೇಣುಕೇನ ಮಹೇಶ್ವರಃ ।**
**ಮಾ ಭೈಷೀರ್ಮಮ ಭಕ್ತಾನಾಂ ಕುತೋ ಭೀತಿರಿಹೈಷ್ಯತಿ ॥**

**ಟೀಕು||** ದೇವಃ=ಕ್ರೀಡಾಶೀಲನಾದ, ಮಹೇಶ್ವರಃ=ಪರಮೇಶ್ವರನು, ರೇಣುಕೇನ=ರೇಣುಕ ಗಣೇಶ್ವರನಿಂದೆ, ಇತಿ=ಈ ಪ್ರಕಾರದಿಂದೆ, ಸಂಪ್ರಾರ್ಥಿತಃಸನ್=ಬೇಡಿಕೊಳ್ಳಲುಪಟ್ಟಾತನಾಗುತ್ತಲು, ಭೋ ರೇಣುಕ=ಎಲೆ ರೇಣುಕನೆ! ತ್ವಂ=ನೀನು, ಮಾ ಭೈಷೀಃ=ಮನುಷ್ಯಜನ್ಮದೆಸೆಯಿಂದೆ ಬೇಸರಬೇಡ. ಮಮ ಭಕ್ತಾನಾಂ=ಎನ್ನ ಭಕ್ತರಿಗೆ, ಕುತೋ ಭೀತಿಃ=ಭಯವೆತ್ತಣದೆಂದು, ಇಹ= ಇಲ್ಲಿ, ಇಷ್ಯತಿ= ಇಚ್ಛೈಸಲುಪಡುತ್ತಿರ್ದ್ದಪುದು. ||೮೩||

ಗ್ರಂಥ॥ ಶ್ರೀಶೈಲಸ್ಯೋತ್ತರೇ ಭಾಗೇ ತ್ರಿಲಿಂಗವಿಷಯೇ ಶುಭೇ ।
ಕುಲ್ಯಪಾಕ್ಯಾಭಿಧಾನೋಽಸ್ತಿ ಕೋಽಪಿ ಗ್ರಾಮೋ ಮಹತ್ತರಃ ॥

ಸೋಮೇಶ್ವರಾಭಿಧಾನಸ್ಯ ತತ್ರ ವಾಸವತೋ ಮಮ ।
ಅಸ್ಪೃಶನ್ಮಾನುಷಂ ಭಾವಂ ಲಿಂಗಾತ್ಪ್ರಾದುರ್ಭವಿಷ್ಯಸಿ ॥

**ಟೀಕು॥** ಶ್ರೀಶೈಲಸ್ಯ=ದಕ್ಷಿಣಕೈಲಾಸವಾದ ಶ್ರೀಪರ್ವತಕ್ಕೆ, ಉತ್ತರೇ=ಬಡಗವಾದ, ತ್ರಿಲಿಂಗ ವಿಷಯೇ=ತೆಲಂಗಾಣ ವಿಷಯವಾದ, ಶುಭೇ ಭಾಗೇ=ಮಾಂಗಲ್ಯವಾದ ದೇಶಭಾಗದಲ್ಲಿ, ಕುಲ್ಯಪಾಕ್ಯಭಿಧಾನಃ=ಕೊಲ್ಲಿಪಾಕವೆಂಬ ಹೆಸರುಳ್ಳ, ಮಹತ್ತರಃ=ಶ್ರೇಷ್ಠವಾದ, ಕೋಽಪಿ ಗ್ರಾಮಃ=ಒಂದಾನೊಂದು ಗ್ರಾಮವು, ಅಸ್ತಿ=ಉಂಟು. ತತ್ರ=ಆ ಕೊಲ್ಲಿಪಾಕದಲ್ಲಿ, ವಾಸವತಃ= ಇರುತ್ತಿರ್ದ್ದ, ಸೋಮೇಶ್ವರಾಭಿಧಾನಸ್ಯ=ಸೋಮೇಶ್ವರನೆಂಬ ಹೆಸರುಳ್ಳ, ಮಮ=ಎನ್ನ, ಲಿಂಗಾತ್= ಜ್ಯೋತಿರ್ಲಿಂಗದದೆಸೆಯಿಂದೆ, ಮಾನುಷಂ ಭಾವಂ=ಮನುಷ್ಯಜನ್ಮವನು, ಅಸ್ಪೃಶನ್= ಮುಟ್ಟದೆಯಿರ್ದ್ದಾತನಾಗುತ್ತಲು, ಪ್ರಾದುರ್ಭವಿಷ್ಯಸಿ=ಪ್ರಕಾಶವಾಗುತ್ತೀಯೆ. ॥೮೫॥

ಗ್ರಂಥ॥ ಮದೀಯಲಿಂಗಸಂಭೂತಂ ಮದ್ಭಕ್ತಪರಿಪಾಲಕಮ್ ।
ವಿಸ್ಮಿತಾ ಮಾನುಷಾಸ್ಸರ್ವೇ ತ್ವಾಂ ಭಜಂತು ಮದಾಜ್ಞಯಾ ॥

**ಟೀಕು॥** ಮದೀಯಲಿಂಗಸಂಭೂತಂ=ಎನ್ನ ಲಿಂಗದದೆಸೆಯಿಂದೆ, ಹುಟ್ಟಿದ್ದ, ಮದ್ಭಕ್ತ ಪರಿಪಾಲಕಂ=ಎನ್ನ ಭಕ್ತರನು ರಕ್ಷಿಸುತ್ತಿರ್ದ್ದ, ತ್ವಾಂ=ನಿನ್ನನು, ಮದಾಜ್ಞಯಾ=ಎನ್ನಾಜ್ಞೆಯಿಂದೆ, ಸರ್ವೇ ಮಾನುಷಾಃ=ಸಮಸ್ತಮನುಷ್ಯರು, ವಿಸ್ಮಿತಾಃ ಸಂತಃ=ಆಶ್ಚರ್ಯಪಟ್ಟವರಾಗುತ್ತವೆ, ಭಜಂತು= ಸೇವಿಸಲಿ. ॥೮೬॥

ಗ್ರಂಥ॥ ಮದದ್ವೈತಪರಂ ಶಾಸ್ತ್ರಂ ವೇದವೇದಾಂತಸಂಮತಮ್ ।
ಸ್ಥಾಪಯಿಷ್ಯಸಿ ಭೂಲೋಕೇ ಸರ್ವೇಷಾಂ ಹಿತಕಾರಕಮ್ ॥

**ಟೀಕು॥** ವೇದವೇದಾಂತಸಂಮತಂ=ವೇದೋಪನಿಷತ್ತುಗಳಲ್ಲಿ ಸಂಮತವಾದ, ಮದದ್ವೈತ ಪರಂ= ಎನ್ನದ್ವೈತವೆ ಪ್ರಧಾನವಾಗುಳ್ಳ, ಶಾಸ್ತ್ರಂ=ವೀರಶೈವ ಶಾಸ್ತ್ರವನು, ಸರ್ವೇಷಾಂ=ಸಮಸ್ತ ಶಿವಭಕ್ತರಿಗೆ, ಹಿತಕಾರಕಂ=ಹಿತವನೆ ಮಾಡುತ್ತಿರ್ದ್ದವನಾಗಿ, ಭೂಲೋಕೇ=ಭೂಲೋಕದಲ್ಲಿ, ಸ್ಥಾಪಯಿಷ್ಯಸಿ= ಪ್ರತಿಷ್ಠೆಯನು ಸ್ಥಾಪಿಸುತ್ತೀಯೆ. ॥೮೭॥

ಗ್ರಂಥ॥ ಮಮ ಪ್ರತಾಪಮತುಲಂ ಮದ್ಭಕ್ತಾನಾಂ ವಿಶೇಷತಃ ।
ಪ್ರಕಾಶಯ ಮಹೀಭಾಗೇ ವೇದಮಾರ್ಗಾನುಸಾರತಃ ॥

**ಟೀಕು||** ಅತುಲಂ=ಸಾದೃಶ್ಯಪಿಲ್ಲದೆಯಿರ್ದ್ದ, ಮಮ=ಎನ್ನ, ಪ್ರತಾಪಂ=ಸಾಮರ್ಥ್ಯವನು, ಮದ್ಭಕ್ತಾನಾಂ=ಎನ್ನ ಭಕ್ತರ, ಪ್ರತಾಪಂ=ಸಾಮರ್ಥ್ಯವನು, ಮಹೀಭಾಗೇ=ಭೂಭಾಗದಲ್ಲಿ, ವೇದಮಾರ್ಗಾನುಸಾರತಃ=ವೇದಮಾರ್ಗವನು ಬಳಿವಿಡಿದವರದೆಸೆಯಿಂದೆ, ವಿಶೇಷತಃ-ವಿಶೇಷವಾಗಿ, ಪ್ರಕಾಶಯ=ಪ್ರಖ್ಯಾತವನು ಮಾಡು. ||೮೮||

**ವೃತ್ತ||** **ಇತ್ಯುಕ್ತ್ವಾ ಪರಮೇಶ್ವರಃ ಸ ಭಗವಾನ್ ಭದ್ರಾಸನಾದುತ್ಥಿತೋ**
**ಬ್ರಹ್ಮೋಪೇಂದ್ರಮುಖಾನ್ವಿಸೃಜ್ಯ ವಿಬುಧಾನ್ ಭ್ರೂಸಂಜ್ಞಯಾ ಕೇವಲಮ್ ।**
**ಪಾರ್ವತ್ಯಾ ಸಹಿತೋ ಗಣೈರಭಿಮತೈಃ ಪ್ರಾಪ ಸ್ವಮಂತಃಪುರಂ**
**ಕ್ಷೋಣೀಭಾಗಮವಾತರತ್ಪಶುಪತೇರಾಜ್ಞಾವಶಾತ್ ರೇಣುಕಃ ॥**

**ಟೀಕು||** ಭಗವಾನ್=ಷಡ್ಗುಣೈಶ್ವರ್ಯ ಸಂಪನ್ನನಾದ, ಸಃ ಪರಮೇಶ್ವರಃ=ಆ ಪರಮೇಶ್ವರನು, ಇತ್ಯುಕ್ತ್ವಾ=ಈ ಪ್ರಕಾರದಿಂದೆ ರೇಣುಕಗಣೇಶ್ವರನಿಗೆ ಆಜ್ಞಾಪಿಸಿ ಹೇಳಿ, ಭದ್ರಾಸನಾತ್=ಸಿಂಹಾಸನದ ದೆಸೆಯಿಂದೆ, ಉತ್ಥಿತಃ ಸನ್=ಎದ್ದಿದ್ದನಾಗುತ್ತಲು, ಬ್ರಹ್ಮೋಪೇಂದ್ರ ಮುಖಾನ್=ಬ್ರಹ್ಮವಿಷ್ಣು ಇಂದ್ರ ಇವರೇ ಮೊದಲಾದ ಮುಖ್ಯರಾದವರನು, ವಿಬುಧಾನ್= ದೇವತೆಗಳನು, ಭ್ರೂಸಂಜ್ಞಯಾ ಕೇವಲಂ= ಕೇವಲ ಭ್ರೂಸಂಜ್ಞೆಯ ಮಾತ್ರದಿಂದವೆ, ವಿಸೃಜ್ಯ=ಕಳುಹಿಸಿ, ಅಭಿಮತೈಃ=ಪರಮಾಪ್ತರಾದ, ಗಣೈಃ= ನಂದೀಶ್ವರಾದಿಗಣಂಗಳೊಡನೆ, ಪಾರ್ವತ್ಯಾ=ಪಾರ್ವತಿದೇವಿಯೊಡನೆ, ಸಹಿತಃ ಸನ್=ಕೂಡಲು ಪಟ್ಟಾತನಾಗುತ್ತಲು, ಸ್ವಂ ಅಂತಃಪುರಂ=ತನ್ನರಮನೆಯನು, ಪ್ರಾಪ=ಎಯ್ದಿದನು. ಇತಃ=ಇತ್ತ ರೇಣುಕಃ=ರೇಣುಕಗಣೇಶ್ವರನು, ಪಶುಪತೇಃ=ಬ್ರಹ್ಮಾದಿ ಪಶುಗಳಿಗೊಡೆಯನಾದ ಪರಮೇಶ್ವರನ, ಆಜ್ಞಾವಶಾತ್-ಆಜ್ಞಾಧೀನದದೆಸೆಯಿಂದೆ, ಕ್ಷೋಣೀಭಾಗಂ=ಭೂಭಾಗವನು, ಅವಾತರತ್= ಅವತರಿಸಿದನು. ||೮೯||

**ಇತಿ ಶ್ರೀ ವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ**
**ಕೈಲಾಸವರ್ಣನೋ ನಾಮ ರೇಣುಕಾವತಾರೋ ನಾಮ ತೃತೀಯ: ಪರಿಚ್ಛೇದಃ ಸಮಾಪ್ತಃ**

**ಶಿವಯೋಗೀ**=ಸಂಗ್ರಹ ಕರ್ತೃವಾದ ಶಿವಯೋಗಿಯು ಅಷ್ಟಸೂತ್ರಂಗಳಿಂದೆ ರೇಣುಕಗಣೇಶ್ವರನ ಸ್ವರೂಪವನು ವರ್ಣಿಸುತ್ತಿರ್ದ್ದಪಂ.

ಗ್ರಂಥ॥ **ಅಥ ತ್ರಿಲಿಂಗವಿಷಯೇ ಕುಲ್ಯಪಾಕ್ಯಾಭಿಧೇ ಪುರೇ ।**
**ಸೋಮೇಶ್ವರಮಹಾಲಿಂಗಾತ್ಪ್ರಾದುರಾಸೀತ್ಸ ರೇಣುಕಃ ॥**

**ಟೀಕು॥** ಅಥ=ಭೂ ಭಾಗಕ್ಕವತರಿಸಿದ ಅನಂತರದಲ್ಲಿ, ಸ ರೇಣುಕಃ=ಆ ರೇಣುಕ ಗಣೇಶ್ವರನು ತ್ರಿಲಿಂಗವಿಷಯೇ=ತೆಲುಂಗಾಣ್ಯವಿಷಯವಾದ, ಕುಲ್ಯಪಾಕ್ಯಭಿಧೇ ಪುರೇ=ಕೊಲ್ಲಿಪಾಕವೆಂಬ ಹೆಸರುಳ್ಳ ಪುರದಲ್ಲಿ, ಸೋಮೇಶ್ವರಮಹಾಲಿಂಗಾತ್=ಸೋಮೇಶ್ವರನೆಂಬ ಮಹಾಲಿಂಗದದೆಸೆಯಿಂದೆ, ಪ್ರಾದುರಾಸೀತ್=ಪ್ರಾದುರ್ಭಾವವಾದನು. ॥೧॥

ಗ್ರಂಥ॥ **ಪ್ರಾದುರ್ಭೂತಂ ತಮಾಲೋಕ್ಯ ಶಿವಲಿಂಗಾತ್ತ್ರಿಲಿಂಗಜಾಃ ।**
**ವಿಸ್ಮಿತಾಃ ಪ್ರಾಣಿನಸ್ಸರ್ವೇ ಬಭೂವುರತಿತೇಜಸಮ್ ॥**

**ಟೀಕು॥** ಶಿವಲಿಂಗಾತ್ ಪ್ರಾದುರ್ಭೂತಂ=ಸೋಮೇಶ್ವರನೆಂಬ ಶಿವಲಿಂಗದದೆಸೆಯಿಂದೆ ಪ್ರಾದುರ್ಭವಿಸಿದ, ಅತಿ ತೇಜಸಂ=ಅತ್ಯಂತ ತೇಜಸ್ಸುಳ್ಳ, ತಂ=ಆ ರೇಣುಕಗಣೇಶ್ವರನನು, ತ್ರಿಲಿಂಗಜಾಃ=ತೆಲುಂಗಾಣ್ಯದಲ್ಲಿ ಹುಟ್ಟಿರ್ದ್ದ, ಸರ್ವೇ ಪ್ರಾಣಿನಃ=ಸಮಸ್ತ ಪ್ರಾಣಿಗಳು, ಆಲೋಕ್ಯ=ನೋಡಿ, ವಿಸ್ಮಿತಾಃ=ಆಶ್ಚರ್ಯವನು ಪಡುತ್ತಿರ್ದ್ದವರು, ಬಭೂವುಃ=ಆದರು. ॥೨॥

ಗ್ರಂಥ॥ **ಭಸ್ಮೋದ್ಧೂಲಿತಸರ್ವಾಂಗಂ ಸ್ಫಾರರುದ್ರಾಕ್ಷಧಾರಣಮ್ ।**
**ಜಟಾಮುಕುಟಸಂಯುಕ್ತಂ ತ್ರಿಪುಂಡ್ರಾಂಕಿತಮಸ್ತಕಮ್ ॥**

**ಟೀಕು॥** ಭಸ್ಮೋದ್ಧೂಲಿತಸರ್ವಾಂಗಂ=ಭಸ್ಮದಿಂದುದ್ಧೂಳನಮಾಡಲುಪಟ್ಟ ಸರ್ವಾಂಗವುಳ್ಳ, ಸ್ಫಾರರುದ್ರಾಕ್ಷಧಾರಣಮ್=ಬಹಳ ರುದ್ರಾಕ್ಷಮಾಲೆಯೆ ಭೂಷಣವಾಗುಳ್ಳ, ಜಟಾಮುಕುಟಸಂಯುಕ್ತಂ=ಜಟಾಮುಕುಟದೊಡನೆ ಕೂಡಿರ್ದ್ದ, ತ್ರಿಪುಂಡ್ರಾಂಕಿತಮಸ್ತಕಂ=ತ್ರಿಪುಂಡ್ರದಿಂದೆ ಕುರುಹಿಡಿಯಲುಪಟ್ಟ ಲಲಾಟವುಳ್ಳ, ॥೩॥

ಗ್ರಂಥ॥ **ಕಟೀತಟಪಟೀಭೂತಕಂಥಾಪಟಲಬಂಧುರಮ್ ।**
**ದಧಾನಂ ಯೋಗದಂಡಂ ಚ ಭಸ್ಮಾಧಾರಂ ಕಮಂಡಲುಮ್ ॥**

**ಟೀಕು॥** ಕಟೀತಟಪಟೀಭೂತ=ಕೋಮಲವಾಗಿರ್ದ್ದ, ಕಂಥಾಪಟಲಬಂಧುರಂ=ಕಂಥೆಯ ಪಟಲದಿಂದೆ ಮನೋಹರನಾದ, ಯೋಗದಂಡಂ=ಲಾಕುಳದ ಕೋಲನು, ಭಸ್ಮಾಧಾರಂ=ಭಸ್ಮಘಂಟಿಕೆಯನು, ಕಮಂಡಲುಂ ಚ=ಕಮಂಡಲವನು, ದಧಾನಂ=ಧರಿಸಿಕೊಂಡಿರ್ದ್ದ. ॥೪॥

ಗ್ರಂಥ॥ ಶಿವಾದ್ವೈತಪರಿಜ್ಞಾನಪರಮಾನಂದಮೋದಿತಮ್ ।
ನಿರ್ಧೂತಸರ್ವಸಂಸಾರವಾಸನಾದೋಷಪಂಜರಮ್ ॥

ಟೀಕು॥ ಶಿವಾದ್ವೈತಪರಿಜ್ಞಾನ=ಶಿವಾದ್ವೈತಜ್ಞಾನದಿಂದಲಾದ, ಪರಮಾನಂದಮೋದಿತಂ=ಪರಮಾನಂದದಿಂದೆ ಸಂತೋಷಿಸುತ್ತಿರ್ದ್ದ, ನಿರ್ಧೂತ=ಕೊಡಹಲುಪಟ್ಟ, ಸರ್ವಸಂಸಾರವಾಸನಾ=ಸಮಸ್ತ ಸಂಸಾರವಾಸನೆಯೆಂಬ, ದೋಷಪಂಜರಂ=ದೋಷಸಮೂಹವುಳ್ಳ, ॥೫॥

ಗ್ರಂಥ॥ ಶಿವಾಗಮಸುಧಾಸಿಂಧುಸಮುನ್ಮೇಷಸುಧಾಕರಮ್ ।
ಚಿತ್ತಾರವಿಂದಸಂಗೂಢಶಿವಪಾದಾಂಬುಜದ್ವಯಮ್ ॥

ಟೀಕು॥ ಶಿವಾಗಮಸುಧಾಸಿಂಧು=ಶಿವಸಿದ್ಧಾಂತವೆಂಬ ಮಹಾಮೃತಸಮುದ್ರವನು, ಸಮುನ್ಮೇಷ=ಹೆಚ್ಚಿಸುವುದಕ್ಕೆ, ಸುಧಾಕರಂ=ಪೂರ್ಣಚಂದ್ರನಾದ, ಚಿತ್ತಾರವಿಂದಸಂಗೂಢ=ಹೃದಯ ಕಮಲದಲ್ಲಿ ಮರೆಯಾದ, ಶಿವಪಾದಾಂಬುಜದ್ವಯಂ=ಪರಶಿವನ ಪಾದದ್ವಯಂಗಳುಳ್ಳ, ॥೬॥

ಗ್ರಂಥ॥ ಯಮಾದಿಯೋಗತಂತ್ರಜ್ಞಂ ಸ್ವತಂತ್ರಂ ಸರ್ವಕರ್ಮಸು ।
ಸಮಸ್ತಸಿದ್ಧಸಂತಾನಸಮುದಾಯಶಿಖಾಮಣಿಮ್ ॥

ಟೀಕು॥ ಯಮಾದಿಯೋಗತಂತ್ರಜ್ಞಂ=ಯಮನಿಯಮಾದಿಯಾದ ಅಷ್ಟಾಂಗಯೋಗಸಿದ್ಧಾಂತವನು ಬಲ್ಲ, ಸರ್ವಕರ್ಮಸು=ಕರ್ಷಣಾದಿಯ ಸಕಲ ಕರ್ಮಗಳಲ್ಲಿ, ಸ್ವತಂತ್ರಂ=ಸ್ವತಂತ್ರನಾದ, ಸಮಸ್ತ ಸಿದ್ಧ=ಆದಿನಾಥ ನಿತ್ಯನಾಥ ಮೊದಲಾದ ಸಕಲ ಸಿದ್ಧರ, ಸಂತಾನ ಸಮುದಾಯಶಿಖಾಮಣಿಂ=ಸಂತಾನ ಸಮೂಹಕ್ಕೆ ಶಿರೋರತ್ನವಾದ, ॥೭॥

ಗ್ರಂಥ॥ ವೀರಸಿದ್ಧಾಂತನಿರ್ವಾಹಕೃತಪಟ್ಟನಿಬಂಧನಮ್ ।
ಆಲೋಕಮಾತ್ರನಿರ್ಭಿನ್ನಸಮಸ್ತಪ್ರಾಣಿಪಾತಕಮ್ ॥

ಟೀಕು॥ ವೀರಸಿದ್ಧಾಂತ ನಿರ್ವಾಹ=ವೀರಶೈವಸಿದ್ಧಾಂತವನು ನಿರ್ವಹಿಸುವಲ್ಲಿ, ಕೃತಪಟ್ಟ ನಿಬಂಧನಂ=ಮಾಡಲುಪಟ್ಟ ಪಟ್ಟಾಭಿಷೇಕವುಳ್ಳ, ಆಲೋಕಮಾತ್ರನಿರ್ಭಿನ್ನ=ನೋಟ ಮಾತ್ರದಿಂದೆ ತೊಲಗಿಸಲುಪಟ್ಟ, ಸಮಸ್ತಪ್ರಾಣಿಪಾತಕಂ=ಸಕಲಪ್ರಾಣಿಗಳಪಾತಕವುಳ್ಳ, ॥೮॥

ಸೂತ್ರ॥ ಮುಂದೆ ಲಿಂಗೋದ್ಭವರಾದ ಆ ರೇಣುಕಗಣೇಶ್ವರನು ಮರ್ತ್ಯಕ್ಕವತರಿಸಿದ ಕಾರಣವ ಜನರುಗಳು ಕೂಡಾಡುತ್ತಿರ್ದ್ದಪರು.

ಗ್ರಂಥ॥ ತಮಪೃಚ್ಛನ್ ಜನಾಸ್ಸರ್ವೇ ನಮಂತಃ ಕೋ ಭವಾನಿತಿ ।
ಇತಿ ಪೃಷ್ಟೋ ಮಹಾಯೋಗೀ ಜನೈಃ ವಿಸ್ಮಿತಮಾನಸೈಃ ॥

ಪ್ರತ್ಯುವಾಚ ಶಿವಾದ್ವೈತಮಹಾನಂದಪರಾಯಣಃ ।
ರೇಣುಕಾಖ್ಯೋ ಗಣೇಂದ್ರೋಽಹಂ ಪಾರ್ಶ್ವವರ್ತೀ ಪಿನಾಕಿನಃ ।
ಕೇನಚಿತ್ಕಾರಣೇನಾಹಂ ಶಿವಲಿಂಗಾದಿಹಾಭವಮ್ ॥

**ಟೀಕು॥** ತಂ=ಆ ಪೂರ್ವೋಕ್ತಲಕ್ಷಣವುಳ್ಳ ಗಣೇಶ್ವರನನು, ಸರ್ವೇಜನಾಃ=ಸಮಸ್ತಜನರುಗಳು, ನಮಂತಃ ಸಂತಃ=ನಮಸ್ಕರಿಸುತ್ತಿರ್ದವರಾಗುತವು, ಭವಾನ್ ಕಃ ಇತಿ=ಲಿಂಗದಿಂದವತರಿಸಿದಾತನು ನೀನಾರೈಯೆಂದು, ಅಪೃಚ್ಛನ್=ಬೆಸಗೊಂಡ, ವಿಸ್ಮಿತಮಾನಸೈಃ=ಆಶ್ಚರ್ಯವನು ಮಾಡುತ್ತಿರ್ದ ಚಿತ್ತವುಳ್ಳ, ಜನೈಃ=ಜನರುಗಳಿಂದೆ, ಇತಿ ಪೃಷ್ಟಃ=ಹೀಂಗೆಂದು ಬೆಸಗೊಳಲುಪಟ್ಟ, ಶಿವಾದ್ವೈತಮಹಾನಂದ ಪರಾಯಣಃ=ಶಿವಾದ್ವೈತದಿಂದಲಾದ ಪರಮಾನಂದದಲ್ಲಿ ತತ್ಪರವಾಗಿರ್ದ, ಮಹಾಯೋಗೀ=ಮಹಾ ಯೋಗಿಯು ಎಂದು, ಪ್ರತ್ಯುವಾಚ=ಮರಳಿ ನುಡಿದನು. ಅಹಂ=ನಾನು, ಪಿನಾಕಿನಃ=ಪರಮೇಶ್ವರನ, ಪಾರ್ಶ್ವವರ್ತೀ=ಪಾರ್ಶ್ವದಲ್ಲಿರುತ್ತಿರ್ದ, ರೇಣುಕಾಖ್ಯಃ=ರೇಣುಕನೆಂಬ ಹೆಸರುಳ್ಳ, ಗಣೇಂದ್ರಃ= ಗಣೇಶ್ವರನು, ಕೇನಚಿತ್ಕಾರಣೇನ=ಒಂದಾನೊಂದು ಕಾರಣದಿಂದೆ, ಅಹಂ=ನಾನು, ಇಹ=ಇಲ್ಲಿ ಶಿವಲಿಂಗಾತ್=ಶಿವಲಿಂಗದದೆಸೆಯಿಂದೆ ಅಭವಂ=ಅವತರಿಸಿದೆನು. ॥೧೦॥

ಗ್ರಂಥ॥ ನಾಮ್ನಾ ರೇವಣಸಿದ್ಧೋಽಹಂ ಸಿದ್ಧಸಂತಾನನಾಯಕಃ ।

ಸ್ವಚ್ಛಂದಚಾರೀ ಲೋಕೇಽಸ್ಮಿನ್ ಶಿವಸಿದ್ಧಾಂತಪಾಲಕಃ ।
ಖಂಡಯನ್ ಜೈನಚಾರ್ವಾಕಬೌದ್ಧಾದೀನಾಂ ದುರಾಗಮಾನ್ ॥

**ಟೀಕು॥** ಅಹಂ=ನಾನು, ನಾಮ್ನಾ=ಹೆಸರನಿಂದೆ, ರೇವಣಸಿದ್ಧಃ=ರೇವಣಾಸಿದ್ಧೇಶ್ವರನು.ಸಿದ್ಧ ಸಂತಾನನಾಯಕಃ= ಸಿದ್ಧಸಂತಾನಕ್ಕೆ ಒಡೆಯನಾಗಿ, ಶಿವಸಿದ್ಧಾಂತಪಾಲಕಃ= ಶಿವಸಿದ್ಧಾಂತವನು ರಕ್ಷಿಸುತ್ತಿರ್ದಾತನಾಗಿ, ಜೈನಚಾರ್ವಾಕಬೌದ್ಧಾದೀನಾಂ=ವೇದಬಾಹ್ಯರಾದ ಜೈನಬೌದ್ಧ ಚಾರ್ವಾಕ ಮೊದಲಾದ, ದುರಾಗಮಾನ್=ವೇದ ವಿರುದ್ಧವಾದ ಆಗಮಂಗಳನು, ಖಂಡಯನ್=ಖಂಡಿಸುತ್ತ, ಅಸ್ಮಿನ್ ಲೋಕೇ=ಈ ಭೂಲೋಕದಲ್ಲಿ, ಸ್ವಚ್ಛಂದಚಾರೀ=ಸ್ವೇಚ್ಛಾಚಾರದಲ್ಲಿ ವರ್ತಿಸುತ್ತಿರ್ದಾತನು. ॥೧೨॥

ಗ್ರಂಥ॥ ಇತ್ಯುಕ್ತ್ವಾ ಪಶ್ಯತಾಂ ತೇಷಾಂ ವಿಸ್ಮಯಸ್ಥಿರಚಕ್ಷುಷಾಮ್ ।
ಉತ್ಥಾಯ ವ್ಯೋಮಮಾರ್ಗೇಣ ಮಲಯಾದ್ರಿಮುಪಾಗಮತ್ ॥

**ಟೀಕು||** ಸಃ=ಆ ರೇವಣಾಸಿದ್ಧೇಶ್ವರನು, ವಿಸ್ಮಯ ಸ್ಥಿರಚಕ್ಷುಷಾಂ=ಆಶ್ಚರ್ಯದಿಂದೆ ಸ್ಥಿರವಾದ ದೃಷ್ಟಿಗಳಿಂದೆ, ಪಶ್ಯತಾಂ=ನೋಡುತ್ತಿರುವ, ತೇಷಾಂ=ಆ ಜನರುಗಳಿಗೆ, ಇತ್ಯುಕ್ತ್ವಾ=ಓಂಗೆಂದು ನುಡಿದು, ಉತ್ಥಾಯ=ಎದ್ದು, ವ್ಯೋಮಮಾರ್ಗೇಣ=ವ್ಯೋಮಮಾರ್ಗದಿಂದೆ, ಮಲಯಾದ್ರಿಂ=ಮಲಯ ಪರ್ವತವನು ಉಪಾಗಮತ್=ಎಯ್ದಿದನು. ||೧೩||

**ಸೂತ್ರ||** ಇನ್ನು ಸೂತ್ರತ್ರಯದಿಂದೆ ಮಲಯಾದ್ರಿಯನು ವರ್ಣಿಸುತ್ತಿರ್ದಪಂ.

**ಗ್ರಂಥ||**
**ನವಚಂದನಕಾಂತಾರಕಂದಲನ್ಮಂದಮಾರುತಮ್ ।**
**ಅಭಂಗುರಭುಜಂಗಸ್ತ್ರೀಸಂಗೀತರಸಸಂಕುಲಮ್ ॥**

**ಟೀಕು||** [ನವಚಂದನಕಾಂತಾ]ರ=ಹೊಸತಾದ ಶ್ರೀಗಂಧದ ಅರಣ್ಯವನು, ಕಂದಲನ್ಮಂದ ಮಾರುತಂ=ಸೀಳುತ್ತಿರ್ದ್ದ ಮಂದಮಾರುತನುಳ್ಳ, ಅಭಂಗುರಭುಜಂಗಸ್ತ್ರೀ=ಎಡದೆರಹಿಲ್ಲದೆಯಿರ್ದ್ದ [ಸರ್ಪನಾರಿಯರ, ಸಂಗೀತರಸಸಂಕುಲಂ=]ಸಂಗೀತರಸದಿಂದೆ ಮುಳುಗಿರ್ದ್ದ, ||೧೪||

**ಗ್ರಂಥ||**
**ಕರಿಪೋತಕರಾಕೃಷ್ಟಸ್ಫುರದೇಲಾತಿವಾಸಿತಮ್ ।**
**ವರಾಹದಂಷ್ಟ್ರಿಕಾಧ್ವಸ್ತಮುಸ್ತಾಸುರಭಿಕಂದರಮ್ ॥**

**ಟೀಕು||** ಕರಿಪೋತಕರಾಕೃಷ್ಟ=[ಆನೆಯ ಮರಿಗಳು ಸೊಂಡಿಲಿನಿಂದೆ]ಸೆಳೆಯಲುಪಟ್ಟ, ಸ್ಫುರ ದೇಲಾತಿವಾಸಿತಂ=ಉದುರುತ್ತಿರ್ದ್ದ ಏಲಕ್ಕಿ ಕರೆಗಳಿಂದೆ ಸುಗಂಧ ಉಳ್ಳುದಾಗಿ ಮಾಡಲುಪಟ್ಟ, ವರಾಹದಂಷ್ಟ್ರಿಕಾಧ್ವಸ್ತ=ಕಾಡುಹಂದಿಯಕೋರೆದಾ[ಡೆಗಳಿಂದೆ ಅಗೆಯಲುಪಟ್ಟ, ಮುಸ್ತಾಸುರ] ಭಿಕಂದರಂ=ಭದ್ರಮುಸ್ತೆಯಿಂದೆ ಪರಿಮಳವಾದ ದರಿಗಳುಳ್ಳ, ||೧೫||

**ಗ್ರಂಥ||**
**ಪಟೀರದಳಪರ್ಯಂಕಪ್ರಸುಪ್ತವ್ಯಾಧದಂಪತಿಮ್ ।**
**ಮಾಧವೀಮಲ್ಲಿಕಾಜಾತೀಮಂಜರೀರೇಣುರಂಜಿತಮ್ ॥**

**ಟೀಕು||** [ಪಟೀರದಳಪರ್ಯಂಕ]=ಕರ್ಪೂರವಾಳೆಯ ಯೆಲೆಯ ಹಾಸಿಕೆಯಲ್ಲಿ, ಪ್ರಸುಪ್ತವ್ಯಾಧ ದಂಪತಿಂ=ಮಲಗಿರ್ದ್ದ ಕಿರಾತದಂಪತಿಗಳುಳ್ಳ, ಮಾಧವೀಮಲ್ಲಿಕಾಜಾತೀ=ಸೇವಂತಿಗೆ ಮಲ್ಲಿಗೆ ಜಾಜಿ ಪುಷ್ಪಂಗಳ, ಮಂಜರೀ[ರೇಣುರಂಜಿತಂ=ಗೊಂಚಲಿನಿಂದ ಸುರಿದ ಧೂಳಿಯಿಂದೆ] ಅಲಂಕರಿಸಲುಪಟ್ಟ, ಮಲಯಾದ್ರಿಂ=ಮಲಯಪರ್ವತವನು, ಉಪಾಗಮತ್=ಎಯ್ದಿದನು. ||೧೬||

**ಸೂತ್ರ||** ಮುಂದೆ ಅಷ್ಟಸೂತ್ರಂಗಳಿಂದೆ ಅಗಸ್ತ್ಯ ಮುನಿಯಾಶ್ರಮವನು ವರ್ಣಿ[ಸುತ್ತಿರ್ದ್ದಪಂ.

**ಗ್ರಂಥ||** **ತತ್ರ ಕುತ್ರಚಿದಾಭೋಗಸರ್ವ]ರ್ತುಕುಸುಮದ್ರುಮೇ ।**
**ಅಪಶ್ಯದಾಶ್ರಮಂ ದಿವ್ಯಮಗಸ್ತ್ಯಸ್ಯ ಮಹಾಮುನೇಃ ॥**

**ಟೀಕು||** ಆಭೋಗಸರ್ವರ್ತುಕುಸುಮದ್ರುಮೇ=ಸಂಪೂರ್ಣವಾದ ವಸಂತಾದಿ ಸರ್ವಋತುಗಳಿಂದೆ [ಮನೋಹರವಾಗಿರುವ, ತತ್ರ=]ಆ ಮಲಯಾದ್ರಿಯಲ್ಲಿ ಕುತ್ರಚಿತ್=ಒಂದಾನೊಂದೆಡೆಯಲ್ಲಿ, ಅಗಸ್ತ್ಯಸ್ಯಮಹಾಮುನೇಃ=ಅಗಸ್ತ್ಯಮಹಾಮುನಿಯ, ದಿವ್ಯಂ= ಮನೋಹರವಾದ, ಆಶ್ರ[ಮಂ=ಆಶ್ರಮವನು, ಅಪಶ್ಯತ್=ನೋಡಿದನು.] ||೧೭||

**ಗ್ರಂಥ||** **ಮಂದಾರಚಂದನಪ್ರಾಯೈರ್ಮಂಡಿತಂ ತರುಮಂಡಲೈಃ ।**
**ಶಾಖಾಶಿಖರಸಂಲೀನತಾರಕಾಗಣಕೋರಕೈಃ ॥**

**ಟೀಕು||** ಶಾಖಾಶಿಖರಸಂಲೀನ=ಕೊನೆಗಳ[ಕಡೆಯಲ್ಲಿ ಅಡಗಿರುವ,] ತಾರಕಾಗಣಕೋರಕೈಃ= ನಕ್ಷತ್ರಸಮೂಹವೆಂಬ ಕುಸುಮ ಕುಟ್ಮಲಂಗಳುಳ್ಳ, ಮಂದಾರಚಂದನಪ್ರಾಯೈಃ=ಕಲ್ಪವೃಕ್ಷ ಶ್ರೀಗಂಧ ಮೊದಲಾಗುಳ್ಳ, ತರುಮಂಡಲೈಃ[=ವೃಕ್ಷಂಗಳ ಸಮೂಹದಿಂದೆ, ಮಂಡಿತಂ]=ಅಲಂಕರಿಸಲುಪಟ್ಟ, ||೧೮||

**ಗ್ರಂಥ||** **ಮುನಿಕನ್ಯಾಕರಾನೀತಕಲಶಾಂಬುವಿವರ್ಧಿತೈಃ ।**
**ಮೂಲಾವಾಲಜಲಾಸ್ವಾದಮೋದಮಾನಮೃಗೀಗಣೈಃ ॥**

**ಟೀಕು||** ಮು[ನಿಕನ್ಯಾಕರಾನೀತ=ಋಷಿಕನ್ಯೆಯ]ರ ಹಸ್ತದಿಂದೆ ತರಲುಪಟ್ಟ, ಕಲಶಾಂಬು ವಿವರ್ಧಿತೈಃ=ಕುಂಭೋದಕಂಗಳಿಂದೆ ಹೆಚ್ಚಿಸಲುಪಟ್ಟ, ಮೂಲಾವಾಲ=ಬುಡದಲ್ಲಿ ಕಟ್ಟಿದ ಕಟ್ಟೆಯ, ಜ[ಲಾಸ್ವಾದ=ನೀರಿನ ಆಸ್ವಾದದಿಂ]ದೆ, ಮೋದಮಾನಮೃಗೀಗಣೈಃ=ಸಂತೋಷಿಸುತ್ತಿರ್ದ್ದ ಎರಳೆಗಳ ಸಮೂಹಂಗಳಿಂದೆ, ಮಂಡಿತಂ=ಅಲಂಕರಿಸಲುಪಟ್ಟ, ||೧೯||

**ಗ್ರಂಥ||** **ಹೇಮಾರವಿಂದನಿಷ್ಯಂದಮಕರಂದ [ಸುಗಂಧಿಭಿಃ ।**
**ಮರಾಲಾಲಾಪವಾಚಾಲವೀ]ಚೀಮಾಲಾಮನೋಹರೈಃ ॥**

**ಇಂದೀವರವರಜ್ಯೋತಿರಂಧೀಕೃತಹರಿನ್ಮುಖೈಃ ।**
**ಲೋಪಾಮುದ್ರಾಪದನ್ಯಾಸಚರಿತಾರ್ಥತಟಾಂಕಿತೈಃ ॥**

**ಟೀಕು॥** ಹೇಮಾರವಿಂದ=ಚಿ[ನ್ನದ ಕಮಲದಿಂದ, ನಿಷ್ಯಂದ ಮಕರಂದ ಸುಗಂಧಿಭಿಃ=ಸುರಿದ ಪರಾಗದಿಂದ ಸುಗಂಧಿತವಾದ, ಮರಾಲಾಲಾಪವಾಚಾಲ=ಹಂಸೆಗಳ ನುಡಿಗಳಿಂದೆ ವಾಚಾಲವಾಗಿರ್ದ, ವೀಚೀಮಾಲಾಮನೋಹರೈಃ=ತೆರೆಗಳ ಪಂಕ್ತಿಗಳಿಂದೆ [ಮನೋಹರವಾದ, ಇಂದೀ]ವರವರಜ್ಯೋತಿಃ=ಕನ್ನೈದಿಲುಗಳ ಶ್ರೇಷ್ಠವಾದ ಕಾಂತಿಯಿಂದೆ, ಅಂಧೀಕೃತ ಹರಿನ್ಮುಖೈಃ=ಅಂಧಕಾರವಾಗಿ ಮಾಡಲುಪಟ್ಟ ದಿಙ್ಮುಖಂಗಳುಳ್ಳ, ಲೋಪಾಮುದ್ರಾ ಪದನ್ಯಾಸ=ಲೋಪಾಮುದ್ರೆಯ ಪಾದನ್ಯಾಸದಿಂದೆ, ಚರಿತಾರ್ಥತಟಾಂಕಿತೈಃ=ಕೃತಾರ್ಥವಾಗಿ ಮಾಡಲುಪಟ್ಟ ಕೆರೆಯತಡಿಯ ಸಮೀಪಪ್ರದೇಶಗಳಿಂದೆ, ಮಂಡಿತಂ=ಅಲಂಕರಿಸಲುಪಟ್ಟ, ॥೨೧॥

**ಗ್ರಂಥ॥** **ಹಾರನೀಹಾರಕರ್ಪೂರಹರಹಾಸಾಮಲೋದಕೈಃ ।**
**ನಿತ್ಯನೈಮಿತ್ತಿಕಸ್ನಾನನಿಯಮಾರ್ಥೈಸ್ತಪಸ್ವಿನಾಮ್ ॥**

**ಪ್ರಕೃಷ್ಟಮಣಿಸೋಪಾನೈಃ ಪರಿವೀತಂ ಸರೋವರೈಃ ।**
**ವಿಮುಕ್ತಸತ್ತ್ವವೈರಸ್ಯಂ ಬ್ರಹ್ಮಲೋಕಮಿವಾಪರಮ್ ॥**

**ಟೀಕು॥** ಹಾರ=ಮೌಕ್ತಿಕಸರ, ನೀಹಾರ=ಹಿಮಕರ್ಪೂರ, ಹರ=ಪರಮೇಶ್ವರ[ನ], ಹಾಸಾ= ಮುಗುಳುನಗೆಯೋಪಾದಿಯಲ್ಲಿ, ಅಮಲೋದಕೈಃ=ನಿರ್ಮಲವಾಗಿ ಬಿಳಿದಾದ ಉದಕಂಗಳುಳ್ಳ, ತಪಸ್ವಿನಾಂ=ತಪಸ್ವಿಗಳ, ನಿತ್ಯನೈಮಿತ್ತಿಕ=ನಿತ್ಯನೈಮಿತ್ಯಕವಾದ, ಸ್ನಾನನಿಯಮಾರ್ಥೈಃ=ಸ್ನಾನನಿಯಮವೇ ಪ್ರಯೋಜನವಾಗುಳ್ಳ, ಪ್ರಕೃಷ್ಟಮಣಿಸೋಪಾನೈಃ=ಉತ್ಕರ್ಷಣವಾದ ನವರತ್ನಖಚಿತವಾದ ಸೋಪಾನಂ ಗಳುಳ್ಳ, ಸರೋವರೈಃ=ಶ್ರೇಷ್ಠವಾದ ಕೊಳಂಗಳಿಂದೆ, ಪರಿವೀತಂ=ಬಳಸಲುಪಟ್ಟ, ವಿಮುಕ್ತಸತ್ವ ವೈರಸ್ಯಂ=ಬಿಡಲುಪಟ್ಟ ಗಜಸಿಂಹಾದಿ ಪ್ರಾಣಿಗಳ ವಿರೋಧವುಳ್ಳ, ಅತ ಏವ=ಇದು ಕಾರಣವಾಗಿಯೆ, ಅಪರಂ ಬ್ರಹ್ಮಲೋಕಮಿವ ಸ್ಥಿತಂ=ಎರಡನೆಯ ಬ್ರಹ್ಮಲೋಕವೇಕೈಯೆಂಬ ಹಾಂಗೆಯಿರುತ್ತಿರ್ದ, ॥೨೩॥

**ಗ್ರಂಥ॥** **ಹೂಯಮಾನಾಗ್ನಿಸಂತಾನಧೂಮಗಂಧಿಮಹಾಸ್ಥಲಮ್ ।**
**ಶುಕಸಂಸತ್ಸಮಾರಬ್ಧಶ್ರುತಿಶಾಸ್ತ್ರೋಪಬೃಂಹಣಮ್ ॥**

**ಟೀಕು॥** ಹೂಯಮಾನಾಗ್ನಿಸಂತಾನ=ಹೇಳಲುಪಡುತ್ತಿರ್ದ ವಹ್ನಿಜ್ವಾಲೆಯಿಂದಲಾದ, ಧೂಮಗಂಧಿ=ಹೊಗೆಯಪರಿಮಳವುಳ್ಳ, ಶುಕಸಂಸತ್ಸಮಾರಬ್ಧ=ಶುಕಋಷಿಯ ಸಭೆಯಲ್ಲಿ ತೊಡಗಲುಪಟ್ಟ, ಶ್ರುತಿಶಾಸ್ತ್ರೋಪಬೃಂಹಣಂ- ವೇದಶಾಸ್ತ್ರವನೆ ಪ್ರಕಾಶಿಸುತ್ತಿರ್ದ, ಮಹಾಸ್ಥಲಂ= [ಅಗಸ್ತ್ಯರ]ಆಶ್ರಮವನು, ಅಪಶ್ಯತ್=ಕಂಡನು, ॥೨೪॥

**ಸೂತ್ರ॥** ಮುಂದೆ ಅಗಸ್ತ್ಯಮುನಿಯ ಸ್ವರೂಪವನು ನವಸೂತ್ರಂಗಳಿಂದೆ ವರ್ಣಿಸುತ್ತಿರ್ದಪಂ.

**ಗ್ರಂಥ||** ತಸ್ಯ ಮಧ್ಯೇ ಸಮಾಸೀನಂ ಮೂಲೇ ಚಂದನಭೂರುಹಃ ।
ಸುಕುಮಾರದಲಚ್ಛಾಯಾದೂರಿತಾದಿತ್ಯತೇಜಸಃ ॥

**ಟೀಕು||** ತಸ್ಯ=ಆ ಆಶ್ರಮದ, ಮಧ್ಯೇ=ಮಧ್ಯದಲ್ಲಿಯ, ಸುಕುಮಾರದಲಚ್ಛಾಯಾ=ಅತ್ಯಂತ ಕೋಮಲವಾದ ಎಲೆಗಳ ನೆಳಲಿನಿಂದೆ, ದೂರಿತಾದಿತ್ಯತೇಜಸಃ=ದೂರವಾಗಿ ಮಾಡಲುಪಟ್ಟ ಸೂರ್ಯಕಿರಣಂಗಳುಳ್ಳ, ಚಂದನಭೂರುಹಃ=ಶ್ರೀಗಂಧವೃಕ್ಷದ, ಮೂಲೇ=ಬುಡದಲ್ಲಿ ಸಮಾಸೀನಂ= ಕುಳಿತಿರ್ದ್ದ, ||೨೫||

**ಗ್ರಂಥ||** ತಟಿತ್ಪಿಂಗಜಟಾಭಾರೈಸ್ತ್ರಿಪುಂಡ್ರಾಂಕಿತಮಸ್ತಕೈಃ ।
ಭಸ್ಮೋದ್ಧೂಳಿತಸರ್ವಾಂಗೈಃ ಸ್ಫುರದ್ರುದ್ರಾಕ್ಷಪೂರಣೈಃ ॥

ನವವಲ್ಕಲವಾಸೋಭಿರ್ನಾನಾನಿಯಮಧಾರಿಭಿಃ ।
ಪರಿವೀತಂ ಮುನಿಗಣೈಃ ಪ್ರಮಥೈರಿವ ಶಂಕರಮ್ ॥

**ಟೀಕು||** ತಟಿತ್ಪಿಂಗಜಟಾಭಾರೈಃ=ಮಿಂಚಿನೋಪಾದಿಯಲ್ಲಿ ಪಿಂಗಲವರ್ಣವಾದ ಜಟಾಭಾರವುಳ್ಳ, ತ್ರಿಪುಂಡ್ರಾಂಕಿತ ಮಸ್ತಕೈಃ=ಭಸ್ಮತ್ರಿಪುಂಡ್ರದಿಂದೆ ಕುರುಹುವಿಡಿಯಲುಪಟ್ಟ ಲಲಾಟವುಳ್ಳ, ಭಸ್ಮೋದ್ಧೂಳಿತ ಸರ್ವಾಂಗೈಃ=ಭಸ್ಮದಿಂದೆ ಉದ್ಧೂಳಿಸಲುಪಟ್ಟ ಸರ್ವಾಂಗವುಳ್ಳ, ಸ್ಫುರದ್ರುದ್ರಾಕ್ಷಪೂರಣೈಃ=ಪ್ರಕಾಶಿಸುತ್ತಿರ್ದ್ದ ರುದ್ರಾಕ್ಷೆಗಳಿಂದೆ ತುಂಬಲುಪಟ್ಟ, ನವವಲ್ಕಲವಾಸೋಭಿಃ=ಹೊಸತಾದ ನಾರಸೀರೆಗಳೆ ಹೊದಕೆಯಾಗುಳ್ಳ, ನಾನಾನಿಯಮಧಾರಿಭಿಃ=ಅನೇಕ ಪ್ರಕಾರವಾದ ನಿಯಮಂಗಳನುದ್ಧರಿಸುತ್ತಿರ್ದ್ದ, ಮುನಿಗಣೈಃ=ಋಷಿಸಮೂಹಂಗಳಿಂದೆ, ಪರಿವೀತಂ=ಬಳಸಲುಪಟ್ಟ, ಅತ ಏವ=ಇದು ಕಾರಣವಾಗಿಯೆ, ಪ್ರಮಥೈಃ=ಪ್ರಮಥಗಣಂಗಳಿಂದೆ, ಪರಿವೀತಂ=ಬಳಸಲುಪಟ್ಟ, ಶಂಕರಮಿವ ಸ್ಥಿತಂ=ಪರಮೇಶ್ವರನೇಕ್ಕೈಯೆಂಬಹಾಂಗೆಯಿರುತ್ತಿರ್ದ್ದ. ||೨೭||

**ಗ್ರಂಥ||** ಸಮುಜ್ಜ್ವಲಜಟಾಜಾಲೈಸ್ತಪಃಪಾದಪಪಲ್ಲವೈಃ ।
ಸ್ಫುರತ್ಸೌದಾಮಿನೀಕಲ್ಪೈರ್ಜ್ವಾಲಾಜಾಲೈರಿವಾನಲಮ್ ॥

**ಟೀಕು||** ತಪಃ ಪಾದಪಪಲ್ಲವೈಃ=ಶಿವಪ್ರಸಾದವಾದ ತಪಸಿವೃಕ್ಷದ ತಳಿರುಗಳುಳ್ಳ, ಜಟಾಜಾಲೈಃ=ಜಡೆಗಳ ಸಮೂಹಂಗಳಿಂದೆ, ಸಮುಜ್ಜ್ವಲ=ಪ್ರಕಾಶಿಸುತ್ತಿರ್ದ್ದ, ಅತ ಏವ=ಇದು ಕಾರಣವಾಗಿಯೆ, ಸ್ಫುರತ್ಸೌದಾಮಿನೀಕಲ್ಪೈಃ=ಪ್ರಕಾಶಿಸುತ್ತಿರ್ದ್ದ ಮಿಂಚಿನ ಬಳ್ಳಿಗೆ ಒಪ್ಪಚ್ಚಿ ಸದೃಶ ವಾಗಿರ್ದ್ದ, ಜ್ವಾಲಾಜಾಲೈಃ=ಜ್ವಾಲೆಗಳ ಸಮೂಹಂಗಳಿಂದೆ, ಸಮುಜ್ಜ್ವಲಂ=ಉರಿಯುತ್ತಿರ್ದ್ದ, ಅನಲಮಿವಸ್ಥಿತಂ=ಅಗ್ನಿಪುರುಷನೇಕ್ಕೈಯೆಂಬಹಾಂಗೆಯಿರುತ್ತಿರ್ದ್ದ, ||೨೮||

ಗ್ರಂಥ॥ ವಿಶುದ್ಧಭಸ್ಮಕೃತಯಾ ತ್ರಿಪುಂಡ್ರಾಂಕಿತರೇಖಯಾ ।
ತ್ರಿಸ್ರೋತಸೇವ ಸಂಬದ್ಧಶಿಲಾಭಾಗಂ ಹಿಮಾಚಲಮ್ ॥

ಟೀಕು॥ ವಿಶುದ್ಧಭಸ್ಮಕೃತಯಾ=ಅತ್ಯಂತ ಬಿಳಿದಾದ ಶುದ್ಧ ಭಸ್ಮದಿಂದೆ ಮಾಡಲುಪಟ್ಟ, ತ್ರಿಪುಂಡ್ರಾಂಕಿತರೇಖಯಾ=ತ್ರಿಪುಂಡ್ರದಿಂದೆ ಕುರುಹುವಿಡಿಯಲುಪಟ್ಟ ರೇಖೆಯಿಂದೆ, ತ್ರಿಸ್ರೋತಸಾ=ಮೂರುಭಾಗವಾಗಿ ಹರಿಯುತ್ತಿರ್ದ್ದ ಭಾಗೀರಥಿಯಿಂದೆ, ಸಂಬದ್ಧ ಶಿಲಾಭಾಗಂ=ಕಟ್ಟಲುಪಟ್ಟ ಕಲ್ಲರೆಯ ಭಾಗವುಳ್ಳ, ಹಿಮಾಚಲಮಿವ ಸ್ಥಿತಂ=ಪರ್ವತರಾಜನೇಕೈಯೆಂಬಹಾಂಗೆಯಿರುತ್ತಿರ್ದ್ದ, ॥೨೯॥

ಗ್ರಂಥ॥ ಭಸ್ಮಾಲಂಕೃತಸರ್ವಾಂಗಂ ಶಶಾಂಕಮಿವ ಭೂಗತಮ್ ।
ವಸಾನಂ ವಲ್ಕಲಂ ನವ್ಯಂ ಬಾಲಾತಪಸಮಪ್ರಭಮ್ ।
ಬಡಬಾಗ್ನಿಶಿಖಾಜಾಲಸಮಾಲೀಢಮಿವಾರ್ಣವಮ್ ॥

ಟೀಕು॥ ಭಸ್ಮಾಲಂಕೃತಸರ್ವಾಂಗಂ=ಭಸ್ಮದಿಂದಲಂಕರಿಸಲುಪಟ್ಟ ಸರ್ವಾಂಗವುಳ್ಳ, ಅತ ಏವ=ಇದುಕಾರಣವಾಗಿಯೆ, ಭೂಗತಂ=ಭೂಭಾಗವನುಯೆಯಿದಿರ್ದ್ದ, ಶಶಾಂಕಮಿವ ಸ್ಥಿತಂ=ಚಂದ್ರನೇಕೈಯೆಂಬಹಾಂಗೆಯಿರುತ್ತಿರ್ದ್ದ, ಬಾಲಾತಪಸಮಪ್ರಭಂ=ಬಾಲಸೂರ್ಯನಿಗೆ ಸಮಾನವಾದ ಕಾಂತಿಯು, ನವ್ಯಂ=ಪೊಸತಾದ, ವಲ್ಕಲಂ=ನಾರಸೀರೆಯನು, ವಸಾನಂ=ಹೊದ್ದು ಕೊಂಡಿರ್ದ್ದ, ಅತ ಏವ=ಇದುಕಾರಣವಾಗಿಯೆ, ಬಡಬಾಗ್ನಿ ಶಿಖಾಜಾಲ ಸಮಾಲೀಢಂ=ಬಡಬಾಗ್ನಿಯ ಜ್ವಾಲೆಯ ಸಮೂಹದಿಂದೆ ಮುಸುಕಲುಪಟ್ಟ, ಅರ್ಣವಮಿವ ಸ್ಥಿತಂ=ಸಮುದ್ರರಾಜನೇಕೈಯೆಂಬ ಹಾಂಗೆಯಿರುತ್ತಿರ್ದ್ದ. ॥೩೦॥

ಗ್ರಂಥ॥ ಸರ್ವಾಸಾಮಪಿ ವಿದ್ಯಾನಾಂ ಸಮುದಾಯನಿಕೇತನಮ್ ।
ನ್ಯಕ್ಕೃತಪ್ರಾಕೃತಾಹಂತಂ ನಿರೂಢಶಿವಭಾವನಮ್ ॥

ಟೀಕು॥ ಸರ್ವಾಸಾಮಪಿ ವಿದ್ಯಾನಾಂ=ವೇದಾಗಮ ಮೊದಲಾದ ಸಮಸ್ತ ವಿದ್ಯಂಗಳ, ಸಮುದಾಯ ನಿಕೇತನಂ=ಸಮೂಹಕ್ಕೆ ಆಶ್ರಯವಾಗಿರ್ದ್ದ, ನ್ಯಕ್ಕೃತಪ್ರಾಕೃತಾಹಂತಂ=ತೊಲಗಿಸಲುಪಟ್ಟ ದುರ್ಜನರಹಂಕಾರವುಳ್ಳ, ನಿರೂಢಶಿವಭಾವನಂ=ಪ್ರಸಿದ್ಧವಾದ ಶಿವಸ್ವರೂಪವುಳ್ಳ, ॥೩೧॥

ಗ್ರಂಥ॥ ತೃಣೀಕೃತಜಗಜ್ಜಾಲಂ ಸಿದ್ಧೀನಾಮುದಯಸ್ಥಲಮ್ ।
ಮೋಹಾಂಧಕಾರತಪನಂ ಮೂಲಬೋಧಮಹೀರುಹಮ್ ।
ದದರ್ಶ ಸ ಮಹಾಯೋಗೀ ಮುನಿಂ ಕಲಶಸಂಭವಮ್ ॥

ಟೀಕು॥ ತೃಣೀಕೃತಜಗಜ್ಜಾಲಂ=ತೃಣೀಕರಿಸಲುಪಟ್ಟಜಗಜ್ಜಾಲವುಳ್ಳ, ಸಿದ್ಧೀನಾಂ=ಅಣಿಮಾದಿ

ಸಿದ್ಧಿಗಳಿಗೆ, ಉದಯಸ್ಥಲಂ=ಉತ್ಪತ್ತಿಸ್ಥಲವಾಗಿರ್ದ್ದ, ಮೋಹಾಂಧಕಾರತಪನಂ=ಅಜ್ಞಾನವೆಂಬ ಕತ್ತಲೆಯನು ಓಡಿಸುವದಕ್ಕೆ ಸೂರ್ಯನಾದ, ಮೂಲಬೋಧಮಹೀರುಹಂ=ಮೂಲಬೋಧವಾದ ಸ್ವರೂಪಜ್ಞಾನಕ್ಕೆ ಕಲ್ಪವೃಕ್ಷವಾದ, ಕಲಶಸಂಭವಂ= ಕುಂಭಸಂಭವನಾದ, ಮುನಿಂ=ಅಗಸ್ತ್ಯ ಮುನಿಯನು, ಮಹಾಯೋಗೀ=ಮಹಾಯೋಗೀಶ್ವರನಾದ, ಸಃ=ಆ ರೇವಣಾಸಿದ್ಧೇಶ್ವರನು, ದದರ್ಶ=ಕಂಡನು. ||೩೨||

**ಸೂತ್ರ||** ಅಗಸ್ತ್ಯಮುನಿ ರೇವಣಾಸಿದ್ಧೇಶ್ವರನನು ಪೂಜಿಸಿದನೆಂದು ಮುಂದೆ ನಾಲ್ಕು ಸೂತ್ರಂಗಳಿಂದೆ ತೋರಿಸುತ್ತಿರ್ದ್ದಪಂ.

**ಗ್ರಂಥ||** **ತಮಾಗತಂ ಮಹಾಸಿದ್ಧಂ ಸಮೀಕ್ಷ್ಯ ಕಲಶೋದ್ಭವಃ |**
**ಗಣೇಂದ್ರಂ ರೇಣುಕಾಭಿಖ್ಯಂ ವಿವೇದ ಜ್ಞಾನಚಕ್ಷುಷಾ ||**

**ಟೀಕು||** ಕಲಶೋದ್ಭವಃ=ಅಗಸ್ತ್ಯಮುನಿ, ಆಗತಂ=ಬಂದಿರ್ದ್ದ, ಮಹಾಸಿದ್ಧಂ=ಅಣಿಮಾದ್ಯಷ್ಟ ಮಹಾಸಿದ್ಧಿಗಳುಳ್ಳ, ತಂ=ಆ ಶಿವಯೋಗೀಶ್ವರನನು, ಸಮೀಕ್ಷ್ಯ=ನೋಡಿ, ರೇಣುಕಾಭಿಖ್ಯಂ= ರೇಣುಕನೆಂಬ ಹೆಸರುಳ್ಳ, ಗಣೇಂದ್ರಂ=ಗಣೇಶ್ವರನನಾಗಿ, ಜ್ಞಾನಚಕ್ಷುಷಾ=ಜ್ಞಾನದೃಷ್ಟಿಯಿಂದೆ, ವಿವೇದ= ಅರಿದನು. ||೩೩||

**ಗ್ರಂಥ||** **ತಸ್ಯಾನುಭಾವಂ ವಿಜ್ಞಾಯ ಸಹಸೈವ ಸಮುತ್ಥಿತಃ |**
**ಸಂಪ್ರಣಮ್ಯ ಸಮಾನೀಯ ಸ್ವಾಸನೇ ತಂ ನ್ಯವೇಶಯತ್ ||**

**ಟೀಕು||** ಸಃ=ಆ ಅಗಸ್ತ್ಯಮುನಿ, ತಸ್ಯ=ಆ ರೇಣುಕಗಣೇಶ್ವರನ, ಅನುಭಾವಂ=ಸಾಮರ್ಥ್ಯವನು, ವಿಜ್ಞಾಯ=ಅರಿದು, ಸಹಸೈವ=ಆ ಕ್ಷಣದಲ್ಲಿಯೇ, ಸಮುತ್ಥಿತಃ=ಎದ್ದು, ಸಂಪ್ರಣಮ್ಯ= ನಮಸ್ಕಾರಮಂ ಮಾಡಿ, ತಂ=ಆ ರೇವಣಾಸಿದ್ಧೇಶ್ವರನನು, ಸಮಾನೀಯ=ಕರೆದುಕೊಂಡು, ಸ್ವಾಸನೇ=ತನ್ನ ಗದ್ದುಗೆಯಲ್ಲಿ, ನ್ಯವೇಶಯತ್=ಕುಳ್ಳಿರಿಸಿದನು. ||೩೪||

**ಗ್ರಂಥ||** **ಲೋಪಾಮುದ್ರಾಕರಾನೀತೈರುದಕೈರತಿಪಾವನೈಃ |**
**ಪಾದೌ ಪ್ರಕ್ಷಾಲಯಾಮಾಸ ಸ ತಸ್ಯ ಶಿವಯೋಗಿನಃ ||**

**ಟೀಕು||** ಸಃ=ಆ ಅಗಸ್ತ್ಯಮುನಿ, ಲೋಪಾಮುದ್ರಾಕರಾನೀತೈಃ=ಧರ್ಮಪತ್ನಿಯಾದ ಲೋಪಾಮುದ್ರೆಯ ಹಸ್ತದಿಂದೆ ತರಲುಪಟ್ಟ, ಅತಿಪಾವನೈಃ=ಅತ್ಯಂತ ಪವಿತ್ರವಾದ, ಉದಕೈಃ=ಉದಕಂಗಳಿಂದೆ, ಶಿವಯೋಗಿನಃ=ಶಿವಯೋಗೀಶ್ವರನಾದ, ತಸ್ಯ=ಆ ರೇವಣಾಸಿದ್ಧೇಶ್ವರನ, ಪಾದೌ=ಪಾದಂಗಳನು, ಪ್ರಕ್ಷಾಲಯಾಮಾಸ=ತೊಳೆದನು. ||೩೫||

ಗ್ರಂಥ॥ ಸಂಪೂಜ್ಯ ತಂ ಯಥಾಶಾಸ್ತ್ರಂ ತನ್ನಿಯೋಗಪುರಸ್ಸರಮ್ ।
ಮುನಿರ್ವಿನಯಸಂಪನ್ನೋ ನಿಷಸಾದಾಸನಾಂತರೇ ॥

**ಟೀಕು॥** ಮುನಿಃ=ಅಗಸ್ತ್ಯಮುನಿಯು, ತಂ=ಆ ರೇವಣಾಸಿದ್ಧೇಶ್ವರನನು, ಯಥಾಶಾಸ್ತ್ರಂ= ಶಾಸ್ತ್ರೋಕ್ತಪ್ರಕಾರವನು ಮೀರದೆ, ಸಂಪೂಜ್ಯ=ಪೂಜಿಸಿ, ತಂ ನಿಯೋಗಪುರಸ್ಸರಂ=ಆ ರೇವಣಾ ಸಿದ್ಧೇಶ್ವರನ ಆಜ್ಞಾಪುರಃಸರವಪಣಯಪಗಪುದು ಹಾಂಗೆ, ವಿನಯಸಂಪನ್ನಃ ಸನ್=ಭಕ್ತಿ ಸಂಪನ್ನನಾಗಿರ್ದ್ದು ತನಾಗುತಲು, ಆಸನಾಂತರೇ=ಮತ್ತೊಂದು ಗದ್ದುಗೆಯಲ್ಲಿ, ನಿಷಸಾದ=ಕುಳಿತನು. ॥೩೬॥

**ಸೂತ್ರ॥** ರೇವಣಾಸಿದ್ಧೇಶ್ವರನು ಅಗಸ್ತ್ಯಯಮುನಿಯನು ಅಷ್ಟಸೂತ್ರಂಗಳಿಂದೆ ಕೊಂಡಾಡುತ್ತಿದ್ದಾನು.

ಗ್ರಂಥ॥ ತಮಾಸೀನಂ ಮುನಿವರಂ ಸರ್ವತೇಜಸ್ವಿನಾಂ ವಿಭುಮ್ ।
ಉವಾಚ ಶಾಂತಯಾ ವಾಚಾ ರೇವಣಃ ಸಿದ್ಧಶೇಖರಃ ॥

**ಟೀಕು॥** ರೇವಣಃ ಸಿದ್ಧಶೇಖರಃ=ರೇವಣಾಸಿದ್ಧೇಶ್ವರನು, ಆಸೀನಂ=ಕುಳಿತಿರ್ದ್ದ, ಸರ್ವ ತೇಜಸ್ವಿನಾಂ=ಸಮಸ್ತ ತೇಜಸ್ವಿಗಳಿಗೆ, ವಿಭುಂ=ಒಡೆಯನಾದ, ಮುನಿವರಂ=ಋಷಿಶ್ರೇಷ್ಠನಾದ, ತಂ=ಆ ಅಗಸ್ತ್ಯ ಮುನಿಯನು, ಶಾಂತಯಾ ವಾಚಾ=ಶಾಂತ ವಾಕ್ಯದಿಂದೆ, ಉವಾಚ=ನುಡಿದನು. ॥೩೭॥

ಗ್ರಂಥ॥ ನಿರ್ವಿಘ್ನಂ ವರ್ತಸೇ ಕಿಂ ನು ನಿತ್ಯಾ ತೇ ನಿಯಮಕ್ರಿಯಾ ।
ಅಥ ವಾಽಗಸ್ತ್ಯ ತೇಜಸ್ವಿನ್ಕುತಸ್ಸ್ಯುಸ್ತೇಽಂತರಾಯಕಾಃ ॥

**ಟೀಕು॥** ತೇಜಸ್ವಿನ್=ಮಹಾತೇಜಸ್ವಿಯಾದ, ಭೋ ಅಗಸ್ತ್ಯ=ಎಲೆ ಅಗಸ್ತ್ಯಮುನಿಯೇ! ಭವಾನ್=ನೀನು, ಅಥ=ಮಂಗಲವಾಗಿ, ನಿರ್ವಿಘ್ನಂ=ನಿರ್ವಿಘ್ನವಿಲ್ಲದೆ, ವರ್ತಸೇ ಕಿಂ=ವರ್ತಿಸುತ್ತಿ ರ್ದ್ದಪೆಯಾಯೇನು? ತೇ=ನಿನ್ನ, ನಿಯಮಕ್ರಿಯಾ=ನಿಯಮಕ್ರಿಯೆಯು, ನಿತ್ಯಾ ವಾ=ಕೇಡಿಲ್ಲದದೆ ಏನು? ತೇ=ನಿನಗೆ, ಅಂತರಾಯಕಾಃ=ವಿಘ್ನಕಾರಿಗಳಾದವರು, ಕುತಃ ಸ್ಯುಃ=ಎಲ್ಲಿ ಹುಟ್ಟಿದ್ದಾರು? ಎಲ್ಲಿಯೂ ಇಲ್ಲವೆಂಬುದೆ ಅರ್ಥ. ॥೩೮॥

ಗ್ರಂಥ॥ ವಿಂಧ್ಯೋ ನಿರುದ್ಧೋ ಭವತಾ ವಿಶ್ವೋಲ್ಲಂಘನವಿಭ್ರಮಃ ।
ನಹುಷೋ ರೋಷಲೇಶಾತ್ತೇ ಸದ್ಯಃ ಸರ್ಪತ್ವಮಾಗತಃ ॥

**ಟೀಕು॥** ವಿಶ್ವೋಲ್ಲಂಘನ ವಿಭ್ರಮಃ=ಮೇರು ಮೊದಲಾದ ಸಕಲಪರ್ವತಂಗಳ ಮೀರಿ ವರ್ತಿಸುವ ವಿಲಾಸವುಳ್ಳ, ವಿಂಧ್ಯಃ=ವಿಂಧ್ಯಪರ್ವತವು, ಭವತಾ=ನಿನ್ನಿಂದೆ, ನಿರುದ್ಧಃ=ತಡೆಯಲು ಪಟ್ಟಿತು.

ನಹುಷಃ=ಇಂದ್ರಪದವಿಯನೆಯ್ದಿದ ನಹುಷ ಚಕ್ರವರ್ತಿಯು, ತೇ=ನಿನ್ನ, ರೋಷಲೇಶಾತ್= ರೋಷದ ಲೇಶಾಂಶದ ದೆಸಯಿಂದೆ, ಸದ್ಯಃ=ತತ್ಕ್ಷಣದಲ್ಲಿ, ಸರ್ಪತ್ವಂ=ಸರ್ಪನಹತನವನು ಆಗತಃ=ಎಯ್ದಿದನು. ||೩೯||

ಗ್ರಂಥ|| **ಆಚಾಂತೇ ಭವತಾ ಪೂರ್ವಂ ಪಂಕಶೇಷಾಃ ಪಯೋಧಯಃ |**
**ಜೀರ್ಣಾಸ್ತೇ ಜಾಠರೇ ವಹ್ನೌ ದೃಪ್ತೋ ವಾತಾಪಿದಾನವಃ ||**

**ಟೀಕು||** ಭವತಾ=ನಿನ್ನಿಂದೆ, ಪಯೋಧಯಃ=ಸಮುದ್ರಂಗಳು, ಪೂರ್ವಂ=ಮೊದಲು, ಆಚಾಂತೇ ಸತಿ= ಆಚಮನವಮಾಡಲುಪಡಲಿಕೆಯಾಗಿ, ಪಂಕಶೇಷಾಃ=ಕೆಸರೆ ಉಳುಮೆಯಾಗುಳ್ಳವಾಗಿ, ಕೃತಾಃ= ಮಾಡಲುಪಟ್ಟವು. ತೇ=ನಿನ್ನ, ಜಾಠರೇ ವಹ್ನೌ=ಉದರಾಗ್ನಿಯಲ್ಲಿ, ದೃಪ್ತಃ=ಕೊಬ್ಬಿರ್ದ್ದ, ವಾತಾಪಿ ದಾನವಃ=ವಾತಾಪಿದಾನವನು, ಜೀರ್ಣಾಸ್ತೇ=ಜೀರ್ಣವಾದಾತನು, ಅಭೂತ್=ಆದನು. ||೪೦||

ಗ್ರಂಥ|| **ಏವಂವಿಧಾನಾಂ ಚಿತ್ರಾಣಾಂ ಸರ್ವಲೋಕಾತಿಶಾಯಿನಾಮ್ |**
**ಕೃತ್ಯಾನಾಂ ತು ಭವಾನ್ಕರ್ತಾ ಕಸ್ತೇಽಗಸ್ತ್ಯ ಸಮಪ್ರಭಃ ||**

**ಟೀಕು||** ಏವಂವಿಧಾನಾಂ=ಈ ಪ್ರಕಾರವಾಗಿರ್ದ್ದ, ಚಿತ್ರಾಣಾಂ=ವಿಚಿತ್ರನಾದ, ಸರ್ವಲೋಕಾತಿ ಶಾಯಿನಾಂ=ಸಮಸ್ತ ಜನರುಗಳಿಗತಿಶಯವಾಗಿರ್ದ್ದ, ಕೃತ್ಯಾನಾಂ=ಕಾರ್ಯಂಗಳನು, ಭೋ ಅಗಸ್ತ್ಯ=ಎಲೈ ಅಗಸ್ತ್ಯ ಮುನಿಯೆ! ಭವಾನ್=ನೀನು, ಕರ್ತಾ=ಮಾಡುತ್ತಿದ್ದಾತನು; ಅತಃ=ಇದು ಕಾರಣವಾಗಿ ತೇ=ನಿನಗೆ ಸಮಪ್ರಭಃ=ಸಮಾನವಾದ ಪ್ರಭಾವವುಳ್ಳಾತನು, ಕಃ=ಆವಾತನು? ಆರೂಯಿಲ್ಲವೆಂಬುದೆ ಅರ್ಥ. ||೪೧||

ಗ್ರಂಥ|| **ಶಿವಾದ್ವೈತಪರಾನಂದಪ್ರಕಾಶನಪರಾಯಣಮ್ |**
**ಭವಂತಮೇಕಂ ಶಂಸಂತಿ ಪ್ರಕೃತ್ಯಾ ಸಂಗವರ್ಜಿತಮ್ ||**

**ಟೀಕು||** ಭವಂತಮೇಕಂ=ನಿನ್ನನೊರ್ವ್ವನನೆ, ಶಿವಾದ್ವೈತಪರಾನಂದ=ಶಿವಾದ್ವೈತದಿಂದಲಾದ ಪರಮಾನಂದವನೆ, ಪ್ರಕಾಶನಪರಾಯಣಂ=ಪ್ರಕಾಶಿಸುವಲ್ಲಿ ತತ್ಪರನಾಗಿರ್ದ್ದಾತನಾಗಿ, ಪ್ರಕೃತ್ಯಾ= ಮಾಯೆಯೊಡನೆ, ಸಂಗವರ್ಜಿತಂ=ಸಂಗರಹಿತನಾಗಿ, ಶಂಸಂತಿ=ಕೊಂಡಾಡುತ್ತಿರ್ದ್ದಪರು. ||೪೨||

ಗ್ರಂಥ|| **ಪುರಾ ಹೈಮವತೀಸೂನುರವದತ್ತೇ ಷಡಾನನಃ |**
**ಶಿವಧರ್ಮೋತ್ತರಂ ನಾಮ ಶಾಸ್ತ್ರಮೀಶ್ವರಭಾಷಿತಮ್ ||**

**ಟೀಕು||** ಪುರಾ=ಪೂರ್ವದಲ್ಲಿ, ಹೈಮವತೀಸೂನುಃ=ಪಾರ್ವತಿಪುತ್ರನಾದ, ಷಡಾನನಃ=ಷಣ್ಮುಖನು,

ಈಶ್ವರಭಾಷಿತಂ=ಪರಮೇಶ್ವರನಿಂದ ಹೇಳಲುಪಟ್ಟ, ಶಿವಧರ್ಮೋತ್ತರಂ ನಾಮ=ಶಿವಧರ್ಮೋತ್ತರವೆಂದು ಪ್ರಸಿದ್ಧವಾದ, ಶಾಸ್ತ್ರಂ=ಶಾಸ್ತ್ರವನು, ತೇ=ನಿನಗೋಸುಗ, ಅವದತ್=ಉಪದೇಶಿಸಿ ಹೇಳಿದನು. ||೪೩||

ಗ್ರಂಥ|| **ಭಕ್ತಿಃ ಶೈವೀ ಮಹಾಘೋರಸಂಸಾರಭಯಹಾರಿಣೀ ।**
**ತ್ವಯಾ ರಾಜನ್ವತೀ ಲೋಕೇ ಜಾತಾಽಗಸ್ತ್ಯ ಮಹಾಮುನೇ ॥**

**ಟೀಕು||** ಮಹಾಘೋರಸಂಸಾರಭಯಹಾರಿಣೀ=ಮಹಾಘೋರಸಂಸಾರಭೀತಿಯನ ಪಪರಿಸುತ್ತಿರ್ದ್ದ, ಶೈವೀ ಭಕ್ತಿಃ=ಶಿವಭಕ್ತಿಯು, ಭೋ ಅಗಸ್ತ್ಯಮಹಾಮುನೇ=ಎಲೈ ಅಗಸ್ತ್ಯಋಷಿಯೆ! ತ್ವಯಾ=ನಿನ್ನಿಂದೆ, ಲೋಕೇ=ಭೂಲೋಕದಲ್ಲಿ, ರಾಜನ್ವತೀ=ಶೋಭನವಾದ ರಾಜನುಳ್ಳುದು ಅದು, ಜಾತಾ=ಆಯಿತ್ತು. ||೪೪||

**ಶಿವಯೋಗೀ**=ಶಿವಯೋಗಿಯಾಡುತ್ತಿದ್ದಾನು.

ಗ್ರಂಥ|| **ಇತಿ ತಸ್ಯ ವಚಃ ಶ್ರುತ್ವಾ ಸಿದ್ಧಸ್ಯ ಮುನಿಪುಂಗವಃ ।**
**ಗಂಭೀರಗುಣಯಾ ವಾಚಾ ಬಭಾಷೇ ಭಕ್ತಿಪೂರ್ವಕಮ್ ॥**

**ಟೀಕು||** ಮುನಿಪುಂಗವಃ=ಮುನಿಶ್ರೇಷ್ಠನಾದ ಅಗಸ್ತ್ಯ ಋಷಿಯು, ಇತಿ=ಈ ಪ್ರಕಾರದಿಂದೆ, ಸಿದ್ಧಸ್ಯ ತಸ್ಯ=ಆ ರೇವಣಾಸಿದ್ಧೇಶ್ವರನ, ವಚಃ=ವಾಕ್ಯವನು, ಶ್ರುತ್ವಾ=ಕೇಳಿ, ಗಂಭೀರಗುಣಯಾ=ಗಂಭೀರ ಗುಣವುಳ್ಳ, ವಾಚಾ=ವಾಕ್ಯದಿಂದೆ, ಭಕ್ತಿಪೂರ್ವಕಂ=ಭಕ್ತಿಪೂರ್ವಕವಾಗಿ, ಬಭಾಷೇ=ನುಡಿದನು. ||೪೫||

**ಸೂತ್ರ|| ಅಗಸ್ತ್ಯಃ**=ಅಗಸ್ತ್ಯಮುನಿಯು ರೇವಣಾಸಿದ್ಧೇಶ್ವರನ ದರ್ಶನದಿಂದಲಾದ ತನ್ನ ಭಾಗ್ಯವನು ದಶಸೂತ್ರಂಗಳಿಂದೆ ಕೊಂಡಾಡುತ್ತಿರ್ದ್ದಪಂ.

ಗ್ರಂಥ|| **ಅಹಮೇವ ಮುನೀಂದ್ರಾಣಾಂ ಲಾಲನೀಯೋಽಸ್ಮಿ ಸರ್ವದಾ ।**
**ಭವದಾಗಮಸಂಪತ್ತಿರ್ಮಾಂ ವಿನಾ ಕಸ್ಯ ಸಂಭವೇತ್ ॥**

**ಟೀಕು||** ಅಹಮೇವ=ನಾನೇ, ಮುನೀಂದ್ರಾಣಾಂ=ಮುನೀಶ್ವರರಿಂದೆ, ಸರ್ವದಾ=ಎಲ್ಲಾ ಕಾಲದಲ್ಲಿಯೂ, ಲಾಲನೀಯಃ=ಲಾಲಿಸಲು ಯೋಗ್ಯವಾಗಿದ್ದಾತನು, ಅಸ್ಮಿ=ಆಗುತ್ತಿದ್ದೇನೆ. ಯತಃ=ಆವುದಾನೊಂದು ಕಾರಣವಾಗಿ, ಭವದಾಗಮಸಂಪತ್ತಿಃ=ನಿಮ್ಮ ಬರವಿನಿಂದಲಾದ ಸಂಪತ್ತಿಯು, ಮಾಂ ವಿನಾ=ನಾನು ಹೊರತಾಗಿ, ಕಸ್ಯ ಸಂಭವೇತ್=ಆರಿಗಹುದು? ಆರಿಗೆಯು ಆಗದೆಂಬುದರ್ಥ. ||೪೬||

ಗ್ರಂಥ॥ ಸ್ಥಿರಮದ್ಯ ಶಿವಜ್ಞಾನಂ ಸ್ಥಿರಾ ಮೇ ತಾಪಸಕ್ರಿಯಾ ।
ಭವದ್ದರ್ಶನಪುಣ್ಯೇನ ಸ್ಥಿರಾ ಮೇ ಮುನಿರಾಜತಾ ॥

**ಟೀಕು॥** ಭವದ್ದರ್ಶನಪುಣ್ಯೇನ=ನಿನ್ನ ದರ್ಶನದಿಂದಲಾದ ಪುಣ್ಯದಿಂದೆ, ಅದ್ಯ=ಈಗ ಮೇ=ಎನಗೆ, ಶಿವಜ್ಞಾನಂ=ಶಿವಜ್ಞಾನವು, ಸ್ಥಿರಂ=ಸ್ಥಿರವಾಗಿದ್ದುದು; ಮೇ=ಎನಗೆ; ತಾಪಸಕ್ರಿಯಾ=ತಾಪಸಕ್ರಿಯೆಯು ಸ್ಥಿರಾ=ಸ್ಥಿರವಾಗಿದ್ದುದು; ಮೇ=ಎನಗೆ, ಮುನಿರಾಜತಾ=ಮುನಿರಾಜನಹತನವು, ಸ್ಥಿರಾ=ಸ್ಥಿರವಾಗಿದ್ದುದು. ॥೪೭॥

ಗ್ರಂಥ॥ ಸಂಸಾರಸರ್ಪದಷ್ಟಾನಾಂ ಮೂರ್ಛಿತಾನಾಂ ಶರೀರಿಣಾಮ್ ।
ಕಟಾಕ್ಷಸ್ತವ ಕಲ್ಯಾಣಂ ಸಮುಜ್ಜೀವನಭೇಷಜಮ್ ॥

**ಟೀಕು॥** ಸಂಸಾರಸರ್ಪದಷ್ಟಾನಾಂ=ಸಂಸಾರವೆಂಬ ಸರ್ಪನಿಂದೆ ಕಚ್ಚಲುಪಟ್ಟ, ಅತ ಏವ= ಇದುಕಾರಣವಾಗಿಯೆ, ಮೂರ್ಛಿತಾನಾಂ=ಮೂರ್ಛಿತರಾದ, ಶರೀರಿಣಾಂ=ದೇಹಿಗಳಿಗೆ, ತವ=ನಿನ್ನ, ಕಟಾಕ್ಷಃ=ಕಡೆಗಣ್ಣ ನೋಟವು, ಕಲ್ಯಾಣಂ=ಮಂಗಲವಾದ, ಸಮುಜ್ಜೀವನ ಭೇಷಜಂ=ಸಂಜೀವಿನಿ ಯೌಷಧವಾಗಿದ್ದ ಅದು. ॥೪೮॥

ಗ್ರಂಥ॥ ಸಮಸ್ತಲೋಕಸಂದಾಹತಾಪತ್ರಯಮಹಾನಲಃ ।
ತ್ವತ್ಪಾದಾಂಬುಕಣಾಸ್ವಾದಾದುಪಶಾಮ್ಯತಿ ದೇಹಿನಾಮ್ ॥

**ಟೀಕು॥** ಸಮಸ್ತಲೋಕಸಂದಾಹ=ಸಕಲಲೋಕಂಗಳನು ಸುಡುತ್ತಿರ್ದ್ದ, ತಾಪತ್ರಯ ಮಹಾನಲಃ= ಆಧ್ಯಾತ್ಮಿಕಾದಿ ತಾಪತ್ರಯವೆಂಬ ಮಹಾವಹ್ನಿಯು, ತ್ವತ್ಪಾದಾಂಬು=ನಿಮ್ಮ ಶ್ರೀಪಾದೋದಕದ, ಕಣಾಸ್ವಾದಾತ್=ಲೇಶಮಾತ್ರವನು ಸ್ವೀಕರಿಸುವುದರದೆಸೆಯಿಂದೆ, ದೇಹಿನಾಂ= ದೇಹಿಗಳಿಗೆ, ಉಪಶಾಮ್ಯತಿ=ತಗ್ಗುತ್ತಿರ್ದ್ದಪುದು. ॥೪೯॥

ಗ್ರಂಥ॥ ರೇಣುಕಂ ತ್ವಾಂ ವಿಜಾನಾಮಿ ಗಣನಾಥಂ ಶಿವಪ್ರಿಯಮ್ ।
ಅವತೀರ್ಣಮಿಮಾಂ ಭೂಮಿಂ ಮದನುಗ್ರಹಕಾಂಕ್ಷಯಾ ॥

**ಟೀಕು॥** ಶಿವಪ್ರಿಯಂ=ಶಿವನಿಗಿಷ್ಟವಾಗಿರ್ದ್ದ, ರೇಣುಕಂ ಗಣನಾಥಂ=ರೇಣುಕಗಣೇಶ್ವರನನಾಗಿ, ತ್ವಾಂ=ನಿನ್ನನು, ವಿಜಾನಾಮಿ=ಅರಿವುತಿರ್ದ್ದೇನೆ. ಮದನುಗ್ರಹಕಾಂಕ್ಷಯಾ=ಎನಗೆ ಅನುಗ್ರಹವ ಮಾಡಬೇಕೆಂಬ ಬಯಕೆಯಿಂದೆ, ಇಮಾಂ ಭೂಮಿಂ ಪ್ರತಿ=ಈ ಭೂಮಿಯನು ಕುರ್ತ್ತು, ಅವತೀರ್ಣಂ=ಅವತರಿಸುವತನವಾಯಿತ್ತು. ॥೫೦॥

ಗ್ರಂಥ॥ ಭವಾದೃಶಾನಾಂ ಸಿದ್ಧಾನಾಂ ಪ್ರಬೋಧಧ್ವಸ್ತಜನ್ಮನಾಮ್ ।
ಪ್ರವೃತ್ತಿರೀದೃಶೀ ಲೋಕೇ ಪರಾನುಗ್ರಹಕಾರಿಣೀ ॥

**ಟೀಕು॥** ಪ್ರಬೋಧಧ್ವಸ್ತಜನ್ಮನಾಂ=ಶಿವಜ್ಞಾನದಿಂದೆ ಕೆಡಿಸಲುಪಟ್ಟ ಜನ್ಮವುಳ್ಳ, ಭವಾದೃಶಾನಾಂ= ನಿರ್ಮ್ಮೋಪಾದಿಯಾಗಿರ್ದ್ದ, ಸಿದ್ಧಾನಾಂ=ಸಿದ್ಧರ, ಪ್ರವೃತ್ತಿಃ=ಸಂಚಾರವು, ಲೋಕೇ=ಲೋಕದಲ್ಲಿ, ಈದೃಶೀ=ಈ ಪ್ರಕಾರವಾದ, ಪರಾನುಗ್ರಪಕಾರಿಣೀ=ಪರಾನುಗ್ರಹವನು ಮಾಡುತ್ತಿರ್ದ್ದವು.॥೫೧॥

ಗ್ರಂಥ॥ ತ್ವನ್ಮುಖಾಚ್ಛ್ರೋತುಮಿಚ್ಛಾಮಿ ಸಿದ್ಧಾಂತಂ ಶ್ರುತಿಸಂಮತಮ್ ।
ಸರ್ವಜ್ಞ ವದ ಮೇ ಸಾಕ್ಷಾಚ್ಛೈವಂ ಸರ್ವಾರ್ಥಸಾಧಕಮ್ ॥

ಸದ್ಯಸ್ಸಿದ್ಧಿಕರಂ ಪುಂಸಾಂ ಸರ್ವಯೋಗೀಂದ್ರಸೇವಿತಮ್ ।
ದುರಾಚಾರ್ಯೈರನಾಘ್ರಾತಂ ಸ್ವೀಕೃತಂ ವೇದವೇದಿಭಿಃ ।
ಶಿವಾತ್ಮೈಕ್ಯಮಹಾಬೋಧಸಂಪ್ರದಾಯಪ್ರವರ್ತಕಮ್ ॥

**ಟೀಕು॥** ಶೈವಂ=ಶಿವಸಂಬಂಧವಾಗಿರ್ದ್ದ, ಸರ್ವಾರ್ಥಸಾಧಕಂ=ಸಮಸ್ತ ಪ್ರಯೋಜನವನು ಬೋಧಿಸುತ್ತಿರ್ದ್ದ, ಪುಂಸಾಂ=ಪುರುಷರಿಗೆ, ಸದ್ಯಃ ಸಿದ್ಧಿಕರಂ=ತತ್ಕ್ಷಣದಲ್ಲಿ ಸಿದ್ಧಿಯನು ಮಾಡುತ್ತಿರ್ದ್ದ, ಸರ್ವಯೋಗೀಂದ್ರಸೇವಿತಂ=ಸಮಸ್ತಶಿವಯೋಗೀಶ್ವರರಿಂದೆ ಸೇವಿಸಲುಪಟ್ಟ, ದುರಾಚಾರ್ಯೈಃ= ಜೈನಬೌದ್ಧಾದಿಯಾದ ದುರಾಚಾರಿಗಳಿಂದೆ, ಅನಾಘ್ರಾತಂ=ಸ್ವೀಕರಿಸಲುಪಡದೆಯಿದ್ದ, ವೇದವೇದಿಭಿಃ= ವೇದವೇದಾಂತವನರಿವುತ್ತಿರ್ದ್ದ ಶಿವ ಸದಾಚಾರಿಗಳಿಂದೆ, ಸ್ವೀಕೃತಂ=ಸ್ವೀಕರಿಸಲುಪಟ್ಟ, ಸಾಕ್ಷಾತ್= ಪ್ರತ್ಯಕ್ಷವಾದ, ಶಿವಾತ್ಮೈಕ್ಯಮಹಾಬೋಧ=ಶಿವಜೀವೈಕ್ಯರೂಪವಾದ ಮಹಾಜ್ಞಾನದ, ಸಂಪ್ರದಾಯ ಪ್ರವರ್ತಕಂ=ಸಂಪ್ರದಾಯದಿಂದೆ ಬಂದಿರ್ದ್ದ, ಶ್ರುತಿಸಂಮತಂ ಸಿದ್ಧಾಂತಂ=ವೇದ ಸಂಮತವಾದ ಸಿದ್ಧಾಂತವನು, ಭೋ ಸರ್ವಜ್ಞ=ಎಲೆ ಸರ್ವಜ್ಞನಾದ ರೇವಣಾಸಿದ್ಧೇಶ್ವರನೆ! ತ್ವನ್ಮುಖಾತ್=ನಿಮ್ಮ ಮುಖದದೆಸೆಯಿಂದೆ, ಶ್ರೋತುಂ=ಕೇಳಲು, ಇಚ್ಛಾಮಿ=ಇಚ್ಛೈಸುತ್ತಿದ್ದೇನೆ. ಮೇ=ಎನಗೋಸುಗ ವದ=ಉದೇಶಿಸಿ ಹೇಳು. ॥೫೩॥

ವೃತ್ತ॥ ಉಕ್ತ್ವಾ ಭವಾನ್ ಸಕಲಲೋಕಮಹೋಪಕಾರಂ
ಸಿದ್ಧಾಂತಸಂಗ್ರಹಮನಾದೃತಬಾಹ್ಯತಂತ್ರಮ್ ।
ಸದ್ಯಃ ಕೃತಾರ್ಥಯಿತುಮರ್ಹತಿ ದಿವ್ಯಯೋಗಿನ್
ನಾನಾಗಮಶ್ರವಣವರ್ತಿತಸಂಶಯಂ ಮಾಮ್ ॥

**ಟೀಕು॥** ಭೋ ದಿವ್ಯಯೋಗಿನ್=ಮನೋಹರವಾದ ಶಿವಯೋಗವುಳ್ಳ ಎಲೈ ರೇವಣಾಸಿದ್ಧೇಶ್ವರನೆ! ಸಕಲಲೋಕ ಮಹೋಪಕಾರಂ=ಸಮಸ್ತ ಜೀವರುಗಳಿಗೆ ಮಹಾ ಉಪಕಾರಿಯಾಗಿರ್ದ್ದ.

ಅನಾದೃತಬಾಹ್ಯತಂತ್ರಂ=ಖಂಡಿಸಲುಪಟ್ಟ ಜೈನ ಬೌದ್ಧಾದಿ ವೇದಬಾಹ್ಯ ಸಿದ್ಧಾಂತವುಳ್ಳ, ಸಿದ್ಧಾಂತಸಂಗ್ರಹಂ=ವೇದಸಂಮತವಾದ ಶಿವಸಿದ್ಧಾಂತ ಸಂಗ್ರಹವನು, ಉಕ್ತ್ವಾ= ಉಪದೇಶಿಸಿ ಹೇಳಿ, ನಾನಾಗಮಶ್ರವಣವರ್ತಿತಸಂಶಯಂ=ಕಾಮಿಕಾದಿ ವಾತುಲಾಂತವಾಗಿ ಅನೇಕ ಪ್ರಕಾರವಾದ ಶಿವಾಗಮಂಗಳ ಕೇಳುವುದರಿಂದೆ ಪ್ರವರ್ತಿಸುತ್ತಿರ್ದ್ದ ಸಂದೇಹವುಳ್ಳ, ಮಾಂ=ಎನ್ನನು, ಭವಾನ್=ನೀನು, ಸದ್ಯಃಕೃತಾರ್ಥಯಿತುಂ=ಈ ತತುಕ್ಷಣದಲ್ಲಿ ಕೃತಾರ್ಥನನು ಮಾಡಲು, ಅರ್ಹತಿ=ಯೋಗ್ಯನಾಗುತ್ತಿರ್ದ್ದಪೆ. ||೫೪||

ಇತಿ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ
ರೇಣುಕೋತ್ಪತ್ತಿ ಕಲಶೋದ್ಭವದರ್ಶನ
ತತ್ಕೃತ ಪ್ರಸನ್ನಪ್ರಸಂಗೋ ನಾಮ ಚತುರ್ಥಃ ಪರಿಚ್ಛೇದಃ ಸಮಾಪ್ತಃ

## ಪಿಂಡ - ಜ್ಞಾನ - ಸಂಸಾರಹೇಯಸ್ಥಲಮ್

**ಶಿವಯೋಗೀ ಉವಾಚ =**

ಶಿವಯೋಗಿಯು ನುಡಿದನು.

ಗ್ರಂಥ॥ **ಅಥಾಗಸ್ತ್ಯವಚಶ್ಶ್ರುತ್ವಾ ರೇಣುಕೋ ಗಣನಾಯಕಃ ।**
**ಧ್ಯಾತ್ವಾ ಕ್ಷಣಂ ಮಹಾದೇವಂ ಸಾಂಬಮಾಹ ಸಮಾಹಿತಃ ॥**

**ಟೀಕು॥** ರೇಣುಕೋ ಗಣನಾಯಕಃ=ರೇಣುಕಗಣೇಶ್ವರನು, ಅಗಸ್ತ್ಯವಚಃ=ಅಗಸ್ತ್ಯಮುನಿಯ ಪ್ರಶ್ನವಾಕ್ಯವನು, ಶ್ರುತ್ವಾ=ಕೇಳಿ, ಅಥ=ಅನಂತರದಲ್ಲಿ, ಸಾಂಬಂ=ಪಾರ್ವತಿಯೊಡನೆ ಕೂಡಿ ವರ್ತಿಸುತ್ತಿರ್ದ್ದ, ಮಹಾದೇವಂ=ಪರಮೇಶ್ವರನನು, ಕ್ಷಣಂ=ಕ್ಷಣಮಾತ್ರವು, ಸಮಾಹಿತಃ=ಏಕಾಗ್ರ ಚಿತ್ತವುಳ್ಳಾತನಾಗಿ, ಧ್ಯಾತ್ವಾ=ಧ್ಯಾನಿಸಿ, ಆಹ=ಉತ್ತರವನು ನಿರೂಪಿಸುತ್ತಿರ್ದ್ದಪಂ. ॥೧॥

**ರೇಣುಕ ಉವಾಚ**

**ಸೂತ್ರ॥** ರೇಣುಕ ಗಣೇಶ್ವರನು ಸಕಲಾಗಮ ಪಾರಂಗತನಾದ ಅಗಸ್ತ್ಯಮುನಿಗೆ ಶಿವಸಿದ್ಧಾಂತವನು ನಿರೂಪಿಸುತ್ತಿರ್ದ್ದ[ ]ಪನು.

ಗ್ರಂಥ॥ **ಅಗಸ್ತ್ಯ ಮುನಿಶಾರ್ದೂಲ ಸಮಸ್ತಾಗಮಪಾರಗ ।**
**ಶಿವಜ್ಞಾನಕರಂ ವಕ್ಷ್ಯೇ ಸಿದ್ಧಾಂತಂ ಶೃಣು ಸಾದರಮ್ ॥**

**ಟೀಕು॥** ಮುನಿಶಾರ್ದೂಲ=ಋಷಿ ಶ್ರೇಷ್ಠನಾಗಿರ್ದ್ದ, ಸಮಸ್ತಾಗಮ ಪಾರಗ=ಸಕಲಾಗ ಮಂಗಳನು ಕಡೆಗಂಡಿರ್ದ್ದ, ಭೋ ಅಗಸ್ತ್ಯ=ಎಲೆ ಅಗಸ್ತ್ಯಮುನಿಯೆ! ಶಿವಜ್ಞಾನಕರಂ=ಶಿವಜ್ಞಾನವನು ಮಾಡುತ್ತಿರ್ದ್ದ, ಸಿದ್ಧಾಂತಂ=ಶಿವಸಿದ್ಧಾಂತಶಾಸ್ತ್ರವನು, ವಕ್ಷ್ಯೇ=ಹೇಳಿಹೆವು. ತ್ವಂ=ನೀನು, ಸಾದರಂ=ಪ್ರೀತಿಯೊಡನೆ ಕೂಡಿ ವರ್ತಿಸುತ್ತಿರ್ದ್ದಾತನಾಗಿ, ಶೃಣು=ಕೇಳು. ॥೨॥

**ಸೂತ್ರ॥** ಆ ಶಿವಸಿದ್ಧಾಂತವನು ಪ್ರತಿಪಾದಿಸಲೋಸುಗವಾಗಿ ಸಿದ್ಧಾಂತಂಗಳನು ಬಹುವಿಧದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಅಗಸ್ತ್ಯ ಖಲು ಸಿದ್ಧಾಂತಾಃ ವಿಖ್ಯಾತಾ ರುಚಿಭೇದತಃ ।**
**ಭಿನ್ನಾಚಾರಸಮಾಯುಕ್ತಾಃ ಭಿನ್ನಾರ್ಥಪ್ರತಿಪಾದಕಾಃ ॥**

**ಟೀಕು॥** ಭೋ ಅಗಸ್ತ್ಯ=ಎಲೈ ಅಗಸ್ತ್ಯ ಮುನಿಯೆ! ಸಿದ್ಧಾಂತಾಃ=ಸಿದ್ಧಾಂತ ಶಾಸ್ತ್ರಂಗಳು. ರುಚಿಭೇದತಃ=ಇಚ್ಛಾಭೇದದದೆಸೆಯಿಂದೆ, ಭಿನ್ನಾಚಾರಸಮಾಯುಕ್ತಾಃ=ಭಿನ್ನವಾದ ಆಚಾರದೊಡನೆ ಕೂಡಿದ್ದಾತವಾಗಿ, ಭಿನ್ನಾರ್ಥಪ್ರತಿಪಾದಕಾಃ=ಭಿನ್ನವಾದ ಅರ್ಥವನು ಪ್ರತಿಪಾದಿಸುತ್ತಿರ್ದ್ದವಾಗಿ, ವಿಖ್ಯಾತಾಃ ಖಲು=ಪ್ರಸಿದ್ಧವಾಗಿರ್ದ್ದ ಅವಲಾ. ॥೩॥

**ಸೂತ್ರ॥** ಆ ಸಿದ್ಧಾಂತ ಭೇದಂಗಳನು ತೋರಿಸುತ್ತಿರ್ದ್ದಪಂ.

**ಗ್ರಂಥ॥** **ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ।**
**ಏತಾನಿ ಮಾನಭೂತಾನಿ ನೋಪಹನ್ಯಾನಿ ಯುಕ್ತಿಭಿಃ ॥**

**ಟೀಕು॥** ಸಾಂಖ್ಯಂ=ಕಪಿಲಮುನಿ ಪ್ರಣೀತವಾದ ನಿರೀಶ್ವರ ಸಾಂಖ್ಯವು, ಯೋಗಃ=[ಪತಂಜಲಿ]ಪ್ರಣೀತವಾದ ಯೋಗಶಾಸ್ತ್ರವು, ಪಾಂಚರಾತ್ರಂ=ವಾಸುದೇವ ಪ್ರಣೀತವಾದ ವೈಷ್ಣವಾಗಮವು, ಪಾಶುಪತಂ=ಶಿವಪ್ರಣೀತವಾದ ಶಿವಾಗಮವು, ತಥಾ=ಹಾಗೆಯೆ, ವೇದಾಃ="ಯಸ್ಯ ನಿಃಶ್ವಸಿತಂ ವೇದಾಃ"ಯೆಂಬ ಶ್ರುತಿಯುಂಟಾಗಿ ಶಿವನ ನಿಶ್ವಾಸ ಮಾರುತ ಸಂಭವವಾದ ವೇದಂಗಳು, ಮಾನಭೂತಾನಿ=ಪ್ರಮಾಣಂಗಳಾಗಿರ್ದ್ದ, ಏತಾನಿ="ತ್ರಯೀ ಸಾಂಖ್ಯಂ ಯೋಗಃ ಪಶುಪತಿಮತಂ ವೈಷ್ಣವಮಿತಿ"ಯೆಂದು ಮಹಿಮ್ನಃಸ್ತವ ಪ್ರಸಿದ್ಧವಾದ ಈ ಸಿದ್ಧಾಂತಂಗಳು, ಯುಕ್ತಿಭಿಃ=ಯುಕ್ತಿಗಳಿಂದೆ, ನೋಪಹನ್ಯಾನಿ=ಕೆಡಿಸಲು ಯೋಗ್ಯಂಗಳಲ್ಲ. ॥೪॥

**ಸೂತ್ರ॥** ಆ ಸಿದ್ಧಾಂತಂಗಳೊಳಗೆ ವೇದವೆ ಮುಖ್ಯವೆಂದು ತೋರಿಸುತ್ತಿರ್ದ್ದಪಂ.

**ಗ್ರಂಥ॥** **ವೇದಃ ಪ್ರಧಾನಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮುನೇ ।**
**ವೇದಾನುಸರಣಾದೇಷಾಂ ಪ್ರಾಮಾಣ್ಯಮಿತಿ ನಿಶ್ಚಿತಮ್ ॥**

**ಟೀಕು॥** ಭೋ ಮಹಾಮುನೇ=ಎಲೈ ಮಹಾಋಷಿಯಾದ ಅಗಸ್ತ್ಯಮುನಿಯೆ! ಸಾಂಖ್ಯಾದೀನಾಂ=ನಿರೀಶ್ವರ ಸಾಂಖ್ಯ ಮೊದಲಾಗುಳ್ಳ, ಸರ್ವೇಷಾಂ=ಪೂರ್ವೋಕ್ತವಪ ಸಮಸ್ತ ಸಿದ್ಧಾಂತ ಶಾಸ್ತ್ರಂಗಳಿಗೆ, ವೇದಃ=ವೇದವು, ಪ್ರಧಾನಂ=ಮುಖ್ಯವು. ವೇದಾನುಸರಣಾದೇಷಾಂ=ವೇದಂಗಳನು ಬಳಿವಿಡಿದು ಎಯ್ದುದಾದಕಾರಣವಾಗಿ, ಏಷಾಂ=ಈ ಸಾಂಖ್ಯಾದಿಯಾದೀ ನಾಲ್ಕು ಸಿದ್ಧಾಂತಶಾಸ್ತ್ರಂಗಳಿಗೂ, ಪ್ರಾಮಾಣ್ಯಮಿತಿ=ಪ್ರಮಾಣತನವು, ನಿಶ್ಚಿತಂ=ಸರ್ವಶಾಸ್ತ್ರಪಾರಂಗತರಿಂದೆ ನಿಶ್ಚೈಸಲುಪಟ್ಟಿತ್ತು. ॥೫॥

**ಸೂತ್ರ॥** ಆ ಸಾಂಖ್ಯಾದಿಗಳದೆಸೆಯಿಂದೆ ಶಿವಾಗಮವು ವೇದಮಯವೆಂದು ತೋರಿಸುತ್ತಿರ್ದ್ದಪಂ.

ಗ್ರಂಥ॥ ಪಾಂಚರಾತ್ರಸ್ಯ ಸಾಂಖ್ಯಸ್ಯ ಯೋಗಸ್ಯ ಚ ತಥಾ ಮುನೇ ।
ವೇದೈಕದೇಶವರ್ತಿತ್ವಂ ಶೈವಂ ವೇದಮಯಂ ಮತಮ್ ॥

**ಟೀಕು॥** ಭೋ ಮುನೇ=ಎಲೆ ಅಗಸ್ತ್ಯಮುನಿಯೆ! ಸಾಂಖ್ಯಸ್ಯ=ನಿರೀಶ್ವರಸಾಂಖ್ಯಶಾಸ್ತ್ರಕ್ಕೆ, ಯೋಗಸ್ಯ=ಯೋಗಶಾಸ್ತ್ರಕ್ಕೆ, ತಥಾ=ಹಾಂಗೆಯೆ, ಪಾಂಚರಾತ್ರಸ್ಯ ಚ=ವೈಷ್ಣವಾಗಮಕ್ಕೆಯು, ವೇದೈಕ ದೇಶವರ್ತಿತ್ವಂ=ಒಂದು ವೇದದ ಏಕದೇಶದಲ್ಲಿ ವರ್ತಿಸುವತನವು, ಶೈವಂ=ಶಿವಾಗಮವು, ವೇದಮಯಂ=ವೇದದಲ್ಲಿ ತನ್ಮಯವಾಗಿ, ಮತಂ=ಸಂಮತವು. ॥೬॥

**ಸೂತ್ರ॥** ಆ ಶಿವಾಗಮವು ಸರ್ವವೇದಾನುಸಾರಿಯೆಂದು ತೋರಿಸುತ್ತಿರ್ದಪಂ.

ಗ್ರಂಥ॥ ವೇದೈಕದೇಶವರ್ತಿಭ್ಯಸ್ಸಾಂಖ್ಯಾದಿಭ್ಯೋ ಮಹಾಮುನೇ ।
ಸರ್ವವೇದಾನುಸಾರಿತ್ವಾಚ್ಛೈವತಂತ್ರಂ ವಿಶಿಷ್ಯತೇ ॥

**ಟೀಕು॥** ಭೋ ಮಹಾಮುನೇ=ಎಲೈ ಮಹರ್ಷಿಯಾದ ಅಗಸ್ತ್ಯ ಮುನಿಯೆ! ವೇದೈಕದೇಶ ವರ್ತಿಭ್ಯಃ=ಒಂದು ವೇದದ ಏಕದೇಶವರ್ತಿಗಳಾದ, ಸಾಂಖ್ಯಾದಿಭ್ಯಃ=ಸಾಂಖ್ಯ ಮೊದಲಾಗುಳ್ಳ ಯೋಗ ಪಾಂಚರಾತ್ರಂಗಳದೆಸೆಯಿಂದೆ, ಶೈವತಂತ್ರಂ=ಶಿವಾಗಮವು, ಸರ್ವವೇದಾನು ಸಾರಿತ್ವಾತ್=ಸಕಲವೇದಂಗಳನು ಬಳಿವಿಡಿದು ಎಯ್ದಿದವರಾದಕಾರಣವಾಗಿ, ವಿಶಿಷ್ಯತೇ= ವಿಶೇಷಿಸಲುಪಡುತ್ತಿರ್ದಪುದು. ॥೭॥

**ಸೂತ್ರ॥** ಆ ಶಿವಾಗಮವು ಸರ್ವ ವೇದಾರ್ಥರೂಪವೆಂದು ತೋರಿಸುತ್ತಿರ್ದಪಂ.

ಗ್ರಂಥ॥ ಶೈವತಂತ್ರಮಿತಿ ಪ್ರೋಕ್ತಂ ಸಿದ್ಧಾಂತಾಖ್ಯಂ ಶಿವೋದಿತಮ್ ।
ಸರ್ವವೇದಾರ್ಥರೂಪತ್ವಾತ್ಪ್ರಾಮಾಣ್ಯಂ ವೇದವತ್ಸದಾ ॥

**ಟೀಕು॥** ಶಿವೋದಿತಂ=ಶಿವನಿಂದೆಹೇಳಲುಪಟ್ಟ, ಸಿದ್ಧಾಂತಾಖ್ಯಂ=ಸಿದ್ಧಾಂತವೆಂಬ ಹೆಸರುಳ್ಳ, ಶೈವತಂತ್ರಂ=ಶಿವಾಗಮವು, ಸರ್ವವೇದಾರ್ಥರೂಪತ್ವಾತ್=ಸಮಸ್ತ ವೇದಾರ್ಥವೆ ಸ್ವರೂಪಾಗುಳ್ಳದಾದ ಕಾರಣವಾಗಿ, ವೇದವತ್=ವೇದದೋಪಾದಿಯಲ್ಲಿ, ಸದಾ ಎಲ್ಲಾ ಕಾಲದಲ್ಲಿಯೂ, ಪ್ರಾಮಾಣ್ಯಮಿತಿ=ಪ್ರಮಾಣವೆಂದು, ಪ್ರೋಕ್ತಂ=ಹೇಳಲುಪಟ್ಟಿತ್ತು. ॥೮॥

**ಸೂತ್ರ॥** ಆ ಶಿವಾಗಮದ ಭೇದಂಗಳನು ತೋರಿಸುತ್ತಿರ್ದಪಂ.

ಗ್ರಂಥ॥ **ಆಗಮಾ ಬಹುಧಾ ಪ್ರೋಕ್ತಾಃ ಶಿವೇನ ಪರಮಾತ್ಮನಾ ।**
**ಶೈವಂ ಪಾಶುಪತಂ ಸೋಮಂ ಲಾಕುಲಂ ಚೇತಿ ಭೇದತಃ ॥**

**ಟೀಕು॥** ಪರಮಾತ್ಮನಾ=ಪರಬ್ರಹ್ಮಸ್ವರೂಪನಾದ, ಶಿವೇನ=ಪಾರ್ವತಿಪ್ರಾಣನಾಥನಾದ ಪರಶಿವನಿಂದೆ, ಆಗಮಾಃ=ಆಗಮಂಗಳು, ಶೈವಂ=ಶಿವಾಗಮವೆಂದು, ಪಾಶುಪತಂ=ಪಾಶುಪತಾಗಮವೆಂದು, ಸೋಮಂ=ಸೋಮಾಗಮವೆಂದು, ಲಾಕುಲಂ ಚೇತಿ=ಲಾಕುಳಾಗಮವೆಂದು, ಬಹುಧಾ ಭೇದತಃ=ಅನೇಕ ಭೇದವಾಗಿ, ಪ್ರೋಕ್ತಾಃ=ಹೇಳಲುಪಟ್ಟವು. ॥೯॥

**ಸೂತ್ರ॥** ಆ ಆಗಮಂಗಳೊಳಗೆ ಮೊದಲದಾದ ಶೈವಾಗಮ ಭೇದವನು ಹೇಳುತ್ತಿರ್ದಪಂ.

ಗ್ರಂಥ॥ **ತೇಷು ಶೈವಂ ಚತುರ್ಭೇದಂ ತಂತ್ರಂ ಸರ್ವವಿನಿಶ್ಚಿತಮ್ ।**
**ವಾಮಂ ಚ ದಕ್ಷಿಣಂ ಚೈವ ಮಿಶ್ರಂ ಸಿದ್ಧಾಂತಸಂಜ್ಞಕಮ್ ॥**

**ಟೀಕು॥** ತೇಷು=ಆ ಪೂರ್ವೋಕ್ತಾಗಮಂಗಳಲ್ಲಿ ಶೈವಂತಂತ್ರಂ=ಶಿವಾಗಮವು, ವಾಮಂ ಚ=ವಾಮಾಗಮವೆಂದು, ದಕ್ಷಿಣಂ ಚ=ದಕ್ಷಿಣಾಗಮವೆಂದು, ಮಿಶ್ರಂ=ಮಿಶ್ರಾಗಮವೆಂದು, ಸಿದ್ಧಾಂತಸಂಜ್ಞಕಂ=ಸಿದ್ಧಾಂತವೆಂಬ ಹೆಸರುಳ್ಳದೆಂದು, ಚತುರ್ಭೇದಂ=ನಾಲ್ಕು ಭೇದವುಳ್ಳದಾಗಿ, ಸರ್ವವಿನಿಶ್ಚಿತಂ=ಸಮಸ್ತಾಗಮಜ್ಞರಿಂದೆ ನಿಶ್ಚೈಸಲುಪಟ್ಟಿತ್ತು. ॥೧೦॥

**ಸೂತ್ರ॥** ಆ ವಾಮಾದ್ಯಾಗಮಂಗಳ ಲಕ್ಷಣವನು ಹೇಳಿ ಸಿದ್ಧಾಂತವು ವೇದ ಸಂಮತವೆಂದು ತೋರಿಸುತ್ತಿರ್ದಪಂ.

ಗ್ರಂಥ॥ **ಶಕ್ತಿಪ್ರಧಾನಂ ವಾಮಾಖ್ಯಂ ದಕ್ಷಿಣಂ ಭೈರವಾತ್ಮಕಮ್ ।**
**ಸಪ್ತಮಾತೃಪರಂ ಮಿಶ್ರಂ ಸಿದ್ಧಾಂತಂ ವೇದಸಂಮತಮ್ ॥**

**ಟೀಕು॥** ವಾಮಾಖ್ಯಂ=ವಾಮವೆಂಬ ಹೆಸರುಳ್ಳಾಗಮವು, ಶಕ್ತಿಪ್ರಧಾನಂ=ಶಕ್ತಿಯೆ ಮುಖ್ಯವಾಗುಳ್ಳ ಅದು; ದಕ್ಷಿಣಂ=ದಕ್ಷಿಣಾಗಮವು, ಭೈರವಾತ್ಮಕಂ=ಭೈರವನೆ ಸ್ವರೂಪವಾಗಿದ್ದ ಅದು; ಮಿಶ್ರಂ=ಮಿಶ್ರಾಗಮವು,ಸಪ್ತಮಾತೃಪರಂ=ಸಪ್ತಮಾತೃಕೆಯರೆ ಪ್ರಧಾನವಾಗುಳ್ಳ ಅದು; ಸಿದ್ಧಾಂತಂ=ಸಿದ್ಧಾಂತವೆಂಬ ಹೆಸರುಳ್ಳಾಗಮವು, ವೇದಸಂಮತಂ=ವೇದಂಗಳಿಗೆ ಸಂಮತವಾಗಿದ್ದ ಅದು. ॥೧೧॥

**ಸೂತ್ರ॥** ಆ ಸಿದ್ಧಾಂತವು ಆವ ಪ್ರಕಾರದಲ್ಲಿ ವೇದಸಂಮತವೆಂದರೆ ಕಾರಣವನು ಹೇಳುತ್ತಿರ್ದಪಂ.

ಗ್ರಂಥ॥ ವೇದಧರ್ಮಾಭಿಧಾಯಿತ್ವಾತ್ಸಿದ್ಧಾಂತಾಖ್ಯಶ್ಶಿವಾಗಮಃ ।
ವೇದಬಾಹ್ಯವಿರೋಧಿತ್ವಾದ್ವೇದಸಂಮತ ಉಚ್ಯತೇ ॥

ಟೀಕು॥ ಸಿದ್ಧಾಂತಾಖ್ಯ=ಸಿದ್ಧಾಂತವೆಂಬ ಹೆಸರುಳ್ಳ, ಶಿವಾಗಮಃ=ಶಿವಾಗಮವು, ವೇದಧರ್ಮಾಬಿಧಾಯಿತ್ವಾತ್=ವೇದೋಕ್ತವಾದ ಧರ್ಮವನೆ ಹೇಳುವದಾದ ಕಾರಣವಾಗಿ, ವೇದಬಾಹ್ಯವಿರೋಧಿತ್ವಾತ್=ವೇದಂಗಳಿಗೆ ಬಾಹ್ಯವಾದ ಜೈನ ಬೌದ್ಧ ಚಾರ್ವಾಕಮತಂಗಳಿಗೆ ವಿರೋಧಿಯಾದ ಕಾರಣವಾಗಿ, ವೇದಸಂಮತಃ=ವೇದಸಂಮತವೆಂದು, ಉಚ್ಯತೇ=ಹೇಳಲು ಪಡುತ್ತಿರ್ದಪುದು. ॥೧೨॥

ಸೂತ್ರ॥ ಶಿವಪ್ರಣೀತವಾದ ಆ ವೇದಸಿದ್ಧಾಂತಂಗಳಿಗೆ ಕಾರಣಪೂರ್ವಕವಾಗಿ ಐಕ್ಯವನು ತೋರಿಸುತ್ತಿರ್ದಪಂ.

ಗ್ರಂಥ॥ ವೇದಸಿದ್ಧಾಂತಯೋರೈಕ್ಯಮೇಕಾರ್ಥಪ್ರತಿಪಾದನಾತ್ ।
ಪ್ರಾಮಾಣ್ಯಂ ಸದೃಶಂ ಜ್ಞೇಯಂ ಪಂಡಿತೈರೇತಯೋಸ್ಸದಾ ॥

ಟೀಕು॥ ವೇದಸಿದ್ಧಾಂತಯೋಃ=ವೇದಸಿದ್ಧಾಂತಂಗಳಿಗೆ, ಏಕಾರ್ಥಪ್ರತಿಪಾದನಾತ್=''ಸರ್ವ ವೇದೇಷು ಯದ್ ದೃಷ್ಟಂ ತತ್ಸರ್ವಂ ತು ಶಿವಾಗಮಃ"ಯೆಂದು ವೀರಾಗಮ ವಾಕ್ಯವುಂಟಾಗಿ ಒಂದೆ ಅರ್ಥವನು ಪ್ರತಿಪಾದಿಸುವುದರದೆಸೆಯಿಂದೆ, ಐಕ್ಯಂ=ಏಕತ್ವವು, ಏತಯೋಃ=ಈ ವೇದಸಿದ್ಧಾಂತಂಗಳ, ಪ್ರಾಮಾಣ್ಯಂ=ಪ್ರಮಾಣವು, ಸದೃಶಂ=ಸಮಾನವಾಗಿದ್ದುದಾಗಿ, ಪಂಡಿತೈಃ=ವೇದಾಗಮ ಜ್ಞಾನಿಗಳಾದ ವಿದ್ವಾಂಸರಿಂದೆ, ಸದಾ=ಎಲ್ಲಾ ಕಾಲದಲ್ಲಿಯು, ಜ್ಞೇಯಂ=ಅರಿಯಲು ಯೋಗ್ಯವು. ಇದಕ್ಕೆ ತಾತ್ಪರ್ಯ ಸಂಗ್ರಹದಲ್ಲಿ "ವೇದಾಃ ಪ್ರಮಾಣಮಿತಿ ಸಂಗಿರಮಾಣ ಏವ । ದಿವ್ಯಂ ತವಾಗಮಮವೈತಿ ಜನಃ ಪ್ರಮಾಣಮ್"॥ ಯೆಂಬ ವಾಕ್ಯದಿಂದೆ ಸಮಸ್ತ ಸಮಯಂಗಳಿಗುತ್ತರವಾದ ವೇದಾಗಮ ಪ್ರಾಮಾಣ್ಯವನು ನಿಶ್ಚಯಿಸುವದು. ॥೧೩॥

ಸೂತ್ರ॥ ಈ ಪ್ರಕಾರದಿಂದೆ ವೇದಾಗಮೈಕ್ಯವನು ಪ್ರತಿಪಾದಿಸಿ, ಇನ್ನು ಶಿವಸಿದ್ಧಾಂತದ ಉತ್ತರ ಪಕ್ಷದಲ್ಲಿ ವೀರಶೈವ ಮತವನು ತೋರಿಸುತ್ತಿರ್ದಪಂ.

ಗ್ರಂಥ॥ ಸಿದ್ಧಾಂತಾಖ್ಯೇ ಮಹಾತಂತ್ರೇ ಕಾಮಿಕಾದ್ಯೇ ಶಿವೋದಿತೇ ।
ನಿರ್ದಿಷ್ಟಮುತ್ತರೇ ಭಾಗೇ ವೀರಶೈವಮತಂ ಪರಮ್ ॥

ಟೀಕು॥ ಶಿವೋದಿತೇ=ಶಿವನಿಂದೆ ಹೇಳಲುಪಟ್ಟ, ಕಾಮಿಕಾದ್ಯೇ=ಕಾಮಿಕಾಗಮವೇ ಮೊದಲಾಗಿ ವಾತುಲಾಗಮವೇ ಕಡೆಯಾಗುಳ್ಳ, ಸಿದ್ಧಾಂತಾಖ್ಯೇ=ಸಿದ್ಧಾಂತವೆಂಬ ಹೆಸರುಳ್ಳ, ಮಹಾತಂತ್ರೇ= ಮಹಾಶಿವಾಗಮದಲ್ಲಿಯ, ಉತ್ತರೇ ಭಾಗೇ=ಉತ್ತರ ಪಕ್ಷದಲ್ಲಿ, ಪರಂ=ಸರ್ವೋತ್ಕರ್ಷವಾದ, ವೀರಶೈವ

ಮತಂ=ವೀರಶೈವ ಮತವು, ನಿರ್ದಿಷ್ಟಂ=ನಿಶ್ಚೈಸಲುಪಟ್ಟಿತ್ತು. ॥೧೪॥

**ಸೂತ್ರ॥** ಬಳಿಕ ವೇದಶಿರಸ್ಸಿನಲ್ಲಿಯು ವೀರಶೈವ ಶಬ್ದವನು ತೋರಿಸುತ್ತಿರ್ದ್ದಪಂ.

**ಗ್ರಂಥ॥**

**ವಿದ್ಯಾಯಾಂ ಶಿವರೂಪಾಯಾಂ ವಿಶೇಷಾದ್ರಮಣಂ ಯತಃ ।**
**ತಸ್ಮಾದೇತೇ ಮಹಾಭಾಗಾಃ ವೀರಶೈವಾ ಇತಿ ಸ್ಮೃತಾಃ ॥**

**ಟೀಕು॥** ಶಿವರೂಪಾಯಾಂ=ಶಿವಸ್ವರೂಪವಾಗಿರ್ದ್ದ, ವಿದ್ಯಾಯಾಂ="ವೇದಾಂತ ವಾಕ್ಯಜಾಂ ವಿದ್ಯಾ"ಯೆಂಬ ಸೂತಸಂಹಿತೋಕ್ತಿಯುಂಟಾಗಿ ವೇದಶಿರಸ್ಸಿನಲ್ಲಿ ಹುಟ್ಟಿದ ವಿದ್ಯೆಯಲ್ಲಿ, ವಿಶೇಷಾತ್=ಅಧಿಕವಾಗಿ, ಯತಃ=ಆವುದಾನೊಂದು ಕಾರಣವಾಗಿ, ರಮಣಂ=ಕ್ರೀಡಿಸುವತನವುಂಟು, ತಸ್ಮಾತ್=ಅದು ಕಾರಣವಾಗಿ, ಏತೇ=ಇವರು, ಮಹಾಭಾಗಾಃ=ಶ್ರೇಷ್ಠರಾದ, ವೀರಶೈವಾ ಇತಿ=ವೀರಶೈವರೆಂದು, ಸ್ಮೃತಾಃ=ನೆನೆಯಲುಪಟ್ಟರು. ॥೧೫॥

**ಸೂತ್ರ॥** ಬಳಿಕ ವೇದಾಗಮಶಿರಸ್ಸಿನಲ್ಲಿಯು ವೀರಶೈವ ಶಬ್ದನಿರ್ವಚನವನು ತೋರಿಸುತ್ತಿರ್ದ್ದಪಂ.

**ಗ್ರಂಥ॥**

**ವೀ ಶಬ್ದೇನೋಚ್ಯತೇ ವಿದ್ಯಾ ಶಿವಜೀವೈಕ್ಯಬೋಧಿಕಾ ।**
**ತಸ್ಯಾಂ ರಮಂತೇ ಯೇ ಶೈವಾ ವೀರಶೈವಾಸ್ತು ತೇ ಮತಾಃ ॥**

**ಟೀಕು॥** ಶಿವಜೀವೈಕ್ಯಬೋಧಿಕಾ=ಲಿಂಗಾಂಗರೂಪವಾದ ಶಿವಜೀವರ ಅಯಿಕ್ಯವನು ಬೋಧಿಸುತ್ತಿರ್ದ್ದ, ವಿದ್ಯಾ=ವಿದ್ಯೆಯು, ವೀ ಶಬ್ದೇನ=ವೀ ಯೆಂಬ ಶಬ್ದದಿಂದೆ, ಉಚ್ಯತೇ=ಹೇಳಲು ಪಡುತ್ತಿರ್ದ್ದಪುದು. ತಸ್ಯಾಂ=ಆ ವಿದ್ಯೆಯಲ್ಲಿ, ಯೇ ಶೈವಾಃ=ಆರು ಕೆಲಂಬರು ಶಿವಭಕ್ತರು, ರಮಂತೇ=ಕ್ರೀಡಿಸುತ್ತಿರ್ದ್ದಪರು, ತೇ ತು=ಅವರಾಯಿತ್ತೊಡೆ, ವೀರಶೈವಾಃ=ವೀರಶೈವರೆಂದು, ಮತಾಃ=ಸಂಮತರು. ॥೧೬॥

**ಸೂತ್ರ॥** ಬಳಿಕ ವೀರಮಾಹೇಶ್ವರ ಶಬ್ದನಿರ್ವಚನವನು ತೋರಿಸುತ್ತಿರ್ದ್ದಪಂ.

**ಗ್ರಂಥ॥**

**ವಿದ್ಯಾಯಾಂ ರಮತೇ ಯಸ್ಮಾತ್ ಮಾಯಾಂ ಹೇಯಾಂ ಶ್ವವದ್ರಹೇತ್ ।**
**ಅನೇನೈವ ನಿರುಕ್ತೇನ ವೀರಮಾಹೇಶ್ವರಃ ಸ್ಮೃತಃ ॥**

**ಟೀಕು॥** ಯಸ್ಮಾತ್=ಆವುದಾನೆಂದು ಕಾರಣವಾಗಿ, ವಿದ್ಯಾಯಾಂ=ಶಿವಜೀವೈಕ್ಯರೂಪವಾದ ವಿದ್ಯೆಯಲ್ಲಿ, ರಮತೇ=ಕ್ರೀಡಿಸುತ್ತಿರ್ದ್ದಪನು. ಮಾಯಾಂ=ಜಗತ್ಪ್ರಪಂಚರೂಪವಾದ ಮಾಯೆಯನು,

ಹೇಯಾಂ=ಬಿಡಲುಯೋಗ್ಯವಾಗಿರ್ದ್ದವನಾಗಿ, ಶ್ವವತ್=ಶುನಕನೋಪಾದಿಯಲ್ಲಿ, ರಹೇತ್=ಬಿಡುವನು. ಅನೇನೈವ ನಿರುಕ್ತೇನ= ಈ ಪದಂಗಳ ಮೊದಲಕ್ಷರವಾದ ನಿರುಕ್ತಿಯಿಂದವೆ ವೀರ್ರಮಾಹೇಶ್ವರಃ=ವೀರ ಮಾಹೇಶ್ವರನೆಂದು, ಸ್ಮೃತಃ=ಅನ್ವರ್ಥನಾಮವುಳ್ಳಾತನಾಗಿ ನೆನೆಯಲುಪಟ್ಟನು. ||೧೭||

**ಸೂತ್ರ||** ಅನಂತರದಲ್ಲಿ ವೇದಾಂತ ಸಿದ್ಧಾಂತವಾದ ವೀರಶಬ್ದಸಿದ್ಧಾಂತ ಪ್ರಸಿದ್ಧವಾದ ಶೈವಶಬ್ದ ಮಾಹೇಶ್ವರ ಶಬ್ದಂಗಳನು ಹೇಳಿದ ಬಳಿಕ ವೇದಾಗಮ ಶಿರಸ್ಸಿದ್ಧವಾದ ವೀರಮಾಹೇಶ್ವರ ವೀರಶೈವ ಶಬ್ದಂಗಳನು ಷಟ್ಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ವೇದಾಂತಜನ್ಯಂ ಯತ್ ಜ್ಞಾನಂ ವಿದ್ಯೇತಿ ಪರಿಕೀರ್ತ್ಯತೇ ।**
**ವಿದ್ಯಾಯಾಂ ರಮತೇ ತಸ್ಯಾಂ ವೀರ ಇತ್ಯಭಿಧೀಯತೇ ||**

**ಟೀಕು||** ವೇದಾಂತ ಜನ್ಯಂ=ವೇದಾಂತದಲ್ಲಿ ಹುಟ್ಟಿದ, ಯತ್ ಜ್ಞಾನಂ=ಆವುದಾನೊಂದು ಜ್ಞಾನವು, ವಿದ್ಯೇತಿ=ವಿದ್ಯೆಯೆಂದು, ಪರಿಕೀರ್ತ್ಯತೇ=ಹೇಳಲುಪಡುತ್ತಿರ್ದ್ದಪುದು. ತಸ್ಯಾಂ ವಿದ್ಯಾಯಾಂ=ಆ ವಿದ್ಯೆಯಲ್ಲಿ, ಯಃ=ಆವನಾನೊಬ್ಬನು, ರಮತೇ=ಕ್ರೀಡಿಸುತ್ತಿರ್ದ್ದಪನು. ಸಃ=ಆತನು, ವೀರ ಇತಿ=ವೀರನೆಂದು, ಅಭಿಧೀಯತೇ=ಹೇಳಲುಪಡುತ್ತಿರ್ದ್ದಪನು. ||೧೮||

**ಸೂತ್ರ||** ಬಳಿಕ ವೇದಾಂತ ಸಿದ್ಧಾಂತವಾದ ವೀರಶಬ್ದಪೂರ್ವಕವಾಗಿ ಸಿದ್ಧಾಂತ ಪ್ರಸಿದ್ಧವಾದ ಶಿವತತ್ತ್ವದ ಜ್ಞಾನವುಳ್ಳ ಶೈವವನು ಮಾಹೇಶ್ವರತತ್ತ್ವದ ಕರ್ಮವುಳ್ಳ ಮಾಹೇಶ್ವರರನು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ

**ಗ್ರಂಥ||** **ಶೈವೈರ್ಮಾಹೇಶ್ವರೈಶ್ಚೈವ ಕಾರ್ಯಮಂತರ್ಬಹಿಃ ಕ್ರಮಾತ್ ।**

**ಶಿವೋ ಮಾಹೇಶ್ವರಶ್ಚೇತಿ ನಾತ್ಯಂತಮಿಹ ಭಿದ್ಯತೇ ।**
**ಯಥಾ ತಥಾ ನ ಭಿದ್ಯಂತೇ ಶೈವಾ ಮಾಹೇಶ್ವರಾಃ ಅಪಿ ||**

**ಟೀಕು||** ಶೈವೈಃ=ವೀರಶಬ್ದಪೂರ್ವಕವಾದ ಶೈವರಿಂದೆ, ಮಾಹೇಶ್ವರಶ್ಚೈವ=ವೀ[ರ]ಶಬ್ದ ಪೂರ್ವಕವಾದ ಮಾಹೇಶ್ವರರಿಂದೆಯು, ಅಂತರ್ಬಹಿಃ=ಒಳಗೆ ಹೊರಗೆ, ಕ್ರಮಾತ್=ಕ್ರಮದಿಂದೆ, ಕಾರ್ಯಂ=ಶಿವಲಿಂಗಾರ್ಚನೆಯು ಮಾಡಲು ಯೋಗ್ಯವು. ಶಿವಃ=ನಿಷ್ಕಲವಾದ ಶಿವನು, ಮಾಹೇಶ್ವರಃ=ಸಕಲನಾದ ಮಾಹೇಶ್ವರನು, ಇತಿ=ಹೀಂಗೆಂದು, ಇಹ='ಶಿವಶ್ಶೂಲೀ ಮಹೇಶ್ವರಃ' ಯೆಂಬ ಈ ಅಭಿಧಾನದ ಗಣಪಾಠದಲ್ಲಿಯಂಥಾ ಹೇಗೆ ಅತ್ಯಂತಮಿಗಿಲಾಗಿ ನ ಭಿದ್ಯತೇ=ಭಿನ್ನವಾಗುತ್ತಿರದು. ತಥಾ=ಹಾಗೆಯೆ, ಶೈವಾಃ=ಶಿವಸಂಬಂಧವಾದ ವೀರಶೈವರು, ಮಾಹೇಶ್ವರಾಃ ಅಪಿ= ಮಾಹೇಶ್ವರ ಸಂಬಂಧವಾದ ವೀರಮಾಹೇಶ್ವರರಾಯಿತ್ತಾದೊಡೆಯು, ನ ಭಿದ್ಯಂತೇ = ಭಿನ್ನವಾಗುತ್ತಿರದು. ||೨೦||

**ಸೂತ್ರ॥** ಬಳಿಕ ಆ ಅರ್ಥವನೆ ವಿಶೇಷಿಸುತ್ತಿರ್ದಪಂ.

**ಗ್ರಂಥ॥**
**ಶಿವಾಶ್ರಿತೇಷು ತೇ ಶೈವಾಃ ಜ್ಞಾನಯಜ್ಞರತಾಃ ನರಾಃ ।**
**ಮಾಹೇಶ್ವರಾಸ್ಸಮಾಖ್ಯಾತಾಃ ಕರ್ಮಯಜ್ಞರತಾಃ ಭುವಿ ।**
**ತಸ್ಮಾದಭ್ಯಂತರೇ ಕುರ್ಯುಃ ಶೈವಾ ಮಾಹೇಶ್ವರಾಃ ಬಹಿಃ ॥**

**ಟೀಕು॥** ಶಿವಾಶ್ರಿತೇಷು=ಶಿವಭಕ್ತರಲ್ಲಿ, ಯೇ ನರಾಃ=ಆರು ಕೆಲಂಬರು ಮನುಷ್ಯರು, ಜ್ಞಾನಯಜ್ಞರತಾಃ=ಹೃತ್ಕಮಲದ ಜ್ಞಾನಲಿಂಗ ಪೂಜೆಯಲ್ಲಿ ಪ್ರೀತಿಯುಳ್ಳ, ತೇ=ಅವರುಗಳು, ಶೈವಾಃ=ವೀರಶೈವರು, ಕರ್ಮಯಜ್ಞರತಾಃ=ಕರಕಮಲದ ಕ್ರಿಯಾಲಿಂಗಪೂಜೆಯಲ್ಲಿ ಪ್ರೀತಿಯುಳ್ಳವರು, ಮಾಹೇಶ್ವರಾಃ=ವೀರಮಾಹೇಶ್ವರರೆಂದು, ಭುವಿ=ಭೂಮಿಯಲ್ಲಿ, ಸಮಾಖ್ಯಾತಾಃ=ಹೇಳಲುಪಟ್ಟರು. ತಸ್ಮಾತ್=ಅದು ಕಾರಣವಾಗಿ, ಶೈವಾಃ=ವೀರಶೈವರು, ಅಭ್ಯಂತರೇ=ಒಳಗೆ, ಕುರ್ಯುಃ=ಜ್ಞಾನಕಾಂಡವಾದ ಪ್ರಾಣಲಿಂಗಿ ಶರಣ ಶಿವೈಕ್ಯಸ್ಥಲೋಕ್ತವಾದ ಧರ್ಮಂಗಳನು ಆಚರಿಸುತ್ತಿರ್ದಪರು. ಮಾಹೇಶ್ವರಾಃ=ವೀರಮಾಹೇಶ್ವರರು, ಬಹಿಃ=ಹೊರಗೆ, ಕುರ್ಯುಃ=ಕರ್ಮಕಾಂಡವಾದ ಭಕ್ತ ಮಾಹೇಶ್ವರ ಪ್ರಸಾದಿಸ್ಥಲೋಕ್ತವಾದ ಆಚಾರಂಗಳನು ಮಾಡುತ್ತಿರ್ದಪರು.

**ತಾತ್ಪರ್ಯ॥**

"ಜ್ಞಾನಂ ಪ್ರಧಾನಂ ನ ತು ಕರ್ಮಹೀನಂ
ಕರ್ಮ ಪ್ರಧಾನಂ ನ ತು ಚಿದ್ವಿಹೀನಮ್ ।
ತಸ್ಮಾದ್ ದ್ವಯೋರೇವ ಭವೇತ್ಪ್ರಸಿದ್ಧಿಃ
ನ ಹ್ಯೇಕಪಕ್ಷೋ ವಿಹಗಃ ಪ್ರಯಾತಿ ॥

ನ ಕ್ರಿಯಾರಹಿತಂ ಜ್ಞಾನಂ ನ ಜ್ಞಾನರಹಿತಾ ಕ್ರಿಯಾ।
ಅಪಶ್ಯನ್ನಂಧಕೋ ದಗ್ಧಃ ಪಶ್ಯನ್ಪಂಗುಶ್ಚ ದಹ್ಯತೇ"॥

ಯೆಂಬಾಚಾರ್ಯವಾಕ್ಯವುಂಟಾಗಿ ವೀರಶೈವರಿಗೂ ವೀರಮಾಹೇಶ್ವರರಿಗೂ ಜ್ಞಾನಕ್ರೀ ಸಮಾನವೆಂಬುದರ್ಥ. ॥೨೧॥

**ಸೂತ್ರ॥** ಬಳಿಕ ವೀರಮಾಹೇಶ್ವರರಿಂದೆ ಪ್ರಸಿದ್ಧವಾದ ವೀರಶೈವರ ಭೇದವನು ಹೇಳುತ್ತಿರ್ದಪಂ.

**ಗ್ರಂಥ॥**
**ವೀರಶೈವಾಸ್ತು ಷಡ್ಭೇದಾಃ ಸ್ಥಲಧರ್ಮವಿಭೇದತಃ ।**
**ಭಕ್ತಾದಿವ್ಯವಹಾರೇಣ ಪ್ರೋಚ್ಯಂತೇ ಶಾಸ್ತ್ರಪಾರಗೈಃ ॥**

**ಟೀಕು॥** ವೀರಶೈವಾಸ್ತು=ವೀರಮಾಹೇಶ್ವರರೆಂದು ಪ್ರಸಿದ್ಧರಾದ ವೀರಶೈವರಾಯಿತ್ತಾದೊಡೆ, ಭಕ್ತಾದಿ ವ್ಯವಹಾರೇಣ=ಭಕ್ತಾದಿ ಶಿವೈಕ್ಯಾಂತವಾದ ವ್ಯವಹಾರದಿಂದಲು, ಸ್ಥಲಧರ್ಮವಿಭೇದತಃ=ಪಿಂಡಾದಿ ಜ್ಞಾನಶೂನ್ಯಾಂತವಾದ ಸ್ಥಲಾಚಾರಭೇದದದೆಸೆಯಿಂದೆಯು, ಷಡ್ಭೇದಾಃ=ಆರು ಭೇದವುಳ್ಳವರಾಗಿ, ಶಾಸ್ತ್ರಪಾರಗೈಃ=ಶಾಸ್ತ್ರಪಾರಂಗತರಿಂದೆ, ಪ್ರೋಚ್ಯಂತೇ=ಹೇಳಲುಪಡುತ್ತಿರ್ದ್ದಪರು. ॥೨೨॥

**ಸೂತ್ರ॥** ಬಳಿಕ ವೀರಶೈವಶಾಸ್ತ್ರಭೇದವನು ತೋರಿಸುತ್ತಿರ್ದ್ದಂ.

ಗ್ರಂಥ॥ **ಶಾಸ್ತ್ರಂ ತು ವೀರಶೈವಾನಾಂ ಷಡ್ವಿಧಂ ಸ್ಥಲಭೇದತಃ ।**
**ಧರ್ಮಭೇದಸಮಾಯೋಗಾದಧಿಕಾರಿವಿಭೇದತಃ ॥**

**ಟೀಕು॥** ವೀರಶೈವಾನಾಂ=ವೀರಶೈವರಿಗೆ, ಶಾಸ್ತ್ರಂ ತು=ಶಾಸ್ತ್ರವಾಯಿತ್ತಾದೊಡೆ, ಸ್ಥಲಭೇದತಃ= ಸ್ಥಲಂಗಳ ಭೇದದದೆಸೆಯಿಂದವು, ಧರ್ಮಭೇದಸಮಾಯೋಗಾತ್=ಸ್ಥಲೋಕ್ತವಾದ ಸದಾಚಾರಭೇದದ ಸಂಬಂಧದದೆಸೆಯಿಂದವು, ಅಧಿಕಾರಿ ವಿಭೇದತಃ=ಸ್ಥಲದಲ್ಲಿಯಿರುತ್ತಿರ್ದ್ದ ಭಕ್ತಾದ್ಯಧಿಕಾರಿಗಳ ಭೇದದದೆಸೆಯಿಂದವು, ಷಡ್ವಿಧಂ=ಆರು ಪ್ರಕಾರವಾಗಿದ್ದ ಅದು.

**ತಾತ್ಪರ್ಯ॥** ಈ ಶಾಸ್ತ್ರಕ್ಕೆ ವೀರಶೈವಧರ್ಮನಿಷ್ಠನಾಗಿ ಮುಮುಕ್ಷುವಾದ ಭಕ್ತನೆ ಅಧಿಕಾರಿ. ಶಿವಭಕ್ತಿಯಿಂದೆ ಪಡೆಯಲುಪಟ್ಟ ಶಿವೈಕ್ಯರೂಪವಾದ ಪರಮುಕ್ತಿಯೆ ಪ್ರಯೋಜನ. ಏಕೋತ್ತರಶತಸ್ಥಲ ಪ್ರತಿಪಾದ್ಯಜ್ಞಾನವೆ ವಿಷಯ. ಈ ವಿಷಯಕ್ಕೆ ವೀರಶೈವ ಸಿದ್ಧಾಂತ ಶಾಸ್ತ್ರದೊಡನೆ ಕೂಡಿದ ವಿಷಯ ವಿಷಯೀಭಾವವೆ ಸಂಬಂಧ. ಈ ಅನುಬಂಧ ಚತುಷ್ಟಯವುಳ್ಳುದೆ ಶಾಸ್ತ್ರವೆಂಬುದರ್ಥ. ॥ ೨೩॥

**ಸೂತ್ರ॥** ಬಳಿಕ ಸ್ಥಲಕ್ರಮವನು ಹೇಳುತ್ತಿರ್ದ್ದಪಂ.

ಗ್ರಂಥ॥ **ಆದೌ ಭಕ್ತಸ್ಥಲಂ ಪ್ರೋಕ್ತಂ ತತೋ ಮಾಹೇಶ್ವರಸ್ಥಲಮ್ ।**
**ಪ್ರಸಾದಿಸ್ಥಲಮನ್ಯತ್ತು ಪ್ರಾಣಲಿಂಗಿಸ್ಥಲಂ ತತಃ ।**
**ಶರಣಸ್ಥಲಮಾಖ್ಯಾತಂ ಷಷ್ಠಮೈಕ್ಯಸ್ಥಲಂ ಮತಮ್ ॥**

**ಟೀಕು॥** ಆದೌ=ಮೊದಲಲ್ಲಿ, ಭಕ್ತಸ್ಥಲಂ=ಭಕ್ತಸ್ಥಲವು, ಪ್ರೋಕ್ತಂ=ಹೇಳಲುಪಟ್ಟಿತ್ತು. ತತಃ=ಅನಂತರದಲ್ಲಿ, ಮಾಹೇಶ್ವರಸ್ಥಲಂ=ಮಾಹೇಶ್ವರಸ್ಥಲವು, ತತಃ=ಬಳಿಕ, ಪ್ರಸಾದಿಸ್ಥಲಂ= ಪ್ರಸಾದಿಸ್ಥಲವು, ತತಃ=ಬಳಿಕ, ಅನ್ಯತ್ತು=ಭಿನ್ನವಾದ, ಪ್ರಾಣಲಿಂಗಿಸ್ಥಲಂ=ಪ್ರಾಣಲಿಂಗಿಸ್ಥಲವು, ತತಃ=ಬಳಿಕ, ಶರಣಸ್ಥಲಂ=ಶರಣಸ್ಥಲವು, ತತಃ=ಅನಂತರದಲ್ಲಿ, ಐಕ್ಯಸ್ಥಲಂ=ಐಕ್ಯಸ್ಥಲವು, ಷಷ್ಠಂ=ಆರನೆಯದಾಗಿ, ಆಖ್ಯಾತಂ=ಹೇಳಲುಪಟ್ಟಿತ್ತು. ಮತಂ=ಸಂಮತವು. ॥೨೪॥

## ಭಕ್ತಸ್ಥಲಭೇದ ವಿವರಣಮ್

**ಸೂತ್ರ||** ಬಳಿಕ ಆ ಷಟ್ಸ್ಥಲಂಗಳಲ್ಲಿ ಮೊದಲದಾದ ಭಕ್ತಸ್ಥಲವನು ವಿಶೇಷಿಸುತ್ತಿರ್ದಪಂ.

**ಗ್ರಂಥ||** ಭಕ್ತಸ್ಥಲಂ ಪ್ರವಕ್ಷ್ಯಾಮಿ ಪ್ರಥಮಂ ಕಲಶೋದ್ಭವ ।
ತದವಾಂತರಭೇದಾಂಶ್ಚ ಸಮಾಹಿತಮನಾಃ ಶೃಣು ॥

**ಟೀಕು||** ಭೋ ಕಲಶೋದ್ಭವ=ಎಲೈ ಅಗಸ್ತ್ಯಮುನಿಯೆ! ಪ್ರಥಮಂ=ಮೊದಲದಾದ, ಭಕ್ತಸ್ಥಲಂ=ಭಕ್ತಸ್ಥಲವನು, ತದವಾಂತರ ಭೇದಾಂಶ್ಚ=ಆ ಭಕ್ತಸ್ಥಲದ ಅವಾಂತರ ಸ್ಥಲಭೇದಂಗಳನು, ಪ್ರವಕ್ಷ್ಯಾಮಿ=ಹೇಳಿಹೆನು. ಸಮಾಹಿತಮನಾಃ=ಏಕಾಗ್ರಚಿತ್ತವುಳ್ಳಾತನಾಗಿ, ಶೃಣು=ಕೇಳು. ||೨೫||

**ಸೂತ್ರ||** ಬಳಿಕ ಭಕ್ತಸ್ಥಲಕ್ಕೆ ಲಕ್ಷಣವನು ಹೇಳುತ್ತಿರ್ದಪಂ.

**ಗ್ರಂಥ||** ಶೈವೀ ಭಕ್ತಿಃ ಸಮುತ್ಪನ್ನಾ ಯಸ್ಯಾಸೌ ಭಕ್ತ ಉಚ್ಯತೇ ।
ತಸ್ಯಾನುಷ್ಠೇಯಧರ್ಮಾಣಾಮುಕ್ತಿರ್ಭಕ್ತಸ್ಥಲಂ ಮತಮ್ ॥

**ಟೀಕು||** ಯಸ್ಯ=ಆವಾತಂಗೆ, ಶೈವೀಭಕ್ತಿಃ=ಶಿವಸಂಬಂಧವಾದ ಭಕ್ತಿಯು, ಸಮುತ್ಪನ್ನಾ=ಹುಟ್ಟುತ್ತಿರ್ದಪುದು, ಅಸೌ=ಈತನು, ಭಕ್ತ ಇತಿ=ಭಕ್ತನೆಂದು, ಉಚ್ಯತೇ=ಹೇಳಲುಪಡುತ್ತಿರ್ದಪನು. ತಸ್ಯಾನುಷ್ಠೇಯ ಧರ್ಮಾಣಾಂ=[ಆ ಭಕ್ತನು] ಆಚರಿಸಲು ಯೋಗ್ಯವಾದ ವೀರಶೈವ ಧರ್ಮಂಗಳ, ಉಕ್ತಿಃ=ಹೇಳುವತನವು, ಭಕ್ತಸ್ಥಲಂ=ಭಕ್ತಸ್ಥಲವೆಂದು, ಮತಂ=ಸಂಮತವು. ||೨೬||

**ಸೂತ್ರ||** ಬಳಿಕ ಆ ಭಕ್ತಸ್ಥಲದ ಅವಾಂತರ ಸ್ಥಲಂಗಳನು ಉದ್ದೇಶಿಸಿ ಹೇಳುತ್ತಿರ್ದಪಂ.

**ಗ್ರಂಥ||** ಅವಾಂತರಸ್ಥಲಾನ್ಯತ್ರ ಪ್ರಾಹುಃ ಪಂಚದಶೋತ್ತಮಾಃ ।
ಪಿಂಡತಾ ಪಿಂಡವಿಜ್ಞಾನಂ ಸಂಸಾರಗುಣಹೇಯತಾ ॥

ದೀಕ್ಷಾಲಿಂಗಧೃತಿಶ್ಚೈವ ವಿಭೂತೇರಪಿ ಧಾರಣಮ್ ।
ರುದ್ರಾಕ್ಷಧಾರಣಂ ಚೈವ ಪಂಚಾಕ್ಷರಜಪಸ್ತಥಾ ॥

ಭಕ್ತಮಾರ್ಗಕ್ರಿಯಾಚೈವ ಗುರೋರ್ಲಿಂಗಸ್ಯ ಚಾರ್ಚನಮ್ ।
ಜಂಗಮಸ್ಯ ತಥಾ ಹ್ಯೇಷಾಂ ಪ್ರಸಾದಸ್ವೀಕೃತಿಸ್ತಥಾ ॥

ಅತ್ರ ದಾನತ್ರಯಂ ಪ್ರೋಕ್ತಂ ಉಪಾಧಿನಿರುಪಾಧಿನೀ ।
ಸಹಜಂ ಚೇತಿ ನಿರ್ದಿಷ್ಟಂ ಸಮಸ್ತಾಗಮಪಾರಗೈಃ ।
ಏತಾನಿ ಶಿವಭಕ್ತಸ್ಯ ಕರ್ತವ್ಯಾನಿ ಪ್ರಯತ್ನತಃ ॥

**ಟೀಕು॥** ಉತ್ತಮಾಃ=ಶ್ರೇಷ್ಠ ಪುರುಷರು, ಅತ್ರ=ಈ ಭಕ್ತಸ್ಥಲದಲ್ಲಿಯ, ಅವಾಂತರಸ್ಥಲಾನಿ= ಅವಾಂತರಸ್ಥಲಗಳನು, ಪಂಚದಶೋತ್ತಮಾಃ=ಪದಿನೈದು ಪ್ರಕಾರಂಗಳನಾಗಿ, ಪ್ರಾಹುಃ= ಹೇಳುತ್ತಿರ್ದಪರು. ಅವು ಆವಾವುವೆಂದಡೆ, ಪಿಂಡತಾ=ಪಿಂಡಸ್ಥಲವು, ಪಿಂಡವಿಜ್ಞಾನಂ=ಪಿಂಡ ಜ್ಞಾನವು, ಸಂಸಾರಗುಣಹೇಯತಾ=ಸಂಸಾರಹೇಯವು, ದೀಕ್ಷಾ=ದೀಕ್ಷಾವಿಧಿಯು, ಲಿಂಗಧೃತಿಃ= ಲಿಂಗಧಾರಣವು, ವಿಭೂತೇರಪಿ ಧಾರಣಂ=ವಿಭೂತಿಧಾರಣವು, ರುದ್ರಾಕ್ಷ ಧಾರಣಂ ಚೈವ=ರುದ್ರಾಕ್ಷ ಧಾರಣವು, ಪಂಚಾಕ್ಷರ ಜಪಂ=ಪಂಚಾಕ್ಷರ ಜಪವು, ತಥಾ=ಹಾಗೆಯೇ, ಭಕ್ತಮಾರ್ಗಕ್ರಿಯಾ=ಭಕ್ತ ಸ್ಥಲವು, ಗುರೋರ್ಲಿಂಗಸ್ಯ ಮಾರ್ಗಕ್ರಿಯಾ ಚಾರ್ಚನಂ=ಉಭಯಸ್ಥಲವು, ತಥಾ ಜಂಗಮಸ್ಯಾರ್ಚನಂ=ತ್ರಿವಿಧ ಸಂಪತ್ತಿಸ್ಥಲವು, ಏಷಾಂ ಪ್ರಸಾದ ಸ್ವೀಕೃತಿಃ=ಚತುರ್ವಿಧಸಾರಾಯ ಸ್ಥಲವು, ಅತ್ರ=ಈ ಭಕ್ತಸ್ಥಲದಲ್ಲಿ, ಪ್ರೋಕ್ತಂ=ಹೇಳಲುಪಟ್ಟ, ದಾನತ್ರಯಂ=ದಾನತ್ರಯವೇ, ಉಪಾಧಿ=ಉಪಾಧಿಮಾಟಸ್ಥಲವೆಂದು, ನಿರುಪಾಧಿನೀ=ನಿರುಪಾಧಿಮಾಟಸ್ಥಲವೆಂದು, ಸಹಜಂ ಚೇತಿ=ಸಹಜಮಾಟಸ್ಥಲವೆಂದು ಸಮಸ್ತಾಗಮಪಾರಗೈಃ=ಸಮಸ್ತ ಶಿವಾಗಮಂಗಳ ಕಡೆಗಂಡ ಶಿವಜ್ಞಾನಿಗಳಿಂದೆ, ನಿರ್ದಿಷ್ಟಂ=ನಿಶ್ಚೈಸಲುಪಟ್ಟಿತ್ತು. ಏತಾನಿ=ಈ ಹದಿನೈದು ಅವಾಂತರ ಸ್ಥಲಂಗಳು, ಶಿವಭಕ್ತಸ್ಯ=ಶಿವಭಕ್ತನಿಗೆ, ಪ್ರಯತ್ನತಃ=ಪ್ರಯತ್ನದಿಂದೆ, ಕರ್ತವ್ಯಾನಿ=ಮಾಡಲು ಯೋಗ್ಯಂಗಳು. ॥೩೦॥

**ಸೂತ್ರ॥** ಅನಂತರದಲ್ಲಿ ಸಮಸ್ತವೇದಾಗಮಂಗಳ ಶಿರಃಸಿದ್ಧವಾದ ಅಂಗ ಷಡುಸ್ಥಲ ಲಿಂಗ ಷಡುಸ್ಥಲಾಚಾರವಾಗಿರ್ದ ಪಿಂಡಜ್ಞಾನಾದಿ ಜ್ಞಾನಶೂನ್ಯಾಂತವಾದ ಏಕೋತ್ತರ ಶತಸ್ಥಲಂಗಳಿಗೆ ಮುಖ್ಯವಾ[ದುದು]ಪಿಂಡಸ್ಥಲವು. ಪಿಂಡಸ್ಥಲವನು ಹೇಳುತ್ತಿರ್ದಪಂ.

## ೧. ಭಕ್ತಸ್ಥಲೇ ಪಿಂಡಸ್ಥಲಮ್

ಗ್ರಂಥ॥ ಬಹುಜನ್ಮಕೃತೈಃ ಪುಣ್ಯೈಃ ಪ್ರಕ್ಷೀಣೇ ಪಾಪಪಂಜರೇ ।
ಶುದ್ಧಾಂತಃಕರಣೋ ದೇಹೀ ಪಿಂಡಶಬ್ದೇನ ಗೀಯತೇ ॥

**ಟೀಕು॥** ಬಹುಜನ್ಮಕೃತೈಃ=ಅನೇಕ ಜನ್ಮಂಗಳಿಂದೆ ಮಾಡಲುಪಟ್ಟ, ಪುಣ್ಯೈಃ=ಪುಣ್ಯಕರ್ಮಂಗಳಿಂದೆ, ಪಾಪಪಂಜರೇ=ಮನೋವಾಕ್ಕಾಯಂಗಳಿಂದೆ ಹುಟ್ಟಿದ ಪಾಪಸಮೂಹವು, ಪ್ರಕ್ಷೀಣೇ ಸತಿ= ಕೆಡಲಿಕೆಯಾಗಿ, ಶುದ್ಧಾಂತಃಕರಣಃ=ನಿರ್ಮಲವಾದ ಅಂತಃಕರಣಂಗಳುಳ್ಳ, ದೇಹೀ=ಆತ್ಮನು, ಪಿಂಡಶಬ್ದೇನ=ಪಿಂಡಶಬ್ದದಿಂದೆ, ಗೀಯತೇ=ಹೇಳಲುಪಡುತ್ತಿರ್ದಪನು.

ತಾತ್ಪರ್ಯ॥ ಇಲ್ಲಿ ಸಾಧ್ಯವೀಗ ಪಿಂಡಸ್ಥಲ. ಮುಂದೆ ಹೇಳುವ ಪಿಂಡಜ್ಞಾನಾದಿ ಶತಸ್ಥಲಂಗಳೆ ಸಾಧನಂಗಳು. ಆದು ಕಾರಣವಾಗಿ ದೃಷ್ಟಿ ಎರಡಾದರು ದರುಶನ ಹೇಗೆ ಒಂದು, ಪಕ್ಷವೆರಡಾದಡೂ ಗಮನ ಹೇಗೆ ಒಂದು, ಹಾಗೆಯೇ "ಆತ್ಮಲಾಭಾನ್ನ ಪರಂ ವಿದ್ಯತೇ", "ನಾತ್ಮನಃ ಪರಾ ದೇವತಾ"ಯೆಂಬ ವೇದಾಗಮಂಗಳಿಂದೇಕವಿಧವಾಗಿ ಪ್ರತಿಪಾದಿಸಲುಪಟ್ಟ ಪಿಂಡಸ್ಥಲವನು ಗುರೂಪದೇಶಸ್ವಾನುಭಾವಂಗಳಿಂದೆ ಏಕವನಾಗಿ ತಿಳಿವುದು. ॥೩೧॥

**ಸೂತ್ರ॥** ಬಳಿಕ ಪಿಂಡವೆಂಬ ನಾಮಧೇಯವುಳ್ಳಾತನನು ತೋರಿಸುತ್ತಿರ್ದಪಂ.

ಗ್ರಂಥ॥

**ಶಿವಶಕ್ತಿಸಮುತ್ಪನ್ನೇ ಪ್ರಪಂಚೇಽಸ್ಮಿನ್ವಿಕಲ್ಪ್ಯತೇ ।**
**ಪುಣ್ಯಾಧಿಕಃ ಕ್ಷೀಣಪಾಪಃ ಶುದ್ಧಾತ್ಮಾ ಪಿಂಡನಾಮಕಃ ॥**

**ಟೀಕು॥** ಶಿವಶಕ್ತಿಸಮುತ್ಪನ್ನೇ='ಲಿಂಗಾಂಕಿತಂ ಪಶ್ಯ ಜಗತ್ ಭಗಾಂಕಮ್' ಯೆಂದು ವ್ಯಾಸ ವಾಕ್ಯವುಂಟಾಗಿ ಶಿವಶಕ್ತಿಗಳದೆಸೆಯಿಂದೆ ಹುಟ್ಟಿರ್ದ್ದ, ಅಸ್ಮಿನ್ ಪ್ರಪಂಚೇ=ಈ ಜಗತ್ಪ್ರಪಂಚದಲ್ಲಿ ಪುಣ್ಯಾಧಿಕಃ=ಪುಣ್ಯಾಧಿಕ್ಯವುಳ್ಳಾತನಾಗಿ, ಕ್ಷೀಣಪಾಪಃ=ಪಾಪರಹಿತನಾಗಿ, ಶುದ್ಧಾತ್ಮಾ=ನಿರ್ಮಲ ವಾದಂತಃಕರಣವುಳ್ಳಾತನು, ಪಿಂಡನಾಮಕಃ=ಪಿಂಡವೆಂಬ ಹೆಸರುಳ್ಳಾತನಾಗಿ, ವಿಕಲ್ಪ್ಯತೇ=ವಿಶೇಷವಾಗಿ ಸಮರ್ಥಿಸಲುಪಡುತ್ತಿರ್ದ್ದಪಂ. "ಪುನರ್ಜನ್ಮಾಂತರ ಕರ್ಮಯೋಗಾತ್ಸ ಏವ ಜೀವಃ"ಯೆಂಬ ಶ್ರುತಿಯುಂಟಾಗಿ ಬೀಜವೃಕ್ಷನ್ಯಾಯದಿಂದೆ ಅನಾದಿಯಾದ ಕರ್ಮಶರೀರ ಸಂಸ್ಕಾರವುಳ್ಳಾತನೆ ಪಿಂಡ ಶಬ್ದವಾಚ್ಯವೆಂಬುದರ್ಥ. ॥೩೨॥

**ಸೂತ್ರ॥** ಈ ಆತ್ಮನು ಶಿವಶಕ್ತ್ಯಾತ್ಮಕವಾದ ಜಗತ್ತಿನಲ್ಲಿ ಶಿವನೋ ಶಿವಾನ್ಯನೋಯೆಂದು ಶಂಕೆಯಾಗಲು ಶಿವಾನ್ಯನೆಂದು ಹೇಳುತ್ತಿರ್ದ್ದಪಂ.

ಗ್ರಂಥ॥

**ಏಕ ಏವ ಶಿವಃ ಸಾಕ್ಷಾಚ್ಚಿದಾನಂದಮಯೋ ವಿಭುಃ ।**
**ನಿರ್ವಿಕಲ್ಪೋ ನಿರಾಕಾರಃ ನಿರ್ಗುಣೋ ನಿಷ್ಪ್ರಪಂಚಕಃ ॥**

**ಅನಾದ್ಯವಿದ್ಯಾಸಂಬಂಧಾತ್ತದಂಶೋ ಜೀವಸಂಜ್ಞಕಃ ।**
**ದೇವತಿರ್ಯಙ್ಮನುಷ್ಯಾದಿಜಾತಿಭೇದೇ ವ್ಯವಸ್ಥಿತಃ ।**
**ಮಾಯೀ ಮಾಹೇಶ್ವರಸ್ತೇಷಾಂ ಪ್ರೇರಕೋ ಹೃದಿ ಸಂಸ್ಥಿತಃ ॥**

**ಟೀಕು॥** ಸಾಕ್ಷಾಚ್ಚಿದಾನಂದಮಯಃ='ಸತ್ಯಂ ಜ್ಞಾನಮನಂತಂ ಬ್ರಹ್ಮ'ಯೆಂಬ ಶ್ರುತಿ ಉಂಟಾಗಿ ಸತ್ತು ಚಿತ್ತು ಆನಂದವೇ ಸ್ವರೂಪಾಗುಳ್ಳ, ವಿಭುಃ=ವ್ಯಾಪಕನಾಗಿರ್ದ್ದ, ನಿರ್ವಿಕಲ್ಪಃ=ವಿಕಲ್ಪರಹಿತನಾಗಿರ್ದ್ದ, ನಿರಾಕಾರಃ=ಆಕಾರವಿಲ್ಲದೆಯಿರ್ದ್ದ, ನಿರ್ಗುಣಃ=ಗುಣರಹಿತನಾಗಿರ್ದ್ದ, ನಿಷ್ಪ್ರಪಂಚಕಃ=ಮಾಯಾ ಪ್ರಪಂಚುರಹಿತನಾಗಿರ್ದ್ದ, ಏಕ ಏವ ಶಿವಃ="ಶಿವ ಏಕೋ ಧ್ಯೇಯಃ ಶಿವಂ ಕರಃ। ಸರ್ವಮನ್ಯತ್ಪರಿತ್ಯಜ್ಯ ಸಮಾಪ್ತಾಥರ್ವಶಿಖಾ" ಎಂದು ಶ್ರುತಿಪ್ರಸಿದ್ಧವಾದ ಪರಮಶಿವನೊರ್ವನೆ, ಅಸ್ತಿ=ಉಂಟು ಎಂದು,

ಜೀವಸಂಜ್ಞಕಃ="ಜನ್ಮಾದಿ ಸಂಯುಕ್ತಾ ಸಂಸಾರ ದುಃಖ ನಿಮಗ್ನಾಃ। ಸ್ವಸ್ವಕೃತ ಕರ್ಮಣಾ ಪರಮೇಶ್ವರ ಪ್ರೇರಣಯಾ ಶಬ್ದಾಃ ಸಂಸಾರಿಣೋ ಜೀವಾಃ"॥ ಯೆಂದು ವೃದ್ಧ ಜಾಬಾಲೋಪನಿಷತ್ ಪ್ರಸಿದ್ಧವಾಗಿ ಜೀವಾತ್ಮರೆಂಬ ಸಂಜ್ಞೆಯುಳ್ಳ ಪಿಂಡಶಬ್ದ ವಾಚ್ಯರು, ಅನಾದ್ಯವಿದ್ಯಾ ಸಂಬಂಧಾತ್=ಅನಾದಿಯಾದ ಅವಿದ್ಯಾಸಂಬಂಧದದೆಸೆಯಿಂದೆ ತತ್=ಆ ಚಿದಾನಂದಮಯವಾದ ಶಿವನ, ಅಂಶಃ=ಚಿತ್ಕ್ರಿಯಾ ಸ್ವರೂಪಾಂಶವುಳ್ಳವನಾಗಿ, ದೇವತಿರ್ಯಙ್ಮನುಷ್ಯಾದಿಜಾತಿ ಭೇದೇ="ದೇವಾಃ ಷೋಡಶ ಲಕ್ಷಾಣಿ ನವಲಕ್ಷಾಣಿ ಮಾನುಷಾಃ। ದಶಭಿರ್ದಶಭಿಸ್ತದ್ವತ್ ಜಲಜಾ ವಿಹಗಾ ಮೃಗಾಃ॥ ಸರೀಸೃಪಾಸ್ತು ಲಕ್ಷಾಣಿ ಏಕಾದಶ ಚರೇತರಾಃ। ಅಷ್ಟೌ ಚ ದಶಲಕ್ಷಾಣಿ ಸಪ್ತಜನ್ಮಾನ್ಯಮೂನಿ ವೈ'' ಯೆಂದು ಸ್ಕಾಂದ ವಾಕ್ಯವುಂಟಾಗಿ ದೇವತಿರ್ಯಙ್ಮನುಷ್ಯಾದಿ ಜಾತಿಭೇದದಲ್ಲಿ, ವ್ಯವಸ್ಥಿತಃ=ಇರುತ್ತಿರ್ದ್ದಪನು. ತೇಷಾಂ=ಆ ಪಿಂಡಶಬ್ದವಾಚ್ಯರಾದ ಜೀವರುಗಳ, ಹೃದಯೇ=ಹೃದಯಕಮಲದಲ್ಲಿ, ಮಾಯೀ ಮಾಹೇಶ್ವರಃ="ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್" ಯೆಂದು ಶ್ವೇತಾಶ್ವತರ ಶ್ರುತಿ ಪ್ರಸಿದ್ಧವಾಗಿ ಮಾಯಾ ಶಕ್ತಿಯುಳ್ಳ ಪರಮೇಶ್ವರನು, ಪ್ರೇರಕಃ=ಪ್ರೇರಕನಾಗಿ, ಸ್ಥಿತಃ=ಇರುತ್ತಿರ್ದ್ದಪನು. 'ಧಿಯೋ ಯೋ ನಃ ಪ್ರಚೋದಯಾತ್' ಯೆಂಬ ಮಂತ್ರ ವಾಕ್ಯವುಂಟಾಗಿ ಪ್ರೇರ್ಯ ಪ್ರೇರಕರಾದ ಜೀವೇಶ್ವರನನು ನಿಶ್ಚೈಸುವುದು. ॥೩೪॥

**ಸೂತ್ರ॥** "ತಿಲೇಷು ತೈಲಂ ದಧನೀವಸರ್ಪಿರಾಪಃ ಸ್ರೋತ ಸ್ಸ್ವರಣೀಷು ಚಾಗ್ನಿಃ। ಏವಮಾತ್ಮಾಽತ್ಮನಿ ಗೃಹ್ಯತೇಽಸೌ ಸತ್ಯೇನೈನಂ ತಪಸಾ ಯೋಽನುಪಶ್ಯತಿ" ॥ ಯೆಂಬ ಶ್ವೇತಾಶ್ವತರ ಶ್ರುತ್ಯರ್ಥವನು ಪ್ರಕಾಶಿಸುತ್ತ ಆ ಪ್ರೇರಕನಾದ ಪರಮೇಶ್ವರನು, ಪಿಂಡಸ್ಥಲವಾಚ್ಯರಾದಾತ್ಮರಲ್ಲಿಯಿರುವ ಭಾವವನು ದೃಷ್ಟಾಂತಪುರಸ್ಸರವಾಗಿ ಹೇಳುತ್ತಿರ್ದ್ದಪಂ.

**ಗ್ರಂಥ॥** **ಚಂದ್ರಕಾಂತೇ ಯಥಾ ತೋಯಂ ಸೂರ್ಯಕಾಂತೇ ಯಥಾಽನಲಃ ।**
**ಬೀಜೇ ಯಥಾಽಂಕುರಃ ಸಿದ್ಧಸ್ತಥಾಽಽತ್ಮನಿ ಶಿವಃ ಸ್ಥಿತಃ ॥**

**ಟೀಕು॥** ಚಂದ್ರಕಾಂತೇ=ಚಂದ್ರಾಕಾಂತ ಸ್ಫಟಿಕದಲ್ಲಿ, ತೋಯಂ=ಉದಕವು, ಯಥಾ=ಹೆಂಗೆ ಸಿದ್ಧವು, ಸೂರ್ಯಕಾಂತೇ=ಸೂರ್ಯಕಾಂತ ಸ್ಫಟಿಕದಲ್ಲಿ, ಅನಲಃ=ಅಗ್ನಿಯು, ಯಥಾ=ಹೆಂಗೆ ಸಿದ್ಧವು, ಬೀಜೇ=ಬೀಜದಲ್ಲಿ, ಅಂಕುರಃ=ಮೊಳಕೆಯು, ಯಥಾ=ಹೆಂಗೆ, ಸಿದ್ಧಃ=ಪ್ರಸಿದ್ಧವು, ತಥಾ=ಆ ಪ್ರಕಾರದಿಂದೆ, ಆತ್ಮನಿ=ಪಿಂಡಶಬ್ದವಾಚ್ಯನಾದ ಜೀವಾತ್ಮನಲ್ಲಿ, ಶಿವಃ=ಪ್ರೇರಕನಾದ ಮಹೇಶ್ವರನು, ಸ್ಥಿತಃ=ಇರುತ್ತಿರ್ದ್ದಪನು. "ತೋಯಸ್ಯಾತ್ಮಾ ಶರೀರಂ"ಯೆಂದು ಶ್ರುತಿಯುಂಟಾಗಿ, "ಆತ್ಮಾನಮೈಕ್ಯಸ್ಯ" ಯೆಂದು ಆಗಮವಾಕ್ಯವುಂಟಾಗಿ ಶಿವನಿಗು ಶಿವೈಕ್ಯಂಗು ಆತ್ಮನೆ ಅಂಗವಾದರೆ ಆಶ್ರಯಾಶ್ರಯ ದೋಷ ಯಿತರೇತರಾಶ್ರಯದೋಷ ಚಕ್ರಿಕಾಶ್ರಯ ದೋಷಂಗಳಹವು. ಅದು ಕಾರಣವಾಗಿ "ಕಲಂಕತ್ವ ಜನ್ಮವತ್ವ ದುಃಖತ್ವಾಧಿಕಂ ಜೀವಸ್ವರೂಪಂದನಭಿಜ್ಞತ್ವಮಹಂಕಾರಃ"। "ಸ ತೇನಾನುವಿಷ್ಟಃ ಸ್ವರ್ಗನರಕಭೋಕ್ತಾ ಸಂಸಾರಸಾಗರಮಗ್ನೋ ಮಿಥ್ಯಾಭಿಮಾನೀ ಜೀವಃ"ಯೆಂಬ ವೃದ್ಧಜಾಬಾಲೋಪ ನಿಷದ್ವಾಕ್ಯದಿಂದವು, "ಆತ್ಮಾಯತ್ನೋ ಧೃತಿರ್ಬುದ್ಧಿಃ ಸ್ವಭಾವೋ ಬ್ರಹ್ಮವರ್ಷ ಚ"। ಎಂಬ ಅಮರಸಿಂಹ

ವಾಕ್ಯದಿಂದವು, ದೇಶಿಕೋಪದೇಶ ಸ್ವಾನುಭವಂಗಳಿಂದೆ ಪಿಂಡಶಬ್ದವಾಚ್ಯ ವಾದಾತ್ಮನನು ತಿಳಿಸುವುದು.
||೨೫||

**ಸೂತ್ರ||** "ದ್ವಾಸುಪರ್ಣಾ ಸಯುಜಾ ಸಖಯಾ ಸಮಾನಂ ವೃಕ್ಷಂ ಪರಿಷ್ವಜಾತೇ"ಯೆಂಬ ಶ್ವೇತಾಶ್ವತರ ಶ್ರುತ್ಯರ್ಥವನು ಸ್ಮರಿಸುತ್ತಲೂ ಆತ್ಮೇಶ್ವರರ ಸ್ವರೂಪವನು ದೃಷ್ಟಾಂತಪುರಸ್ಸರವಾಗಿ ಹೇಳುತ್ತಿರ್ದ್ದಪಂ.

**ಗ್ರಂಥ||** **ಆತ್ಮತ್ವಮೀಶ್ವರತ್ವಂ ಚ ಬ್ರಹ್ಮಣ್ಯೇಕತ್ರ ಕಲ್ಪಿತಮ್ ।**
**ಬಿಂಬತ್ವಂ ಪ್ರತಿಬಿಂಬತ್ವಂ ಯಥಾ ಪೂಷಣಿ ಕಲ್ಪಿತಮ್ ॥**

**ಟೀಕು||** ಪೂಷಣಿ=ಸೂರ್ಯನಲ್ಲಿ, ಬಿಂಬತ್ವಂ=ಬಿಂಬಭಾವವು, ಪ್ರತಿಬಿಂಬತ್ವಂ= ಪ್ರತಿಬಿಂಬ ಭಾವವು, ಯಥಾ=ಹೆಂಗೆ ಕಲ್ಪಿತಂ=ಸಮರ್ಥಿಸಲುಪಟ್ಟಿತ್ತು; ತಥಾ=ಆ ಪ್ರಕಾರದಿಂದವೆ, ಏಕತ್ರ=ಒಂದೆಯಾಗಿರ್ದ್ದ, ಬ್ರಹ್ಮಣಿ=ಪರಮಶಿವ ಪರಬ್ರಹ್ಮಮಹಾಲಿಂಗವೆಂಬ ಪರ್ಯಾಯ ನಾಮವುಳ್ಳ ವಸ್ತುವಿನಲ್ಲಿ, ಆತ್ಮತ್ವಂ ಈಶ್ವರತ್ವಂ ಚ=ಜೀವೇಶ್ವರ ಸ್ವರೂಪವು, ಕಲ್ಪಿತಂ=ಉಪಾಧಿಯಿಂದೆ ಸಮರ್ಥಿಸಲುಪಟ್ಟಿತ್ತು. 'ಏಕಮೇವಾದ್ವಿತೀಯ' ಎಂದು, ''ಬ್ರಹ್ಮ ಶಿವತತ್ತ್ವಂ ಜಗದಾಚಾರ್ಯಃ'' ಯೆಂದು ವೇದಾಗಮ ವಾಕ್ಯವುಂಟಾಗಿ ಉಪಕ್ರಮವಾದ ಈ ಪಿಂಡಸ್ಥಲದಲ್ಲಿ ಅಂಗ ಲಿಂಗ ರೂಪವಾದ ಆತ್ಮೇಶ್ವರರಿಗೆ ಏಕಾಶ್ರಯತ್ವವು, ಮುಂದೆ ಉಪಸಂಹಾರವಾದ ಜ್ಞಾನಶೂನ್ಯಸ್ಥಲದಲ್ಲಿ ಐಕ್ಯವ ತೋರಿಸಬೇಕಾಗಿ ಹೇಳಲುಪಟ್ಟಿತ್ತು. ||೨೬||

**ಸೂತ್ರ||** 'ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್'ಯೆಂಬ ಶ್ವೇತಾಶ್ವತರ ಶ್ರುತ್ಯರ್ಥವನು ಪ್ರಕಾಶಿಸುತ್ತ ಸಪ್ತಸೂತ್ರಂಗಳಿಂದೆ ಸೃಷ್ಟಿಕ್ರಮವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಗುಣತ್ರಯವಿಭೇದೇನ ಪರತತ್ತ್ವೇ ಚಿದಾತ್ಮನಿ ।**
**ಭೋಕ್ತೃತ್ವಂ ಚೈವ ಭೋಜ್ಯತ್ವಂ ಪ್ರೇರಕತ್ವಂ ಚ ಕಲ್ಪಿತಮ್ ॥**

**ಟೀಕು||** ಚಿದಾತ್ಮನಿ=ಚಿನ್ಮಯ ಸ್ವರೂಪವುಳ್ಳ, ಪರತತ್ತ್ವೇ ಚೈವ=ಪರಬ್ರಹ್ಮಪರಶಿವ ಪರಲಿಂಗವೆಂಬ ಪರ್ಯಾಯ ನಾಮವುಳ್ಳ ಪರತತ್ತ್ವದಲ್ಲಿಯೆ, ಪ್ರೇರಕತ್ವಂ=ಪ್ರೇರಕನಾದ ಶಿವ ಸ್ವರೂಪವು, ಭೋಕ್ತೃತ್ವಂ=ಭೋಕ್ತೃವಾದಾತ್ಮಸ್ವರೂಪವು, ಭೋಜ್ಯತ್ವಂ=ಭೋಗ್ಯವಾದ ವಿಷಯಸ್ವರೂಪವು, ಗುಣತ್ರಯ ವಿಭೇದೇನ=ಸತ್ವರಜಸ್ತಮೋಗುಣಂಗಳ ಭೇದದಿಂದೆ, ಕಲ್ಪಿತಂ=ಸಮರ್ಥಿಸಲುಪಟ್ಟಿತ್ತು.
||೨೭||

**ಸೂತ್ರ||** ಇನ್ನು ಆ ಅರ್ಥವನೆ ಪ್ರಕಾಶಿಸುತ್ತಿರ್ದ್ದಪಂ.

ಗ್ರಂಥ॥ ಗುಣತ್ರಯಾತ್ಮಿಕಾ ಶಕ್ತಿರ್ಬ್ರಹ್ಮನಿಷ್ಠಾ ಸನಾತನೀ ।
ತದ್ವೈಷಮ್ಯಾತ್ಸಮುತ್ಪನ್ನಾ ತಸ್ಮಿನ್ವಸ್ತುತ್ರಯಾಭಿಧಾ ॥

ಟೀಕು॥ ಸನಾತನೀ=ಕೇಡಿಲ್ಲದೆಯಿರ್ದ್ದ, ಗುಣತ್ರಯಾತ್ಮಿಕಾ ಶಕ್ತಿಃ=ಗುಣತ್ರಯಂಗಳೆ ಸ್ವರೂಪವಾಗುಳ್ಳ ಮಹಾಲಿಂಗದಲ್ಲಿಯಿರುತ್ತಿರ್ದ್ದ ಅದು, ತದ್ವೈಷಮ್ಯಾತ್=ಆ ಗುಣತ್ರಯಂಗಳ ವಿಷಮತ್ವದ ದೆಸೆಯಿಂದೆ, ತಸ್ಮಿನ್=ಆ ಮಹಾಲಿಂಗದಲ್ಲಿ, ವಸ್ತುತ್ರಯಾಭಿಧಾ=ವಸ್ತುತ್ರಯಂಗಳ ಹೆಸರು, ಸಮುತ್ಪನ್ನಾ=ಹುಟ್ಟಿತು. ॥೩೮॥

ಸೂತ್ರ॥ ಬಳಿಕ ವಸ್ತುತ್ರಯದ ಹೆಸರನು ಹೇಳುತ್ತಿರ್ದ್ದಪಂ.

ಗ್ರಂಥ॥ ಪರತತ್ತ್ವಮಯೋಪಾಧಿರ್ಬ್ರಹ್ಮಚೈತನ್ಯಮೀಶ್ವರಃ ।
ಕಿಂಚಿತ್ತ್ಸತ್ವರಜೋರೂಪಂ ಭೋಕ್ತೃಸಂಜ್ಞಕಮುಚ್ಯತೇ ॥

ಅತ್ಯಂತತಾಮಸೋಪಾಧಿರ್ಭೋಜ್ಯಮಿತ್ಯಭಿಧೀಯತೇ ।
ಭೋಕ್ತಾ ಭೋಜ್ಯಂ ಪ್ರೇರಯಿತಾ ವಸ್ತುತ್ರಯಮಿದಂ ಸ್ಮೃತಮ್ ।
ಅಖಂಡೇ ಬ್ರಹ್ಮಚೈತನ್ಯೇ ಕಲ್ಪಿತಂ ಗುಣಭೇದತಃ ॥

ಟೀಕು॥ ಪರತತ್ತ್ವಮಯೋಪಾಧಿಃ=ಉತ್ಕರ್ಷವಾದ ಶುದ್ಧಸತ್ವಗುಣೋಪಾಧಿಯುಳ್ಳ, ಬ್ರಹ್ಮಚೈತನ್ಯಂ=ಬ್ರಹ್ಮಚೈತನ್ಯವೆ, ಈಶ್ವರಃ=ಪ್ರೇರಕನಾದ ಈಶ್ವರನು. ಕಿಂಚಿತ್ತ್ಸತ್ವರಜೋರೂಪಂ= ಒಪ್ಪಚ್ಚಿ ಸತ್ವರಜೋಗುಣರೂಪಾದುಪಾಧಿಯುಳ್ಳ, ಬ್ರಹ್ಮಚೈತನ್ಯಂ=ಬ್ರಹ್ಮಚೈತನ್ಯವೆ, ಭೋಕ್ತೃಸಜ್ಞಕಂ=ಭೋಕ್ತೃವೆಂಬ ಹೆಸರುಳ್ಳಾತತ್ಸ್ವರೂಪವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ಅತ್ಯಂತ ತಾಮಸೋಪಾಧಿಃ=ಅತ್ಯಂತ ತಮೋಗುಣೋಪಾಧಿಯುಳ್ಳ, ಬ್ರಹ್ಮಚೈತನ್ಯವೆ ಭೋಜ್ಯಮಿತಿ=ವಿಷಯರೂಪಾದ ಭೋಗ್ಯವಸ್ತುವೆಂದು, ಬುಧೈಃ=ನಿಗಮಾಗಮ.ಷಡುಸ್ಥಲಜ್ಞಾನಿಗಳಾದ ವಿದ್ವಾಂಸರಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ಪ್ರೇರಯಿತಾ=ಪ್ರೇರಕನು, ಭೋಕ್ತಾ = ಭೋಕ್ತೃವು. ಭೋಜ್ಯಂ=ಭೋಜ್ಯರೆಂಬ, ಇದಂ ವಸ್ತುತ್ರಯಂ=ಈ ವಸ್ತುತ್ರಯವು, ಅಖಂಡೇ ಬ್ರಹ್ಮಚೈತನ್ಯೇ=ಪರಬ್ರಹ್ಮ ಪರಮಶಿವ ಪರ್ಯಾಯ ನಾಮವುಳ್ಳ ಅಖಂಡವಾದ ಮಹಾಲಿಂಗ ಚೈತನ್ಯದಲ್ಲಿ, ಗುಣಭೇದತಃ=ಸತ್ವ ರಜ ತಮೋಗುಣಂಗಳ ಭೇದದದೆಸೆಯಿಂದೆ, ಕಲ್ಪಿತಂ=ಕಲ್ಪಿಸಲುಪಟ್ಟುದಾಗಿ, ಸ್ಮೃತಂ=ನೆನೆಯಲುಪಟ್ಟಿತ್ತು. ॥೪೦॥

ಸೂತ್ರ॥ ಇನ್ನು ಆ ಪೂರ್ವೋಕ್ತವನೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ॥** **ಅತ್ರ ಪ್ರೇರಯಿತಾ ಶಂಭುಶ್ಶುದ್ಧೋಪಾಧಿರ್ಮಹೇಶ್ವರಃ ।**
**ಸಂಮಿಶ್ರೋಪಾಧಯಸ್ಸರ್ವೇ ಭೋಕ್ತಾರಃ ಪಶವಃ ಸ್ಮೃತಾಃ ।**
**ಭೋಜ್ಯಮವ್ಯಕ್ತಮಿತ್ಯುಕ್ತಂ ಶುದ್ಧತಾಮಸರೂಪಕಮ್ ॥**

**ಟೀಕು॥** ಶುದ್ಧೋಪಾಧಿಃ=ಶುದ್ಧವಾದ ಸತ್ವಗುಣೋಪಾಧಿಯುಳ್ಳ, ಮಹೇಶ್ವರಃ=ಪರಮೇಶ್ವರನೆ, ಅತ್ರ=ಈ ಜಗಜ್ಜಾಲದಲ್ಲಿ, ಪ್ರೇರಯಿತಾ=ಪ್ರೇರಕನಾಗಿ, ಪ್ರೋಕ್ತಾ=ಹೇಳಲುಪಟ್ಟನು. ಸಂಮಿಶ್ರೋಪಾಧಯಃ=ಸತ್ವ ರಜ ತಮೋಗುಣರೂಪವಾದ ಮಿಶ್ರೋಪಾಧಿಯೊಡನೆ ಕೂಡಿ ವರ್ತಿಸುತ್ತಿರ್ದ್ದ, ಸರ್ವೇ ಭೋಕ್ತಾರಃ=ಸಮಸ್ತಾತ್ಮರು, ಪಶವಃ=ಪಶುಗಳೆಂದು, ಸ್ಮೃತಾಃ=ನೆನೆಯಲು ಪಟ್ಟರು. ಶುದ್ಧತಾಮಸರೂಪಕಂ=ಕೇವಲ ತಮೋಗುಣರೂಪವುಳ್ಳ, ಅವ್ಯಕ್ತಂ=ಪ್ರಕೃತಿ ತತ್ತ್ವವು, ಭೋಜ್ಯಮಿತಿ=ಭೋಗ್ಯವಸ್ತುವೆಂದು, ಉಕ್ತಂ=ಹೇಳಲುಪಟ್ಟಿತ್ತು. ॥೪೧॥

**ಸೂತ್ರ॥** ಇನ್ನು ಆ ಪೂರ್ವೋಕ್ತಾರ್ಥವನೆ ಸಲಕ್ಷಣವಾಗಿ ವ್ಯಕ್ತೀಕರಿಸುತ್ತಿರ್ದ್ದಪಂ.

**ಗ್ರಂಥ॥** **ಸರ್ವಜ್ಞಃ ಪ್ರೇರಕಶ್ಶಂಭುಃ ಕಿಂಚಿದ್‌ಜ್ಞೋ ಜೀವ ಉಚ್ಯತೇ ।**
**ಅತ್ಯಂತಗೂಢಚೈತನ್ಯಂ ಜಡಮವ್ಯಕ್ತಮುಚ್ಯತೇ ॥**

**ಟೀಕು॥** ಪ್ರೇರಕಃ ಶಂಭುಃ=ಪ್ರೇರಕನಾದ ಪರಮೇಶ್ವರನೆ, ಸರ್ವಜ್ಞಃ=ಸರ್ವಜ್ಞನೆಂದು ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ಜೀವಃ=ಆತ್ಮನು, ಕಿಂಚಿದ್‌ಜ್ಞಃ=ಕಿಂಚಿದ್‌ಜ್ಞನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ಅತ್ಯಂತಗೂಢಚೈತನ್ಯಂ=ಅತ್ಯಂತಗೋಪ್ಯವಾದ ಚೈತನ್ಯವುಳ್ಳ, ಜಡಂ=ಜಡವಸ್ತುವು, ಅವ್ಯಕ್ತಂ=ಪ್ರಕೃತಿತತ್ತ್ವವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು.

**ತಾತ್ಪರ್ಯ॥** ''ಉಕ್ತಂ ಪ್ರಧಾನಪುರುಷೇಶ್ವರಮೇವ ಸಾಂಖ್ಯೈರಾಖ್ಯಾಯ ಪಾಶಪಶುಪತ್ಯಭಿಧಾನ ಭೇದಾತ್" ಯೆಂಬ ಚತುರ್ವೇದ ತಾತ್ಪರ್ಯ ಸಂಗ್ರಹವುಂಟಾಗಿ ಗುಣತ್ರಯಭೇದದಿಂದೆ ಪರ್ಯಾಯ ನಾಮವಾಗಿ ವೇದಾಗಮ ಷಟ್ಸ್ಥಲಂಗಳಿಂದೆ ಪ್ರತಿಪಾದಿಸಲುಪಟ್ಟ ತ್ರಿಪದಾರ್ಥವನು ಸ್ವಾನುಭವ ಗುರೂಕ್ತಿಯಿಂದೆ ನಿಶ್ಚೈಸುವುದು. ॥೪೨॥

**ಸೂತ್ರ॥** ಈ ಪ್ರಕಾರದಿಂದೆ ಉಪಾಧಿತ್ರಯವನು ತೋರಿಸಿ ಅನಂತರದಲ್ಲಿ ಲಿಂಗಾಂಗ ರೂಪವಾದ ಶಿವ ಜೀವರ ಲಕ್ಷಣವನು ತೋರಿಸಲು ಉಪಾಧಿದ್ವಯವನು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಉಪಾಧಿಃ ಪುನರಾಖ್ಯಾತಶ್ಶುದ್ಧಾಶುದ್ಧವಿಭೇದತಃ ।**
**ಶುದ್ಧೋಪಾಧಿಃ ಪರಾ ಮಾಯಾ ಸ್ವಾಶ್ರಯಾಽಮೋಹಕಾರಿಣೀ ।**
**ಅಶುದ್ಧೋಪಾಧಿರಪ್ಯೇವಮವಿದ್ಯಾಽಽಶ್ರಯಮೋಹಿನೀ ॥**

**ಟೀಕು॥** ಪುನಃ=ಮರಳಿ, ಉಪಾಧಿಃ=ಶಿವಜೀವರೆಂಬ ನಾಮೋಪಾಧಿಯು, ಶುದ್ಧಾಶುದ್ಧ ವಿಭೇದತಃ=ಶುದ್ಧಾಶುದ್ಧಭೇದದದೆಸೆಯಿಂದೆ, ಆಖ್ಯಾತಃ=ಹೇಳಲುಪಟ್ಟಿತ್ತು. ಸ್ವಾಶ್ರಯಾಽಮೋಹ ಕಾರಿಣೀ=ತನ್ನನಾಶ್ರಯಿಸಿದವರಿಗೆ ಮೋಹವನು ಮಾಡದೆಯಿರ್ದ್ದ, ಪರಾ ಮಾಯಾ=ಮಹಾ ಮಾಯೆಯೆ, ಶುದ್ಧೋಪಾಧಿಃ=ಶುದ್ಧೋಪಾಧಿಯು. ಆಶ್ರಯಮೋಹಿನೀ=ತನ್ನನಾಶ್ರಯಿಸಿದವರ ಮೋಹಿ ಸುತ್ತಿರ್ದ್ದ, ಅವಿದ್ಯಾ=ಅಧೋಮಾಯೆಯು, ಏವಮಪಿ=ಈ ಪ್ರಕಾರದಿಂದವೆ, ಅಶುದ್ಧೋಪಾಧಿಃ= ಅಶುದ್ಧೋಪಾಧಿಯು. ॥೪೩॥

**ಸೂತ್ರ॥** ಬಳಿಕ ಉಪಾಧಿದ್ವಯದೊಡನೆ ಕೂಡಿದವರನು ಹೇಳುತ್ತಿರ್ದ್ದಪಂ.

**ಗ್ರಂಥ॥** **ಅವಿದ್ಯಾಶಕ್ತಿಭೇದೇನ ಜೀವಾಃ ಬಹುವಿಧಾಃ ಸ್ಮೃತಾಃ ।**
**ಮಾಯಾಶಕ್ತಿವಶಾದೀಶೋ ನಾನಾಮೂರ್ತಿಧರಃ ಪ್ರಭುಃ ॥**

**ಟೀಕು॥** ಪ್ರಭುಃ=ಸ್ವತಂತ್ರಶೀಲನಾದ, ಈಶಃ=ಪರಮೇಶ್ವರನು, ಮಾಯಾಶಕ್ತಿವಶಾತ್= ಶುದ್ಧಮಾಯಾಧೀನದದೆಸೆಯಿಂದೆ, ನಾನಾ ಮೂರ್ತಿಧರಃ=ಚಂದ್ರಧರಾದಿ ನಾನಾ ಮೂರ್ತಿಯನು ಧರಿಸುತ್ತಿರ್ದ್ದಾತನು, ಜೀವಾಃ-ಜೀವಾತ್ಮರುಗಳು, ಅವಿದ್ಯಾಶಕ್ತಿಭೇದೇನ=ಅಶುದ್ಧಮಾಯಾಶಕ್ತಿಯ ಭೇದದಿಂದೆ, ಬಹುವಿಧಾಃ=ಹಲವು ಪ್ರಕಾರವಾಗಿರ್ದ್ದವರಾಗಿ, ಸ್ಮೃತಾಃ=ನೆನೆಯಲುಪಟ್ಟರು. ॥೪೪॥

**ಸೂತ್ರ॥** ಬಳಿಕ ಆ ಶಿವಜೀವರ ಲಕ್ಷಣವನು ಹೇಳುತ್ತಿರ್ದ್ದಪಂ.

**ಗ್ರಂಥ॥** **ಸರ್ವಜ್ಞಃ ಸರ್ವಕರ್ತಾ ಚ ನಿತ್ಯಮುಕ್ತೋ ಮಹೇಶ್ವರಃ ।**
**ಕಿಂಚಿತ್ಕರ್ತ್ತಾ ಚ ಕಿಂಚಿದ್‌ಜ್ಞೋ ಬದ್ಧೋಽನಾದಿ ಶರೀರವಾನ್ ॥**

**ಟೀಕು॥** ಮಹೇಶ್ವರಃ=ಪ್ರೇರಕನಾದ ಪರಮೇಶ್ವರನು, ಸರ್ವಜ್ಞಃಸರ್ವಕರ್ತ್ತಾ ಚ="ಸರ್ವಜ್ಞಃ ಪಂಚಕೃತ್ಯಸಂಪನ್ನಃ ಸರ್ವೇಶ್ವರ ಈಶಃ" ಯೆಂದು ವೃದ್ಧಜಾಬಾಲ ಶ್ರುತಿಯುಂಟಾಗಿ ಸರ್ವಜ್ಞನಾಗಿ ಸರ್ವಕರ್ತೃವಾಗಿ, ನಿತ್ಯಮುಕ್ತಃ=ಅನಾದಿ ಮುಕ್ತನಾಗಿದ್ದಾತನು, ಶರೀರವಾನ್=ಪ್ರಿಯನಾದ, ಸಃ=ಆ ಜೀವಾತ್ಮನು, ಕಿಂಚಿದ್‌ಜ್ಞಃ ಕಿಂಚಿತ್ಕರ್ತ್ತಾ ಚ="ಕಿಂಚಿದ್‌ಜ್ಞಃ ಕಿಂಚಿತ್ಕರ್ತ್ತಾ "ಯೆಂಬ ಶಿವಾಗಮವಾಕ್ಯ ವುಂಟಾಗಿ ಕಿಂಚಿದ್‌ಜ್ಞನಾಗಿ ಕಿಂಚಿತ್ಕರ್ತೃವಾಗಿ, ಅನಾದಿ ಬದ್ಧಃ=ಅನಾದಿಯಾಗಿ ಪಾಶಬದ್ಧನಾಗಿದ್ದಾತನು.

**ತಾತ್ಪರ್ಯ॥** ಜ್ಞಾಜ್ಞೌದ್ವಾವಜಾವೀಶಾನೀಶಾ - ವಜಾ। ಹ್ಯೇಕಾ ಭೋಕ್ತೃಭೋಗ್ಯಾರ್ಥಯುಕ್ತಾ। ಅನಂತಶ್ಚಾತ್ಮಾ ವಿಶ್ವರೂಪೋಹ್ಯಕರ್ತಾ ತ್ರಯಂ ಯದಾ ವಿಂದತೇ ಬ್ರಹ್ಮಮೇತತ್॥" ಯೆಂಬ ಶ್ರೇತಾಶ್ವತರಶ್ರುತಿಯಿಂದೆ,

"ಅನಾದಿಮಲ ಸಂಬಂಧಾತ್ ಕಿಂಚಿಜ್ಞೋಣುರ್ಮಯೋದಿತಃ। ಅನಾದಿಮಲ ಮುಕ್ತತ್ವಾತ್ಸರ್ವಜ್ಞೋಽಸೌ ಶಿವಃ ಸ್ಮೃತಃ"ಯೆಂಬ ಕಿರಣಾಗಮ ವಾಕ್ಯದಿಂದೆಯು ಶಿವಜೀವರ ಸ್ವರೂಪವನು ತಿಳಿವುದು. ||೪೫||

**ಸೂತ್ರ||** ಬಳಿಕ ಜೀವಾತ್ಮರ ಸ್ವರೂಪವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಅವಿದ್ಯಾಮೋಹಿತಾ ಜೀವಾಃ ಬ್ರಹ್ಮೈಕ್ಯಜ್ಞಾನವರ್ಜಿತಾಃ ।**
**ಪರಿಭ್ರಮಂತಿ ಸಂಸಾರೇ ನಿಜಕರ್ಮಾನುರೂಪತಃ ।**

**ಟೀಕು||** ಅವಿದ್ಯಾಮೋಹಿತಾ ಜೀವಾಃ=ಅಜ್ಞಾನದಿಂದೆ ಮೋಹಿಸಲುಪಟ್ಟ ಶಿವಜೀವಾತ್ಮರು, ಬ್ರಹ್ಮೈಕ್ಯಜ್ಞಾನ ವರ್ಜಿತಾಃ=ಪರಶಿವ ಪರಬ್ರಹ್ಮವೆಂಬ ಪರ್ಯಾಯ ನಾಮವುಳ್ಳ ಮಹಾಲಿಂಗದಲ್ಲಿಯ ಸಮಾನ ಸಮರಸರೂಪವಾದ ಐಕ್ಯಜ್ಞಾನವಿಲ್ಲದೆಯಿದ್ದವರಾಗುತವು, ಸಂಸಾರೇ=ಜನನ ಮರಣ ರೂಪವಾದ ಸಂಸಾರ ಚಕ್ರದಲ್ಲಿ, ನಿಜಕರ್ಮಾನುರೂಪತಃ="ಸ್ವಸ್ವಕೃತ ಸುಕೃತ ದುಷ್ಕರ್ಮಣಾ ಪರಮೇಶ್ವರಪ್ರೇರಣಯಾ ಬದ್ಧಾಃ ಸಂಸಾರಿಣೋ ಜೀವಾಃ।" ಯೆಂಬ ಶ್ರುತಿಯುಂಟಾಗಿ ತಮ್ಮ ಕರ್ಮಕ್ಕೆ ಸದೃಶವಾದ ಸ್ವರೂಪಿನಿಂದವೆ, ಪರಿಭ್ರಮಂತಿ=ತಿರುಗುತ್ತಿರ್ದಪರು. ||೪೫||

**ಸೂತ್ರ||** ಬಳಿಕ ಆ ಅರ್ಥವನೆ ವಿಶೇಷಿಸುತ್ತಿರ್ದಪಂ.

**ದೇವತಿರ್ಯಙ್ಮನುಷ್ಯಾದಿನಾನಾಯೋನಿವಿಶೇಷತಃ ।**
**ಚಕ್ರನೇಮಿಕ್ರಮೇಣೈವ ಭ್ರಮಂತಿ ಹಿ ಶರೀರಿಣಃ ॥**

**ಟೀಕು||** ಶರೀರಿಣಃ=ಜೀವಾತ್ಮರು, ದೇವತಿರ್ಯಙ್ಮನುಷ್ಯಾದಿ=ದೇವತೆಗಳು ತಿರ್ಯಗ್ಜಾತಿಗಳು ಮನುಷ್ಯರು ಮೊದಲಾಗುಳ್ಳವರ, ನಾನಾಯೋನಿವಿಶೇಷತಃ=ಹಲವು ಪ್ರಕಾರವಾದ ಯೋನಿಗಳ ವಿಶೇಷದದೆಸೆಯಿಂದೆ, ಚಕ್ರನೇಮಿಕ್ರಮೇಣೈವ-ಬಂಡಿಯ ಬಳೆಯಗತಿಯೋಪಾದಿಯ ಗತಿಯಿಂದವೆ, ಭ್ರಮಂತಿ=ತಿರುಗುತ್ತಿರ್ದಪರು. ಹಿ=ಪ್ರಸಿದ್ಧವು. ||೪೭||

**ಸೂತ್ರ||** ಬಳಿಕ ಆ ಆತ್ಮರ ಸಂಸಾರಕ್ಕೆ ಕಾರಣವನು ಆ ಕಾರಣ ಪ್ರೇರಕನನು ಹೇಳುತ್ತಿರ್ದಪಂ.

ಗ್ರಂಥ|| **ಜಾತ್ಯಾಯುರ್ಭೋಗವೈಷಮ್ಯಕಾರಣಂ ಕರ್ಮ ಕೇವಲಮ್ ।**
**ಏತೇಷಾಂ ದೇಹಿನಾಂ ಸಾಕ್ಷೀ ಪ್ರೇರಕಃ ಪರಮೇಶ್ವರಃ ॥**

**ಟೀಕು||** ಏತೇಷಾಂ ದೇಹಿನಾಂ=ಈ ಜೀವಾತ್ಮರಿಗೆ, ಕೇವಲಂ="ಯಥಾ ಅನಾದಿರ್ಮಲಸ್ತಸ್ಯ

ಕರ್ಮಣ್ಯೇವಮನಾದಿಕಂ"। ಯೆಂದು ಕಿರಣಾಗಮವಾಕ್ಯಮುಂಟಾಗಿ ಅನಾದಿಯಾದ ಕರ್ಮವೊಂದೆ, ಜಾತ್ಯಾಯುರ್ಭೋಗವೈಷಮ್ಯಕಾರಣಂ=ಜಾತಿ ಆಯುಷ್ಯ ಭೋಗಂಗಳ ವಿಷಯತ್ವಕ್ಕೆ ಕಾರಣವು. ಪರಮೇಶ್ವರಃ=ಈಶ್ವರನೆ, ಸಾಕ್ಷೀ ಪ್ರೇರಕಃ="ಯಥಾರ್ಕಃ ಪಂಕಜಂ ನಿತ್ಯಂ ಬೋಧ ಸಂಶೋಷಣಾದಿಭಿಃ।ಕರ್ಮಭಿರ್ಬೋಧಕಾದ್ಯಾಖ್ಯಾಂ ಲಭತೇऽತ್ರ ತಥಾ ಶಿವಃ"॥ ಯೆಂಬ ಪೌಷ್ಕರ ವಾಕ್ಯವುಂಟಾಗಿ ಸೂರ್ಯನೋಪಾದಿಯಲ್ಲಿ ಸಾಕ್ಷೀ ಕರ್ತೃವಾಗಿ ಪ್ರೇರಿಸುತ್ತಿರ್ದ್ದ ಆತನು. **॥೪೮॥**

**ಸೂತ್ರ॥** ಬಳಿಕ ಆ ಆತ್ಮರಿಗೆ ಪರಮೇಶ್ವರನೆ ಪರಮಾಪ್ತನೆಂದು ಹೇಳುತ್ತಿರ್ದ್ದಪಂ.

ಗ್ರಂಥ॥ **ಏತೇಷಾಂ ಭ್ರಮತಾಂ ನಿತ್ಯಂ ಕರ್ಮಯಂತ್ರನಿಯಂತ್ರಣೇ ।**
**ದೇಹಿನಾಂ ಪ್ರೇರಕಶ್ಶಂಭುಃ ಹಿತಮಾರ್ಗೋಪದೇಶಕಃ ॥**

**ಟೀಕು॥** ಕರ್ಮಯಂತ್ರನಿಯಂತ್ರಣೇ=ಕರ್ಮವೆಂಬ ರಾಟಳದಲ್ಲಿ, ನಿತ್ಯಂ ಭ್ರಮತಾಂ= ಆವಾಗವು ತಿರುಗುತ್ತಿರ್ದ್ದ, ಏತೇಷಾಂ ದೇಹಿನಾಂ=ಈ ಜೀವಾತ್ಮರಿಗೆ, ಶಂಭುಃ=ಪರಮೇಶ್ವರನು, ಪ್ರೇರಕಃ=ಪ್ರೇರಕನಾಗಿ, ಹಿತಮಾರ್ಗೋಪದೇಶಕಃ=ಹಿತಮಾರ್ಗವನು ಉಪದೇಶಿಸುತ್ತಿರ್ದ್ದಾತನು. **॥೪೯॥**

**ಸೂತ್ರ॥** ಬಳಿಕ ಆ ಆತ್ಮರಿಗೆ ಶಿವಪ್ರಸಾದದಿಂದೆ ಕರ್ಮಪರಿಪಾಕವನು ಹೇಳುತ್ತಿರ್ದ್ದಪಂ.

ಗ್ರಂಥ॥ **ಸ್ವಕರ್ಮಪರಿಪಾಕೇನ ಪ್ರಕ್ಷೀಣಾಮಲವಾಸನಃ ।**
**ಶಿವಪ್ರಸಾದಾತ್ ಜೀವೋऽಯಂ ಜಾಯತೇ ಶುದ್ಧಮಾನಸಃ ॥**

**ಟೀಕು॥** ಅಯಂ ಜೀವಃ=ಈ ಜೀವಾತ್ಮನು, ಸ್ವಕರ್ಮಪರಿಪಾಕೇನ='ವಿಜ್ಞಾನ ಯೋಗ ಸನ್ಯಾಸೈರ್ಭೋಗಾದ್ವಾ ಕರ್ಮಣಃ ಕ್ಷಯಃ"ಯೆಂದು ಶಿವಾಗಮವಾಕ್ಯವುಂಟಾಗಿ ತಮ್ಮ ಕರ್ಮಂಗಳ ಪರಿಪಾಕದಿಂದೆ, ಪ್ರಕ್ಷೀಣಮಲವಾಸನಃ ಸನ್=ಕೆಡುತ್ತಿರ್ದ್ದ ಮಲವಾಸನೆ ಉಳ್ಳಾತನಾಗುತಲು, ಶಿವಪ್ರಸಾದಾತ್=ಶಿವಪ್ರಸಾದದದೆಸೆಯಿಂದೆ, ಶುದ್ಧಮಾನಸಃ=ನಿರ್ಮಲವಾದ ಅಂತಃಕರಣ ವುಳ್ಳಾತನಾಗಿ, ಜಾಯತೇ=ಹುಟ್ಟುತ್ತಿರ್ದ್ದಪನು. **॥೫೦॥**

**ಸೂತ್ರ॥** ಬಳಿಕ ನಿರ್ಮಲವಾದಂತಃಕರಣವುಳ್ಳ ಜೀವನಿಗೆ ಶಿವಭಕ್ತಿ ಹುಟ್ಟುವದು. ಆತನೀಗ ಚರಮ ದೇಹಿಯಾಗಿ ಪಿಂಡಶಬ್ದವಾಚ್ಯನೆಂದು ಹೇಳುತ್ತಿರ್ದ್ದಪಂ.

ಗ್ರಂಥ॥ **ಶುದ್ಧಾಂತಃಕರಣೇ ಜೀವೇ ಶುದ್ಧಕರ್ಮವಿಪಾಕತಃ ।**
**ಜಾಯತೇ ಶಿವಕಾರುಣ್ಯಾತ್ ಪ್ರಸ್ಫುಟಾ ಭಕ್ತಿರೈಶ್ವರೀ ।**
**ಜಂತುರಂತ್ಯಶರೀರೋऽಸೌ ಪಿಂಡಶಬ್ದಾಭಿಧೇಯಕಃ ॥**

**ಟೀಕು॥** ಶುದ್ಧಕರ್ಮವಿಪಾಕತಃ=ಶ್ರುತಿತಂತ್ರವಿಹಿತರಾದ ಶುದ್ಧಕರ್ಮಂಗಳ ಪರಿಪಾಕದದೆಸೆಯಿಂದೆ, ಶುದ್ಧಾಂತಃಕರಣೇ=ನಿರ್ಮಲವಾದ ಅಂತಃಕರಣವುಳ್ಳ, ಜೀವೇ=ಜೀವಾತ್ಮನಲ್ಲಿ ಪ್ರಸ್ಫುಟಾ=ವ್ಯಕ್ತವಾಗಿರ್ದ್ದ, ಐಶ್ವರೀ ಭಕ್ತಿಃ=ಶಿವ ಸಂಬಂಧವಾದ ಭಕ್ತಿಯು, ಶಿವಕಾರುಣ್ಯಾತ್=ಶಿವನ ಕೃಪಾರಸದದೆಸೆಯಿಂದೆ, ಜಾಯತೇ=ಹುಟ್ಟುತ್ತಿರ್ದ್ದಪುದು. ಅಸೌ ಜಂತುಃ=ಈ ಜೀವಾತ್ಮನು, ಅಂತ್ಯ ಶರೀರಃ ಸನ್="ತದಸ್ಯ ತೃತೀಯಂ ಜನ್ಮ"ಯೆಂಬ ಶ್ರುತಿಯುಂಟಾಗಿ, ಚರಮದೇಹವುಳ್ಳಾತನಾಗುತಲು, ಪಿಂಡಶಬ್ದಾಭಿಧೇಯಕಃ= ಪಿಂಡಶಬ್ದದಿಂದೆ ಹೇಳಲು ಯೋಗ್ಯವಾಗಿದ್ದಾತನು.

**ತಾತ್ಪರ್ಯ॥** ಶಿವಾಲಯಕ್ಕೆ ಗುಂಡಾಂತರದೋಪಾದಿಯಾದ ಪಿಂಡಸ್ಥಲ ರಹಸ್ಯವನು ಮುಂದಣ ಶತಸ್ಥಳವನು ನಾವು ಸಂಗ್ರಹಿಸಿದ ಶ್ರುತ್ಯಂತ ಶಿವೋ(ರೋ)ಮಣಿ ಸಿದ್ಧಾಂತಚಿಂತಾಮಣಿ, ದೇಶಿಕೋಪದೇಶ ಸ್ವಾನುಭವಂಗಳಿಂದೆ ನಿಶ್ಚೈಸುವುದು. ಗ್ರಂಥ ವಿಶಾಲವಾದೀತೆಂದು ಬರೆದುದಿಲ್ಲ.

**ಸೂತ್ರ॥** ಇಂತೀ ಪಿಂಡಸ್ಥಲಮಂ ಮುಗಿಸಿ ಅನಂತರದಲ್ಲಿ ಪಿಂಡಜ್ಞಾನ ಸ್ಥಲವನು ಹೇಳುತ್ತಿರ್ದ್ದಪಂ.

**ಇತಿ ಪಿಂಡಸ್ಥಲಮ್.**

## ೨. ಭಕ್ತಸ್ಥಲೇ ಪಿಂಡಜ್ಞಾನಸ್ಥಲಮ್

ಗ್ರಂಥ॥

**ಶರೀರಾತ್ಮವಿವೇಕೇನ ಪಿಂಡಜ್ಞಾನೀ ಸ ಕಥ್ಯತೇ ।**
**ಶರೀರಮೇವ ಚಾರ್ವಾಕೈರಾತ್ಮೇತಿ ಪರಿಕೀರ್ತ್ಯತೇ ॥**

**ಇಂದ್ರಿಯಾಣಾಂ ತಥಾऽऽತ್ಮತ್ವಂ ಅಪರೈಃ ಪರಿಭಾಷ್ಯತೇ ।**
**ಬುದ್ಧಿತತ್ತ್ವಗತೈರ್ಬೌದ್ಧೈರ್ಬುದ್ಧಿರಾತ್ಮೇತಿ ಗೀಯತೇ ।**
**ನೇಂದ್ರಿಯಾಣಾಂ ನ ದೇಹಸ್ಯ ನ ಬುದ್ಧೇರಾತ್ಮತಾ ಭವೇತ್ ॥**

**ಟೀಕು॥** ಸಃ=ಆ ಪಿಂಡಸ್ಥಲಿಯು, ಶರೀರಾತ್ಮವಿವೇಕೇನ=ದೇಹ ಮತ್ತು ಆತ್ಮನವಿವೇಚನೆಯಿಂದೆ; ಪಿಂಡಜ್ಞಾನೀ ಕಥ್ಯತೇ=ಪಿಂಡಜ್ಞಾನಿಯಂದೆನಿಸಿಕೊಳ್ಳಲುಪಡುವನು. ಚಾರ್ವಾಕೈಃ=ಚಾರ್ವಾಕರಿಂದೆ, ಶರೀರಮೇವ=ದೇಹವೆ, ಆತ್ಮೇತಿ=ಆತ್ಮನೆಂದು, ಪರಿಕೀರ್ತ್ಯತೇ= ಹೇಳಲುಪಡುತ್ತಿರ್ದ್ದಪುದು. ಅಪರೈಃ=ತದನ್ಯರಾದ ಚಾರ್ವಾಕದೇಶಿಕರಿಂದೆ, ಇಂದ್ರಿಯಾಣಾಂ= ಇಂದ್ರಿಯಂಗಳಿಗೆ, ತಥಾ=ಹಾಂಗೆಯೆ, ಆತ್ಮತ್ವಂ=ಆತ್ಮಸ್ವರೂಪವು, ಪರಿಭಾಷ್ಯತೇ= ಹೇಳಲುಪಡುತ್ತಿರ್ದ್ದಪುದು. ಬದ್ಧಿತತ್ತ್ವಗತೈಃ= ಬುದ್ಧಿತತ್ತ್ವವನುಯೆಯ್ದಿರ್ದ, ಬೌದ್ಧೈಃ=ಬೌದ್ಧರಿಂದೆ, ಬುದ್ಧಿಃ=ಬುದ್ಧಿಯೆ, ಆತ್ಮೇತಿ=ಆತ್ಮನೆಂದು, ಗೀಯತೇ=ಹೇಳಲುಪಡುತ್ತಿರ್ದ್ದಪುದು. ದೇಹಸ್ಯ=ಶರೀರಕ್ಕೆ, ಆತ್ಮತಾ=ಆತ್ಮತತ್ತ್ವವು, ನ ಭವೇತ್=ಆಗದು. ಇಂದ್ರಿಯಾಣಾಂ=ಇಂದ್ರಿಯಂಗಳಿಗೆ, ಆತ್ಮತಾ=ಆತ್ಮತತ್ತ್ವವು, ನ ಭವೇತ್=ಆಗದು. ಬುದ್ಧೇಃ=ಬುದ್ಧಿತತ್ತ್ವಕ್ಕೆಯು, ಆತ್ಮತಾ=ಆತ್ಮತತ್ತ್ವವು, ನ ಭವೇತ್= ಉಂಟಾಗುತ್ತಿರದು. ॥೫೨॥

**ಸೂತ್ರ॥** ಈ ಪ್ರಕಾರದಿಂದೆ ಅವೈದಿಕರಿಂದೆ ಹೇಳಲುಪಟ್ಟ ಆತ್ಮಸ್ವರೂಪವು ಏನು ಕಾರಣವಲ್ಲವೆಂದರೆ ಕಾರಣವನು ಹೇಳುತ್ತಿರ್ದಪಂ.

**ಅಹಂ ಪ್ರತ್ಯಯವೇದ್ಯತ್ವಾದನುಭೂತಸ್ಮೃತೇರಪಿ ।**
**ಶರೀರೇಂದ್ರಿಯಬುದ್ಧಿಭ್ಯೋ ವ್ಯತಿರಿಕ್ತಸ್ಸನಾತನಃ ।**
**ಆತ್ಮಸ್ಥಿತಿವಿವೇಕೀ ಯಃ ಪಿಂಡಜ್ಞಾನೀ ಸ ಗೀಯತೇ ॥**

**ಟೀಕು॥** ಅಹಂ ಪ್ರತ್ಯಯವೇದ್ಯತ್ವಾತ್=ನಾನುಯೆಂಬ ತೋರಿಕೆಯಿಂದೆ ಅರಿಯಲು ಯೋಗ್ಯನಾದ ಕಾರಣನಾಗಿ, ಅನುಭೂತಸ್ಮೃತೇರಪಿ=ಅನುಭವಿಸಲುಪಟ್ಟ ವಿಷಯಂಗಳ ಸ್ಮರಣೆಯು ತಾನಾದ ಕಾರಣವಾಗಿಯೆ, ಶರೀರೇಂದ್ರಿಯ ಬುದ್ಧಿಭ್ಯಃ=ಅವೈದಿಕರಿಂದೆ ಹೇಳಲುಪಟ್ಟ ದೇಹೇಂದ್ರಿಯ ಬುದ್ಧಿತತ್ವಂಗಳದೆಸೆಯಿಂದೆ, ವ್ಯತಿರಿಕ್ತಃ=ಭಿನ್ನವಾಗಿ, ಸನಾತನಃ=ಕೇಡಿಲ್ಲದೆಯಿದ್ದ, ಆತ್ಮ=ಪಿಂಡಶಬ್ದ ವಾಚ್ಯವಾದ ಆತ್ಮನು, ಸ್ಥಿತಿ=ಉಂಟೋ ಎಂಬ, ಯಃ ವಿವೇಕೀ=ಆವನಾವನೊರ್ವ ವಿವೇಕಿಯುಂಟು, ಸಃ=ಆತನು, ಪಿಂಡಜ್ಞಾನೀತಿ=ಪಿಂಡಜ್ಞಾನಿಯೆಂದು, ಗೀಯತೇ=ಹೇಳಲುಪಡುತ್ತಿರ್ದಪನು. ॥೫೪॥

**ಸೂತ್ರ॥** ಬಳಿಕ ಶರೀರಾತ್ಮಸ್ವರೂಪವನು ಹೇಳಿ ಆತ್ಮೇಶ್ವರರ ಸ್ವರೂಪವನೂ ಬಲ್ಲ ಅವನಿಗೆ ಪಿಂಡಜ್ಞಾನಿಯೆಂದು ಹೇಳುತ್ತಿರ್ದಪಂ.

ಗ್ರಂಥ॥ **ನಶ್ವರಾಣಿ ಶರೀರಾಣಿ ನಾನಾರೂಪಾಣಿ ಕರ್ಮಣಾ ।**
**ಆಶ್ರಿತೋ ನಿತ್ಯ ಏವಾಸೌ ಇತಿ ಜಂತೋರ್ವಿವೇಕಿತಾ ॥**

**ಶರೀರಾತ್ಪೃಥಗಾತ್ಮಾನಂ ಆತ್ಮಭ್ಯಃ ಪೃಥಗೀಶ್ವರಮ್ ।**
**ಪ್ರೇರಕಂ ಯೋ ವಿಜಾನಾತಿ ಪಿಂಡಜ್ಞಾನೀತಿ ಕಥ್ಯತೇ ॥**

**ಟೀಕು॥** ಕರ್ಮಣಾ=ಪುಣ್ಯಪಾಪರೂಪವಾದ ಕರ್ಮದಿಂದೆ, ನಾನಾ ರೂಪಾಣಿ=ನಾನಾ ಪ್ರಕಾರವಾದ ಸ್ವರೂಪಗಳುಳ್ಳ, ಶರೀರಾಣಿ=ದೇಹಂಗಳು, ನಶ್ವರಾಣಿ=ಕೆಡುವ ಶೀಲವುಳ್ಳ, ಆಶ್ರಿತಃ=ಶರೀರವನಾಶ್ರೈಸಿರ್ದ್ದ, ಅಸೌ=ಈ ಜೀವಾತ್ಮನು, ನಿತ್ಯ ಏವ=ಕೇಡಿಲ್ಲದೆಯಿದ್ದ ಆತನೆ, ಇತಿ= ಹೀಗೆಂಬುದೀಗ, ಜಂತೋಃ=ಜೀವನಿಗೆ, ವಿವೇಕಿತಾಃ=ವಿವೇಕವುಳ್ಳಾತನವು, ಯಃ=ಆವನಾವನೊಬ್ಬ ವಿವೇಕಿಯು, ಶರೀರಾತ್=ದೇಹದದೆಸೆಯಿಂದೆ, ಆತ್ಮಾನಂ=ಆತ್ಮನನು, ಪೃಥಕ್-ಭಿನ್ನವಾಗಿದ್ದಾತನಾಗಿ, ವಿಜಾನಾತಿ=ಅರಿವುತ್ತಿರ್ದನು. ಯಃ=ಆವನಾನೊಬ್ಬ ವಿವೇಕಿಯು, ಆತ್ಮಭ್ಯಃ=ಆತ್ಮನದೆಸೆಯಿಂದೆ, ಪ್ರೇರಕಂ ಈಶ್ವರಂ=ಪ್ರೇರಕನಾದ ಪರಮೇಶ್ವರನನು, ಪೃಥಕ್=ಭಿನ್ನವಾಗಿದ್ದಾತನಾಗಿ, ವಿಜಾನಾತಿ=ಅರಿವುತ್ತಿರ್ದಪನು, ಸಃ=ಆ ಶರೀರಾತ್ಮೇಶ್ವರ ವಿವೇಕಿಯು, ಪಿಂಡಜ್ಞಾನೀತಿ= ಪಿಂಡಜ್ಞಾನಿಯೆಂದು, ಕಥ್ಯತೇ=ಹೇಳಲುಪಡುತ್ತಿರ್ದಪಂ.

**ತಾತ್ಪರ್ಯ॥** "ಸತ್ಯೇನಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಮ್ ।

ಅಂತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರಃ ಆಯಂ ಪಶ್ಯಂತಿ ಯತಯಃ ಕ್ಷೀಣದೋಷಾಃ॥ಯೆಂಬ ಮುಂಡಕೋಪನಿಷದ್ವಾಕ್ಯದಿಂದ, ``ಅಶರೀರಂ ಯದಾಽತ್ಮಾನಂ ಪಶ್ಯತಿ ಜ್ಞಾನಚಕ್ಷುಷಾ। ತದಾ ಭವತಿ ಶಾಂತಾತ್ಮಾ ಸರ್ವತೋ ಪಿಗತಸ್ಪೃಹಃ"॥ ಯೆಂಬ ದೇವೀಕಾಲೋತ್ತರದಿಂದೆಯು ದೇಹದೇಹಿ ಗಳಾದ ಶರೀರಾತ್ಮರುಗಳನು ದೇಹದೇಹಿಗಳಾದ ಆತ್ಮೇಶ್ವರರನು ದೇಶಿಕೋಪದೇಶಸ್ವಾನುಭವಂ ಗಳಿಂದೆ ತಿಳಿವುದು. ॥೫೬॥

### ಇತಿ ಪಿಂಡಜ್ಞಾನಸ್ಥಲಮ್

## ೩. ಭಕ್ತಸ್ಥಲೇ ಸಂಸಾರಹೇಯಸ್ಥಲಮ್

**ಸೂತ್ರ॥** ಅನಂತರದಲ್ಲಿ ಪಿಂಡಜ್ಞಾನಿಗೆ ಹುಟ್ಟುವ ಸಂಸಾರಹೇಯಸ್ಥಲವನು ಹೇಳುತ್ತಿರ್ದಪಂ.

ಗ್ರಂಥ॥ **ನಿರಸ್ತಹೃತ್ಕಲಂಕಸ್ಯ ನಿತ್ಯಾನಿತ್ಯವಿವೇಕಿನಃ ।**
**ಸಂಸಾರಹೇಯತಾಬುದ್ಧಿರ್ಜಾಯತೇ ವಾಸನಾಬಲಾತ್ ॥**

**ಟೀಕು॥** ನಿರಸ್ತಹೃತ್ಕಲಂಕಸ್ಯ=ತೊಲಗಿಸಲುಪಟ್ಟ ಹೃದಯದ ಕಲಂಕುಳ್ಳ, ನಿತ್ಯಾನಿತ್ಯವಿವೇಕಿನಃ= ನಿತ್ಯನಾದಾತ್ಮನ ಅನಿತ್ಯವಾದ ದೇಹದ ವಿವೇಕವುಳ್ಳ ಪಿಂಡಜ್ಞಾನಿಗೆ, ವಾಸನಾಬಲಾತ್= ಪೂರ್ವಜನ್ಮವಾಸನೆಯ ಬಲದಿಂದೆ, ಸಂಸಾಸರಹೇಯತಾಬುದ್ಧಿಃ=ಸಂಸಾರದ ಬಿಡುಗಡೆಯಲ್ಲಿಯ ಬುದ್ಧಿಯು, ಜಾಯತೇ=ಹುಟ್ಟುತ್ತಿರ್ದಪುದು. ॥೫೭॥

**ಸೂತ್ರ॥** ಬಳಿಕ ಸಂಸಾರಸುಖವನು ನಿರಾಕರಿಸುತ್ತಿರ್ದಪಂ.

ಗ್ರಂಥ॥ **ಐಹಿಕೇ ಕ್ಷಣಿಕೇ ಸೌಖ್ಯೇ ಪುತ್ರದಾರಾದಿಸಂಭವೇ ।**
**ಕ್ಷಯಿತ್ವಾದಿಯುತೇ ಸ್ವರ್ಗೇ ಕಸ್ಯ ವಾಂಛಾ ವಿವೇಕಿನಃ ॥**

**ಟೀಕು॥** ಪುತ್ರದಾರಾದಿಸಂಭವೇ=ಸುತ ಸತಿಯರು ಮೊದಲಾದವರಿಂದೆ ಹುಟ್ಟಿದ, ಐಹಿಕೇ=ಈ ಲೋಕದಲ್ಲಿ ಹುಟ್ಟಿರ್ದ, ಕ್ಷಣಿಕೇ ಸೌಖ್ಯೇ=ಕ್ಷಣಿಕವಾದ ಸುಖದಲ್ಲಿಯು, ಕ್ಷಯಿತ್ವಾದಿಯುತೇ="ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಮ್। ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ"॥ ಯೆಂಬ ಪುರಾಣವಾಕ್ಯವುಂಟಾಗಿ ಕ್ಷಯಿತ್ವಾದಿ ಗುಣದೊಡನೆ ಕೂಡಿರ್ದ, ಸ್ವರ್ಗೇಽಪಿ=ಸ್ವರ್ಗಭೋಗದಲ್ಲಿ ಯಾಯಿತ್ತಾದೊಡೆಯು, ಕಸ್ಯ ವಿವೇಕಿನಃ=ಆವ ವಿವೇಕಿಗೆ, ವಾಂಛಾ=ಬಯಕೆಯು? ಆರಿಗೂಯಿಲ್ಲವೆಂಬುದರ್ಥ. ॥೫೮॥

**ಸೂತ್ರ||** ಬಳಿಕ ಜನನ ಮರಣಂಗಳಿಂದಲಾದ ದುಃಖವನು ಹೇಳುತ್ತಿರ್ದಪಂ.

**ಗ್ರಂಥ||** ಜಾತಸ್ಯ ನಿಯತೋ ಮೃತ್ಯುಃ ತಥಾ ಜನ್ಮ ಮೃತಸ್ಯ ಚ ।
ಜಂತುರ್ಮರಣಜನ್ಮಭ್ಯಾಂ ಪರಿಭ್ರಮತಿ ಚಕ್ರವತ್ ॥

**ಟೀಕು||** ಜಾತಸ್ಯ=ಹುಟ್ಟಿದವನಿಗೆ, ಮೃತ್ಯುಃ=ಮರಣವು, ನಿಯತಂ=ನಿಯಮವಾಗಿರ್ದುದು. ಮೃತಸ್ಯ=ಸತ್ತವನಿಗೆ, ತಥಾ=ಹಾಂಗೆಯೆ, ಜನ್ಮ ಚ=ಹುಟ್ಟುವತನವು, ನಿಯತಂ=ನಿಯಮವಾಗಿರ್ದುದು. ಜಂತುಃ=ಜೀವನು, ಮರಣಜನ್ಮಭ್ಯಾಂ=ಜನನ ಮರಣಂಗಳಿಂದೆ, ಚಕ್ರವತ್=ಚಕ್ರದೋಪಾದಿಯಲ್ಲಿ, ಪರಿಭ್ರಮತಿ=ತಿರುಗುತ್ತಿರ್ದಪನು. ||೫೯||

**ಸೂತ್ರ||** ಬಳಿಕ ನಾರಾಯಣನಿಗೆ ಬಂದ ಜನನ ಮರಣಂಗಳನು ಹೇಳುತ್ತಿರ್ದಪಂ.

**ಗ್ರಂಥ||** ಮತ್ಸ್ಯಕೂರ್ಮವರಾಹಾಂಗೈರ್ನೃಸಿಂಹಮನುಜಾದಿಭಿಃ ।
ಜಾತೇನ ನಿಧನಂ ಪ್ರಾಪ್ತಂ ವಿಷ್ಣುನಾಽಪಿ ಮಹಾತ್ಮನಾ ॥

**ಟೀಕು||** ಮತ್ಸ್ಯಕೂರ್ಮವರಾಹಾಂಗೈಃ=ಮತ್ಸ್ಯಕೂರ್ಮವರಾಹಾವತಾರಂಗಳಿಂದೆ, ನೃಸಿಂಹಮನುಜಾದಿಭಿಃ=ನೃಸಿಂಹ ವಾಮನಾವತಾರವೆ ಮೊದಲಾಗುಳ್ಳ ಪರಶುರಾಮ ಶ್ರೀರಾಮ ಬಲರಾಮ ಕೃಷ್ಣ ಕಲ್ಕ್ಯಾವತಾರಂಗಳಿಂದೆ, ಜಾತೇನ=ಹುಟ್ಟಿರ್ದ, ಮಹಾತ್ಮನಾ=ಮಹಾಪುರುಷನಾದ, ವಿಷ್ಣುನಾಽಪಿ=ವಿಷ್ಣುವಿನಿಂದೆಯಾಯಿತ್ತಾದೊಡೆಯು, ನಿಧನಂ=ಮರಣವು,ಪ್ರಾಪ್ತಂ=ಎಯಿದಲುಪಟ್ಟಿತ್ತು. ಉಳಿದ ದೇವ ದಾನವಾದಿಗಳಿಗೆ ಜನನ ಹೋಗದೆಂಬುದರ್ಥ. ||೬೦||

**ಸೂತ್ರ||** ಬಳಿಕ ಮಾನವರಿಗೆ ತಾಪತ್ರಯ ದುಃಖವನು ಸಪ್ತಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ||** ಭೂತ್ವಾ ಕರ್ಮವಶಾಜ್ಜಂತುರ್ಬ್ರಾಹ್ಮಣಾದಿಷು ಜಾತಿಷು ।
ತಾಪತ್ರಯಮಹಾವಹ್ನಿಸಂತಾಪಾದ್ದಹ್ಯತೇ ಭೃಶಮ್ ॥

**ಟೀಕು||** ಜಂತುಃ=ಜೀವಾತ್ಮನು, ಕರ್ಮವಶಾತ್=ಅನಾದಿಯಾದ ಕರ್ಮಾಧೀನದ ದೆಸೆಯಿಂದೆ, ಬ್ರಾಹ್ಮಣಾದಿಷು ಜಾತಿಷು=ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಮೊದಲಾದ ನಾನಾ ಜಾತಿಗಳಲ್ಲಿ, ಭೂತ್ವಾ=ಹುಟ್ಟಿ, ತಾಪತ್ರಯ ಮಹಾವಹ್ನಿಸಂತಾಪಾತ್=ಆಧ್ಯಾತ್ಮಿಕಾಧಿಭೌತಿಕಾಧಿ ದೈವಿಕರೂಪವಾದ ತಾಪತ್ರಯವೆಂಬ ಮಹಾವಹ್ನಿಯಲ್ಲಿ ಬೇಳುವುದರದೆಸೆಯಿಂದೆ, ಭೃಶಂ=ಮಿಗಿಲಾಗಿ, ದಹ್ಯತೇ=ಬೇವುತ್ತಿರ್ದಪನು. ||೬೧||

**ಸೂತ್ರ||** ಕರ್ಮಜನ್ಯವಾದ ದುಃಖವನು ಹೇಳುತ್ತಿರ್ದ್ದಪಂ

**ಗ್ರಂಥ||** **ಕರ್ಮಮೂಲೇನ ದುಃಖೇನ ಪೀಡ್ಯಮಾನಸ್ಯ ದೇಹಿನಃ ।**
**ಆಧ್ಯಾತ್ಮಿಕಾದಿನಾ ನಿತ್ಯಂ ಕುತ್ರ ವಿಶ್ರಾಂತಿರಿಷ್ಯತೇ ॥**

**ಟೀಕು||** ಕರ್ಮಮೂಲೇನ=ಅನಾದಿಯಾದ ಕರ್ಮವೆ ಕಾರಣವಾಗುಳ್ಳ, ಆಧ್ಯಾತ್ಮಿಕಾದಿನಾ=ಆಧ್ಯಾತ್ಮಿಕವೇ ಮೊದಲಾಗುಳ್ಳ, ದುಃಖೇನ=ದುಃಖದಿಂದೆ, ನಿತ್ಯಂ=ಆವಾಗವು, ಪೀಡ್ಯಮಾನಸ್ಯ=ಬಾಧಿಸಲುಪಡುತ್ತಿರ್ದ್ದ, ದೇಹಿನಃ=ಜೀವನಿಗೆ, ವಿಶ್ರಾಂತಿಃ=ವಿಶ್ರಮಣವು, ಕುತ್ರ=ಆವೆಡೆಯಲ್ಲಿ, ಇಷ್ಯತೇ=ಇಚ್ಛಿಸಲುಪಡುತ್ತಿರ್ದ್ದಪುದು? ಎಲ್ಲಿಯೂ ಇಲ್ಲವೆಂಬುದರ್ಥ. **||೬೨||**

**ಸೂತ್ರ||** ಬಳಿಕ ತಾಪತ್ರಯಂಗಳ ಹೆಸರನು ಹೇಳುತ್ತಿರ್ದ್ದಪಂ.

**ಗ್ರಂಥ||** **ಆಧ್ಯಾತ್ಮಿಕಂ ತು ಪ್ರಥಮಂ ದ್ವಿತೀಯಂ ಚಾಧಿಭೌತಿಕಮ್ ।**
**ಆಧಿದೈವಿಕಮನ್ಯಚ್ಚ ದುಃಖತ್ರಯಮಿದಂ ಸ್ಮೃತಮ್ ॥**

**ಟೀಕು||** ಆಧ್ಯಾತ್ಮಿಕಂ ತು=ಆಧ್ಯಾತ್ಮಿಕವು, ಪ್ರಥಮಂ=ಮೊದಲು, ಆಧಿಭೌತಿಕಂ ದ್ವಿತೀಯಂ ಚ=ಆಧಿಭೌತಿಕವು ಎರಡನೆಯದು. ಆಧಿದೈವಿಕಂ=ಆಧಿದೈವಿಕವು, ಅನ್ಯಚ್ಚ=ಭಿನ್ನವಾಗಿದ್ದ ಅದು, ಇದಂ=ಈ ತಾಪತ್ರಯವೇ, ದುಃಖತ್ರಯಂ=ದುಃಖತ್ರಯವೆಂದು ಸ್ಮೃತಂ=ನೆನೆಯಲುಪಟ್ಟಿತ್ತು. **||೬೩||**

**ಸೂತ್ರ||** ಬಳಿಕ ತಾಪತ್ರಯಕ್ಕೆ ಲಕ್ಷಣವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಆಧ್ಯಾತ್ಮಿಕಂ ದ್ವಿಧಾ ಪ್ರೋಕ್ತಂ ಬಾಹ್ಯಾಭ್ಯಂತರಭೇದತಃ ।**
**ವಾತಪಿತ್ತಾದಿಜಂ ದುಃಖಂ ಬಾಹ್ಯಮಾಧ್ಯಾತ್ಮಿಕಂ ಮತಮ್ ॥**

**ರಾಗದ್ವೇಷಾದಿ ಸಂಪನ್ನಮಾಂತರಂ ಪರೀಕೀರ್ತ್ಯತೇ ।**
**ಆಧಿಭೌತಿಕಮೇತದ್ಧಿ ದುಃಖಂ ರಾಜಾದಿಭೂತಜಮ್ ।**
**ಆಧಿದೈವಿಕಮಾಖ್ಯಾತಂ ಗ್ರಹಯಕ್ಷಾದಿ ಸಂಭವಮ್ ॥**

**ಟೀಕು||** ಆಧ್ಯಾತ್ಮಿಕಂ=ಆಧ್ಯಾತ್ಮಿಕವೆಂಬ ತಾಪವು, ಬಾಹ್ಯಾಭ್ಯಂತರಭೇದತಃ=ಹೊರಗೊಳಗೆಂಬ ಭೇದದದೆಸೆಯಿಂದೆ, ದ್ವಿಧಾ=ಎರಡು ಪ್ರಕಾರವಾಗಿ, ಪ್ರೋಕ್ತಂ=ಹೇಳಲುಪಟ್ಟಿತ್ತು. ವಾತಪಿತ್ತಾದಿಜಂ ದುಃಖಂ=ವಾತಪಿತ್ತಶ್ಲೇಷ್ಮದಿಂದೆ ಹುಟ್ಟಿದ ದುಃಖವು, ಬಾಹ್ಯಂ ಆಧ್ಯಾತ್ಮಿಕಂ=ಹೊರಗಣ ಆಧ್ಯಾತ್ಮಿಕ ತಾಪವೆಂದು, ಮತಂ=ಸಂಮತವು. ರಾಗದ್ವೇಷಾದಿ ಸಂಪನ್ನಂ ದುಃಖಂ=ಕಾಮಕ್ರೋಧಾದಿ

ಷಡ್ವಿಷಯಂಗಳಿಂದೆ ಹುಟ್ಟಿದ ದುಃಖವು, ಆಂತರಂ ಆಧ್ಯಾತ್ಮಿಕಂ=ಒಳಗಣ ಆಧ್ಯಾತ್ಮಿಕ ತಾಪವೆಂದು, ಪರಿಕೀರ್ತ್ಯತೇ=ಹೇಳಲುಪಡುತ್ತಿರ್ದ್ದಪುದು. ರಾಜಾದಿಭೂತಜಂ ಏತತ್ ದುಃಖಂ= ರಾಜಚೋರಗಜದೀರ್ಘೋರಗಾದಿ ಪ್ರಾಣಿಗಳಿಂದೆ ಹುಟ್ಟಿದ ಈ ದುಃಖವು, ಆಧಿಭೌತಿಕಂ=ಆಧಿಭೌತಿಕ ತಾಪವೆಂದು, ಹಿ=ಪ್ರಸಿದ್ಧವು. ಗ್ರಹಯಕ್ಷಾದಿಸಂಭವಂ ದುಃಖಂ=ಗ್ರಹ ಯಕ್ಷಭೂತವೇತಾಳಾದಿಗಳಿಂದೆ ಹುಟ್ಟಿದ ದುಃಖವು, ಆಧಿದೈವಿಕಂ=ಆಧಿದೈವಿಕ ತಾಪವೆಂದು, ಆಖ್ಯಾತಂ=ಹೇಳಲುಪಟ್ಟಿತ್ತು. ॥೬೫॥

**ಸೂತ್ರ॥** ಬಳಿಕ ತಾಪತ್ರಯದೊಡನೆ ಕೂಡಿದ ಜೀವರಿಗೆ ಯಾವಲ್ಲಿಯೂ ಸುಖವಿಲ್ಲೆಂದು ಹೇಳುತ್ತಿರ್ದ್ದಪಂ.

ಗ್ರಂಥ॥
**ದುಃಖೈರೇತೈರುಪೇತಸ್ಯ ಕರ್ಮಬದ್ಧಸ್ಯ ದೇಹಿನಃ ।**
**ಸ್ವರ್ಗೇ ವಾ ಯದಿ ವಾ ಭೂಮೌ ಸುಖಲೇಶೋ ನ ವಿದ್ಯತೇ ॥**

**ಟೀಕು॥** ಏತೈಃ ದುಃಖೈಃ=ಈ ತಾಪತ್ರಯಾತ್ಮಕವಾದ ದುಃಖಂಗಳಿಂದೆ, ಉಪೇತಸ್ಯ=ಕೂಡಿರ್ದ್ದ, ಕರ್ಮಬದ್ಧಸ್ಯ=ಕರ್ಮಪಾಶದಿಂದೆ ಕಟ್ಟಲುಪಟ್ಟ, ದೇಹಿನಃ=ದೇಹಿಗೆ, ಸ್ವರ್ಗೇ ವಾ= ಸ್ವರ್ಗಲೋಕದಲ್ಲಿಯಾದರೂ, ಯದಿ ವಾ=ಅಹಗಲ್ಲವೆ, ಭೂಮೌ=ಭೂಲೋಕದಲ್ಲಿಯಾದರೂ ಸುಖಲೇಶಃ=ಅಲ್ಪಸುಖವು, ನ ವಿದ್ಯತೇ=ಉಂಟಾಗುತ್ತಿರದು. ॥೬೬॥

**ಸೂತ್ರ॥** ಬಳಿಕ ರಾಜ್ಯಸಂಪತ್ತಿಗಳಿಂದೆ ಸುಖವಿಲ್ಲವೆಯೆಂದರೆ ಆ ರಾಜ್ಯಸಂಪತ್ತಿಗಳು ಸ್ಥಿರವಲ್ಲವೆಂದು ದೃಷ್ಟಾಂತಪೂರ್ವಕವಾಗಿ ಹೇಳುತ್ತಿರ್ದ್ದಪಂ.

ಗ್ರಂಥ॥
**ತಟಿತ್ಸು ವೀಚಿಮಾಲಾಸು ಪ್ರದೀಪಸ್ಯ ಪ್ರಭಾಸು ಚ ।**
**ಸಂಪತ್ಸು ಕರ್ಮಮೂಲಾಸು ಕಸ್ಯ ವಾ ಸ್ಥಿರತಾಮತಿಃ ॥**

**ಟೀಕು॥** ತಟಿತ್ಸು=ಮಿಂಚಿನ ಬಳ್ಳಿಗಳಲ್ಲಿ, ವೀಚಿಮಾಲಾಸು=ತೆರೆಗಳ ಸಾಲುಗಳಲ್ಲಿ, ಪ್ರದೀಪಸ್ಯ ಪ್ರಭಾಸು ಚ=ದೀಪದ ಶಿಖಿಗಳಲ್ಲಿ, ತದ್ವತ್=ಅವರೋಪಾದಿಯಾಗಿರ್ದ್ದ, ಕರ್ಮಮೂಲಾಸು ಸಂಪತ್ಸು ವಾ=ಪ್ರಾರಬ್ಧ ಕರ್ಮವೆ ಮೂಲಕಾರಣವುಳ್ಳ ಸಂಪತ್ತಿಗಳಲ್ಲಿಯಾಯಿತ್ತಾದೊಡೆಯು, ಕಸ್ಯ=ಆವಾತಂಗೆ, ಸ್ಥಿರತಾಮತಿಃ=ಸ್ಥಿರವಾದ ಬುದ್ಧಿಯು? ಆರಿಗೂ ಸ್ಥಿರವಿಲ್ಲವೆಂಬುದರ್ಥ. ॥೬೭॥

**ಸೂತ್ರ॥** "ಭಗವನ್ ಅಸ್ಥಿಚರ್ಮಸ್ನಾಯುಮಜ್ಜಾಮಾಂಸಶುಕ್ಲಶೋಣಿತಶ್ಲೇಷ್ಮಾ ಶ್ರುಮಾಷಿತಾ

ವಿಣ್ಮೂತ್ರವಾತಪಿತ್ತಕಫಸಂಘಾತೇ ದುರ್ಗಂಧೇ ನಿಃಸಾರೇಽಸ್ಮಿನ್ ಶರೀರೇ ಕಿಂ ಕಾಮೋಪಭೋಗೈಃ" ಯೆಂಬುದು ಮೊದಲಾದ ಮೈತ್ರೇಯೋಪನಿಷದರ್ಥವನು ಪ್ರಕಾಶಿಸುತ್ತಿರ್ದ್ದ ಶರೀರ ಹೇಯವನು ಚತುಸ್ಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಮಲಕೋಶೇ ಶರೀರೇಽಸ್ಮಿನ್ ಮಹಾದುಃಖವಿವರ್ಧನೇ ।**
**ತಟಿದಂಕುರಸಂಕಾಶೇ ಕೋ ವಾ ರುಚ್ಯೇತ ಪಂಡಿತಃ ॥**

**ಟೀಕು||** ಮಲಕೋಶೇ=ಮಲಮೂತ್ರಾದಿಗಳಿಗಾಶ್ರಯವಾಗಿ, ಮಹಾದುಃಖವಿವರ್ಧನೇ=ತಾಪತ್ರಯ ಪಂಚಕೋಶಮಯವಾದ, ತಟಿದಂಕುರಸಂಕಾಶೇ=ಮಿಂಚಿನಮೊಳಕೆಗೆ ಸಮಾನವಾಗಿರ್ದ್ದಂಥಾ, ಅಸ್ಮಿನ್ ಶರೀರೇ= ಈ ಶರೀರದಲ್ಲಿ, ಕೋ ವಾ ಪಂಡಿತಃ=ಆವ ವಿದ್ವಾಂಸನು, ರುಚ್ಯೇತ=ಪ್ರೀತಿ ಮಾಡುವನು? ಆವಾತನೂ ಪ್ರೀತಿಯಮಾಡನೆಂಬುದರ್ಥ. ||೬೮||

**ಗ್ರಂಥ||** **ನಿತ್ಯಾನಂದಚಿದಾಕಾರಮಾತ್ಮತತ್ತ್ವಂ ವಿಹಾಯ ಕಃ ।**
**ವಿವೇಕೀ ರಮತೇ ದೇಹೇ ನಶ್ವರೇ ದುಃಖಭಾಜನೇ ॥**

**ಟೀಕು||** ನಿತ್ಯಾನಂದಚಿದಾಕಾರಂ=ನಿತ್ಯಪರಿಪೂರ್ಣಸಚ್ಚಿದಾನಂದಾತ್ಮಕವಾದ, ಆತ್ಮತತ್ತ್ವಂ= ಆತ್ಮತತ್ತ್ವವನು, ವಿಹಾಯ=ಬಿಟ್ಟು, ನಶ್ವರೇ=ಕೆಡುವ ಶೀಲವುಳ್ಳ, ದುಃಖಭಾಜನೇ=ಸಕಲ ದುಃಖಂಗಳಿಗೆ ಪಾತ್ರೆಯಾಗಿರ್ದ್ದ, ದೇಹೇ=ಶರೀರದಲ್ಲಿ, ಕಃ ವಿವೇಕೀ=ಆವ ವಿವೇಕಿಯು, ರಮತೇ= ಕ್ರೀಡಿಸುತ್ತಿರ್ದ್ದಪನು? ಆವಾತನು ಕ್ರೀಡಿಸಲಿಲ್ಲವೆಂಬುದರ್ಥ. ||೬೯||

**ಗ್ರಂಥ||** **ವಿವೇಕೀ ಶುದ್ಧಹೃದಯಃ ನಿಶ್ಚಿತಾತ್ಮಸುಖೋದಯಃ ।**
**ದುಃಖಹೇತೌ ಶರೀರೇಽಸ್ಮಿನ್ ಕಲತ್ರೇ ಚ ಸುತೇಷು ಚ ॥**

**ಸುಹೃತ್ಸು ಬಂಧುವರ್ಗೇಷು ಧನೇಷು ಕುಲಪದ್ಧತೌ ।**
**ಅನಿತ್ಯಬುದ್ಧ್ಯಾ ಸರ್ವತ್ರ ವೈರಾಗ್ಯಂ ಪರಮಶ್ನುತೇ ॥**

**ಟೀಕು||** ಶುದ್ಧಹೃದಯಃ=ನಿರ್ಮಲವಾದ ಮನಸ್ಸುಳ್ಳ, ನಿಶ್ಚಿತಾತ್ಮಸುಖೋದಯಃ=ಶ್ರುತಿಗುರು ಸ್ವಾನುಭವಂಗಳಿಂದೆ ನಿಶ್ಚೈಸಲುಪಟ್ಟ ಮಹಾತ್ಮನಿಂದಲಾದ ಪರಮಸುಖವುಳ್ಳ, ವಿವೇಕೀ=ವಿವೇಕಿಯು, ದುಃಖಹೇತೌ=ಸರ್ವದುಃಖಂಗಳಿಗೆ ಕಾರಣವಾಗಿರ್ದ್ದ, ಅಸ್ಮಿನ್ ಶರೀರೇ=ಈ ದೇಹದಲ್ಲಿ,

ಕಲತ್ರೇ=ಸ್ತ್ರೀಯರಲ್ಲಿ, ಸುತೇಷು ಚ=ಪುತ್ರರಲ್ಲಿ, ಸುಹೃತ್ಸು=ಮಿತ್ರರಲ್ಲಿ, ಬಂಧುವರ್ಗೇಷು=ಬಾಂಧವರ ಸಮೂಹದಲ್ಲಿ, ಕುಲಪದ್ಧತೌ=ಕುಲಕ್ರಮದಲ್ಲಿ, ಧನೇಷು=ದ್ರವ್ಯಂಗಳಲ್ಲಿ, ಸರ್ವತ್ರ ಚ=ಉಳಿದ ಎಲ್ಲಾ ಎಡೆಯಲ್ಲಿಯೂ, ಅನಿತ್ಯಬುದ್ಧ್ಯಾ=ಅನಿತ್ಯವೆಂಬ ಬುದ್ಧಿಯಿಂದೆ, ಪರಂ ವೈರಾಗ್ಯಂ=ಮಹಾ ವೈರಾಗ್ಯವನು, ಅಶ್ನುತೇ=ಆಶ್ರೈಸುತ್ತಿರ್ದ್ದಪನು. ॥೭೦॥

**ಸೂತ್ರ॥** ಬಳಿಕ ಆ ವೈರಾಗ್ಯಸಂಪನ್ನನಿಗೆ ಸಂಸಾರ ಹೇಯವಹುದೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥**

**ವಿವೇಕಿನೋ ವಿರಕ್ತಸ್ಯ ವಿಷಯೇಷ್ವಾತ್ಮರಾಗಿಣಃ ।**
**ಸಂಸಾರದುಃಖವಿಚ್ಛೇದಹೇತೌ ಬುದ್ಧಿಃ ಪ್ರವರ್ತತೇ ॥**

**ಟೀಕು॥** ವಿಷಯೇಷು=ಶಬ್ದಸ್ಪರ್ಶಾದಿ ವಿಷಯಂಗಳಲ್ಲಿ, ವಿರಕ್ತಸ್ಯ=ವಿರಕ್ತನಾಗಿರ್ದ್ದ, ಆತ್ಮರಾಗಿಣಃ=ಮಹಾತ್ಮನಲ್ಲಿಯಪ್ರತಿಯುಳ್ಳ, ವಿವೇಕಿನಃ=ಶರೀರಾತ್ಮವಿವೇಕವುಳ್ಳ ಪಿಂಡಜ್ಞಾನಿಗೆ, ಸಂಸಾರದುಃಖವಿಚ್ಛೇದಹೇತೌ=ಸಂಸಾರದುಃಖವನು ಛೇದಿಸುವ ಕಾರಣದಲ್ಲಿ, ಬುದ್ಧಿಃ=ಬುದ್ಧಿಯು, ಪ್ರವರ್ತತೇ=ವರ್ತಿಸುತ್ತಿರ್ದ್ದಪುದು. ॥೭೨॥

**ಸೂತ್ರ॥** ಬಳಿಕ ಪಿಂಡ ಪಿಂಡಜ್ಞಾನದ ಅರ್ಥವನು ಗರ್ಭೀಕರಿಸಿಕೊಂಡು ಸಂಸಾರಹೇಯ ಸ್ಥಲವನು ಸಮಾಪ್ತಿಯಂ ಮಾಡುತ್ತಿರ್ದ್ದಪಂ.

**ವೃತ್ತ॥**

**ನಿತ್ಯಾನಿತ್ಯವಿವೇಕಿನಃ ಸುಕೃತಿನಃ ಶುದ್ಧಾಶಯಸ್ಯಾತ್ಮನೋ**
**ಬ್ರಹ್ಮೋಪೇಂದ್ರಮಹೇಂದ್ರಮುಖ್ಯವಿಭವೇಷ್ವಸ್ಥಾಯಿತಾಂ ಪಶ್ಯತಃ ।**
**ನಿತ್ಯಾನಂದಪದೇ ನಿರಾಕೃತಜಗತ್ಸಂಸಾರದುಃಖೋದಯೇ**
**ಸಾಂಬೇ ಚಂದ್ರಶಿಖಾಮಣೌ ಸಮುದಯೇದ್ಭಕ್ತಿರ್ಭವಧ್ವಂಸಿನಿ ॥**

**ಟೀಕು॥** ಸುಕೃತಿನಃ=ಪುಣ್ಯಕರ್ಮಫಲವುಳ್ಳ, ಶುದ್ಧಾಶಯಸ್ಯ=ನಿರ್ಮಲವಾದ ಅಂತಃಕರಣವುಳ್ಳ, ಆತ್ಮನಃ=ಪಿಂಡಶಬ್ದವಾಚ್ಯನಾಗಿರ್ದ್ದ, ನಿತ್ಯಾನಿತ್ಯವಿವೇಕಿನಃ=ನಿತ್ಯವಾದಾತ್ಮ ಅನಿತ್ಯವಾದ ಶರೀರದ ವಿವೇಕವುಳ್ಳ ಪಿಂಡಜ್ಞಾನಿಯಾಗಿರ್ದ್ದ, ಬ್ರಹ್ಮೋಪೇಂದ್ರಮಹೇಂದ್ರಮುಖ್ಯ ವಿಭವೇಷು=ಬ್ರಹ್ಮವಿಷ್ಣು ದೇವೇಂದ್ರರೇ ಮುಖ್ಯವಾದ ಸಮಸ್ತ ದೇವತೆಗಳ ಸಂಪತ್ತಿಯಲ್ಲಿಯ, ಅಸ್ಥಾಯಿತಾಮಪಿ= ಕ್ಷಣಿಕತ್ವವನಾಯಿತ್ತಾದೊಡೆ, ಪಶ್ಯತಃ=ಕಾಣುತ್ತಿರ್ದ್ದ ಸಂಸಾರಹೇಯವುಳ್ಳ ಆತನಿಗೆ, ನಿತ್ಯಾನಂದಪದೇ=ನಿತ್ಯಪರಿಪೂರ್ಣ ಸಚ್ಚಿದಾನಂದಕ್ಕೆ ಆಶ್ರಯವಾಗಿರ್ದ್ದ, ನಿರಾಕೃತಜಗತ್ಸಂಸಾರ

ದುಃಖೋದಯೇ=ನಿರಾಕರಿಸಲುಪಟ್ಟ ಜಗತ್ತಿನಲ್ಲಿಯ ಸಂಸಾರದುಃಖೋದಯವುಳ್ಳ, ಸಾಂಬೇ=ಪಾರ್ವತಿಯೊಡನೆ ಕೂಡಿವರ್ತಿಸುತ್ತಿರ್ದ್ದ, ಚಂದ್ರಶಿಖಾಮಣೌ=ಚಂದ್ರಶೇಖರನಾದ ಶಿವನಲ್ಲಿ, ಭವಧ್ವಂಸಿನಿ ಸತಿ=ಸಂಸಾರನಾಶವನು ಮಾಡುತ್ತಿರ್ದ್ದದಾಗುತ್ತಲು, ಭಕ್ತಿಃ=ಭಕ್ತಿಯ, ಸಮುದಯೇತ್= ಪ್ರಕಾಶಿಸುವುದು. ||೭೩||

**ಇತಿ ಸಂಸಾರಹೇಯಸ್ಥಲಮ್**

**ಇತಿ ಶ್ರೀ ರೇಣುಕಾಗಸ್ತ್ಯ ಸಂವಾದೇ ಶ್ರೀ ವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಭಕ್ತಸ್ಥಲೇ ಪಿಂಡಜ್ಞಾನ ಸಂಸಾರಹೇಯಸ್ಥಲ ಪ್ರಸಂಗೋ ನಾಮ ಪಂಚಮಃ ಪರಿಚ್ಛೇದಃ ಸಮಾಪ್ತಃ ।**

# ೪. ಭಕ್ತಸ್ಥಲೇ ಗುರುಕಾರುಣ್ಯಸ್ಥಲಮ್

**ಶ್ರೀ ರೇಣುಕ ಉವಾಚ**

**ಸೂತ್ರ॥** "ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಮ್" ಯೆಂಬ ಮುಂಡಕೋಪನಿಷದರ್ಥವನು ಪ್ರಕಾಶಿಸುತ್ತ ಪೂರ್ವೋಕ್ತ ಪಿಂಡ ಪಿಂಡಜ್ಞಾನ ಸಂಸಾರಹೇಯಸ್ಥಲ ಸಂಪನ್ನನಾದಾತನು ಸಂಸಾರನಾಶವಮಾಡುವ ಮಹಾಲಿಂಗವನರಿ[ವ] ವಿದ್ಯೆಯುಳ್ಳವನಾಗಿ ಶ್ರೀ ಗುರುವನುಯೆಯ್ದುತ್ತಿರ್ದ್ದಪನೆಂದು ಗುರುಕರುಣಸ್ಥಲವನು ರೇಣುಕಗಣೇಶ್ವರನು ಅಗಸ್ತ್ಯಮುನಿಗೋಸುಗ ನಿರೂಪಿಸುತ್ತಿರ್ದ್ದಪಂ.

**ಗ್ರಂಥ॥**

ತತೋ ವಿವೇಕಸಂಪನ್ನೋ ವಿರಾಗೀ ಶುದ್ಧಮಾನಸಃ ।
ಜಿಜ್ಞಾಸುಸ್ಸರ್ವಸಂಸಾರದೋಷಧ್ವಂಸಕರಂ ಶಿವಮ್ ॥

ಉಪೈತಿ ಲೋಕವಿಖ್ಯಾತಂ ಲೋಭಮೋಹವಿವರ್ಜಿತಮ್ ।
ಆತ್ಮತತ್ತ್ವವಿಚಾರಜ್ಞಂ ವಿಮುಕ್ತವಿಷಯಭ್ರಮಮ್ ॥

ಶಿವಸಿದ್ಧಾಂತತತ್ತ್ವಜ್ಞಂ ಛಿನ್ನಸಂದೇಹವಿಭ್ರಮಮ್ ।
ಸರ್ವತಂತ್ರಪ್ರಯೋಗಜ್ಞಂ ಧಾರ್ಮಿಕಂ ಸತ್ಯವಾದಿನಮ್ ॥

ಕುಲಕ್ರಮಾಗತಾಚಾರಂ ಕುಮಾರ್ಗಾಚಾರವರ್ಜಿತಮ್ ।
ಶಿವಧ್ಯಾನಪರಂ ಶಾಂತಂ ಶಿವತತ್ತ್ವವಿವೇಕಿನಮ್ ॥

ಭಸ್ಮೋದ್ಧೂಲನನಿಷ್ಣಾತಂ ಭಸ್ಮತತ್ತ್ವವಿವೇಕಿನಮ್ ।
ತ್ರಿಪುಂಡ್ರಧಾರಣೋತ್ಕಂಠಂ ಧೃತರುದ್ರಾಕ್ಷಮಾಲಿಕಮ್ ॥

ಲಿಂಗಧಾರಣಸಂಯುಕ್ತಂ ಲಿಂಗಪೂಜಾಪರಾಯಣಮ್ ।
ಲಿಂಗಾಂಗಯೋಗತತ್ತ್ವಜ್ಞಂ ನಿರೂಢಾದ್ವೈತವಾಸನಮ್ ।
ಲಿಂಗಾಂಗಸ್ಥಲಭೇದಜ್ಞಂ ಶ್ರೀಗುರುಂ ಶಿವವಾದಿನಮ್ ॥

**ಟೀಕು॥** ತತಃ=ಸಂಸಾರಸ್ಥಲವನು ಹೇಳಿದ ಅನಂತರದಲ್ಲಿ, ಶುದ್ಧಮಾನಸಃ= ನಿರ್ಮಲಾಂತಃ ಕರಣವುಳ್ಳ ಪಿಂಡಶಬ್ದವಾಚ್ಯನಾಗಿ, ವಿವೇಕಸಂಪನ್ನಃ=ಶರೀರಾತ್ಮವಿವೇಕ ರೂಪವಾದ ಪಿಂಡಜ್ಞಾನ ಸಂಪನ್ನನಾಗಿ, ವಿರಾಗೀ=ಕ್ಷಣಿಕವಾದ ಸಂಸಾರಸುಖದಲ್ಲಿ ವಿರಕ್ತನಾಗಿ ಸಂಸಾರಹೇಯವುಳ್ಳ ಆತನು,

ಸರ್ವಸಂಸಾರದೋಷಧ್ವಂಸಕರಂ=ಸಮಸ್ತ ಸಂಸಾರದೋಷವನು ವಿನಾಶವ ಮಾಡುತ್ತಿರ್ದ್ದ, ಶಿವಂ=ಪರಬ್ರಹ್ಮಪರಶಿವವಾಚ್ಯವಾದ ಮಹಾಲಿಂಗವನು, ಜಿಜ್ಞಾಸುಃ ಸನ್=ಅರಿಯಲಿಚ್ಛೆ ಯುಳ್ಳಾತನಾಗುತಲು, ಶ್ರೀಗುರುಂ ಶಿವವಾದಿನಂ=ಮಹಾಲಿಂಗ ಸ್ವರೂಪವನು ಹೇಳುತ್ತಿರ್ದ್ದ ಶ್ರೀಗುರುಸ್ವಾಮಿಯನು, ಉಪೈತಿ=ಬಳಿವಿಡಿದುಯೆಯ್ದುತ್ತಿರ್ದ್ದಪನು. ಆ ಶ್ರೀ ಗುರು ಸ್ವರೂಪವನು ಪಂಚಸೂತ್ರಂಗಳಿಂದೆ ಪ್ರಕಟಿಸುತ್ತಿರ್ದ್ದಪಂ.

ಲೋಕವಿಖ್ಯಾತಂ=ಲೋಕದಲ್ಲಿ ಪ್ರಸಿದ್ಧವಾಗಿರ್ದ್ದ, ಲೋಭಮೋಹವಿವರ್ಜಿತಂ= ಲೋಭಮೋಹಂಗಳಿಲ್ಲದೆ ಬಿಡಲುಪಟ್ಟ, ಆತ್ಮತತ್ತ್ವವಿಚಾರಜ್ಞಂ=ಆತ್ಮತತ್ತ್ವದ ವಿಚಾರವನು ಬಲ್ಲ, ವಿಮುಕ್ತವಿಷಯಭ್ರಮಂ=ಬಿಡಲುಪಟ್ಟ ವಿಷಯಭ್ರಾಂತಿಯುಳ್ಳ, ಶಿವಸಿದ್ಧಾಂತ ತತ್ತ್ವಜ್ಞಂ=ಶಿವಾಗ ಮೋಕ್ತವಾದ ತತ್ತ್ವ ಸ್ವರೂಪವನು ಅರಿವುತ್ತಿರ್ದ್ದ, ಛಿನ್ನ ಸಂದೇಹವಿಭ್ರಮಂ=ಹರಿಯಲುಪಟ್ಟ ಸಮಸ್ತ ಸಂದೇಹ ಭ್ರಾಂತಿಯುಳ್ಳ, ಸರ್ವತಂತ್ರ ಪ್ರಯೋಗಜ್ಞಂ=ಸಕಲ ಶಿವಾಗಮಂಗಳ ಪ್ರಯೋಗವನು ಬಲ್ಲ, ಧಾರ್ಮಿಕಂ ಸತ್ಯವಾದಿನಂ=[ಧರ್ಮನಿ]ಷ್ಠನಾಗಿ ಸತ್ಯವನು ನುಡಿವುತ್ತಿರ್ದ್ದ, ಕುಲಕ್ರಮಾಗತಾ ಚಾರಂ=ಗುರುವಂಶಕ್ರಮದಿಂದೆ ಬಂದ ಸದಾಚಾರವುಳ್ಳ, ಕುಮಾರ್ಗಾಚಾರವರ್ಜಿತಂ=ದುರ್ಮಾರ್ಗ ವಾದ ನೀಚಾಚಾರದಿಂದೆ ಬಿಡಲುಪಟ್ಟ, ಶಿವಧ್ಯಾನಪರಂ ಶಾಂತಂ=ಶಿವಧ್ಯಾನದಲ್ಲಿ ತತ್ಪರನಾಗಿ ರಾಗದ್ವೇಷರಹಿತನಾಗಿರ್ದ್ದ, ಶಿವತತ್ತ್ವವಿವೇಕಿನಂ=ಶಿವತತ್ತ್ವದ ವಿವೇಕವುಳ್ಳ, ಭಸ್ಮೋದ್ಧೂಲನ ನಿಷ್ಣಾತಂ=ಭಸ್ಮೋದ್ಧೂಳನದಲ್ಲಿ ಕುಶಲನಾಗಿರ್ದ್ದ, ಭಸ್ಮತತ್ತ್ವವಿವೇಕಿನಂ= ಭಸ್ಮತತ್ತ್ವದ ವಿವೇಕವುಳ್ಳ, ತ್ರಿಪುಂಡ್ರಧಾರಣೋತ್ಕಂಠಂ=ತ್ರಿಪುಂಡ್ರವನು ಧರಿಸುವಲ್ಲಿ ಲವಲವಿಕೆಯುಳ್ಳ, ಧೃತರುದ್ರಾಕ್ಷ ಮಾಲಿಕಂ=ಧರಿಸಲುಪಟ್ಟ ರುದ್ರಾಕ್ಷೆಯ ಮಾಲೆಯುಳ್ಳ, ಲಿಂಗಧಾರಣ ಸಂಯುಕ್ತಂ=ಬಾಹ್ಯಾಂತರ್ಗತ ವಾದ ಲಿಂಗಧಾರಣೆಯೊಡನೆ ಕೂಡಿರ್ದ್ದ, ಲಿಂಗಪೂಜಾಪರಾಯಣಂ=ಬಾಹ್ಯಾಂತರ್ಗತವಾದ ಶಿವಲಿಂಗಪೂಜೆಯಲ್ಲಿ ತತ್ಪರನಾಗಿರ್ದ್ದ, ಲಿಂಗಾಂಗಯೋಗ ತತ್ತ್ವಜ್ಞಂ=ಲಿಂಗಾಂಗಸ್ವರೂಪರಾದ ಶಿವಾತ್ಮರ ಯೋಗತತ್ತ್ವವನರಿವುತ್ತಿರ್ದ್ದ, ನಿರೂಢಾದ್ವೈತವಾಸನಂ=ಹುಟ್ಟುತ್ತಿರ್ದ್ದ ಶಿವಾದ್ವೈತದ ವಾಸನೆಯುಳ್ಳ, ಲಿಂಗಾಂಗಸ್ಥಲಭೇದಜ್ಞಂ=೫೭ ಲಿಂಗಸ್ಥಲ, ೪೪ ಅಂಗಸ್ಥಲಂಗಳ ಭೇದವನು ಅರಿವುತ್ತಿರ್ದ್ದ, ಶಿವವಾದಿನಂ=ಶಿವಶಬ್ದವಾಚ್ಯವಾದ ಮಹಾಲಿಂಗವನು ಸಾಕ್ಷಾತ್ಕರಿಸಿ ಉಪದೇಶವ ಮಾಡುತ್ತಿರ್ದ್ದ ಶ್ರೀಗುರುಸ್ವಾಮಿಯನು, ಉಪೈತಿ=ಸಂಸಾರಹೇಯವುಳ್ಳಪ[ಟ್ಟ] ಶಿಷ್ಯನು ಎಯ್ದುತ್ತಿರ್ದ್ದಪಂ. ||೬||

**ಸೂತ್ರ||** ಬಳಿಕ ಗುರುಸೇವೆಯನು ಹೇಳುತ್ತಿರ್ದ್ದಪಂ.

**ಗ್ರಂಥ||** **ಸೇವೇತ ಪರಮಾಚಾರ್ಯಂ ಶಿಷ್ಯೋ ಭಕ್ತಿಭಯಾನ್ವಿತಃ |**
**ಷಣ್ಮಾಸಾನ್ವತ್ಸರಂ ವಾಽಪಿ ಯಾವದೇಷ ಪ್ರಸೀದತಿ ||**

**ಟೀಕು||** ಭಕ್ತಿಭಯಾನ್ವಿತಃ=ಭಯಭಕ್ತಿಯೊಡನೆ ಕೂಡಿರ್ದ್ದ ಶಿಷ್ಯನು, ಷಣ್ಮಾಸಾನಪಿ=ಆರು ತಿಂಗಳನಾದಡು, ವತ್ಸರಃ ವಾ=ಒಂದು ವರುಷವನಾದರು, ಯಾವತ್=ಎಲ್ಲಿಯ ಪರಿಯಂತರವಾಗಿ,

ಏಷಃ=ಈ ಆಚಾರ್ಯನು, ಪ್ರಸೀದತಿ=ಪ್ರಸನ್ನನಾಗುತ್ತಿರ್ದಪನು, ತಾವತ್=ಅಿನ್ನಬರಂ, ಪರಮಾಚಾರ್ಯಂ=ಆ ಮಹಾಗುರುಸ್ವಾಮಿಯನು, ಸೇವೇತ=ಆಪ್ತಸ್ಥಾನಾಂಗ ಸದ್ಭಾವಂಗಳಿಂದೆ ಸೇವೆಯನು ಮಾಡುವುದು. ॥೭॥

**ಸೂತ್ರ॥** ಬಳಿಕ ಪ್ರಸನ್ನನಾದ ಶ್ರೀ ಗುರುಸ್ವಾಮಿಗೆ ಮಾಡುವ ಬಿನ್ನಹವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಪ್ರಸನ್ನಂ ಪರಮಾಚಾರ್ಯಂ ಭಕ್ತ್ಯಾ ಮುಕ್ತಿಪ್ರದರ್ಶಕಮ್ ।**
**ಪ್ರಾರ್ಥಯೇದಗ್ರತಶ್ಶಿಷ್ಯಃ ಪ್ರಾಂಜಲಿರ್ವಿನಯಾನ್ವಿತಃ ॥**

**ಭೋ ಕಲ್ಯಾಣ ಮಹಾಭಾಗ ಶಿವಜ್ಞಾನಮಹೋದಧೇ ।**
**ಆಚಾರ್ಯವರ್ಯ ಸಂಪ್ರಾಪ್ತಂ ರಕ್ಷ ಮಾಂ ಭವರೋಗಿಣಮ್ ॥**

**ಟೀಕು॥** ಪ್ರಸನ್ನಂ=ಪ್ರಸನ್ನನಾಗಿ, ಮುಕ್ತಿಪ್ರದರ್ಶಕಂ=ಪರಾಪರಮೋಕ್ಷವನು ತೋರಿಸುತ್ತಿರ್ದ, ಪರಮಾಚಾರ್ಯಂ=ಮಹಾಗುರುವನು, ವಿನಯಾನ್ವಿತಂ=ಭಯಭಕ್ತಿಯೊಡನೆ ಕೂಡಿರ್ದ, ಶಿಷ್ಯಃ= ಶಿಷ್ಯನು, ಪ್ರಾಂಜಲಿಃಸನ್=ಕೈಮುಗಿದುಕೊಂಡಿರ್ದಾತನಾಗುತಲು, ಅಗ್ರತಃ=ಮುಂದುಗಡೆಯಲ್ಲಿ, ಪ್ರಾರ್ಥಯೇತ್=ಬೇಡಿಕೊಂಬುದು. ಏನೆಂದುಯೆಂದಡೆ ಹೇಳುತ್ತಿರ್ದಪಂ. ಕಲ್ಯಾಣ=ಮಂಗಲ ಸ್ವರೂಪವಾಗಿರ್ದ, ಮಹಾಭಾಗ=ಶ್ರೇಷ್ಠನಾಗಿರ್ದ, ಶಿವಜ್ಞಾನಮಹೋದಧೇ=ಶಿವಜ್ಞಾನಕ್ಕೆ ಸಮುದ್ರಸ್ಥಾನನಾಗಿರ್ದ, ಭೋ ಆಚಾರ್ಯವರ್ಯ=ಎಲೈ ಗುರೂತ್ತಮನೆ! ಭವರೋಗಿಣಂ= ಸಂಸಾರರೋಗ ಉಳ್ಳಾತನಾಗಿ, ಸಂಪ್ರಾಪ್ತಂ=ಬಂದಿರ್ದ, ಮಾಂ=ಎನ್ನನು, ರಕ್ಷ=ರಕ್ಷಿಸು. ॥೯॥

**ಸೂತ್ರ॥** ಬಳಿಕ ಆಚಾರ್ಯನು ಶಿಷ್ಯನಿಗೆ ದೀಕ್ಷೆಯ ಮಾಡುವ ಕ್ರಮವನು ಹೇಳುತ್ತಿರ್ದಪಂ.

ಗ್ರಂಥ॥ **ಇತಿ ಶುದ್ಧೇನ ಶಿಷ್ಯೇಣ ಪ್ರಾರ್ಥಿತಃ ಪರಮೋ ಗುರುಃ ।**
**ಶಕ್ತಿಪಾತಂ ಸಮಾಲೋಕ್ಯ ದೀಕ್ಷಯಾ ಯೋಜಯೇದಮುಮ್ ॥**

**ಟೀಕು॥** ಇತಿ=ಈ ಪ್ರಕಾರದಿಂದೆ, ಶುದ್ಧೇನ ಶಿಷ್ಯೇಣ=ಶುದ್ಧಾತ್ಮನಾದ ಶಿಷ್ಯನಿಂದೆ, ಪ್ರಾರ್ಥಿತಃ= ಬೇಡಿಕೊಳಲುಪಟ್ಟ, ಪರಮೋ ಗುರುಃ=ಮಹಾಗುರುನಾಥನು, ಶಕ್ತಿಪಾತಂ= ಪ್ರತಿವ್ರತಾದಿ ಶಕ್ತಿಪಾತವನು, ಸಮಾಲೋಕ್ಯ=ನೋಡಿ, ಅಮುಂ=ಈ ಶಿಷ್ಯನನು, ದೀಕ್ಷಯಾ=ಶಿವದೀಕ್ಷೆಯೊಡನೆ, ಯೋಜಯೇತ್=ಕೂಡುವುದು. ॥೧೦॥

**ಸೂತ್ರ॥** ಬಳಿಕ 'ದಾ-ದಾನೇ ಕ್ಷಿ-ಕ್ಷಯೇ' ಯೆಂಬ ಎರಡು ಧಾತುಗಳಿಂದೆ ದೀಕ್ಷಾ ಶಬ್ದಕ್ಕೆ ನಿರುಕ್ತಿಯನು ಹೇಳುತ್ತಿರ್ದಪಂ.

ಗ್ರಂಥ॥ ದೀಯತೇ ಚ ಶಿವಜ್ಞಾನಂ ಕ್ಷೀಯತೇ ಪಾಶಬಂಧನಮ್ ।
ಯಸ್ಮಾದತಃ ಸಮಾಖ್ಯಾತಾ ದೀಕ್ಷೇತೀಯಂ ವಿಚಕ್ಷಣೈಃ ॥

ಟೀಕು॥ ಯಸ್ಮಾತ್=ಆವುದಾನೊಂದು ಕಾರಣವಾಗಿ, ಶಿವಜ್ಞಾನಂ=ಪರಬ್ರಹ್ಮಪರ ಶಿವವಾಚ್ಯವಾದ ಮಹಾಲಿಂಗಜ್ಞಾನವು, ದೀಯತೇ=ಕೊಡಲುಪಡುತ್ತಿರ್ದ್ದಪುದು. ಪಾಶಬಂಧನಂ=ಮಲಮಾಯಾಕರ್ಮ ಪಾಶಬಂಧನವು, ಕ್ಷೀಯತೇ ಚ=ಕೆಡಿಸಲುಪಡುತ್ತಿರ್ದ್ದಪುದು. ಅತಃ=ಇದು ಕಾರಣವಾಗಿ, ಇಯಂ=ಜ್ಞಾನಕ್ರಿಯಾತ್ಮಿಕೆಯಾದ ಈ ಶಿವಭಕ್ತಿಯೆ, ದೀಕ್ಷೇತಿ=ದೀಕ್ಷಾಶಬ್ದವಾಚ್ಯವೆಂದು, ವಿಚಕ್ಷಣೈಃ=ವೇದಾಗಮಜ್ಞರಾದ ವಿದ್ವಾಂಸರಿಂದೆ, ಸಮಾಖ್ಯಾತಾ=ಹೇಳಲುಪಟ್ಟಿತ್ತು. ॥೧೧॥

ಸೂತ್ರ॥ ಬಳಿಕ ದೀಕ್ಷಾಭೇದವನು ಉಪದೇಶಿಸಿ ಹೇಳುತ್ತಿರ್ದ್ದಪಂ.

ಗ್ರಂಥ॥ ಸಾ ದೀಕ್ಷಾ ತ್ರಿವಿಧಾ ಪ್ರೋಕ್ತಾ ಶಿವಾಗಮವಿಶಾರದೈಃ ।
ವೇಧಾರೂಪಾ ಕ್ರಿಯಾರೂಪಾ ಮಂತ್ರರೂಪಾ ಚ ತಾಪಸ ॥

ಟೀಕು॥ ಭೋ ತಾಪಸ!=ಎಲೈ ಅಗಸ್ತ್ಯಮುನಿಯೆ! ಸಾ ದೀಕ್ಷಾ=ಆ ದೀಕ್ಷೆಯು, ಶಿವಾಗಮವಿಶಾರದೈಃ=ಶಿವಾಗಮ ಪ್ರವೀಣರಾದ ಆಚಾರ್ಯರಿಂದೆ, ವೇಧಾರೂಪಾ=ವೇಧಾ ದೀಕ್ಷೆಯೆಂದು, ಮಂತ್ರರೂಪಾ=ಮಂತ್ರದೀಕ್ಷೆಯೆಂದು, ಕ್ರಿಯಾರೂಪಾ ಚ=ಕ್ರಿಯಾದೀಕ್ಷೆಯೆಂದು, ತ್ರಿವಿಧಾ=ಮೂರು ಪ್ರಕಾರವುಳ್ಳುದಾಗಿ, ಪ್ರೋಕ್ತಾ=ಹೇಳಲುಪಟ್ಟಿತ್ತು. ॥೧೨॥

ಸೂತ್ರ॥ ಬಳಿಕ ಆ ದೀಕ್ಷಾತ್ರಯಂಗಳಿಗೆ ಲಕ್ಷಣವನು ಹೇಳುತ್ತಿರ್ದ್ದಪಂ.

ಗ್ರಂಥ॥ ಗುರೋರಾಲೋಕಮಾತ್ರೇಣ ಹಸ್ತಮಸ್ತಕಯೋಗತಃ ।
ಯಃ ಶಿವತ್ತ್ವಸಮಾವೇಶೋ ವೇಧಾದೀಕ್ಷೇತಿ ಸಾ ಮತಾ ॥

ಮಂತ್ರದೀಕ್ಷೇತಿ ಸಾ ಪ್ರೋಕ್ತಾ ಮಂತ್ರಮಾತ್ರೋಪದೇಶಿನೀ ।
ಕುಂಡಮಂಡಲಿಕೋಪೇತಾ ಕ್ರಿಯಾದೀಕ್ಷಾ ಕ್ರಿಯೋತ್ತರಾ ॥

ಟೀಕು॥ ಗುರೋಃ=ಶ್ರೀ ಗುರುವನು, ಆಲೋಕಮಾತ್ರೇಣ=ದರ್ಶನಮಾತ್ರದಿಂದವೆ, ಹಸ್ತಮಸ್ತಕಯೋಗತಃ=ಹಸ್ತಮಸ್ತಕದೆಸೆಯಿಂದೆವು, ಯಃ=ಯಾವುದಾನೊಂದು, ಶಿವತತ್ತ್ವ ಸಮಾವೇಶಃ=ಜ್ಞಾನಕ್ರಿಯಾತ್ಮಕವಾದ ಶಿವಸ್ವರೂಪಿನ ಆವೇಶ ಉಂಟು, ಸಾ=ಅದು, ವೇಧಾದೀಕ್ಷೇತಿ=ವೇಧಾದೀಕ್ಷೆಯೆಂದು, ಮತಾ=ಸಂಮತವು. ಶ್ರೀಗುರುವಿನ ದೃಷ್ಟಿಗರ್ಭದಲ್ಲಿದ್ದು ಕರಕಮಲದಲ್ಲಿ ಹುಟ್ಟಿದ ಆತ್ಮನಿಗೆ ಚಿನ್ಮಯಸ್ವರೂಪವನುಪದೇಶಿಸುವುದೆ ವೇಧಾದೀಕ್ಷೆಯೆಂಬುದರ್ಥ.

'ಯಾ ಮಂತ್ರ ಮಾತ್ರೋಽಪದೇಶಿನಿ ಸೋಽಹಮ್'ಯೆಂದು ಪ್ರಣವಮಂತ್ರರೂಪವಾದ ಪ್ರಾಣನಿಗೆ ಆವುದಾನೊಂದು ಪಂಚಾಕ್ಷರಮಂತ್ರವನು ಸಾಕ್ಷಾತ್ಕರಿಸಿ ಉಪದೇಶಿಸುವುದುಂಟು, ಸಾ=ಅದು, ಮಂತ್ರದೀಕ್ಷೇತಿ=ಮನನತ್ರಾಣಧರ್ಮವುಳ್ಳ ಮಂತ್ರಸಂಬಂಧಿನಿಯಾದ ದೀಕ್ಷೆಯೆಂದು, ಪ್ರೋಕ್ತಾ=ಹೇಳಲುಪಟ್ಟಿತ್ತು. ಕುಂಡಮಂಡಲಿಕೋಪೇತಾ=ಕಳಶ ಕಳಶಬಂಧದೊಡನೆ ಕೂಡಿರ್ದ, [ಕ್ರಿಯಾ ದೀಕ್ಷಾ=]ಕ್ರಿಯಾದೇಪಕ್ಕೆ ಮಾಡುವ ಲಿಂಗಧಾರಣಾದಿ ಕ್ರಿಯೆ, [ಕ್ರಿಯೋತ್ತರಾದೀಕ್ಷಾ]=ಕ್ರಿಯೋತ್ತರಾ ದೀಕ್ಷೆಯ ಉತ್ತರವಾಗುಳ್ಳ ಕ್ರಿಯಾದೀಕ್ಷೆಯೆಂದು, ಪ್ರೋಕ್ತಾ=ಹೇಳಲುಪಟ್ಟಿತ್ತು.

**ತಾತ್ಪರ್ಯ॥** ಅವಸ್ಥಾತ್ರಯ, ದೇಹತ್ರಯಯುಕ್ತವಾದ ಆತ್ಮತ್ರಯಕ್ಕೆ ಚಕ್ರತ್ರಯ, ರೂಪತ್ರಯ ಯುಕ್ತವಾದಲ್ಲಿ ಲಿಂಗತ್ರಯವನುಕೊಂಡ ಪ್ರಸಾದತ್ರಯಯುಕ್ತವಾದ ಈ ದೀಕ್ಷಾತ್ರಯದಿಂದೆ ಸಂಬಂಧಿಸಿಕೊಂಬುದು. ಕ್ರಮವಾಗಿ ಶ್ರುತಿಗುರುಸ್ವಾನುಭಾವಂಗಳಿಂದವು ನಿಶ್ಚೈಸುವುದು. ಗ್ರಂಥ ಬಾಹುಲ್ಯವಾದೀತೆಂದು ಸಂಮತಿಯ ಬರೆದುದಿಲ್ಲಾ. ॥೧೪॥

**ಸೂತ್ರ॥** ಬಳಿಕ ಕ್ರಿಯಾದೀಕ್ಷೆಯನು ಪಂಚಸೂತ್ರಂಗಳಿಂದೆ ಪ್ರಕಟಿಸುತ್ತಿರ್ದಪಂ.

ಗ್ರಂಥ॥

**ಶುಭಮಾಸೇ ಶುಭತಿಥೌ ಶುಭಕಾಲೇ ಶುಭೇಽಹನಿ ।**
**ವಿಭೂತಿಂ ಶಿವಭಕ್ತೇಭ್ಯೋ ದತ್ವಾ ತಾಂಬೂಲಪೂರ್ವಕಮ್ ॥**

**ಯಥಾವಿಧಿ ಯಥಾಯೋಗಂ ಶಿಷ್ಯಮಾನೀಯ ದೇಶಿಕಃ ।**
**ಸ್ನಾತಂ ಶುಕ್ಲಾಂಬರಧರಂ ದಂತಧಾವನಪೂರ್ವಕಮ್ ॥**

**ಮಂಡಲೇ ಸ್ಥಾಪಯೇಚ್ಛಿಷ್ಯಂ ಪ್ರಾಙ್ಮುಖಂ ತಮುದಙ್ಮುಖಃ ।**
**ಶಿವಸ್ಯ ನಾಮ ಕೀರ್ತಿಂ ಚ ಚಿಂತಾಮಪಿ ಚ ಕಾರಯೇತ್ ॥**

**ಟೀಕು॥** ಶುಭಮಾಸೇ=ವೈಶಾಖ ಕಾರ್ತಿಕಾದಿ ಶುಭಮಾಸದಲ್ಲಿ, ಶುಭತಿಥೌ=ಭದ್ರಾದಿ ಶುಭತಿಥಿಗಳಲ್ಲಿ, ಶುಭೇಽಹನಿ=ಸೋಮಶುಕ್ರಾದಿ ಶುಭದಿವಸದಲ್ಲಿ, ಶುಭಕಾಲೇ=ಅಮೃತ ಘಳಿಗೆಯೊಡನೆ ಕೂಡಿದ ಶುಭಮುಹೂರ್ತದಲ್ಲಿ, ಶಿವಭಕ್ತೇಭ್ಯಃ=ಶಿವಭಕ್ತರಿಗೋಸುಗ, ತಾಂಬೂಲಪೂರ್ವಕಂ=ವೀಳೆಯ ಮುಂತಾಗಿ, ವಿಭೂತಿಂ=ವಿಭೂತಿಯನು, ದತ್ವಾ=ಕೊಟ್ಟು, ದೇಶಿಕಃ=ಆಚಾರ್ಯನು, ಸ್ನಾತಂ=ಸ್ನಾನವನು ಮಾಡಿ, ಶುಕ್ಲಾಂಭರಧರಂ=ಶುಭ್ರವಸ್ತ್ರವನು ಹೊದ್ದಿರ್ದ, ದಂತಧಾವನಪೂರ್ವಕಂ=ದಂತಧಾವನವೇ ಮೊದಲಾಗುಳ್ಳ, ಶಿಷ್ಯಂ=ಶಿಷ್ಯನನು, ಯಥಾವಿಧಿ=ವಿಧ್ಯುಕ್ತಕರ್ಮವನು ಮೀರದೆ, ಯಥಾಯೋಗಂ=ಶಾಸ್ತ್ರೋಕ್ತ ಪ್ರಯೋಗವನು ಮೀರದೆ, ಆನೀಯ=ಸಮೀಪಕ್ಕೆ ಕರದುಕೊಂಡು, ಪ್ರಾಙ್ಮುಖಂ=ಮೂಡಮುಖವಾಗಿರ್ದ, ತಂ ಶಿಷ್ಯಂ=ಆ ಶಿಷ್ಯನನು, ಉದಙ್ಮುಖಃ=ಬಡಗಮುಖವಾದ, ದೇಶಿಕಃ=ಆಚಾರ್ಯನು, ಮಂಡಲೇ=ಸ್ವಸ್ತಿಕ ಮಂಡಲದಲ್ಲಿ, ಸ್ಥಾಪಯೇತ್=ಕುಳ್ಳಿರಿಸುವದು. ಶಿವಸ್ಯ

ನಾಮ ಕೀರ್ತಿಂ ಚ= "ಅಪಿ ವಾ ಯಶ್ಚಂಡಾಲಃ ಶಿವೇತಿ ವಾಚಂ ವದೇತ್ ತೇನ ಸಹ ಸಂವಸೇತ್ತೇನ ಸಹ ಸಂವಿಶೇತ್ತೇನ ಸಹ ಭುಂಜೀತ" ಯೆಂದು ಶ್ರುತಿಮಂತ್ರ ಪ್ರಸಿದ್ಧವಾದ ಶಿವನಾಮೋಚ್ಚಾರಣವನು. ಶಿವಸ್ಯ ಚಿಂತಾಮಪಿಚ= ಶಿವಧ್ಯಾನವನಾಯಿತ್ತಾದಡೆಯು, ಕಾರಯೇತ್= ಮಾಡಿಸುವುದು. ||೧೭||

ಗ್ರಂಥ|| ವಿಭೂತಿಪಟ್ಟಂ ಕೃತ್ವಾಗ್ರೇ ಯಥಾಸ್ಥಾನಂ ಯಥಾವಿಧಿ ।
ಪಂಚಬ್ರಹ್ಮಮಯೈಸ್ತತ್ರ ಸ್ಥಾಪಿತೈಃ ಕಲಶೋದಕೈಃ ।
ಆಚಾರ್ಯಃ ಸಮಮೃತ್ವಿಗ್ಭಿಸ್ತ್ರಿಃ ಶಿಷ್ಯಮಭಿಷಿಂಚಯೇತ್ ||

ಟೀಕು|| ಅಗ್ರೇ=ಮೊದಲಲ್ಲಿ, ವಿಭೂತಿಪಟ್ಟಂ=ಭಸ್ಮಧಾರಣವನು, ಯಥಾಸ್ಥಾನಂ=ಸ್ಥಾನವನು ಮೀರದೆ, ಯಥಾವಿಧಿ=ವಿಧಿಯನು ಮೀರದೆ, ಕೃತ್ವಾ=ಮಾಡಿ, ಪಂಚಬ್ರಹ್ಮಮಯೈಃ=ಈಶಾನಾದಿ ಪಂಚಬ್ರಹಸ್ವರೂಪಂಗಳಾಗಿ, ತತ್ರ=ಆ ಮಂಡಲದಲ್ಲಿ, ಸ್ಥಾಪಿತೈಃ=ಇರಿಸಲುಪಟ್ಟ, ಕಲಶೋದಕೈಃ= ಪಂಚಾಕ್ಷರಾತ್ಮಕವಾದ ಪಂಚಕಳಶೋದಕದಿಂದೆ, ಋತ್ವಿಗ್ಭಿಃ=ಭುವನಪ್ರಸಿದ್ಧರಾದ ಪಂಚಾಚಾರ್ಯರೊಡನೆ, ಸಮಂ=ಕೂಡಿ, ಆಚಾರ್ಯಃ=ಆ ಪಂಚಾಚಾರ್ಯರ ಪುತ್ರ ಸಂಪ್ರದಾಯ ಶಿಷ್ಯಸಂಪ್ರದಾಯದಲ್ಲಿಯೆ ಆಚಾರ್ಯಪಟ್ಟಕ್ಕೆ ಯೋಗ್ಯನಾದಾಚಾರ್ಯನು, ಶಿಷ್ಯಂ=ತನ್ನ ವಾಮಭಾಗದಲ್ಲಿ ಕುಳ್ಳಿರ್ದ್ದ ಶಿಷ್ಯನನು, ತ್ರಿಃ=ಮೂರು ಬಾರಿ,ಅಭಿಷಿಂಚಯೇತ್=ಸೇಚಿಸುವುದು. ||೧೮||

ಸೂತ್ರ|| ಬಳಿಕ ಶಿಷ್ಯನ ಮಾಂಸಪಿಂಡವನು ಕಳಿದು ಮಂತ್ರಪಿಂಡವ ಮಾಡಬೇಕಾಗಿ ಮಂತ್ರೋಪದೇಶವನು ಹೇಳುತ್ತಿರ್ದ್ದಪಂ.

ಗ್ರಂಥ|| ಅಭಿಷಿಚ್ಯ ಗುರುಃ ಶಿಷ್ಯಮಾಸೀನಂ ಪರಿತಶ್ಶುಚಿಮ್ ।
ತತಃ ಪಂಚಾಕ್ಷರೀಂ ಶೈವೀಂ ಸಂಸಾರಭಯತಾರಿಣೀಮ್ ||

ತಸ್ಯ ದಕ್ಷಿಣಕರ್ಣೇ ತು ನಿಗೂಢಮಪಿ ಕೀರ್ತಯೇತ್ ।
ಛಂದೋ ರೂಪಮೃಷಿಂ ಚಾಸ್ಯ ದೇವತಾನ್ಯಾಸಪದ್ಧತಿಮ್ ||

ಟೀಕು|| ಗುರುಃ=ಆಚಾರ್ಯನು, ಶುಚಿಂ=ಶುದ್ಧಾತ್ಮನಾಗಿ, ಪರಿತಃಸಮಾಸೀನಂ=ಸಮೀಪದಲ್ಲಿ ಕುಳ್ಳಿರ್ದ್ದ, ಶಿಷ್ಯಂ=ಶಿಷ್ಯನನು, ಅಭಿಷಿಚ್ಯ=ಪಂಚಾಕ್ಷರಾತ್ಮಕವಾದ ಪಂಚಕಳಶೋದಕಂಗಳಿಂದೆ ಅಭಿಷೇಕವನು ಮಾಡಿ, ತತಃ=ಅನಂತರದಲ್ಲಿ, ಸಂಸಾರಭಯತಾರಿಣೀಂ=ಸಂಸಾರಭಯವನು ದಾಂಟಿಸುತ್ತಿರ್ದ್ದ, ಶೈವೀಂ ಪಂಚಾಕ್ಷರೀಂ="ನಮಃ ಶಿವಾಯ ಚ ಶಿವತರಾಯ ಚ"ಯೆಂದು ಶ್ರೀರುದ್ರದಲ್ಲಿ ಪ್ರಸಿದ್ಧವಾದ ಶಿವಸಂಬಂಧವಾದ ಪಂಚಾಕ್ಷರಿ ಮಂತ್ರವನು, ತಸ್ಯ=ಆ ಶಿಷ್ಯನ, ದಕ್ಷಿಣ ಕರ್ಣೇ ತು=ಬಲಗಿವಿಯಲ್ಲಿಯಾಯಿತ್ತೊಡೆ, ನಿಗೂಢಂ=ರಹಸ್ಯವಹಣಯುಪಗಹುದು ಅಹಗೆ, ಕೀರ್ತಯೇತ್=ಉಪಾಂಶುವಾಗಿ ಉಪದೇಶಿಸಿ ಹೇಳುವುದು. ಅಸ್ಯಾಃ=ಈ ಪಂಚಾಕ್ಷರೀ ಮಂತ್ರದ,

ರೂಪಂ=ಸ್ವರೂಪವನು, ಛಂದಃ=ಛಂದಸ್ಸನು, ಋಷಿಂ ಚ=ಮಂತ್ರಸಿದ್ಧನಾದ ಋಷಿಯನು, ದೇವತಾನ್ಯಾಸಪದ್ಧತಿಮಪಿ=ಅಧಿದೇವತೆಗಳಾದ ಪಂಚಬ್ರಪ್ಮ ಪಂಚಸಾದಾಖ್ಯವೆಂಬ ಪರ್ಯಾಯನಾಮವುಳ್ಳ ಆಚಾರಾದಿ ಪಂಚಲಿಂಗಂಗಳ ಕರಾಂಗ ದೇಹನ್ಯಾಸಂಗಳ ಮಾರ್ಗವನಾಯಿತ್ತಾದೊಡೆ, ಕೀರ್ತಯೇತ್=ಉಪದೇಶಿಸುವುದೆಂಬುದರ್ಥ. ॥೨೦॥

## ಇತಿ ಗುರುಕಾರುಣ್ಯಸ್ಥಲಮ್

## ೫. ಭಕ್ತಸ್ಥಲೇ ಲಿಂಗಧಾರಣಸ್ಥಲಮ್

**ಸೂತ್ರ॥** ಬಳಿಕ ಆ ಶ್ರೀ ಗುರುವಿನಿಂದ ಮಾಡಲುಯೋಗ್ಯವಾದ ಲಿಂಗಧಾರಣಸ್ಥಲವನು ಹೇಳುತ್ತಿರ್ದ್ದಪಂ.

ಗ್ರಂಥ॥

**ಸ್ಫಾಟಿಕಂ ಶೈಲಜಂ ವಾಽಪಿ ಚಂದ್ರಕಾಂತಮಯಂ ತು ವಾ ।**
**ಬಾಣಂ ವಾ ಸೂರ್ಯಕಾಂತಂ ವಾ ಲಿಂಗಮೇಕಂ ಸಮಾಹರೇತ್ ॥**

**ಟೀಕು॥** ಸ್ಫಾಟಿಕಂ=ಸ್ಫಟಿಕದಲ್ಲಿ ಮಾಡಿದುದನಾದರು, ಚಂದ್ರಕಾಂತಮಯಂ ತು ವಾ= ಚಂದ್ರಕಾಂತಮಯವಾಗಿದ್ದುದನಾದರು, ಸೂರ್ಯಕಾಂತಂ ವಾ=ಸೂರ್ಯಕಾಂತಮಯವಾಗಿದ್ದದನಾದೊಡೆಯು, ಬಾಣಂ ವಾ=ಬಾಣಲಿಂಗವಾಯಿತ್ತಾದೊಡೆಯು, ಶೈಲಜಂ ವಾಽಪಿ=ಶ್ರೀಪರ್ವತಾದಿ ಶೈಲಂಗಳಲ್ಲಿ ಹುಟ್ಟಿದುದನಾಯಿತ್ತಾದೊಡೆಯು, ಏಕಂ ಲಿಂಗಂ=ಒಂದು ಲಿಂಗವನು, ಸಮಾಹರೇತ್= ತೆಗದುಕೊಂಬುದು. ॥೨೧॥

**ಸೂತ್ರ॥** ಬಳಿಕ ಲಿಂಗದಲ್ಲಿ ಶಿವಕಲಾ ಪ್ರತಿಷ್ಠೆಯನು ಹೇಳುತ್ತಿರ್ದ್ದಪಂ.

ಗ್ರಂಥ॥

**ಸರ್ವಲಕ್ಷಣಸಂಪನ್ನೇ ತಸ್ಮಿನ್ ಲಿಂಗೇ ವಿಶೋಧಿತೇ ।**
**ಪೀಠಸ್ಥಿತೇಽಭಿಷಿಕ್ತೇ ಚ ಗಂಧಪುಷ್ಪಾದಿಪೂಜಿತೇ ।**
**ಮಂತ್ರಪೂತೇ ಕಲಾಂ ಶೈವೀಂ ಯೋಜಯೇದ್ವಿಧಿನಾ ಗುರುಃ ॥**

**ಟೀಕು॥** ಸರ್ವಲಕ್ಷಣಸಂಪನ್ನೇ=ಶಿಲ್ಪಶಾಸ್ತ್ರೋಕ್ತವಾದ ಸರ್ವಲಕ್ಷಣಂಗಳಿಂದೆ ಸಂಪನ್ನನಾಗಿರ್ದ್ದ, ವಿಶೋಧಿತೇ=ಪಂಚಗವ್ಯಂಗಳಿಂದೆ ಶುದ್ಧವಾಗಿ ಮಾಡಲುಪಟ್ಟ, ಅಭಿಷಿಕ್ತೇ=ಪಂಚಾಮೃತಾದಿಗಳಿಂದೆ ಅಭಿಷೇಕವ ಮಾಡಲುಪಟ್ಟ, ಗಂಧಪುಷ್ಪಾದಿಪೂಜಿತೇ=ಗಂಧ ಪುಷ್ಪಾದ್ಯುಪಚಾರಂಗಳಿಂದೆ ಪೂಜಿಸಲುಪಟ್ಟ, ಮಂತ್ರಪೂತೇ=ಶ್ರೀರುದ್ರಮಧ್ಯಗತವಾದ ಪಂಚಾಕ್ಷರಮಂತ್ರದಿಂದೆ ಪವಿತ್ರವಾಗಿರ್ದ್ದ, ಪೀಠಸ್ಥಿತೇ=ಕರಪೀಠದಲ್ಲಿಯಿರುತ್ತಿರ್ದ್ದ, ತಸ್ಮಿನ್ ಲಿಂಗೇ=ಆ ಲಿಂಗದಲ್ಲಿ, ಗುರುಃ=ಆಚಾರ್ಯನು,

ಶೈವೀಂ ಕಲಾಂ=ಶಿಷ್ಯನ ಮಸ್ತಕದಲ್ಲಿಯಿರುತ್ತಿರ್ದ್ದ ಚಿನ್ಮಯವಾದ ಶಿವಕಲೆಯನು, ವಿಧಿನಾ=ವಿಧ್ಯುಕ್ತಮಾರ್ಗದಿಂದೆ, ಯೋಜಯೇತ್=ಕೂಡುವುದು. ॥೨೨॥

**ಸೂತ್ರ॥** ಬಳಿಕ ಲಿಂಗಪ್ರಾಣಂಗಳ ಸಮರಸವಮಾಡಿ ಶಿಷ್ಯನ ಕರಕಮಲದಲ್ಲಿ ಶಿವಲಿಂಗವ ಪ್ರತಿಷ್ಠಿಸಿರಿಸುವದೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥**

**ಶಿಷ್ಯಸ್ಯ ಪ್ರಾಣಮಾದಾಯ ಲಿಂಗೇ ತತ್ರ ನಿಧಾಪಯೇತ್ ।**
**ತಲ್ಲಿಂಗಂ ತಸ್ಯ ತು ಪ್ರಾಣೇ ಸ್ಥಾಪಯೇದೇಕಭಾವತಃ ।**
**ಏವಂ ಕೃತ್ವಾ ಗುರುರ್ಲಿಂಗಂ ಶಿಷ್ಯಹಸ್ತೇ ನಿಧಾಪಯೇತ್ ॥**

**ಟೀಕು॥** ತತ್ರ ಲಿಂಗೇ=ಶಿವಕಲಾಪೂರಿತವಾದ ಲಿಂಗದಲ್ಲಿ, ಶಿಷ್ಯಸ್ಯ ಪ್ರಾಣಮಾದಾಯ=ಶಿಷ್ಯನ ಜೀವಕಲೆಯಾದ ಪ್ರಾಣವನು ತೆಗೆದುಕೊಂಡು, ನಿಧಾಪಯೇತ್=ಪ್ರತಿಷ್ಠಿಸುವುದು. ತಲ್ಲಿಂಗಂ=ಆ ಶಿವಕಲಾಪೂರಿತವಾದ ಲಿಂಗವನು, ತಸ್ಯ=ಆ ಶಿಷ್ಯನ, ಪ್ರಾಣೇ ತು=ಪ್ರಾಣದಲ್ಲಿ, ಏಕಭಾವತಃ= ತಾದಾತ್ಮ್ಯಭಾವದಿಂದ, ಸ್ಥಾಪಯೇತ್=ಪ್ರತಿಷ್ಠಿಸತಕ್ಕುದು. ಏವಂ=ಈ ಪ್ರಕಾರದಲ್ಲಿ, ಗುರುಃ= ಆಚಾರ್ಯನು, ಏವಂ ಕೃತ್ವಾ= ಐಕ್ಯಭಾವನೆಯನು ಮಾಡಿ, ಲಿಂಗಂ=ಲಿಂಗವನು, ಶಿಷ್ಯಹಸ್ತೇ=ಶಿಷ್ಯನ ಹಸ್ತದಲ್ಲಿ, ನಿಧಾಪಯೇತ್=ಇರಿಸಬೇಕು. ॥೨೩॥

**ಸೂತ್ರ॥** ಬಳಿಕ ಶಿಷ್ಯನಿಗೆ ಮಾಡುವ ಆಜ್ಞೆಯನು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥**

**ಪ್ರಾಣವದ್ಧಾರಣೀಯಂ ತತ್ಪ್ರಾಣಲಿಂಗಮಿದಂ ತವ ।**
**ಕದಾಚಿತ್ಕುತ್ರಚಿದ್ವಾಽಪಿ ನ ವಿಯೋಜಯ ದೇಹತಃ ॥**

**ಟೀಕು॥** ಭೋ ಶಿಷ್ಯ=ಎಲೈ ಶಿಷ್ಯನೆ! ತವ=ನಿನ್ನಿಂದ, ತದಿದಂ ಪ್ರಾಣಲಿಂಗಂ=ಆ ಈ ಪ್ರಾಣಲಿಂಗವು, ಪ್ರಾಣವತ್=ಪ್ರಾಣದೋಪಾದಿಯಲ್ಲಿ, ಧಾರಣೀಯಂ=ಧರಿಸಲು ಯೋಗ್ಯವು. ಕದಾಚಿತ್=ಒಂದು ವೇಳೆಯಾದಡೂ, ಕುತ್ರಚಿದ್ವಾಽಪಿ=ಒಂದೆಡೆಯಲ್ಲಿಯಾಯಿತ್ತಾದಡೆಯು, ದೇಹತಃ= ದೇಹದದೆಸೆಯಿಂದೆ, ನ ವಿಯೋಜಯ=ತೊಲಗಿಸಬೇಡ. ॥೨೪॥

**ಗ್ರಂಥ॥**

**ಯದಿ ಪ್ರಮಾದಾತ್ಪತಿತೇ ಲಿಂಗೇ ದೇಹಾನ್ಮಹೀತಲೇ ।**
**ಪ್ರಾಣಾನ್ವಿಮುಂಚ ಸಹಸಾ ಪ್ರಾಪ್ತಯೇ ಮೋಕ್ಷಸಂಪದಃ ॥**

**ಟೀಕು॥** ಲಿಂಗೇ=ಆ ಶಿವಲಿಂಗವು, ದೇಹಾತ್=ದೇಹದದೆಸೆಯಿಂದೆ, ಮಹೀತಲೇ=ಭೂತಲದಲ್ಲಿ, ಯದಿ=ಎತ್ತಲಾನು, ಪ್ರಮಾದಾತ್=ಪ್ರಮಾದದದೆಸೆಯಿಂದೆ, ಪತಿತೇ ಸತಿ=ಬೀಳಲಿಕೆಯಾಗಿ, ಸಹಸಾ=ಬೇಗ, ಮೋಕ್ಷಸಂಪದಃ=ಪರಮೋಕ್ಷಸಂಪತ್ತಿಯ, ಪ್ರಾಪ್ತಯೇ=ಪಡೆಯಲೋಸುಗ, ಪ್ರಾಣಾನ್=ಪ್ರಾಣಂಗಳನು, ವಿಮುಂಚ=ಬಿಡು. ॥೨೫॥

ಗ್ರಂಥ॥ ಇತಿ ಸಂಬೋಧಿತಶ್ಶಿಷ್ಯೋ ಗುರುಣಾ ಶಾಸ್ತ್ರವೇದಿನಾ ।
ಧಾರಯೇಚ್ಛಾಂಕರಂ ಲಿಂಗಂ ಶರೀರೇ ಪ್ರಾಣಯೋಗತಃ ॥

ಟೀಕು॥ ಇತಿ=ಈ ಪ್ರಕಾರದಿಂದೆ, ಶಾಸ್ತ್ರವೇದಿನಾ ಗುರುಣಾ=ವೀರಶೈವಶಾಸ್ತ್ರದಂದವನು ಬಲ್ಲ ಗುರುವಿನಿಂದೆ, ಸಂಬೋಧಿತಃ=ಚೆನ್ನಾಗಿ ಬೋಧಿಸಲುಪಟ್ಟ, ಶಿಷ್ಯಃ=ಶಿಷ್ಯನು, ಶಾಂಕರಂ ಲಿಂಗಂ= ಶಿವಲಿಂಗವನು, ಶರೀರೇ=ದೇಹದಲ್ಲಿ, ಪ್ರಾಣಯೋಗತಃ="ಪುಷ್ಪಸ್ಯ ಸುರಭಿರ್ಯದತದ್ದೇಹಸ್ಯ ಲಿಂಗಕಮ್"ಯೆಂದು ವೀರಾಗಮ ವಾಕ್ಯವುಂಟಾಗಿ ಪ್ರಾಣಯೋಗವುಳ್ಳ ಪರಿಯಂತರವಾಗಿ, ಧಾರಯೇತ್=ಧರಿಸುವುದು. ॥೨೬॥

ಸೂತ್ರ॥ ಬಳಿಕ ಲಿಂಗಧಾರಣದಿಂದೆ ಸರ್ವಪಾಪಕ್ಷಯವಹುದೆಂದು ಹೇಳುತ್ತಿರ್ದ್ದಪಂ.

ಗ್ರಂಥ॥ ಲಿಂಗಸ್ಯ ಧಾರಣಂ ಪುಣ್ಯಂ ಸರ್ವಪಾಪಪ್ರಣಾಶನಮ್ ।
ಆದೃತಂ ಮುನಿಭಿಸ್ಸರ್ವೈರಾಗಮಾರ್ಥವಿಶಾರದೈಃ ॥

ಟೀಕು॥ ಲಿಂಗಸ್ಯ ಧಾರಣಂ=ಶಿವಲಿಂಗಧಾರಣವು, ಪುಣ್ಯಂ=ಸಕಲಪುಣ್ಯಂಗಳಿಗಾಶ್ರಯವಾಗಿ, ಸರ್ವಪಾಪಪ್ರಣಾಶನಂ=ಸರ್ವಪಾಪಂಗಳನು ಕೆಡಿಸುವದೆಂದು, ಆಗಮಾರ್ಥವಿಶಾರದೈಃ=ವೀರ ಶೈವಾಗಮಾರ್ಥಂಗಳಲ್ಲಿ ಪ್ರವೀಣರಾದ, ಸರ್ವೈಃ ಮುನಿಭಿಃ=ಸಮಸ್ತ ಋಷಿಗಳಿಂದೆ, ಆದೃತಂ=ಪ್ರೀತಿ ಮಾಡಲುಪಟ್ಟಿತ್ತು. ॥೨೭॥

ಸೂತ್ರ॥ ಬಳಿಕ ಆ ಶಿವಲಿಂಗಧಾರಣದ ಭೇದವನು ಹೇಳುತ್ತಿರ್ದ್ದಪಂ.

ಗ್ರಂಥ॥ ಲಿಂಗಧಾರಣಮಾಖ್ಯಾತಂ ದ್ವಿಧಾ ಸರ್ವಾರ್ಥಸಾಧಕೈಃ ।
ಬಾಹ್ಯಮಾಭ್ಯಂತರಂ ಚೇತಿ ಮುನಿಭಿರ್ಮೋಕ್ಷಕಾಂಕ್ಷಿಭಿಃ ॥

ಟೀಕು॥ ಲಿಂಗಧಾರಣಂ=ಶಿವಲಿಂಗಧಾರಣವು, ಬಾಹ್ಯಂ=ಬಾಹ್ಯವೆಂದು, ಆಭ್ಯಂತರಂ ಚೇತಿ= ಆಭ್ಯಂತರವೆಂದು, ದ್ವಿಧಾ=ಎರಡು ಪ್ರಕಾರವಾಗಿ, ಸರ್ವಾರ್ಥಸಾಧಕೈಃ=ಸರ್ವಾರ್ಥಸಾಧಕರಾದ, ಮೋಕ್ಷಕಾಂಕ್ಷಿಭಿಃ ಮುನಿಭಿಃ=ಮುಮುಕ್ಷುಗಳಾದ ಮುನಿಗಳಿಂದೆ, ಆಖ್ಯಾತಂ=ಹೇಳಲುಪಟ್ಟಿತ್ತು. ॥೨೮॥

ಸೂತ್ರ॥ ಬಳಿಕ ಆಭ್ಯಂತರ ಲಿಂಗಧಾರಣವನು ಹೇಳುತ್ತಿರ್ದ್ದಪಂ.

ಗ್ರಂಥ॥ ಚಿದ್ರೂಪಂ ಪರಮಂ ಲಿಂಗಂ ಶಾಂಕರಂ ಸರ್ವಕಾರಣಮ್ ।
ಯತ್ತಸ್ಯ ಧಾರಣಂ ಚಿತ್ತೇ ತದಾಂತರಮುದಾಹೃತಮ್ ॥

**ಟೀಕು||** ಚಿದ್ರೂಪಂ=ಸಚ್ಚಿದಾನಂದಾತ್ಮಕವಾಗಿ, ಸರ್ವಕಾರಣಂ=ಸಮಸ್ತಕ್ಕೆಯೂ ಕಾರಣವಾಗಿ, ಶಾಂಕರಂ=ಶಿವಸಂಬಂಧವಾಗಿರ್ದ್ದ, ಯತ್ ಪರಮಂ ಲಿಂಗಂ=ಆವುದಾನೊಂದು ಮಹಾಲಿಂಗವುಂಟು, ತಸ್ಯ=ಆ ಮಹಾಲಿಂಗದ, ಚಿತ್ತೇ=ಹೃದಯಕಮಲದಲ್ಲಿ, ತತ್=ಸತ್ಯರೂಪವಾದ, ಧಾರಣಂ=ಧ್ಯಾನಾತ್ಮಕವಾದ ಧಾರಣೆಯೇ, ಆಂತರಂ=ಅಂತರ್ಲಿಂಗಧಾರಣೆಯೆಂದು, ಉದಾಹೃತಂ= ಹೇಳಲುಪಟ್ಟಿತ್ತು. ||೨೯||

**ಸೂತ್ರ||** ಬಳಿಕ ಅಂತರ್ಲಿಂಗಸ್ವರೂಪವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||**

**ಚಿದ್ರೂಪಂ ಹಿ ಪರಂ ತತ್ತ್ವಂ ಶಿವಾಖ್ಯಂ ವಿಶ್ವಕಾರಣಮ್ ।**
**ನಿರಸ್ತವಿಶ್ವಕಾಲುಷ್ಯಂ ನಿಷ್ಕಲಂ ನಿರ್ವಿಕಲ್ಪಕಮ್ ॥**

**ಸತ್ತಾನಂದಪರಿಸ್ಫೂರ್ತಿಸಮುಲ್ಲಾಸಕಲಾಮಯಮ್ ।**
**ಅಪ್ರಮೇಯಮನಿರ್ದೇಶ್ಯಂ ಮುಮುಕ್ಷುಭಿರುಪಾಸಿತಮ್ ।**
**ಪರಂ ಬ್ರಹ್ಮ ಮಹಾಲಿಂಗಂ ಪ್ರಪಂಚಾತೀತಮವ್ಯಯಮ್ ॥**

**ಟೀಕು||** ಚಿದ್ರೂಪಂ=ಜ್ಞಾನ ಸ್ವರೂಪುಳ್ಳ, ಪರಂ=ಉತ್ತಮವಾಗಿರ್ದ್ದ, ತತ್ತ್ವಂ=ಸತ್ಯವಾಗಿರ್ದ್ದ, ಶಿವಾಖ್ಯಂ=ಶಿವನೆಂಬ ಹೆಸರನುಳ್ಳಂಥಾ, ವಿಶ್ವಕಾರಣಂ=ಜಗತ್ತಿಗೆ ಕಾರಣವಾಗಿರ್ದ್ದ, ನಿರಸ್ತವಿಶ್ವಕಾಲುಷ್ಯಂ=ನಿರಾಕರಿಸಲುಪಟ್ಟ ಪಾಪಬಂಧವನುಳ್ಳಂಥಾ, ನಿಷ್ಕಲಂ=ನಿರವಯವಾಗಿರ್ದ್ದಂಥಾ ನಿರ್ವಿಕಲ್ಪಕಂ=ವಿಕಲ್ಪರಹಿತವಾಗಿರ್ದ್ದ, ಸತ್ತಾನಂದಪರಿಸ್ಫೂರ್ತಿಸಮುಲ್ಲಾಸಕಲಾಮಯಂ=ಸದಾನಂದ ಪ್ರಕಾಶಾತ್ಮಕವಾಗಿ ವ್ಯಾಪಿಸುತ್ತಿರ್ದ್ದ ಕಲೆಯೆ ಸ್ವರೂಪಾಗುಳ್ಳ, ಅಪ್ರಮೇಯಂ=ಪ್ರಮಾಣಾತೀತವಾಗಿರ್ದ್ದ, ಅನಿರ್ದೇಶ್ಯಂ=ನಿರ್ದೇಶಿಸಬಾರದೆಯಿದ್ದ, ಪ್ರಪಂಚಾತೀತಂ=ಜಗತ್ಪ್ರಪಂಚನು ಮೀರಿವರ್ತಿಸುತ್ತಿರ್ದ್ದ, ಅವ್ಯಯಂ=ಕೇಡಿಲ್ಲದೆಯಿರ್ದ್ದ, ಮುಮುಕ್ಷುಭಿಃ=ಪರಾಪರಮೋಕ್ಷವನು ಬಯಸುತ್ತಿರ್ದ್ದ ಮುನಿಗಳಿಂದೆ, ಉಪಾಸಿತಂ=ಉಪಾಸ್ತೆಯನು ಮಾಡಲುಪಟ್ಟ, ಪರಂ ಬ್ರಹ್ಮ=ಪರಮಶಿವ ಶಬ್ದವಾಚ್ಯವಾದ ಪರಬ್ರಹ್ಮವೆ, ಮಹಾಲಿಂಗಂ=ಮಹಾಲಿಂಗವು. ಹಿ=ಪ್ರಸಿದ್ಧವು. ||೩೧||

**ಸೂತ್ರ||** ಬಳಿಕ ಆ ಮಹಾಲಿಂಗಕ್ಕೆ ಆಶ್ರಯವನು ಹೇಳುತ್ತಿರ್ದ್ದಪಂ.

**ಗ್ರಂಥ||**

**ತದೇವ ಸರ್ವಭೂತಾನಾಮಂತಸ್ತ್ರಿಸ್ಥಾನಗೋಚರಮ್ ।**
**ಮೂಲಾಧಾರೇ ಚ ಹೃದಯೇ ಭ್ರೂಮಧ್ಯೇ ಸರ್ವದೇಹಿನಾಮ್ ।**
**ಜ್ಯೋತಿರ್ಲಿಂಗಂ ಸದಾ ಭಾತಿ ಯದ್ಬ್ರಹ್ಮೇತ್ಯಾಹುರಾಗಮಾಃ ॥**

**ಟೀಕು||** ತದೇವ=ಆ ಮಹಾಲಿಂಗವೆ, ಸರ್ವಭೂತಾನಾಂ=ಸಮಸ್ತ ಪ್ರಾಣಿಗಳ, ಅಂತಃ=ಒಳಗೆ, ತ್ರಿಸ್ಥಾನಗೋಚರಂ=ಮೂರು ಸ್ಥಾನವೆ ವಿಷಯವಾಗುಳ್ಳ ಅದು, ಯತ್=ಆವುದಾನೊಂದು

ಶಿವಾಗಮಸಿದ್ಧವಾದ ಪರಶಿವತತ್ತ್ವವನು, ಆಗಮಾಃ=ಉಪನಿಷತ್ತುಗಳು, ಬ್ರಹ್ಮೇತಿ=ಪರಬ್ರಹ್ಮವೆಂದು, ಆಹುಃ=ಹೇಳುತ್ತಿರ್ದಪವು. ತತ್ ಜ್ಯೋತಿರ್ಲಿಂಗಂ=ಆ ಮಹಾಲಿಂಗವು, ಸರ್ವದೇಹಿನಾಂ= ಸಮಸ್ತಾತ್ಮರ, ಮೂಲಾಧಾರೇ=ಪೂರ್ವಹೃದಯದಲ್ಲಿ, ಹೃದಯೇ=ಮಧ್ಯಹೃದಯದಲ್ಲಿ, ಭ್ರೂಮಧ್ಯೇ ಚ=ಊರ್ಧ್ವಹೃದಯದಲ್ಲಿಯು, ಸದಾ=ಎಲ್ಲಾ ಕಾಲದಲ್ಲಿಯೂ, ಭಾತಿ=ಪ್ರಕಾಶಿಸುತ್ತಿರ್ದಪುದು. ಗುರೂಪದೇಶದಿಂದೆ ಸಾಕ್ಷಾತ್ಕರಿಸಿ ನೋಡುವುದೆಂಬುದರ್ಥ. ||೩೨||

**ಸೂತ್ರ||** ಬಳಿಕ ಅಖಂಡಿತವಾದ ಮಹಾಲಿಂಗಕ್ಕೆ ಖಂಡಿತತ್ವ ಬಂದ ಕಾರಣವನು ಹೇಳುತ್ತಿರ್ದಪಂ.

**ಗ್ರಂಥ||** **ಅಪರಿಚ್ಛಿನ್ನಮವ್ಯಕ್ತಂ ಲಿಂಗಂ ಬ್ರಹ್ಮ ಸನಾತನಮ್ ।**
**ಉಪಾಸನಾರ್ಥಮಂತಃಸ್ಥಂ ಪರಿಚ್ಛಿನ್ನಂ ಸ್ವಮಾಯಯಾ ॥**

**ಟೀಕು||** ಅಪರಿಚ್ಛಿನ್ನಂ=ಖಂಡಿತವಿಲ್ಲದೆ, ಅವ್ಯಕ್ತಂ=ವ್ಯಕ್ತವಲ್ಲದೆ, ಸನಾತನಂ=ಕೇಡಿಲ್ಲದೆಯಿರ್ದ್ದ, ಬ್ರಹ್ಮ=ಪರಶಿವಪರಬ್ರಹ್ಮವಾಚ್ಯವಾಗಿರ್ದ್ದ, ಅಂತಃಸ್ಥಂ ಲಿಂಗಂ=ಒಳಗಿದ್ದ ಮಹಾಲಿಂಗವೆ ಸ್ವಮಾಯಯಾ=ತನ್ನ ಮಾಯಾಶಕ್ತಿಯಿಂದೆ, ಉಪಾಸನಾರ್ಥಂ=ಧ್ಯಾನಪೂಜೆಗೋಸುಗವಾಗಿ, ಪರಿಚ್ಛಿನ್ನಂ=ಖಂಡಿತವಾಯಿತ್ತು.

**ತಾತ್ಪರ್ಯ||** ಆ ಮಹಾಲಿಂಗವೊಂದೆ ಆತ್ಮರು ಕೂರ್ತ್ತು ಸ್ಥಾನತ್ರಯದಲ್ಲಿ ಲಿಂಗತ್ರಯವಾಯಿ ತ್ತೆಂಬುದರ್ಥ. ||೩೩||

**ಸೂತ್ರ||** "ಶಿವತತ್ತ್ವಂ ಜಗದ್ಗುರುರಾಚಾರ್ಯಮ್"ಯೆಂದು ತತ್ತ್ವಪ್ರಕಾಶಪ್ರಸಿದ್ಧವಾದ ಶಿವತತ್ತ್ವವೆ ಲಿಂಗಶಬ್ದ ಬ್ರಹ್ಮಶಬ್ದವಾಚ್ಯವಾಯಿತ್ತೆಂದು ಸೂತ್ರದ್ವಯದಿಂದೆ ವಿಗ್ರಹವನು ಹೇಳುತ್ತಿರ್ದಪಂ.

**ಗ್ರಂಥ||** **ಲಯಂ ಗಚ್ಛತಿ ಯತ್ರೈವ ಜಗದೇತಚ್ಚರಾಚರಮ್ ।**
**ಪುನಃ ಪುನಸ್ಸಮುತ್ಪನ್ನಂ ತಲ್ಲಿಂಗಂ ಬ್ರಹ್ಮ ಶಾಶ್ವತಮ್ ॥**

**ಟೀಕು||** ಯತ್ರ=ಆವುದಾನೊಂದು ಬ್ರಹ್ಮದಲ್ಲಿ, ಚರಾಚರಂ=ಚೇತನಾಚೇತನಾತ್ಮಕವಾದ, ಏತತ್ ಜಗತ್=ಈ ಜಗತ್ತು, ಸಮುತ್ಪನ್ನಂ=ಸೃಷ್ಟಿಯನು, ಲಯಂ=ನಾಶವನು, ಪುನಃ ಪುನಃ=ಮರಳಿ ಮರಳಿ, ಗಚ್ಛತಿ=ಎಯ್ದುತ್ತಿರ್ದಪುದು. ಶಾಶ್ವತಂ=ಕೇಡಿಲ್ಲದೆಯಿರ್ದ್ದ, ತತ್‌ಬ್ರಹ್ಮ =ಲಯ ಗಮನಂಗಳಿಗೆ ಆಶ್ರಯವಾದ ಆ ಬ್ರಹ್ಮಲಿಂಗವೆ, ಲಿಂಗಂ=ಲಿಂಗಶಬ್ದವಾಚ್ಯವು. ||೩೪||

**ಗ್ರಂಥ||** **ತಸ್ಮಾಲ್ಲಿಂಗಮಿತಿ ಖ್ಯಾತಂ ಸತ್ತಾಽಽನಂದಚಿದಾತ್ಮಕಮ್ ।**
**ಬೃಹತ್ತ್ವಾದ್ಬೃಂಹಣತ್ವಾಚ್ಚ ಬ್ರಹ್ಮಶಬ್ದಾಭಿಧೇಯಕಮ್ ॥**

**ಟೀಕು||** ತಸ್ಮಾತ್=ಅದು ಕಾರಣವಾಗಿ, ಸತ್ತಾऽऽನಂದಚಿದಾತ್ಮಕಂ=ಸಚ್ಚಿದಾನಂದ ಸ್ವರೂಪುಳ್ಳ, ಲಿಂಗಮಿತಿಖ್ಯಾತಂ=ಮಹಾಲಿಂಗವೆನಿಸುವದು. ಬೃಹತ್ತ್ವಾತ್=ದೊಡ್ಡಿತ್ತಾದ ಕಾರಣವಾಗಿ, ಬೃಂಹಣತ್ವಾಚ್ಚ=ಜಗದುತ್ಪತ್ತಿಗೆ ಬೃಂಹಣವಾದ ಕಾರಣವಾಗಿ, ಬ್ರಹ್ಮಶಬ್ದಾಭಿಧೇಯಕಂ=ವೇದಂಗಳಲ್ಲಿ ಬ್ರಹ್ಮಶಬ್ದವೆಂದು ಹೇಳಲುಪಟ್ಟಿತ್ತು. ||೩೫||

ಸೂತ್ರ|| ಬಳಿಕ ಜ್ಯೋತಿರ್ಲಿಂಗ ಪ್ರಕಾಶವನು ಪ್ರಕಟಿಸುತ್ತಿರ್ದಪಂ.

**ಗ್ರಂಥ||** **ಆಧಾರೇ ಹೃದಯೇ ವಾऽಪಿ ಭ್ರೂಮಧ್ಯೇ ವಾ ನಿರಂತರಮ್ ।**
**ಜ್ಯೋತಿರ್ಲಿಂಗಾನುಸಂಧಾನಮಾಂತರಂ ಲಿಂಗಧಾರಣಮ್ ॥**

**ಟೀಕು||** ಆಧಾರೇ=ಪೂರ್ವಹೃದಯದಲ್ಲಿಯಾಯಿತ್ತಾದೊಡೆಯು, ಹೃದಯೇ ವಾऽಪಿ=ಮಧ್ಯ ಹೃದಯದಲ್ಲಿಯಾಯಿತ್ತಾದೊಡೆಯು, ಭ್ರೂಮಧ್ಯೇ ವಾ=ಊರ್ಧ್ವಹೃದಯದಲ್ಲಿಯಾಯಿತ್ತಾದೊಡೆಯು, ನಿರಂತರಂ=ಎಡದೆರಹಿಲ್ಲದೆ, ಜ್ಯೋತಿರ್ಲಿಂಗಾನುಸಂಧಾನಂ=ಜ್ಯೋತಿರ್ಲಿಂಗಾನುಸಂಧಾನವೆ, ಆಂತರಂ ಲಿಂಗಧಾರಣಂ=ಅಂತರ್ಲಿಂಗಧಾರಣೆಯು. ||೩೬||

ಸೂತ್ರ|| ಬಳಿಕ ಸ್ಥಾನಭೇದದಿಂದ ಧ್ಯಾನದಲ್ಲಿ ಗುಣಭೇದವನು ಹೇಳುತ್ತಿರ್ದಪಂ.

**ಗ್ರಂಥ||** **ಆಧಾರೇ ಕನಕಪ್ರಖ್ಯಂ ಹೃದಯೇ ವಿದ್ರುಮಪ್ರಭಮ್ ।**
**ಭ್ರೂಮಧ್ಯೇ ಸ್ಫಟಿಕಚ್ಛಾಯಂ ಲಿಂಗಂ ಯೋಗೀ ವಿಭಾವಯೇತ್ ॥**

**ಟೀಕು||** ಆಧಾರೇ=ಪೂರ್ವ ಹೃದಯದಲ್ಲಿ, ಕನಕಪ್ರಖ್ಯಂ=ಸುವರ್ಣದಕಾಂತಿಯೋಪಾದಿಯ ಕಾಂತಿಯುಳ್ಳ ಲಿಂಗವನು, ಹೃದಯೇ=ಮಧ್ಯಹೃದಯದಲ್ಲಿ, ವಿದ್ರುಮಪ್ರಭಂ=ಹವಳದ ಕಾಂತಿಯೋಪಾದಿಯ ಕಾಂತಿಯುಳ್ಳ ಲಿಂಗವನು, ಭ್ರೂಮಧ್ಯೇ=ಊರ್ಧ್ವಹೃದಯಲ್ಲಿ, ಸ್ಫಟಿಕಚ್ಛಾಯಂ= ಶುದ್ಧ ಸ್ಫಟಿಕದ ಕಾಂತಿಯೋಪಾದಿಯ ಕಾಂತಿಯುಳ್ಳ, ಲಿಂಗಂ=ಮಹಾಲಿಂಗವನು, ಯೋಗೀ=ಶಿವ ಯೋಗೀಶ್ವರನು, ವಿಭಾವಯೇತ್=ಗುರೂಪದೇಶದಿಂದೆ ಸಾಕ್ಷಾತ್ಕರಿಸಿ ಧ್ಯಾನಿಸುವುದು. ||೩೭||

**ಸೂತ್ರ||** ಬಳಿಕ ಅಂತರ್ಲಿಂಗಧಾರಣಫಲವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ನಿರುಪಾಧಿಕಮಾಖ್ಯಾತಂ ಲಿಂಗಸ್ಯಾऽऽಂತರಧಾರಣಮ್ ।**
**ವಿಶಿಷ್ಟಂ ಕೋಟಿಗುಣಿತಂ ಬಾಹ್ಯಲಿಂಗಸ್ಯ ಧಾರ[ಣಾತ್] ॥**

ಟೀಕು|| ನಿರುಪಾಧಿಕಂ=ಉಪಾಧಿರಹಿತವಾಗಿರ್ದ, ಲಿಂಗಸ್ಯಾऽऽಂತರಧಾರಣಂ=ಅಂತ

ರ್ಲಿಂಗಧಾರಣೆಯು. ಬಾಹ್ಯಲಿಂಗಸ್ಯಧಾರಣಾತ್=ಶರೀರದ ಹೊರಗೆ ಲಿಂಗವ ಧರಿಸುವವರ ದೆಸೆಯಿಂದ, ವಿಶಿಷ್ಟಂ ಕೋಟಿಗುಣಿತಂ=ವಿಶಿಷ್ಟಕೋಟಿಗುಣಿತ ವಿಶೇಷಫಲವುಳ್ಳದಾಗಿ, ಆಖ್ಯಾತಂ=ಪೇಳಲುಪಟ್ಟಿತ್ತು. ||೩೮||

**ಗ್ರಂಥ||** ಯೇ ಧಾರಯಂತಿ ಹೃದಯೇ ಲಿಂಗಂ ಚಿದ್ರೂಪಮೈಶ್ವರಮ್ ।
ನ ತೇಷಾಂ ಪುನರಾವೃತ್ತಿರ್ಘೋರಸಂಸಾರಮಂಡಲೇ ॥

**ಟೀಕು||** ಯೇ=ಆರು ಕೆಲಂಬರು ಶಿವಯೋಗೀಶ್ವರರು, ಚಿದ್ರೂಪಂ=ಸಚ್ಚಿದಾನಂದವೆ ಸ್ವರೂಪವಾಗುಳ್ಳ, ಐಶ್ವರಂ=ಈಶ್ವರ ಸಂಬಂಧಿಯಾದ, ಲಿಂಗಂ=ಮಹಾಲಿಂಗವನು, ಹೃದಯೇ=ಪೂರ್ವೋಕ್ತಹೃದಯದಲ್ಲಿ, ಧಾರಯಂತಿ=ಧರಿಸುತ್ತಿರ್ದಪರು. ತೇಷಾಂ=ಆ ಶಿವಯೋಗೀಶ್ವರರಿಗೆ, ಘೋರ=ಭಯಂಕರವಾದ, ಸಂಸಾರಮಂಡಲೇ=ಸಂಸಾರಚಕ್ರದಲ್ಲಿ, ಪುನರಾವೃತ್ತಿಃ ನ=ಮರಳಿ ಬರದು. ||೩೯||

**ಸೂತ್ರ||** ಬಳಿಕ ಮೋಕ್ಷಸಂಪತ್ತಿಗೆ ಕಾರಣವನು ಹೇಳುತ್ತಿರ್ದಪಂ.

**ಗ್ರಂಥ||** ಅಂತರ್ಲಿಂಗಾನುಸಂಧಾನಮಾತ್ಮವಿದ್ಯಾಪರಿಶ್ರಮಃ ।
ಗುರೂಪಾಸನಶಕ್ತಿಶ್ಚ ಕಾರಣಂ ಮೋಕ್ಷಸಂಪದಾಮ್ ॥

**ಟೀಕು||** ಅಂತರ್ಲಿಂಗಾನುಸಂಧಾನಂ=ಹೃದಯಕಮಲದಲ್ಲಿ ಜ್ಯೋತಿರ್ಮಯವಾದ ಮಹಾಲಿಂಗಾನುಸಂಧಾನವು, ಆತ್ಮವಿದ್ಯಾಪರಿಶ್ರಮಃ="ಆತ್ಮಲಾಭಾನ್ನ ಪರಂ ವಿದ್ಯತೇ" ಯೆಂದು ಶ್ರುತಿ ಉಂಟಾಗಿ ಆತ್ಮಜ್ಞಾನದಲ್ಲಿಯ ವಿಶ್ರಾಂತಿಯು, ಗುರೂಪಾಸನಶಕ್ತಿಶ್ಚ=ಗುರುಸೇವೆಯ ಮಾಡುವಲ್ಲಿಯ ಸಾಮರ್ಥ್ಯವು, ಮೋಕ್ಷಸಂಪದಾಂ=ಪರಾಪರಮುಕ್ತಿ ರೂಪವಾದ ಸಂಪತ್ತಿಗಳಿಗೆ, ಕಾರಣಂ=ಕಾರಣವು. ||೪೦||

**ಸೂತ್ರ||** ಬಳಿಕ ಯೋಗೀಶ್ವರರಿಗೆ ಅಂತರ್ಲಿಂಗದಲ್ಲಿಯೆ ಬಯಕೆಯೆಂದು ಹೇಳುತ್ತಿರ್ದಪಂ.

**ಗ್ರಂಥ||** ವೈರಾಗ್ಯಜ್ಞಾನಯುಕ್ತಾನಾಂ ಯೋಗಿನಾಂ ಸ್ಥಿರಚೇತಸಾಮ್ ।
ಅಂತರ್ಲಿಂಗಾನುಸಂಧಾನೇ ರುಚಿರ್ಬಾಹ್ಯೇ ನ ಜಾಯತೇ ॥

**ಟೀಕು||** ವೈರಾಗ್ಯಜ್ಞಾನಯುಕ್ತಾನಾಂ=ಜ್ಞಾನವೈರಾಗ್ಯಂಗಳೊಡನೆ ಕೂಡಿರ್ದ, ಸ್ಥಿರಚೇತಸಾಂ=ದೃಢಚಿತ್ತವುಳ್ಳ, ಯೋಗಿನಾಂ=ಶಿವಯೋಗೀಶ್ವರರಿಗೆ, ಅಂತರ್ಲಿಂಗಾನುಸಂಧಾನೇ=ಹೃದಯಕಮಲದಲ್ಲಿಯ ಜ್ಯೋತಿರ್ಲಿಂಗಾನುಸಂಧಾನದಲ್ಲಿಯೆ, ರುಚಿಃ=ಇಚ್ಛೆಯು. ಬಾಹ್ಯೇ=ಬಾಹ್ಯಲಿಂಗದಲ್ಲಿ, ರುಚಿಃ=ಇಚ್ಛೆಯು, ನ ಜಾಯತೇ=ಪುಟ್ಟುತ್ತಿರದು. ||೪೧||

**ಸೂತ್ರ||** ಬಳಿಕ ಪರಿಪಕ್ವರಾದ ಬ್ರಹ್ಮಾದಿಗಳು ಜ್ಞಾನಯೋಗದಿಂದೆ ಜ್ಯೋತಿರ್ಲಿಂಗವನು ಕಾಬರೆಂದು ಹೇಳುತ್ತಿರ್ದಪಂ.

ಗ್ರಂಥ|| **ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ವಾಸವಾದ್ಯಾಶ್ಚ ಲೋಕಪಾಃ ।**
**ಮುನಯಃ ಸಿದ್ಧಗಂಧರ್ವಾಃ ದಾನವಾ ಮಾನವಾಸ್ತಥಾ ॥**

**ಸರ್ವೇ ಚ ಜ್ಞಾನಯೋಗೇನ ಸರ್ವಕಾರಣಕಾರಣಮ್ ।**
**ಪಶ್ಯಂತಿ ಹೃದಯೇ ಲಿಂಗಂ ಪರಮಾನಂದಲಕ್ಷಣಮ್ ॥**

**ಟೀಕು||** ಬ್ರಹ್ಮಾ=ಬ್ರಹ್ಮನು, ವಿಷ್ಣುಶ್ಚ=ವಿಷ್ಣುವು, ರುದ್ರಶ್ಚ=ರುದ್ರನು, ವಾಸವಾದ್ಯಾಃ ಲೋಕಪಾಃ ಚ=ಇಂದ್ರಾದಿ ದಿಕ್ಪಾಲಕರು, ಮುನಯಃ=ವಸಿಷ್ಠಾದಿ ಮುನಿಗಳು, ಸಿದ್ಧಗಂಧರ್ವಾಃ=ಸಿದ್ಧರು ಗಂಧರ್ವರು, ತಥಾ=ಹಾಂಗೆಯೆ, ದಾನವಾಃ=ಅಸುರರು, ಮಾನವಾಃ=ಮನುಷ್ಯರು, ಸರ್ವೇ ಚ=ಸಮಸ್ತರು, ಜ್ಞಾನಯೋಗೇನ=ಜ್ಞಾನಯೋಗದಿಂದೆ, ಸರ್ವಕಾರಣ ಕಾರಣಂ=ಸಮಸ್ತಕಾರಣಂಗಳಿಗೆ ಕಾರಣವಾಗಿರ್ದ, ಪರಮಾನಂದಲಕ್ಷಣಂ=ಸರ್ವೋತ್ಕರ್ಷವಾದ ಸಚ್ಚಿದಾನಂದ ಸ್ವರೂಪವುಳ್ಳ, ಲಿಂಗಂ=ಜ್ಯೋತಿರ್ಮಯವಾದ ಮಹಾಲಿಂಗವನು, ಹೃದಯೇ=ಹೃದಯ ಕಮಲದಲ್ಲಿ ಪಶ್ಯಂತಿ=ಕಾಣುತ್ತಿರ್ದಪರು.

**ತಾತ್ಪರ್ಯ||** "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ"। ಯೆಂಬ ಶ್ರುತಿಯಿಂದೆ ರುದ್ರನೆ ಮಹಾಲಿಂಗವಲ್ಲವೆಯೆಂದರೆ "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇನ ಕಾರಣಮ್"॥ ಯೆಂಬ ಶ್ರುತಿಯಿಂದೆ ಈ ಮಹಾಲಿಂಗಧ್ಯಾತೃವಾದ ರುದ್ರನು ಕಾರ್ಯರುದ್ರನೆಂಬುದರ್ಥ. ||೪೩||

**ಸೂತ್ರ||** ಬಳಿಕ ಪಾಶವಿಮೋಚನಾರ್ಥವಾಗಿ ಈ ಜ್ಯೋತಿರ್ಲಿಂಗವನೆ ಧ್ಯಾನಿಸುವದೆಂದು ಹೇಳುತ್ತಿರ್ದಪಂ.

ಗ್ರಂಥ|| **ತಸ್ಮಾತ್ಸರ್ವಪ್ರಯತ್ನೇನ ಶಾಂಕರಂ ಲಿಂಗಮುತ್ತಮಮ್ ।**
**ಅಂತರ್ವಿಭಾವಯೇದ್ವಿದ್ವಾನಶೇಷಕ್ಲೇಶಮುಕ್ತಯೇ ॥**

**ಟೀಕು||** ತಸ್ಮಾತ್=ಅದು ಕಾರಣವಾಗಿ, ಸರ್ವಪ್ರಯತ್ನೇನ=ಸಮಸ್ತಪ್ರಯತ್ನದಿಂದವು, ಉತ್ತಮಂ ಶಾಂಕರಂ ಲಿಂಗಂ=ಶ್ರೇಷ್ಠವಾದ ಜ್ಯೋತಿರ್ಮಯವಾದ ಶಿವಲಿಂಗವನು, ವಿದ್ವಾನ್=ವಿದ್ವಾಂಸನಾದಾತನು, ಅಶೇಷಕ್ಲೇಶಮುಕ್ತಯೇ=ಸಮಸ್ತದುಃಖವಿಮೋಚನಾರ್ಥವಾಗಿ, ಅಂತಃ=ಹೃದಯಕಮಲದಲ್ಲಿ, ವಿಭಾವಯೇತ್=ಧ್ಯಾನಿಸುವುದು. ||೪೪||

**ಸೂತ್ರ||** ಬಳಿಕ ಬಾಹ್ಯಲಿಂಗಧಾರಣವನು ಹೇಳುತ್ತಿರ್ದಪಂ.

**ಗ್ರಂಥ||** **ಅಂತರ್ಧಾರಯಿತುಂ ಲಿಂಗಮಶಕ್ತಶ್ಶಕ್ತ ಏವ ವಾ ।**
**ಬಾಹ್ಯಂ ಚ ಧಾರಯೇಲ್ಲಿಂಗಂ ತದ್ರೂಪಮಿತಿ ನಿಶ್ಚಯಾತ್ ॥**

**ಟೀಕು||** ಲಿಂಗಂ=ಜ್ಯೋತಿರ್ಲಿಂಗವನು, ಅಂತಃ=ಹೃದಯಕಮಲದಲ್ಲಿ, ಧಾರಯಿತುಂ=ಧರಿಸಲು, ಅಶಕ್ತಃ=ಸಮರ್ಥನಲ್ಲದಿರ್ದಡೆಯು, ಶಕ್ತ ಏವ ವಾ=ಸಮರ್ಥನಾಯಿತ್ತಾದಡೆಯು, ಬಾಹ್ಯಲಿಂಗಂ ಚ=ಸ್ಫಟಿಕಶಿಲಾದಿ ನಿರ್ಮಿತವಾದ ಬಾಹ್ಯಲಿಂಗವನಾಯಿತ್ತಾದಡೆ, ತದ್ರೂಪಮಿತಿ= ಹೃದಯಕಮಲಾಶ್ರಿತವಾಗಿ ಜ್ಯೋತಿರ್ಮಯವಾದ ಆ ಮಹಾಲಿಂಗಸ್ವರೂಪವುಳ್ಳದೆಂಬ, ನಿಶ್ಚಯಾತ್= ನಿಶ್ಚಯಬುದ್ಧಿಯದೆಸೆಯಿಂದೆ, ಧಾರಯೇತ್=ಧರಿಸುವುದು.

**ತಾತ್ಪರ್ಯ||** "ಬಿಂದುಸ್ವರೂಪಾಮಲಮೂಲಪೀಠಂ ನಾದಸ್ವರೂಪಂ ಸ್ಫುರದೂರ್ಧ್ವಪೀಠಮ್। ಕಲಾತ್ಮತ್ರಿರ್ಯಗ್ಗತಗೋಮುಖಾಢ್ಯಂ ಚಿದ್ರೂಪಲಿಂಗಂ ಹೃದಯಾಬ್ಜಸಂಸ್ಥಮ್"||ಯೆಂಬ ಶಿವಾಲೋಕವಾಕ್ಯವುಂಟಾಗಿ ತದ್ರೂಪವಾದ ಬಾಹ್ಯಲಿಂಗವನು ಅಂತರ್ಲಿಂಗಸ್ಮರಣಾರ್ಥವಾಗಿಸಿ ವೀರಶೈವನು ಧರಿಸಬೇಕೆಂಬುದರ್ಥ. ||೪೫||

**ಸೂತ್ರ||** ಬಳಿಕ ಆ ಮಹಾಲಿಂಗ ಭೇದವನು ಹೇಳುತ್ತಿರ್ದಪಂ.

**ಗ್ರಂಥ||** **ಲಿಂಗಂ ತು ತ್ರಿವಿಧಂ ಪ್ರೋಕ್ತಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಮ್ ।**
**ಇಷ್ಟಲಿಂಗಮಿದಂ ಸ್ಥೂಲಂ ಯದ್ಬಾಹ್ಯೇ ಧಾರಯೇತ್ತನೌ ॥**

**ಪ್ರಾಣಲಿಂಗಂ ತು ತತ್ಸೂಕ್ಷ್ಮಂ ಯದಂತರ್ಭಾವನಾಮಯಮ್ ।**
**ಪರಾತ್ಪರಂ ತು ಯತ್ಪ್ರೋಕ್ತಂ ತೃಪ್ತಿಲಿಂಗಂ ತದುಚ್ಯತೇ ॥**

**ಟೀಕು||** ಲಿಂಗಂ ತು=ಮಹಾಲಿಂಗವಾಯಿತ್ತಾದಡೆ, ಸ್ಥೂಲಂ=ಸ್ಥೂಲವೆಂದು, ಸೂಕ್ಷ್ಮಂ= ಸೂಕ್ಷ್ಮವೆಂದು, ಪರಾತ್ಪರಂ=ಪರಾತ್ಪರವೆಂದು, ತ್ರಿವಿಧಂ=ಮೂರು ಪ್ರಕಾರವುಳ್ಳುದಾಗಿ, ಪ್ರೋಕ್ತಂ= ಹೇಳಲುಪಟ್ಟಿತ್ತು. ಯತ್=ಆವುದಾನೊಂದು ಲಿಂಗವು, ಬಾಹ್ಯೇ ತನೌ=ಬಾಹ್ಯಶರೀರದ ಮೇಲೆ, ಧಾರಯೇತ್=ಧರಿಸಲ್ಪಡುವಂತಾದ್ದು, ತತ್=ಅದು, ಸ್ಥೂಲಂ=ಸ್ಥೂಲಲಿಂಗವೆನಿಸುವುದು; ತತ್=ಆ ಸ್ಥೂಲಲಿಂಗವು,ಇಷ್ಟಲಿಂಗಂ-ಇಷ್ಟಲಿಂಗವೆನಿಸುವದು. ಅಂತಃ=ಹೃದಯದಲ್ಲಿ, ಭಾವನಾ ಮಯಂ=ಧ್ಯಾನಾತ್ಮಕವಾಗಿದ್ದ, ಪ್ರಾಣಲಿಂಗಂ ತು=ಪ್ರಾಣಲಿಂಗವು, ಸೂಕ್ಷ್ಮಂ=ಸೂಕ್ಷ್ಮವೆಂದು, ಉಚ್ಯತೇ= ಹೇಳಲುಪಡುವುದು; ತತ್=ಆ ಸೂಕ್ಷ್ಮಲಿಂಗವು ಪ್ರಾಣಲಿಂಗವೆನಿಸುವುದು. ಯತ್=ಆವುದಾನೊಂದು ಲಿಂಗವು, ಪ್ರೋಕ್ತಂ=ಉಪನಿಷತ್ತುಗಳಲ್ಲಿ ಬ್ರಹ್ಮವೆಂದು ಹೇಳಲ್ಪಟ್ಟಿತ್ತು, ತತ್=ಅದು, ಪರಾತ್ಪರಂ

ತು= ಪರಮಸೂಕ್ಷ್ಮಲಿಂಗವೆನಿಸಿಕೊಳ್ಳುವುದು, ತತ್=ಅದು, ತೃಪ್ತಿಲಿಂಗಂ=ತೃಪ್ತಿಲಿಂಗವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದುದು. ||೪೭||

**ಸೂತ್ರ||** ಬಳಿಕ ಸ್ಥೂಲವಾದ ಇಷ್ಟಲಿಂಗಧಾರಣವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಭಾವನಾತೀತಮವ್ಯಕ್ತಂ ಪರಬ್ರಹ್ಮಶಿವಾಭಿಧಮ್ ।**
**ಇಷ್ಟಲಿಂಗಮಿದಂ ಸಾಕ್ಷಾದನಿಷ್ಟಪರಿಹಾರತಃ ।**
**ಧಾರಯೇದವಧಾನೇನ ಶರೀರೇ ಸರ್ವದಾ ಬುಧಃ ॥**

**ಟೀಕು||** ಅವ್ಯಕ್ತಂ=ವ್ಯಕ್ತವಲ್ಲದೆ, ಪರಬ್ರಹ್ಮಶಿವಾಭಿಧಂ=ವೇದಾಗಮಂಗಳಲ್ಲಿ ಪರಬ್ರಹ್ಮ ಪರಶಿವನೆಂದು ಪ್ರಸಿದ್ಧವಾದ ಹೆಸರುಳ್ಳ, ಭಾವನಾತೀತಂ=ಷಟ್ಥಲದಲ್ಲಿ ಪ್ರಸಿದ್ಧವಾಗಿ ಭಾವನಾತೀತವಾದ ಮಹಾಲಿಂಗವೆ, ಅನಿಷ್ಟಪರಿಹಾರತಃ=ಅನಿಷ್ಟವಾದ ಸಂಸಾರಪಾಶವನು ಪರಿಪರಿಸುವುದರದೆಸೆಯಿಂದೆ, ಅವಧಾನೇನ=ಇಷ್ಟವಾದ ಪರಾಪರಮುಕ್ತಿಯ ಕೊಡುವದರದೆಸೆಯಿಂದೆ, ಸಾಕ್ಷಾತ್=ಪ್ರತ್ಯಕ್ಷವಾಗಿದ್ದ, ಇಷ್ಟಲಿಂಗಂ=ಇಷ್ಟಲಿಂಗವು, ಇದಂ='ಇಷ್ಟಮೂರ್ಜಂ ತಪಸಾನುಯಚ್ಛತಿ'ಯೆಂದು ಅಥರ್ವಶಿರಃ ಸಿದ್ಧವಾದ ಈ ಇಷ್ಟಲಿಂಗವನು, ಬುಧಃ=ಬಲ್ಲಾತನು, ಶರೀರೇ=ದೇಹದಲ್ಲಿ, ಅವಧಾನೇನ= ಅವಧಾನದಿಂದೆ, ಸರ್ವದಾ=ಎಲ್ಲಾ ಕಾಲದಲ್ಲಿಯೂ, ಧಾರಯೇತ್=ಧರಿಸುವುದು. ||೪೮||

**ಸೂತ್ರ||** ಬಳಿಕ ಲಿಂಗಧಾರಣ ಸ್ಥಾನಂಗಳನು ಹೇಳುತ್ತಿರ್ದ್ದಪಂ.

**ಗ್ರಂಥ||** **ಮೂರ್ಧ್ನಿ ವಾ ಕಂಠದೇಶೇ ವಾ ಕಕ್ಷೇ ವಕ್ಷಃಸ್ಥಲೇಽಪಿ ವಾ ।**
**ಕುಕ್ಷೌ ಹಸ್ತಸ್ಥಲೇ ವಾಽಪಿ ಧಾರಯೇಲ್ಲಿಂಗಮೈಶ್ವರಮ್ ॥**

**ಟೀಕು||** ಮೂರ್ಧ್ನಿ ವಾ=ಮಸ್ತಕದಲ್ಲಿಯಾದರು, ಕಂಠದೇಶೇ ವಾ=ಕೊರಳಿನಲ್ಲಿಯಾದರು, ಕಕ್ಷೇ=ಕಕ್ಷದಲ್ಲಿಯಾದರು, ವಕ್ಷಸ್ಥಲೇಽಪಿ ವಾ=ಉರಸ್ಥಲದಲ್ಲಿಯಾದರು, ಕುಕ್ಷೌ=ಉದರದಲ್ಲಿಯಾದರು, ಹಸ್ತಸ್ಥಲೇಽಪಿ ವಾ=ಕರತಲದಲ್ಲಿಯಾದರು, ಐಶ್ವರಂ ಲಿಂಗಂ=ಶಿವಲಿಂಗವನು, ಧಾರಯೇತ್= ಧರಿಸುವುದು. ||೪೯||

**ಸೂತ್ರ||** ಬಳಿಕ ಲಿಂಗಧಾರಣಕ್ಕೆ ನಿಷೇಧ ಸ್ಥಾನವನು ಹೇಳುತ್ತಿರ್ದ್ದಪಂ.

**ಗ್ರಂಥ||** **ನಾಭೇರಧಸ್ತಾಲ್ಲಿಂಗಸ್ಯ ಧಾರಣಂ ಪಾಪಕಾರಣಮ್ ।**
**ಜಟಾಗ್ರೇ ತ್ರಿಕಭಾಗೇ ಚ ಮಲಸ್ಥಾನೇ ನ ಧಾರಯೇತ್ ॥**

**ಟೀಕು||** ನಾಭೇಃ=ಪೊಕ್ಕುಳದದೆಸೆಯಿಂದೆ, ಅಧಸ್ತಾತ್=ಕೆಳಗೆ, ಲಿಂಗಸ್ಯ ಧಾರಣಂ=ಲಿಂಗಧಾರಣೆಯು, ಪಾಪಕಾರಣಂ=ಪಾಪಕ್ಕೆ ಕಾರಣವು, ಜಟಾಗ್ರೇ=ಜಡೆಯ ತುದಿಯಲ್ಲಿ, ತ್ರಿಕಭಾಗೇ ಚ=ಪಿಂಭಾಗದಲ್ಲಿಯು, ಮಲಸ್ಥಾನೇ ಚ=ಮಲಸ್ಥಾನದಲ್ಲಿಯು, ನ ಧಾರಯೇತ್=ಲಿಂಗವನು ಧರಿಸಲಾಗದು. ||೫೦||

**ಸೂತ್ರ||** ಬಳಿಕ ಕರಕಮಲವು ಲಿಂಗಧಾರಣ ಲಿಂಗಾರ್ಚನೆಯೆರಡಕ್ಕು ಸಾಧನವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಲಿಂಗಧಾರೀ ಸದಾ ಶುದ್ಧೋ ನಿಜಲಿಂಗಂ ಮನೋರಮಮ್ ।**
**ಅರ್ಚಯೇದ್ಗಂಧಪುಷ್ಪಾದ್ಯೈಃ ಕರಪೀಠೇ ಸಮಾಹಿತಃ ॥**

**ಟೀಕು||** ಸದಾಶುದ್ಧಃ=ನಿತ್ಯ ಶುದ್ಧನಾಗಿರ್ದ್ದ, ಲಿಂಗಧಾರೀ=ಶಿವಲಿಂಗಧಾರಕನು, ಮನೋರಮಂ=ಮನೋಹರವಾಗಿರ್ದ್ದಂಥಾ, ನಿಜಲಿಂಗಂ=ತನ್ನ ಇಷ್ಟಲಿಂಗವನು, ಕರಪೀಠೇ=ಹಸ್ತಪೀಠದಲ್ಲಿ, ಗಂಧಪುಷ್ಪಾದ್ಯೈಃ=ಗಂಧಪುಷ್ಪಾದಿಗಳಿಂದೆ, ಸಮಾಹಿತಃ=ಏಕಾಗ್ರಚಿತ್ತವುಳ್ಳಾತನಾಗಿ, ಅರ್ಚಯೇತ್=ಪೂಜಿಸುವುದು. ||೫೧||

**ಗ್ರಂಥ||** **ಬಾಹ್ಯಪೀಠಾರ್ಚನಾದೇತತ್ಕರಪೀಠಾರ್ಚನಂ ವರಮ್ ।**
**ಸರ್ವೇಷಾಂ ವೀರಶೈವಾನಾಂ ಮುಮುಕ್ಷೂಣಾಂ ನಿರಂತರಮ್ ॥**

**ಟೀಕು||** ಮುಮುಕ್ಷೂಣಾಂ=ಮೋಕ್ಷವನು ಬಯಸುತ್ತಿರ್ದ್ದ, ಸರ್ವೇಷಾಂ ವೀರಶೈವಾನಾಂ=ಸಮಸ್ತ ವೀರಶೈವರಿಗೆ, ನಿರಂತರಂ=ಎಡದೆರಹಿಲ್ಲದೆಯಿರ್ದ್ದ, ಏತತ್ ಕರಪೀಠಾರ್ಚನಂ=ಈ ಕರಪೀಠಪೂಜೆಯೆ, ಬಾಹ್ಯಪೀಠಾರ್ಚನಾತ್=ಬಾಹ್ಯಪೀಠಪೂಜೆಯದೆಸೆಯಿಂದೆ, ವರಂ=ಶ್ರೇಷ್ಠವು. ||೫೨||

**ಸೂತ್ರ||** ಬಳಿಕ ಬ್ರಹ್ಮಾದಿ ದೇವತೆಗಳಿಗೆಯು ಲಿಂಗಧಾರಣವನು ತೋರಿಸುತ್ತಿರ್ದ್ದಪಂ.

**ಗ್ರಂಥ||** **ಬ್ರಹ್ಮವಿಷ್ಣ್ವಾದಯೋ ದೇವಾಃ ಮುನಯೋ ಗೌತಮಾದಯಃ ।**
**ಧಾರಯಂತಿ ಸದಾ ಲಿಂಗಮ್ ಉತ್ತಮಾಂಗೇ ವಿಶೇಷತಃ ॥**

**ಟೀಕು||** ಬ್ರಹ್ಮವಿಷ್ಣ್ವಾದಯಃ=ಬ್ರಹ್ಮ ವಿಷ್ಣು ಮೊದಲಾಗುಳ್ಳ, ದೇವಾಃ=ದೇವತೆಗಳು, ಗೌತಮಾದಯಃ=ಗೌತಮ ಮೊದಲಾಗುಳ್ಳ, ಮುನಯಃ=ಮುನಿಗಳು, ಲಿಂಗಂ=ಶಿವಲಿಂಗವನು, ಉತ್ತಮಾಂಗೇ=ಮಸ್ತಕದಲ್ಲಿ, ವಿಶೇಷತಃ=ಮಿಗಿಲಾಗಿ, ಸದಾ=ಎಲ್ಲಾ ಕಾಲದಲ್ಲಿಯು, ಧಾರಯಂತಿ=ಧರಿಸುತ್ತಿರ್ದ್ದಪರು. ||೫೩||

**ಸೂತ್ರ||** ಬಳಿಕ ಲಕ್ಷ್ಮ್ಯಾದಿ ಶಕ್ತಿಗಳಿಗೆಯು ಲಿಂಗಧಾರಣವನು ತೋರಿಸುತ್ತಿರ್ದಪಂ.

ಗ್ರಂಥ|| **ಲಕ್ಷ್ಮ್ಯಾದಿಶಕ್ತಯಸ್ಸರ್ವಾಃ ಶಿವಭಕ್ತಿವಿಭಾವಿತಾಃ ।**
**ಧಾರಯಂತ್ಯಲಿಕಾಗ್ರೇಷು ಶಿವಲಿಂಗಮಹರ್ನಿಶಮ್ ॥**

**ಟೀಕು||** ಶಿವಭಕ್ತಿವಿಭಾವಿತಾಃ=ಶಿವಭಕ್ತಿಯಿಂದೆ ವಿಶೇಷವಾಗಿ ಭಾವಿಸಲುಪಟ್ಟ, ಸರ್ವಾಃ=ಸಮಸ್ತವಾದ, ಲಕ್ಷ್ಮ್ಯಾದಿ ಶಕ್ತಯಃ=ಮಹಾಲಕ್ಷ್ಮಿ ಮೊದಲಾಗುಳ್ಳ ಶಕ್ತಿದೇವತೆಗಳು, ಶಿವಲಿಂಗಂ-ಶಿವಲಿಂಗವನು,ಅಲಿಕಾಗ್ರೇಷು-ಲಲಾಟದ ಊರ್ಧ್ವಭಾಗವಾದ ಶಿರಸ್ಸುಗಳಲ್ಲಿ, ಅಹರ್ನಿಶಂ=ಅವಾಗವು,ಧಾರಯಂತಿ=ಧರಿಸುತ್ತಿರ್ದಪರು. ||೫೪||

**ಸೂತ್ರ||** ಬಳಿಕ ವೀರಶೈವನಿಗೆ ಲಿಂಗಧಾರಣವು ಸರ್ವಶಾಸ್ತ್ರಸಿದ್ಧವೆಂದು ಹೇಳುತ್ತಿರ್ದಪಂ.

ಗ್ರಂಥ|| **ವೇದಶಾಸ್ತ್ರಪುರಾಣೇಷು ಕಾಮಿಕಾದ್ಯಾಗಮೇಷು ಚ ।**
**ಲಿಂಗಧಾರಣಮಾಖ್ಯಾತಂ ವೀರಶೈವಸ್ಯ ನಿಶ್ಚಯಾತ್ ॥**

**ಟೀಕು||** ವೇದಶಾಸ್ತ್ರಪುರಾಣೇಷು=ವೇದಶಾಸ್ತ್ರಪುರಾಣಂಗಳಲ್ಲಿ, ಕಾಮಿಕಾದ್ಯಾಗಮೇಷು ಚ=ಕಾಮಿಕಾದಿ ವಾತುಲಾಂತವಾದ ಶಿವಾಗಮಂಗಳಲ್ಲಿಯು, ವೀರಶೈವಸ್ಯ=ವೀರಶೈವನಿಗೆ, ಲಿಂಗ ಧಾರಣಂ=ಶಿವಲಿಂಗಧಾರಣವು, ನಿಶ್ಚಯಾತ್=ನಿಶ್ಚಯವಾಗಿ, ಆಖ್ಯಾತಂ=ಹೇಳಲುಪಟ್ಟಿತು. ||೫೫||

**ಸೂತ್ರ||** "ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇತಿ ವಿಶ್ವತಃ। ಅತಪ್ತತನೂರ್ನ ತದಾಮೋ ಅಶ್ನುತೇ ಶೃತಾಸ ಇದ್ವಹಂತಸ್ತತ್ಸಮಾಶತೇತಿ॥"ಯೆಂಬ ಋಗ್ವೇದಾರ್ಥವನು ಪ್ರಕಾಶಿಸುತ್ತ ಲಿಂಗಧಾರಣವನು ಸೂತ್ರತ್ರಯದಿಂದೆ ತೋರಿಸುತ್ತಿರ್ದಪಂ.

ಗ್ರಂಥ|| **ಬ್ರಹ್ಮೇತಿ ಲಿಂಗಮಾಖ್ಯಾತಂ ಬ್ರಹ್ಮಣಃ ಪತಿರೀಶ್ವರಃ ।**
**ಪವಿತ್ರಂ ತದ್ಧಿ ವಿಖ್ಯಾತಂ ತತ್ಸಂಪರ್ಕಾತ್ತನುಶ್ಶುಚಿಃ ।**
**ಋಗಿತ್ಯಾಹ ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ॥**
**ತಸ್ಮಾತ್ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಮ್ ।**
**ಅತಪ್ತತನುರಜ್ಞೋ ವೈ ಆಮಸ್ಸಂಸ್ಕಾರವರ್ಜಿತಃ ।**
**ದೀಕ್ಷಯಾ ರಹಿತಸ್ಸಾಕ್ಷಾನ್ನಾಪ್ನುಯಾಲ್ಲಿಂಗಮುತ್ತಮಮ್ ॥**

**ಟೀಕು||** ಬ್ರಹ್ಮಣಃ ಪತಿಃ=ಬ್ರಹ್ಮನಿಗೆಯೊಡೆಯನಾಗಿರ್ದ್ದ, ಈಶ್ವರಃ=ಪರಶಿವನೆ, ಬ್ರಹ್ಮೇತಿ=ಬ್ರಹ್ಮವೆಂದು. ಲಿಂಗಮಿತಿ=ಲಿಂಗವೆಂದು, ಆಖ್ಯಾತಂ=ಹೇಳಲುಪಟ್ಟನು. ತತ್=ಆ ಲಿಂಗವು, ಪವಿತ್ರಂ=ಪವಿತ್ರವೆಂದು, ವಿಖ್ಯಾತಂ=ಪ್ರಸಿದ್ಧವಾಗಿದ್ದ ಅದು, ತತ್ಸಂಪರ್ಕಾತ್=ಆ ಲಿಂಗದ ಸಂಬಂಧದ ದೆಸೆಯಿಂದೆ,

ತನುಃ=ದೇಹವು, ಶುಚಿಃ=ಶುದ್ಧವಾಗಿದ್ದ ಅದು. ಹಿ ಯಸ್ಮಾತ್ ಕಾರಣಾತ್=ಆವುದದಾನೊಂದು ಕಾರಣವಾಗಿ, ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ ಇತಿ='ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ'ಯೆಂದು, ಋಕ್=ಋಗ್ವೇದವು, ಆಹ=ಹೇಳುತ್ತಿರ್ದಪುದು. ತಸ್ಮಾತ್=ಅದು ಕಾರಣವಾಗಿ, ಅನಾಮಯಂ= ದೋಷರಹಿತನಾಗಿ, ಪವಿತ್ರಂ=ಪವಿತ್ರವಾಗಿರ್ದ, ತತ್ ಶೈವಂ ಲಿಂಗಂ= ಆ ಶಿವಲಿಂಗವು, ಧಾರ್ಯಂ=ಧರಿಸಲು ಯೋಗ್ಯವಾಗಿದ್ದ ಅದು. ಅತಪ್ತತನುಃ=[ತಪೋನುಷ್ಠಾನದಿಂದ ಬಳಲಿಸದ ದೇಹವುಳ್ಳವನಾಗಿರ್ದ] ಅಜ್ಞೋ ವೈ=ಅಜ್ಞಾನಿಯಾಗಿರ್ದ, ಆಮಃ=ಅಪರಿಪಕ್ವದೇಹಿಯಾಗಿರ್ದ, ಸಂಸ್ಕಾರವರ್ಜಿತಃ=[ಶಿವ]ಸಂಸ್ಕಾರವರ್ಜಿತನಾಗಿ[ರ್ದ] ದೀಕ್ಷಯಾ ರಹಿತಃ=ಶಿವದೀಕ್ಷೆಯಿಂದ ತೊಲಗಿರ್ದ ಆತನು, ಸಾಕ್ಷಾತ್=ಪ್ರತ್ಯಕ್ಷವಾಗಿ, ಉತ್ತಮಂ ಲಿಂಗಂ=ಉತ್ತಮವಾದ ಶಿವ ಲಿಂಗವನು, ನಾಪ್ನುಯಾತ್=ಎಯ್ದುತ್ತಿರನು. ||೫೮||

**ಗ್ರಂಥ ||** **ಅಘೋರಾಽಪಾಕಾಶೀತಿ ಯಾ ತೇ ರುದ್ರ ಶಿವಾ ತನೂಃ |**
**ಯಜುಷಾ ಗೀಯತೇ ಯಸ್ಮಾತ್ತಸ್ಮಾಚ್ಛೈವೋಽಘವರ್ಜಿತಃ ||**

**ಟೀಕು ||** ಭೋ ರುದ್ರ=ಎಲೈ ಶಿವನೆ, ತೇ=ನಿನ್ನ, ಶಿವಾ=ಮಂಗಲವಾದ, ಯಾ ತನೂಃ=''ಅಂಗಂ ತು ಶಿವಯೋಗೀ ದೇಹಃ'' ಯೆಂಬಾಗಮ ವಾಕ್ಯವುಂಟಾಗಿ ಆವುದಾನೊಂದು ಅಂಗರೂಪವಾದ ದೇಹವುಂಟು, ಸಾ=ಆ ಶಿವಲಿಂಗ=ರೂಪವಾದ ಮೂರ್ತಿಯು, ಅಘೋರಾ= ಭಯಂಕರವಲ್ಲದೆ ಯಿದ್ದುದು, ಅಪಾಪಕಾಶೀತಿ=ಪಾಪರಹಿತವಾಗಿದ್ದುದುಯೆಂದು, ಯಜುಷಾ= ಯಜುರ್ವೇದದಿಂದೆ, ಯಸ್ಮಾತ್=ಆವುದಾನೊಂದು ಕಾರಣವಾಗಿ, ಗೀಯತೇ=ಹೇಳಲ್ಪಡುತ್ತಿರ್ದಪುದು. ತಸ್ಮಾತ್=ಅದು ಕಾರಣವಾಗಿ, ಶೈವಃ = ಶಿವಲಿಂಗ ಸಂಬಂಧವುಳ್ಳಾತನು, ಅಘವರ್ಜಿತಃ=ಪಾಪರಹಿತನಾಗಿದ್ದಾತನು. ||೫೯||

ಬಳಿಕ ಲಿಂಗಧಾರಣಸ್ಥಲವನು ಸಮಾಪ್ತಿಯ ಮಾಡಿ ಲಿಂಗಧಾರಣ ಸಂಪನ್ನನು ಭಸ್ಮವ ಧರಿಸಬೇಕೆಂದು ಮುಂದೆ ಭಸ್ಮಧಾರಣಸ್ಥಲವನು ಸೂಚಿಸುತ್ತಿರ್ದಪಂ.

**ಸೂತ್ರ||** ಬಳಿಕ "ಯಾ ತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ|
ತಯಾನಸ್ತನ್ವಾ ಶಂತಮಯಾ ಗಿರಿಶಂತಾಭಿ ಚಾಕಶೀಹಿ" ಯೆಂಬ ಯಜುರ್ವೇದದಿಂದೆಯು ಲಿಂಗಧಾರಣವನು ಹೇಳುತ್ತಿರ್ದಪಂ.

**ವೃತ್ತ||** **ಯೋ ಲಿಂಗಧಾರೀ ನಿಯತಾಂತರಾತ್ಮಾ**
**ನಿತ್ಯಂ ಶಿವಾರಾಧನಬದ್ಧಚಿತ್ತಃ |**
**ಸ ಧಾರಯೇತ್ಸರ್ವಮಲಾಪಹತ್ಯೈ**
**ಭಸ್ಮಾಮಲಂ ಚಾರು ಯಥಾ ಪ್ರಯೋಗಮ್ ||**

**ಟೀಕು||** ಯಃ ಲಿಂಗಧಾರೀ=ಆವನಾನೊರ್ವ ಶಿವಲಿಂಗಧಾರಕನು, ನಿಯತಾಂತರಾತ್ಮಾ=

ನಿಯತವಾದಂತರಾತ್ಮನುಳ್ಳಾತನಾಗಿ, ನಿತ್ಯಂ=ಆವಾಗವು, ಶಿವಾರಾಧನಬದ್ಧಚಿತ್ತಃ=ಶಿವಲಿಂಗಪೂಜೆಯಲ್ಲಿ ಕಟ್ಟಲುಪಟ್ಟ ಚಿತ್ತವುಳ್ಳ ಆತನು, ಸಃ=ಆ ಶಿವಲಿಂಗಧಾರಕನು, ಸರ್ವಮಲಾಪಹತ್ಯೈ=ಸಮಸ್ತ ಮಲವನು ತೊಲಗಿಸಲೋಸುಗ, ಚಾರು=ಮನೋಹರವಾಗಿ, ಅಮಲಂ=ನಿರ್ಮಲವಾದ, ಭಸ್ಮಂ=ವಿಭೂತಿಯನು, ಯಥಾಪ್ರಯೋಗಂ=ಶಾಸ್ತ್ರೋಕ್ತ ಪ್ರಯೋಗವನು ಮೀರದೆ, ಧಾರಯೇತ್=ಧರಿಸುವುದು. ||೬೦||

ಇತಿ ಲಿಂಗಧಾರಣಸ್ಥಲಮ್

**ಇತಿ ಲಿಂಗಧಾರಣಸ್ಥಲೇ ರೇಣುಕಾಗಸ್ತ್ಯಸಂವಾದೇ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಭಕ್ತಸ್ಥಲೇ ಗುರುಕಾರುಣ್ಯ-ಲಿಂಗಧಾರಣಪ್ರಸಂಗೋ ನಾಮ ಷಷ್ಠಃ ಪರಿಚ್ಛೇದಃ ಸಮಾಪ್ತಃ.**

## ೬ ಭಕ್ತಸ್ಥಲೇ ವಿಭೂತಿಧಾರಣಸ್ಥಲಮ್

**ರೇಣುಕ ಉವಾಚ ॥**

"ಭಸ್ಮಧ್ಯಾನಾತ್ಸಂಧಾನಂ ಭವತಿ । ಭಸ್ಮಧ್ಯಾನಾತ್ಪಂಚಾಕ್ಷರೀ ಸ್ಮರಣಂ ಭವತಿ । ತಸ್ಮಾತ್ ಧ್ಯಾನಾತ್ ಸ್ಥಾಣುತ್ವಂ ಚ ಗಚ್ಛತಿ । ಸ ಏಷಃ ಭಸ್ಮಜ್ಯೋತಿಃ । ಸ ಏಷಃ ಭಸ್ಮಜ್ಯೋತಿಃ"॥ ಯೆಂಬ ಭಸ್ಮಜಾಬಾಲೋಪನಿಷದರ್ಥವನು ಪ್ರಕಾಶಿಸುತ್ತ ಶಿವಲಿಂಗಧಾರಕನು ಸಮಸ್ತ ಮಲದೋಷವನು ಪರಿಹರಿಸಲೋಸುಗ ಭಸ್ಮವನು ಧರಿಸಬೇಕೆಂದು ಹೇಳಿ, ಬಳಿಕ ಶಿವಜ್ಞಾನಿಯಿಂದ ಗುಹ್ಯನಾಶಾ ಶರೀರತ್ರಯಾಶ್ರಿತರಾದ ಕಾಮಕಾಲಾಸುರರಸುಟ್ಟ ನಿರುಪಾಧಿಕ ಭಸ್ಮಧಾರಣವನು ಸೂತ್ರದ್ವಯದಿಂದೆ ರೇಣುಕಗಣೇಶ್ವರನು ಅಗಸ್ತ್ಯಮುನಿಗೋಸುಗ ನಿರೂಪಿಸುತ್ತಿರ್ದ್ದಪಂ.

**ಗ್ರಂಥ॥** **ಭಸ್ಮಧಾರಣಸಂಯುಕ್ತಃ ಪವಿತ್ರೋ ನಿಯತಾಶಯಃ ।**
**ಶಿವಾಭಿಧಾನಂ ಯತ್ಪ್ರೋಕ್ತಂ ಭಾಸನಾದ್ಭಸಿತಂ ತಥಾ ॥**

**ಮಹಾಭಸ್ಮೇತಿ ಸಂಚಿಂತ್ಯ ಮಹಾದೇವಂ ಪ್ರಭಾಮಯಮ್ ।**
**ವರ್ತಂತೇ ಯೇ ಮಹಾಭಾಗಾಃ ಮುಖ್ಯಾಸ್ತೇ ಭಸ್ಮಧಾರಿಣಃ ॥**

**ಟೀಕು॥** ಭಸ್ಮಧಾರಣಸಂಯುಕ್ತಃ=ಭಸ್ಮಧಾರಣದೊಡನೆ ಕೂಡಿರ್ದ್ದ ಶಿವಲಿಂಗಧಾರಕನು, ಪವಿತ್ರಃ=ಪವಿತ್ರನಾಗಿ, ನಿಯತಾಶಯಃ=ಜ್ಯೋತಿರ್ಲಿಂಗಾತ್ಮಕವಾದ ಭಸ್ಮದಲ್ಲಿ ನಿಯಮಿಸಲುಪಟ್ಟ ಚಿತ್ತವುಳ್ಳಾತನು, ಯತ್=ಆವುದಾನೊಂದು ಜ್ಯೋತಿರ್ಲಿಂಗವು, ಶಿವಾಭಿಧಾನಂ=ಪರಶಿವ ಪರಬ್ರಹ್ಮವೆಂಬ ಹೆಸರುಳ್ಳದಾಗಿ, ಪ್ರೋಕ್ತಂ=ಹೇಳಲುಪಟ್ಟಿತ್ತು. ಪ್ರಭಾಮಯಂ=ಜ್ಯೋತಿರ್ಲಿಂಗ ಸ್ವರೂಪವಾಗಿರ್ದ್ದ, ತಂ ಮಹಾದೇವಂ=ಆ ಮಹಾದೇವನನು, ಭಾಸನಾತ್=ಪ್ರಕಾಶಿಸುವದಾದ ಕಾರಣವಾಗಿ, ಭಸಿತಂ=ಭಸಿತವೆಂದು, ತಥಾ=ಹಾಂಗೆಯೆ, ಮಹಾಭಸ್ಮೇತಿ=ಮಹಾಭಸ್ಮವೆಂದು ಸಂಚಿಂತ್ಯ=ಧ್ಯಾನಿಸಿ, ಮಹಾಭಾಗಾಃ=ಶ್ರೇಷ್ಠರಾದ, ಯೇ=ಆರುಕೆಲಂಬರು ಚಿಲ್ಲಿಂಗಧಾರಕರು, ವರ್ತಂತೇ=ವರ್ತಿಸುತ್ತಿರ್ದ್ದಪರು. ತೇ=ಅವರು, ಮುಖ್ಯಾಃ=ಮುಖ್ಯರಾದ, ಭಸ್ಮಧಾರಿಣಃ=ನಿರುಪಾಧಿಕ ಭಸ್ಮಧಾರಣವುಳ್ಳ ಅವರು. ॥೨॥

**ಸೂತ್ರ॥** ಬಳಿಕ ಸೋಪಾಧಿಕ ಭಸ್ಮವನು ಹೇಳುತ್ತಿರ್ದ್ದಪಂ.

**ಗ್ರಂಥ॥** **ಶಿವಾಗ್ನ್ಯಾದಿಸಮುತ್ಪನ್ನಂ ಮಂತ್ರನ್ಯಾಸಾದಿಯೋಗತಃ ।**
**ತದುಪಾಧಿಕಮಿತ್ಯಾಹುರ್ಭಸ್ಮ ತಂತ್ರವಿಶಾರದಾಃ ॥**

**ಟೀಕು||** ಯತ್=ಆವುದಾನೊಂದು ಭಸ್ಮವು, ಮಂತ್ರನ್ಯಾಸಾದಿ ಯೋಗತಃ=ಪಂಚಬ್ರಹ್ಮಮಂತ್ರನ್ಯಾಸವು ಮೊದಲಾಗುಳ್ಳ ಮಂತ್ರನ್ಯಾಸದದೆಸೆಯಿಂದೆ, ಶಿವಾಗ್ನ್ಯಾದಿಸಮುತ್ಪನ್ನಂ=ಶಿವಮಂತ್ರದಿಂದೆ ಸಂಸ್ಕರಿಸಲುಪಟ್ಟ ಅಗ್ನಿತ್ರಯವೆ ಮೊದಲಾಗುಳ್ಳ ಅಗ್ನಿಯಿಂದೆ ಹುಟ್ಟಿರ್ದ್ದ ಅದು. ತತ್=ಆ ಭಸ್ಮವನು, ತಂತ್ರವಿಶಾರದಾಃ=ಶಿವಾಗಮ ಪ್ರವೀಣರು, ಉಪಾಧಿಕಂ ಭಸ್ಮೇತಿ=ಸೋಪಾಧಿಕ ಭಸ್ಮವೆಂದು, ಆಹುಃ=ಹೇಳುತ್ತಿರ್ದ್ದಪರು. ||೩||

**ಸೂತ್ರ||** ಬಳಿಕ ಭಸ್ಮನಾಮವನು ಹೇಳುತ್ತಿರ್ದ್ದಪಂ.

**ಗ್ರಂಥ||**

**ವಿಭೂತಿರ್ಭಸಿತಂ ಭಸ್ಮ ಕ್ಷಾರಂ ರಕ್ಷೇತಿ ಭಸ್ಮನಃ ।**
**ಏತಾನಿ ಪಂಚನಾಮಾನಿ ಹೇತುಭಿಃ ಪಂಚಭಿರ್ಭೃಶಮ್ ॥**

**ಟೀಕು||** ವಿಭೂತಿಃ=ವಿಭೂತಿಯೆಂದು, ಭಸಿತಂ=ಭಸಿತವೆಂದು, ಭಸ್ಮಂ=ಭಸ್ಮವೆಂದು, ಕ್ಷಾರಂ= ಕ್ಷಾರವೆಂದು, ರಕ್ಷೇತಿ=ರಕ್ಷೆಯೆಂದು, ಭಸ್ಮನಃ=ಭಸ್ಮದ, ಏತಾನಿ ಪಂಚ ನಾಮಾನಿ=ಈ ಅಯಿದು ನಾಮಂ ಗಳು, ಪಂಚಭಿಃ ಹೇತುಭಿಃ=ಅಯಿದುಕಾರಣಂಗಳಿಂದೆ, ಭೃಶಂ=ಮಿಗಿಲಾಗಿ ಇರುತ್ತಿರ್ದ್ದ ಅವು. ||೪||

**ಸೂತ್ರ||** ಬಳಿಕ ಆ ಕಾರಣಂಗಳನು ಅನ್ವರ್ಥವ ಮಾಡಿ ಹೇಳುತ್ತಿರ್ದ್ದಪಂ.

**ಗ್ರಂಥ||**

**ವಿಭೂತಿರ್ಭೂತಿಹೇತುತ್ವಾದ್ಭಸಿತಂ ತತ್ತ್ವಭಾಸನಾತ್ ।**
**ಪಾಪಾನಾಂ ಭರ್ತ್ಸನಾದ್ಭಸ್ಮ ಕ್ಷರಣಾತ್ ಕ್ಷಾರಮಾಪದಾಮ್ ।**
**ರಕ್ಷಣಾತ್ಸರ್ವಭೂತೇಭ್ಯೋ ರಕ್ಷೇತಿ ಪರಿಗೀಯತೇ ॥**

**ಟೀಕು||** ಭೂತಿಹೇತುತ್ವಾತ್=ಅಣಿಮಾದ್ಯೈಶ್ವರ್ಯಕ್ಕೆ ಕಾರಣವಾದ ಕಾರಣವಾಗಿ, ವಿಭೂತಿಃ= ವಿಭೂತಿಯೆಂದು, ಗೀಯತೇ=ಹೇಳಲ್ಪಡುತ್ತಿರ್ದ್ದಪುದು. ತತ್ತ್ವಭಾಸನಾತ್=ಶಿವತತ್ತ್ವವನು ಪ್ರಕಾಶಿಸುವ ದಾದ ಕಾರಣವಾಗಿ, ಭಸಿತಂ=ಭಸಿತವೆಂದು, ಗೀಯತೇ=ಹೇಳಲುಪಡುತ್ತಿರ್ದ್ದಪುದು. ಪಾಪಾನಾಂ= ಮನೋವಾಕ್ಕಾಯಜನ್ಯವಾದ ಮಹಾಪಾತಕಂಗಳ, ಭರ್ತ್ಸನಾತ್=ಬೆದರಿಸುವದಾದ ಕಾರಣವಾಗಿ, ಭಸ್ಮ=ಭಸ್ಮವೆಂದು, ಗೀಯತೇ=ಹೇಳಲುಪಡುತ್ತಿರ್ದ್ದಪುದು. ಆಪದಾಂ=ತಾಪತ್ರಯದಿಂದಲಾದ ವಿಪತ್ತುಗಳ, ಕ್ಷರಣಾತ್=ತೊಲಗಿಸುವದಾದ ಕಾರಣವಾಗಿ, ಕ್ಷಾರಂ=ಕ್ಷಾರವೆಂದು, ಗೀಯತೇ=ಹೇಳಲು ಪಡುತ್ತಿರ್ದ್ದಪುದು. ಸರ್ವಭೂತೇಭ್ಯಃ=ಸಮಸ್ತಪ್ರಾಣಿಗಳದೆಸೆಯಿಂದೆ, ರಕ್ಷಣಾತ್= ರಕ್ಷಿಸುವದಾದ ಕಾರಣವಾಗಿ, ರಕ್ಷೇತಿ=ರಕ್ಷೆಯೆಂದು, ಪರಿಗೀಯತೇ=ಹೇಳಲುಪಡುತ್ತಿರ್ದ್ದಪುದು. ||೫||

**ಸೂತ್ರ||** ಬಳಿಕ ಈ ಪಂಚ ಭಸ್ಮಕ್ಕೆ ಕಾರಣವಾದ ಗೋವುಗಳನು ಕ್ರಮದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ನಂದಾ ಭದ್ರಾ ಚ ಸುರಭಿಸ್ಸುಶೀಲಾ ಸುಮನಾಸ್ತಥಾ ।
ಪಂಚ ಗಾವೋ ವಿಭೋರ್ಜಾತಾಸ್ಸದ್ಯೋಜಾತಾದಿವಕ್ತ್ರತಃ ॥**

**ಟೀಕು||** ನಂದಾ=ನಂದೆ, ಭದ್ರಾ=ಭದ್ರೆ, ಸುರಭಿಃ=ಸುರಭಿ, ಸುಶೀಲಾ=ಸುಶೀಲೆ, ತಥಾ=ಹಾಂಗೆಯೆ, ಸುಮನಾಃ=ಸುಮನವೆಂಬೀ, ಪಂಚ ಗಾವಃ=ಅಯಿದು ಗೋವುಗಳು, ವಿಭೋಃ= ವ್ಯಾಪಕನಾದ ಪರಮೇಶ್ವರನ, ಸದ್ಯೋಜಾತಾದಿವಕ್ತ್ರತಃ=ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನವೆಂಬ ಪಂಚಮುಖಂಗಳದೆಸೆಯಿಂದೆ, ಜಾತಾಃ=ಹುಟ್ಟಿದವು. ||೬||

**ಸೂತ್ರ||** ಬಳಿಕ ಆ ಗೋವುಗಳ ವರ್ಣವನು ಕ್ರಮದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಕಪಿಲಾ ಕೃಷ್ಣಾ ಧವಲಾ ಧೂಮ್ರಾ ರಕ್ತಾ ತಥೈವ ಚ ।
ನಂದಾದೀನಾಂ ಗವಾಂ ವರ್ಣಾಃ ಕ್ರಮೇಣ ಪರಿಕೀರ್ತಿತಾಃ ॥**

**ಟೀಕು||** ಕಪಿಲಾ=ಕಪಿಲವರ್ಣ, ಕೃಷ್ಣಾ=ಕೃಷ್ಣವರ್ಣ, ಧವಲಾ=ಶುಭ್ರವರ್ಣ, ಧೂಮ್ರಾ= ಧೂಮ್ರ ವರ್ಣ, ರಕ್ತಾ=ರಕ್ತವರ್ಣವೆಂಬ, ವರ್ಣಾಃ=ಕಾಂತಿಗಳು, ನಂದಾದೀನಾಂ ಗವಾಂ=ನಂದಾದಿ ಗೋವುಗಳಿಗೆ, ತಥೈವ ಚ ಕ್ರಮೇಣ=ಆ ಪ್ರಕಾರವಾದ ಕ್ರಮದಿಂದವೆ, ಪರಿಕೀರ್ತಿತಾಃ=ಹೇಳಲುಪಟ್ಟವು. ||೭||

**ಸೂತ್ರ||** ಬಳಿಕ ಬೃಹಜ್ಜಾಬಾಲೋಪನಿಷದರ್ಥವನು ಪ್ರಕಾಶಿಸುತ್ತ ಆ ಪಂಚ ಗೋವುಗಳ ದೆಸೆಯಿಂದೆ ಪಂಚವಿಧ ಭಸ್ಮೋತ್ಪತ್ತಿಯನು ಕ್ರಮದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಸದ್ಯೋಜಾತಾದ್ವಿಭೂತಿಶ್ಚ ವಾಮಾದ್ಭಸಿತಮೇವ ಚ ।
ಅಘೋರಾದ್ಭಸ್ಮ ಸಂಜಾತಂ ತತ್ಪುರುಷಾತ್ ಕ್ಷಾರನಾಮ ಚ ।
ರಕ್ಷಾ ಚೇಶಾನವಕ್ತ್ರಾಚ್ಚ ನಂದಾದಿದ್ವಾರತೋ ಭವೇತ್ ॥**

**ಟೀಕು||** ಸದ್ಯೋಜಾತಾತ್=ಸದ್ಯೋಜಾತದದೆಸೆಯಿಂದೆ, ವಿಭೂತಿಃ ಚ=ವಿಭೂತಿಯು, ವಾಮಾತ್=ವಾಮದೇವದದೆಸೆಯಿಂದೆ, ಭಸಿತಮೇವ ಚ=ಭಸಿತವೆ, ಅಘೋರಾತ್=ಅಘೋರದ ದೆಸೆಯಿಂದೆ, ಭಸ್ಮ=ಭಸ್ಮವು, ಸಂಜಾತಂ=ಹುಟ್ಟಿತ್ತು. ತತ್ಪುರುಷಾತ್=ತತ್ಪುರುಷದದೆಸೆಯಿಂದೆ, ಕ್ಷಾರನಾಮ ಚ=ಕ್ಷಾರನಾಮವೆಂಬ ಹೆಸರುಳ್ಳುದು, ಈಶಾನವಕ್ತ್ರಾಚ್ಚ=ಈಶಾನಮುಖದದೆಸೆಯಿಂದೆ, ರಕ್ಷಾ ಚ=ರಕ್ಷೆಯು, ನಂದಾದಿದ್ವಾರತಃ=ನಂದಾದಿಪಂಚಗೋವುಗಳ ದ್ವಾರದದೆಸೆಯಿಂದೆ, ಭಸ್ಮ=ಭಸ್ಮವು, ಸಂಜಾತಂ=ಹುಟ್ಟಿತ್ತು. ತತ್=ಆ ಪಂಚವಿಧ ಭಸ್ಮವು, ಅಭವತ್=ಕ್ರಮದಿಂದೆ ಆಯಿತ್ತು. ||೮||

**ಸೂತ್ರ||** ಬಳಿಕ ಈ ಭಸ್ಮಪಂಚಕವನು ನಿತ್ಯನೈಮಿತ್ತಿಕಾದಿ ಕರ್ಮಂಗಳಲ್ಲಿ ಧರಿಸಬೇಕೆಂದು ವಿಧಿಸುತ್ತಿರ್ದಪಂ.

**ಗ್ರಂಥ||** **ಧಾರಯೇನ್ನಿತ್ಯಕಾರ್ಯೇಷು ವಿಭೂತಿಂ ಚ ಪ್ರಯತ್ನತಃ ।**
**ನೈಮಿತ್ತಿಕೇಷು ಭಸಿತಂ ಕ್ಷಾರಂ ಕಾರ್ಯೇಷು ಸರ್ವದಾ ॥**

**ಪ್ರಾಯಶ್ಚಿತ್ತೇಷು ಸರ್ವೇಷು ಭಸ್ಮನಾಮ ಯಥಾವಿಧಿ ।**
**ಕ್ಷಾರಂ ಚ ಮೋಕ್ಷಕಾರ್ಯೇಷು ಪ್ರಯೋಕ್ತವ್ಯಾ ಸದಾ ಬುಧೈಃ ॥**

**ಟೀಕು||** ನಿತ್ಯಕಾರ್ಯೇಷು=ನಿತ್ಯಕಾರ್ಯಂಗಳಲ್ಲಿ, ವಿಭೂತಿಂ=ವಿಭೂತಿಯನು, ಪ್ರಯತ್ನತಃ= ಪ್ರಯತ್ನದಿಂದೆ, ಧಾರಯೇತ್=ಧರಿಸುವುದು. ನೈಮಿತ್ತಿಕೇಷು=ನೈಮಿತ್ತಿಕ ಕಾರ್ಯಂಗಳಲ್ಲಿ, ಭಸಿತಂ= ಭಸಿತವನು,ಧಾರಯೇತ್=ಧರಿಸುವುದು.ಸರ್ವದಾ ಕಾರ್ಯೇಷು=ಸರ್ವಕಾರ್ಯಂಗಳಲ್ಲಿಯು ಕ್ಷಾರಂ=ಕ್ಷಾರವನು, ಧಾರಯೇತ್=ಧರಿಸುವುದು. ಸರ್ವೇಷು ಪ್ರಾಯಶ್ಚಿತ್ತೇಷು=ಸಮಸ್ತ ಪ್ರಾಯಶ್ಚಿತ್ತ ಕರ್ಮಂಗಳಲ್ಲಿ, ಭಸ್ಮನಾಮ=ಭಸ್ಮವೆಂಬ ಹೆಸರುಳ್ಳ ಭಸ್ಮವನು, ಯಥಾವಿಧಿ=ಶಾಸ್ತ್ರೋಕ್ತ ಪ್ರಕಾರವನು ಮೀರದೆ, ಧಾರಯೇತ್=ಧರಿಸುವುದು. ಮೋಕ್ಷಕಾರ್ಯೇಷು=ಮೋಕ್ಷಕರ್ಮಂಗಳಲ್ಲಿ, ಕ್ಷಾರಂ ಚ=ಕ್ಷಾರವೆಂಬ ವಿಭೂತಿಯು, ಬುಧೈಃ=ವೀರಶೈವರಾದ ವಿದ್ವಾಂಸರಿಂದೆ, ಸದಾ=ಎಲ್ಲಾ ಕಾಲದಲ್ಲಿಯು, ಪ್ರಯೋಕ್ತವ್ಯಾ=ಧರಿಸಲು ಯೋಗ್ಯವು. ||೧೧||

**ಸೂತ್ರ||** ಬಳಿಕ ಪಂಚವಿಧವಾದ ವಿಭೂತ್ಯಾದಿಗಳ ವರ್ಣವನು ಕ್ರಮದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ನಂದಾದೀನಾಂ ತು ಯೇ ವರ್ಣಾಃ ಕಪಿಲಾದ್ಯಾಃ ಪ್ರಕೀರ್ತಿತಾಃ ।**
**ತ ಏವ ವರ್ಣಾ ವಿಖ್ಯಾತಾಃ ಭೂತ್ಯಾದೀನಾಂ ಯಥಾಕ್ರಮಮ್ ॥**

**ಟೀಕು||** ನಂದಾದೀನಾಂ=ನಂದೆ ಮೊದಲಾದ ಪಂಚಗೋವುಗಳಿಗೆ, ಕಪಿಲಾದ್ಯಾಃ ಯೇ ವರ್ಣಾಃ=ಕಪಿಲ ವರ್ಣವೆ ಮೊದಲಾಗುಳ್ಳ ಆವು ಕೆಲವು ವರ್ಣಂಗಳು, ಪ್ರಕೀರ್ತಿತಾಃ=ಹೇಳಲು ಪಟ್ಟವು, ತ ಏವ ವರ್ಣಾಃ=ಆ ವರ್ಣಂಗಳೆ, ಭೂತ್ಯಾದೀನಾಂ=ವಿಭೂತಿ ಮೊದಲಾಗಿ ರಕ್ಷೆ ಕಡೆಯಾದ ಪಂಚವಿಧ ಭಸ್ಮಂಗಳಿಗೆ, ಯಥಾಕ್ರಮಂ=ಕ್ರಮವನು ಮೀರದೆ, ವಿಖ್ಯಾತಾಃ=ಪ್ರಸಿದ್ಧವಾಗಿರ್ದ್ದ ಅವು. ||೧೨||

**ಸೂತ್ರ||** ಬಳಿಕ ಭಸ್ಮೋತ್ಪತ್ತಿಯನು ಹೇಳುತ್ತಿರ್ದಪಂ.

**ಗ್ರಂಥ||** **ಭಸ್ಮೋತ್ಪಾದನಮುದ್ದಿಷ್ಟಂ ಚತುರ್ಧಾ ತಂತ್ರವೇದಿಭಿಃ ।**
**ಕಲ್ಪಂ ಚೈವಾನುಕಲ್ಪಂ ತು ಉಪಕಲ್ಪಮಕಲ್ಪಕಮ್ ।**
**ತೇಷಾಮಾದಿಮಮುತ್ಕೃಷ್ಟಮನ್ಯತ್ಸರ್ವಮಭಾವತಃ ॥**

**ಟೀಕು||** ಕಲ್ಪಂ ಚ=ಕಲ್ಪವೆಂದು, ಏವ ಅನುಕಲ್ಪಂ=ಅನುಕಲ್ಪವೆಂದು, ಉಪಕಲ್ಪಂ ತು=ಉಪಕಲ್ಪವೆಂದು ಅಕಲ್ಪಕಂ=ಅಕಲ್ಪವೆಂದು, ಏತೇಭಸ್ಮೋತ್ಪಾದನಂ=ಆವುದಾನೊಂದು ಭಸ್ಮೋತ್ಪತ್ತಿ[ಯು], ಚತುರ್ಧಾ=ನಾಲ್ಕು ಪ್ರಕಾರವಾಗಿ, ತಂತ್ರವೇಧಿಭಿಃ=ಶಿವಾಗಮ ಜ್ಞಾನಿಗಳಿಂದೆ, ಉದ್ದಿಷ್ಟಂ=ಉದ್ದೇಶಿಸಲುಪಟ್ಟಿತು. ತೇಷಾಂ=ಅವರೊಳಗೆ, ಆದಿಮಂ=ಮೊದಲದಾದ, ಕಲ್ಪ=ಕಲ್ಪಭಸ್ಮವೆ, ಉತ್ಕೃಷ್ಟಂ=ಶ್ರೇಷ್ಠವು. ಅಭಾ[ವತಃ]=ಕಲ್ಪಭಸ್ಮವಿಲ್ಲದೆ ಇರಲಾಗಿ, ಅನ್ಯತ್ ಸರ್ವಂ=ಅನುಕಲ್ಪಾದಿ ಉಳಿದ ಭಸ್ಮವು, ಧಾರ್ಯಮೇವ=ಧರಿಸಲುಯೋಗ್ಯವೆ. ||೧೪||

**ಸೂತ್ರ||** ಬಳಿಕ ಕಲ್ಪಭಸ್ಮಲಕ್ಷಣವನು ಹೇಳುತ್ತಿರ್ದಪಂ.

**ಗ್ರಂಥ||**

**ಯಥಾಶಾಸ್ತ್ರೋಕ್ತವಿಧಿನಾ ಗೃಹೀತ್ವಾ ಗೋಮಯಂ ನವಮ್ ।**
**ಸದ್ಯೇನ ವಾಮದೇವೇನ ಕುರ್ಯಾತ್ಪಿಂಡಮನುತ್ತಮಮ್ ॥**

**ಶೋಷಯೇತ್ಪುರುಷೇಣೈವ ದಹೇದ್ಘೋರಾಚ್ಛಿವಾಗ್ನಿನಾ ।**
**ಕಲ್ಪಂ ತದ್ಭಸ್ಮ ವಿಜ್ಞೇಯಮನುಕಲ್ಪಮಥೋಚ್ಯತೇ ।**
**ತತ್ ಈಶಾನಮಂತ್ರೇಣ ಬಿಲ್ವಪಾತ್ರೇ ನಿಧಾಪಯೇತ್ ॥**

**ಟೀಕು||** ಯಥಾಶಾಸ್ತ್ರೋಕ್ತವಿಧಿನಾ=ಶಾಸ್ತ್ರೋಕ್ತಪ್ರಕಾರವನು ಮೀರದೆಯಿಹುದರಿಂದೆ, ನವಂ ಗೋಮಯಂ=ನಂದಾದಿ ಗೋವುಗಳಲ್ಲಿ ಹುಟ್ಟಿದ ಹೊಸತಾದ ಗೋಮಯುವನು, ಸದ್ಯೇನ=ಸದ್ಯೋಜಾತಮಂತ್ರದಿಂದೆ, ಗೃಹೀತ್ವಾ=ತೆಗೆದುಕೊಂಡು, ವಾಮದೇವೇನ=ವಾಮದೇವ ಮಂತ್ರದಿಂದೆ, ಅನುತ್ತಮಂ ಪಿಂಡಂ=ಶ್ರೇಷ್ಠವಾದ ಮುದ್ದೆಯನು, ಕುರ್ಯಾತ್=ಮಾಡುವುದು. ಪುರುಷೇಣೈವ=ತತ್ಪುರುಷಮಂತ್ರದಿಂದವೆ, ಶೋಷಯೇತ್=ಒಣಗಿಸುವದು. ಅಘೋರಾತ್=ಅಘೋರಮಂತ್ರದದೆಸೆಯಿಂದೆ, ಶಿವಾಗ್ನಿನಾ=ಶಿವಮಂತ್ರದಿಂದೆ ಸಂಸ್ಕರಿಸಲುಪಟ್ಟ ಅಗ್ನಿಯಿಂದೆ, ದಹೇತ್=ಸುಡುವುದು. ತತ್=ಈಶಾನಮಂತ್ರದಿಂದೆ ಬಿಲ್ವಾದಿ ಪಾತ್ರೆಯಲ್ಲಿರಿಸಲುಪಟ್ಟ ಆ ಭಸ್ಮವು, ಕಲ್ಪಂ=ಕಲ್ಪಭಸ್ಮವೆಂದು, ವಿಜ್ಞೇಯಂ=ಅರಿಯಲು ಯೋಗ್ಯವು. ಅಥ=ಅನಂತರದಲ್ಲಿ ಅನುಕಲ್ಪಂ=ಅನುಕಲ್ಪಭಸ್ಮವು, ಉಚ್ಯತೇ=ಹೇಳಲುಪಡುತ್ತಿರ್ದಪುದು. ||೧೬||

**ಸೂತ್ರ||** ಬಳಿಕ ಅನುಕಲ್ಪಾದಿಗಳಿಗೆ ಲಕ್ಷಣವನು ಹೇಳುತ್ತಿರ್ದಪಂ.

**ಗ್ರಂಥ||**

**ವನೇಷು ಗೋಮಯಂ ಯಚ್ಚ ಶುಷ್ಕಂ ಚೂರ್ಣೀಕೃತಂ ತಥಾ ।**
**ದಗ್ಧಂ ಚೈವಾನುಕಲ್ಪಾಖ್ಯಮಾಪಣಾದಿಗತಂ ತು ಯತ್ ॥**

**ವಸ್ತ್ರೇಣೋತ್ತಾರಿತಂ ಭಸ್ಮ ಗೋಮೂತ್ರಾಬದ್ಧಪಿಂಡಿತಮ್ ।**
**ದಗ್ಧಂ ಪ್ರಾಗುಕ್ತವಿಧಿನಾ ಭವೇದ್ಭಸ್ಮೋಪಕಲ್ಪಕಮ್ ।**
**ಅನ್ಯೈರಾಪಾದಿತಂ ಭಸ್ಮಾಪ್ಯಕಲ್ಪಮಿತಿ ಕಲ್ಪಿತಮ್ ॥**

**ಟೀಕು||** ವನೇಷು=ಅರಣ್ಯಗಳಲ್ಲಿ, ಯತ್=ಆವುದಾನೊಂದು, ಶುಷ್ಕಂ ಗೋಮಯಂ=ಒಣಗಿದ ಬೆರಟೆಯುಂಟು, ತತ್=ಅದ[ನು], ಚೂರ್ಣೀಕೃತಂ=ಪುಡಿಮಾಡಲುಪಟ್ಟುದಾಗಿ, ಚ=ಮತ್ತು, ತಥಾ=ಆ ಪ್ರಕಾರದಿಂದೆ, ದಗ್ಧಂ=ಸುಟ್ಟ ಭಸ್ಮವೆ, ಅನುಕಲ್ಪಾಖ್ಯಂ=ಅನುಕಲ್ಪವೆಂಬ ಹೆಸರುಳ್ಳ ಭಸ್ಮವು. ಆಪಣಾದಿಗತಂ ತು=ಅಂಗಡಿ ಸಂತೆ ಮೊದಲಾದವನು ಎಯ್ದಿದ, ಯತ್ ಭಸ್ಮ=ಆವುದಾನೊಂದು ಭಸ್ಮವು, ವಸ್ತ್ರೇಣೋತ್ತಾರಿತಂ=ವಸ್ತ್ರದಿಂದೆ ಶೋಧಿಸಲುಪಟ್ಟುದಾಗಿ, ಗೋಮೂತ್ರಾ ಬದ್ಧಪಿಂಡಿತಂ= ಗೋಮೂತ್ರದಿಂದೆ ಕಲಸಿ ಮುದ್ದೆಯಮಾಡಲುಪಟ್ಟುದಾಗುತ್ತ, ಪ್ರಾಗುಕ್ತ ವಿಧಿನಾ=ಮೊದಲು ಹೇಳಿದ ಪ್ರಕಾರದಿಂದೆ, ದಗ್ಧಂ ಭಸ್ಮ=ಸುಟ್ಟ ಭಸ್ಮವು, ಉಪಕಲ್ಪಕಂ=ಉಪಕಲ್ಪಕವೆಂಬ ಭಸ್ಮವು, ಭವೇತ್=ಅಹುದು. ಅನ್ಯೈಃ=ಉಳಿದವರಿಂದೆ, ಆಪಾದಿತಂ ಭಸ್ಮಾಪಿ=ಸಂಪಾದಿಸಲುಪಟ್ಟ ಭಸ್ಮವಾಯಿತ್ತಾದಡೆ, ಅಕಲ್ಪಮಿತಿ=ಅಕಲ್ಪವೆಂದು, ಕಲ್ಪಿತಂ=ಕಲ್ಪಿಸಲುಪಟ್ಟಿತ್ತು. ||೧೯||

**ಸೂತ್ರ||** ಬಳಿಕ ಭಸ್ಮಸ್ನಾನವಿಧಿಯನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದಪಂ.

ಗ್ರಂಥ||
**ಏಷ್ವೇಕತಮಮಾದಾಯ ಪಾತ್ರೇಷು ಕಲಶಾದಿಷು ।**
**ತ್ರಿಸಂಧ್ಯಮಾಚರೇತ್ಸ್ನಾನಂ ಯಥಾಸಂಭವಮೇವ ವಾ ॥**

**ಟೀಕು||** ಕಲಶಾದಿಷು ಪಾತ್ರೇಷು=ಕಳಸ ಮೊದಲಾದ ಭಸ್ಮಪಾತ್ರೆಗಳಲ್ಲಿ, ಸ್ಥಿತೇಷು=ಇರುತ್ತಿರ್ದ, ಏಷು=ಈ ಕಲ್ಪಾನುಕಲ್ಪಾದಿಯಾದ ಭಸ್ಮಂಗಳಲ್ಲಿ, ಏಕತಮಂ=ಒಂದು ಭಸ್ಮವನು, ಆದಾಯ= ತೆಗೆದುಕೊಂಡು, ತ್ರಿಸಂಧ್ಯಂ=ತ್ರಿಸಂಧ್ಯಾಕಾಲದಲ್ಲಿಯಾದರೂ, ವಾ=ಅಹಂಗಲ್ಲವೆ, ಯಥಾಸಂಭವಂ= ಕಾಲೋಚಿತವಾಗಿಯಾದರೂ, ಸ್ನಾನಂ=ಭಸ್ಮಸ್ನಾನವನು, ಆಚರೇದೇವ=ಮಾಡುವದೆ. ||೨೦||

ಗ್ರಂಥ||
**ಸ್ನಾನಕಾಲೇ ಕರೌ ಪಾದೌ ಪ್ರಕ್ಷಾಲ್ಯ ವಿಮಲಾಂಭಸಾ ।**
**ವಾಮಹಸ್ತತಲೇ ಭಸ್ಮ ಕ್ಷಿಪ್ತ್ವಾಽಽಚ್ಛಾದ್ಯಾನ್ಯಪಾಣಿನಾ ।**
**ಅಷ್ಟಕೃತ್ವೋಽಥ ಮೂಲೇನ ಮೌನೀ ಭಸ್ಮಾಭಿಮಂತ್ರ್ಯ ಚ ॥**

**ಟೀಕು||** ಸ್ನಾನಕಾಲೇ=ಭಸ್ಮಸ್ನಾನವ ಮಾಡುವ ಕಾಲದಲ್ಲಿ, ಕರೌ ಪಾದೌ=ಹಸ್ತಪಾದಂಗಳನು, ವಿಮಲಾಂಭಸಾ=ನಿರ್ಮಲೋದಕದಿಂದೆ, ಪ್ರಕ್ಷಾಲ್ಯ=ತೊಳೆದು, ಅಥ=ಅನಂತರದಲ್ಲಿ, ಮೌನೀ= ಮೌನಿಯಾಗಿ, ವಾಮಹಸ್ತತಲೇ ಕ್ಷಿಪ್ತ್ವಾ="ಮೌನೀ ಭಸ್ಮಾಭಿಮಂತ್ರಯೇತ್" ಯೆಂಬ ಶಿವಾಗಮ ವುಂಟಾಗಿ ಭಸ್ಮವನು ವಾಮಹಸ್ತದಲ್ಲಿಯಿರಿಸಿಕೊಂಡು, ಅನ್ಯಪಾಣಿನಾ=ದಕ್ಷಿಣ ಹಸ್ತದಿಂದೆ, ಆಚ್ಛಾದ್ಯ= ಮುಚ್ಚಿಕೊಂಡು ಬಲದತೊಡೆಯ ಮೇಲಿರಿಸಿಕೊಂಡು, ಅಷ್ಟಕೃತ್ವಃ=ಎಂಟುಬಾರಿ, ಮೂಲೇನ=ಓಂಕಾರ ಮಂತ್ರದಿಂದೆ, ಭಸ್ಮಂ=ಭಸ್ಮವನು, ಅಭಿಮಂತ್ರ್ಯ ಚ=ಅಭಿಮಂತ್ರಿಸಿಕೊಂಡು, ||೨೧||

ಗ್ರಂಥ||
**ಶಿರ ಈಶಾನಮಂತ್ರೇಣ ಪುರುಷೇಣ ಮುಖಂ ತಥಾ ।**
**ಹೃತ್ಪ್ರದೇಶಮಘೋರೇಣ ವಾಮದೇವೇನ ಗುಹ್ಯಕಮ್ ।**
**ಪಾದೌ ಸದ್ಯೇನ ಸರ್ವಾಂಗಂ ಪ್ರಣವೇನೈವ ಸೇಚಯೇತ್ ॥**

**ಟೀಕು||** ಈಶಾನ ಮಂತ್ರೇಣ="ಓಂ ಈಶಾನಃ ಸರ್ವ ವಿದ್ಯಾನಾಮ್"ಯೆಂಬ ಈಶಾನ ಮಂತ್ರದಿಂದೆ, ಶಿರಃ=ಶಿರಸ್ಸನು ಕೂರ್ತು, ಸೇಚಯೇತ್=ತಳಿವದು. ಪುರುಷೇಣ='ಓಂ ತತ್ಪುರುಷಾಯ ವಿದ್ಮಹೇ'ಯೆಂಬ ತತ್ಪುರುಷ ಮಂತ್ರದಿಂದೆ, ಮುಖಂ=ಮುಖವನು ಕೂರ್ತು, ತಥಾ=ಹಾಂಗೆಯೇ, ಸೇಚಯೇತ್=ತಳಿವದು. ಅಘೋರೇಣ='ಓಂ ಅಘೋರೇಭ್ಯೋ'ಯೆಂಬ ಅಘೋರಮಂತ್ರದಿಂದೆ, ಹೃತ್ಪ್ರದೇಶಂ=ಹೃದಯಸ್ಥಾನವನು, ಸೇಚಯೇತ್=ಸೇಚಿಸುವದು. ವಾಮದೇವೇನ='ಓಂ ವಾದೇವಾಯ ನಮಃ'ಯೆಂಬ ವಾಮದೇವ ಮಂತ್ರದಿಂದೆ, ಗುಹ್ಯಕಂ=ಗುಹ್ಯಸ್ಥಾನವನು, ಸೇಚಯೇತ್= ಸೇಚಿಸುವದು. ಸದ್ಯೇನ='ಓಂ' ಸದ್ಯೋಜಾತಂ ಪ್ರಪದ್ಯಾಮಿ'ಎಂಬ ಸದ್ಯೋಜಾತ ಮಂತ್ರದಿಂದೆ, ಪಾದೌ=ಪಾದಂಗಳನು, ಸೇಚಯೇತ್=ಸೇಚಿಸುವದು. ಪ್ರಣವೇನೈವ=ಓಂ ಎಂಬ ಪ್ರಣವ ಮಂತ್ರದಿಂದೆ, ಸರ್ವಾಂಗಂ=ಸರ್ವಾಂಗವನು, ಸೇಚಯೇತ್=ಭಸ್ಮದಿಂದೆ ಸೇಚಿಸುವದು. ||೨೨||

**ಸೂತ್ರ||** ಬಳಿಕ ಭಸ್ಮಸ್ನಾನೋತ್ಕರ್ಷವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

ಗ್ರಂಥ|| **ಭಸ್ಮನಾ ವಿಹಿತಂ ಸ್ನಾನಮಿದಮಾಗ್ನೇಯಮುತ್ತಮಮ್ ।**
**ಸ್ನಾನೇಷು ವಾರುಣಾದ್ಯೇಷು ಮುಖ್ಯಮೇತನ್ಮಲಾಪಹಮ್ ॥**

**ಟೀಕು||** ಭಸ್ಮನಾ ವಿಹಿತಮಿದಂಸ್ನಾನಂ=ಭಸ್ಮದಿಂದೆ ಮಾಡಲುಪಟ್ಟ ಈ ಸ್ನಾನವು, ಉತ್ತಮಂ=ಶ್ರೇಷ್ಠ ವಾದ, ಆಗ್ನೇಯಂ=ಆಗ್ನೇಯಸ್ನಾನವು, ಏತತ್=ಈ ಆಗ್ನೇಯ ಸ್ನಾನವೆ, ವಾರುಣ್ಯಾದ್ಯೇಷು ಸ್ನಾನೇಷು= ಗಂಗೋದಕ ದಿವ್ಯ ವಾಯವ್ಯಾದಿ ಸ್ನಾನಂಗಳಲ್ಲಿ, ಮಲಾಪಹಂ=ಸರ್ವಾತ್ಮರ ಮಲಾಪಹಾರಿಯಾಗಿ, ಮುಖ್ಯಂ=ಮುಖ್ಯವು. ||೨೩||

ಗ್ರಂಥ|| **ಭಸ್ಮಸ್ನಾನವತಾ ಪುಂಸಾಂ ಯಥಾಯೋಗಂ ದಿನೇದಿನೇ ।**
**ವಾರುಣಾದ್ಯೈರಲಂ ಸ್ನಾನೈರ್ಬಾಹ್ಯದೋಷಾಪಹಾರಿಭಿಃ ॥**

**ಟೀಕು||** ದಿನೇ ದಿನೇ=ಪ್ರತಿದಿವಸದಲ್ಲಿಯು, ಯಥಾಯೋಗಂ=ಶಾಸ್ತ್ರೋಕ್ತಪ್ರಯೋಗವನು ಮೀರದೆ, ಭಸ್ಮಸ್ನಾನವತಾಂ=ಭಸ್ಮಸ್ನಾನವುಳ್ಳ, ಪುಂಸಾಂ=ಪುರುಷರಿಗೆ, ಬಾಹ್ಯದೋಷಾಪಹಾರಿಭಿಃ= ಬಾಹ್ಯದೋಷವನು ಪರಿಹರಿಸುತ್ತಿರ್ದ, ವಾರುಣಾದ್ಯೈಃ ಸ್ನಾನೈಃ=ಜಲಸ್ನಾನ ಮೊದಲಾಗುಳ್ಳ ಸ್ನಾನಂಗಳಿಂದೆ, ಅಲಂ=ಸಾಕು. ||೨೪||

ಗ್ರಂಥ|| **ಆಗ್ನೇಯಂ ಭಸ್ಮನಾ ಸ್ನಾನಂ ಯತಿಭಿಸ್ತು ವಿಧೀಯತೇ ।**
**ಆರ್ದ್ರಸ್ನಾನಾತ್ಪರಂ ಭಸ್ಮ ಆರ್ದ್ರೇ ಜಂತುವಧೋ ಧ್ರುವಮ್ ॥**

**ಟೀಕು||** ಭಸ್ಮನಾ ಸ್ನಾನಂ=ಭಸ್ಮಸ್ನಾನವು, ಆಗ್ನೇಯಂ=ಆಗ್ನೇಯ ಸ್ನಾನವೆಂದು, ಯತಿಭಿಸ್ತು=

ಯೋಗೀಶ್ವರರಿಂದವಾಯಿತ್ತಾದೊಡೆ, ವಿಧೀಯತೇ=ವಿಧಿಸಲುಪಡುತ್ತಿರ್ದ್ದಪುದು. ಭಸ್ಮ ತು=ಭಸ್ಮಸ್ನಾನವಾಯಿತ್ತಾದೊಡೆ, ಆರ್ದ್ರಸ್ನಾನಾತ್=ಸಚೇಲ ಸ್ನಾನದದೆಸೆಯಿಂದೆ, ಪರಂ=ಶ್ರೇಷ್ಠವು. ಆರ್ದ್ರೇಣ ಜಲೇನ=[ಶೈತ್ಯ]ಜಲಸ್ನಾನವಲ್ಲಿ, ಜಂತುವಧಃ=ಪ್ರಾಣಿ ಹಿಂಸೆಯು, ಧ್ರುವಂ=ನಿಶ್ಚಯವು. ||೨೫||

**ಸೂತ್ರ||** ಬಳಿಕ ಸಚೇಲಸ್ನಾನದಿಂದೆಯು ಭಸಸ್ಮಾನ ವಿಶೇಷವೆಂದು ಹೇಳುತ್ತಿರ್ದ್ದಪಂ.

**ಗ್ರಂಥ||**

**ಆರ್ದ್ರಂ ತು ಪ್ರಕೃತಿಂ ವಿದ್ಯಾತ್ಪ್ರಕೃತಿಂ ಬಂಧನಂ ವಿದುಃ ।**
**ಪ್ರಕೃತೇಸ್ತು ಪ್ರಹಾಣಾರ್ಥಂ ಭಸ್ಮನಾ ಸ್ನಾನಮಿಷ್ಯತೇ ॥**

**ಟೀಕು||** ಆರ್ದ್ರಂ ತು=ಸಜಲಸ್ನಾನವಾಯಿತ್ತಾದೊಡೆ, ಪ್ರಕೃತಿಂ=ಗರ್ಭವಾಸದ ಪ್ರಕೃತಿಯನಾಗಿ, ವಿದ್ಯಾತ್=ಅರಿವುದು. ಪ್ರಕೃತಿಂ=ಪ್ರಕೃತಿಯನಾಯಿತ್ತಾದೊಡೆ, ಬಂಧನಂ=ಪಾಶಬಂಧನವಾಗಿ, ವಿದುಃ=ಅರಿವುತ್ತಿರ್ದ್ದಪರು. ಪ್ರಕೃತೇಃ ತು=ಪಾಶಬಂಧದ, ಪ್ರಹಾಣಾರ್ಥಂ=ಬಿಡುಗಡೆಗೋಸುಗವಾಗಿ, ಭಸ್ಮನಾ=ಭಸ್ಮದಿಂದಲಾದ, ಸ್ನಾನಂ=ಸ್ನಾನವು, ಇಷ್ಯತೇ=ಇಚ್ಛೈಸಲುಪಡುತ್ತಿರ್ದ್ದಪುದು. ||೨೬||

**ಸೂತ್ರ||** ಬಳಿಕ ಬ್ರಹ್ಮಾದಿದೇವತೆಗಳು ಭಸ್ಮಸ್ನಾನಯುಕ್ತರೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||**

**ಬ್ರಹ್ಮಾದ್ಯಾ ವಿಬುಧಾಸ್ಸರ್ವೇ ಮುನಯೋ ನಾರದಾದಯಃ ।**
**ಯೋಗಿನಸ್ಸನಕಾದ್ಯಾಶ್ಚ ಬಾಣಾದ್ಯಾ ದಾನವಾ ಅಪಿ ॥**

**ಭಸ್ಮಸ್ನಾನಯುತಾಸ್ಸರ್ವೇ ಶಿವಭಕ್ತಿಪರಾಯಣಾಃ ।**
**ನಿರ್ಮುಕ್ತದೋಷಕಲಿಲಾಃ ನಿತ್ಯಶುದ್ಧಾ ಭವಂತಿ ಹಿ ॥**

**ಟೀಕು||** ಬ್ರಹ್ಮಾದ್ಯಾಃ=ಬ್ರಹ್ಮ ಮೊದಲಾಗುಳ್ಳ, ಸರ್ವೇ ವಿಬುಧಾಃ=ಸಮಸ್ತ ದೇವತೆಗಳು, ನಾರದಾದಯಃ=ನಾರದ ಮೊದಲಾಗುಳ್ಳ, ಮುನಯಃ=ಮುನಿಗಳು, ಸನಕಾದ್ಯಾಶ್ಚ=ಸನಕ ಮೊದಲಾಗುಳ್ಳ, ಯೋಗಿನಃ=ಯೋಗೀಶ್ವರರು, ಬಾಣಾದ್ಯಾಃ=ಬಾಣಾಸುರ ಮೊದಲಾಗುಳ್ಳ, ದಾನವಾ ಅಪಿ=ದಾನವರುಗಳಾಯಿತ್ತಾದೊಡೆಯು, ಸರ್ವೇ=ಸಮಸ್ತರು, ಶಿವಭಕ್ತಿಪರಾಯಣಾಃ ಸಂತಃ=ಶಿವಭಕ್ತಿಯಲ್ಲಿ ತತ್ಪರರಾಗುತವು, ಭಸ್ಮಸ್ನಾನಯುತಾಃ=ಭಸ್ಮಸ್ನಾನದೊಡನೆ ಕೂಡಿವರ್ತಿಸುತ್ತಿರ್ದ್ದಪರಾಗುತವು, ನಿರ್ಮುಕ್ತದೋಷಕಲಿಲಾಃ=ಬಿಡಲುಪಟ್ಟ ದೋಷ ಸಮೂಹವುಳ್ಳವರಾಗಿ, ನಿತ್ಯ ಶುದ್ಧಾಃ=ನಿತ್ಯ ಶುದ್ಧರಾಗಿದ್ದವರು, ಭವಂತಿ=ಆಗುತ್ತಿರ್ದ್ದಪರು. ಹಿ=ಪ್ರಸಿದ್ಧವು. ||೨೮||

**ಸೂತ್ರ||** ಬಳಿಕ ಭಸ್ಮೋದ್ಧೂಳನ ಭಸ್ಮತ್ರಿಪುಂಡ್ರವನು ಹೇಳುತ್ತಿರ್ದ್ದಪಂ.

**ಗ್ರಂಥ॥** **ನಮಶ್ಶಿವಾಯೇತಿ ಭಸ್ಮ ಕೃತ್ವಾ ಸಪ್ತಾಭಿಮಂತ್ರಿತಮ್ ।**
**ಉದ್ಧೂಲಯತ್ತೇನ ದೇಹಂ ತ್ರಿಪುಂಡ್ರಂ ಚಾಪಿ ಧಾರಯೇತ್ ॥**

**ಟೀಕು॥** ಭಸ್ಮ=ಭಸ್ಮವನು, ನಮಃ ಶಿವಾಯೇತಿ=ನಮಃಶಿವಾಯಯೆಂದು, ಸಪ್ತಾಭಿಃ ಮಂತ್ರಿತಂ=ಸಪ್ತಜನ್ಮರೂಪನಿವೃತ್ಯರ್ಥವಾಗಿ ಏಳು ಬಾರಿ ಮಂತ್ರಿಸಲುಪಟ್ಟುದನಾಗಿ, ಕೃತ್ವಾ=ಮಾಡಿ, ತೇನ=ಆ ಭಸ್ಮದಿಂದೆ, ದೇಹಂ=ಶರೀರವನು, ಉದ್ಧೂಲಯೇತ್=ಉದ್ಧೂಳನವನು ಮಾಡುವುದು. ತ್ರಿಪುಂಡ್ರಂ ಚಾಪಿ=ತ್ರಿಪುಂಡ್ರವನಾಯಿತ್ತಾದೊಡೆಯು, ಧಾರಯೇತ್=ಧರಿಸುವುದು. ॥೨೯॥

**ಸೂತ್ರ॥** ಬಳಿಕ ಸರ್ವಾಂಗೋದ್ಧೂಳನದದೆಸೆಯಿಂದೆ ತ್ರಿಪುಂಡ್ರವೆ ವಿಶೇಷವೆಂದು ಹೇಳುತ್ತಿರ್ದಪಂ.

**ಗ್ರಂಥ॥** **ಸರ್ವಾಂಗೋದ್ಧೂಲನಂ ಚಾಪಿ ನ ಸಮಾನಂ ತ್ರಿಪುಂಡ್ರಕೈಃ ।**
**ತಸ್ಮಾತ್ತ್ರಿಪುಂಡ್ರಮೇವೈಕಂ ಲಿಖೇದುದ್ಧೂಲನಂ ವಿನಾ ॥**

**ಟೀಕು॥** ಸರ್ವಾಂಗೋದ್ಧೂಲನಂ ಚಾಪಿ=ಸರ್ವಾಂಗಧೂಳನವಾಯಿತ್ತಾದೊಡೆಯು, ತ್ರಿಪುಂಡ್ರಕೈಃ= ತ್ರಿಪುಂಡ್ರಗಳೊಡನೆ, ನ ಸಮಾನಂ=ಸಮಾನವಲ್ಲ, ತಸ್ಮಾತ್=ಅದುಕಾರಣವಾಗಿ, ಉದ್ಧೂಲನಂ ವಿನಾ=ಉದ್ಧೂಳನ ಹೊರತಾಗಿಯಾದರೂ, ಏಕಂ ತ್ರಿಪುಂಡ್ರಮೇವ=ಒಂದು ತ್ರಿಪುಂಡ್ರವನೆ, ಲಿಖೇತ್=ಧರಿಸುವುದು. ॥೩೦॥

**ಸೂತ್ರ॥** ಬಳಿಕ "ಶಿರೋಲಲಾಟಾಕಂಠಸ್ಕಂಧವಕ್ಷಃಸ್ಥಲೇಷು ತ್ರಿಯಾಯುಷ
ತ್ರಿಯಂಬಕೈಃ ತಿಸ್ರೋ ರೇಖಾಃ ಕುರ್ವೀತ । ಗ್ರತಮೇತತ್
ಶಾಂಭವಮ್"॥ ಯೆಂಬ ಶ್ರುತಿಯುಂಟಾಗಿ,
"ಶಿರೋಲಲಾಟಂ ಗ್ರೀವಾ ಚ ಬಾಹುರೋಮದ್ರ್ಧಯೇತ್ತತಃ"
ಯೆಂಬಾಗಮುವುಂಟಾಗಿ ಅಷ್ಟಾದಶವರ್ಮವನವಗ್ರಹಿಸಿದ ಷಡಧ್ವಶುದ್ಧಿಗೋಸುಗವಾಗಿ, ಮಂಡಲಸಹಿತ ನವಚಕ್ರಾಶ್ರಿತವಾಗಿ "ಅಗ್ನಿರಿತಿಮಂತ್ರ ಅಪೋವೇತಿಮಂತ್ರ ಅಹ ಜ್ಯೋತಿರ್ಮಂತ್ರ"ದಿಂದೆ ಶಿವಶಕ್ತಿತೇಜೋರೂಪವಾದ ಸಜಲ ಭಸ್ಮದಿಂದೆ ವರ್ಣತ್ರಯ ಭುವನತ್ರಯ ದೇವತ್ರಯ ರೂಪವಾದ ತ್ರಿಪುಂಡ್ರಧಾರಣ ಸ್ಥಾನಂಗಳನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ತ್ರಿಪುಂಡ್ರಂ ಧಾರಯೇನ್ನಿತ್ಯಂ ಭಸ್ಮನಾ ಸಜಲೇನ ಚ ।**
**ಸ್ಥಾನೇಷು ಪಂಚದಶಸು ಶರೀರೇ ಸಾಧಕೋತ್ತಮಃ ॥**

**ಟೀಕು||** ಸ ಜಲೇನ=ಉದಕದೊಡನೆ ಕೂಡಿ ವರ್ತಿಸುತ್ತಿರ್ದ್ದ, ಭಸ್ಮನಾ=ಭಸ್ಮದಿಂದೆ, ಶರೀರೇ=ದೇಹದಲ್ಲಿ, ಪಂಚದಶಸು ಸ್ಥಾನೇಷು ಚ=ಹದಿನೈದು ಸ್ಥಾನಂಗಳಲ್ಲಿ, ಸಾಧಕೋತ್ತಮಃ=ಸಾಧಕ ಶ್ರೇಷ್ಠನು, ತ್ರಿಪುಂಡ್ರಂ=ತ್ರಿಪುಂಡ್ರವನು, ನಿತ್ಯಂ=ಆವಾಗವು, ಧಾರಯೇತ್=ತ್ರಿಯಾಯುಷ ತ್ರಿಯಂಬಕ ಪಂಚಾಕ್ಷರ ಪ್ರಣವ ಮಂತ್ರೋಚ್ಚಾರಣದಿಂದವೆ ಧರಿಸುವುದು. ||೩೧||

**ಸೂತ್ರ||** ಆ ಸ್ಥಾನಂಗಳನು ಹೇಳುತ್ತಿರ್ದ್ದಪಂ.

**ಗ್ರಂಥ||**

**ಉತ್ತಮಾಂಗೇ ಲಲಾಟೇ ಚ ಶ್ರವಣದ್ವಿತಯೇ ತಥಾ ।**
**ಗಲೇ ಭುಜದ್ವಯೇ ಚೈವ ಹೃದಿ ನಾಭೌ ಚ ಪೃಷ್ಠಕೇ ॥**

**ಬಾಹುಯುಗ್ಮೇ ಕಕುದ್ದೇಶೇ ಮಣಿಬಂಧದ್ವಯೇ ತಥಾ ।**
**ತ್ರಿಪುಂಡ್ರಂ ಭಸ್ಮನಾ ಧಾರ್ಯಂ ಮೂಲಮಂತ್ರೇಣ ಸಾಧಕೈಃ ॥**

**ಟೀಕು||** ಉತ್ತಮಾಂಗೇ=ಮಸ್ತಕದಲ್ಲಿ, ಲಲಾಟೇ ಚ=ಹಣೆಯಲ್ಲಿ, ತಥಾ=ಹಾಂಗೆಯೇ ಶ್ರವಣದ್ವಿತಯೇ=ಕರ್ಣದ್ವಯದಲ್ಲಿ, ಗಲೇ=ಕೊರಳಿನಲ್ಲಿ, ಭುಜದ್ವಯೇ ಚೈವ=ಭುಜಗಳೆರಡರಲ್ಲಿ, ಹೃದಿ=ಹೃದಯದಲ್ಲಿ, ನಾಭೌ=ಹೊಕ್ಕುಳಲ್ಲಿ, ಪೃಷ್ಠಕೇ ಚ=ಬೆನ್ನಿನಲ್ಲಿ, ಬಾಹುಯುಗ್ಮೇ=ತೋಳುಗಳೆರಡರಲ್ಲಿ, ಕಕುದ್ದೇಶೇ=ಹೆಗಲಲ್ಲಿ, ತಥಾ=ಹಾಂಗೆಯೇ, ಮಣಿಬಂಧದ್ವಯೇ=ಮುಂಗೈಗಳೆರಡರಲ್ಲಿ, ಭಸ್ಮನಾ ತ್ರಿಪುಂಡ್ರಂ=ಭಸ್ಮದಿಂದಲಾದ ತ್ರಿಪುಂಡ್ರವು, ಸಾಧಕೈಃ=ಸಾಧಕರುಗಳಿಂದೆ, ಮೂಲಮಂತ್ರೇಣ=ಓಂಕಾರ ಮಂತ್ರದಿಂದೆ, ಧಾರ್ಯಂ=ಧರಿಸಲು ಯೋಗ್ಯವು. ||೩೩||

**ಸೂತ್ರ||** ಬಳಿಕ ಸಮಂತ್ರವಾದ ತ್ರಿಪುಂಡ್ರಧಾರಣ ಫಲವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||**

**ವಾಮಹಸ್ತಸ್ಥಲೇ ಭಸ್ಮ ಕ್ಷಿಪ್ತ್ವಾಽಚ್ಛಾದ್ಯಾನ್ಯಪಾಣಿನಾ ।**
**ಅಗ್ನಿರಿತ್ಯಾದಿ ಮಂತ್ರೇಣ ಸ್ಪೃಶನ್ವಾರಾಽಭಿಮಂತ್ರ್ಯ ಚ ॥**

**ತ್ರಿಪುಂಡ್ರಮುಕ್ತಸ್ಥಾನೇಷು ದಧ್ಯಾತ್ಸಜಲಭಸ್ಮನಾ ।**
**ಶಿವಂ ಶಿವಂಕರಂ ಶಾಂತಂ ಸ ಪ್ರಾಪ್ನೋತಿ ನ ಸಂಶಯಃ ॥**

**ಟೀಕು||** ವಾಮಹಸ್ತತಲೇ=ಎಡದ ಕೈಯ್ಯಲ್ಲಿ,ಭಸ್ಮಂ=ವಿಭೂತಿಯನು, ಕ್ಷಿಪ್ತ್ವಾ=ಇರಿಸಿಕೊಂಡು,

ಅನ್ಯಪಾಣಿನಾ=ಬಲದ ಕೈಯಿಂದೆ, ಆಚ್ಛಾದ್ಯ=ಮರಸಿ. ಅಗ್ನಿರಿತ್ಯಾದಿಮಂತ್ರೇಣ="ಓಂ ಅಗ್ನಿರಿತಿ ಭಸ್ಮ ವಾಯುರಿತಿ ಭಸ್ಮ ಜಲಮಿತಿ ಭಸ್ಮ ಸ್ಥಲಮಿತಿ ಭಸ್ಮ ವ್ಯೋಮೇತಿ ಭಸ್ಮ ಸರ್ವಂ ಹ ವಾ ಇದಂ ಭಸ್ಮ ಮನ ಏತಾನಿ ಚಕ್ಷೂಂಷಿ ಭಸ್ಮಾನಿತಿ" ಯೆಂಬ ಅಥರ್ವಶಿರೋಮಂತ್ರದಿಂದ, ಸ್ಪೃಶನ್=ಮುಟ್ಟುತ್ತ, ವಾರಾಃಭಿಮಂತ್ರ್ಯ ಚ=ಏಳು ಬಾರಿ ಮಂತ್ರಿಸಿ. ಉಕ್ತ ಸ್ಥಾನೇಷು=ಮೊದಲು ಹೇಳಿದ ಹದಿನೈದು ಸ್ಥಾನಂಗಳಲ್ಲಿ, ಸಜಲಭಸ್ಮನಾ=ಜಲದೊಡನೆ ಕೂಡಿದ ಭಸ್ಮದಿಂದೆ, ತ್ರಿಪುಂಡ್ರಂ=ತ್ರಿಪುಂಡ್ರವನು, ಯಃ=ಆವಾತನು, ದಧ್ಯಾತ್=ಧರಿಸುವವನು, ಸಃ=ಆತನು, ಶಾಂತಂ=ರಾಗ ದ್ವೇಷರಹಿತನಾಗಿರ್ದ್ದ, ಶಿವಂಕರಂ=ಮಂಗಲವನು ಮಾಡುತ್ತಿರ್ದ್ದ, ಶಿವಂ="ಈಶಾನಃ ಶಿವ ಏಕೋ ಧ್ಯೇಯಃ ಶಿವಂಕರಃ। ಸರ್ವಮನ್ಯತ್ಪರಿತ್ಯಜ್ಯ ಸಮಾಪ್ತಾಥರ್ವಶಿಖಾ"ಯೆಂದು ಶ್ರುತಿಪ್ರಸಿದ್ಧವಾದ ಶಿವನನು, ಪ್ರಾಪ್ನೋತಿ=ಎಯ್ದುತ್ತಿರ್ದ್ದಪನು. ನ ಸಂಶಯಃ=ಸಂದೇಹವಿಲ್ಲ. ॥೩೫॥

**ಸೂತ್ರ॥** ಬಳಿಕ ತ್ರಿಪುಂಡ್ರಧಾರಣ ಲಕ್ಷಣವನು ಹೇಳುತ್ತಿರ್ದ್ದಪಂ.

ಗ್ರಂಥ॥ **ಮಧ್ಯಾಂಗುಲಿತ್ರಯೇಣೈವ ಸ್ವದಕ್ಷಿಣಕರಸ್ಯ ತು ।**
**ಷಡಂಗುಲಾಯತಂ ಮಾನಮಪಿ ವಾಲಿಕಮಾನಕಮ್ ।**
**ನೇತ್ರಯುಗ್ಮಪ್ರಮಾಣೇನ ಫಾಲೇ ದಧ್ಯಾತ್ತ್ರಿಪುಂಡ್ರಕಮ್ ॥**

**ಟೀಕು॥** ಸ್ವದಕ್ಷಿಣಕರಸ್ಯ=ತನ್ನ ಬಲದಹಸ್ತದ, ಮಧ್ಯಾಂಗುಲಿತ್ರಯೇಣೈವ=ಮಧ್ಯವಾದ ಅಂಗುಲಿತ್ರಯದಿಂದ, ಷಡಂಗುಲಾಯತಂ ಮಾನಮಪಿ=ಆರು ಬೆರಳು ಪ್ರಮಾಣವಾಯಿತ್ತಾದಡೆಯು, ವಾ=ಅಥವಾ, ಅಲಿಕಮಾನಕಂ ತು=ಹಣೆತುಂಬಿಯಾಯಿತ್ತಾದೊಡೆಯು, ನೇತ್ರಯುಗ್ಮಪ್ರಮಾಣೇನ= ನಯನದ್ವಯದ ಪ್ರಮಾಣದಿಂದಲಾದರೂ, ಫಾಲೇ=ಲಲಾಟದಲ್ಲಿ, ತ್ರಿಪುಂಡ್ರಕಂ=ತ್ರಿಪುಂಡ್ರವನು ದಧ್ಯಾತ್= ಧರಿಸುವುದು. ॥೩೭॥

**ಸೂತ್ರ॥** ಬಳಿಕ ಪಕ್ಷಾಂತರದಿಂದ ತ್ರಿಪುಂಡ್ರವಿಧಿಯನ್ನು ಹೇಳುತ್ತಿರ್ದ್ದಪಂ.

ಗ್ರಂಥ॥ **ಮಧ್ಯಮಾನಾಮಿಕಾಂಗುಷ್ಠೈರನುಲೋಮವಿಲೋಮತಃ ।**
**ಧಾರಯೇದ್ಯಸ್ತ್ರಿಪುಂಡ್ರಾಂಕಂ ಸ ರುದ್ರೋ ನಾತ್ರ ಸಂಶಯಃ ॥**

ಟೀಕು॥ ಮಧ್ಯಮಾನಾಮಿಕಾಂಗುಷ್ಠೈಃ=ಮಧ್ಯಮ ಅನಾಮಿಕ ಅಂಗುಷ್ಠಗಳಿಂದೆ, ಅನುಲೋಮ ವಿಲೋಮತಃ=ಪ್ರದಕ್ಷಿಣ ಅಪ್ರದಕ್ಷಿಣಂಗಳಡೆಸೆಯಿಂದೆ, ಯಃ=ಆವಾತನು, ತ್ರಿಪುಂಡ್ರಾಂಕಂ=ತ್ರಿಪುಂಡ್ರ ಚಿಹ್ನವನು, ಧಾರಯೇತ್=ಧರಿಸುವವನು, ಸಃ=ಆತನು, ರುದ್ರಃ=ರುದ್ರನು. ಅತ್ರ=ಇಲ್ಲಿ, ಸಂಶಯೋ ನ=ಸಂದೇಹವಿಲ್ಲ. ॥೩೮॥

**ಸೂತ್ರ||** ಬಳಿಕ ಶುಭ ತ್ರಿಪುಂಡ್ರ ಲಕ್ಷಣವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಋಜು ಶ್ವೇತಮನುವ್ಯಾಪ್ತಂ ಸ್ನಿಗ್ಧಂ ಶ್ರೋತ್ರಪ್ರಮಾಣಕಮ್ ।**
**ಏವಂ ಸಲ್ಲಕ್ಷಣೋಪೇತಂ ತ್ರಿಪುಂಡ್ರಂ ಸರ್ವಸಿದ್ಧಿದಮ್ ॥**

**ಟೀಕು||** ಋಜು=ನೇರಿತ್ತಾಗಿ, ಅನುವ್ಯಾಪ್ತಂ=ಕಲಸಿಕೊಳ್ಳದೆ, ಸ್ನಿಗ್ಧಂ=ನಯವಾಗಿ, ಶ್ವೇತಂ=ಬಿಳಿದಾಗಿ, ಶ್ರೋತ್ರಪ್ರಮಾಣಕಂ=ಕರ್ಣಪರ್ಯಂತರವಾಗಿ, ಏವಂ=ಈ ಪ್ರಕಾರದಿಂದೆ, ಸಲ್ಲಕ್ಷಣೋಪೇತಂ= ಲೇಸಾದ ಲಕ್ಷಣದೊಡನೆ ಕೂಡಿರ್ದ್ದ, ತ್ರಿಪುಂಡ್ರಂ=ತ್ರಿಪುಂಡ್ರವು, ಸರ್ವಸಿದ್ಧಿದಂ=ಸಮಸ್ತ ಸಿದ್ಧಿಯನು ಕೊಡುತ್ತಿರ್ದ್ದ ಅದು. ||೩೯||

**ಸೂತ್ರ||** ಬಳಿಕ ತ್ರಿಪುಂಡ್ರಧಾರಣ ಮಹತ್ವವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಪ್ರಾತಃಕಾಲೇ ಚ ಮಧ್ಯಾಹ್ನೇ ಸಾಯಾಹ್ನೇ ಚ ತ್ರಿಪುಂಡ್ರಕಮ್ ।**
**ಕದಾಚಿದ್ಭಸ್ಮನಾ ಕುರ್ಯಾತ್ಸ ರುದ್ರೋ ನಾತ್ರ ಸಂಶಯಃ ॥**

**ಟೀಕು||** ಪ್ರಾತಃಕಾಲೇ=ಉದಯಕಾಲದಲ್ಲಿ, ಮಧ್ಯಾಹ್ನೇ ಚ=ಮಧ್ಯಾಹ್ನಕಾಲದಲ್ಲಿಯಾದರು, ಸಾಯಾಹ್ನೇ ಚ=ಸಾಯಂಕಾಲದಲ್ಲಿಯಾದರು, ಕದಾಚಿತ್=ಒಂದುವೇಳೆಯಾದರು, ಭಸ್ಮನಾ=ಭಸ್ಮದಿಂದೆ, ತ್ರಿಪುಂಡ್ರಂ=ತ್ರಿಪುಂಡ್ರವನು, ಯಃ=ಆವಾತನು, ಕುರ್ಯಾತ್=ಮಾಡುವನು, ಸಃ=ಆತನು, ರುದ್ರಃ=ರುದ್ರನು, ಅತ್ರ=ಇಲ್ಲಿ, ಸಂಶಯೋ ನ=ಸಂದೇಹವಿಲ್ಲ. ||೪೦||

**ಗ್ರಂಥ||** **ಏವಂವಿಧಂ ವಿಭೂತ್ಯಾ ಚ ಕುರುತೇ ಯಸ್ತ್ರಿಪುಂಡ್ರಕಮ್ ।**
**ಸ ರೌದ್ರಧರ್ಮಸಂಯುಕ್ತಸ್ತ್ರಯೀಮಯ ಇತಿ ಶ್ರುತಿಃ ॥**

**ಟೀಕು||** ಯಃ=ಆವನಾನೊಬ್ಬಾತನು, ವಿಭೂತ್ಯಾ=ಭಸ್ಮದಿಂದೆ, ಏವಂವಿಧಂ=ಈ ಪ್ರಕಾರವಾದ ತ್ರಿಪುಂಡ್ರಕಂ=ತ್ರಿಪುಂಡ್ರವನು, ಕುರುತೇ=ಧರಿಸುತ್ತಿರ್ದ್ದಪನು. ಸಃ=ಆತನು, ರೌದ್ರಧರ್ಮ ಸಂಯುಕ್ತಃ=ರುದ್ರಸಂಬಂಧವಾದ ಧರ್ಮಾಚಾರದೊಡನೆ ಕೂಡಿ, ತ್ರಯೀಮಯ ಇತಿ ಶ್ರುತಿಃ=ವೇದತ್ರಯಸ್ವರೂಪನೆಂದು ಶ್ರುತಿಯು. ಇದಕ್ಕೆ ವೃದ್ಧಜಾಬಾಲ ಶ್ರುತಿ||

"ಯ ಇದಂ ತ್ರಿಪುಂಡ್ರಂ ಧರತೇ ಸ ವೇದತ್ರಯಧಾರೀ ಭವತಿ
ಸ ಸಂತತಂ ತ್ರೇತಾಗ್ನಿರ್ಭವತಿ, ಸಃ ಪುಷ್ಕರತ್ರಯಸ್ನಾತೋ ಭವತಿ
ಯಃ ತ್ರಿಪುಂಡ್ರಧಾರೀ ಪುರುಷಃ ಸ ರುದ್ರಃ, ಸ ಪರಮೇಷ್ಠೀ
ಯ ಇದಂ ತ್ರಿಪುಂಡ್ರಂ ಧೃತವಂತಂ ಪುರುಷಂ ಪಶ್ಯತಿ,
ಸ ಸರ್ವಪಾಪೇಭ್ಯೋ ವಿನಿರ್ಮುಕ್ತೋ ಭವತಿ, ಸ ಸರ್ವವೇದಾಧ್ಯಯನ
ಜನ್ಯಫಲವಾನ್ಭವತೀ"ತ್ಯಾದಿ ಬಹು ಶ್ರುತಿ ಸಿದ್ಧಮ್। ॥೪೦॥

**ಸೂತ್ರ॥** ಬಳಿಕ ಬ್ರಹ್ಮಾದಿ ದೇವತೆಗಳು ವಸಿಷ್ಠಾದಿ ಋಷಿಗಳು ತ್ರಿಪುಂಡ್ರಧಾರಕರೆಂದು ಹೇಳುತ್ತಿರ್ದಪಂ.

ಗ್ರಂಥ॥ **ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ದೇವಾಃ ಶಕ್ರಪುರೋಗಮಾಃ ।**
**ತ್ರಿಪುಂಡ್ರಂ ಧಾರಯಂತ್ಯೇವ ಭಸ್ಮನಾ ಪರಿಕಲ್ಪಿತಮ್ ॥**

**ಟೀಕು॥** ಬ್ರಹ್ಮಾ=ಬ್ರಹ್ಮನು, ವಿಷ್ಣುಶ್ಚ=ವಿಷ್ಣುವು, ರುದ್ರಶ್ಚ=ರುದ್ರನು, ಶಕ್ರಪುರೋಗಮಾಃ ದೇವಾಃ=ಇಂದ್ರಾದಿ ದೇವತೆಗಳು, ಭಸ್ಮನಾ=ಭಸ್ಮದಿಂದೆ, ಪರಿಕಲ್ಪಿತಂ=ಮಾಡಲುಪಟ್ಟ, ತ್ರಿಪುಂಡ್ರಂ=ತ್ರಿಪುಂಡ್ರವನು, ಧಾರಯಂತ್ಯೇವ=ಧರಿಸುತ್ತಿರ್ದಪರೆ. ॥೪೨॥

ಗ್ರಂಥ॥ **ವಸಿಷ್ಠಾದ್ಯಾ ಮಹಾಭಾಗಾಃ ಮುನಯಃ ಶ್ರುತಿಕೋವಿದಾಃ ।**
**ಧಾರಯಂತಿ ಸದಾಕಾಲಂ ತ್ರಿಪುಂಡ್ರಂ ಭಸ್ಮನಾ ಕೃತಮ್ ॥**

**ಟೀಕು॥** ಮಹಾಭಾಗಾಃ=ಶ್ರೇಷ್ಠರಾಗಿ, ಶ್ರುತಿಕೋವಿದಾಃ=ವೇದಂಗಳಲ್ಲಿ ಪ್ರವೀಣರಾಗಿರ್ದ, ವಸಿಷ್ಠಾದ್ಯಾ ಮುನಯಃ=ವಸಿಷ್ಠ ಮೊದಲಾಗುಳ್ಳ ಮುನಿಗಳು, ಭಸ್ಮನಾ ಕೃತಂ=ಭಸ್ಮದಿಂದೆ ಮಾಡಲುಪಟ್ಟ, ತ್ರಿಪುಂಡ್ರಂ=ತ್ರಿಪುಂಡ್ರವನು, ಸದಾಕಾಲಂ=ಎಲ್ಲಾ ಕಾಲದಲ್ಲಿಯು, ಧಾರಯಂತಿ= ಧರಿಸುತ್ತಿರ್ದಪರು. ॥೪೩॥

**ಸೂತ್ರ॥** ಬಳಿಕ ಭಸ್ಮತ್ರಿಪುಂಡ್ರ ಮಹತ್ವವು ಸರ್ವ ವೇದಾಗಮ ಪ್ರಸಿದ್ಧವೆಂದು ಹೇಳುತ್ತಿರ್ದಪಂ.

ಗ್ರಂಥ॥ **ಶೈವಾಗಮೇಷು ವೇದೇಷು ಪುರಾಣೇಷ್ವಖಿಲೇಷು ಚ ।**
**ಸ್ಮೃತೀತಿಹಾಸಕಲ್ಪೇಷು ವಿಹಿತಂ ಭಸ್ಮಪುಂಡ್ರಕಮ್ ।**
**ಧಾರಣೀಯಂ ಸಮಸ್ತಾನಾಂ ಶೈವಾನಾಂ ಚ ವಿಶೇಷತಃ ॥**

**ಟೀಕು||** ಅಖಿಲೇಷು ವೇದೇಷು=ಸಮಸ್ತ ವೇದಂಗಳಲ್ಲಿ, ಶೈವಾಗಮೇಷು=ಸಮಸ್ತ ಶಿವಾಗಮಂಗಳಲ್ಲಿ, ಪುರಾಣೇಷು ಚಾ=ಸಮಸ್ತ ಪುರಾಣಂಗಳಲ್ಲಿ, ಅಖಿಲೇಷು ಸ್ಮೃತೀತಿಹಾಸ ಕಲ್ಪೇಷು=ಸಮಸ್ತವಾದ ಸ್ಮೃತಿ ಇತಿಹಾಸ ಕಲ್ಪಸೂತ್ರಂಗಳಲ್ಲಿಯು, ಭಸ್ಮಪುಂಡ್ರಕಂ=ಭಸ್ಮತ್ರಿಪುಂಡ್ರವು, ವಿಹಿತಂ=ವಿಧಿಸಲುಪಟ್ಟಿತ್ತು. ಅತಃ=ಇದು ಕಾರಣವಾಗಿ, ಸಮಸ್ತಾನಾಂ ಶೈವಾನಾಂ ಚ=ಸಮಸ್ತ ಶಿವಭಕ್ತರಿಂದೆ, ವಿಶೇಷತಃ=ವಿಶೇಷವಾಗಿ, ಧಾರಣೀಯಂ=ಧರಿಸಲು ಯೋಗ್ಯವು. ||೪೪||

**ಸೂತ್ರ||** ಬಳಿಕ ಭಸ್ಮ ತ್ರಿಪುಂಡ್ರ ಧಾರಣದಿಂದವೆ ಸರ್ವಪಾಪಕ್ಷಯವಹುದೆಂದು ಹೇಳಿ ಭಸ್ಮಧಾರಣಸ್ಥಲವನು ಸಮಾಪ್ತಿಯ ಮಾಡುತ್ತಿರ್ದಪಂ.

**ಗ್ರಂಥ||** **ನಾಸ್ತಿಕೋ ಭಿನ್ನಮರ್ಯಾದೋ ದುರಾಚಾರಪರಾಯಣಃ |**
**ಭಸ್ಮತ್ರಿಪುಂಡ್ರಧಾರೀ ಚೇನ್ಮುಚ್ಯತೇ ಸರ್ವಕಿಲ್ಬಿಷ್ಯೈಃ ||**

**ಟೀಕು||** ಭಿನ್ನಮರ್ಯಾದಃ=ಒಡೆಯಲುಪಟ್ಟ ಸಮಯಾಚಾರವುಳ್ಳವನಾಗಿ, ದುರಾಚಾರ ಪರಾಯಣಃ=ದುರಾಚಾರದಲ್ಲಿ ತತ್ಪರನಾಗಿ, ನಾಸ್ತಿಕಃ=ಶಿವನಿಲ್ಲವೆಂಬ ನಾಸ್ತಿಕನಾದಡೂ, ಭಸ್ಮತ್ರಿಪುಂಡ್ರಧಾರೀ ಚೇತ್=ಎತ್ತಲಾನು ಭಸ್ಮತ್ರಿಪುಂಡ್ರವ ಧರಿಸುವನೆ, ತರ್ಹಿ=ಅಹಗಾಯಿತ್ತಾದೊಡೆ, ಸರ್ವಕಿಲ್ಬಿಷೈಃ=ಸಮಸ್ತ ಪಾತಕಂಗಳಿಂದೆ, ಮುಚ್ಯತೇ=ಬಿಡಲುಪಡುತ್ತಿರ್ದನು. ||೪೪||

**ಇತಿ ಭಸ್ಮಧಾರಣಸ್ಥಲಮ್**

## ೭ ಭಕ್ತಸ್ಥಲೇ ರುದ್ರಾಕ್ಷಧಾರಣಸ್ಥಲಮ್

ಸೂತ್ರ// ಆನಂತರದಲ್ಲಿ ರುದ್ರಾಕ್ಷಧಾರಣಸ್ಥಲವನು ಹೇಳುತ್ತಿರ್ದಪಂ.

ಗ್ರಂಥ|| **ಭಸ್ಮನಾ ವಿಹಿತಸ್ನಾನಸ್ತ್ರಿಪುಂಡ್ರಾಂಕಿತಮಸ್ತಕಃ |**
**ಶಿವಾರ್ಚನಪರೋ ನಿತ್ಯಂ ರುದ್ರಾಕ್ಷಮಪಿ ಧಾರಯೇತ್ ||**

**ಟೀಕು||** ಭಸ್ಮನಾ=ಭಸ್ಮದಿಂದೆ, ವಿಹಿತಸ್ನಾನಃ=ಮಾಡಲುಪಟ್ಟ ಸ್ನಾನವುಳ್ಳ, ತ್ರಿಪುಂಡ್ರಾಂಕಿತ ಮಸ್ತಕಃ=ತ್ರಿಪುಂಡ್ರದಿಂದೆ ಕುರುಹಿಡಿಯಲುಪಟ್ಟ ಲಲಾಟವುಳ್ಳ, ನಿತ್ಯಂ=ಆವಾಗವು ಶಿವಾರ್ಚನಪರಃ=ಶಿವಾರ್ಚನೆಯಲ್ಲಿ ತತ್ಪರನಾಗಿದ್ದಾತನು, ರುದ್ರಾಕ್ಷಮಪಿ=ರುದ್ರಾಕ್ಷಿಯನಾಯಿತ್ತಾದೊಡೆ ಧಾರಯೇತ್=ಧರಿಸುವುದು. ||೪೬||

**ಸೂತ್ರ||** ಬಳಿಕ ರುದ್ರಾಕ್ಷಧಾರಣದಿಂದೆ ಸರ್ವಪಾಪಕ್ಷಯವೆಂದು ಹೇಳುತ್ತಿರ್ದ್ದಪಂ.

ಗ್ರಂಥ|| **ರುದ್ರಾಕ್ಷಧಾರಣಾದೇವ ಮುಚ್ಯಂತೇ ಸರ್ವಪಾತಕೈಃ |**
**ದುಷ್ಟಚಿತ್ತಾ ದುರಾಚಾರಾ ದುಷ್ಪ್ರಾಜ್ಞಾ ಅಪಿ ಮಾನವಾಃ ||**

**ಟೀಕು||** ದುಷ್ಟಚಿತ್ತಾಃ=ದುಷ್ಟಚಿತ್ತರಾಗಿ, ದುರಾಚಾರಾಃ=ದುರಾಚಾರಿಗಳಾಗಿ, ದುಷ್ಪ್ರಾಜ್ಞಾಃ= ದುಷ್ಟಜ್ಞರಾಗಿರ್ದ್ದ, ಮಾನವಾಃ ಅಪಿ=ಮನುಷ್ಯರಾಯಿತ್ತಾದೊಡೆಯು, ರುದ್ರಾಕ್ಷಧಾರಣಾದೇವ= ರುದ್ರಾಕ್ಷಿಯ ಧರಿಸುವುದರದೆಸೆಯಿಂದವೆ, ಸರ್ವಪಾತಕೈಃ=ಸಮಸ್ತಪಾತಕಗಳಿಂದೆ, ಮುಚ್ಯಂತೇ= ಬಿಡಲುಪಡುತ್ತಿರ್ದ್ದಪರು. ||೪೭||

**ಸೂತ್ರ||** ಬಳಿಕ ರುದ್ರಾಕ್ಷೋತ್ಪತ್ತಿಯನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| **ಪುರಾ ತ್ರಿಪುರಸಂಹಾರೇ ತ್ರಿನೇತ್ರೋ ಜಗತಾಂ ಪತಿಃ |**
**ಉದಪಶ್ಯತ್ಪುರಾಂ ಯೋಗಮುನ್ಮೀಲಿತವಿಲೋಚನಃ ||**

**ನಿಪೇತುಸ್ತಸ್ಯ ನೇತ್ರೇಭ್ಯೋ ಬಹವೋ ಜಲಬಿಂದವಃ |**
**ತೇಭ್ಯೋ ಜಾತಾ ಹಿ ರುದ್ರಾಕ್ಷಾಃ ರುದ್ರಾಕ್ಷಾ ಇತಿ ಕೀರ್ತಿತಾಃ ||**

**ಟೀಕು||** ಪುರಾ=ಪೂರ್ವದಲ್ಲಿ, ತ್ರಿಪುರಸಂಹಾರೇ=ತ್ರಿಪುರಸಂಹಾರಕಾಲದಲ್ಲಿ, ಜಗತಾಂ ಪತಿಃ=ಸರ್ವ

ಜಗತ್ತಿಗೆ ಒಡೆಯನಾಗಿರ್ದ್ದ, ತ್ರಿನೇತ್ರಃ=ಚಂದ್ರಸೂರ್ಯಾಗ್ನಿಯೇ ನಯನವಾಗುಳ್ಳ ಈಶ್ವರನು, ಉನ್ಮೀಲಿತವಿಲೋಚನಃ ಸನ್=ತೆರೆಯಲುಪಟ್ಟ ದೃಷ್ಟಿ ಉಳ್ಳಾತನಾಗುತಲು, ಪುರಾಂ=ತ್ರಿಪುರಂಗಳ, ಯೋಗಂ=ಕೂಟವನು, ಉದಪಶ್ಯತ್=ಊರ್ಧ್ವವಾಗಿ ನೋಡಿದನು. ತಸ್ಯ=ಆ ಪರಮೇಶ್ವರನ, ನೇತ್ರೇಭ್ಯಃ=ನಯನಂಗಳದೆಸೆಯಿಂದೆ, ಬಹವಃ=ಅನೇಕವಾದ, ಜಲಬಿಂದವಃ=ಕಂಬನಿಗಳು, ನಿಪೇತುಃ=ಭೂಮಿಯಲ್ಲಿ ಬಿದ್ದವು. ತೇಭ್ಯಃ=ಆ ಕಂಬನಿಗಳದೆಸೆಯಿಂದೆ, ಜಾತಾಃ=ಹುಟ್ಟಿರ್ದ್ದ, ರುದ್ರಾಕ್ಷಾಃ=ರುದ್ರಾಕ್ಷಂಗಳು, ರುದ್ರಾಕ್ಷಾ ಇತಿ=ರುದ್ರಾಕ್ಷೆಗಳೆಂದು, ಕೀರ್ತಿತಾಃ=ಹೇಳಲುಪಟ್ಟವು. ಇದಕ್ಕೆ ಬೃಹಜ್ಜಾಬಾಲದ ಕಾತ್ಯಾಯನ ಶಾಖೆಯಲ್ಲಿಯ ಶ್ರುತಿ॥

"ಪುರಾ ತ್ರಿಪುರವಧಾಯೋನ್ಮೀಲಿತಾಕ್ಷೋಽಹಂ ತೇಭ್ಯೋ ಜಲಬಿಂದವೋ ಭೂಮೌ ಪತಿತಾಸ್ತೇ ರುದ್ರಾಕ್ಷಾಃ ಜಾತಾಃ। ಸರ್ವಾನುಗ್ರಹಾರ್ಥಾಯ, ತೇಷಾಂ ನಾಮೋಚ್ಚಾರಣೇನ ದಶಶತಗೋದಾನಫಲಂ ಭವತಿ। ದರ್ಶನಸ್ಪರ್ಶನಾಭ್ಯಾಂ ದ್ವಿಗುಣಂ ತ್ರಿಗುಣಂ ಫಲಂ ಭವತಿ। ಅತ ಊರ್ಧ್ವಂ ವಕ್ತುಂ ನ ಶಕ್ಯಮ್" ಇತಿ ಬ್ರಹುಶ್ರುತಿಪ್ರಸಿದ್ಧಮ್॥ ॥೪೯॥

**ಸೂತ್ರ॥** ಬಳಿಕ ರುದ್ರಾಕ್ಷ ಭೇದವನು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥**

**ರುದ್ರನೇತ್ರಸಮುತ್ಪನ್ನಾ ರುದ್ರಾಕ್ಷಾ ಲೋಕಪಾವನಾಃ ।**
**ಅಷ್ಟತ್ರಿಂಶತ್ಪ್ರಭೇದೇನ ಭವಂತ್ಯುತ್ಪತ್ತಿ ಭೇದತಃ ॥**

**ಟೀಕು॥** ರುದ್ರನೇತ್ರಸಮುತ್ಪನ್ನಾಃ=ರುದ್ರನೇತ್ರಂಗಳದೆಸೆಯಿಂದೆ ಹುಟ್ಟಿರ್ದ್ದ, ರುದ್ರಾಕ್ಷಾಃ=ರುದ್ರಾಕ್ಷಮಣಿಗಳು, ಲೋಕಪಾವನಾಃ ಸಂತಃ=ಲೋಕಂಗಳಿಗೆ ಪವಿತ್ರಾವಾಗಿರ್ದ್ದವಾಗುತವು, ಉತ್ಪತ್ತಿ ಭೇದತಃ=ಉತ್ಪತ್ತಿಯ ಭೇದದದೆಸೆಯಿಂದೆ, ಅಷ್ಟತ್ರಿಂಷತ್ಪ್ರಭೇದೇನ=ಮುವ್ವತ್ತೆಂಟು ಭೇದದಿಂದೆ, ಭವಂತಿ=ಆಗುತ್ತಿರ್ದ್ದಪವು. ॥೫೦॥

**ಸೂತ್ರ॥** ಆ ಭೇದವನು ಹೇಳುತ್ತಿರ್ದ್ದಪಂ.

**ಗ್ರಂಥ॥**

**ನೇತ್ರಾತ್ಸೂರ್ಯಾತ್ಮನಶ್ಶಂಭೋಃ ಕಪಿಲಾ ದ್ವಾದಶೋದಿತಾಃ ।**
**ಶ್ವೇತಾಃ ಷೋಡಶ ಸಂಜಾತಾಸ್ಸೋಮರೂಪಾದ್ವಿಲೋಚನಾತ್ ॥**

**ಕೃಷ್ಣಾ ದಶವಿಧಾ ಜಾತಾ ವಹ್ನಿರೂಪಾದ್ವಿಲೋಚನಾತ್ ।**
**ಏವಮುತ್ಪತ್ತಿ ಭೇದೇನ ರುದ್ರಾಕ್ಷಾಃ ಬಹುಧಾ ಸ್ಮೃತಾಃ ॥**

**ಟೀಕು॥** ಶಂಭೋಃ=ಪರಮೇಶ್ವರನ, ಸೂರ್ಯಾತ್ಮನಃ ನೇತ್ರಾತ್=ಸೂರ್ಯರೂಪವಾದ ಬಲದ

ನಯನದದೆಸೆಯಿಂದೆ, ದ್ವಾದಶೋದಿತಾಃ=ಹನ್ನೆರಡು ಪ್ರಕಾರವಾಗಿರ್ದ್ದ, ಕಪಿಲಾಃ=ಕಪಿಲ ವರ್ಣವಾದ ರುದ್ರಾಕ್ಷೆಗಳು, ಉದಿತಾಃ=ಹುಟ್ಟಿದವು. ಸೋಮರೂಪಾತ್ ವಿಲೋಚನಾತ್=ಚಂದ್ರ ಸ್ವರೂಪವಾದ ವಾಮನೇತ್ರದದೆಸೆಯಿಂದೆ, ಷೋಡಶ=ಹದಿನಾರು ಪ್ರಕಾರವಾದ, ಶ್ವೇತಾಃ=ಬಿಳಿಯ ರುದ್ರಾಕ್ಷೆಗಳು ಸಂಜಾತಾಃ=ಹುಟ್ಟಿದವು. ವಹ್ನಿರೂಪಾತ್ ವಿಲೋಚನಾತ್=ಅಗ್ನಿರೂಪವಾದ ಲಲಾಟನೇತ್ರದ-ದೆಸೆಯಿಂದೆ ದಶವಿಧಾಃ=ಹತ್ತುಪ್ರಕಾರವಾಗಿರ್ದ್ದ, ಕೃಷ್ಣಾ=ಕೃಷ್ಣವರ್ಣವಾದ ರುದ್ರಾಕ್ಷೆಗಳು, ಜಾತಾಃ=ಹುಟ್ಟಿದವು. ಏವಂ=ಈ ಪ್ರಕಾರವಾದ, ಉತ್ಪತ್ತಿಭೇದೇನ=ಉತ್ಪತ್ತಿಯ ಭೇದದಿಂದೆ, ರುದ್ರಾಕ್ಷಾಃ=ರುದ್ರಾಕ್ಷೆಗಳು, ಬಹುವಿಧಾಃ=ಹಲವು ಪ್ರಕಾರವಾಗಿ, ಸ್ಮೃತಾಃ=ನೆನೆಯಲುಪಟ್ಟವು. ||೫೨||

**ಸೂತ್ರ||** ಬಳಿಕ ಧರಿಸಲು ಯೋಗ್ಯವಾದ ರುದ್ರಾಕ್ಷೆಯ ಲಕ್ಷಣವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಅಚ್ಛಿದ್ರಂ ಕನಕಪ್ರಖ್ಯಮನನ್ಯಧೃತಮುತ್ತಮಮ್ ।**
**ರುದ್ರಾಕ್ಷಂ ಧಾರಯೇತ್ಪ್ರಾಜ್ಞಃ ಶಿವಪೂಜಾಪರಾಯಣಃ ॥**

**ಟೀಕು||** ಅಚ್ಛಿದ್ರಂ=ಹುಳುಕಲ್ಲದೆ ಮುಳ್ಳು ಮುರಿಯದೆಯಿರ್ದ್ದ, ಕನಕಪ್ರಖ್ಯಂ=ಸುವರ್ಣದ ಕಾಂತಿಯೋಪಾದಿಯ ಕಾಂತಿಯುಳ್ಳ, ಅನನ್ಯಧೃತಂ=ಅನ್ಯರಿಂದ ಧರಿಸಲುಪಡದೆಯಿದ್ದ, ಉತ್ತಮಂ ರುದ್ರಾಕ್ಷಂ=ಶ್ರೇಷ್ಠವಾದ ರುದ್ರಾಕ್ಷೆಯನು, ಶಿವಪೂಜಾಪರಾಯಣಃ=ಶಿವಲಿಂಗಪೂಜೆಯಲ್ಲಿ ತತ್ಪರನಾಗಿರ್ದ್ದ, ಪ್ರಾಜ್ಞಃ=ಪ್ರವೀಣನು, ಧಾರಯೇತ್=ಧರಿಸುವುದು. ||೫೩||

ಸೂತ್ರ|| ಬಳಿಕ ರುದ್ರಾಕ್ಷಧಾರಣಕ್ರಮವನು ಸಪ್ತಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಯಥಾಸ್ಥಾನಂ ಯಥಾ ವಕ್ತ್ರಂ ಯಥಾಯೋಗಂ ಯಥಾವಿಧಿ ।**
**ರುದ್ರಾಕ್ಷಧಾರಣಂ ವಕ್ಷ್ಯೇ ರುದ್ರಸಾರೂಪ್ಯಸಿದ್ಧಯೇ ॥**

**ಟೀಕು||** ಯಥಾಸ್ಥಾನಂ=ಶಿಖಾದಿಸ್ಥಾನಂಗಳನು ಮೀರದೆ, ಯಥಾವಕ್ತ್ರಂ=ಏಕ ವಕ್ತ್ರಾದಿ ವಕ್ತ್ರಂಗಳನು ಮೀರದೆ, ಯಥಾಯೋಗಂ=ಯೋಗವನು ಮೀರದೆ, ಯಥಾವಿಧಿ=ವಿಧಿಯನು ಮೀರದೆ, ರುದ್ರಸಾರೂಪ್ಯ ಸಿದ್ಧಯೇ=ರುದ್ರನ ಸಾರೂಪ್ಯದ ಸಿದ್ಧಿಗೋಸುಗ, ರುದ್ರಾಕ್ಷಧಾರಣಂ=ರುದ್ರಾಕ್ಷಧಾರಣೆಯನು, ವಕ್ಷ್ಯೇ=ಹೇಳುತ್ತಿರ್ದ್ದಪೆನು. ||೫೪||

**ಗ್ರಂಥ||** **ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ ।**
**ದ್ವಿತ್ರಿದ್ವಾದಶವಕ್ತ್ರಾಣಿ ಶಿರಸಿ ತ್ರೀಣಿ ಧಾರಯೇತ್ ॥**

ಷಟ್ತ್ರಿಂಶದ್ಧಾರಯೇನ್ಮೂರ್ಧ್ನಿ ನಿತ್ಯಮೇಕಾದಶಾನನಾನ್ ।
ದಶಸಪ್ತಪಂಚವಕ್ತ್ರಾನ್ ಷಟ್ ಷಟ್ಕರ್ಣದ್ವಯೇ ವಹೇತ್ ॥

**ಟೀಕು॥** ಶಿಖಾಯಾಂ=ಶಿಖಿಯಲ್ಲಿ, ಏಕಾಸ್ಯಂ=ಒಂದು ಮುಖವುಳ್ಳ, ಏಕಂ ರುದ್ರಾಕ್ಷಂ=ಒಂದು ರುದ್ರಾಕ್ಷಿಯನು, ಬುಧಃ=ಪ್ರವೀಣನಾಗಿದ್ದಾತನು, ಧಾರಯೇತ್=ಧರಿಸುವುದು. ದ್ವಿತ್ರಿದ್ವಾದಶವಕ್ತ್ರಾಣಿ=ಎರಡು ಮೂರು ಹನ್ನೆರಡು ಮುಖಂಗಳುಳ್ಳ, ತ್ರೀಣಿ=ಮೂರು ರುದ್ರಾಕ್ಷಿಗಳನು, ಶಿರಸಿ=ಬ್ರಹ್ಮಸ್ಥಾನದಲ್ಲಿ, ಧಾರಯೇತ್=ಧರಿಸುವುದು. ಏಕಾದಶಾನನಾನ್=ಹನ್ನೊಂದು ಮುಖಂಗಳುಳ್ಳ, ಷಟ್ತ್ರಿಂಶತ್=ಮುವತ್ತಾರು ರುದ್ರಾಕ್ಷಿಗಳನು, ಮೂರ್ಧ್ನಿ=ಮಸ್ತಕದಲ್ಲಿ, ನಿತ್ಯಂ=ಆವಾಗವು, ಧಾರಯೇತ್=ಧರಿಸುವುದು. ದಶಸಪ್ತಪಂಚವಕ್ತ್ರಾನ್=ಹತ್ತು ಏಳು ಅಯಿದು ಮುಖಂಗಳುಳ್ಳ, ಷಟ್ ಷಟ್=ಆರಾರು ರುದ್ರಾಕ್ಷಿಗಳನು, ಕರ್ಣದ್ವಯೇ=ಎರಡು ಕಿವಿಗಳಲ್ಲಿ, ವಹೇತ್=ಧರಿಸುವುದು. "ಷಟ್‌ಷಟ್ ಕರ್ಣದ್ವಯೋರೇಕಮೇಕಮ್"ಯೆಂಬ ರುದ್ರಾಕ್ಷ ಜಾಬಾಲ ಶ್ರುತಿಯುಂಟಾಗಿ ಒಂದೊಂದು ರುದ್ರಾಕ್ಷಿಯನಾದರು ಕರ್ಣದ್ವಯದಲ್ಲಿ ಧರಿಸುವುದು. ॥೫೬॥

**ಗ್ರಂಥ॥** ಷಡಷ್ಟವದನಾನ್ಕಂಠೇ ದ್ವಾತ್ರಿಂಶದ್ಧಾರಯೇತ್ಸದಾ ।
ಪಂಚಾಶದ್ಧಾರಯೇದ್ವಿದ್ವಾನ್ ಚತುರ್ವಕ್ತ್ರಾಣಿ ವಕ್ಷಸಿ ॥

**ಟೀಕು॥** ಷಡಷ್ಟವದನಾನ್=ಆರು ಎಂಟು ಮುಖಂಗಳುಳ್ಳ ರುದ್ರಾಕ್ಷಿಗಳನು, ದ್ವಾತ್ರಿಂಶತ್=ಮುವ್ವತ್ತೆರಡನು, ಕಂಠೇ=ಕೊರಳಿನಲ್ಲಿ, ಸದಾ=ಎಲ್ಲಾ ಕಾಲದಲ್ಲಿಯು, ಧಾರಯೇತ್=ಧರಿಸುವುದು. ಚತುರ್ವಕ್ತ್ರಾಣಿ=ನಾಲ್ಕು ಮುಖಂಗಳುಳ್ಳ ರುದ್ರಾಕ್ಷಿಗಳನು, ಪಂಚಾಶತ್=ಐವತ್ತನು, ವಕ್ಷಸಿ=ಎದೆಯಲ್ಲಿ ವಿದ್ವಾನ್=ಬುದ್ಧಿಯುಳ್ಳಾತನು, ಧಾರಯೇತ್=ಧರಿಸುವುದು. ॥೫೭॥

**ಗ್ರಂಥ॥** ತ್ರಯೋದಶಮುಖಾನ್ಬಾಹ್ವೋರ್ಧರೇತ್ ಷೋಡಶ ಷೋಡಶ ।
ಪ್ರತ್ಯೇಕಂ ದ್ವಾದಶ ವಹೇನ್ನವಾಸ್ಯಾನ್ಮಣಿಬಂಧಯೋಃ ॥

**ಟೀಕು॥** ತ್ರಯೋದಶಮುಖಾನ್=ಹದಿಮೂರು ಮುಖವುಳ್ಳ ರುದ್ರಾಕ್ಷಿಗಳನು, ಷೋಡಶ ಷೋಡಶ=ಹದಿನಾರು ಹದಿನಾರು, ಬಾಹ್ವೋಃ=ಎರಡು ತೋಳುಗಳಲ್ಲಿ, ಧರೇತ್=ಧರಿಸುವುದು. ನವಾಸ್ಯಾನ್=ಒಂಭತ್ತು ಮುಖವುಳ್ಳ ರುದ್ರಾಕ್ಷಿಗಳನು, ದ್ವಾದಶ ದ್ವಾದಶ=ಹನ್ನೆರಡು ಹನ್ನೆರಡನು, ಮಣಿಬಂಧಯೋಃ=ಎರಡು ಮುಂಗೈಗಳಲ್ಲಿ, ಪ್ರತ್ಯೇಕಂ=ಬೇರೆ ಬೇರೆ, ವಹೇತ್=ಧರಿಸುವುದು. ॥೫೮॥

**ಗ್ರಂಥ॥** ಚತುರ್ದಶಮುಖಂ ಯಜ್ಞಸೂತ್ರಮಷ್ಟೋತ್ತರಂ ಶತಮ್ ।
ಧಾರಯೇತ್ಸರ್ವಕಾಲೇ ತು ರುದ್ರಾಕ್ಷಂ ಶಿವಪೂಜಕಃ ॥

**ಟೀಕು||** ಚತುರ್ದಶಮುಖಂ=ಹದಿನಾಲ್ಕುಮುಖವುಳ್ಳ, ಅಷ್ಟೋತ್ತರಂ ಶತಂ ರುದ್ರಾಕ್ಷಂ=ನೂರೆಂಟು ರುದ್ರಾಕ್ಷೆಯನು, ಯಜ್ಞಸೂತ್ರಂ=ಯಜ್ಞೋಪವೀತವನಾಗಿ, ಸರ್ವಕಾಲೇ ತು= ಎಲ್ಲಾ ಕಾಲದಲ್ಲಿಯಾಯಿತ್ತಾದೊಡೆ, ಶಿವಪೂಜಕಃ=ಶಿವಲಿಂಗಪೂಜಕನಾದ ಭಕ್ತನು, ಧಾರಯೇತ್=ಧರಿಸುವುದು.

**ಇವರ ತಾತ್ಪರ್ಯ:** "ಶಿಖಾಮಣಿರಯಂ ಬ್ರಹ್ಮಸ್ರೀಮಾಭೂತೋ ನ ಸಂಖ್ಯಾಯ"ಯೆಂಬ ಶಿವಾಗಮ ವಾಕ್ಯವುಂಟಾಗಿ ಶುದ್ಧ ಮಿಶ್ರ ಸಂಕೀರ್ಣ ಭುವನಾಧೀಶ್ವರರಾದ ಪರಶಿವ ಅಷ್ಟವಿದ್ಯೇಶ್ವರರು, ಶತರುದ್ರರು, ಇವರ ಸಂಖ್ಯೆಯಿಂದಲಾದ ಯಜ್ಞೋಪವೀತಧಾರಣದಿಂದೆ ಭುವನಾಧ್ವಶುದ್ಧಿ, ವರ್ಣಸಂಖ್ಯೆಯುಳ್ಳ ಉರೋಮಾಲೆಯಿಂದೆ ವರ್ಣಾಧ್ವಶುದ್ಧಿ, ಪದಸಂಖ್ಯೆಯುಳ್ಳ ಮಣಿಬಂಧ ಬಾಹುಕಂಠಮಾಲೆಗಳಿಂದೆ ಪದಾಧ್ವಶುದ್ಧಿ, ಷಡಂಗ ಪಂಚಬ್ರಹ್ಮ ಪ್ರಣವ ಮಂತ್ರ ಸಂಖ್ಯೆಯುಳ್ಳ ಕರ್ಣಾಭರಣದಿಂದೆ ಮಂತ್ರಾಧ್ವಶುದ್ಧಿ, ಶಿವಶಕ್ತ್ಯಾತ್ಮಕವಾದ ಕರ್ಣಾಭರಣವಾದರೂ ಆಗಲಿ ತತ್ತ್ವ ಸಂಖ್ಯೆಯುಳ್ಳ ಮಸ್ತಕಮಾಲೆಯಿಂದಲಾಗಲಿ ತತ್ತ್ವಾಧ್ವಶುದ್ಧಿ, ಅಷ್ಟತ್ರಿಂಶತ್ಕಲಾ ಪರಿಪೂರ್ಣರಾದ ಚಂದ್ರಸೂರ್ಯಾಗ್ನಿಗಳ ಸಂಖ್ಯೆಯುಳ್ಳ ಶಿರೋಮಾಲೆಯ ಧರಿಸುವುದರಿಂದೆ ಕಲಾಧ್ವಶುದ್ಧಿ.

"ಯೋ ರುದ್ರಾಕ್ಷಂ ಧತ್ತೇ ಸ ಸತ್ಯಂ
ಪರಮಃ ಶಿವಃ, ಸ ಸತ್ಯಂ ಪರಮಃ ಶಿವಃ" ||

ಯೆಂದು ಶ್ರುತಿಯುಂಟಾಗಿ ಈ ಷಡಧ್ವಂಗಳಿಗೆ ಕಾರಣವಾದ ಶಿವತತ್ತ್ವ ಸಂಖ್ಯೆಯುಳ್ಳ ಒಂದು ರುದ್ರಾಕ್ಷೆಯ ಧರಿಸಿದಾತನು ಪರಮಶಿವಸ್ವರೂಪನೆಂಬುದರ್ಥ. ||೫೯||

**ಸೂತ್ರ||** ಬಳಿಕ ರುದ್ರಾಕ್ಷಧಾರಣದಿಂದೆ ಸರ್ವಪಾಪಕ್ಷಯವೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

ಗ್ರಂಥ|| **ಏವಂ ರುದ್ರಾಕ್ಷಧಾರೀ ಯಸ್ಸರ್ವಕಾಲೇ ತು ವರ್ತತೇ ।**
**ತಸ್ಯ ಪಾಪಕಥಾ ನಾಸ್ತಿ ಮೂಢಸ್ಯಾಪಿ ನ ಸಂಶಯಃ ॥**

**ಟೀಕು||** ಏವಂ=ಈ ಪ್ರಕಾರದಿಂದೆ, ಸರ್ವಕಾಲೇ ತು=ಸಮಸ್ತ ಕಾಲದಲ್ಲಿ ಯಾಯಿತ್ತಾದೊಡೆ, ಯಃ ವರ್ತತೇ=ಯಾವಾತನು ವರ್ತಿಸುತ್ತಿರ್ದಪನು, ಮೂಢಸ್ಯಾಪಿ= ಮೂಢನಾಯಿತ್ತಾದೊಡೆಯು, ತಸ್ಯ=ಆತನಿಗೆ, ಪಾಪಕಥಾ=ಪಾಪದವಾರ್ತೆಯು, ನಾಸ್ತಿ=ಇಲ್ಲ. ಅತ್ರ=ಇಲ್ಲಿ, ನ ಸಂಶಯಃ=ಸಂದೇಹವಿಲ್ಲ. ||೬೦||

ಗ್ರಂಥ|| **ಬ್ರಹ್ಮಹಾ ಮದ್ಯಪಾಯೀ ಚ ಸ್ವರ್ಣಹೃದ್ಗುರುತಲ್ಪಗಃ ।**
**ಮಾತೃಹಾ ಪಿತೃಹಾ ಚೈವ ಭ್ರೂಣಹಾ ಕೃತ ಘಾತಕಃ ।**
**ರುದ್ರಾಕ್ಷಧಾರಣಾದೇವ ಮುಚ್ಯತೇ ಸರ್ವಪಾತಕೈಃ ॥**

**ಟೀಕು॥** ಬ್ರಹ್ಮಹಾ=ಬ್ರಾಹ್ಮಣವಧೆಯಮಾಡಿದಾತ, ಮದ್ಯಪಾಯೀ ಚ=ಸುರಾಪಾನವ ಮಾಡಿದಾತ, ಸ್ವರ್ಣಹೃತ್=ಸುವರ್ಣಚೋರ, ಗುರುತಲ್ಪಗಃ=ಗುರುಪತ್ನಿಯನ್ನೈದಿದಾತನು ತತ್ಸಂಪರ್ಕವುಳ್ಳ ಪಂಚಮಾಹಪಾತಕನಾದರು, ಮಾತೃಹಾ=ತಾಯಿಕೊಂದವ, ಪಿತೃಹಾ=ತಂದೆಯ ಕೊಂದವ, ಭ್ರೂಣಹಾ=ಶಿಶುವ ಕೊಂದವ, ಕೃತಘಾತಕಃ=ಉಪಕಾರಮಾಡಿದವನ ಕೊಂದವನು ತತ್ಸಂಪರ್ಕಯಾದುಪಮಹಾ ಪಂಚಮಹಾಪಾತಕನಾದರೂ, ರುದ್ರಾಕ್ಷಧಾರಣಾದೇವ=ರುದ್ರಾಕ್ಷಿಯನು ಧರಿಸುವುದರದೆಸೆಯಿಂದವೆ, ಸರ್ವಪಾತಕೈಃ=ಮನೋವಾಕ್ಕಾಯ ಸಂಭವವಾದ ಸಮಸ್ತ ಪಾತಕಂಗಳಿಂದವು, ಮುಚ್ಯತೇ=ಬಿಡಲುಪಡುತ್ತಿರ್ದಪನು. ॥೬೧॥

**ಗ್ರಂಥ॥**

**ದರ್ಶನಾತ್ಸ್ಪರ್ಶನಾಚ್ಚೈವ ಸ್ಮರಣಾದಪಿ ಪೂಜನಾತ್ ।**
**ರುದ್ರಾಕ್ಷಧಾರಣಾಲ್ಲೋಕೇ ಮುಚ್ಯಂತೇ ಪಾತಕೈರ್ಜನಾಃ ॥**

**ಟೀಕು॥** ದರ್ಶನಾತ್=ರುದ್ರಾಕ್ಷಿಯ ನೋಡುವದರದೆಸೆಯಿಂದೆ, ಸ್ಪರ್ಶನಾಚ್ಚೈವ=ಮುಟ್ಟುವದರ ದೆಸೆಯಿಂದೆಯು, ಸ್ಮರಣಾದಪಿ=ನೆನೆವುದರದೆಸೆಯಿಂದಲಾದರು, ಪೂಜನಾತ್=ಪೂಜಿಸುವದರ ದೆಸೆಯಿಂದಲಾದರು, ರುದ್ರಾಕ್ಷಧಾರಣಾತ್=ರುದ್ರಾಕ್ಷಿಯಧರಿಸುವುದರದೆಸೆಯಿಂದವು, ಜನಾಃ=ಸಮಸ್ತ ಜನರುಗಳು, ಲೋಕೇ=ಲೋಕದಲ್ಲಿ, ಪಾತಕೈಃ=ಪಾತಕಂಗಳಿಂದೆ, ಮುಚ್ಯಂತೇ=ಬಿಡಲುಪಡುತ್ತಿರ್ದಪರು. ॥೬೨॥

**ಸೂತ್ರ॥** ಬಳಿಕ ರುದ್ರಾಕ್ಷಧಾರಣದ ಫಲವನು ಹೇಳುತ್ತಿರ್ದಪಂ.

**ಗ್ರಂಥ॥**

**ಬ್ರಾಹ್ಮಣೋ ವಾಂತ್ಯಜೋ ವಾಪಿ ಮೂರ್ಖೋ ವಾ ಪಂಡಿತೋಽಪಿ ವಾ।**
**ರುದ್ರಾಕ್ಷಧಾರಣಾದೇವ ಮುಚ್ಯತೇ ಸರ್ವಪಾತಕೈಃ ॥**

**ಟೀಕು॥** ಬ್ರಾಹ್ಮಣಃ=ಬ್ರಾಹ್ಮಣನಾದರೂ, ಅಂತ್ಯಜೋ ವಾ=ಚಂಡಾಲನಾದರೂ, ಮೂರ್ಖೋ ವಾ=ಮೂಢನಾದರೂ, ಪಂಡಿತೋಽಪಿ ವಾ=ಬಲ್ಲಾತನಾದರೂ, ರುದ್ರಾಕ್ಷಧಾರಣಾದೇವ= ರುದ್ರಾಕ್ಷಧಾರಣಮಾತ್ರದಿಂದವೆ, ಸರ್ವಪಾತಕೈಃ=ಸಮಸ್ತಪಾತಕಗಳಿಂದೆ, ಮುಚ್ಯತೇ=ಬಿಡಲುಪಡುವನು, ॥೬೩॥

**ಗ್ರಂಥ॥**

**ಗವಾಂ ಕೋಟಿಪ್ರದಾನಸ್ಯ ಯತ್ಫಲಂ ಭುವಿ ಲಭ್ಯತೇ ।**
**ತತ್ಫಲಂ ಲಭತೇ ಮರ್ತ್ಯೋ ನಿತ್ಯಂ ರುದ್ರಾಕ್ಷಧಾರಣಾತ್ ॥**

**ಟೀಕು॥** ಗವಾಂ=ಗೋವುಗಳ, ಕೋಟಿ ಪ್ರದಾನಸ್ಯ=ಕೋಟಿದಾನಕ್ಕೆ, ಯತ್ಫಲಂ=ಆವುದಾನೊಂದು ಫಲವು, ಭುವಿ=ಭೂಮಿಯಲ್ಲಿ, ಲಭ್ಯತೇ=ಪಡೆಯಲುಪಡುತ್ತಿರ್ದಪುದು, ತತ್ಫಲಂ=ಆ ಫಲವನು,

ರುದ್ರಾಕ್ಷಧಾರಣಾತ್=ರುದ್ರಾಕ್ಷೆಯನು ಧರಿಸುವುದರದೆಸೆಯಿಂದೆ, ಮರ್ತ್ಯಃ=ಮನುಷ್ಯನು, ನಿತ್ಯಂ=ಆವಾಗವು, ಲಭತೇ=ಪಡೆವುತ್ತಿರ್ದ್ದಪನು. ||೬೪||

**ಸೂತ್ರ||** ಬಳಿಕ ರುದ್ರಾಕ್ಷೆಯನು ನೀರೊಳಗೆ ಅರದು ಕೊಂಡ ಫಲವನು ಹೇಳುತ್ತಿರ್ದ್ದಪಂ.

ಗ್ರಂಥ|| **ಮೃತ್ಯುಕಾಲೇ ತು ರುದ್ರಾಕ್ಷಂ ನಿಷ್ಪೀಡ್ಯ ಸಹ ವಾರಿಣಾ ।**
**ಯಃ ಪಿಬೇಚ್ಚಿಂತಯನ್ ರುದ್ರಂ ರುದ್ರಲೋಕಂ ಸ ಗಚ್ಛತಿ ॥**

**ಟೀಕು||** ಯಃ=ಆವಾತನು, ಮೃತ್ಯುಕಾಲೇ ತು=ಮರಣಕಾಲದಲ್ಲಿಯಾಯಿತ್ತಾದೊಡೆಯು, ರುದ್ರಾಕ್ಷಂ=ರುದ್ರಾಕ್ಷೆಯನು, ವಾರಿಣಾ ಸಹ=ಉದಕದೊಡನೆ ಕೂಡಿ, ನಿಷ್ಪೀಡ್ಯ=ಅರದುಕೊಂಡು ರುದ್ರಂ="ಏಕಮೇವಾದ್ವಿತೀಯಂ ಬ್ರಹ್ಮ ಶಿವ ಏಕೋ ಧ್ಯೇಯಃ ಶಿವಂಕರಃ ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ" ಯೆಂದು ಶ್ರುತಿಪ್ರಸಿದ್ಧವಾದ ಬ್ರಹ್ಮ ಶಿವ, ರುದ್ರನೆಂಬ ಪರ್ಯಾಯ ನಾಮವುಳ್ಳ ಮಹಾಲಿಂಗವನು, ಚಿಂತಯನ್ ಸನ್=ಧ್ಯಾನಿಸುತ್ತಿದ್ದಾತನಾಗುತಪು, ಪಿಬೇತ್=ಪಾನವನು ಮಾಡುವುದು. ಸಃ=ಆತನು, ರುದ್ರಲೋಕಂ=ಶಿವಲೋಕವನು, ಗಚ್ಛತಿ=ಎಯ್ದುತ್ತಿರ್ದ್ದಪನು. ||೬೫||

**ಸೂತ್ರ||** ಬಳಿಕ ಭಸ್ಮರುದ್ರಾಕ್ಷೆಯಂ ದೃಢಚಿತ್ತರಾಗಿ ಧರಿಸಿದವರೆ ರುದ್ರರೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| **ಭಸ್ಮೋದ್ಧೂಲಿತಸರ್ವಾಂಗಾಃ ಧೃತರುದ್ರಾಕ್ಷಮಾಲಿಕಾಃ ।**
**ಯೇ ಭವಂತಿ ಮಹಾತ್ಮಾನಸ್ತೇ ರುದ್ರಾ ನಾತ್ರ ಸಂಶಯಃ ॥**

**ಟೀಕು||** ಯೇ=ಆರು ಕೆಲಂಬರು, ಭಸ್ಮೋದ್ಧೂಲಿತ ಸರ್ವಾಂಗಾಃ=ಭಸ್ಮದಿಂದ ಉದ್ಧೂಳನವುಳ್ಳುದಾಗಿ ಮಾಡಲುಪಟ್ಟ ಸರ್ವಾಂಗವುಳ್ಳವರು, ಯೇ=ಆರು ಕೆಲಂಬರು, ರುದ್ರಾಕ್ಷಮಾಲಿಕಾಃ= ರುದ್ರಾಕ್ಷಮಾಲೆಯುಳ್ಳವರು, ಭವಂತಿ=ಆಗುತ್ತಿರ್ದ್ದಪರು, ತೇ ಮಹಾತ್ಮಾನಃ=ಆ ಮಹಾಪುರುಷರು, ಅತ್ರ=ಇಲ್ಲಿ, ರುದ್ರಾಃ=ರುದ್ರಸ್ವರೂಪರೆ, ನ ಸಂಶಯಃ=ಸಂದೇಹವಿಲ್ಲ. ||೬೬||

ವೃತ್ತ|| **ನಿತ್ಯಾನಿ ಕಾಮ್ಯಾನಿ ನಿಮಿತ್ತಜಾನಿ ಕರ್ಮಾಣಿ ಸರ್ವಾಣಿ ಸದಾಽಪಿ ಕುರ್ವನ್ ।**
**ಯೋಽಭಸ್ಮರುದ್ರಾಕ್ಷಧರೋ ಯದಿ ಸ್ಯಾತ್ ದ್ವಿಜೋ ನ ತಸ್ಯಾಸ್ತಿ ಫಲೋಪಪತ್ತಿಃ ॥**

**ಟೀಕು||** ಯಃ ದ್ವಿಜಃ=ಆವನಾನೊಬ್ಬ ಬ್ರಾಹ್ಮಣನು, ನಿತ್ಯಾನಿ=ನಿತ್ಯಕರ್ಮಂಗಳನು, ನಿಮಿತ್ತಜಾನಿ= ನೈಮಿತ್ತಿಕ ಕರ್ಮಗಳನು, ಕಾಮ್ಯಾನಿ=ಕಾಮ್ಯಕರ್ಮಂಗಳನು, ಸರ್ವಾಣಿ ಕರ್ಮಾಣಿ=ಪ್ರಾಯಶ್ಚಿತ್ತಾದಿ ಯಾಗಿ ಉಳಿದ ಸಮಸ್ತಕರ್ಮಂಗಳನು, ಸದಾ=ಎಲ್ಲಾ ಕಾಲದಲ್ಲಿಯು, ಕುರ್ವನ್ನಪಿ=ಮಾಡುತ್ತಿರ್ದ್ದಾತ

ನಾದೊಡೆಯು, ಯಃ ಅಭಸ್ಮರುದ್ರಾಕ್ಷಧರಃ=ಭಸ್ಮರುದ್ರಾಕ್ಷಿಯನು ಧರಿಸದೆಯಿದ್ದಾತನು, ಯದಿ ಸ್ಯಾತ್= ಎತ್ತಲಾನು, ಅಹನ್‌ತರ್ಹಿ=ಅಹಂಗಾಯಿತ್ತಾದೊಡೆ, ತಸ್ಯ=ಆತನಿಗೆ, ಫಲೋಪಪತ್ತಿಃ=ನಿತ್ಯಕರ್ಮಂ ಗಳಿಂದಾದ ಫಲಪ್ರಾಪ್ತಿಯು, ನಾಸ್ತಿ=ಇಲ್ಲ. ||೬೭||

**ವೃತ್ತ||** **ಸರ್ವೇಷು ವರ್ಣಾಶ್ರಮಸಂಗತೇಷು ನಿತ್ಯಂ ಸದಾಚಾರಪರಾಯಣೇಷು ।**
**ಶ್ರುತಿಸ್ಮೃತಿಭ್ಯಾಮಿಹ ಚೋದ್ಯಮಾನೋ ವಿಭೂತಿರುದ್ರಾಕ್ಷಧರಸ್ಸಮಾನಃ ॥**

**ಟೀಕು||** ವರ್ಣಾಶ್ರಮಸಂಗತೇಷು=ಬ್ರಾಹ್ಮಣಾದಿ ವರ್ಣ ಬ್ರಹ್ಮಚರ್ಯಾದ್ಯಾಶ್ರಮಂಗಳಲ್ಲಿ ಕೂಡಿರ್ದ್ದ, ನಿತ್ಯಂ=ಆವಾಗವು, ಸದಾಚಾರಪರಾಯಣೇಷು=ಸದಾಚಾರದಲ್ಲಿ ತತ್ಪರರಾಗಿರ್ದ್ದ, ಸರ್ವೇಷು ವಿಷಯೇ=ಸಮಸ್ತ ಜನರ ವಿಷಯವಾಗಿ, ಇಹ=ಇಲ್ಲಿ, ವಿಭೂತಿರುದ್ರಾಕ್ಷಧರಃ ಸಮಾನಃ=ಭಸ್ಮ ರುದ್ರಾಕ್ಷಿಯನು ಧರಿಸುತ್ತಿದ್ದಾತನೊರ್ವನೆ, ಶ್ರುತಿಸ್ಮೃತಿಭ್ಯಾಂ=ಶ್ರುತಿಸ್ಮೃತಿಗಳಿಂದೆ, ಚೋದ್ಯಮಾನಃ= ಕೊಂಡಾಡಲುಪಡುತ್ತಿದ್ದಾತನು. ||೬೮||

**ಇತಿ ರುದ್ರಾಕ್ಷಧಾರಣಸ್ಥಲಮ್**

**ಇತಿ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ**
**ವಿಭೂತಿರುದ್ರಾಕ್ಷಧಾರಣಪ್ರಸಂಗೋ ನಾಮ ಸಪ್ತಮಃ ಪರಿಚ್ಛೇದಃ ಸಮಾಪ್ತಃ**

# ೮. ಭಕ್ತಸ್ಥಲೇ ಪಂಚಾಕ್ಷರೀಜಪಸ್ಥಲಮ್

ಶ್ರೀ ರೇಣುಕ ಉವಾಚ॥

**ಸೂತ್ರ॥** ಅನಂತರದಲ್ಲಿ ಶಿವಲಿಂಗ ಭಸ್ಮರುದ್ರಾಕ್ಷಧಾರಣ ಸಂಪನ್ನನಾದಾತನು ಶಿವತತ್ತ್ವಾರ್ಥವಾಗಿ ಪಂಚಾಕ್ಷರಮಂತ್ರವನು ಜಪಿಸಬೇಕೆಂದು ಪಂಚಾಕ್ಷರಸ್ಥಲವನು ರೇಣುಕಗಣೇಶ್ವರನು ಆಗಸ್ತ್ಯಮುನಿಗೋಸುಗ ಉಪದೇಶಿಸುತ್ತಿರ್ದಪಂ.

**ಗ್ರಂಥ॥** **ಧೃತಶ್ರೀಭೂತಿರುದ್ರಾಕ್ಷಃ ಪ್ರಯತೋ ಲಿಂಗಧಾರಕಃ ।**
**ಜಪೇತ್ಪಂಚಾಕ್ಷರೀವಿದ್ಯಾಂ ಶಿವತತ್ತ್ವಪ್ರಬೋಧಿನೀಮ್ ॥**

**ಟೀಕು॥** ಧೃತಶ್ರೀಭೂತಿರುದ್ರಾಕ್ಷಃಪ್ರಯತಃ=ಧರಿಸಲುಪಟ್ಟ ಮಾಂಗಲ್ಯವಾದ ಭಸ್ಮರುದ್ರಾಕ್ಷೆಯಿಂದೆ ಪವಿತ್ರನಾಗಿ, ಲಿಂಗಧಾರಕಃ=ಶಿವಲಿಂಗಧಾರಕನಾಗಿದ್ದಾತನು, ಶಿವತತ್ತ್ವಪ್ರಬೋಧಿನೀಂ= ಪರಶಿವ ತತ್ತ್ವವನು ಅರುಹಿಸುತ್ತಿರ್ದ, ಪಂಚಾಕ್ಷರೀ ವಿದ್ಯಾಂ="ನಮಃ ಶಿವಾಯ ಚ ಶಿವತರಾಯಚ"ಯೆಂದು ಶ್ರೀರುದ್ರ ಮಂತ್ರದಲ್ಲಿ ಪ್ರಸಿದ್ಧವಾದ ಪಂಚಾಕ್ಷರೀ ವಿದ್ಯೆಯನು, ಜಪೇತ್=ಮಾನಸೋಂಪಾಶುವಾಚಿಕ ಸ್ವರೂಪಿನಿಂದೆ ಉಚ್ಚರಿಸುವುದು. "ಜಪ ಅವ್ಯಕ್ತಾಯಾಂ ವಾಚಿ". ॥೧॥

**ಸೂತ್ರ॥** ಬಳಿಕ ಸರ್ವದೇವೋತ್ತಮನಾದ ಶಿವನೋಪಾದಿಯಲ್ಲಿ ತದ್ವಾಚಕವಾದ ಈ ಪಂಚಾಕ್ಷರಮಂತ್ರವು ಸರ್ವಮಂತ್ರೋತ್ತಮವೆಂದು ಹೇಳುತ್ತಿರ್ದಪಂ.

**ಗ್ರಂಥ॥** **ಶಿವತತ್ತ್ವಾತ್ಪರಂ ನಾಸ್ತಿ ಯಥಾ ತತ್ತ್ವಾಂತರಂ ಮಹತ್ ।**
**ತಥಾ ಪಂಚಾಕ್ಷರೀಮಂತ್ರಾನ್ನಾಸ್ತಿ ಮಂತ್ರಾಂತರಂ ಮಹತ್ ॥**

**ಟೀಕು॥** ಶಿವತತ್ತ್ವಾತ್=ಶಿವತತ್ತ್ವದದೆಸೆಯಿಂದೆ, ಮಹತ್=ದೊಡ್ಡಿತ್ತಾದ, ಪರಂತತ್ತ್ವಾಂತರಂ= ಪರತತ್ತ್ವಾಂತರವು, ಯಥಾ=ಹೇಗೆ, ನಾಸ್ತಿ=ಇಲ್ಲ. ತಥಾ=ಆ ಪ್ರಕಾರದಿಂದೆ, ಪಂಚಾಕ್ಷರೀ ಮಂತ್ರಾತ್=ಪಂಚಾಕ್ಷರಮಂತ್ರದದೆಸೆಯಿಂದೆ, ಮಹತ್ ಮಂತ್ರಾಂತರಂ=ದೊಡ್ಡಿತ್ತಾದ ಮಂತ್ರಾಂತರವು, ನಾಸ್ತಿ=ಇಲ್ಲ. ॥೨॥

**ಗ್ರಂಥ॥** **ಜ್ಞಾತೇ ಪಂಚಾಕ್ಷರೀಮಂತ್ರೇ ಕಿಂ ವಾ ಮಂತ್ರಾಂತರೈಃ ಫಲಮ್ ।**
**ಜ್ಞಾತೇ ಶಿವೇ ಜಗನ್ಮೂಲೇ ಕಿಂ ಫಲಂ ದೇವತಾಂತರೈಃ ॥**

**ಟೀಕು॥** ಜಗನ್ಮೂಲೇ=ಜಗಜ್ಜಾಲೋತ್ಪತ್ತಿಗೆ ಮೂಲಕಾರಣವಾಗಿರ್ದ, ಶಿವೇ=ಪರಶಿವನು, ಜ್ಞಾತೇ

ಸತಿ=ಅರಿಯಲುಪಡಲಾಗಿ, ದೇವತಾಂತರೈಃ= ಬ್ರಹ್ಮಾದಿದೇವತಾಂತರಂಗಳಿಂದೆ, ಕಿಂ ಫಲಂ=ಏನು ಫಲವು? ಏನೂ ಇಲ್ಲ. ಹಾಗೆಯೆ, ಪಂಚಾಕ್ಷರೀ ಮಂತ್ರೇ=ಪರಮಶಿವವಾಚಕವಾದ ಪಂಚಾಕ್ಷರ ಮಂತ್ರವು, ಜ್ಞಾತೇ ಸತಿ=ಅರಿಯಲುಪಡಲಾಗಿ, ಮಂತ್ರಾಂತರೈಃ=ಅಘೋರಾದಿ ಮಂತ್ರಾಂತರಂಗಳಿಂದೆ, ಕಿಂ ವಾ ಫಲಂ=ಏನು ಫಲವು? ಏನು ಪ್ರಯೋಜನವಿಲ್ಲವೆಂಬುದರ್ಥ. ||೩||

**ಗ್ರಂಥ||** **ಸಪ್ತಕೋಟಿಷು ಮಂತ್ರೇಷು ಮಂತ್ರಃ ಪಂಚಾಕ್ಷರೋ ಮಹಾನ್ ।**
**ಬ್ರಹ್ಮವಿಷ್ಣ್ವಾದಿದೇವೇಷು ಯಥಾ ಶಂಭುರ್ಮಹತ್ತರಃ ॥**

**ಟೀಕು||** ಶಂಭುಃ=ಪರಶಿವನು, ಬ್ರಹ್ಮವಿಷ್ಣ್ವಾದಿ ದೇವೇಷು=ಬ್ರಹ್ಮವಿಷ್ಣ್ವಾದಿ ದೇವತೆಗಳಲ್ಲಿ, ಯಥಾ=ಹೇಗೆ, ಮಹತ್ತರಃ=ಅತ್ಯಂತ ಶ್ರೇಷ್ಠವಾಗಿದ್ದಾತನು, ತಥಾ=ಹಾಗೆಯೇ ಪಂಚಾಕ್ಷರೋ ಮಂತ್ರಃ=ಆ ಪರಮಶಿವ ವಾಚಕವಾದ ಪಂಚಾಕ್ಷರಮಂತ್ರವು, ಸಪ್ತಕೋಟಿಷು ಮಂತ್ರೇಷು=ಸಪ್ತ ಕೋಟಿ ಮಹಾಮಂತ್ರಂಗಳಲ್ಲಿ, ಮಹಾನ್=ಶ್ರೇಷ್ಠವಾಗಿದ್ದ ಅದು. ||೪||

**ಸೂತ್ರ||** ಬಳಿಕ ಪರಶಿವನೆ ವಾಚ್ಯನು. ಪಂಚಾಕ್ಷರ ಮಂತ್ರವೆ ವಾಚಕವೆಂದು, ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಅಶೇಷಜಗತಾಂ ಹೇತುಃ ಪರಮಾತ್ಮಾ ಮಹೇಶ್ವರಃ ।**
**ತಸ್ಯ ವಾಚಕಮಂತ್ರೋऽಯಂ ಸರ್ವಮಂತ್ರೈಕಕಾರಣಮ್ ॥**

**ಟೀಕು||** ಪರಮಾತ್ಮಾ=ಪರಮಶಿವ ಪರಬ್ರಹ್ಮ ಪರಮಾತ್ಮನೆಂಬಪರ್ಯಾಯ ನಾಮವುಳ್ಳ ಮಹಾಲಿಂಗವೆ, ಅಶೇಷ ಜಗತಾಂ ಹೇತುಃ=ಸಕಲ ಲೋಕಂಗಳ ಲಯ ಗಮನಕ್ಕೆ ಕಾರಣವಾಗಿರ್ದ್ದ, ಮಹೇಶ್ವರಃ=ಪಂಚಾಕ್ಷರಮಂತ್ರವಾಚ್ಯವಾದ ಪರಮೇಶ್ವರನು, ತಸ್ಯ=ಪಂಚಾಕ್ಷರಮಂತ್ರವಾಚ್ಯನಾದ ಪರಮೇಶ್ವರನ, ವಾಚಕಮಂತ್ರೋऽಯಂ=ವಾಚಕ ಮಂತ್ರವಾದ ಈ ಪಂಚಾಕ್ಷರಮಂತ್ರವೆ, ಸರ್ವ ಮಂತ್ರೈಕ ಕಾರಣಂ=ಸಮಸ್ತ ಮಂತ್ರಂಗಳಿಗೆ ಮುಖ್ಯವಾಗಿ ಕಾರಣವಾಗಿಯಿದ್ದ ಅದು.

**ತಾತ್ಪರ್ಯ||** ವೇದಂಗಳಲ್ಲಿ ಓಂಕಾರವೆ ಮೂಲಮಂತ್ರ. ಆಗಮಂಗಳಲ್ಲಿ ಹಕಾರವೆ ಮೂಲಮಂತ್ರ. ತದುಭಯರೂಪವಾದ ಷಟ್ಸ್ಥಲಂಗಳಲ್ಲಿ ಅಂಗಲಿಂಗರೂಪವಾದ ಜೀವೇಶ್ವರ ಐಕ್ಯ ಪ್ರತಿಪಾದಕವಾದ "ಸೋऽಹಂ"ಯೆಂಬುದೆ ಮೂಲ ಮಂತ್ರ. "ಅಂಗಂ ನಮಃ ಪದಮಸೌ ಶಿವ ಏವ ಲಿಂಗಂ ಸಂಬಂಧ ಏಷ ಯದಯೇತಿ ಪದಂ ತದುಕ್ತಮ್, ಲಿಂಗಾಂಗ ಸಂಗಮಪದತ್ರಯ ಬೋಧನಾರ್ಥಂ ಮಂತ್ರೋऽಯಮೇವಮಭಿಧಾಸ್ಯತಿ ಮಂತ್ರರಾಜಃ"||ಯೆಂದು ರಹಸ್ಯೋಕ್ತಿಯುಂಟಾಗಿ, ಓಂಕಾರವೆ ಶರೀರ, ಹ ಕಾರವೆ ಚೈತನ್ಯವಾಗುಳ್ಳ ಲಿಂಗಾಂಗಧಾರರೂಪವಾದ ಶಿವಜೀವರಿಗೆ ಈ ಪಂಚಾಕ್ಷರವೆಂದು ಶ್ರುತಿಗುರುಸ್ವಾನುಭವಂಗಳಿಂದೆ ನಿಶ್ಚೈಸುವುದು. ||೫||

**ಸೂತ್ರ||** ಬಳಿಕ ಆ ಅರ್ಥವನೆ ಪ್ರಕಟಿಸುತ್ತಿರ್ದಪಂ.

**ಗ್ರಂಥ||** **ತಸ್ಯಾಭಿಧಾನಮಂತ್ರೋಽಯಮಭಿಧೇಯಶ್ಚ ಸ ಸ್ಮೃತಃ ।**
**ಅಭಿಧಾನಾಭಿಧೇಯತ್ವಾನ್ಮಂತ್ರಾತ್ಸಿದ್ಧಃ ಪರಶ್ಶಿವಃ ॥**

**ಟೀಕು||** ಅಯಂ=ಈ ಪಂಚಾಕ್ಷರಮಂತ್ರವು, ತಸ್ಯ=ಆ ಪರಶಿವನ, ಅಭಿಧಾನಮಂತ್ರಃ=ವಾಚಕವಾಗಿದ್ದ ಮಂತ್ರವು. ಸ ಚ=ಆ ಪರಮಶಿವನಾಯಿತ್ತಾದೊಡೆ, ಅಭಿಧೇಯಃ=ಆ ಪಂಚಾಕ್ಷರಮಂತ್ರದಿಂದೆ, ವಾಚ್ಯನಾಗಿದ್ದಾತನಾಗಿ, ಸ್ಮೃತಃ=ನೆನೆಯಲುಪಟ್ಟನು. ಅಭಿಧಾನಾಭಿಧೇಯತ್ವಾತ್ ಮಂತ್ರಾತ್= ಈ ಪಂಚಾಕ್ಷರಮಂತ್ರದದೆಸೆಯಿಂದೆ, ಸಿದ್ಧಃ ಪರಶ್ಶಿವಃ=ಪರುಮಶಿವನು ಸಿದ್ಧನಾಗಿದ್ದಾತನು. ||೬||

**ಸೂತ್ರ||** ಬಳಿಕ ಪಂಚಾಕ್ಷರ ಸೂತ್ರಸ್ವರೂಪವನು ಹೇಳುತ್ತಿರ್ದಪಂ.

**ಗ್ರಂಥ||** **ನಮಃ ಶಬ್ದಂ ವದೇತ್ಪೂರ್ವಂ ಶಿವಾಯೇತಿ ತತಃ ಪರಮ್ ।**
**ಮಂತ್ರಃ ಪಂಚಾಕ್ಷರೋ ಹ್ಯೇಷ ಸರ್ವಶ್ರುತಿಶಿರೋಗತಃ ॥**

**ಟೀಕು||** ಪೂರ್ವಂ=ಮೊದಲು, ನಮಃಶಬ್ದಂ=ನಮಃ ಯೆಂಬ ಶಬ್ದವನು, ವದೇತ್=ನುಡಿವುದು. ತತಃ ಪರಂ=ಅದರ ನಂತರದಲ್ಲಿ, ಶಿವಾಯ ಇತಿ=ಶಿವಾಯಯೆಂಬ ಶಬ್ದವನು, ವದೇತ್=ನುಡಿವುದು. ಏಷಃ=ಇದುವೆ, ಪಂಚಾಕ್ಷರೋ ಮಂತ್ರಃ=ಪಂಚಾಕ್ಷರಮಂತ್ರವು, ಸರ್ವಶ್ರುತಿ ಶಿರೋಗತಃ=ಸಮಸ್ತಶ್ರುತಿಶಿರಸ್ಸನು ಎಯ್ದಿರ್ದುದು. ಹಿ=ಪ್ರಸಿದ್ಧವು. ||೭||

**ಸೂತ್ರ||** ಬಳಿಕ ಪಂಚಾಕ್ಷರ ಮಧ್ಯಸ್ಥವಾದ ಶಿವಶಬ್ದವಿಗ್ರಹವನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಆದಿತಃ ಪರಿಶುದ್ಧತ್ವಾನ್ಮಲತ್ರಯವಿಯೋಗತಃ ।**
**ಶಿವ ಇತ್ಯುಚ್ಯತೇ ಶಂಭುಶ್ಚಿದಾನಂದಘನಃ ಪ್ರಭುಃ ॥**

**ಟೀಕು||** ಚಿದಾನಂದಘನಃ=ಸಚ್ಚಿದಾನಂದವೆ ಸ್ವರೂಪವಾಗುಳ್ಳ, ಪ್ರಭುಃ=ಸ್ವತಂತ್ರಶೀಲನಾಗಿರ್ದ, ಶಂಭುಃ=ಪರಮೇಶ್ವರನು, ಆದಿತಃ=ಮೊದಲೆ, ಮಲತ್ರಯ ವಿಯೋಗತಃ=ಆಣವ ಮಾಯಾಕಾರ್ಮ್ಯವೆಂಬ ಮಲತ್ರಯ ವಿಯೋಗದ ದೆಸೆಯಿಂದೆ, ಪರಿಶುದ್ಧತ್ವಾತ್=ಅನಾದಿಯಾದ ನಿರ್ಮಲತ್ವವುಳ್ಳಾತನಾದ ಕಾರಣವಾಗಿ, ಶಿವ ಇತಿ=ಶಿವನೆಂದು, ಉಚ್ಯತೇ=ಹೇಳಲುಪಡುತ್ತಿರ್ದಪನು. ||೮||

**ಗ್ರಂಥ||** **ಆಸ್ಪದತ್ವಾದಶೇಷಾಣಾಂ ಮಂಗಲಾನಾಂ ವಿಶೇಷತಃ ।**
**ಶಿವಶಬ್ದಾಭಿಧೇಯೋ ಹಿ ದೇವದೇವಸ್ತ್ರಿಯಂಬಕಃ ॥**

**ಟೀಕು||** ತ್ರಿಯಂಬಕಃ='ತ್ರಿಯಂಬಕಂ ಯಜಾಮಹೇ'ಯೆಂಬ ಋಗ್ವೇದ ಮಂತ್ರ ಪ್ರಸಿದ್ಧನಾದ, ದೇವದೇವಃ=ದೇವಾಧಿದೇವನಾದ ಪರಮೇಶ್ವರನು, ಅಶೇಷಾಣಾಂ ಮಂಗಲಾನಾಂ=ಸಮಸ್ತ ಮಂಗಲಂಗಳಿಗೆ, ವಿಶೇಷತಃ=ಮಿಗಿಲಾಗಿ, ಆಸ್ಪದತ್ವಾತ್=ಆಶ್ರಯವಾದ ಕಾರಣವಾಗಿ, ಶಿವ ಇತಿ=ಶಿವನೆಂದು, ಶಬ್ದಾಭಿಧೇಯಃ='ಸ್ವಶ್ರೇಯಸಂ ಶಿವಂ ಭದ್ರಂ ಕಲ್ಯಾಣಂ ಮಂಗಲಂ ಶುಭಮ್' ಯೆಂಬಾಭಿಧಾನವುಂಟಾಗಿ ಶಿವಶಬ್ದದಿಂದೆ ಹೇಳಲು ಯೋಗ್ಯವಾದಾತನು, ಹಿ=ಪ್ರಸಿದ್ಧವು. ||೯||

**ಸೂತ್ರ||** "ಅಯಂ ಮೇ ವಿಶ್ವ ಭೇಷಜೋ ಅಯಂ ಶಿವಾಭಿಮರ್ಶನಃ"ಯೆಂಬ ಋಗ್ವೇದ, "ನಮಃ ಶಿವಾಯ ಚ ಶಿವತರಾಯ ಚ'ಯೆಂಬ ಯಜುರ್ವೇದ", ಅಪಿ ವಾ ಯಶ್ಚಂಡಾಲಃ ಶಿವೇತಿ ವಾಚಂ ವದೇತ್ತೇನ ಸಹ ಸಂವಸೇತ್ತೇನ ಸಹ ಸಂವಿಶೇತ್ತೇನ ಸಹ ಭುಂಜೀತ ತೇನ ಸಹ ಭುಂಜೀತ"ಯೆಂಬ ಸಾಮವೇದ, "ಶಿವ ಏಕೋ ಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ ಸಮಾಪ್ತಾಥರ್ವ ಶಿಖಾ" ಯೆಂಬಥರ್ವಣವೇದ, "ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಮ್"ಯೆಂಬ ಕೈವಲ್ಯೋಪನಿಷತ್ತು ಇವು ಮೊದಲಾದ ಸಮಸ್ತ ಶಿವಾಗಮಪುರಾಣ ಪ್ರಸಿದ್ಧವಾದ ಶಿವಶಬ್ದವನು ಪ್ರಕಟಿಸುತ್ತಿರ್ದಪಂ.

**ಗ್ರಂಥ||**

**ಶಿವ ಇತ್ಯಕ್ಷರದ್ವಂದ್ವಂ ಪರಬ್ರಹ್ಮಪ್ರಕಾಶಕಮ್ ।**
**ಮುಖ್ಯವೃತ್ತ್ಯಾ ತದನ್ಯೇಷಾಂ ಶಬ್ದಾನಾಂ ಗೌಣವೃತ್ತಯಃ ॥**

**ಟೀಕು||** ಶಿವ ಇತ್ಯಕ್ಷರದ್ವಂದ್ವಂ=ಶಿವ ಎಂಬ ಅಕ್ಷರದ್ವಯವೆ, ಮುಖ್ಯವೃತ್ತ್ಯಾ=ಮುಖ್ಯವೃತ್ತಿಯಿಂದೆ, ಪರಬ್ರಹ್ಮಪ್ರಕಾಶಕಂ=ಪರಬ್ರಹ್ಮ ಪರಮಶಿವವಾಚ್ಯವಾದ ಮಹಾಲಿಂಗವನು ಪ್ರಕಾಶಿಸುತ್ತಿರ್ದುದು. ತದನ್ಯೇಷಾಂ ಶಬ್ದಾನಾಂ=ಆ ಶಿವಶಬ್ದದಿಂದೆ ಅನ್ಯವಾಗಿರ್ದ ಭವಾದಿ ಸಹಸ್ರನಾಮಂಗಳಿಗೆ, ಗೌಣವೃತ್ತಯಃ=[ಗೌಣೀ ವೃತ್ತಿಗಳೇ]. ||೧೦||

**ಗ್ರಂಥ||**

**ತಸ್ಮಾನ್ಮುಖ್ಯತರಂ ನಾಮ ಶಿವ ಇತ್ಯಕ್ಷರದ್ವಯಮ್ ।**
**ಸಚ್ಚಿದಾನಂದರೂಪಸ್ಯ ಶಂಭೋರಮಿತತೇಜಸಃ ॥**

**ಟೀಕು||** ಶಿವಇತ್ಯಕ್ಷರದ್ವಯಂ=ಶಿವಯೆಂಬಅಕ್ಷರದ್ವಯವೆ, ತಸ್ಮಾತ್ = ಸರ್ವವೇದೋಪನಿಷತ್ತುಗಳಲ್ಲಿ ಪ್ರಸಿದ್ಧವಾದ ಕಾರಣವಾಗಿ, ಸಚ್ಚಿದಾನಂದರೂಪಸ್ಯ=ಸಚ್ಚಿದಾನಂದನಿತ್ಯಪರಿ ಪೂರ್ಣವುಳ್ಳ, ಅಮಿತತೇಜಸಃ=ಹವಣಿಸಲುಪಡದೆಯಿದ್ದ ತೇಜಸ್ಸನುಳ್ಳ, ಶಂಭೋಃ=ಪರಮಶಿವನಿಗೆ ಮುಖ್ಯತರಂ ನಾಮ=ಅತ್ಯಂತ ಮುಖ್ಯವಾಗಿದ್ದ ಹೆಸರು. ||೧೧||

**ಗ್ರಂಥ||**

**ಏತನ್ನಾಮಾವಲಂಬೇನ ಮಂತ್ರಃ ಪಂಚಾಕ್ಷರಸ್ಸ್ಮೃತಃ ।**
**ಯಸ್ಮಾದತಃ ಸದಾ ಜಪ್ಯೋ ಮೋಕ್ಷಕಾಂಕ್ಷಿಭಿರಾದರಾತ್ ॥**

**ಟೀಕು||** ಯಸ್ಮಾತ್=ಆವುದಾನೊಂದು ಕಾರಣವಾಗಿ, ಏತನ್ನಾಮಾವಲಂಬೇನ=ಈ ಶಿವನಾಮವನು ಹಿಡಿವುದರಿಂದೆ, ಪಂಚಾಕ್ಷರೋ ಮಂತ್ರಃ=ಪಂಚಾಕ್ಷರಮಂತ್ರವೆಂದು, ಸ್ಮೃತಃ= ನೆನೆಯಲುಪಟ್ಟಿತ್ತು. ಅತಃ=ಇದು ಕಾರಣವಾಗಿ, ಮೋಕ್ಷಕಾಂಕ್ಷಿಭಿಃ=ಮೋಕ್ಷವನು ಬಯಸುವ ಮಹಾಪುರುಷರಿಂದೆ, ಆದರಾತ್=ಪ್ರೀತಿಯದೆಸೆಯಿಂದೆ, ಸದಾ=ಎಲ್ಲಾ ಕಾಲದಲ್ಲಿಯು, ಜಪ್ಯಃ=

"ಅಶೇಷಪಾಶವಿಚ್ಛಿತ್ತ್ಯೈ ಶಿವ ಇತ್ಯಕ್ಷರದ್ವಯಮ್ ।
ಅಲಂ ನಮಸ್ಕ್ರಿಯಾಯುಕ್ತೋ ಮುಕ್ತಯೇ ಕಲ್ಪಿತೋ ಮನುಃ||"ಯೆಂದು

ಬ್ರಹ್ಮೋತ್ತರಖಂಡ ವಾಕ್ಯವುಂಟಾಗಿ ಜಪಿಸಲು ಯೋಗ್ಯವು. ||೧೨||

**ಸೂತ್ರ||** ಬಳಿಕ ಈ ಪಂಚಾಕ್ಷರಮಂತ್ರವೆ ಸಂಸಾರ ನಾಶಕವೆಂದು ಹೇಳುತ್ತಿರ್ದಪಂ.

**ಗ್ರಂಥ||**

**ಯಥಾಽನಾದಿರ್ಮಹಾದೇವಃ ಸಿದ್ಧಃ ಸಂಸಾರಮೋಚಕಃ ।**
**ತಥಾ ಪಂಚಾಕ್ಷರೋ ಮಂತ್ರಸ್ಸಂಸಾರಕ್ಷಯಕಾರಕಃ ॥**

**ಟೀಕು||** ಅನಾದಿಃ=ಅನಾದಿಯಾದ, ಮಹಾದೇವಃ=ಪರಮಶಿವನು, ಯಥಾ=ಹೇಗೆ, ಸಂಸಾರಮೋಚಕಃ=ಸಂಸಾರಪಾಶವಿಮೋಚಕನೆಂದು, ಸಿದ್ಧಃ=ಪ್ರಸಿದ್ಧನು. ತಥಾ=ಹಾಗೆಯೇ, ಪಂಚಾಕ್ಷರೋ ಮಂತ್ರಃ=ಪಂಚಾಕ್ಷರಮಂತ್ರವು, ಸಂಸಾರಕ್ಷಯಕಾರಕಃ=ಸಂಸಾರವಿನಾಶವನು ಮಾಡುತ್ತಿರ್ದ್ದ ಅದು. ||೧೩||

**ಸೂತ್ರ||** ಬಳಿಕ ಪಂಚಾಕ್ಷರಂಗಳಿಂದೆ ಹುಟ್ಟಿ ಪಂಚಾಕ್ಷರಂಗಳೆ ಸ್ವರೂಪವಾಗಿ, ಪಂಚಾಕ್ಷರಂಗಳಿಂದೆ ಅರಿಯಲು ಯೋಗ್ಯಂಗಳಾದ ವಸ್ತುಗಳನು ಹೇಳುತ್ತಿರ್ದಪಂ.

**ಗ್ರಂಥ||**

**ಪಂಚಭೂತಾನಿ ಸರ್ವಾಣಿ ಪಂಚತನ್ಮಾತ್ರಕಾನಿ ಚ ।**
**ಜ್ಞಾನೇಂದ್ರಿಯಾಣಿ ಪಂಚಾಪಿ ಪಂಚಕರ್ಮೇಂದ್ರಿಯಾಣಿ ಚ ॥**

**ಪಂಚಬ್ರಹ್ಮಾಣಿ ಪಂಚಾಪಿ ಕೃತ್ಯಾನಿ ಸಹಕಾರಣೈಃ ।**
**ಬೋಧ್ಯಾನಿ ಪಂಚಭಿರ್ವರ್ಣೈಃ ಪಂಚಾಕ್ಷರಮಹಾಮನೋಃ ॥**

**ಟೀಕು||** ಪಂಚಭೂತಾನಿ=ಪೃಥಿವ್ಯಾದಿ ಪಂಚಭೂತಗಳು, ಪಂಚತನ್ಮಾತ್ರಕಾನಿ ಚ=ಗಂಧ ತನ್ಮಾತ್ರೆ ಮೊದಲಾದ ಪಂಚತನ್ಮಾತ್ರೆಗಳು, ಪಂಚಜ್ಞಾನೇಂದ್ರಿಯಾಣ್ಯಪಿ=ಜ್ಞಾನಶಕ್ತಿರೂಪವಾದ ಶ್ರೋತ್ರಾದಿ ಪಂಚಜ್ಞಾನೇಂದ್ರಿಯಂಗಳು, ಪಂಚಕರ್ಮೇಂದ್ರಿಯಾಣಿ ಚ=ಕ್ರಿಯಾಶಕ್ತಿರೂಪವಾದ ವಾಗಾದಿ ಪಂಚಕರ್ಮೇಂದ್ರಿಯಂಗಳು, ಪಂಚಬ್ರಹ್ಮಾಣಿ=ಪಂಚಸಾದಾಖ್ಯ ಪಂಚಬ್ರಹ್ಮವೆಂಬ ಪರ್ಯಾಯ ನಾಮವುಳ್ಳ ಆಚಾರಾದಿ ಪಂಚಲಿಂಗಂಗಳು, ಕಾರಣೈಃ ಸಹ=ಭವಮೃಡಹರಾದಿ ಕರಣೇಶ್ವರರೊಡನೆ

ಕೂಡಿರ್ದ್ದ, ಪಂಚಕೃತ್ಯಾನ್ಯಪಿ=ಸೃಷ್ಟ್ಯಾದಿ ಪಂಚ ಪಂಚಕೃತ್ಯಂಗಳಾಯಿತ್ತಾದೊಡೆಯು, ಸರ್ವಾಣಿ=ಪಂಚವಿಧವಾಗಿಪ್ಪ ಸಮಸ್ತವು. ಪಂಚಾಕ್ಷರ ಮಹಾಮನೋಃ="ನಮಃ ಶಿವಾಯ"ಯೆಂಬ ಪಂಚಾಕ್ಷರರೂಪವಾದ ಮಹಾಮಂತ್ರದ, ಪಂಚಭಿರ್ವರ್ಣೈಃ=ಅಯಿದಕ್ಷರಂಗಳಿಂದೆ. ಬೋಧ್ಯಾನಿ= ಬೋಧಿಸಲು ಯೋಗ್ಯಂಗಳು. ||೧೫||

**ಸೂತ್ರ||** ಬಳಿಕ ಆ ಅರ್ಥವನೆ ವಿಶೇಷಿಸುತ್ತಿರ್ದಪಂ.

**ಗ್ರಂಥ||**

**ಪಂಚಧಾ ಪಂಚಧಾ ಯಾನಿ ಪ್ರಸಿದ್ಧಾನಿ ವಿಶೇಷತಃ ।**
**ತಾನಿ ಸರ್ವಾಣಿ ವಸ್ತೂನಿ ಪಂಚಾಕ್ಷರಮಯಾನಿ ಹಿ ॥**

**ಟೀಕು||** ಯಾನಿ=ಆವವು ಕೆಲವು ವಸ್ತುಗಳು, ಪಂಚಧಾ ಪಂಚಧಾ=ಅಯಿವಯಿದಾಗಿ, ವಿಶೇಷತಃ=ಮಿಗಿಲಾಗಿ, ಪ್ರಸಿದ್ಧಾನಿ=ಪ್ರಸಿದ್ಧಂಗಳು, ತಾನಿ ಸರ್ವಾಣಿ ವಸ್ತೂನಿ=ಪಂಚಶಕ್ತಿ ಪಂಚಾಂಗುಲಿ ಮೊದಲಾದ ಆ ಸಮಸ್ತ ವಸ್ತುಗಳು, ಪಂಚಾಕ್ಷರಮಯಾನಿ=ಪಂಚಾಕ್ಷರವೆ ಸ್ವರೂಪವಾಗುಳ್ಳ ಅವು, ಹಿ=ಪ್ರಸಿದ್ಧವು. ||೧೬||

**ಸೂತ್ರ||** ಬಳಿಕ ತತ್ಪ್ರಸಂಗದಿಂದವೆ ಷಡಕ್ಷರ ಮಂತ್ರವನು ಪೇಳುತ್ತಿರ್ದಪಂ.

**ಗ್ರಂಥ||**

**ಓಂಕಾರಪೂರ್ವೋ ಮಂತ್ರೋಽಯಂ ಪಂಚಾಕ್ಷರಮಯಃ ಪರಃ ।**
**ಶೈವಾಗಮೇಷು ವೇದೇಷು ಷಡಕ್ಷರ ಇತಿ ಸ್ಮೃತಃ ॥**

**ಟೀಕು||** ಪರಃ=ಸರ್ವೋತ್ಕರ್ಷವಾಗಿರ್ದ್ದ, ಪಂಚಾಕ್ಷರಮಯಃ=ಪಂಚಾಕ್ಷರವೆ ಸ್ವರೂಪವಾಗುಳ್ಳ, ಅಯಂ ಮಂತ್ರಃ="ನಮಃ ಶಿವಾಯ"ಯೆಂಬ ಈ ಪಂಚಾಕ್ಷರ ಮಂತ್ರವೆ, ಓಂಕಾರಪೂರ್ವಃ=' ಓಮಿತಿ ಬ್ರಹ್ಮ ಓಮಿತಿದಂ ಸರ್ವಂ ಓಮಿತ್ಯೇತದನುಕೃತಿಹಸ್ಮ ವಾ'ಯೆಂದು ಶ್ರುತಿಶಿರಸ್ ಪ್ರಸಿದ್ಧವಾದ "ಓಂಕಾರಾತ್ಮತ್ರಯಾ ಭಾತಿ ಶಾಂತ್ಯತೀತಃ ಪರಃ ಶಿವಃ"ಯೆಂದು ಶಿವಾಗಮ ಪ್ರಸಿದ್ಧವಾದ ಓಂಕಾರವೆ ಮೊದಲಾಗುಳ್ಳದಾಗಿ, ವೇದೇಷು=ವೇದಂಗಳಲ್ಲಿ, ಶೈವಾಗಮೇಷು= ಶಿವಾಗಮಂಗಳಲ್ಲಿಯು, ಷಡಕ್ಷರ ಇತಿ=ಷಡಕ್ಷರಮಂತ್ರವೆಂದು, ಸ್ಮೃತಃ=ನೆನೆಯಲುಪಟ್ಟಿತ್ತು. ||೧೭||

**ಸೂತ್ರ||** ಬಳಿಕ

'ಪ್ರಥಮಂ ತಾರಕಾರೂಪಂ ದ್ವಿತೀಯಂ ದಂಡ ಉಚ್ಯತೇ ।
ತೃತೀಯಂ ಕುಂಡಲಾಕಾರಂ ಚತುರ್ಥಂ ಚಾರ್ಧಚಂದ್ರಕಮ್ ॥
ಪಂಚಮಂ ದರ್ಪಣಾಕಾರಂ ಷಷ್ಠಂ ಜ್ಯೋತಿಃಸ್ವರೂಪಕಮ್ ।
ನಕಾರಸ್ತಾರಕಾರೂಪಂ ಮಕಾರೋ ದಂಡ ಉಚ್ಯತೇ॥
ಶಿಕಾರಃ ಕುಂಡಲಾಕಾರೋ ವಕಾರಶ್ಚಾರ್ಧಚಂದ್ರಕಃ।

ಯಕಾರೋ ದರ್ಪಣಾಕಾರಃ ಓಂಕಾರಃ ಪಂಚವರ್ಣರಾಟ್॥" ಯೆಂದು ಶಿವಾಗಮ ವಾಕ್ಯವುಂಟಾಗಿ ಪಂಚಾಕ್ಷರ ಕಲ್ಪವೃಕ್ಷಕ್ಕೆ ಬೀಜಭೂತವಾಗಿರ್ದ್ದ ಓಂಕಾರಮಂತ್ರವನು ಸೂತ್ರತ್ರಯದಿಂದ ಹೇಳುತ್ತಿರ್ದ್ದಪಂ.

**ಗ್ರಂಥ॥** **ಮಂತ್ರನ್ಯಾಸಾದಿಭೂತೇನ ಪ್ರಣವೇನ ಮಹಾಮನೋಃ ।**
**ಪ್ರಬೋಧ್ಯತೇ ಮಹಾದೇವಃ ಕೇವಲಶ್ಚಿತ್ಸುಖಾತ್ಮಕಃ ॥**

**ಟೀಕು॥** ಮಹಾಮನೋಃ=ಮಹಾಮಂತ್ರವಾಗಿರ್ದ್ದ, ಅಸ್ಯಮಂತ್ರಸ್ಯ=ಈ ಪಂಚಾಕ್ಷರಮಂತ್ರಕ್ಕೆ ಆದಿಭೂತೇನ=ಮೊದಲಾಗಿರ್ದ್ದ, ಪ್ರಣವೇನ=ಓಂಕಾರದಿಂದೆ, ಚಿತ್ಸುಖಾತ್ಮಕಃ=ಚಿದಾನಂದ ಸ್ವರೂಪನಾಗಿರ್ದ್ದ, ಕೇವಲಂ=ಬರಿಯ, ಮಹಾದೇವಃ=ಪರಮಶಿವನೆ, ಪ್ರಬೋಧ್ಯತೇ="ಯೋ ವೈ ರುದ್ರಸ್ಸ ಭಗವಾನ್" ಇತ್ಯುಪಕ್ರಮ್ಯ "ಯ ಓಂಕಾರಸ್ಸ ಪ್ರಣವೋ, ಯಃ ಪ್ರಣವಸ್ಸರ್ವವ್ಯಾಪೀ ಯಸ್ಸರ್ವವ್ಯಾಪೀ ಸೋಽನಂತೋ ಯೋಽನಂತಸ್ತತ್ತಾರಂ ಯತ್ತಾರಂ, ತತ್ಸೂಕ್ಷ್ಮಂ ಯತ್ಸೂಕ್ಷ್ಮಂ ತಚ್ಛುಕ್ಲಂ ಯಚ್ಛುಕ್ಲಂ, ತದ್ವೈದ್ಯುತಂ ಯತ್‌ವೈದ್ಯುತ ತತ್ಪರಂ ಬ್ರಹ್ಮಸ ಏಕಃ ಸ ಏಕೋ ರುದ್ರಃ ಸ ಈಶಾನಸ್ಸಭಗವಾನ್ ಸ ಮಹೇಶ್ವರಃ ಸ ಮಹಾದೇವಃ ಇತಿ"ಯೆಂಬ ಅಥರ್ವಶಿರೋಮಂತ್ರದಿಂದೆ, ಅರುಹಿಸಲು ಪಡುತ್ತಿರ್ದ್ದಪನು. ॥೧೮॥

**ಗ್ರಂಥ॥** **ಪ್ರಣವೇನೈಕವರ್ಣೇನ ಪರಬ್ರಹ್ಮ ಪ್ರಕಾಶ್ಯತೇ ।**
**ಅದ್ವಿತೀಯಂ ಪರಾನಂದಂ ಶಿವಾಖ್ಯಂ ನಿಷ್ಪ್ರಪಂಚಕಮ್ ॥**

**ಟೀಕು॥** ಏಕವರ್ಣೇನ=ಒಂದು ಅಕ್ಷರವಾಗಿದ್ದ ಓಂಕಾರದಿಂದೆ, ನಿಷ್ಪ್ರಪಂಚಕಂ=ತೊಲಗಲುಪಟ್ಟ ಜಗತ್ಪ್ರಪಂಚುಳ್ಳ, ಶಿವಾಖ್ಯಂ="ಶಿವಂ ಪರಾತ್ಪರಂ ಸೂಕ್ಷ್ಮಂ ನಿತ್ಯಂ ಸರ್ವಗಮವ್ಯಯಮ್"ಯೆಂದು ಶಿವಾಗಮ ಪ್ರಸಿದ್ಧವಾದ ಶಿವನೆಂಬ ಹೆಸರುಳ್ಳ, ಅದ್ವಿತೀಯಂ ಪರಬ್ರಹ್ಮ="ಪರಂ ಬ್ರಹ್ಮ ಏಕಮೇವಾದ್ವಿತೀಯಮ್" ಯೆಂದು ಶ್ರುತಿಶಿರಸ್ಸಿದ್ಧವಾದ, ಪರಬ್ರಹ್ಮವಾಚ್ಯವಾದ, ಪರಾನಂದಂ= ಪರಮ ತೃಪ್ತಿರೂಪವಾದ ಮಹಾಲಿಂಗವು, ಪ್ರಕಾಶ್ಯತೇ=ಪ್ರಕಾಶಿಸಲುಪಡುತ್ತಿರ್ದ್ದಪುದು.

**ತಾತ್ಪರ್ಯ॥** "ನಮಃ ಶಿವಾಯ"ಯೆಂಬೀ ಪಂಚಾಕ್ಷರಂಗಳೇ ಆಚಾರಲಿಂಗ ಗುರುಲಿಂಗ ಶಿವಲಿಂಗ ಚರಲಿಂಗ ಪ್ರಸಾದಲಿಂಗಂಗಳಿಗೆ ಬೀಜಾಕ್ಷರ. ಓಂಕಾರವೆ ಮಹಾಲಿಂಗಕ್ಕೆಯು ಬೀಜಾಕ್ಷರ. ಇಂತು ಬೀಜವೃಕ್ಷರೂಪವಾದ ಪ್ರಣವಪಂಚಾಕ್ಷರವೆ ಷಡುಸ್ಥಲಕ್ಕೆ ಬೀಜವೆಂಬುದರ್ಥ. ॥೧೯॥

**ಸೂತ್ರ॥** ಬಳಿಕ ವೇದಾಗವು ಪ್ರಸಿದ್ಧವಾಗಿ ಲಿಂಗಾಂಗಷಡುಸ್ಥಲಕ್ಕೆ ಕಾರಣವಾದ ಓಂಕಾರೋತ್ಪತ್ತಿಯನು ಅಜಪಗಾಯತ್ರೀಮಂತ್ರಯೋಗ ಪೂರ್ವಕವಾಗಿ ಹೇಳುತ್ತಿರ್ದ್ದಪಂ.

ಗ್ರಂಥ॥ ಪರಮಾತ್ಮಾ ಮನುರ್ಜ್ಞೇಯಸ್ಸೋಽಹಂ ರೂಪಸ್ಸನಾತನಃ ।
ಜಾಯತೇ ಹಂಸಯೋರ್ಲೋಪಾದೋಮಿತ್ಯೇಕಾಕ್ಷರೋ ಮನುಃ ॥

**ಟೀಕು॥** ಪರಮಾತ್ಮಾ ಮನುಃ=ಪರಮಾತ್ಮ ಮಂತ್ರವು, ಸೋಽಹಂ ರೂಪಃ="ಸೋಽಹಂ"ಯೆಂಬ ಸ್ವರೂಪವುಳ್ಳುದಾಗಿ, ಜ್ಞೇಯಃ=ಗುರೂಪದೇಶಸ್ವಾನುಭವಂಗಳಿಂದೆ ಅರಿಯಲು ಯೋಗ್ಯವು. ಹಂಸಯೋರ್ಲೋಪಾತ್='ಸೋಽಹಂ'ಯೆಂಬ ಹ ಕಾರ ಸಕಾರಂಗಳಿಗೆ ಕೇವಲ ಕುಂಭಕದಿಂದೆ ಲೋಪವಾಗಲಾಗಿ, ಸನಾತನಃ='ಸದೃಶಂ ತ್ರಿಷು ಲಿಂಗೇಷು ಸರ್ವಾಸು ಚ ವಿಭಕ್ತಿಷು। ವಚನೇಷು ಚ ಸರ್ವೇಷು ಯನ್ನ ವ್ಯೇತಿ ತದವ್ಯಯಮ್'।ಯೆಂಬ ವ್ಯಾಕರಣವಾಕ್ಯವುಂಟಾಗಿ ಅವ್ಯಯವಾಗಿರ್ದ್ದ 'ಓಮಿತಿ ಓಂ'ಯೆಂಬ, ಏಕಾಕ್ಷರೋ ಮನುಃ=ಏಕಾಕ್ಷರಮಂತ್ರವು, ಜಾಯತೇ=ಹುಟ್ಟಿತ್ತಿರ್ದ್ದಪುದು.

**ತಾತ್ಪರ್ಯ॥** ಮನುಷ್ಯರ ಒಂದುವರುಷ ದೇವತೆಗಳಿಗೆ ಒಂದು ದಿವಸವಾಗಿ ೨೧೬೦೦ ಗಳಿಗೆ ಆ ಲೆಕ್ಕದಲ್ಲಿ ಮನುಷ್ಯರಿಗೆ ದಿನ ೧ ಕ್ಕೆ ೨೧೬೦೦ ಆತ್ಮಪ್ರಸಾದವಾದ ಹಂಸಮಂತ್ರವು ನಿಶ್ವಾಸೋಚ್ಛ್ವಾಸರೂಪವಾಗಿ ಶಿವಾಜ್ಞೆಯಿಂದೆ ಪ್ರಾಕೃತ ಪ್ರಾಣಾಯಾಮ ರೂಪವಾಗಿ ಚರಿಸುತ್ತಿಹುದು. ಆ ಹಂಸಮಂತ್ರವನು ವೈಕೃತಪ್ರಾಣಾಯಾಮದಿಂದೆ 'ಯೋಽಸೌ ವಾಸೌ ಪುರುಷಃ ಸೋಽಹಂ'। ಯೆಂಬ ಶ್ರುತಿಪುರಸ್ಸರವಾಗಿ ಗುರೂಪದೇಶಸ್ವಾನುಭಾವಂಗಳಿಂದೆ 'ಸೋಽಹಮ್'ಯೆಂದು ಜಪಿಸಿ ಮೇಲೆ ಕೇವಲ ಕುಂಭಕದಿಂದೆ ಹಕಾರ ಸಕಾರಂಗಳಿಗೆ ಲೋಪವ ಮಾಡಲಾಗಿ ಲಿಂಗಾಂಗರೂಪವಾದ ಶಿವಜೀವೈಕ್ಯವಹುದು. ಇದೇ ನಿಗಮಾಗಮಶಿರಸ್ಸಿದ್ಧವಾದ ಪರಮೋಕ್ಷವು. ॥೨೦॥

**ಸೂತ್ರ॥** ಬಳಿಕ ಪ್ರಣವದಿಂದೆ ನಿಷ್ಕಲಜ್ಞಾನ, ಪಂಚಾಕ್ಷರದಿಂದೆ ಸಕಲಜ್ಞಾನ, ಪ್ರಣವ ಪಂಚಾಕ್ಷರದಿಂದೆ ಸಕಲನಿಷ್ಕಲಜ್ಞಾನವಹುದೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಪ್ರಣವೇನೈವ ಮಂತ್ರೇಣ ಬೋಧ್ಯತೇ ನಿಷ್ಕಲಶ್ಶಿವಃ ।
ಪಂಚಾಕ್ಷರೇಣ ಮಂತ್ರೇಣ ಪಂಚಬ್ರಹ್ಮತನುಸ್ತಥಾ ॥

**ಟೀಕು॥** ಪ್ರಣವೇನೈವ ಮಂತ್ರೇಣ=ಓಂಕಾರ ಮಂತ್ರದಿಂದವೆ, ನಿಷ್ಕಲಃ ಶಿವಃ=ಅಷ್ಟತ್ರಿಂಶತ್ ಕಲಾತೀತನಾದ ಪರಶಿವನು, ಬೋಧ್ಯತೇ=ಅರುಹಿಸಲುಪಡುತ್ತಿರ್ದ್ದಪನು. ಪಂಚಾಕ್ಷರೇಣ ಮಂತ್ರೇಣ=ಪಂಚಾಕ್ಷರಮಂತ್ರದಿಂದೆ, ಪಂಚಬ್ರಹ್ಮತನುಃ ಶಿವಃ=ಅಷ್ಟತ್ರಿಂಶತ್ಕಲೆಗಳೊಡನೆ ಕೂಡಿದ ಪಂಚಬ್ರಹ್ಮಮೂರ್ತಿಯಾಗಿ ಸಕಲನಾದ ಶಿವನು, ತಥಾ=ಹಾಂಗೆಯೆ, ಬೋಧ್ಯತೇ=ಅರುಹಿ ಸಲುಪಡುತ್ತಿರ್ದ್ದಪನು. ॥೨೧॥

ಗ್ರಂಥ॥ ನಿಷ್ಕಲಸ್ಸಂವಿದಾಕಾರಸ್ಸಕಲೋ ವಿಶ್ವಮೂರ್ತಿಕಃ ।
ಉಭಯಾತ್ಮಾ ಶಿವೋ ಮಂತ್ರೇ ಷಡಕ್ಷರಮಯೇ ಸ್ಥಿತಃ ॥

**ಟೀಕು||** ನಿಷ್ಕಲಃ=ನಿಷ್ಕಲನಾದ ಶಿವನು, ಸಂವಿದಾಕಾರಃ='ಸತ್ಯಂ ಜ್ಞಾನಮನಂತಂ ಬ್ರಹ್ಮ' ಯೆಂಬ ಶ್ರುತಿಯಿಂದೆ ಸಚ್ಚಿದಾನಂದ ನಿತ್ಯಪರಿಪೂರ್ಣ ಸ್ವರೂಪ ಉಳ್ಳಾತನು; ಸಕಲಃ=ಸಕಲನಾದ ಶಿವನು, ವಿಶ್ವಮೂರ್ತಿಕಃ='ಸರ್ವಂ ಖಲ್ವಿದಂ ಬ್ರಹ್ಮ'ಯೆಂಬ ಶ್ರುತಿಯಿಂದೆ ವಿಶ್ವರೂಪ ಉಳ್ಳಾತನು, ಉಭಯಾತ್ಮಾ ಶಿವಃ=ಸಕಲ ನಿಷ್ಕಲ ಸ್ವರೂಪ ಉಳ್ಳ ಶಿವನು, ಷಡಕ್ಷರಮಯೇ ಮಂತ್ರೇ=ಷಡಕ್ಷರ ಸ್ವರೂಪವಾದ ಪ್ರಣವ ಪಂಚಾಕ್ಷರ ಮಂತ್ರಂಗಳಿಂದೆ, ಸ್ಥಿತಃ=ವರ್ತಿಸುತ್ತಿರ್ದ್ದಪನು. ||೨೨||

**ಸೂತ್ರ||** ಬಳಿಕ ಈ ಮಂತ್ರ ಪರ್ಯಾಯನಾಮವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಮೂಲಂ ವಿದ್ಯಾ ಶಿವಶ್ಶೈವಂ ಸೂತ್ರಂ ಪಂಚಾಕ್ಷರಸ್ತಥಾ ।**
**ಏತಾನಿ ನಾಮಧೇಯಾನಿ ಕೀರ್ತಿತಾನಿ ಮಹಾಮನೋಃ ॥**

**ಟೀಕು||** ಮೂಲಂ=ಮೂಲವೆಂದು, ವಿದ್ಯಾ=ವಿದ್ಯೆಯೆಂದು, ಶಿವಃ=ಶಿವನೆಂದು, ಶೈವಂ ಸೂತ್ರಂ=ಶಿವಸೂತ್ರವೆಂದು, ತಥಾ=ಹಾಂಗೆಯೇ, ಪಂಚಾಕ್ಷರಃ=ಪಂಚಾಕ್ಷರವೆಂದು, ಏತಾನಿ ನಾಮಧೇಯಾನಿ=ಈ ಪರ್ಯಾಯನಾಮಂಗಳು, ಮಹಾಮನೋಃ=ಪಂಚ ಪಂಚಾಕ್ಷರಾತ್ಮಕವಾದ ಈ ಮಹಾಮಂತ್ರಕ್ಕೆ, ಕೀರ್ತಿತಾನಿ=ಹೇಳಲುಪಟ್ಟವು. ||೨೩||

**ಸೂತ್ರ||** ಬಳಿಕ ಈ ಮಂತ್ರವನು ಧ್ಯಾನಪೂರ್ವಕವಾಗಿ ಜಪಿಸಬೇಕೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಪಂಚಾಕ್ಷರೀಮಿಮಾಂ ವಿದ್ಯಾಂ ಪ್ರಣವೇನ ಷಡಕ್ಷರೀಮ್ ।**
**ಜಪೇತ್ಸಮಾಹಿತೋ ಭೂತ್ವಾ ಶಿವಪೂಜಾಪರಾಯಣಃ ॥**

**ಟೀಕು||** ಇಮಾಂ ಪಂಚಾಕ್ಷರೀಂ=ಈ ಪಂಚಾಕ್ಷರಿಯನು, ಪ್ರಣವೇನ ಸಹ=ಪ್ರಣವದೊಡನೆ ಕೂಡಿ, ಷಡಕ್ಷರೀಂ ವಿದ್ಯಾಂ=ಷಡಕ್ಷರೀ ಮಂತ್ರವನಾಗಿ, ಶಿವಪೂಜಾಪರಾಯಣಃ=ಶಿವಲಿಂಗ ಪೂಜೆಯಲ್ಲಿ ತತ್ಪರನಾದಾತನು, ಸಮಾಹಿತೋ ಭೂತ್ವಾ=ಏಕಾಗ್ರಚಿತ್ತವುಳ್ಳಾತನಾಗಿ, ಜಪೇತ್ = ಜಪಿಸುವುದು. ||೨೪||

**ಸೂತ್ರ||** ಬಳಿಕ ಜಪವಿಧಿಯನು ಹೇಳುತ್ತಿರ್ದ್ದಪಂ.

**ಗ್ರಂಥ||** **ಪ್ರಾಣಾಯಾಮತ್ರಯಂ ಕೃತ್ವಾ ಪ್ರಾಙ್ಮುಖೋದಙ್ಮುಖೋಽಪಿ ವಾ ।**
**ಚಿಂತಯನ್ ಹೃದಯಾಂಭೋಜೇ ದೇವದೇವಂ ತ್ರಿಯಂಬಕಮ್ ॥**

**ಸರ್ವಾಲಂಕಾರಸಂಯುಕ್ತಂ ಸಾಂಬಂ ಚಂದ್ರಾರ್ಧಶೇಖರಮ್ ।**
**ಜಪೇದೇತಾಂ ಮಹಾವಿದ್ಯಾಂ ಶಿವರೂಪಾಮನನ್ಯಧೀಃ ॥**

**ಟೀಕು॥** ಪ್ರಾಙ್ಮುಖೋದಙ್ಮುಖೋಽಪಿ ವಾ=ಮೂಡಲು ಮುಖವುಳ್ಳಾತನಾಗಿಯಾದರು ಬಡಗಮುಖವುಳ್ಳಾತನಾಗಿಯಾದರೂ ಕುಳ್ಳಿರ್ದ್ದು, ಪ್ರಾಣಾಯಾಮತ್ರಯಂ=ಗುರೂಕ್ತವಿಧಿಯಿಂದ ಪ್ರಾಣಾಯಾಮತ್ರಯವನು, ಕೃತ್ವಾ=ಮಾಡಿ, ಹೃದಯಾಂಭೋಜೇ=ಹೃದಯಕಮಲದಲ್ಲಿ ತ್ರಿಯಂಬಕಂ=ಮಂಡಲತ್ರಯ ಗುಣತ್ರಯ ದೇವತಾತ್ರಯ ಮೊದಲಾದ ತ್ರಿವಿಧವಸ್ತುಗಳಿಗೆ ತಂದೆಯಾಗಿರ್ದ್ದ, ದೇವದೇವಂ=ದೇವಾಧಿದೇವನಾಗಿರ್ದ್ದ, ಸರ್ವಾಲಂಕಾರ ಸಂಯುಕ್ತಂ=ಸಮಸ್ತಾಭರಣಂಗಳೊಡನೆ ಕೂಡಿರ್ದ್ದ, ಚಂದ್ರಾರ್ಧಶೇಖರಂ=ಚಂದ್ರಖಂಡವೆ ಶಿರಸ್ಸಿನಲ್ಲುಳ್ಳ, ಸಾಂಬಂ=ಪಾರ್ವತಿಯೊಡನೆ ಕೂಡಿ ವರ್ತಿಸುತ್ತಿರ್ದ್ದ ಪರಮೇಶ್ವರ[ನ]ನು, ಚಿಂತಯನ್=ಧ್ಯಾನಿಸುತ್ತಾ, ಅನನ್ಯಧೀಃಸನ್=ಅನ್ಯಚಿತ್ತವಿಲ್ಲದೆಯಿದ್ದಾತನಾಗುತವು, ಶಿವರೂಪಾಂ=ಶಿವರೂಪವುಳ್ಳ. ಏತಾಂ ಮಹಾವಿದ್ಯಾಂ=ಈ ಮಹಾಮಂತ್ರವನು, ಜಪೇತ್=ಜಪಿಸುವುದು.

**ತಾತ್ಪರ್ಯ॥** ಶುದ್ಧಸ್ಥಲದಲ್ಲಿ ಮೃಗಾಜಿನ ಕಂಬಳದಪಟ ಮೊದಲಾದ ಗದ್ದುಗೆಯಲ್ಲಿ ಸಿದ್ಧಪದ್ಮಾಸನದಲ್ಲಿ ಪೂರ್ವೋತ್ತರಾಭಿಮುಖರಾಗಿ ಕುಳಿತು ಶಿವಲಿಂಗಪೂಜಕನಾಗಿ ಭಸ್ಮರುದ್ರಾಕ್ಷೆಯನು ಧರಿಸಿದಾತನು. "ಅಸಂಪೂಜ್ಯ ಶಿವಂ ಸ್ತೋತ್ರಜಪಾತ್ಫಲಮುದೀರಿತಮ್।
ಸಂಪೂಜ್ಯ ಚ ಶಿವಂ ಪಶ್ಚಾತ್ಫಲಂ ವಕ್ತುಂ ನ ಶಕ್ಯತೇ॥
ಸಹಸ್ರಂ ವಾ ತದರ್ಧಂ ವಾ ತದರ್ಧಂ ವಾ ಶತಾಷ್ಟಕಮ್।
ಅಷ್ಟೋತ್ತರ ಸಹಸ್ರಂ ವಾ ಜಪಂ ಕುರ್ಯಾದತಂದ್ರಧೀಃ।
ಪೂಜಾಕೋಟಿಸಮಂ ಸ್ತೋತ್ರಂ ಸ್ತೋತ್ರಕೋಟಿಸಮೋ ಜಪಃ।
ಜಪಕೋಟಿಸಮಂ ಧ್ಯಾನಂ ಧ್ಯಾನಕೋಟಿಸಮೋ ಲಯಃ॥"ಯೆಂಬ ಶಿವಾಗಮ ವಾಕ್ಯವುಂಟಾಗಿ, ಸಗರ್ಭ ಜಪವನು ಗುರೂಪದಿಷ್ಟಮಾರ್ಗದಿಂದೆ ಮಾಡುವುದು. ॥೨೬॥

**ಸೂತ್ರ॥** ಬಳಿಕ ಜಪಭೇದವನು ಸಲಕ್ಷಣವಾಗಿ ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಜಪಸ್ತು ತ್ರಿವಿಧಃ ಪ್ರೋಕ್ತೋ ವಾಚಿಕೋಪಾಂಶುಮಾನಸಃ ।**
**ಶ್ರೂಯತೇ ಯಸ್ತು ಪಾರ್ಶ್ವಸ್ಥೈರ್ಯಥಾ ವರ್ಣಸಮನ್ವಯಃ ।**
**ವಾಚಿಕಸ್ಸ ತು ವಿಜ್ಞೇಯಸ್ಸರ್ವಪಾಪಪ್ರಭಂಜನಃ ॥**

**ಈಶತ್ಸ್ಪೃಷ್ಟ್ವಾಽಧರಪುಟಂ ಯೋ ಮಂದಮಭಿಧೀಯತೇ ।**
**ಪಾರ್ಶ್ವಸ್ಥೈರಶ್ರುತಸ್ಸೋಽಯಮುಪಾಂಶುಃ ಪರಿಕೀರ್ತಿತಃ ।**

**ಅಸ್ಪೃಷ್ಟ್ವಾಽಧರಮಸ್ಪಂದಿ ಜಿಹ್ವಾಗ್ರಂ ಯೋಽಂತರಾತ್ಮನಾ ।**
**ಭಾವ್ಯತೇ ವರ್ಣರೂಪೇಣ ಸ ಮಾನಸ ಇತಿ ಸ್ಮೃತಃ ।**

**ಟೀಕು||** ಜಪಸ್ತು=ಮಂತ್ರೋಚ್ಚಾರವಾಯಿತ್ತಾದೊಡೆ. ತ್ರಿವಿಧಃ=ಮೂರು ಪ್ರಕಾರವುಳ್ಳ ಅದು. ಅದಾವುದೆಂದೊಡೆ, ವಾಚಿಕೋಪಾಂಶುಮಾನಸಃ=ವಾಚಿಕವೆಂದು, ಉಪಾಂಶುವೆಂದು, ಮಾನಸವೆಂದು, ಪ್ರೋಕ್ತಾಃ=ಹೇಳಲುಪಟ್ಟವು. ಯಸ್ತು=ಆವುದಾನೊಂದು ಮಂತ್ರೋಚ್ಚಾರವಾಯಿತ್ತಾದೊಡೆ, ಯಥಾವರ್ಣ ಸಮುಸ್ವಯಃ=ವರ್ಣಸಂತಾನವನು ಮೀರದೆ, ಪಾರ್ಶ್ವಸ್ಥೈಃ=ಎಡಬಲದಲ್ಲಿರುತ್ತಿರ್ದ್ದವರಿಂದೆ, ಶ್ರೂಯತೇ=ಕೇಳಲುಪಡುತ್ತಿರ್ದ್ದಪುದು, ಸ ತು=ಆ ಮಂತ್ರೋಚ್ಚಾರವಾಯಿತ್ತಾದೊಡೆ, ಸರ್ವಪಾಪ ಪ್ರಭಂಜನಃ=ಮನೋವಚನಕಾಯಜನ್ಯವಾದ ಸರ್ವಪಾಪವನು ತೊಲಗಿಸುತ್ತಿರ್ದ್ದ, ವಾಚಿಕಃ=ವಾಚಿಕ ಜಪವೆಂದು, ವಿಜ್ಞೇಯಃ=ಅರಿಯಲು ಯೋಗ್ಯವು. ||೨೭||

ಯಃ=ಆವುದಾನೊಂದು ಮಂತ್ರೋಚ್ಚಾರವು, ಈಷತ್=ಒಪ್ಪಚ್ಚಿ, ಅಧರಪುಟಂ=ಅಧರಪುಟವನು, ಸ್ಪೃಷ್ಟ್ವಾ=ಮುಟ್ಟಿ, ಪಾರ್ಶ್ವಸ್ಥೈಃ=ಎಡಬಲದಲ್ಲಿರುತ್ತಿರ್ದ್ದವರಿಂದೆ, ಅಶ್ರುತಃ ಸನ್=ಕೇಳಲುಪಡದೆಯಿದ್ದದಾಗುತವು, ಮಂದಂ=ಮೆಲ್ಲನೆ, ಅಭಿಧೀಯತೇ=ಉಚ್ಚರಿಸಲುಪಡುತ್ತಿರ್ದ್ದಪುದು. ಸೋಽಯಂ=ಆ ಈ ಮಂತ್ರೋಚ್ಚಾರವೆ, ಉಪಾಂಶುಃ=ಉಪಾಂಶು ಜಪವೆಂದು, ಪರಿಕೀರ್ತಿತಃ=ಹೇಳಲುಪಟ್ಟಿತ್ತು. ||೨೮||

ಯಃ=ಆವುದಾನೊಂದು ಮಂತ್ರೋಚ್ಚಾರವು, ಅಧರಂ=ಅಧರವನು, ಅಸ್ಪಷ್ಟ್ವಾ=ಮುಟ್ಟದೆ, ಅಸ್ಪಂದಿ ಜಿಹ್ವಾಗ್ರಂ=ಚಲಿಸದೆಯಿದ್ದ ಜಿಹ್ವೆಯ ತುದಿಯಲ್ಲಿ ಯಪಣಯಹಗಹುದು ಅಪಗೆ, ವರ್ಣರೂಪೇಣ=ಮಂತ್ರಾಕ್ಷರಸ್ವರೂಪವುಳ್ಳ, ಅಂತರಾತ್ಮನಾ=ಅಂತರ್ಮನಸ್ಸಿನಿಂದೆ, ಭಾವ್ಯತೇ=ಭಾವಿಸಲುಪಡುತ್ತಿರ್ದ್ದಪುದು, ಸಃ=ಆ ಮಂತ್ರೋಚ್ಚಾರವೆ, ಮಾನಸ ಇತಿ=ಮಾನಸ ಜಪವೆಂದು, ಸ್ಮೃತಃ=ನೆನೆಯಲುಪಟ್ಟಿತ್ತು. ||೨೯||

**ಸೂತ್ರ||** ಬಳಿಕ ಈ ಜಪಯಜ್ಞದ ಮಹತ್ವವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಯಾವಂತಃ ಕರ್ಮಯಜ್ಞಾದ್ಯಾ ವ್ರತದಾನತಪಾಂಸಿ ಚ ।**
**ಸರ್ವೇ ತೇ ಜಪಯಜ್ಞಸ್ಯ ಕಲಾಂ ನಾರ್ಹಂತಿ ಷೋಡಶೀಮ್ ॥**

**ಮಾಹಾತ್ಮ್ಯಂ ವಾಚಿಕಸ್ಯೈತಜ್ಜಪಯಜ್ಞಸ್ಯ ಕೀರ್ತಿತಮ್ ।**
**ತಸ್ಮಾಚ್ಛತಗುಣೋಪಾಂಶುಃ ಸಹಸ್ರೋ ಮಾನಸಸ್ಸ್ಮೃತಃ ॥**

**ಟೀಕು||** ಯಾವಂತಃ=ಎಷ್ಟು, ಕರ್ಮಯಜ್ಞಾದ್ಯಾಃ=ಕರ್ಮಯಾಗಾದಿಗಳುಂಟು, ಯಾವಂತಃ=ಎಷ್ಟು ವ್ರತದಾನ ತಪಾಂಸಿ ಚ=ಆ ವ್ರತದಾನ ತಪಸ್ಸುಗಳುಂಟು, ತೇ ಸರ್ವೇ=ಆ ಸಮಸ್ತವು, ಜಪಯಜ್ಞಸ್ಯ=ಜಪಯಜ್ಞದ, ಷೋಡಶೀಂ ಕಲಾಂ=ಹದಿನಾರರೊಳಗೆ ಒಂದು ಭಾಗೆಯನು ಕೂರ್ತ್ತು, ನಾರ್ಹಂತಿ=ಯೋಗ್ಯವಾಗುತ್ತಿರವು. ||೩೦||

ಏತತ್ ಮಾಹಾತ್ಮ್ಯಂ=ಈ ಮಹತ್ವವು, ವಾಚಿಕಸ್ಯ ಜಪಯಜ್ಞಸ್ಯ=ವಾಚಿಕಜಪಯಜ್ಞಕ್ಕೆ, ಕೀರ್ತಿತಂ=ಹೇಳಲುಪಟ್ಟಿತ್ತು. ತಸ್ಮಾತ್=ಆ ವಾಚಿಕಜಪದದೆಸೆಯಿಂದೆ, ಉಪಾಂಶುಃ=ಉಪಾಂಶು ಜಪವು, ಶತಗುಣಃ=ನೂರುಮಡಿಫಲವುಳ್ಳ ಅದು, ತಸ್ಮಾತ್=ಆ ಉಪಾಂಶುಜಪದದೆಸೆಯಿಂದೆ, ಮಾನಸಃ=ಮಾನಸಜಪವು, ಸಹಸ್ರಃ=ಸಹಸ್ರಗುಣವುಳ್ಳ ಅದು, ಸ್ಮೃತಃ-ನೆನೆಯಲುಪಟ್ಟಿತು. ॥೩೧॥

**ಸೂತ್ರ॥** ಬಳಿಕ ಮಾನಸ ಜಪವು ಸಂಸಾರ ಮೋಚಕವೆಂದು ಹೇಳುತ್ತಿರ್ದಪಂ.

ಗ್ರಂಥ॥ **ವಾಚಿಕಾತ್ತದುಪಾಂಶೋಶ್ಚ ಜಪಾದಸ್ಯ ಮಹಾಮನೋಃ ।**
**ಮಾನಸೋ ಹಿ ಜಪಃ ಶ್ರೇಷ್ಠೋ ಘೋರಸಂಸಾರನಾಶಕಃ ॥**

**ಟೀಕು॥** ಅಸ್ಯ ಮಹಾಮನೋಃ=ಈ ಮಹಾಮಂತ್ರದ, ವಾಚಿಕಾತ್ ಜಪಾತ್=ವಾಚಿಕ ಜಪದದೆಸೆಯಿಂದೆ, ತದುಪಾಂಶೋಃ ಜಪಾಚ್ಚ=ಆ ಉಪಾಂಶುಜಪದದೆಸೆಯಿಂದವು, ಮಾನಸೋ ಜಪೋ ಹಿ=ಮಾನಸ ಜಪವಾಯಿತ್ತಾದೊಡೆ, ಘೋರಸಂಸಾರನಾಶಕಃ=ಭಯಂಕರವಾದ ಸಂಸಾರವನು ನಾಶವ ಮಾಡುತ್ತಿರ್ದುದಾಗಿ, ಶ್ರೇಷ್ಠಃ=ಶ್ರೇಷ್ಠವು. ॥೩೨॥

**ಸೂತ್ರ॥** ಬಳಿಕ ಪಾಶವಿಮೋಚನಾರ್ಥವಾಗಿ ವಾಚಿಕಾದಿ ಜಪವನು ವಿಧಿಯಾಗಿ ಮಾಡಬೇಕೆಂದು ಹೇಳುತ್ತಿರ್ದಪಂ.

ಗ್ರಂಥ॥ **ಏತೇಷ್ವೇಕೇನ ವಿಧಿನಾ ಯಥಾಭಾವಂ ಯಥಾಕ್ರಮಮ್ ।**
**ಜಪೇತ್ಪಂಚಾಕ್ಷರೀಮೇತಾಂ ವಿದ್ಯಾಂ ಪಾಶವಿಮುಕ್ತಯೇ ॥**

**ಟೀಕು॥** ಏತೇಷು ವಿಷಯೇ=ಈ ವಾಚಿಕಾದಿ ಜಪವಿಷಯವಾಗಿ, ಏಕೇನ ವಿಧಿನಾ=ಈ ಪ್ರಕಾರವಾದ ವಿಧಿಯಿಂದೆ, ಯಥಾಭಾವಂ=ಭಾವವನು ಮೀರದೆ, ಯಥಾಕ್ರಮಂ=ಕ್ರಮವನು ಮೀರದೆ, ಏತಾಂ ಪಂಚಾಕ್ಷರೀಂ ವಿದ್ಯಾಂ='ನಮಃ ಶಿವಾಯ'ಯೆಂಬ ಈ ಪಂಚಾಕ್ಷರ ಮಂತ್ರವನು, ಪಾಶವಿಮುಕ್ತಯೇ= ಮಲಮಾಯಾದಿ ಪಂಚಪಾಶಂಗಳ ಬಿಡುಗಡೆಗೋಸುಗವಾಗಿ, ಜಪೇತ್=ಉಚ್ಚರಿಸುವುದು. ॥೩೩॥

**ಸೂತ್ರ॥** ಬಳಿಕ ಆ ಮಂತ್ರದಿಂದವೆ ಶಿವಲಿಂಗಪೂಜೆಯ ಮಾಡುವದೆಂದು ಹೇಳುತ್ತಿರ್ದಪಂ.

ಗ್ರಂಥ॥ **ಅನೇನ ಮೂಲಮಂತ್ರೇಣ ಶಿವಲಿಂಗಂ ಪ್ರಪೂಜಯೇತ್ ।**
**ನಿತ್ಯಂ ನಿಯಮಸಂಪನ್ನಃ ಪ್ರಯತಾತ್ಮಾ ಶಿವಾತ್ಮಕಃ ॥**

**ಟೀಕು॥** ನಿಯಮಸಂಪನ್ನಃ=ಯಮನಿಯಮಂಗಳಲ್ಲಿ ಸಂಪನ್ನನಾಗಿ, ಪ್ರಯತಾತ್ಮಾ=ಪವಿತ್ರವಾದಂತಃ

ಕರಣವುಳ್ಳಾತನಾಗಿ, ಶಿವಾತ್ಮಕಃ=ಶಿವಸ್ವರೂಪನಾಗಿದ್ದಾತನು, ಅನೇನ ಮೂಲಮಂತ್ರೇಣ=ಈ ಪ್ರಣವ ಪಂಚಾಕ್ಷರಮಂತ್ರದಿಂದವೆ, ಶಿವಲಿಂಗಂ=ಶಿವಲಿಂಗವನು, ನಿತ್ಯಂ=ಆವಾಗವು, ಪ್ರಪೂಜಯೇತ್=ಪೂಜಿಸುವುದು. ||೩೪||

**ಸೂತ್ರ||** ಬಳಿಕ ಸಮಂತ್ರಕವಾಗಿ ಶಿವಲಿಂಗಪೂಜಾಫಲವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

ಗ್ರಂಥ|| **ಭಕ್ತ್ಯಾ ಪಂಚಾಕ್ಷರೇಣೈವ ಯಶ್ಶಿವಂ ಸಕೃದರ್ಚಯೇತ್ ।**
**ಸೋಽಪಿ ಗಚ್ಛೇಚ್ಛಿವಸ್ಥಾನಂ ಮಂತ್ರಸ್ಯಾಸ್ಯೈವ ಗೌರವಾತ್ ॥**

**ಟೀಕು||** ಯಃ=ಆವನಾನೊಬ್ಬಾತನು, ಭಕ್ತ್ಯಾ=ಭಕ್ತಿಯಿಂದೆ, ಶಿವಂ=ಶಿವಲಿಂಗವನು, ಪಂಚಾಕ್ಷರೇಣೈವ=ಪಂಚಾಕ್ಷರಮಂತ್ರದಿಂದವೆ, ಸಕೃತ್=ಒಂದೇ ಬಾರಿ, ಅರ್ಚಯೇತ್=ಪೂಜಿಸುವನೆ, ಸೋಽಪಿ=ಆತನಾಯಿತ್ತಾದೊಡೆ, ಶಿವಸ್ಥಾನಂ=ಶಿವಸ್ಥಾನವನು, ಅಸ್ಯ ಮಂತ್ರಸ್ಯ=ಈ ಪಂಚಾಕ್ಷರ ಮಂತ್ರದ, ಗೌರವಾದೇವ=ಗುರುತ್ವದದೆಸೆಯಿಂದೆ, ಗಚ್ಛೇತ್=ಎಯ್ದುವನು. ||೩೫||

ಗ್ರಂಥ|| **ತಸ್ಮಾತ್ತಪಾಂಸಿ ಯಜ್ಞಾಶ್ಚ ವ್ರತಾನಿ ನಿಯಮಾಸ್ತಥಾ ।**
**ಪಂಚಾಕ್ಷರಾರ್ಚನಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ॥**

**ಟೀಕು||** ತಸ್ಮಾತ್=ಅದು ಕಾರಣವಾಗಿ, ತಪಾಂಸಿ=ತಪಸ್ಸುಗಳು, ಯಜ್ಞಾಶ್ಚ=ಯಜ್ಞಂಗಳು, ವ್ರತಾನಿ=ವ್ರತಂಗಳು, ತಥಾ=ಹಾಂಗೆಯೆ, ನಿಯಮಾಃ=ನಿಯಮಂಗಳು, ಏತೇ ಸರ್ವೇ=ಈ ಸಮಸ್ತವು, ಪಂಚಾಕ್ಷರಾರ್ಚನಸ್ಯ=ಪಂಚಾಕ್ಷರಮಂತ್ರದಿಂದೆ ಮಾಡಲುಪಟ್ಟ ಶಿವಲಿಂಗಪೂಜೆಯ, ಕೋಟ್ಯಂಶೇನಾಪಿ=ಕೋಟ್ಯಂಶದೊಡನಾಯಿತ್ತಾದೊಡೆಯು, ನೋ ಸಮಾಃ=ಸಮಾನವಲ್ಲ. ||೩೬||

**ಸೂತ್ರ||** ಬಳಿಕ ವ್ರತಿಗಳಿಗೆ ಈ ಮಂತ್ರೋಚ್ಚಾರಣೆ ಹೊರತಾಗಿ ವ್ರತಂಗಳಿಂದೆ ಶಿವಲೋಕಪ್ರಾಪ್ತಿಯಿಲ್ಲವೆಂದು ಹೇಳುತ್ತಿರ್ದಪಂ.

ಗ್ರಂಥ|| **ಅಬ್ಭಕ್ಷಾ ವಾಯುಭಕ್ಷಾಶ್ಚ ಯೇ ಚಾನ್ಯೇ ವ್ರತಕರ್ಷಿತಾಃ ।**
**ತೇಷಾಮೇತೈರ್ವ್ರತೈರ್ನಾಸ್ತಿ ಶಿವಲೋಕಸಮಾಗಮಃ ॥**

**ಟೀಕು||** ಯೇ ಚ=ಆರು ಕೆಲಂಬರು, ಅಪ್‌ಭಕ್ಷಾಃ=ಬರಿಯ ಉದಕ ಪಾನವಮಾಡಿಕೊಂಡು, ವಾಯು ಭಕ್ಷಾಶ್ಚ=ವಾಯು ಭಕ್ಷಕರಾಗಿ, ಅನ್ಯವ್ರತಕರ್ಷಿತಾಃ=ಭಿನ್ನವಾದ ಚಾಂದ್ರಾಯಣವ್ರತಂಗಳಿಂದೆ ಬಡವಾಗಿ ಮಾಡಲುಪಟ್ಟ ಅವರುಗಳು, ತೇಷಾಂ=ಆ ವ್ರತಿಗಳಿಗೆ, ಏತೈಃ ವ್ರತೈಃ=ಈ ವ್ರತಂಗಳಿಂದೆ, ಶಿವಲೋಕ ಸಮಾಗಮಃ=ಶಿವಲೋಕ ಪ್ರಾಪ್ತಿಯು, ನಾಸ್ತಿ=ಇಲ್ಲ. ||೩೭||

**ಸೂತ್ರ||** ಬಳಿಕ ವ್ರತಭ್ರಷ್ಟನಾದಡು ಪಂಚಾಕ್ಷರಮಂತ್ರದಿಂದೆ ಶಿವಲಿಂಗಪೂಜಕನಾದಡೆ ಸರ್ವಪಾಪರಹಿತನೆಂದು ಹೇಳುತ್ತಿರ್ದಪಂ.

**ಗ್ರಂಥ||** **ಅಶುದ್ಧೋ ವಾ ವಿಶುದ್ಧೋ ವಾ ಸಕೃತ್ಪಂಚಾಕ್ಷರೇಣ ಯಃ ।**
**ಪೂಜಯೇತ್ಪತಿತೋ ವಾಽಪಿ ಮುಚ್ಯತೇ ನಾತ್ರ ಸಂಶಯಃ ॥**

**ಟೀಕು||** ಯಃ=ಆವನಾನೊಬ್ಬಾತನು, ಅಶುದ್ಧೋವಾ=ಶುದ್ಧನಲ್ಲದೆಯಿದ್ದಾತನಾದಡೆಯು, ವಿಶುದ್ಧೋ ವಾ=ಶುದ್ಧನಾಗಿದ್ದಾತನಾದೊಡೆಯು, ಪತಿತೋ ವಾಽಪಿ=ವ್ರತಭ್ರಷ್ಟನಾಯಿತ್ತಾದಡೆಯು, ಪಂಚಾಕ್ಷರೇಣ=ಪಂಚಾಕ್ಷರಮಂತ್ರದಿಂದೆ, ಸಕೃತ್=ಒಂದೇ ಬಾರಿ, ಪೂಜಯೇತ್=ಪೂಜಿಸುವನೆ, ಸಃ=ಆತನು, ಮುಚ್ಯತೇ=ಸರ್ವಪಾಪಂಗಳಿಂದೆ ಬಿಡಲುಪಡುತ್ತಿರ್ದಪನು. ಅತ್ರ ಸಂಶಯೋ ನ=ಇಲ್ಲಿ ಸಂದೇಹವಿಲ್ಲ. ||೩೮||

**ಸೂತ್ರ||** ಬಳಿಕ ಪಂಚಾಕ್ಷರಮಂತ್ರವನು ಒಂದುವೇಳೆ ಉಚ್ಚರಿಸಿದ ಮಾತ್ರದಿಂದವೆ ಸರ್ವಪಾಪಕ್ಷಯವಹುದೆಂದು ಹೇಳುತ್ತಿರ್ದಪಂ.

**ಗ್ರಂಥ||** **ಸಕೃದುಚ್ಚಾರಮಾತ್ರೇಣ ಪಂಚಾಕ್ಷರಮಹಾಮನೋಃ ।**
**ಸರ್ವೇಷಾಮಪಿ ಜಂತೂನಾಂ ಸರ್ವಪಾಪಕ್ಷಯೋ ಭವೇತ್ ॥**

**ಟೀಕು||** ಪಂಚಾಕ್ಷರಮಹಾಮನೋಃ=ಪಂಚಾಕ್ಷರ ರೂಪವಾದ ಮಹಾಮಂತ್ರದ, ಸಕೃತ್=ಒಂದು ಬಾರಿ, ಉಚ್ಚಾರ ಮಾತ್ರೇಣ=ಉಚ್ಚರಿಸುವದರಿಂದವೆ, ಸರ್ವೇಷಾಂ ಜಂತೂನಾಮಪಿ=ಸಮಸ್ತ ಪ್ರಾಣಿಗಳಾಯಿತ್ತಾದೊಡೆ, ಸರ್ವಪಾಪಕ್ಷಯಃ=ಸಮಸ್ತ ಪಾಪಕ್ಷಯವು, ಭವೇತ್=ಆಗುವುದು. ||೩೯||

**ಸೂತ್ರ||** ಬಳಿಕ ಶಿವಾಗಮಸಿದ್ಧವಾದ ಸಪ್ತಕೋಟಿ ಮಂತ್ರಗಳು ಪುನಃಶ್ಚರಣೆಯ ಜಪದಿಂದೆ ಅಲ್ಪಸಿದ್ಧಿ ಕೊಡುವವು. ಈ ಪಂಚಾಕ್ಷರಮಂತ್ರವು ಒಂದುಬಾರಿ ಉಚ್ಚರಿಸಿದ ಮಾತ್ರದಿಂದವೆ ಸರ್ವಸಿದ್ಧಿಯ ಕೊಡುವುದೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಅನ್ಯೇಽಪಿ ಬಹವೋ ಮಂತ್ರಾ ವಿದ್ಯಂತೇ ಸಕಲಾಗಮೇ ।**
**ಭೂಯೋ ಭೂಯಸ್ಸಮಭ್ಯಾಸಾತ್ಪುರುಷಾರ್ಥಪ್ರದಾಯಿನಃ ॥**

**ಟೀಕು||** ಅನ್ಯೇಽಪಿ=ಪಂಚಾಕ್ಷರ ಮಂತ್ರದಿಂದವೆ ಭಿನ್ನವಾಗಿರ್ದ, ಬಹವೋ ಮಂತ್ರಾಃ=ಅನೇಕ ಮಂತ್ರಂಗಳು, ಸಕಲಾಗಮೇ=ಸಮಸ್ತ ಶಿವಾಗಮಂಗಳಲ್ಲಿ, ವಿದ್ಯಂತೇ=ಉಂಟಾಗುತ್ತಿರ್ದಪವು. ತೇ=ಅವು, ಭೂಯೋ ಭೂಯಸ್ಸಮಭ್ಯಾಸಾತ್=ಮರಳಿ ಮರಳಿ ಅಭ್ಯಾಸಿಸುವುದರದೆಸೆಯಿಂದೆ.

ಪುರುಷಾರ್ಥಪ್ರದಾಯಿನಃ=ಪುರುಷರ ಇಷ್ಟಾರ್ಥವನು ಕೊಡುತ್ತಿರ್ದ್ದ ಅವು. ||೪೦||

ಗ್ರಂಥ|| ಏಷ ಮಂತ್ರೋ ಮಹಾಶಕ್ತಿರೀಶ್ವರಪ್ರತಿಪಾದಕಃ ।
ಸಕೃದುಚ್ಚಾರಣಾದೇವ ಸರ್ವಸಿದ್ಧಿಪ್ರದಾಯಕಃ ॥

ಟೀಕು|| ಈಶ್ವರಪ್ರತಿಪಾದಕಃ=ಈಶ್ವರನನು ಪ್ರತಿಪಾದಿಸುತ್ತಿರ್ದ್ದ, ಮಹಾಶಕ್ತಿಃ=ಮಹಾ ಸಾಮರ್ಥ್ಯವುಳ್ಳ, ಏಷ ಮಂತ್ರಃ=ಈ ಪಂಚಾಕ್ಷರಮಂತ್ರವನಾಯಿತ್ತಾದೊಡೆ, ಸಕೃತ್=ಒಂದುವೇಳೆ, ಉಚ್ಚಾರಣಾದೇವ=ಉಚ್ಚರಿಸುವದರದೆಸೆಯಿಂದವೆ, ಸರ್ವಸಿದ್ಧಿಪ್ರದಾಯಕಃ=ಸಮಸ್ತಸಿದ್ಧಿಯನು ಕೊಡುತ್ತಿರ್ದ್ದ ಅದು. ||೪೧||

ಸೂತ್ರ|| ಬಳಿಕ ಸರ್ವಮಂತ್ರಕವಾದ ಪುಷ್ಪಪೂಜಾಫಲವನು ಹೇಳುತ್ತಿರ್ದ್ದಪಂ.

ಗ್ರಂಥ|| ಪಂಚಾಕ್ಷರೀಂ ಸಮುಚ್ಚಾರ್ಯ ಪುಷ್ಪಂ ಲಿಂಗೇ ವಿನಿಕ್ಷಿಪೇತ್ ।
ಯಸ್ತಸ್ಯ ವಾಜಪೇಯಾನಾಂ ಸಹಸ್ರಫಲಮಿಷ್ಯತೇ ॥

ಟೀಕು|| ಯಃ=ಆವನಾನೊಬ್ಬಾತನು, ಪಂಚಾಕ್ಷರೀಂ=ಪಂಚಾಕ್ಷರಮಂತ್ರವನು, ಸಮುಚ್ಚಾರ್ಯ= ಉಚ್ಚರಿಸಿ, ಲಿಂಗೇ=ಶಿವಲಿಂಗದಲ್ಲಿ, ಪುಷ್ಪಂ=ಒಂದು ಪುಷ್ಪವನು, ವಿನಿಕ್ಷಿಪೇತ್=ಇರಿಸುವನು, ತಸ್ಯ=ಆತನಿಗ, ವಾಜಪೇಯಾನಾಂ=ವಾಜಪೇಯಯಜ್ಞಂಗಳ, ಸಹಸ್ರಫಲಂ=ಸಾವಿರಮಡಿ ಫಲವು, ಇಷ್ಯತೇ=ಇಚ್ಛೈಸಲುಪಡುತ್ತಿರ್ದ್ದಪುದು. ||೪೨||

ಸೂತ್ರ|| ಬಳಿಕ ಪಂಚಾಕ್ಷರಜಪದ ಫಲವನು ಹೇಳುತ್ತಿರ್ದ್ದಪಂ.

ಗ್ರಂಥ|| ಅಗ್ನಿಹೋತ್ರಂ ತ್ರಯೋ ವೇದಾಃ ಯಜ್ಞಾಶ್ಚ ಬಹುದಕ್ಷಿಣಾಃ ।
ಪಂಚಾಕ್ಷರಜಪಸ್ಯೈತೇ ಕೋಟ್ಯಂಶೇನಾಪಿ ನೋ ಸಮಾಃ ॥

ಟೀಕು|| ಅಗ್ನಿಹೋತ್ರಂ=ಅಗ್ನಿಹೋತ್ರವು, ತ್ರಯೋ ವೇದಾಃ=ಋಗ್ಯಜುಃಸಾಮ ವೇದಾಧ್ಯಯನಂ ಗಳು, ಯಜ್ಞಾಶ್ಚ=ಯಾಗಂಗಳು, ಬಹು ದಕ್ಷಿಣಾಃ=ಷೋಡಶ ಮಹಾದಾನಂಗಳು, ಏತೇ=ಇವು, ಪಂಚಾಕ್ಷರಜಪಸ್ಯ=ಪಂಚಾಕ್ಷರಮಂತ್ರೋಚ್ಚಾರಣದ, ಕೋಟ್ಯಂಶೇನಾಪಿ=ಕೋಟಿ ಭಾಗೆಯೊಡನೆ ಯಾಯಿತ್ತಾಡಡೆ, ನೋ ಸಮಾಃ=ಸಮಾನಂಗಳಲ್ಲ. ||೪೩||

ಸೂತ್ರ|| ಬಳಿಕ ಈ ಪಂಚಾಕ್ಷರಮಂತ್ರೋಚ್ಚಾರಣದಿಂದವೆ ಸಾನಂದಗಣೇಶ್ವರನು, ನರಕಿಗಳನು ದ್ಧರಿಸಿದನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಪುರಾ ಸಾನಂದಯೋಗೀಂದ್ರಃ ಶಿವಜ್ಞಾನಪರಾಯಣಃ ।
ಪಂಚಾಕ್ಷರಂ ಸಮುಚ್ಚಾರ್ಯ ನಾರಕಾನುದತಾರಯತ್ ॥

**ಟೀಕು॥** ಪುರಾ=ಪೂರ್ವದಲ್ಲಿ, ಶಿವಜ್ಞಾನಪರಾಯಣಃ=ಶಿವಜ್ಞಾನಯೋಗದಲ್ಲಿ ತತ್ಪರನಾಗಿರ್ದ್ದ, ಸಾನಂದಯೋಗೀಂದ್ರಃ=ಸಾನಂದ ಗಣೇಶ್ವರನು, ಪಂಚಾಕ್ಷರಂ='ನಮಃಶಿವಾಯ'ಯೆಂಬ ಪಂಚಾಕ್ಷರಮಂತ್ರವನು, ಸಮುಚ್ಚಾರ್ಯ=ವಾಚಿಕವಾಗಿ ಉಚ್ಚರಿಸಿ, ನಾರಕಾನ್=ಇಪ್ಪತ್ತೆಂಟು ಕೋಟಿ ನರಕದಲ್ಲಿರುತ್ತಿರ್ದ್ದ ನರಕಿಗಳನು, ಉದತಾರಯತ್=ಉದ್ಧರಿಸಿದನು. ॥೪೪॥

ಗ್ರಂಥ॥ ಸಿದ್ಧ್ಯಾ ಪಂಚಾಕ್ಷರಸ್ಯಾಸ್ಯ ಶತಾನಂದಃ ಪುರಾ ಮುನಿಃ ।
ನರಕಂ ಸ್ವರ್ಗಮಕರೋತ್ಸಂಗಿರಸ್ಯಾಪಿ ಪಾಪಿನಃ ॥

**ಟೀಕು॥** ಪುರಾ=ಪೂರ್ವದಲ್ಲಿ, ಶತಾನಂದಃ ಮುನಿಃ=ಸಾನಂದಗಣೇಶ್ವರನು, ಅಸ್ಯ ಪಂಚಾಕ್ಷರಸ್ಯ=ಈ ಪಂಚಾಕ್ಷರಮಂತ್ರದ, ಸಿದ್ಧ್ಯಾ=ಸಿದ್ಧಿಯಿಂದೆ, ಪಾಪಿನಃ=ಪಾಪಿಷ್ಠನಾಗಿರ್ದ್ದ, ಸಂಗಿರಸ್ಯ=ಸಂಗಿರನ, ನರಕಮಪಿ=ನರಕವಾಯಿತ್ತಾದೊಡೆ, ಸ್ವರ್ಗಂ=ಸ್ವರ್ಗಲೋಕವನಾಗಿ, ಅಕರೋತ್=ಮಾಡಿದನು. ॥೪೫॥

**ಸೂತ್ರ॥** ಬಳಿಕ ಉಪಮನ್ಯು ಮುನೀಶ್ವರನು ಈ ಮಂತ್ರಸಿದ್ಧಿಯಿಂದವೆ ಕ್ಷೀರಸಮುದ್ರವನು ಪಡದು ನಾರಾಯಣನಿಗೆ ಗುರುವಾಗಿ ಶೈವಪುರಾಣವನು ಪ್ರಕಟಿಸಿ ಹೇಳಿದನೆಂದು ಹೇಳುತ್ತಿರ್ದ್ದಪಂ.

ಗ್ರಂಥ॥ ಉಪಮನ್ಯುಃ ಪುರಾ ಯೋಗೀ ಮಂತ್ರೇಣಾನೇನ ಸಿದ್ಧಿಮಾನ್ ।
ಲಬ್ಧವಾನ್ ಪರಮೇಶಾನಾಚ್ಛೈವಶಾಸ್ತ್ರಪ್ರವಕ್ತೃತಾಮ್ ॥

**ಟೀಕು॥** ಪುರಾ=ಪೂರ್ವದಲ್ಲಿ, ಅನೇನ ಮಂತ್ರೇಣ=ಈ ಪಂಚಾಕ್ಷರಮಂತ್ರದಿಂದೆ, ಸಿದ್ಧಿಮಾನ್=ಸಿದ್ಧಿಯುಳ್ಳ, ಉಪಮನ್ಯುಃ ಯೋಗೀ=ಉಪಮನ್ಯು ಮುನೀಶ್ವರನು, ಪರಮೇಶಾನಾತ್=ಪರಮೇಶ್ವರನದೆಸೆಯಿಂದೆ, ಶೈವಶಾಸ್ತ್ರಪ್ರವಕ್ತೃತಾಂ=ಶಿವಶಾಸ್ತ್ರವನು ಹೇಳುವದಕ್ಕೆ ಆಚಾರ್ಯನ ಹತನವನು, ಲಬ್ಧವಾನ್=ಪಡೆದನು. ॥೪೬॥

**ಸೂತ್ರ॥** ಬಳಿಕ ವಸಿಷ್ಠ ವಾಮದೇವಾದಿ ಮುನಿಗಳು ಈ ಮಂತ್ರ ಸಿದ್ಧಿಯಿಂದವೆ ಮಹಾ ತೇಜಸ್ವಿಗಳಾದರೆಂದು ಹೇಳುತ್ತಿರ್ದ್ದಪಂ.

ಗ್ರಂಥ॥ ವಸಿಷ್ಠವಾಮದೇವಾದ್ಯಾ ಮುನಯೋ ಮುಕ್ತಕಿಲ್ಬಿಷಾಃ ।
ಮಂತ್ರೇಣಾನೇನ ಸಂಸಿದ್ಧಾ ಮಹಾತೇಜಸ್ವಿನೋಽಭವನ್ ॥

**ಟೀಕು॥** ಮುಕ್ತಕಿಲ್ಬಿಷಾಃ=ಬಿಡಲುಪಟ್ಟ ಸಮಸ್ತಪಾಪಕರ್ಮವುಳ್ಳ, ವಸಿಷ್ಠ ವಾಮದೇವಾದ್ಯಾಃ= ವಸಿಷ್ಠ ವಾಮದೇವನೆ ಮೊದಲಾಗುಳ್ಳ, ಮುನಯಃ=ಋಷಿಗಳು, ಅನೇನ ಮಂತ್ರೇಣ=ಈ ಪಂಚಾಕ್ಷರ ಮಂತ್ರದಿಂದೆ, ಸಂಸಿದ್ಧಾಃ ಸಂತಃ=ಲೇಸಾದ ಸಿದ್ಧಿಗಳುಳ್ಳವರಾಗುತವು, ಮಹಾತೇಜಸ್ವಿನಃ=ಮಹಾ ತೇಜಸ್ವಿಗಳು, ಅಭವನ್=ಆದರು. ॥೪೭॥

**ಸೂತ್ರ॥** ಬಳಿಕ ಈ ಮಂತ್ರಸಾಮರ್ಥ್ಯದಿಂದವೆ ಬ್ರಹ್ಮಾದಿ ದೇವತೆಗಳು ಸೃಷ್ಟ್ಯಾದಿ ಕರ್ಮಂಗಳನು ಮಾಡುತ್ತಿರ್ದ್ದಪರೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥**

**ಬ್ರಹ್ಮಾದೀನಾಂ ಚ ದೇವಾನಾಂ ಜಗತ್ಸೃಷ್ಟ್ಯಾದಿಕರ್ಮಣಿ ।**
**ಮಂತ್ರಸ್ಯಾಸ್ಯೈವ ಮಾಹಾತ್ಮ್ಯಾತ್ಸಾಮರ್ಥ್ಯಮುಪಜಾಯತೇ ॥**

**ಟೀಕು॥** ಬ್ರಹ್ಮಾದೀನಾಂ=ಬ್ರಹ್ಮವಿಷ್ಣುಮೊದಲಾಗುಳ್ಳ, ದೇವಾನಾಂ ಚ=ದೇವತೆಗಳಿಗೆ ಜಗತ್ಸೃಷ್ಟ್ಯಾದಿ ಕರ್ಮಣಿ=ಭುವನಂಗಳ ಸೃಷ್ಟಿಸ್ಥಿತಿ ಮೊದಲಾದ ಕರ್ಮದಲ್ಲಿಯ, ಸಾಮರ್ಥ್ಯಂ= ಸಾಮರ್ಥ್ಯವು, ಅಸ್ಯ ಮಂತ್ರಸ್ಯ=ಈ ಪಂಚಾಕ್ಷರಮಂತ್ರದ, ಮಾಹಾತ್ಮ್ಯಾದೇವ=ಮಹತ್ವದದೆಸೆಯಿಂದವೆ, ಉಪಜಾಯತೇ=ಹುಟ್ಟುತ್ತಿರ್ದ್ದಪುದು. ॥೪೮॥

**ಸೂತ್ರ॥** ಬಳಿಕ ಈ ಪ್ರಣವಪಂಚಾಕ್ಷರ ಜಪ ಪೂಜೆಗಳಿಂದವೆ ಮೋಕ್ಷಸಂಪತ್ತಿಯಹುದೆಂದು ಹೇಳಿ ಪಂಚಾಕ್ಷರಜಪಸ್ಥಲವನು ಸಮಾಪ್ತಿಯಮಾಡುತ್ತಿರ್ದ್ದಪಂ.

**ವೃತ್ತ॥**

**ಕಿಮಿಹ ಬಹುಭಿರುಕ್ತೈರ್ಮಂತ್ರಮೇನಂ ಮಹಾತ್ಮಾ**
**ಪ್ರಣವಸಹಿತಮಾದೌ ಯಸ್ತು ಪಂಚಾಕ್ಷರಾಖ್ಯಮ್ ।**
**ಜಪತಿ ಪರಮಭಕ್ತ್ಯಾ ಪೂಜಯನ್ದೇವದೇವಮ್**
**ಸ ಗತದುರಿತಬಂಧೋ ಮೋಕ್ಷಲಕ್ಷ್ಮೀಂ ಪ್ರಯಾತಿ ॥**

**ಟೀಕು॥** ಇಹ=ಇಲ್ಲಿ, ಬಹುಭಿಃ ಉಕ್ತೈಃ=ಹಲವು ಮಾತುಗಳಿಂದೆ, ಕಿಂ=ಏನು? ಯಃ ಮಹಾತ್ಮಾ=ಆವನಾನೊರ್ವ ಮಹಾಪುರುಷನು, ಪರಮಭಕ್ತ್ಯಾ=ಮಹಾಭಕ್ತಿಯಿಂದೆ, ದೇವದೇವಂ=ದೇವಾಧಿದೇವನಾದ ಪರಮೇಶ್ವರನನು, ಪೂಜಯನ್ ಸನ್=ಪೂಜಿಸುತ್ತಿದ್ದಾತ ನಾಗುತಲು, ಆದೌ=ಮೊದಲಲ್ಲಿ, ಪ್ರಣವಸಹಿತಂ=ಓಂಕಾರದೊಡನೆ ಕೂಡಿರ್ದ್ದ, ಪಂಚಾಕ್ಷರಾಖ್ಯಂ=ಪಂಚಾಕ್ಷರವೆಂಬ ಹೆಸರುಳ್ಳ, ಏನಂ ಮಂತ್ರಂ ತು='ನಮಃ ಶಿವಾಯ'ಯೆಂಬ ಈ ಮಹಾಮಂತ್ರವನಾಯಿತ್ತಾದೊಡೆ, ಜಪತಿ=ಜಪಿಸುತ್ತಿರ್ದ್ದನು. ಸಃ=ಆತನು, ಗತದುರಿತಬಂಧಃ ಸನ್=ತೊಲಗಲುಪಟ್ಟ ಪಂಚಪಾಶಜನ್ಯವಾದ ಪಾಪಬಂಧ ಉಳ್ಳಾತನಾಗುತಲು, ಮೋಕ್ಷಲಕ್ಷ್ಮೀಂ= ಮೋಕ್ಷಸಂಪತ್ತಿಯನು, ಪ್ರಯಾತಿ=ಎಯ್ದುತ್ತಿರ್ದ್ದಪನು.

**ತಾತ್ಪರ್ಯ॥** 'ಯ ವಾ ಶಿ ಮಃ ನ ಓಂ'ಯೆಂಬ ಸೃಷ್ಟಿಪಂಚಾಕ್ಷರದಿಂದೆ ದೇಹನ್ಯಾಸವ ಮಾಡಿ, 'ನಮಃ ಶಿವಾಯ ಓಂ'ಯೆಂಬ ಸಂಹಾರಪಂಚಾಕ್ಷರದಿಂದೆ ಷಡಂಗನ್ಯಾಸವಮಾಡಿ'ಶಿವಾಯ ನಮಃ ಓಂ' ಯೆಂಬ ಸ್ಥಿತಿಪಂಚಾಕ್ಷರದಿಂದೆ ಕರನ್ಯಾಸವ ಮಾಡಿಕೊಂಡು ಗುರೂಪದಿಷ್ಟಮಾರ್ಗದಿಂದೆ ಪ್ರಣವ ಪಂಚಾಕ್ಷರವನು ಜಪಿಸುವದು. ಸ್ತ್ರೀ ಶೂದ್ರಜಾತಿಗೆ 'ಶಿವಾಯ ನಮಃ'ಯೆಂದು ಜಪವಿಧಿ. ಗ್ರಂಥ ವಿಸ್ತಾರವಾದೀತೆಂದು ಸಂಮತಿಯ ಬರೆದುದಿಲ್ಲ ॥೪೯॥

**ಇತಿ ಪಂಚಾಕ್ಷರೀಜಪಸ್ಥಲಮ್**

**ಇತಿ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಭಕ್ತಸ್ಥಲೇ ಪಂಚಾಕ್ಷರೀಜಪಸ್ಥಲಪ್ರಸಂಗೋ ನಾಮ ಅಷ್ಟಮಃ ಪರಿಚ್ಛೇದಃ ಸಮಾಪ್ತಃ**

## ೬.ಭಕ್ತಸ್ಥಲೇ ಭಕ್ತಮಾರ್ಗಕ್ರಿಯಾಸ್ಥಲಮ್

**ರೇಣುಕ ಉವಾಚ॥**

**ಸೂತ್ರ॥** ಅನಂತರದಲ್ಲಿ ಶಿವಲಿಂಗ ಭಸ್ಮರುದ್ರಾಕ್ಷಧಾರಣ ಸಂಪನ್ನನಾಗಿ ಪಂಚಾಕ್ಷರ ಜಪಾಸಕ್ತನೀಗ ಶಿವಭಕ್ತನೆಂದು ಭಕ್ತಸ್ಥಲವನು ರೇಣುಕಗಣೇಶ್ವರನು ಅಗಸ್ತ್ಯಮುನಿಗೋಸುಗ ಉಪದೇಶಿಸಿ ಹೇಳುತ್ತಿರ್ದಪಂ.

**ಗ್ರಂಥ॥** **ಭೂತಿರುದ್ರಾಕ್ಷಸಂಯುಕ್ತೋ ಲಿಂಗಧಾರೀ ಸದಾ ಶುಚಿಃ ।**
**ಪಂಚಾಕ್ಷರಜಪೋದ್ಯೋಗೀ ಶಿವಭಕ್ತ ಇತಿ ಸ್ಮೃತಃ ॥**

**ಟೀಕು॥** ಸದಾಶುಚಿಃ=ನಿತ್ಯಶುದ್ಧನಾದ, ಲಿಂಗಧಾರೀ=ಶಿವಲಿಂಗಧಾರಕನು, ಭೂತಿರುದ್ರಾಕ್ಷ ಸಂಯುಕ್ತಃ ಸನ್=ಭಸ್ಮರುದ್ರಾಕ್ಷದೊಡನೆ ಕೂಡಿರ್ದ್ದಾತನಾಗುತಲು, ಪಂಚಾಕ್ಷರಜಪೋದ್ಯೋಗೀ= ಪಂಚಾಕ್ಷರಜಪದಲ್ಲಿ ಉದ್ಯೋಗವುಳ್ಳಾತನಾಗಿ, ಶಿವಭಕ್ತ ಇತಿ=ಶಿವಭಕ್ತನೆಂದು, ಸ್ಮೃತಃ=ನೆನೆಯಲು ಪಟ್ಟನು. ॥೧॥

**ಸೂತ್ರ॥** ಬಳಿಕ ಶಿವಭಕ್ತಿಯ ಭೇದವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ಶ್ರವಣಂ ಕೀರ್ತನಂ ಶಂಭೋಃ ಸ್ಮರಣಂ ಪಾದಸೇವನಮ್ ।**
**ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಮ್ ॥**

**ಏವಂ ನವವಿಧಾ ಭಕ್ತಿಃ ಪ್ರೋಕ್ತಾ ದೇವೇನ ಶಂಭುನಾ ।**
**ದುರ್ಲಭಾ ಪಾಪಿನಾಂ ಲೋಕೇ ಸುಲಭಾ ಪುಣ್ಯಕರ್ಮಣಾಮ್ ॥**

**ಟೀಕು॥** ಶಂಭೋಃ=ಪರಮೇಶ್ವರನ, ಶ್ರವಣಂ=ಕಥಾಶ್ರವಣವು, ಕೀರ್ತನಂ=ಸ್ತೋತ್ರವು, ಸ್ಮರಣಂ=ಧ್ಯಾನವು, ಪಾದಸೇವನಂ=ಪಾದಸೇವೆಯು, ಅರ್ಚನಂ=ಪೂಜೆಯು, ವಂದನಂ= ನಮಸ್ಕಾರವು, ದಾಸ್ಯಂ=ಭೃತ್ಯತ್ವವು, ಸಖ್ಯಂ=ಮಿತ್ರತ್ವವು, ಆತ್ಮನಿವೇದನಂ=ತನ್ನ ಸಮರ್ಪಿಸುವುದು, ಏವಂ=ಈ ಪ್ರಕಾರದಿಂದೆ, ನವವಿಧಾ ಭಕ್ತಿಃ=ಒಂಬತ್ತು ಪ್ರಕಾರವುಳ್ಳ ಶಿವಭಕ್ತಿಯು, ದೇವೇನ=ಕ್ರೀಡಾ ಶೀಲನಾಗಿರ್ದ್ದ, ಶಂಭುನಾ=ಪರಮೇಶ್ವರನಿಂದೆ, ಪ್ರೋಕ್ತಾ=ಹೇಳಲುಪಟ್ಟಿತ್ತು. ಲೋಕೇ=ಲೋಕದಲ್ಲಿ, ಪಾಪಿನಾಂ=ಪಾಪಿಗಳಿಗೆ, ದುರ್ಲಭಾ=ಪಡೆಯಲು ಶಕ್ಯವಲ್ಲದೆಯಿದ್ದ ಅದು, ಪುಣ್ಯಕರ್ಮಣಾಮ್= ಪುಣ್ಯಾತ್ಮರಿಗೆ, ಸುಲಭಾ=ಸುಲಭವಾಗಿದ್ದ ಅದು. ॥೩॥

**ಸೂತ್ರ||** ಬಳಿಕ ಈ ನವವಿಧವಾದ ಶಿವಭಕ್ತಿಯುಳ್ಳವನೆ ಶಿವಭಕ್ತನೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ಅಧಮೇ ಚೋತ್ತಮೇ ವಾಽಪಿ ಯತ್ರ ಕುತ್ರಚಿದೂರ್ಜಿತಾ ।**
**ವರ್ತತೇ ಶಾಂಕರೀ ಭಕ್ತಿಸ್ಸ ಭಕ್ತ ಇತಿ ಗೀಯತೇ ॥**

**ಟೀಕು||** ಅಧಮೇ ಚ=ನೀಚನಲ್ಲಿಯಾದಡೂ, ಉತ್ತಮೇ ವಾಽಪಿ=ಉತ್ತಮನಲ್ಲಿಯಾಯಿತ್ತಾದೊಡೆಯು, ಯತ್ರ ಕುತ್ರಚಿತ್=ಎಲ್ಲಿ ಯಾವವನಲ್ಲಿಯಾಯಿತ್ತಾದೊಡೆಯು, ಊರ್ಜಿತಾ=ದೊಡ್ಡಿತಾಗಿರ್ದ್ದ, ಶಾಂಕರೀ ಭಕ್ತಿಃ=ಶಿವಸಂಬಂಧವಾದ ಭಕ್ತಿಯು, ವರ್ತತೇ=ವರ್ತಿಸುತ್ತಿ ರ್ದ್ದಪುದು. ಸಃ=ಆತನು, ಭಕ್ತ ಇತಿ=ಭಕ್ತನೆಂದು, ಗೀಯತೇ=ಹೇಳಲುಪಡುತ್ತಿರ್ದ್ದಪುದು. ||೪||

**ಸೂತ್ರ||** ಬಳಿಕ ಭಕ್ತಿಯುಳ್ಳವನೆ ಶಿವನಿಗೆ ಪ್ರಿಯವಾದವನೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ಭಕ್ತಿಃ ಸ್ಥಿರೀಕೃತಾ ಯಸ್ಮಿನ್ ಮ್ಲೇಚ್ಛೇ ವಾ ದ್ವಿಜಸತ್ತಮೇ ।**
**ಶಂಭೋಃ ಪ್ರಿಯಸ್ಸ ವಿಪ್ರಶ್ಚ ನ ಪ್ರಿಯೋ ಭಕ್ತಿವರ್ಜಿತಃ ॥**

**ಟೀಕು||** ದ್ವಿಜಸತ್ತಮೇ=ಬ್ರಾಹ್ಮಣೋತ್ತಮನಲ್ಲಿಯಾದಡು, ಮ್ಲೇಚ್ಛೇ ವಾ=ಶ್ವಪಚನಲ್ಲಿಯಾದೊಡೆಯು, ಯಸ್ಮಿನ್=ಆವಾತನಲ್ಲಿ, ಭಕ್ತಿಃ=ಶಿವಭಕ್ತಿಯು, ಸ್ಥಿರೀಕೃತಾ=ಸ್ಥಿರವಾಗಿ ಮಾಡಲುಪಟ್ಟಿತು, ಸಃ=ಆತನು, ಶಂಭೋಃ=ಪರಮೇಶ್ವರನಿಗೆ, ಪ್ರಿಯಃ=ಇಷ್ಟವಾಗಿದ್ದಾತನು; ಭಕ್ತಿವರ್ಜಿತಃ=ಭಕ್ತಿರಹಿತನಾಗಿರ್ದ್ದ, ವಿಪ್ರಶ್ಚ=ಬ್ರಾಹ್ಮಣನಾದಡು [ಶಂಭೋಃ=ಪರಮೇಶ್ವರನಿಗೆ, ಪ್ರಿಯಃ ನ=ಪ್ರಿಯನಲ್ಲ]ದೆಯಿದ್ದಾತನು. ||೫||

**ಸೂತ್ರ||** ಬಳಿಕ ಆ ಶಿವಭಕ್ತಿಯು ಎರಡು ಪ್ರಕಾರವೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ಸಾ ಭಕ್ತಿರ್ದ್ವಿಧಾ ಜ್ಞೇಯಾ ಬಾಹ್ಯಾಭ್ಯಂತರಭೇದತಃ ।**
**ಬಾಹ್ಯಾ ಸ್ಥೂಲಾಂತರಾ ಸೂಕ್ಷ್ಮಾ ವೀರಮಾಹೇಶ್ವರಾದೃತಾ ॥**

**ಟೀಕು||** ಸಾ ಭಕ್ತಿಃ=ಆ ಶಿವಭಕ್ತಿಯು, ಬಾಹ್ಯಾಭ್ಯಂತರಭೇದತಃ=ಹೊರಗೊಳಗೆಂಬ ಭೇದದ ದೆಸೆಯಿಂದೆ, ದ್ವಿಧಾ=ಎರಡು ಪ್ರಕಾರವು[ಳ್ಳದೆಂದು, ಜ್ಞೇಯಾ=ತಿಳಿಯಲುಪಡುತಕ್ಕದು. ಬಾಹ್ಯಾ=ಬಾ]ಹ್ಯವಾಗಿದ್ದ ಭಕ್ತಿಯು, ಸ್ಥೂಲಾ=ಸ್ಥೂಲವಾಗಿದ್ದ ಅದು, ಅಂತರಾ=ಅಭ್ಯಂತರ ಭಕ್ತಿಯು, ಸೂಕ್ಷ್ಮಾ=ಸೂಕ್ಷ್ಮವಾಗಿದ್ದುದಾಗಿ, ವೀರಮಾಹೇಶ್ವರಾ[ದೃತಾ=ವೀರಮಾಹೇಶ್ವರರಿಗೆ ಪ್ರೀತಿಯನ್ನುಂಟು ಮಾಡತಕ್ಕುದು. ||೬||

**ಸೂತ್ರ||** ಬಳಿಕ ಶಿವಭಕ್ತರಿಂದ ಮಾಡಲುಯೋಗ್ಯವಾದ ಬಾಹ್ಯಭಕ್ತಿಯನು ಹೇಳಿ ವೀರಶೈವರಿಗೆ ಆಚರಿಸಲು ಯೋಗ್ಯವಾ[ದ ಕ್ರಮವನು]ಹೇಳುತ್ತಿರ್ದ್ದಪಂ..

**ಗ್ರಂಥ||** **ಸಿಂಹಾಸನೇ ಶುದ್ಧದೇಶೇ ಸುರಮ್ಯೇ ರತ್ನಚಿತ್ರಿತೇ ।**
**ಶಿವಲಿಂಗಸ್ಯ ಪೂಜಾ ಯಾ ಸಾ ಬಾಹ್ಯಾ ಭಕ್ತಿರುಚ್ಯತೇ ॥**

**ಟೀಕು||** ಸುರ[ಮ್ಯೇ=ಅತ್ಯಂತ ಮನೋಹರವಾದ, ಶುದ್ಧದೇಶೇ=ಷಟ್ ಸಂಮಾರ್ಜನೆಗಳಿಂದೆ ಶುದ್ಧವಾದ ಸ್ಥಾನದಲ್ಲಿ, ರತ್ನಚಿತ್ರಿತೇ=ನವರತ್ನಂಗಳಿಂದೆ ವಿಚಿತ್ರವಾಗಿ ಮಾಡಲುಪಟ್ಟ, ಸಿಂಹಾಸನೇ=ಸುವರ್ಣಸಿಂಹಾಸನದಲ್ಲಿ, ಶಿವಲಿಂಗಸ್ಯ ಯಾ ಪೂಜಾ=ಶಿವಲಿಂಗದ[ಆವುದಾನೊಂದು ಪೂಜೆಯುಂಟು, ಸಾ=ಆ ಪೂಜೆಯು, ಬಾಹ್ಯಾ ಭಕ್ತಿಃ=ಬಾಹ್ಯಭಕ್ತಿಯೆಂದು, ಉಚ್ಯ]ತೇ=ಹೇಳಲು ಪಡುತ್ತಿರ್ದ್ದಪುದು. ||೭||

**ಸೂತ್ರ||** ಬಳಿಕ ಶಿವಯೋಗಿಗೆ ವಿಹಿತವಾದ ಆಂತರಭಕ್ತಿಯ ಸ್ವರೂಪವನು[ಹೇಳುತ್ತಿರ್ದ್ದಪಂ.

**ಗ್ರಂಥ||** **ಲಿಂಗೇ ಪ್ರಾಣಂ ಸ]ಮಾಧಾಯ ಪ್ರಾಣೇ ಲಿಂಗಂ ತು ಶಾಂಭವಮ್ ।**
**ಸ್ವಸ್ಥಂ ಮನಸ್ತಥಾ ಕೃತ್ವಾ ನ ಕಿಂಚಿಚ್ಚಿಂತಯೇದ್ಯದಿ ॥**

**ಸಾಭ್ಯಂತರಾ ಭಕ್ತಿರಿತಿ ಪ್ರೋಚ್ಯತೇ ಶಿವಯೋಗಿಭಿಃ ।**
**ಸಾ ಯಸ್ಮಿನ್ವರ್ತತೇ ತಸ್ಯ ಜೀವನಂ ಭೃಷ್ಟಬೀಜವತ್ ॥**

**ಟೀಕು||** ಲಿಂಗೇ=ಶಿವಲಿಂಗದಲ್ಲಿ, ಪ್ರಾಣಂ=ಜೀವಕಲೆಯನು, ಸಮಾಧಾಯ=ಇರಿಸಿ,ಪ್ರಾಣೇ= ಪ್ರಾಣನಲ್ಲಿ, ಶಾಂಭವಂ ಲಿಂಗಂ ತು=ಶಿವಕಲೆಯನಾಯಿತ್ತಾ[ದೊಡೆ, ಸಮಾಧಾಯ=ಸಂಸ್ಥಾಪಿಸಿ, ಮನಃ=ಮನಸ್ಸನು, ಸ್ವಸ್ಥಂ=ಸ್ವಸ್ಥವಾಗಿಯಿದ್ದದನಾಗಿ, ಕೃತ್ವಾ=ಮಾಡಿ, ಕಿಂಚಿತ್=ಒಂದನು, ನ ಚಿಂತಯೇತ್ ಯದಿ=ಎತ್ತಲಾನು ಚಿಂತಿಸದೆ ಇರುವುದೆ, ಸಾ=ಲಿಂಗಪ್ರಾಣಸಮರಸರೂಪವಾದ ಚಿಂತನೆಯಲ್ಲಿರು ವಿ]ಕೆಯೇ, ಆಭ್ಯಂತರಾ ಭಕ್ತಿರಿತಿ=ಆಭ್ಯಂತರಭಕ್ತಿಯೆಂದು, ಶಿವಯೋಗಿಭಿಃ=ಶಿವಯೋಗೀಶ್ವರರಿಂದೆ, ಪ್ರೋಚ್ಯತೇ=ಪೇಳಲುಪಡುತ್ತಿರ್ದ್ದಪುದು. ಸಾ=ಆ, ಆ[ಭ್ಯಂತರಭಕ್ತಿಃ=ಆಭ್ಯಂತರ ಭಕ್ತಿಯು ಆವಾತನ]ಲ್ಲಿ, ವರ್ತತೇ=ವರ್ತಿಸುತ್ತಿರ್ದ್ದಪುದು. ತಸ್ಯ=ಆತನ, ಜೀವನಂ=ಬದುಕು, ಭೃಷ್ಟಬೀಜವತ್=ಹುರಿದ ಬೀಜದೋಪಾದಿ ಮರಳಿ ಜನ್ಮಾಂತರಕ್ಕೆ ಕಾರಣವಲ್ಲವೆಂಬುದು ಅದು. ||೯||

**ಸೂತ್ರ||** ಬಳಿಕ [ಶು-]ದ್ಧವಾದ ಈ ಆಭ್ಯಂತರಭಕ್ತಿಯುಳ್ಳವನೆ ಮುಕ್ತನೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** ಬಹುನಾತ್ರ ಕಿಮುಕ್ತೇನ ಗುಹ್ಯಾದ್ಗುಹ್ಯತರಾ ಪರಾ ।
**ಶಿವಭಕ್ತಿರ್ನಸಂದೇಹಸ್ತಯಾ ಯುಕ್ತೋ ವಿಮುಚ್ಯತೇ ॥**

**ಟೀಕು||** ಅತ್ರ=ಇಲ್ಲಿ, ಬಹುನಾ ಉಕ್ತೇನ ಕಿಂ=ಹಲವು ಮಾತಿನಿಂದೇನು? ಶಿವಭಕ್ತಿಃ=ಅಭ್ಯಂತರ ಶಿವಭಕ್ತಿಯು, ಪರಾ=ಸರ್ವೋತ್ಕೃಷ್ಟವಾದ, ಗುಹ್ಯಾತ್=ರಹಸ್ಯದಿಂದಲು, ಗುಹ್ಯತರಾ= ಅತ್ಯಂತ ಗೋಪ್ಯವಾಗಿದ್ದ ಅದು, ತಯಾ=ಆ ಶಿವಭಕ್ತಿಯೊಡನೆ, ಯುಕ್ತಃ=ಕೂಡಿದ್ದಾತನು, ವಿಮುಚ್ಯತೇ=ಮಲಮಾಯಾದಿ ಪಂಚಕ್ಲೇಶಗಳಿಂದೆ ಮುಕ್ತನಹನು. ನ ಸಂದೇಹಃ=ಸಂದೇಹವಿಲ್ಲ. ||೧೦||

**ಸೂತ್ರ||** ಬಳಿಕ ಶಿವಪ್ರಸಾದ ಶಿವಭಕ್ತಿಗಳಿಗೆ ಅಭೇದವನು ಸಾಧಿಸಿ ಆ ಭಕ್ತಿಯಿಂದಲಾದ ಮುಕ್ತಿ ಸ್ವರೂಪ[ವನು ಹೇಳುತ್ತಿರ್ದ್ದಪಂ.]

**ಗ್ರಂಥ||** **ಪ್ರಸಾದಾದೇವ ಸಾ ಭಕ್ತಿಃ ಪ್ರಸಾದೋ ಭಕ್ತಿಸಂಭವಃ ।**
**ಯಥೈವಾಂಕುರತೋ ಬೀಜಂ ಬೀಜತೋ ವಾ ಯಥಾಂಕುರಃ ॥**

**ಟೀಕು||** ಇಹ=ಇಲ್ಲಿ, ಅಂಕುರ ತಃ=ಅಂಕುರದದೆಸೆಯಿಂದೆ, ಬೀಜಂ=ಬೀಜವು, ಯಥಾ ಏವ= ಹೇಗಹುದು? ಬೀಜತೋ ವಾ=ಬೀಜದದೆಸೆಯಿಂದಲಾಯಿತ್ತಾದೊಡೆ, ಅಂಕುರಃ ಮೊಳಕೆಯು, ಯಥಾ=ಹೇಗಹುದು? ತಥಾ=ಆ ಬೀಜವೃಕ್ಷ ನ್ಯಾಯದ ಹಾಂಗೆ, ಪ್ರಸಾದಾದೇವ ಸಾ ಭಕ್ತಿಃ=ಶಿವಪ್ರಸಾದದ ದೆಸೆಯಿಂದವೆ ಆ ಭಕ್ತಿಯು, ಸಿದ್ಧಾ=ಸಿದ್ಧವು. ಪ್ರಸಾದೋಽಪಿ=ಶಿವಪ್ರಸಾದವಾಯಿತ್ತಾದೊಡೆ, ಭಕ್ತಿಸಂಭವಃ= ಶಿವಭಕ್ತಿಯಿಂದಹುದು. ||೧೧||

**ಗ್ರಂಥ||** **ಪ್ರಸಾದಪೂರ್ವಿಕಾ ಯೇಯಂ ಭಕ್ತಿರ್ಮುಕ್ತಿವಿಧಾಯಿನೀ ।**
**ನೈವ ಸಾ ಶಕ್ಯತೇ ಪ್ರಾಪ್ತುಂ ನರೈರೇಕೇನ ಜನ್ಮನಾ ॥**

**ಟೀಕು||** ಮುಕ್ತಿವಿಧಾಯಿನೀ=ಮೋಕ್ಷವನು ಕೊಡುತ್ತಿರ್ದ್ದ, ಯಾ ಭಕ್ತಿಃ=ಆವುದಾನೊಂದು ಭಕ್ತಿಯುಂಟು [ಅದು, ಪ್ರಸಾದಪೂರ್ವಿ]ಕಾ=ಶಿವಪ್ರಸಾದವೆ ಮೊದಲಾಗುಳ್ಳುದು. ಸಾ ಇಯಂ=ಆ ಈ ಶಿವಭಕ್ತಿಯು, ನರೈಃ=ಮನುಷ್ಯರಿಂದೆ, ಏಕೇನ ಜನ್ಮನಾ= ಒಂದೇ ಜನ್ಮದಿಂದವೆ, ಪ್ರಾಪ್ತುಂ= ಪಡೆಯಲು, ನೈವ ಶಕ್ಯತೇ=ಸಮರ್ಥವಾಗುತ್ತಿರದು. ||೧೨||

**ಗ್ರಂಥ||** **ಅನೇಕಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಮ್ ।**
**ವಿರಕ್ತಾನಾಂ ಪ್ರಬುದ್ಧಾನಾಂ ಪ್ರಸೀದತಿ ಮಹೇಶ್ವರಃ ।**
**ಪ್ರಸನ್ನೇ ಸತಿ ಮುಕ್ತೋಽಭೂನ್ಮುಕ್ತಃ ಶಿವಸಮೋ ಭವೇತ್ ॥**

**ಟೀಕು||** ಅನೇಕಜನ್ಮಸಿದ್ಧಾನಾಂ=ಅನೇಕಜನ್ಮಾಂತರಗಳಲ್ಲಿ ಶುದ್ಧಾತ್ಮರಾಗಿರ್ದ್ದ, ಶ್ರೌತಸ್ಮಾರ್ತಾನುವರ್ತಿನಾಂ=ಶ್ರುತಿಸ್ಮೃತ್ಯುಕ್ತಕರ್ಮಂಗಳಲ್ಲಿ ವರ್ತಿಸುತ್ತಿರ್ದ್ದ, ವಿರಕ್ತಾನಾಂ=ವಿಷಯಂಗಳಲ್ಲಿ ವಿರಕ್ತರಾದ, ಪ್ರಬುದ್ಧಾನಾಂ=ಜ್ಞಾನಿಗಳಿಗೆ, ಮಹೇಶ್ವರಃ=ಪರಮೇಶ್ವರನು, ಪ್ರಸೀದತಿ=ಪ್ರಸನ್ನನಾಗುತ್ತಿರ್ದ್ದಪನು. ಪ್ರಸನ್ನೇ

ಸತಿ=ಪ್ರಸನ್ನನಾಗಲಾಗಿ, ಮುಕ್ತಃ=ಮುಕ್ತನು, ಅಭೂತ್=ಅಹನು. ಹೇಗೆಯೆಂದರೆ, ಮುಕ್ತಃ=ಮುಕ್ತನು, ಶಿವಸಮಃ=ಶಿವನ ಸಮಾನನು, ಭವೇತ್=ಅಹನು.

**ತಾತ್ಪರ್ಯ||** "ಶಿವಸ್ವರೂಪೋ ಭವತಿ", 'ಶಿವ ಸ್ವರೂಪೋ ಭವತಿ' ಯೆಂಬ ವೃದ್ಧಜಾಬಾಲ ಶ್ರುತಿಯುಂಟಾಗಿ "ಭ್ರಮದ್ಭ್ರಮರ ಚಿಂತಾಯಾಂ ಕೀಟೋಽಪಿ ಭ್ರಮರಾಯತೇ| ಮಮ ಚಿಂತಾ ಸಮಾಕ್ರಾಂತಾ ಮಮ ರೂಪೋ ಭವೇತ್ ಧ್ರುವಮ್" ಯೆಂಬ ವೀರಾಗಮವಾಕ್ಯವುಂಟಾಗಿ ಮೊದಲ ಸಮಾನತ್ವವಿಲ್ಲದಿದ್ದರೆ ಕಡೆಗೆ ಸಮರಸತ್ವವಿಲ್ಲವೆಂಬುದರ್ಥ. ||೧೩||

**ಸೂತ್ರ||** ಬಳಿಕ "ಏಕೇನ ಜನ್ಮನಾ ಮುಕ್ತಿರ್ವೀರಾಣಾಂ ತು ಮಹೇಶ್ವರಿ |
ಇತರೇಷಾಂ ತು ಶೈವನಾಂ ಮುಕ್ತಿರ್ಜನ್ಮತ್ರಯೇ ಭವೇತ್" ||
ಯೆಂಬ ವೀರಾಗಮವಚನದಿಂ ಅಲ್ಪ ಭಕ್ತಿಯೊಡನೆ ಕೂಡಿದಾತನಿಗಾದಡು ಜನ್ಮತ್ರಯದ ಮೇಲೆ ಮೋಕ್ಷವನು ಹೇಳುತ್ತಿರ್ದಪಂ.

ಗ್ರಂಥ||
**ಅಲ್ಪಭಕ್ತ್ಯಾಽಪಿ ಯೋ ಮರ್ತ್ಯಸ್ತಸ್ಯ ಜನ್ಮತ್ರಯಾತ್ಪರಮ್ |**
**ನ ಯೋನಿಯಂತ್ರಪೀಡಾ ವೈ ಭವೇನ್ನೈವಾತ್ರ ಸಂಶಯಃ ||**

**ಟೀಕು||** ಯೋ ಮರ್ತ್ಯಃ=ಆವನಾನೊಬ್ಬ ಮನುಷ್ಯನು, ಅಲ್ಪಭಕ್ತ್ಯಾಪಿ=ಅಲ್ಪಶಿವಭಕ್ತಿಯಿಂದಲಾದರು, ವರ್ತತೇ=ವರ್ತಿಸುತ್ತಿರ್ದಪನು, ತಸ್ಯ=ಆತನಿಗೆ, ಜನ್ಮತ್ರಯಾತ್ ಪರಂ=ಮೂರುಜನ್ಮದ ಮೇಲೆ, ಯೋನಿಯಂತ್ರಪೀಡಾ ವೈ=ಮರಳಿ ಜನ್ಮವಾಯಿತ್ತಾದೊಡೆ, ನ ಭವೇತ್=ಆಗದು. ಅತ್ರ=ಇಲ್ಲಿ ಸಂದೇಹಃ=ಸಂದೇಹವು, ನೈವ=ಇಲ್ಲವೆ. ||೧೪||

**ಸೂತ್ರ||** ಬಳಿಕ ಶಿವಭಕ್ತಿ ವಿಶೇಷವನು ಹೇಳುತ್ತಿರ್ದಪಂ.

ಗ್ರಂಥ||
**ಸಾಂಗಾಽನುಗಾ ಚ ಯಾ ಸೇವಾ ಸಾ ಭಕ್ತಿರಿತಿ ಕಥ್ಯತೇ |**
**ಸಾ ಪುನರ್ಭಿದ್ಯತೇ ತ್ರೇಧಾ ಮನೋವಾಕ್ಕಾಯಸಾಧನೈಃ ||**

**ಟೀಕು||** ಯಾ ಸೇವಾ=ಆವುದಾನೊಂದು ಸೇವೆಯು, ಸಾಂಗಾ=ಸಾಂಗವಾಗಿ, ಅನುಗಾ ಚ= ಬಳಿವಿಡಿದು ಎಯ್ದುತ್ತಿರ್ದಪುದು, ಸಾ=ಅದು, ಭಕ್ತಿರಿತಿ=ಶಿವಭಕ್ತಿಯೆಂದು, ಕಥ್ಯತೇ=ಹೇಳಲು ಪಡುತ್ತಿರ್ದಪುದು. ಸಾ=ಆ ಭಕ್ತಿಯು, ಪುನಃ=ಮರಳಿ, ಮನೋವಾಕ್ಕಾಯಸಾಧನೈಃ=ಮನವಚನಕಾಯರೂಪವಾದ ಸಾಧನಂಗಳಿಂದೆ, ತ್ರೇಧಾ=ಮೂರು ಪ್ರಕಾರದಿಂದೆ, ಭಿದ್ಯತೇ=ಭಿನ್ನವಾಗುತ್ತಿರ್ದಪುದು. ||೧೫||

**ಸೂತ್ರ||** ಬಳಿಕ 'ಯದ್ಧಿ ಮನಸಾಃ ಧ್ಯಾಯತಿ ತದ್ವಾಚಾ ವದತಿ ತತ್ಕರ್ಮಣಾ ಕರೋತಿ'ಯೆಂಬ

ಶ್ರುತ್ಯರ್ಥವನು ಪ್ರಕಟಿಸಿ ಆ ಸೇವಾಭೇದವನು ಹೇಳುತ್ತಿರ್ದಪಂ.

ಗ್ರಂಥ॥ **ಶಿವರೂಪಾದಿಚಿಂತಾ ಯಾ ಸಾ ಸೇವಾ ಮಾನಸೀ ಸ್ಮೃತಾ ।**
**ಜಪಾದಿರ್ವಾಚಿಕೀ ಸೇವಾ ಕರ್ಮಪೂಜಾ ತು ಕಾಯಿಕೀ ॥**

**ಟೀಕು॥** ಯಾ=ಆವುದಾನೊಂದು, ಶಿವರೂಪಾದಿ ಚಿಂತಾ=ಶಿವಲಿಂಗಸ್ವರೂಪು ಮೊದಲಾಗುಳ್ಳವರ ಚಿಂತೆಯುಂಟು, ಸಾ=ಅದು, ಮಾನಸೀ ಸೇವೇತಿ=ಮಾನಸಭಕ್ತಿಯೆಂದು, ಸ್ಮೃತಾ=ನೆನೆಯಲುಪಟ್ಟಿತ್ತು. ಜಪಾದಿ=ಪ್ರಣವಪಂಚಾಕ್ಷರ ಮೊದಲಾಗುಳ್ಳ, ವಾಚಿಕೀ ಸೇವಾ=ವಾಚಿಕ ಭಕ್ತಿಯು;ಕರ್ಮಪೂಜಾ ತು=ಕ್ರಿಯೆಯಿಂದ ಮಾಡಿದ ಶಿವಲಿಂಗಪೂಜೆ ಮೊದಲಾಗುಳ್ಳುದೆ, ಕಾಯಿಕೀ ಸೇವಾ=ಕಾಯಕ ಭಕ್ತಿಯು.

**ತಾತ್ಪರ್ಯ॥** ದೀಕ್ಷಾತ್ರಯಸಂಪನ್ನನೆ ಈ ಭಕ್ತಿತ್ರಯಸಂಪನ್ನನೆಂಬುದರ್ಥ. ॥೧೬॥

**ಸೂತ್ರ॥** ಬಳಿಕ ಆ ಸೇವೆಯು ಮೂರು ಪ್ರಕಾರವೆಂದು ಉಪದೇಶಿಸಿ ಹೇಳುತ್ತಿರ್ದಪಂ.

ಗ್ರಂಥ॥ **ಬಾಹ್ಯಮಾಭ್ಯಂತರಂ ಚೈವ ಬಾಹ್ಯಾಭ್ಯಂತರಮೇವ ವಾ ।**
**ಮನೋವಾಕ್ಕಾಯಭೇದೈಶ್ಚ ತ್ರಿಧಾ ತದ್ಭಜನಂ ವಿದುಃ ॥**

**ಟೀಕು॥** ಮನೋವಾಕ್ಕಾಯಭೇದೈಶ್ಚ=ದೀಕ್ಷಾತ್ರಯಯುಕ್ತವಾದ ಮನವಚನಕಾಯಂಗಳ ಭೇದವುಳ್ಳ, ತತ್ ಭಜನಮ್=ಆ ಸೇವಾರೂಪವಾದ ಭಕ್ತಿಯನು, ಬಾಹ್ಯಂ=ಬಾಹ್ಯವೆಂದು, ಆಭ್ಯಂತರಂ ಚೈವ=ಆಭ್ಯಂತರವೆಂದು, ಬಾಹ್ಯಾಭ್ಯಂತರಮೇವ ವಾ=ಬಾಹ್ಯಾಭ್ಯಂತರವನಾಗಿಯಾಯಿತ್ತಾದೊಡೆ, ತ್ರಿಧಾ=ಮೂರು ಪ್ರಕಾರವೆಂದು, ವಿದುಃ=ಅರಿವುತ್ತಿರ್ದಪರು. ॥೧೭॥

**ಸೂತ್ರ॥** ಬಳಿಕ ಅವರ ಲಕ್ಷಣವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಮನೋ ಮಹೇಶಧ್ಯಾನಾಢ್ಯಂ ನಾನ್ಯಧ್ಯಾನರತಂ ಮನಃ ।**
**ಶಿವನಾಮರತಾ ವಾಣೀ ವಾಙ್ಮತಾ ಚೈವ ನೇತರಾ ॥**

**ಲಿಂಗೈಶ್ಶಿವಸ್ಯ ಚೋದ್ದಿಷ್ಟೈ ಸ್ತ್ರಿಪುಂಡ್ರಾದಿಭಿರಂಕಿತಃ ।**
**ಶಿವೋಪಚಾರನಿರತಃ ಕಾಯಃ ಕಾಯೋ ನ ಚೇತರಃ ॥**

**ಟೀಕು॥** ಮಹೇಶಧ್ಯಾನಾಢ್ಯಂ=ಶಿವಧ್ಯಾನದಲ್ಲಿ ತತ್ಪರವಾಗಿರ್ದ, ಮನಃ=ಮನಸ್ಸು,

ಅನ್ಯಧ್ಯಾನರತಂ=ಉಳಿದವರ ಧ್ಯಾನದಲ್ಲಿ ತತ್ಪರವಾಗಿದ್ದದು, ನ ಮನಃ=ಮನಸಲ್ಲ. ಶಿವನಾಮರತಾ ವಾಣೀ=ಶಿವನಾಮದಲ್ಲಿ ಪ್ರೀತಿಯುಳ್ಳ ವಾಣಿಯು, ವಾಕ್=ವಾಕ್ಕೆಂದು, ಮತಾ=ಸಂಮತವು. ಇತರಾ=ಉಳಿದುದು, ನ ಚೈವ=ಅಲ್ಲವೆ. ಉದ್ದಿಷ್ಟೈಃ ಚ=ಉದ್ದೇಶಿಸಲುಪಟ್ಟ, ತ್ರಿಪುಂಡ್ರಾದಿಭಿಃ= ಭಸ್ಮತ್ರಿಪುಂಡ್ರ ಭಸ್ಮರುದ್ರಾಕ್ಷಧಾರಣೆ ಮೊದಲಾಗುಳ್ಳ, ಶಿವಸ್ಯ ಲಿಂಗೈಃ=ಶಿವನಲಾಂಛನಂಗಳಿಂದೆ, ಅಂಕಿತಃ=ಕುರುಹುವಿಡಿಯಲುಪಟ್ಟ, ಶಿವೋಪಚಾರನಿರತಃ=ಶಿವಲಿಂಗೋಪಚಾರದಲ್ಲಿ ತತ್ಪರವಾದ, ಕಾಯಃ ಕಾಯವು, ಕಾಯಃ=ಕಾಯವೇ, ನ ಚೇತರಃ=ಉಳಿದುದಲ್ಲ. ॥೧೯॥

**ಸೂತ್ರ॥** ಬಳಿಕ ಬಾಹ್ಯಾದಿ ಲಕ್ಷಣವನು ಹೇಳುತ್ತಿರ್ದಪಂ.

ಗ್ರಂಥ॥ **ಅನ್ಯಾತ್ಮವಿದಿತಂ ಬಾಹ್ಯಂ ಶಂಭೋರಭ್ಯರ್ಚನಾದಿಕಮ್ ।**
**ತದೇವ ತು ಸ್ವಸಂವೇದ್ಯಮಾಭ್ಯಂತರಮುದಾಹೃತಮ್ ।**
**ಮನೋ ಮಹೇಶಪ್ರವಣಂ ಬಾಹ್ಯಾಭ್ಯಂತರಮುಚ್ಯತೇ ॥**

**ಟೀಕು॥** ಶಂಭೋಃ=ಪರಮೇಶ್ವರನ, ಅಭ್ಯರ್ಚನಾದಿಕಂ=ಪೂಜೆ ಮೊದಲಾಗುಳ್ಳ ಕರ್ಮವು, ಅನ್ಯಾತ್ಮವಿದಿತಂ=ಅನ್ಯರಿಂದೆ ಅರಿಯಲುಪಟ್ಟುದಾಗಿ, ಬಾಹ್ಯಂ=ಬಾಹ್ಯವು, ತದೇವ ತು=ಆ ಪೂಜಾಕರ್ಮವಾಯಿತ್ತಾದೊಡೆ, ಸ್ವಸಂವೇದ್ಯಂ=ತನ್ನಿಂದ ಅರಿಯಲುಪಟ್ಟುದಾಗಿ ಆಭ್ಯಂತರಂ=ಆಭ್ಯಂತರವೆಂದು, ಉದಾಹೃತಂ=ಹೇಳಲುಪಟ್ಟಿತ್ತು. ಮಹೇಶ ಪ್ರವಣಂ=ಪರಮೇಶ್ವರನ, ಕರ್ಮದಲ್ಲಿ ತತ್ಪರವಾದ, ಮನಃ=ಕಾಕಾಕ್ಷಿಯೋಪಾದಿಯ ಮನವೆ, ಬಾಹ್ಯಾಭ್ಯಂತರಂ=ಬಾಹಾಭ್ಯಂತರ ವೆಂದು, ಉಚ್ಯತೇ=ಹೇಳಲುಪಡುತ್ತಿರ್ದಪುದು. ॥೨೦॥

**ಸೂತ್ರ॥** ಬಳಿಕ ಮಾನಸಾದಿಗಳಿಂದೆ ತ್ರಿವಿಧ ತ್ರಿವಿಧವಾಗಿದ್ದ ಆ ಭಜನೆಯೆ ಮರಳಿ ಪಂಚವಿಧವೆಂದು ಉದ್ದೇಶಿಸಿ ಹೇಳುತ್ತಿರ್ದಪಂ.

ಗ್ರಂಥ॥ **ಪಂಚಧಾ ಕಥ್ಯತೇ ಸದ್ಭಿಸ್ತದೇವ ಭಜನಂ ಪುನಃ ।**
**ತಪಃ ಕರ್ಮ ಜಪೋ ಧ್ಯಾನಂ ಜ್ಞಾನಂ ಚೇತ್ಯನುಪೂರ್ವಕಮ್ ॥**

**ಟೀಕು॥** ತದೇವ ಭಜನಂ=ತ್ರಿವಿಧ ತ್ರಿವಿಧವಾಗಿದ್ದ ಆ ಭಜನೆಯೆ, ಪುನಃ=ಮರಳಿ, ತಪಃ=ತಪಸ್ಸೆಂದು, ಕರ್ಮಃ=ಕರ್ಮವೆಂದು, ಜಪಃ=ಜಪವೆಂದು, ಧ್ಯಾನಂ=ಧ್ಯಾನವೆಂದು, ಜ್ಞಾನಂ ಚೇತಿ=ಜ್ಞಾನವೆಂದು, ಅನುಪೂರ್ವಕಂ=ಕ್ರಮವಾಗಿ, ಪಂಚಧಾ=ಐದು ಪ್ರಕಾರದಿಂದೆ, ಸದ್ಭಿಃ=ಸತ್ಪುರುಷರಿಂದೆ, ಕಥ್ಯತೇ=ಹೇಳಲುಪಡುತ್ತಿರ್ದಪುದು. ॥೨೧॥

**ಸೂತ್ರ॥** ಬಳಿಕ ಅವರ ಲಕ್ಷಣಂಗಳನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಶಿವಾರ್ಥೇ ದೇಹಸಂಶೋಷಸ್ತಪಃಕೃಚ್ಛ್ರಾದಿ ನೋ ಮತಮ್ ।**
**ಶಿವಾರ್ಚಾ ಕರ್ಮ ವಿಜ್ಞೇಯಂ ಬಾಹ್ಯಂ ಯಾಗಾದಿ ನೋಚ್ಯತೇ ॥**

**ಜಪಃ ಪಂಚಾಕ್ಷರಾಭ್ಯಾಸಃ ಪ್ರಣವಾಭ್ಯಾಸ ಏವ ವಾ ।**
**ರುದ್ರಾಧ್ಯಾಯಾದಿಕಾಭ್ಯಾಸೋ ನ ವೇದಾಧ್ಯಯನಾದಿಕಮ್ ॥**

**ಧ್ಯಾನಂ ಶಿವಸ್ಯ ರೂಪಾದಿಚಿಂತಾನಾತ್ಮಾದಿಚಿಂತನಮ್ ।**
**ಶಿವಾಗಮಾರ್ಥವಿಜ್ಞಾನಂ ಜ್ಞಾನಂ ನಾನ್ಯಾರ್ಥವೇದನಮ್ ।**
**ಇತಿ ಪಂಚಪ್ರಕಾರೋಽಯಂ ಶಿವಯಜ್ಞಃ ಪ್ರಕೀರ್ತಿತಃ ॥**

**ಟೀಕು॥** ಶಿವಾರ್ಥೇ=ಶಿವಲಿಂಗ ಪ್ರಯೋಜನದಲ್ಲಿ, ದೇಹಸಂಶೋಷಃ=ದೇಹವ ತೊಣಗಿಸುವದೀಗ, ತಪಃ=ತಪಸ್ಸು, ಕೃಚ್ಛ್ರಾದಿ=ಕೃಚ್ಛ್ರಚಾಂದ್ರಾಯಣ ಮೊದಲಾಗುಳ್ಳ ದೇಹಶೋಷಣ ಕರ್ಮವು, ತಪಃ=ತಪಸ್ಸೆಂದು, ನೋ ಮತಂ=ಸಂಮತವಲ್ಲ. ಶಿವಾರ್ಚಾ=ಶಿವಲಿಂಗಪೂಜಾಕ್ರಿಯೆಯೆ, ಕರ್ಮ=ಕರ್ಮವೆಂದು, ವಿಜ್ಞೇಯಂ=ಅರಿಯಲು ಯೋಗ್ಯವು. ಬಾಹ್ಯಂ=ಹೊರಗಾದ, ಯಾಗಾದಿ=ಯಜ್ಞಮೊದಲಾಗುಳ್ಳ ಕರ್ಮ=ಕರ್ಮವು, ನೋಚ್ಯತೇ=ಹೇಳಲುಪಡುತ್ತಿರದು. ಪಂಚಾಕ್ಷರಾಭ್ಯಾಸಃ=ಲಿಂಗಂಗಳಿಗೆ ಬೀಜಾಕ್ಷರವಾದ ಪಂಚಾಕ್ಷರಾಭ್ಯಾಸವು, ಪ್ರಣವಾಭ್ಯಾಸ ಏವವಾ= ಲಿಂಗಂಗಳಿಗೆ ಬೀಜಾಕ್ಷರವಾದ ಪ್ರಣವಾಭ್ಯಾಸವಾಯಿತ್ತಾದೊಡೆಯು, ರುದ್ರಾಧ್ಯಾಯಾಧಿಕಾಭ್ಯಾಸಃ= ಶ್ರೀರುದ್ರ ಪಂಚಬ್ರಹ್ಮ ಮೊದಲಾಗುಳ್ಳ ಶಿವಮಂತ್ರಾಭ್ಯಾಸವೀಗ, ಜಪಃ=ಜಪವು. ವೇದಾಧ್ಯಯನಾದಿಕಂ=ವೇದಾಧ್ಯಯನ ಮೊದಲಾಗುಳ್ಳುದು, ನ ಧ್ಯಾನಂ=ಧ್ಯಾನವಲ್ಲ. ಶಿವಾಗಮಾರ್ಥ ವಿಜ್ಞಾನಂ="ಸರ್ವವೇದೇಷು ಯದ್ ದೃಷ್ಟಂ ತತ್ಸರ್ವಂ ತು ಶಿವಾಗಮೇ। ತ್ರಿಪದಾರ್ಥಂ ಚತುಷ್ಪಾದಂ ಮಹಾತತ್ತ್ವಂ ಜಗತ್ಪತಿಃ।"ಯೆಂದು ಶಿವಾಗಮ ವಾಕ್ಯವುಂಟಾಗಿ ಸರ್ವ ವೇದಾರ್ಥರೂಪವಾಗಿ ತ್ರಿಪದಾರ್ಥ ಚತುಷ್ಪಾದವುಳ್ಳ ಶಿವಾಗಮಾರ್ಥವೀಗ, ಜ್ಞಾನಂ=ಜ್ಞಾನವು. ಅನ್ಯಾರ್ಥವೇದನಂ=ವೇದಾ ಗಮಂಗಳಿಂದೆ ಅನ್ಯವಾದ ಶಾಸ್ತ್ರಾರ್ಥ ಜ್ಞಾನವು, ನ ಜ್ಞಾನಂ=ಜ್ಞಾನವಲ್ಲ. ಇತಿ=ಈ ಪ್ರಕಾರದಿಂದೆ ಅಯಂ ಶಿವಯಜ್ಞಃ=ಈ ಶಿವಯಜ್ಞವು, ಪಂಚಪ್ರಕಾರಃ=ಅಯಿದು ಪ್ರಕಾರವುಳ್ಳುದಾಗಿ, ಪ್ರಕೀರ್ತಿತಃ=ಹೇಳಲುಪಟ್ಟಿತ್ತು. ॥೨೪॥

**ಸೂತ್ರ॥** ಬಳಿಕ ಈ ಪಂಚಯಜ್ಞವುಳ್ಳವನೀಗ ಶಿವಭಕ್ತನೆಂದು ಹೇಳುತ್ತಿರ್ದಪಂ.

ಗ್ರಂಥ॥ **ಅನೇನ ಪಂಚಯಜ್ಞೇನ ಯಃ ಪೂಜಯತಿ ಶಂಕರಮ್ ।**
**ಭಕ್ತ್ಯಾ ಪರಮಯಾ ಯುಕ್ತಸ್ಸ ವೈ ಭಕ್ತ ಇತೀರಿತಃ ॥**

**ಟೀಕು॥** ಯಃ=ಆವನಾನೊಬ್ಬಾತನು, ಅನೇನ ಪಂಚಯಜ್ಞೇನ=ಈ ಪಂಚಯಜ್ಞದಿಂದೆ ಶಂಕರಂ=ಪರಮೇಶ್ವರನನು, ಪೂಜಯತಿ=ಪೂಜಿಸುತ್ತಿರ್ದಪನು. ಪರಮಯಾ=ದೊಡ್ಡಿತ್ತಾದ,

ಭಕ್ತ್ಯಾ=ಶಿವಭಕ್ತಿಯೊಡನೆ, ಯುಕ್ತಃ=ಕೂಡಿರ್ದ್ದ, ಸ ವೈ=ಆತನೀಗ, ಭಕ್ತ ಇತಿ=ಭಕ್ತನೆಂದು, ಈರಿತಃ=ಹೇಳಲುಪಟ್ಟನು. ॥೨೫॥

**ಸೂತ್ರ॥** ಬಳಿಕ ಶಿವಭಕ್ತರ ಪೂಜಾವಮನ್ನಣೆಗಳ ಫಲವನು ಹೇಳುತ್ತಿರ್ದ್ದಪಂ.

**ಗ್ರಂಥ॥** **ಪೂಜನಾಚ್ಛಿವಭಕ್ತಸ್ಯ ಪುಣ್ಯಾ ಗತಿರವಾಪ್ಯತೇ ।**
**ಅವಮಾನಾನ್ಮಹಾಘೋರೋ ನರಕೋ ನಾತ್ರ ಸಂಶಯಃ ॥**

**ಟೀಕು॥** ಶಿವಭಕ್ತಸ್ಯ=ಶಿವಭಕ್ತನ, ಪೂಜನಾತ್=ಪೂಜಿಸುವುದರದೆಸೆಯಿಂದೆ, ಪುಣ್ಯಾ ಗತಿಃ= ಪುಣ್ಯಗತಿಯು, ಅವಾಪ್ಯತೇ=ಪಡೆಯಲುಪಡುತ್ತಿರ್ದ್ದಪುದು. ಶಿವಭಕ್ತಸ್ಯ=ಶಿವಭಕ್ತನ, ಅವಮಾನಾತ್= ಉದಾಸೀನದದೆಸೆಯಿಂದೆ, ಮಹಾಘೋರಃ=ಮಹಾಭಯಂಕರವಾಗಿರ್ದ್ದ, ನರಕಃ=ನರಕವು, ಅತ್ರ=ಇಲ್ಲಿ, ನ ಸಂಶಯಃ=ಸಂದೇಹವಿಲ್ಲ. ॥೨೬॥

**ಸೂತ್ರ॥** ಬಳಿಕ ಶಿವಭಕ್ತನು ಶಿವಭಕ್ತರಲ್ಲದವರ ಕೂಡೆ ಇರಲಾಗದೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** **ಶಿವಭಕ್ತೋ ಮಹಾತೇಜಾಃ ಶಿವಭಕ್ತಿಪರಾಙ್ಮುಖಾನ್ ।**
**ನ ಸ್ಪೃಶೇನ್ನೈವ ವೀಕ್ಷೇತ ನ ತೈಸ್ಸಹ ವಸೇತ್ಕ್ವಚಿತ್ ॥**

**ಟೀಕು॥** ಮಹಾತೇಜಾಃ=ಮಹಾತೇಜಸ್ವಿಯಾಗಿರ್ದ್ದ, ಶಿವಭಕ್ತಃ=ಶಿವಭಕ್ತನು, ಶಿವಭಕ್ತಿ ಪರಾಙ್ಮುಖಾನ್=ಶಿವಭಕ್ತಿಗೆ ಅಡ್ಡಲಾದ ಮುಖವುಳ್ಳವರುಗಳನು, ನ ವೀಕ್ಷೇತ=ನೋಡಲಾಗದು. ನ ಸ್ಪೃಶೇತ್=ಮುಟ್ಟಲಾಗದು. ತೈಃ=ಅವರೊಡನೆ, ಸಹ=ಕೂಡಿ, ಕ್ವಚಿತ್=ಒಂದೆಡೆಯಲ್ಲಿಯು, ನ ವಸೇದೇವ=ಇರಲಾಗದು. ॥೨೭॥

**ಸೂತ್ರ॥** ಬಳಿಕ ಶಿವಭಕ್ತನು ಶಿವಭಕ್ತರನೆ ಪೂಜಿಸುವದೆಂದು ವಿಧಿಸುತ್ತಿರ್ದ್ದಪಂ.

**ಗ್ರಂಥ॥** **ಯದಾ ದೀಕ್ಷಾಪ್ರವೇಶಸ್ಸ್ಯಾಲ್ಲಿಂಗಧಾರಣಪೂರ್ವಕಮ್ ।**
**ತದಾಪ್ರಭೃತಿ ಭಕ್ತೋಽಸೌ ಪೂಜಯೇತ್ಸ್ವಾಗಮಸ್ಥಿತಾನ್ ॥**

**ಟೀಕು॥** ಯದಾ=ಆವಕಾಲದಲ್ಲಿ, ಲಿಂಗಧಾರಣಪೂರ್ವಕಂ=ಶಿವಲಿಂಗಧಾರಣೆಯೇ ಮೊದಲಾಗುಳ್ಳ, ದೀಕ್ಷಾಪ್ರವೇಶಃ=ದೀಕ್ಷಾತ್ರಯ ಪ್ರವೇಶವು, ಸ್ಯಾತ್=ಅಹುದು. ತದಾ ಪ್ರಭೃತಿ=ಅಂದು ತೊಡಗಿ, ಭಕ್ತಃ=ಶಿವಭಕ್ತನಾಗಿರ್ದ್ದ, ಅಸೌ=ಈತನು, ಸ್ವಾಗಮಸ್ಥಿತಾನ್=ತನ್ನೋಪಾದಿಯಲ್ಲಿ ಶಿವಾಗಮೋಕ್ತವಾದ ಶಿವಾಚಾರದಲ್ಲಿ ಇರುತ್ತಿರ್ದ್ದ ಶಿವಭಕ್ತರನು, ಪೂಜಯೇತ್=ಪೂಜಿಸುವುದು. ॥೨೮॥

**ಸೂತ್ರ॥** ಬಳಿಕ ಶಿವಭಕ್ತಾಚಾರಭೇದವನು ವಿಂಶತಿ ಸೂತ್ರಂಗಳಿಂದೆ ಹೇಳುತ್ತಿರ್ದ್ಪಪಂ.

ಗ್ರಂಥ॥ **ಸ್ವಮಾರ್ಗನಿರತಾಚಾರ್ಯೈಃ ಸಹವಾಸಂ ಸಮಾಚರೇತ್ ।**
**ತೇಷಾಂ ಗೃಹೇಷು ಭುಂಜೀತ ನೇತರೇಷಾಂ ಕದಾಚನ ॥**

**ಟೀಕು॥** ಸಃ=ಆ ಶಿವಭಕ್ತನು, ಸ್ವಮಾರ್ಗನಿರತಾಚಾರ್ಯೈಃ=ತನ್ನ ಮಾರ್ಗದಲ್ಲಿ ತತ್ಪರನಾದ ಸದಾಚಾರವುಳ್ಳ ಶಿವಭಕ್ತರೊಡನೆ, ಸಹವಾಸಂ=ಕೂಡಿರುವತಸವನು. ಸಮಾಚರೇತ್=ಮಾಡುವುದು. ತೇಷಾಂ= ಅವರುಗಳ, ಗೃಹೇಷು=ಮನೆಗಳಲ್ಲಿ, ಭುಂಜೀತ=ಊಟಮಾಡುವುದು. ಇತರೇಷಾಂ=ಉಳಿದವರ ಗೃಹೇಷು=ಮನೆಗಳಲ್ಲಿ, ಕದಾಚನ=ಒಂದು ವೇಳೆಯು, ನ ಭುಂಜೀತ=ಉಣ್ಣಲಾಗದು. ॥೧೯॥

ಗ್ರಂಥ॥ **ಸ್ವಮಾರ್ಗಾಚಾರವಿಮುಖೈರ್ಭವಿಭಿಃ ಪ್ರಾಕೃತಾತ್ಮಭಿಃ ।**
**ಪ್ರೇಷಿತಂ ಸಕಲಂ ದ್ರವ್ಯಮಾತ್ಮಲೀನಮಪಿ ತ್ಯಜೇತ್ ॥**

**ಟೀಕು॥** ಸ್ವಮಾರ್ಗಾಚಾರವಿಮುಖೈಃ=ತನ್ನ ಶಿವಭಕ್ತಿಮಾರ್ಗಾಚಾರಕ್ಕೆ ಅಡ್ಡಲಾದ ಮುಖವುಳ್ಳ, ಪ್ರಾಕೃತಾತ್ಮಭಿಃ=ಪ್ರಾಕೃತಸ್ವರೂಪವುಳ್ಳ, ಭವಿಭಿಃ=ಭವಿಗಳಿಂದೆ, ಪ್ರೇಷಿತಂ=ಕಳುಹಲುಪಟ್ಟ, ಸಕಲಂ ದ್ರವ್ಯಂ=ಸಮಸ್ತದ್ರವ್ಯವನು, ಆತ್ಮಲೀನಮಪಿ=ತನ್ನಧೀನವಾಗಿದ್ದುದನಾಯಿತ್ತಾದೊಡೆಯು, ತ್ಯಜೇತ್=ಬಿಡುವುದು. ॥೨೦॥

ಗ್ರಂಥ॥ **ನಾರ್ಚಯೇದನ್ಯದೇವಾಂಸ್ತು ನ ಸ್ಮರೇನ್ನ ಚ ಕೀರ್ತಯೇತ್ ।**
**ನ ತನ್ನಿವೇದ್ಯಮಶ್ನೀಯಾಚ್ಛಿವಭಕ್ತೋ ದೃಢವ್ರತಃ ॥**

**ಟೀಕು॥** ದೃಢವ್ರತಃ=ದೃಢವಾದ ಶಿವವ್ರತವುಳ್ಳ, ಶಿವಭಕ್ತಃ=ಶಿವಭಕ್ತನು, ಅನ್ಯದೇವಾಂಸ್ತು= ವಿಷ್ಣ್ವಾದ್ಯನ್ಯದೇವತೆಗಳನಾಯಿತ್ತಾದಡೆ, ನ ಸ್ಮರೇತ್=ನೆನೆಯಲಾಗದು. ನ ಚ ಕೀರ್ತಯೇತ್= ಕೊಂಡಾಡಲಾಗದು. ನಾರ್ಚಯೇತ್=ಪೂಜಿಸಲಾಗದು. ತನ್ನಿವೇದ್ಯಂ=ಆ ದೇವತಾಂತರಂಗಳಿಗೆ ಸಂದ ಪದಾರ್ಥವನು, ನಾಶ್ನೀಯಾತ್=ಭಕ್ಷಿಸಲಾಗದು. ॥೨೧॥

ಗ್ರಂಥ॥ **ಯದ್ಗೃಹೇಷ್ವನ್ಯದೇವೋಽಸ್ತಿ ತದ್ಗೃಹಾಣಿ ಪರಿತ್ಯಜೇತ್ ।**
**ನಾನ್ಯದೇವಾರ್ಚಕಾನ್ಮರ್ತ್ಯಾನ್ಪೂಜಾಕಾಲೇ ನಿರೀಕ್ಷಯೇತ್ ॥**

**ಟೀಕು॥** ಯದ್ಗೃಹೇಷು=ಆವ ಗೃಹಂಗಳಲ್ಲಿ, ಅನ್ಯದೇವಃ=ಶಿವನದೆಸೆಯಿಂದೆ ಅನ್ಯವಾದ ದೇವತೆಯು, ಅಸ್ತಿ=ಉಂಟು, ತದ್ಗೃಹಾಣಿ=ಆ ಗೃಹಂಗಳನು, ಪರಿತ್ಯಜೇತ್=ಬಿಡುವುದು. ಪೂಜಾಕಾಲೇ= ಶಿವಲಿಂಗಪೂಜಾಸಮಯದಲ್ಲಿ, ಅನ್ಯದೇವಾರ್ಚಕಾನ್ ಮರ್ತ್ಯಾನ್=ಅನ್ಯದೇವ ಪೂಜಕರಾದ

ಮನುಷ್ಯರನು, ನ ನಿರೀಕ್ಷಯೇತ್=ನೋಡಲಾಗದು. ||೩೧||

ಗ್ರಂಥ|| ಸದಾ ಶಿವೈಕನಿಷ್ಠಾನಾಂ ವೀರಶೈವಾಧ್ವವರ್ತಿನಾಮ್ ।
ನ ಹಿ ಸ್ಥಾವರಲಿಂಗಾನಾಂ ನಿರ್ಮಾಲ್ಯಾದ್ಯುಪಯುಜ್ಯತೇ ॥

**ಟೀಕು||** ಸದಾ=ಎಲ್ಲಾ ಕಾಲದಲ್ಲಿಯು, ಶಿವೈಕನಿಷ್ಠಾನಾಂ=ಶಿವಲಿಂಗವೊಂದರಲ್ಲಿಯೆ ತತ್ಪರರಾಗಿ, ವೀರಶೈವಾಧ್ವವರ್ತಿನಾಂ=ವೀರಶೈವಮಾರ್ಗದಲ್ಲಿ ವರ್ತಿಸುತ್ತಿರ್ದ್ದ ಶಿವಭಕ್ತರಿಗೆ, ಸ್ಥಾವರಲಿಂಗಾನಾಂ= ದೇವರ್ಷಿಪ್ರತಿಷ್ಠಿತಂಗಳಾದ ಸ್ಥಾವರಲಿಂಗಂಗಳ, ನಿರ್ಮಾಲ್ಯಾದಿ=ನಿರ್ಮಾಲ್ಯಾದಿ ಪುಷ್ಪ ಮೊದಲಾಗುಳ್ಳ ಪ್ರಸಾದದ್ರವ್ಯವು, ನೋಪಯುಜ್ಯತೇ=ಯುಕ್ತವಾಗುತ್ತಿರದು. ಹಿ=ಪ್ರಸಿದ್ಧವು.

**ತಾತ್ಪರ್ಯ||** ವೀರಶೈವಭಕ್ತರಿಗೆ ಸ್ಥಾವರಲಿಂಗಂಗಳ ಪ್ರಸಾದವು ಯೋಗ್ಯವಲ್ಲವೆಂಬುದರ್ಥ. ||೩೩||

**ಸೂತ್ರ||** ಬಳಿಕ ಈ ಪ್ರಕಾರದಿಂದೆ ಸ್ಥಾವರಲಿಂಗಪ್ರಸಾದವು ವೀರಶೈವಭಕ್ತನಿಗೆ ಯೋಗ್ಯವಲ್ಲವೆಂದರೆ ಸ್ಥಾವರಲಿಂಗಕ್ಕೆ ಬಂದ ವಿಘ್ನವನು ವೀರಶೈವಭಕ್ತನು ನೋಡಿ ಉದಾಸೀನವ ಮಾಡಲಾಗದು. ಪಾರ್ವತ್ಯಾಚಾರವನಾದರು ಮಾಡಿ ಶಿವಸಮಯೋದ್ಧಾರವ ಮಾಡುವುದೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| **ಯತ್ರ ಸ್ಥಾವರಲಿಂಗಾನಾಮಪಾಯಃ ಪರಿವರ್ತತೇ ।
ಅಥವಾ ಶಿವಭಕ್ತಾನಾಂ ಶಿವಲಾಂಛನಧಾರಿಣಾಮ್ ॥**

**ತತ್ರ ಪ್ರಾಣಾನ್ವಿಹಾಯಾಽಪಿ ಪರಿಹಾರಂ ಸಮಾಚರೇತ್ ।
ಶಿವಾರ್ಥಂ ಮುಕ್ತಜೀವಶ್ಚೇಚ್ಛಿವಸಾಯುಜ್ಯಮಾಪ್ನುಯಾತ್ ॥**

**ಟೀಕು||** ಯತ್ರ=ಆವೆಡೆಯಲ್ಲಿ, ಸ್ಥಾವರಲಿಂಗಾನಾಂ=ಸ್ಥಾವರಲಿಂಗಂಗಳಿಗೆ, ಅಪಾಯಃ= ವಿಘ್ನವು, ಪರಿವರ್ತತೇ=ವರ್ತಿಸುತ್ತಿರ್ದ್ದಪುದು. ಅಥವಾ=ಆಹಗಲ್ಲವೆ, ಶಿವಲಾಂಛನಧಾರಿಣಾಂ=ಗಜಾಜಿನ ಗಂಗಾಕಪಾಲಕಂಕಾಳದಗ್ಧಕಾಮಕಾಲಪುರ ಭಸ್ಮನಿ ಶುಭಕಂಥಾ ಕಮಂಡಲು ಭಿಕ್ಷಾಪಾತ್ರದಂಡ ಭಸ್ಮ ಘಂಟಿಕಾ ರೂಪವಾದ ಶಿವಲಾಂಛನವನು ಧರಿಸಿದ ಜಂಗಮದೇವರುಗಳಿಗೆ, ಶಿವಭಕ್ತಾನಾಂ=ನವವಿಧ ಶಿವಭಕ್ತಿಯುಳ್ಳ ಭಕ್ತರಿಗೆ, ಅಪಾಯಃ=ವಿಘ್ನವು, ಯತ್ರ=ಆವೆಡೆಯಲ್ಲಿ, ಪರಿವರ್ತತೇ=ವರ್ತಿಸುತ್ತಿರ್ದ್ದಪುದು, ತತ್ರ=ಅಲ್ಲಿ, ಪ್ರಾಣಾನ್=ಪ್ರಾಣಂಗಳನು, ವಿಹಾಯಾಽಪಿ=ಬಿಟ್ಟಾಯಿತ್ತಾದೊಡೆಯು, ಪರಿಹಾರಂ=ಪರಿಹಾರವನು, ಸಮಾಚರೇತ್=ಮಾಡುವದು. ಶಿವಾರ್ಥಮಪಿ=ಶಿವಾರ್ಥವಾಗಿ, ಮುಕ್ತಜೀವಶ್ಚೇತ್=ಬಿಡಲುಪಟ್ಟ ಪ್ರಾಣವುಳ್ಳಾತನಾದಡೆ, ಶಿವಸಾಯುಜ್ಯಂ=ಶಿವಸಾಯುಜ್ಯವನು, ಆಪ್ನುಯಾತ್=ಎಯ್ದುವನು. ||೩೪||

**ಸೂತ್ರ॥** ಬಳಿಕ ವೀರಭದ್ರಾಚಾರ ಬಸವೇಶ್ವರಾಚಾರವನು ಸೂಚಿಸುತ್ತ ಶಿವಭಕ್ತಾಚಾರ ಭೇದವನು ಹೇಳುತ್ತಿರ್ದಪಂ.

**ಗ್ರಂಥ॥** **ಶಿವನಿಂದಾಕರಂ ದೃಷ್ಟ್ವಾ ಘಾತಯೇದಥವಾ ಶಪೇತ್ ।**
**ಸ್ಥಾನಂ ವಾ ತತ್ಪರಿತ್ಯಜ್ಯ ಗಚ್ಛೇದ್ಯದ್ಯಕ್ಷಮೋ ಭವೇತ್ ॥**

**ಟೀಕು॥** ಶಿವನಿಂದಾಕರಂ=ಶಿವಲಿಂಗನಿಂದೆಯನು ಮಾಡುವ ಶಿವದ್ರೋಹಿಯನು, ದೃಷ್ಟ್ವಾ= ಕಂಡು, ಘಾತಯೇತ್=ಕೊಲುವುದು. ಅಥವಾ=ಅಹಗಲ್ಲವೆ, ಶಪೇತ್=ಶಪಿಸುವುದು, ಅಕ್ಷಮಃ=ಕೊಲುವದಕ್ಕೆ ಬಯಿವುದಕ್ಕೆ ಸಮರ್ಥನಲ್ಲದೆಯಿದ್ದಾತನು, ಯದಿ ಭವೇತ್=ಎತ್ತಲಾನೂ ಅಹನೆ, ತರ್ಹಿ= ಅಹಗಾಯಿತ್ತಾದೊಡೆ, ತತ್ ಸ್ಥಾನಂ ವಾ=ಆ ಸ್ಥಾನವಾಯಿತ್ತಾದೊಡೆ, ಪರಿತ್ಯಜ್ಯ=ಬಿಟ್ಟು, ಗಚ್ಛೇತ್=ಕಿವಿಯ ಮುಚ್ಚಿಕೊಂಡು ಹೋಗುವುದು. ॥೩೬॥

**ಗ್ರಂಥ॥** **ಯತ್ರ ಚಾಚಾರನಿಂದಾಽಸ್ತಿ ಕದಾಚಿತ್ತತ್ರ ನ ವ್ರಜೇತ್ ।**
**ಯದ್ಗೃಹೇ ಶಿವನಿಂದಾಽಸ್ತಿ ತದ್ಗೃಹಾಣಿ ಪರಿತ್ಯಜೇತ್ ॥**

**ಟೀಕು॥** ಯತ್ರ ಚ=ಆವೆಡೆಯಲ್ಲಿ, ಆಚಾರನಿಂದಾ=ಶಿವಾಚಾರನಿಂದೆಯು, ಅಸ್ತಿ=ಉಂಟು ತತ್ರ=ಅಲ್ಲಿಗೆ, ಕದಾಚಿತ್=ಒಂದುವೇಳೆಯು, ನ ವ್ರಜೇತ್=ಹೋಗಲಾಗದು. ಯದ್ಗೃಹೇ=ಆವವನ ಮನೆಯಲ್ಲಿ, ಶಿವನಿಂದಾಽಸ್ತಿ=ಶಿವನಿಂದೆಯು ಉಂಟು, ತದ್ಗೃಹಾಣಿ=ಆತನ ಮನೆಗಳನು, ಪರಿತ್ಯಜೇತ್=ಬಿಡುವುದು. ॥೩೭॥

**ಗ್ರಂಥ॥** **ಯಸ್ಸರ್ವಭೂತಾಧಿಪತಿಂ ವಿಶ್ವೇಶಾನಂ ವಿನಿಂದತಿ ।**
**ನ ತಸ್ಯ ನಿಷ್ಕೃತಿಶ್ಶಕ್ಯಾ ಕರ್ತುಂ ವರ್ಷಶತೈರಪಿ ॥**

**ಟೀಕು॥** ಯಃ=ಆವನಾನೊಬ್ಬನು, ಭೂತಾಧಿಪತಿಂ="ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವ ಭೂತಾನಾಮ್" ಯೆಂದು ಶ್ರುತಿಯುಂಟಾಗಿ ಸಮಸ್ತಪ್ರಾಣಿಗಳಿಗೆ ಒಡೆಯನಾಗಿದ್ದ, ವಿಶ್ವೇಶಾನಂ=ಸರ್ವೇಶ್ವರನನು, ವಿನಿಂದತಿ=ನಿಂದಿಸುತ್ತಿರ್ದಪನು, ತಸ್ಯ=ಆತನಿಗೆ, ನಿಷ್ಕೃತಿಃ=ಪ್ರಾಯಶ್ಚಿತ್ತವು, ಕರ್ತುಂ=ಮಾಡಲು, ವರ್ಷಶತೈರಪಿ=ಶತವರ್ಷಗಳಿಂದಲಾಯಿತ್ತಾದೊಡೆಯು, ನ ಶಕ್ಯಾ=ಸಮರ್ಥವಲ್ಲ. ॥೩೮॥

**ಗ್ರಂಥ॥** **ಶಿವಪೂಜಾಪರೋ ಭೂತ್ವಾ ಪೂರ್ವಕರ್ಮ ವಿವರ್ಜಯೇತ್ ।**
**ಅಥವಾ ಪೂರ್ವಕರ್ಮಸ್ಯಾತ್ಸಾಪೂಜಾ ನಿಷ್ಫಲಾ ಭವೇತ್ ॥**

**ಟೀಕು॥** ಶಿವಪೂಜಾಪರೋ ಭೂತ್ವಾ=ಶಿವಲಿಂಗಪೂಜೆಯಲ್ಲಿ ತತ್ಪರನಾಗಿ, ಪೂರ್ವಕರ್ಮ=ಪೂರ್ವಕ್ರಿಯೆಯನು, ವಿವರ್ಜಯೇತ್=ಬಿಡುವುದು. ಅಥವಾ=ಎತ್ತಲಾನೂ, ಪೂರ್ವಕರ್ಮ=ಪೂರ್ವಕ್ರಿಯುಯು, ಸ್ಯಾತ್=ಅಪುದೆ, ಸಾ ಪೂಜಾ=ಆ ಶಿವಲಿಂಗಪೂಜೆಯು, ನಿಷ್ಫಲಾ=ನಿಷ್ಫಲವಾಗಿದ್ದ ಅದು, ಭವೇತ್=ಅಹುದು. ॥೩೯॥

**ಗ್ರಂಥ॥** **ಉತ್ತಮಾಂ ವೃತ್ತಿಮಾಶ್ರಿತ್ಯ ನೀಚಾಂ ವೃತ್ತಿಂ ಸಮಾಶ್ರಿತಃ ।**
**ಆರೂಢಪತಿತೋ ಜ್ಞೇಯಃ ಸರ್ವಕರ್ಮಬಹಿಷ್ಕೃತಃ ॥**

**ಟೀಕು॥** ಉತ್ತಮಾಂ ವೃತ್ತಿಂ=ಶ್ರೇಷ್ಠವರ್ತನವನು, ಆಶ್ರಿತ್ಯ=ಆಶ್ರೈಸಿ, ನೀಚಾಂ ವೃತ್ತಿಂ=ನೀಚ ವರ್ತನವನು, ಸಮಾಶ್ರಿತಃ=ಆಶ್ರಯಿಸಿದ್ದಾತನು, ಸರ್ವಕರ್ಮ ಬಹಿಷ್ಕೃತಃ=ಸಮಸ್ತ ಸತ್ಕರ್ಮಂಗಳಿಗೆ ಹೊರಗಾಗಿ ಮಾಡಲುಪಟ್ಟ, ಆರೂಢಪತಿತಃ=ಆರೂಢಪತಿತನೆಂದು, ಜ್ಞೇಯಃ=ಅರಿಯಲು ಯೋಗ್ಯವು. ॥೪೦॥

**ಗ್ರಂಥ॥** **ಪಂಚಾಕ್ಷರೋಪದೇಶೀ ಚ ನರಸ್ತುತಿಕರೋ ಯದಿ ।**
**ಸೋಽಲಿಂಗೀ ಸ ದುರಾಚಾರೀ ಕುಕವಿಸ್ಸ ತು ವಿಶ್ರುತಃ ॥**

**ಟೀಕು॥** ಪಂಚಾಕ್ಷರೋಪದೇಶೀ ಚ = ಪ್ರಣವಪಂಚಾಕ್ಷರೋಪದೇಶವುಳ್ಳ,ಯಃ=ಆವನಾನೊಬ್ಬ ಶಿವಭಕ್ತನು, ನರಸ್ತುತಿಕರೋ ಯದಿ=ಎತ್ತಲಾನು ನರಸ್ತವವ ಮಾಡುವವನೆ, ಸಃ=ಆತನು, ಅಲಿಂಗೀ=ಲಿಂಗರಹಿತನು, ಸಃ=ಆತನು, ದುರಾಚಾರೀ=ದುರಾಚಾರಿಯು, ಸಃ=ಆತನು, ಕುಕವಿಃ=ಕುತ್ಸಿತ ಕವಿಯು, ಸ ತು=ಆತನಾಯಿತ್ತಾದೊಡೆ, ವಿಶ್ರುತಃ=ತೊಲಗಲುಪಟ್ಟ ಶಾಸ್ತ್ರವುಳ್ಳ ಆತನು. ॥೪೧॥

**ಗ್ರಂಥ॥** **ಚರ್ಮಪಾತ್ರೇ ಜಲಂ ತೈಲಂ ನ ಗ್ರಾಹ್ಯಂ ಭಕ್ತಿತತ್ಪರೈಃ ।**
**ಗೃಹ್ಯತೇ ಯದಿ ಭಕ್ತೇನ ರೌರವಂ ನರಕಂ ವ್ರಜೇತ್ ॥**

**ಟೀಕು॥** ಚರ್ಮಪಾತ್ರೇ=ಚರ್ಮಪಾತ್ರೆಯಲ್ಲಿಯ, ಜಲಂ=ಉದಕವು, ತೈಲಂ=ತೈಲವು, ಭಕ್ತಿತತ್ಪರೈಃ=ಶಿವಭಕ್ತಿಯಲ್ಲಿ ತತ್ಪರರಾದವರಿಂದೆ, ನ ಗ್ರಾಹ್ಯಂ=ಗ್ರಹಿಸಲು ಯೋಗ್ಯವಲ್ಲ. ಭಕ್ತೇನ=ಶಿವಭಕ್ತನಿಂದೆ, ಗೃಹ್ಯತೇ ಯದಿ=ಎತ್ತಲಾನು ಗ್ರಹಿಸಲುಪಡುತ್ತಿರ್ದಪುದೆ, ತರ್ಹಿ=ಅಹಗಾದಡೆ, ಸಃ=ಆತನು, ರೌರವಂ ನರಕಂ=ರೌರವ ನರಕವನು, ವ್ರಜೇತ್=ಎಯ್ದುವನು. ॥೪೨॥

**ಸೂತ್ರ॥** ಬಳಿಕ ಶಿವಭಕ್ತನಿಗೆ ಮಾಸಜನ್ಮಮೃತಕುಲೋದ್ದಿಷ್ಟ ರೂಪವಾದ ಪಂಚಸೂತಕವಿಲ್ಲವೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ನ ತಸ್ಯ ಸೂತಕಂ ಕಿಂಚಿತ್ಪ್ರಾಣಲಿಂಗಾಂಗಸಂಗಿನಃ ।**
**ಜನ್ಮನೋತ್ಥಂ ಮೃತೋತ್ಥಂ ಚ ವಿದ್ಯತೇ ಪರಮಾರ್ಥತಃ ॥**

**ಟೀಕು||** ಪ್ರಾಣಲಿಂಗಾಂಗಸಂಗಿನಃ=ಪ್ರಾಣಲಿಂಗ ಸಂಬಂಧವುಳ್ಳ, ತಸ್ಯ=ಆ ಶಿವಭಕ್ತನಿಗೆ, ಜನ್ಮೋತ್ಥಂ=ಜನನದಿಂದೆ ಹುಟ್ಟಿದ, ಮೃತೋತ್ಥಂ ಚ=ಮರಣದಿಂದೆ ಹುಟ್ಟಿದ, ಕಿಂಚಿತ್ ಸೂತಕಂ=ಉಳಿದ ಕುಲೋದ್ದಿಷ್ಟಾದಿ ಸೂತಕವು, ಪರಮಾರ್ಥತಃ=ಯಥಾರ್ಥವಾಗಿ, ನ ವಿದ್ಯತೇ=ಉಂಟಾಗುತ್ತಿರದು. ||೪೩||

**ಗ್ರಂಥ||** **ಲಿಂಗಾರ್ಚನರತಾಯಾಶ್ಚ ಋತೌ ನಾರ್ಯಾ ನ ಸೂತಕಮ್ ।**
**ತಥಾ ಪ್ರಸೂತಿಕಾಯಾಶ್ಚ ಸೂತಕಂ ನೈವ ವಿದ್ಯತೇ ॥**

**ಟೀಕು||** ಲಿಂಗಾರ್ಚನರತಾಯಾಶ್ಚ=ಶಿವಲಿಂಗಪೂಜೆಯಲ್ಲಿ ತತ್ಪರೆಯಾದ, ನಾರ್ಯಾಃ=ಸ್ತ್ರೀಗೆ, ಋತೌ ಸೂತಕಂ=ಮಾಸಸೂತಕವು, ನ ವಿದ್ಯತೇ=ಉಂಟಾಗುತ್ತಿರದು. ತಥಾ=ಹಾಗೆಯೇ, ಪ್ರಸೂತಿಕಾಯಾಶ್ಚ=ಹೆತ್ತಿರ್ದ್ದ ಅವಳಿಗು, ಸೂತಕಂ=ಜನನಸೂತಕವು, ನೈವ ವಿದ್ಯತೇ=ಉಂಟಾಗುತ್ತಿರದೆ? ಉಂಟಾಗುತ್ತಿರದು. ||೪೪||

**ಗ್ರಂಥ||** **ಗೃಹೇ ಯಸ್ಮಿನ್ ಪ್ರಸೂತಾ ಸ್ತ್ರೀ ಸೂತಕಂ ನಾತ್ರ ವಿದ್ಯತೇ ।**
**ಶಿವಪಾದಾಂಬುಸಂಸ್ಪರ್ಶಾತ್ಸರ್ವಪಾಪಂ ಪ್ರಣಶ್ಯತಿ ॥**

**ಟೀಕು||** ಯಸ್ಮಿನ್ ಗೃಹೇ=ಆವ ಗೃಹದಲ್ಲಿ, ಸ್ತ್ರೀ=ಸ್ತ್ರೀಯು, ಪ್ರಸೂತಾ=ಹೆತ್ತಳು, ಅತ್ರ=ಈ ಗೃಹದಲ್ಲಿ, ಸೂತಕಂ=ಸೂತಕವು, ನ ವಿದ್ಯತೇ=ಉಂಟಾಗುತ್ತಿರದು. ಏನು ಕಾರಣವೆಂದಡೆ, ಶಿವಪಾದಾಂಬು ಸಂಸ್ಪರ್ಶಾತ್=ಶಿವಲಿಂಗಪಾದೋದಕವನು ಸೋಂಕುವದರದೆಸೆಯಿಂದೆ, ಸರ್ವಪಾಪಂ=ಸಮಸ್ತಸೂತಕದಿಂದ ಹುಟ್ಟಿದ ಪಾಪವು, ಪ್ರಣಶ್ಯತಿ=ಕೆಡುತ್ತಿರ್ದ್ದಪುದು.

**ತಾತ್ಪರ್ಯ||** "ಲಿಂಗಾರ್ಚನರತಾ ನಾರೀ ಸೂತಕೀ ತು ರಜಸ್ವಲಾ।
ರವಿರಗ್ನಿರ್ಯಥಾ ವಾಯುಸ್ತದ್ವತ್ಕೋಟಿಶುಚಿರ್ಭವೇತ್"|| ಯೆಂಬ ಶಿವಾಗಮವಾಕ್ಯ ಉಂಟಾಗಿ ಶಿವಭಕ್ತರಿಗೆ ಆವ ಸೂತಕವು ಇಲ್ಲವೆಂಬುದರ್ಥ. ||೪೫||

**ಸೂತ್ರ||** ಬಳಿಕ ಶಿವಭಕ್ತನು ಶಿವಕ್ಷೇತ್ರ ತೀರ್ಥಯಾತ್ರೆಯನು ಮಾಡಿ ತೀರ್ಥಯಾತ್ರೆಗೆ ಬರುವವರಿಗೆ ದಾರಿಯಲ್ಲಿ ಅನ್ನೋದಕದಾನವ ಮಾಡುವುದೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಶಿವಸ್ಥಾನಾನಿ ತೀರ್ಥಾನಿ ವಿಶಿಷ್ಟಾನಿ ಶಿವಾರ್ಚಕಃ ।**
**ಶಿವಯಾತ್ರೋತ್ಸವಂ ನಿತ್ಯಂ ಸೇವೇತ ಪರಯಾ ಮುದಾ ॥**

**ಟೀಕು||** ಶಿವಾರ್ಚಕಃ=ಶಿವಲಿಂಗಪೂಜಕನಾದ ಶಿವಭಕ್ತನು, ವಿಶಿಷ್ಟಾನಿಶಿವ ಸ್ಥಾನಾನಿ=ಶ್ರೀಪರ್ವತಾದಿ

ಶಿವಸ್ಥಾನಂಗಳನು, ತೀರ್ಥಾನಿ=ತ್ರಿಮುಕುಟಾದಿ ತೀರ್ಥಂಗಳನು, ಶಿವಯಾತ್ರೋತ್ಸವಂ= ಶಿವಯಾತ್ರೆಗಳಲ್ಲಿಯ ಉತ್ಸಾಹವನು, ನಿತ್ಯಂ=ಆವಾಗವು, ಪರಯಾ ಮುದಾ=ಮಹಾಸಂತೋಷದಿಂದೆ, ಸೇವೇತ=ಸೇವಿಸುವುದು. ||೪೬||

**ಗ್ರಂಥ||** **ಶಿವಕ್ಷೇತ್ರೋತ್ಸವಮಹಾಯಾತ್ರಾದರ್ಶನಕಾಂಕ್ಷಿಣಾಮ್ ।**
**ಮಾರ್ಗೇಽನ್ನಪಾನದಾನಂ ಚ ಕುರ್ಯಾನ್ಮಾಹೇಶ್ವರೋ ಜನಃ ॥**

**ಟೀಕು||** ಮಾಹೇಶ್ವರೋ ಜನಃ=ಶಿವಭಕ್ತಜನವು, ಶಿವಕ್ಷೇತ್ರೋತ್ಸವ ಮಹಾಯಾತ್ರಾ=ಶ್ರೀ ಪರ್ವತಾದಿ ಶಿವಕ್ಷೇತ್ರಂಗಳಲ್ಲಿಯ ಉತ್ಸವದಿಂದಲಾದ ಮಹಾಯಾತ್ರೆಯನು, ದರ್ಶನಕಾಂಕ್ಷಿಣಾಂ= ನೋಡುವ ಬಯಕೆವುಳ್ಳವರುಗಳಿಗೆ, ಮಾರ್ಗೇ=ದಾರಿಯಲ್ಲಿ, ಅನ್ನಪಾನದಾನಂ ಚ=ಅನ್ನಪಾನದಾನವ ನಾಯಿತ್ತಾದೊಡೆ, ಕುರ್ಯಾತ್=ಮಾಡುವುದು. ||೪೭||

**ಸೂತ್ರ||** ಬಳಿಕ ಶಿವಭಕ್ತನು ಶಿವಭಕ್ತರಲ್ಲಿಯೆ ಹೆಣ್ಣು ತಂದು ಶಿವಭಕ್ತರಿಗೆಯೆ ಹೆಣ್ಣ ಕೊಡುವುದೆಂದು ಹೇಳುತ್ತಿರ್ದಪಂ.

**ಗ್ರಂಥ||** **ಸ್ವಮಾರ್ಗಾಚಾರವರ್ತಿಭ್ಯಃ ಸ್ವಜಾತಿಭ್ಯಸ್ಸದಾ ವ್ರತೀ ।**
**ದದ್ಯಾತ್ತೇಭ್ಯಃ ಸಮಾದದ್ಯಾತ್ಕನ್ಯಾಂ ಕುಲಸಮುದ್ಭವಾಮ್ ॥**

**ಟೀಕು||** ಸದಾವ್ರತೀ=ನಿತ್ಯ ಶಿವಾಚಾರವ್ರತವುಳ್ಳ ಶಿವಭಕ್ತನು, ಸ್ವಮಾರ್ಗಾ ಚಾರವರ್ತಿಭ್ಯಃ= ತನ್ನ ಮಾರ್ಗಾಚಾರದಲ್ಲಿ ವರ್ತಿಸುತ್ತಿರ್ದ್ದ, ಸ್ವಜಾತಿಭ್ಯಃ=ತನ್ನ ಜಾತಿಯವರಾದ ಶಿವಭಕ್ತರುಗಳಿಗೋಸುಗ, ಕುಲಸಮುದ್ಭವಾಂ=ಕುಲದಲ್ಲಿ ಹುಟ್ಟಿರ್ದ್ದ, ಕನ್ಯಾಂ=ಕನ್ನಿಕೆಯನು, ದದ್ಯಾತ್= ಕೊಡುವದು. ತೇಭ್ಯಃ=ಅವರದೆಸೆಯಿಂದವೆ, ಸಮಾದದ್ಯಾತ್=ತರುವುದು. ||೪೮||

**ಗ್ರಂಥ||** **ಏವಮಾಚಾರಸಂಯುಕ್ತೋ ವೀರಶೈವೋ ಮಹಾವ್ರತೀ ।**
**ಪೂಜಯೇತ್ಪರಯಾ ಭಕ್ತ್ಯಾ ಗುರುಂಲಿಂಗಂ ಚ ಸಂತತಮ್ ॥**

**ಟೀಕು||** ಏವಂ=ಈ ಪ್ರಕಾರದಿಂದೆ, ಆಚಾರಸಂಯುಕ್ತಃ=ಶಿವಾಚಾರದೊಡನೆ ಕೂಡಿರ್ದ್ದ ವೀರಶೈವೋಮಹಾವ್ರತೀ=ವೀರಶೈವನಾದ ಮಹಾವ್ರತಿಯು, ಗುರುಂ=ಶ್ರೀಗುರುವನು, ಲಿಂಗಂ ಚ= ಲಿಂಗವನು, ಪರಯಾ=ದೊಡ್ಡಿತ್ತಾದ, ಭಕ್ತ್ಯಾ=ಭಕ್ತಿಯಿಂದೆ, ಸಂತತಂ=ಆವಾಗವು, ಪೂಜಯೇತ್= ಪೂಜಿಸುವುದು. ||೪೯||

**ಇತಿ ಭಕ್ತಸ್ಥಲಮ್**

## ೧೦ ಭಕ್ತಸ್ಥಲೇ ಗುರುಲಿಂಗಾರ್ಚನರೂಪೋಭಯಸ್ಥಲಮ್

**ಸೂತ್ರ||** ಬಳಿಕ ಉಭಯಸ್ಥಲವನು ಹೇಳಲೋಸುಗವಾಗಿ "ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ" ಯೆಂಬ ಶ್ವೇತಾಶ್ವತರಶ್ರುತ್ಯರ್ಥವನು ಪ್ರಕಾಶಿಸಿ ಶಿವ ಗುರುಗಳಿಗೆ ಅಭೇದವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಗುರೋರಭ್ಯರ್ಚನೇನಾಪಿ ಸಾಕ್ಷಾದಭ್ಯರ್ಚಿತಶ್ಶಿವಃ ।**
**ತಯೋರ್ನಾಸ್ತಿ ಭಿದಾ ಕಿಂಚಿದೇಕತ್ವಾತ್ತತ್ತ್ವರೂಪತಃ ॥**

**ಟೀಕು||** ಗುರೋಃ=ಶ್ರೀ ಗುರುವಿನ, ಅಭ್ಯರ್ಚನೇನಾಪಿ=ಪೂಜೆಯಿಂದಲಾಯಿತ್ತಾದೊಡೆ, ಶಿವಃ=ಪರಮೇಶ್ವರನು, ಸಾಕ್ಷಾತ್=ಪ್ರತ್ಯಕ್ಷವಾಗಿ, ಅಭ್ಯರ್ಚಿತಃ=ಪೂಜಿಸಲುಪಟ್ಟಾತನು. ತಯೋಃ=ಆ ಶಿವ ಗುರುಗಳಿಗೆ, ಏಕತ್ವಾತ್ ತತ್ತ್ವರೂಪತಃ=ಒಂದೇ ತತ್ತ್ವರೂಪವಾದ ಕಾರಣವಾಗಿ, ಕಿಂಚಿತ್ ಭಿದಾ=ಒಪ್ಪಚ್ಚಿ ಭೇದವು. ನಾಸ್ತಿ=ಇಲ್ಲ. ||೫೦||

**ಗ್ರಂಥ||** **ಯಥಾ ದೇವೇ ಜಗನ್ನಾಥೇ ಸರ್ವಾನುಗ್ರಹಕಾರಕೇ ।**
**ತಥಾ ಗುರುವರೇ ಕುರ್ಯಾದುಪಚಾರಾನ್ ದಿನೇ ದಿನೇ ॥**

**ಟೀಕು||** ಜಗನ್ನಾಥೇ=ಸಮಸ್ತಲೋಕಂಗಳಿಗೆ ಒಡೆಯನಾಗಿ, ಸರ್ವಾನುಗ್ರಹಕಾರಕೇ=ಸಮಸ್ತಭಕ್ತರಿಗೆ ಅನುಗ್ರಹವ ಮಾಡುತ್ತಿರ್ದ್ದ, ದೇವೇ=ಪರಮೇಶ್ವರನಲ್ಲಿ, ಯಥಾ=ಹೇಗೆ, ತಥಾ=ಹಾಗೆಯೆ ಗುರುವರೇ=ಗುರು ಶ್ರೇಷ್ಠನಲ್ಲಿಯು, ಉಪಚಾರಾನ್=ಭಕ್ತ್ಯುಪಚಾರಂಗಳನು, ದಿನೇ ದಿನೇ=ಪ್ರತಿದಿನ ದಲ್ಲಿಯು, ಕುರ್ಯಾತ್=ಮಾಡುವುದು. ||೫೧||

**ಸೂತ್ರ||** ಬಳಿಕ 'ನ ಗುರೋರಧಿಕಮ್" ಯೆಂಬ ಶಿವರಹಸ್ಯಾರ್ಥವನು ಪ್ರಕಟಿಸಿ ಶಿವನದೆಸೆಯಿಂದೆ ಶ್ರೀಗುರುವಿಗೆ ಉತ್ಕರ್ಷವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಅಪ್ರತ್ಯಕ್ಷೋ ಮಹಾದೇವಃ ಸರ್ವೇಷಾಮಾತ್ಮಮಾಯಯಾ ।**
**ಪ್ರತ್ಯಕ್ಷೋ ಗುರುರೂಪೇಣ ವರ್ತತೇ ಭಕ್ತಿಸಿದ್ಧಯೇ ॥**

**ಟೀಕು||** ಸರ್ವೇಷಾಂ=ಸಮಸ್ತರಿಗೆ, ಆತ್ಮಮಾಯಯಾ=ತನ್ನ ಮಾಯೆಯಿಂದೆ, ಅಪ್ರತ್ಯಕ್ಷಃ= ಪ್ರತ್ಯಕ್ಷವಲ್ಲದೆಯಿದ್ದ, ಮಹಾದೇವಃ=ಪರಮೇಶ್ವರನು, ಗುರುರೂಪೇಣ=ಲಲಾಟನೇತ್ರಚಂದ್ರಕಲೆ ಭುಜದ್ವಯಂಗಳನು ಮರೆಮಾಡಿ ಗುರುಸ್ವರೂಪಿನಿಂದೆ, ಪ್ರತ್ಯಕ್ಷಃ=ಸರ್ವರಿಗೂ ಪ್ರತ್ಯಕ್ಷವಾಗಿ,

ಭಕ್ತಿಸಿದ್ಧಯೇ=ಶಿವಭಕ್ತಿಯ ಸಿದ್ಧಿಗೋಸುಗವಾಗಿ, ವರ್ತತೇ=ವರ್ತಿಸುತ್ತಿರ್ದ್ದಪನು. ॥೫೨॥

**ಗ್ರಂಥ॥** **ಶಿವಜ್ಞಾನಂ ಮಹಾಘೋರಸಂಸಾರಾರ್ಣವತಾರಕಮ್ ।**
**ದೀಯತೇ ಯೇನ ಸ ಗುರುಃ ಕಸ್ಯ ವಂದ್ಯೋ ನ ಜಾಯತೇ ॥**

**ಟೀಕು॥** ಯೇನ=ಆವನಾನೊರ್ವ ಗುರುವಿನಿಂದೆ, ಮಹಾಘೋರಸಂಸಾರಾರ್ಣವ ತಾರಕಂ=ಮಹಾಭಯಂಕರವಾದ ಸಂಸಾರಸಮುದ್ರವನು ದಾಂಟಿಸುತ್ತಿರ್ದ್ದ, ಶಿವಜ್ಞಾನಂ=ಶಿವಜ್ಞಾನವು, ದೀಯತೇ=ಉಪದೇಶಿಸಿ ಕೊಡುತ್ತಿರ್ದ್ದಪುದು. ಸ ಗುರುಃ=ಆ ಶ್ರೀಗುರುನಾಥನು, ಕಸ್ಯ=ಆವಾತನಿಂದೆ, ವಂದ್ಯಃ=ನಮಸ್ಕರಿಸಲು ಯೋಗ್ಯನು, ನ ಜಾಯತೇ=ಆಗುತ್ತಿರನು? ಸರ್ವರಿಂದಲೂ ನಮಸ್ಕಾರಕ್ಕೆ ಯೋಗ್ಯನೆಂಬುದರ್ಥ. ॥ ೫೩॥

**ಗ್ರಂಥ॥** **ಯತ್ಕಟಾಕ್ಷಕಲಾಮಾತ್ರಾತ್ಪರಮಾನಂದಲಕ್ಷಣಮ್ ।**
**ಲಭ್ಯತೇ ಶಿವರೂಪತ್ವಂ ಸ ಗುರುಃ ಕೇನ ನಾರ್ಚ್ಯತೇ ॥**

**ಟೀಕು॥** ಯತ್ಕಟಾಕ್ಷಕಲಾಮಾತ್ರಾತ್=.ಆವನಾನೊರ್ವ ಗುರುವಿನ ಕಡೆಗಣ್ಣನೋಟ ಮಾತ್ರದಿಂದವೆ, ಪರಮಾನಂದಲಕ್ಷಣಂ=ಪರಮಾನಂದವೆ ಕುರುಹಾಗುಳ್ಳ, ಶಿವರೂಪತ್ವಂ=ಶಿವಸ್ವರೂಪವಹತನವು, ಲಭ್ಯತೇ=ಪಡೆಯಲುಪಡುತ್ತಿರ್ದ್ದಪುದು. ಸ ಗುರುಃ=ಆ ಶ್ರೀ ಗುರುಸ್ವಾಮಿಯು, ಕೇನ=ಆವಾತನಿಂದೆ, ನಾರ್ಚ್ಯತೇ=ಪೂಜಿಸಲ್ಪಡುತ್ತಿರನು? ಸರ್ವರಿಂದಲೂ ಪೂಜಿಸಲುಪಡುವನೆಂಬುದರ್ಥ. ॥೫೪॥

**ಸೂತ್ರ॥** ಬಳಿಕ ಅಂಥಾ ಶ್ರೀಗುರುವಿಗೆ ಹಿತವನೆ ಮಾಡಿ ಆ ಗುರುವಿನಾಜ್ಞೆಯನು ಮೀರಬೇಡಾಯೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ. ಉಭಯಸ್ಥಲವನು ಮುಗಿಸುತ್ತಿರ್ದ್ದಪಂ.

**ಗ್ರಂಥ॥** **ಹಿತಮೇವಾಚರೇನ್ನಿತ್ಯಂ ಶರೀರೇಣ ಧನೇನ ಚ ।**
**ಆಚಾರ್ಯಸ್ಯೋಪಶಾಂತಸ್ಯ ಶಿವಜ್ಞಾನಮಹಾನಿಧೇಃ ॥**

**ಟೀಕು॥** ಶಿವಜ್ಞಾನಮಹಾನಿಧೇಃ=ಶಿವಜ್ಞಾನಕ್ಕೆ ಮಹಾನಿಧಿಯಾಗಿರ್ದ್ದ, ಉಪಶಾಂತಸ್ಯ=ರಾಗದ್ವೇಷರಹಿತನಾದ, ಆಚಾರ್ಯಸ್ಯ=ಶ್ರೀಗುರುವಿಗೆ, ಶರೀರೇಣ=ಶರೀರದಿಂದೆ, ಧನೇನ ಚ=ದ್ರವ್ಯದಿಂದೆಯು, ನಿತ್ಯಂ=ಆವಾಗವು, ಹಿತಮೇವ=ಹಿತವನೆ, ಆಚರೇತ್=ಆಚರಿಸುವುದು. ॥೫೫॥

**ಗ್ರಂಥ॥** **ಗುರೋರಾಜ್ಞಾಂ ನ ಲಂಘೇತ ಸಿದ್ಧಿಕಾಮೀ ಮಹಾಮತಿಃ ।**
**ತದಾಜ್ಞಾಲಂಘನೇನಾಪಿ ಶಿವಾಜ್ಞಾಚ್ಛೇದಕೋ ಭವೇತ್ ॥**

**ಟೀಕು||** ಮಹಾಮತಿಃ=ಮಹಾಮತಿಯುಳ್ಳಾತನಾಗಿ, ಸಿದ್ಧಿಕಾಮೀ=ಸಿದ್ಧಿಯನು ಬಯಸುತ್ತಿರ್ಪಾತನು. ಗುರೋರಾಜ್ಞಾಂ=ಶ್ರೀಗುರುವಿನಾಜ್ಞೆಯನು, ನ ಲಂಘೇತ=ದಾಂಟಲಾಗದು. ತದಾಜ್ಞಾ ಲಂಘನೇನಾಪಿ=ಆ ಶ್ರೀಗುರುವಿನಾಜ್ಞೆಯನು ಮೀರುವದರಿಂದಲಾಯಿತ್ತಾದಡೆ, ಶಿವಾಜ್ಞಾಚ್ಛೇದಕಃ= ಶಿವಾಜ್ಞೆಯನು ಛೇದಿಸುವಾತನು, ಭವೇತ್=ಅಹನು. ||೫೬||

### ಇತ್ಯುಭಯಸ್ಥಲಮ್

## ೧೧. ಭಕ್ತಸ್ಥಲೇ ತ್ರಿವಿಧಸಂಪತ್ತಿಸ್ಥಲಮ್

**ಸೂತ್ರ||** ಬಳಿಕ ಭಕ್ತನಿಗೆ ತ್ರಿವಿಧಸಂಪತ್ತಿಸ್ಥಲವನು ಹೇಳುತ್ತಿರ್ದಪಂ.

**ಗ್ರಂಥ||** **ಯಥಾ ಗುರೌ ಯಥಾ ಲಿಂಗೇ ಭಕ್ತಿಮಾನ್ಪರಿವರ್ತತೇ ।**
**ಜಂಗಮೇ ಚ ತಥಾ ನಿತ್ಯಂ ಭಕ್ತಿಂ ಕುರ್ಯಾದ್ವಿಚಕ್ಷಣಃ ॥**

**ಟೀಕು||** ವಿಚಕ್ಷಣಃ=ಪ್ರವೀಣನಾದ ಶಿವಭಕ್ತನು, ಗುರೌ=ಗುರುವಿನಲ್ಲಿ, ಯಥಾ=ಹೇಗೆ ಭಕ್ತಿಮಾನ್= ಭಕ್ತಿಯುಳ್ಳಾತನು, ಲಿಂಗೇ=ಶಿವಲಿಂಗದಲ್ಲಿ, ಯಥಾ=ಹೇಗೆ, ಭಕ್ತಿಮಾನ್=ಭಕ್ತಿಯುಳ್ಳಾತನಾಗಿ, ಪರಿವರ್ತತೇ=ವರ್ತಿಸುತ್ತಿರ್ದಪನು. ತಥಾ=ಹಾಗೆಯೆ, ಜಂಗಮೇ ಚ=ಶಿವಯೋಗೀಶ್ವರನಲ್ಲಿಯು, ಭಕ್ತಿಂ=ಭಕ್ತಿಯನು, ನಿತ್ಯಂ=ಆವಾಗವು, ಕುರ್ಯಾತ್=ಮಾಡುವುದು. ||೫೭||

**ಸೂತ್ರ||** ಬಳಿಕ ಗುರುಲಿಂಗಜಂಗಮದೇವರಲ್ಲಿ ಸಮಾನಭಕ್ತಿಯೇನು ಕಾರಣವೆಂದಡೆ, ಒಂದು ವಸ್ತುವೆ ತ್ರಿವಿಧವಾಯಿತ್ತೆಂದು ಹೇಳುತ್ತಿರ್ದಪಂ.

**ಗ್ರಂಥ||** **ಏಕ ಏವ ಶಿವಸ್ಸಾಕ್ಷಾತ್ಸರ್ವಾನುಗ್ರಾಹಕಃ ಪ್ರಭುಃ ।**
**ಗುರುಜಂಗಮಲಿಂಗಾತ್ಮಾ ವರ್ತತೇ ಭುಕ್ತಿಮುಕ್ತಿದಃ ॥**

**ಟೀಕು||** ಸಾಕ್ಷಾತ್=ಪ್ರತ್ಯಕ್ಷವಾಗಿ, ಸರ್ವಾನುಗ್ರಾಹಕಃ=ಸಮಸ್ತಭಕ್ತರನು ಅನುಗ್ರಹಿಸುತ್ತಿರ್ದ ಪ್ರಭುಃ=ಸ್ವತಂತ್ರಶೀಲನಾದ, ಶಿವಃ ಏಕ ಏವ=ಶಿವನೊರ್ವನೆ, ಗುರುಜಂಗಮಲಿಂಗಾತ್ಮಾ=ಗುರು ಜಂಗಮಲಿಂಗಾತ್ಮಸ್ವರೂಪವುಳ್ಳಾತನಾಗಿ, ಭುಕ್ತಿಮುಕ್ತಿದಃ=ಭೋಗಮೋಕ್ಷವನು ಕೊಡುತ್ತಿರ್ದಾತನಾಗಿ, ವರ್ತತೇ=ವರ್ತಿಸುತ್ತಿರ್ದಪನು. ||೫೮||

**ಸೂತ್ರ||** ಬಳಿಕ ಶಿವಲಿಂಗಕ್ಕಿಂದ ಶಿವಯೋಗೀಶ್ವರನಧಿಕವೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ಲಿಂಗಂ ಚ ದ್ವಿವಿಧಂ ಪ್ರೋಕ್ತಂ ಜಂಗಮಾಜಂಗಮಾತ್ಮನಾ ।**
**ಅಜಂಗಮೇ ಯಥಾ ಭಕ್ತಿರ್ಜಂಗಮೇ ಚ ತಥಾ ಸ್ಮೃತಾ ॥**

**ಟೀಕು॥** ಲಿಂಗಂ ಚ=ಶಿವಲಿಂಗವಾಯಿತ್ತಾದೊಡೆ, ಜಂಗಮಾಜಂಗಮಾತ್ಮನಾ=ಚರಸ್ಥಿರ ಸ್ವರೂಪಿನಿಂದೆ, ದ್ವಿವಿಧಂ=ಎರಡು ಪ್ರಕಾರವುಳ್ಳದಾಗಿ, ಪ್ರೋಕ್ತಂ=ಹೇಳಲುಪಟ್ಟಿತ್ತು. ಅಜಂಗಮೇ= ಸ್ಥಿರವಾದ ಶಿವಲಿಂಗದಲ್ಲಿ, ಯಥಾ=ಹೇಗೆ, ಭಕ್ತಿಃ=ಭಕ್ತಿಯು, ತಥಾ=ಹಾಗೆಯೇ, ಜಂಗಮೇ ಚ=ಚರಲಿಂಗದಲ್ಲಿಯು, ಸ್ಮೃತಾ=ನೆನೆಯಲುಪಟ್ಟಿತ್ತು. ॥೫೯॥

**ಗ್ರಂಥ॥** **ಅಜಂಗಮಂ ತು ಯಲ್ಲಿಂಗಂ ಮೃಚ್ಛಿಲಾದಿವಿನಿರ್ಮಿತಮ್ ।**
**ತದ್ವರಂ ಜಂಗಮಂ ಲಿಂಗಂ ಶಿವಯೋಗೀತಿ ವಿಶ್ರುತಮ್ ॥**

**ಟೀಕು॥** ಮೃಚ್ಛಿಲಾದಿವಿನಿರ್ಮಿತಮ್=ಮೃತ್ತಿಕೆ ಶಿಲೆ ಮೊದಲಾಗುಳ್ಳವರಿಂದೆ ಮಾಡಲುಪಟ್ಟ ಅಜಂಗಮಂ=ಚರವಲ್ಲದೆಯಿರ್ದ್ದ, ಯತ್ ಲಿಂಗಂ=ಆವುದಾನೊಂದು ಶಿವಲಿಂಗವುಂಟು, ತದ್ವರಂ=ಆ ಲಿಂಗದದೆಸೆಯಿಂದೆ ಶ್ರೇಷ್ಠವಾಗಿರ್ದ್ದ, ಜಂಗಮಂ ಲಿಂಗಂ ತು=ಚರಲಿಂಗವಾಯಿತ್ತಾದೊಡೆ, ಶಿವಯೋಗೀತಿ=ಶಿವಯೋಗೀಶ್ವರನೆಂದು, ವಿಶ್ರುತಂ=ಪ್ರಸಿದ್ಧವು. ॥೬೦॥

**ಗ್ರಂಥ॥** **ಅಚರೇ ಮಂತ್ರಸಂಸ್ಕಾರಾಲ್ಲಿಂಗೇ ವಸತಿ ಶಂಕರಃ ।**
**ಸದಾಕಾಲಂ ವಸತ್ಯೇವ ಚರಲಿಂಗೇ ಮಹೇಶ್ವರಃ ॥**

**ಟೀಕು॥** ಶಂಕರಃ=ಪರಮೇಶ್ವರನು, ಅಚರೇಲಿಂಗೇ=ಸ್ಥಾವರಲಿಂಗದಲ್ಲಿ, ಮಂತ್ರ ಸಂಸ್ಕಾರಾತ್= ಪ್ರಣವಪಂಚಾಕ್ಷರಮಂತ್ರ ಸಂಸ್ಕಾರದದೆಸೆಯಿಂದೆ, ವಸತಿ=ಇರುತ್ತಿರ್ದ್ದಪನು. ಚರಲಿಂಗೇ=ಜಂಗಮ ಲಿಂಗದಲ್ಲಿ, ಮಹೇಶ್ವರಃ=ಪರಮೇಶ್ವರನು, ಸದಾಕಾಲಂ=ಎಲ್ಲಾಕಾಲದಲ್ಲಿಯೂ, ವಸತ್ಯೇವ= ಇರುತ್ತಿರ್ದ್ದಪನೆ.

**ತಾತ್ಪರ್ಯ॥** ಶಿವನ ಅಷ್ಟತನುಗಳಿಗೆ ಮೊದಲು ಕಡೆಯವಾಗಿರ್ದ್ದ ಪೃಥಿವ್ಯಾತ್ಮರನಧಿಕರಿಸಿಕೊಂಡು ಮಾಡುವ ಸ್ಥಾವರ ಜಂಗಮ ದೀಕ್ಷಾಭೇದವನು ಅವರ ಉತ್ಕರ್ಷವನು ಉಪದೇಶದಿಂದೆ ತಿಳಿವುದು. ॥೬೧॥

**ಸೂತ್ರ॥** ಬಳಿಕ ಶಿವಯೋಗೀಶ್ವರನಿಗೆ ಮಾಡಿದ ದಾನಪೂಜಾಫಲವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಶಿವಯೋಗಿನಿ ಯದ್ದತ್ತಂ ತದಕ್ಷಯಫಲಂ ಭವೇತ್ ।**
**ತಸ್ಮಾತ್ಸರ್ವಪ್ರಯತ್ನೇನ ತಸ್ಮೈ ದೇಯಂ ಮಹಾತ್ಮನೇ ॥**

**ಟೀಕು||** ಶಿವಯೋಗಿನಿ ವಿಷಯೇ=ಶಿವಯೋಗೀಶ್ವರನ ವಿಷಯವಾಗಿ, ಯತ್=ಆವುದಾನೊಂದು, ದತ್ತಂ=ಕೊಡಲುಪಟ್ಟಿತ್ತು, ತತ್=ಅದು, ಅಕ್ಷಯಫಲಂ=ಕೇಡಿಲ್ಲದೆಯಿರ್ದ್ದ ಫಲವು, ಭವೇತ್=ಅಹುದು. ತಸ್ಮಾತ್=ಅದುಕಾರಣವಾಗಿ, ಸರ್ವಪ್ರಯತ್ನೇನ=ಸರ್ವಪ್ರಯತ್ನದಿಂದೆಯು, ಮಹಾತ್ಮನೇ= ಮಹಾಪುರುಷನಾಗಿದ್ದ, ತಸ್ಮೈ=ಆ ಶಿವಯೋಗೀಶ್ವರನಿಗೋಸುಗ, ದೇಯಂ=ಕೊಡಲು ಯೋಗ್ಯವು. ||೬೨||

**ಗ್ರಂಥ||** **ಯತ್ಫಲಂ ಲಭತೇ ಜಂತುಃ ಪೂಜಯಾ ಶಿವಯೋಗಿನಃ ।**
**ತದಕ್ಷಯಮಿತಿ ಪ್ರೋಕ್ತಂ ಸಕಲಾಗಮಪಾರಗೈಃ ॥**

**ಟೀಕು||** ಜಂತುಃ=ಪ್ರಾಣಿಯು, ಶಿವಯೋಗಿನಃ=ಶಿವಯೋಗೀಶ್ವರನ, ಪೂಜಯಾ=ಪೂಜೆಯಿಂದೆ, ಯತ್ಫಲಂ=ಆವುದಾನೊಂದು ಫಲವನು, ಲಭತೇ=ಪಡೆವುತ್ತಿರ್ದ್ದಪನು, ತತ್=ಆ ಫಲವು, ಅಕ್ಷಯಮಿತಿ=ಅಕ್ಷಯವೆಂದು, ಸಕಲಾಗಮಪಾರಗೈಃ=ಸಮಸ್ತ ಶಿವಾಗಮಂಗಳನು ಕಡೆಗಂಡವರಿಂದೆ, ಪ್ರೋಕ್ತಂ=ಹೇಳಲುಪಟ್ಟಿತ್ತು. ಇದಕ್ಕೆ ಯೋಗಜಾಗಮವಚನ ಸಂಮತಿ.

"ದರ್ಶನಾದರ್ಚನಾತ್ತಸ್ಯ ತ್ರಿಸಪ್ತಕುಲಸಂಯುತಾಃ ।
ಜನಾ ಮುಕ್ತಿಪದಂ ಯಾಂತಿ ಕಿಂ ಪುನಸ್ತತ್ಪರಾಯಣಾಃ"|| ಯೆಂದು ಬಹು ಪ್ರಸಿದ್ಧವು. ||೬೩||

**ಸೂತ್ರ||** ಬಳಿಕ ಶಿವಯೋಗೀಶ್ವರನ ಅವಮನ್ನಣೆಯಿಂದೆ ಅವಗತಿಯನು ಹೇಳುತ್ತಿರ್ದ್ದಪಂ.

**ಗ್ರಂಥ||** **ನಾವಮನ್ಯೇತ ಕುತ್ರಾಪಿ ಶಿವಯೋಗಿನಮಾಗತಮ್ ।**
**ಅವಮಾನಾದ್ಭವೇತ್ತಸ್ಯ ದುರ್ಗತಿಶ್ಚ ನ ಸಂಶಯಃ ॥**

**ಟೀಕು||** ಆಗತಂ=ಬಂದಿರ್ದ್ದ, ಶಿವಯೋಗಿನಂ=ಶಿವಯೋಗೀಶ್ವರನನು, ದೃಷ್ಟ್ವಾ=ಕಂಡು, ಕುತ್ರಾಪಿ=ಆವೆಡೆಯಲ್ಲಿಯಾಯಿತ್ತಾದೊಡೆಯು, ನಾವಮನ್ಯೇತ=ಉದಾಸೀನವ ಮಾಡಲಾಗದು. ತಸ್ಯ=ಆ ಶಿವಯೋಗೀಶ್ವರನ, ಅವಮಾನಾತ್=ಅವಮನ್ನಣೆಯದೆಸೆಯಿಂದೆ, ದುರ್ಗತಿಶ್ಚ=ದುರ್ಗತಿ ಯಾದಡೆ, ಭವೇತ್=ಅಹುದು. ನ ಸಂಶಯಃ=ಸಂದೇಹವಿಲ್ಲ. ||೬೪||

**ಸೂತ್ರ||** ಬಳಿಕ ತ್ರಿವಿಧಸಂಪತ್ತಿಸ್ಥಲವನು ಸಮಾಪ್ತಿಯ ಮಾಡುತ್ತಿರ್ದ್ದಪಂ.

ಗ್ರಂಥ॥ **ಶಿವಯೋಗೀ ಶಿವಸ್ಸಾಕ್ಷಾದಿತಿ ಕೈಂಕರ್ಯಭಕ್ತಿತಃ ।**
**ಪೂಜಯೇದಾದರೇಣೈವ ಯಥಾಲಿಂಗಂ ಯಥಾ ಗುರುಃ ॥**

**ಟೀಕು॥** ಶಿವಯೋಗೀ=ಶಿವಯೋಗೀಶ್ವರನು, ಸಾಕ್ಷಾತ್=ಪ್ರತ್ಯಕ್ಷವಾದ ಶಿವನೆಂದು, ಕೈಂಕರ್ಯ ಭಕ್ತಿತಃ=ಭೃತ್ಯಾಚಾರರೂಪವಾದ ಭಕ್ತಿಯದೆಸೆಯಿಂದೆ, ಲಿಂಗಂ ಯಥಾ= ಶಿವಲಿಂಗದೋಪಾದಿಯಲ್ಲಿ, ಗುರುಂ ಯಥಾ=ಶ್ರೀಗುರುವಿನೋಪಾದಿಯಲ್ಲಿ, ಆದರೇಣೈವ= ಪ್ರೀತಿಯಿಂದವೆ, ಪೂಜಯೇತ್=ಪೂಜಿಸುವುದು. ॥೬೫॥

**ಇತಿ ತ್ರಿವಿಧಸಂಪತ್ತಿಸ್ಥಲಮ್**

## ೧೨. ಭಕ್ತಸ್ಥಲೇ ಚತುರ್ವಿಧಸಾರಾಯಸ್ಥಲಮ್

**ಸೂತ್ರ॥** ಬಳಿಕ ಚತುರ್ವಿಧಸಾರಾಯಸ್ಥಲವನು ಹೇಳುತ್ತಿರ್ದಪಂ.

ಗ್ರಂಥ॥ **ಪಾದೋದಕಂ ಯಥಾ ಭಕ್ತ್ಯಾ ಸ್ವೀಕರೋತಿ ಮಹೇಶಿತುಃ ।**
**ತಥಾ ಶಿವಾತ್ಮನೋರ್ನಿತ್ಯಂ ಗುರುಜಂಗಮಯೋರಪಿ ॥**

**ಟೀಕು॥** ಮಹೇಶಿತುಃ=ಶಿವಲಿಂಗರೂಪವಾದ ಮಹೇಶ್ವರನ, ಪಾದೋದಕಂ=ಪಾದೋದಕವನು ಭಕ್ತ್ಯಾ=ಭಕ್ತಿಯಿಂದೆ, ಯಥಾ=ಹೇಗೆ, ಸ್ವೀಕರೋತಿ=ಸ್ವೀಕರಿಸುತ್ತಿರ್ದಪನು. ತಥಾ=ಹಾಗೆಯೇ, ಶಿವಾತ್ಮನೋಃ=ಶಿವಸ್ವರೂಪರಾದ, ಗುರುಜಂಗಮಯೋಃ=ಶ್ರೀಗುರುಶಿವಯೋಗೀಶ್ವರರ, ಪಾದೋಕ ಮಪಿ=ಪಾದೋದಕವನಾಯಿತ್ತಾದೊಡೆಯು, ನಿತ್ಯಂ=ಆವಾಗವು, ಸ್ವೀಕುರ್ಯಾತ್=ಸ್ವೀಕರಿಸುವುದು. ॥೬೬॥

**ಸೂತ್ರ॥** ಬಳಿಕ ಪಾದೋದಕಧಾರಣವನು ಹೇಳುತ್ತಿರ್ದಪಂ.

ಗ್ರಂಥ॥ **ಸರ್ವಮಂಗಲಮಾಂಗಲ್ಯಂ ಸರ್ವಪಾವನಪಾವನಮ್ ।**
**ಸರ್ವಸಿದ್ಧಿಕರಂ ಪುಂಸಾಂ ಶಂಭೋಃ ಪಾದಾಂಬುಧಾರಣಮ್ ॥**

**ಟೀಕು॥** ಪುಂಸಾಂ=ಪುರುಷರುಗಳಿಗೆ, ಶಂಭೋಃ=ಪರಮೇಶ್ವರನ, ಪಾದಾಂಬುಧಾರಣಂ= ಪಾದೋದಕವನುಧರಿಸುವತನವು, ಸರ್ವಮಂಗಲಮಾಂಗಲ್ಯಂ=ಸಮಸ್ತಮಂಗಲಂಗಳಿಗೆ ಮಂಗಲ ವಾಗಿ, ಸರ್ವಪಾವನಪಾವನಂ=ಸಮಸ್ತಪಾವನಂಗಳಿಗೆ ಪಾವನವಾಗಿ, ಸರ್ವಸಿದ್ಧಿಕರಂ=ಸಮಸ್ತ ಸಿದ್ಧಿಯನು ಮಾಡುತ್ತಿರ್ದ ಅದು. ॥೬೭॥

**ಸೂತ್ರ||** ಬಳಿಕ ನಿರ್ಮಾಲ್ಯಪತ್ರಪುಷ್ಪಧಾರಣಫಲವನು ಹೇಳುತ್ತಿರ್ದಪಂ.

**ಗ್ರಂಥ||** **ಶಿರಸಾ ಧಾರಯೇದ್ಯಸ್ತು ಪತ್ರಂ ಪುಷ್ಪಂ ಶಿವಾರ್ಪಿತಮ್ ।**
**ಪ್ರತಿಕ್ಷಣಂ ಭವೇತ್ತಸ್ಯ ಪೌಂಡರೀಕಕ್ರಿಯಾಫಲಮ್ ॥**

**ಟೀಕು||** ಯಃ=ಆವನಾನೊಬ್ಬನು, ಶಿವಾರ್ಪಿತಂ=ಶಿವಲಿಂಗಕ್ಕೆ ಸಮರ್ಪಿಸಲುಪಟ್ಟ, ಪತ್ರಂ=ಬಿಲ್ವಾದಿಪತ್ರೆಯನು, ಪುಷ್ಪಂ=ಕುಮುದಾದಿಕುಸುಮವನು, ಶಿರಸಾ=ಶಿರಸ್ಸಿನಿಂದೆ, ಧಾರಯೇತ್=ಧರಿಸುವನು. ತಸ್ಯ=ಆತನಿಗೆ ಪ್ರತಿಕ್ಷಣಂ=ಕ್ಷಣಮಾತ್ರದಲ್ಲಿಯೇ, ಪೌಂಡರೀಕಕ್ರಿಯಾಫಲಂ=ಗಜಯಾಗದಿಂದಲಾದ ಕ್ರಿಯಾಫಲವಾಯಿತ್ತಾದೊಡೆ, ಭವೇತ್=ಆಹುದು. ||೭೮||

**ಸೂತ್ರ||** ಬಳಿಕ "ರುದ್ರೇಣಾತ್ತಮಶ್ನಂತಿ। ರುದ್ರೇಣ ಪೀತಂ ಪಿಬಂತಿ। ರುದ್ರೇಣಾಘ್ರಾತಂ ಜಿಘ್ರಂತಿ।" ಯೆಂಬ ಜಾಬಾಲಶ್ರುತ್ಯರ್ಥವನು ಪ್ರಕಾಶಿಸುತ್ತ ಪಂಚಸೂತ್ರಂಗಳಿಂದೆ ಶಿವಲಿಂಗ ಪ್ರಸಾದಸ್ವೀಕಾರವನು ಹೇಳುತ್ತಿರ್ದಪಂ.

**ಗ್ರಂಥ||** **ಭುಂಜೀಯಾದ್ರುದ್ರಭುಕ್ತಾನ್ನಂ ರುದ್ರಪೀತಂ ಜಲಂ ಪಿಬೇತ್ ।**
**ರುದ್ರಾಘ್ರಾತಂ ಸದಾ ಜಿಘ್ರೇದಿತಿ ಜಾಬಾಲಿಕೀ ಶ್ರುತಿಃ ॥**

**ಟೀಕು||** ರುದ್ರಭುಕ್ತಾನ್ನಂ="ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ"ಯೆಂದು ಶ್ರುತಿ ಪ್ರಸಿದ್ಧವಾಗಿ ಶಿವಲಿಂಗ ರೂಪವಾದ ರುದ್ರನಿಂದೆ ಸ್ವೀಕರಿಸಲುಪಟ್ಟ ಪ್ರಸಾದವನು, ಭುಂಜೀಯಾತ್= ಭೋಜನವ ಮಾಡುವುದು. ರುದ್ರಪೀತಂ=ರುದ್ರನಿಂದೆ ಪಾನವ ಮಾಡಲುಪಟ್ಟ, ಜಲಂ=.ಪ್ರಸಾದೋದಕವನು, ಪಿಬೇತ್=ಪಾನವ ಮಾಡುವುದು. ರುದ್ರಾಘ್ರಾತಂ=ರುದ್ರನಿಂದೆ ವಾಸನಿಸಲುಪಟ್ಟ ನಿರ್ಮಾಲ್ಯಪುಷ್ಪವನು, ಸದಾ=ಎಲ್ಲಾ ಕಾಲದಲ್ಲಿಯು, ಜಿಘ್ರೇತ್=ವಾಸನಿಸುವುದು. ಇತಿ=ಹೀಗೆಂದು, ಜಾಬಾಲಿಕೀ ಶ್ರುತಿಃ=ಜಾಬಾಲಶ್ರುತಿಯು. ಹಿ=ಪ್ರಸಿದ್ಧವು. ||೭೯||

**ಗ್ರಂಥ||** **ಅರ್ಪಯಿತ್ವಾ ನಿಜೇ ಲಿಂಗೇ ಪತ್ರಂ ಪುಷ್ಪಂ ಫಲಂ ಜಲಮ್ ।**
**ಅನ್ನಾದ್ಯಂ ಸರ್ವಭೋಜ್ಯಂ ಚ ಸ್ವೀಕುರ್ಯಾದ್ಭಕ್ತಿಮಾನ್ನರಃ ॥**

**ಟೀಕು||** ಭಕ್ತಿಮಾನ್ ನರಃ=ಶಿವಭಕ್ತಿಯುಳ್ಳ ಮನುಷ್ಯನು, ಪತ್ರಂ=ಪತ್ರೆಯನು, ಪುಷ್ಪಂ=ಪುಷ್ಪವನು, ಫಲಂ=ಫಲವನು, ಜಲಂ=ಉದಕವನು, ಅನ್ನಾದ್ಯಂ=ಅನ್ನ ಮೊದಲಾಗುಳ್ಳ, ಸರ್ವಭೋಜ್ಯಂ ಚ=ಸಮಸ್ತ ಭೋಗ್ಯವಸ್ತುವನು, ನಿಜೇಲಿಂಗೇ=ತನ್ನ ಸಂಬಂಧವಾದ ಶಿವಲಿಂಗದಲ್ಲಿ, ಅರ್ಪಯಿತ್ವಾ=ಸಮರ್ಪಿಸಿ, ಸ್ವೀಕುರ್ಯಾತ್=ಸ್ವೀಕರಿಸುವುದು. ||೮೦||

**ಗ್ರಂಥ||** **ಗುರುತ್ವಾತ್ಸರ್ವಲೋಕಾನಾಂ ಶಂಭೋರಮಿತತೇಜಸಃ ।**
**ತಸ್ಮೈ ನಿವೇದಿತಂ ಸರ್ವಂ ಸ್ವೀಕಾರ್ಯಂ ತತ್ಪರಾಯಣೈಃ ॥**

**ಟೀಕು||** ಅಮಿತತೇಜಸಃ=ಪ್ರಮಣಿಸಲುಪಡದೆಯಿದ್ದ ತೇಜಸುಳ್ಳ, ಶಂಭೋಃ=ಶಿವಲಿಂಗ ರೂಪವಾದ ಪರಮೇಶ್ವರನಿಗೆ, ಸರ್ವಲೋಕಾನಾಂ=ಸಮಸ್ತಲೋಕಂಗಳೊಳಗೆ, ಗುರುತ್ವಾತ್=ಗುರುತ್ವ ಉಂಟಾದ ಕಾರಣವಾಗಿ, ತಸ್ಮೈ ನಿವೇದಿತಂ=ಆ ಶಿವಲಿಂಗಕ್ಕೋಸುಗ ಸಮರ್ಪಿಸಲುಪಟ್ಟ, ಸರ್ವಂ= ಸಮಸ್ತಪದಾರ್ಥವು, ತತ್ಪರಾಯಣೈಃ=ಆ ಶಿವಲಿಂಗದಲ್ಲಿ ತತ್ಪರರಾದ ಶಿವಭಕ್ತರಿಂದೆ, ಸ್ವೀಕಾರ್ಯಂ= ಸ್ವೀಕರಿಸಲು ಯೋಗ್ಯವು. ||೭೦||

**ಗ್ರಂಥ||** **ಯೇ ಲಿಂಗಧಾರಿಣೋ ಲೋಕೇ ಯೇ ಶಿವೈಕಪಾರಾಯಣಾಃ ।**
**ತೇಷಾಂ ತು ಶಿವನಿರ್ಮಾಲ್ಯಮುಚಿತಂ ನಾನ್ಯಜಂತುಷು ॥**

**ಟೀಕು||** ಲೋಕೇ=ಲೋಕದಲ್ಲಿ, ಯೇ=ಆರು ಕೆಲಂಬರು, ಲಿಂಗಧಾರಿಣಃ=ಶಿವಲಿಂಗ ಧಾರಣವುಳ್ಳವರು, ಯೇ=ಆರು ಕೆಲಂಬರು, ಶಿವೈಕಪರಾಯಣಾಃ=ಶಿವಲಿಂಗವೊಂದರಲ್ಲಿಯೆ ತತ್ಪರರಾಗಿದ್ದವರು, ತೇಷಾಂ ತು=ಅವರಿಗಾಯಿತ್ತಾದೊಡೆ, ಶಿವನಿರ್ಮಾಲ್ಯಂ=ಶಿವಲಿಂಗಪ್ರಸಾದವು, ಉಚಿತಂ=ಉಚಿತವು. ಅನ್ಯಜಂತುಷು ವಿಷಯೇ=ಲಿಂಗಧಾರಣವಿಲ್ಲದೆಯಿದ್ದ ಉಳಿದ ಪ್ರಾಣಿಗಳ ವಿಷಯವಾಗಿ, ನೋಚಿತಂ=ಉಚಿತವಲ್ಲ. ||೭೨||

**ಗ್ರಂಥ||** **ಅನ್ನಜಾತೇತು ಭಕ್ತೇನ ಭುಜ್ಯಮಾನೇ ಶಿವಾರ್ಪಿತೇ ।**
**ಸಿಕ್ಥೇ ಸಿಕ್ಥೇಽಶ್ವಮೇಧಸ್ಯ ಯತ್ಫಲಂ ತದವಾಪ್ಯತೇ ॥**

**ಟೀಕು||** ಶಿವಾರ್ಪಿತೇ=ಶಿವಲಿಂಗಕ್ಕೆ ಸಮರ್ಪಿಸಲುಪಟ್ಟ, ಅನ್ನಜಾತೇ ತು=ಪ್ರಸಾದಾನ್ನ ಸಮೂಹವಾಯಿತ್ತಾದೊಡೆ, ಭಕ್ತೇನ=ಶಿವಭಕ್ತನಿಂದೆ,, ಭುಜ್ಯಮಾನೇ ಸತಿ=ಭೋಗಿಸಲುಪಡಲಿಕೆಯಾಗಿ, ಸಿಕ್ಥೇ ಸಿಕ್ಥೇ=ಅಗುಳಗುಳಿನಲ್ಲಿ, ಅಶ್ವಮೇಧಸ್ಯ=ಅಶ್ವಮೇಧಯಜ್ಞಕ್ಕೆ, ಯತ್ಫಲಂ=ಆವುದಾನೊಂದು ಫಲವುಂಟು, ತತ್=ಆ ಫಲವು, ಅವಾಪ್ಯತೇ=ಪಡೆಯಲುಪಡುತ್ತಿರ್ದಪುದು.

**ತಾತ್ಪರ್ಯ||** "ತ್ವಾದತ್ತೇಭಿ ರುದ್ರ ಶಂ ಮೇಘಿಃ" ಯೆಂಬ ಋಗ್ವೇದ, "ರುದ್ರೇಣಾತ್ತಮಮೃತಂ ದೇವಾ ವೈ ಭೋಕ್ತುಕಾಮಾ ವೇದಾಃ ಕಾಮಯಂತೇ" ಯೆಂಬ ಯಜುರ್ವೇದ, "ತ್ರಿಗುಪ್ಯಾತಮಸ್ಮಿಯಾತಾ" ಯೆಂಬ ಕಠಶಾಖೆ ಇವು ಮೊದಲಾದ ಶಿವಾಗಮ ಪುರಾಣಂಗಳಲ್ಲಿ ಶಿವಭಕ್ತರಿಗೆ ಶಿವಪ್ರಸಾದ ಸ್ವೀಕಾರವು ಪ್ರಸಿದ್ಧವಾದ ಕಾರಣವಾಗಿ ಸಂಮತಿಯ ಬರೆದುದಿಲ್ಲ. ||೭೩||

**ಸೂತ್ರ||** ಬಳಿಕ "ಅನರ್ಹಂ ಮಮ ನೈವೇದ್ಯಂ ಪಾದಾಂಬು ಕುಸುಮಂ ದಲಮ್" ಯೆಂಬ ಶಿವ

ವಾಕ್ಯಾರ್ಥವನು ಪ್ರಕಟಿಸುತ್ತ ಶಿವಪ್ರಸಾದಕ್ಕೆ ಅನಧಿಕಾರಿಗಳನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ ನಿರ್ಮಾಲ್ಯಂ ನಿರ್ಮಲಂ ಶುದ್ಧಂ ಶಿವೇನ ಸ್ವೀಕೃತಂ ಯತಃ ।
ನಿರ್ಮಲೈಸ್ತತ್ಪರೈರ್ಧಾರ್ಯಂ ನಾನ್ಯೈಃ ಪ್ರಾಕೃತಜಂತುಭಿಃ ॥

**ಟೀಕು॥** ಶಿವೇನ=ಶಿವನಿಂದೆ, ಸ್ವೀಕೃತಂ=ಸ್ವೀಕರಿಸಲುಪಟ್ಟ, ಶುದ್ಧಂ=ಶುದ್ಧವಸ್ತುವು, ನಿರ್ಮಲಂ ಯತಃ=ನಿರ್ಮಲವಾದ ಕಾರಣವಾಗಿ, ನಿರ್ಮಾಲ್ಯಂ=ನಿರ್ಮಾಲ್ಯವು, ತತ್=ಆ ಶಿವನಿರ್ಮಾಲ್ಯವು, ಪರೈಃ=ಶ್ರೇಷ್ಠರಾಗಿರ್ದ್ದ, ನಿರ್ಮಲೈಃ=ಶಿವದೀಕ್ಷೆಯಿಂದೆ ನಿರ್ಮಲರಾದ ಶಿವಭಕ್ತರಿಂದೆ, ಧಾರ್ಯಂ=ಧರಿಸಲು ಯೋಗ್ಯವು. ಅನ್ಯೈಃ=ಭಿನ್ನರಾದ, ಪ್ರಾಕೃತಜಂತುಭಿಃ=ಶಿವದೀಕ್ಷೆಯಿಲ್ಲದ ಪ್ರಾಕೃತ ಪ್ರಾಣಿಗಳಿಂದೆ, ನ ಧಾರ್ಯಂ=ಧರಿಸಲು ಯೋಗ್ಯವಲ್ಲ. ॥೭೪॥

ಗ್ರಂಥ॥ ಶಿವಭಕ್ತಿವಿಹೀನಾನಾಂ ಜಂತೂನಾಂ ಪಾಪಕರ್ಮಿಣಾಮ್ ।
ವಿಶುದ್ಧೇ ಶಿವನಿರ್ಮಾಲ್ಯೇ ನಾಧಿಕಾರೋಽಸ್ತಿ ಕುತ್ರಚಿತ್ ॥

**ಟೀಕು॥** ವಿಶುದ್ಧೇ=ಅತ್ಯಂತಪವಿತ್ರವಾದ, ಶಿವನಿರ್ಮಾಲ್ಯೇ=ಶಿವಲಿಂಗಪ್ರಸಾದ ವಿಷಯವಾಗಿ, ಕುತ್ರಚಿತ್=ಒಂದೆಡೆಯಲ್ಲಿಯು, ಪಾಪಕರ್ಮಿಣಾಂ=ಪಾಪಕರ್ಮವುಳ್ಳ, ಅತ ಏವ=ಇದು ಕಾರಣವಾಗಿಯೆ, ಶಿವಭಕ್ತಿವಿಹೀನಾನಾಂ=ಶಿವಭಕ್ತಿವಿರಹಿತರಾಗಿರ್ದ್ದ, ಜಂತೂನಾಂ=ಪ್ರಾಕೃತ ಪ್ರಾಣಿಗಳಿಗೆ, ಅಧಿಕಾರಃ=ಅಧಿಕಾರವು, ನಾಸ್ತಿ=ಇಲ್ಲ.

**ತಾತ್ಪರ್ಯ॥** ಶಿವನ ವ್ಯಾಪಕವಾದ ಅಷ್ಟತನುಗಳಿಂದೆ ಕಲ್ಪಿತವಾಗಿ ಸಾಧಾರಣವಾದ ದೇವಾಂತರ ಪೂಜೆಯಲ್ಲಿಯೂ ಶಿವನ ಮಸ್ತಕಕ್ಕೆ ಸಂದ ಪುಷ್ಪೋದಕವಾದ ಚಂದ್ರಗಂಗೆಗಳಿಂದೆ ಬೆಳೆದ ಸಕಲ ಧಾನ್ಯವು ಅಗ್ನಿರೂಪವಾದ ರುದ್ರನ ಜಿಹ್ವೆಯಿಂದೆ ಪಾಕವಾಗಲಾಗಿ ಸಾಧಾರಣ ಪ್ರಸಾದವು ಈ ಎರಡರಲ್ಲಿ ಸಮಸ್ತ ಸಮಯ ಜೀವಿಗಳಿಗೂ ಅಧಿಕಾರವುಂಟು. ಅಸಾಧಾರಣವಾದ ಶಿವಲಿಂಗಪೂಜೆಯಲ್ಲಿಯು, ಶಿವಲಿಂಗಪ್ರಸಾದದಲ್ಲಿಯು ಶಿವದೀಕ್ಷಾಸಂಪನ್ನನೊಬ್ಬನೆ ಅಧಿಕಾರಿಯೆಂದು ಸಮಸ್ತ ಶಾಸ್ತ್ರ ಪ್ರಸಿದ್ಧವು. ॥೭೫॥

**ಸೂತ್ರ॥** ಬಳಿಕ ಪ್ರಸಾದದ ಮಹತ್ವವನು ಸೂಚಿಸಿ ಚತುರ್ವಿಧಸಾರಾಯಸ್ಥಲವನು ಸೂತ್ರದ್ವಯದಿಂದೆ ಮುಗಿಯಿಸುತ್ತಿರ್ದಪಂ.

ಗ್ರಂಥ॥ ಶಿವಲಿಂಗಪ್ರಸಾದಸ್ಯ ಸ್ವೀಕಾರಾದ್ಯತ್ಫಲಂ ಭವೇತ್ ।
ತಥಾ ಪ್ರಸಾದಸ್ವೀಕಾರಾದ್ಗುರುಜಂಗಮಯೋರಪಿ ॥

**ಟೀಕು॥** ಶಿವಲಿಂಗಪ್ರಸಾದಸ್ಯ=ಶಿವಲಿಂಗಪ್ರಸಾದದ, ಸ್ವೀಕಾರಾತ್=ಸ್ವೀಕಾರದದೆಸೆಯಿಂದೆ ಯತ್ಫಲಂ=ಆವಫಲವು, ಭವೇತ್=ಅಹುದು, ತಥಾ=ಹಾಗೆಯೆ, ಗುರುಜಂಗಮಯೋಃ=ಶ್ರೀಗುರು

ಶಿವಯೋಗೀಶ್ವರರ, ಪ್ರಸಾದಸ್ವೀಕಾರಾದಪಿ=ಪ್ರಸಾದದಸ್ವೀಕಾರದದೆಸೆಯಿಂದಲಾಯಿತ್ತಾದೊಡೆ, ತತ್ಫಲಂ=ಆ ಫಲವು, ಭವೇತ್=ಅಹುದು. ||೭೬||

ಗ್ರಂಥ|| **ತಸ್ಮಾದ್ಗುರುಂ ಮಹಾದೇವಂ ಶಿವಯೋಗಿನಮೇವ ಚ ।**
**ಪೂಜಯೇತ್ತತ್ಪ್ರಸಾದಾನ್ನಂ ಭುಂಜೀಯಾತ್ಪ್ರತಿವಾಸರಮ್ ॥**

**ಟೀಕು||** ತಸ್ಮಾತ್=ಅದು ಕಾರಣವಾಗಿ, ಗುರುಂ=ಶ್ರೀಗುರುವನು, ಮಹಾದೇವಂ=ಶಿವಲಿಂಗವನು, ಶಿವಯೋಗಿನಂ ಚ=ಶಿವಯೋಗೀಶ್ವರನನು, ಪೂಜಯೇತ್=ತನುಮನಧನಂಗಳಿಂದೆ ಪೂಜಿಸುವುದು. ತತ್ಪ್ರಸಾದಾನ್ನಮೇವ=ಅವರ ಪ್ರಸಾದಾನ್ನವನೆ, ಪ್ರತಿವಾಸರಂ=ಪ್ರತಿದಿವಸವು, ಭುಂಜೀಯಾತ್=ಭೋಗಿಸುವುದು. ||೭೭||

**ಇತಿ ಚತುರ್ವಿಧಸಾರಾಯಸ್ಥಲಮ್**

## ೧೩. ಭಕ್ತಸ್ಥಲೇ ಉಪಾಧಿಕಮಾಟಸ್ಥಲಮ್

**ಸೂತ್ರ||** ಬಳಿಕ "ದೇಹದಾನಾತ್ಸತ್ಯಸಿದ್ಧಿರರ್ಥದಾನಾಚ್ಚ ನಿರ್ವೃತಿಃ ।
ಪ್ರಾಣದಾನಾದ್ ಜ್ಞಾನಸಿದ್ಧಿರೇವಂ ಸರ್ವಂ ಸ್ಥಿರಂ ಭವೇತ್"|| ಯೆಂಬ ಯೋಗಜಾಗಮಾರ್ಥವನು ಪ್ರಕಟಿಸುತ್ತ ಶಿವಭಕ್ತನು ಶ್ರೀಗುರುಶಿವಯೋಗೀಶ್ವರಲಿಂಗವನು ಕೂರ್ತು ದಾನವ ಮಾಡಬೇಕೆಂದು ಹೇಳುತ್ತಿರ್ದಪಂ.

ಗ್ರಂಥ|| **ಶಿವಲಿಂಗೇ ಶಿವಾಚಾರ್ಯೇ ಶಿವಯೋಗಿನಿ ಭಕ್ತಿಮಾನ್ ।**
**ದಾನಂ ಕುರ್ಯಾದ್ಯಥಾಶಕ್ತಿ ತತ್ಪ್ರಸಾದಯುತಸ್ಸದಾ ॥**

**ಟೀಕು||** ತತ್ಪ್ರಸಾದಯುತಃ=ಆ ಶಿವಲಿಂಗ ಶ್ರೀಗುರುಶಿವಯೋಗೀಶ್ವರರ ಪ್ರಸಾದದೊಡನೆ ಕೂಡಿರ್ದ್ದ, ಭಕ್ತಿಮಾನ್=ಶಿವಭಕ್ತಿಯುಳ್ಳಾತನು, ಶಿವಲಿಂಗೇ ವಿಷಯೇ=ಶಿವಲಿಂಗ ವಿಷಯವಾಗಿ, ಶಿವಾಚಾರ್ಯೇ ವಿಷಯೇ=ಶ್ರೀಗುರುನಾಥ ವಿಷಯವಾಗಿ, ಶಿವಯೋಗಿನಿ ವಿಷಯೇ=ಶಿವಯೋಗೀಶ್ವರರ ವಿಷಯವಾಗಿ, ಯಥಾಶಕ್ತಿ=ಶಕ್ತಿಯನು ಮೀರದೆ, ಸದಾ=ಎಲ್ಲಾಕಾಲದಲ್ಲಿಯು, ದಾನಂ=ಪ್ರಾಣ ದೇಹ ಧನ ದಾನವನು, ಕುರ್ಯಾತ್=ಕ್ರಮದಿಂದೆ ಮಾಡುವುದು. ||೭೮||

**ಸೂತ್ರ||** ಬಳಿಕ ದಾನೋದ್ದೇಶವನು ಹೇಳುತ್ತಿರ್ದಪಂ.

ಗ್ರಂಥ॥ ದಾನಂ ಚ ತ್ರಿವಿಧಂ ಪ್ರೋಕ್ತಂ ಸೋಪಾಧಿ ನಿರುಪಾಧಿಕಮ್
ಸಹಜಂ ಚೇತಿ ಸರ್ವೇಷಾಂ ಸರ್ವತಂತ್ರವಿಶಾರದೈಃ

ಟೀಕು॥ ದಾನಂ ಚ=ಪ್ರಾಣ ದೇಹಾರ್ಥರೂಪವಾದ ದಾನವಾಯಿತ್ತಾದೊಡೆ, ಸೋಪಾಧಿ= ಸೋಪಾಧಿಕದಾನವೆಂದು, ನಿರುಪಾಧಿಕಂ=ನಿರುಪಾಧಿಕದಾನವೆಂದು, ಸಹಜಂ ಚೇತಿ=ಸಹಜದಾನವೆಂದು, ತ್ರಿವಿಧಂ=ಮೂರು ಪ್ರಕಾರವುಳ್ಳುದಾಗಿ, ಸರ್ವತಂತ್ರವಿಶಾರದೈಃ=ಸಮಸ್ತಶಿವಾಗಮ ಪ್ರವೀಣರಿಂದೆ, ಸರ್ವೇಷಾಂ=ಸಮಸ್ತ ಶಿವಭಕ್ತರಿಗೆ, ಪ್ರೋಕ್ತಂ=ಹೇಳಲುಪಟ್ಟಿತ್ತು. ॥೭೯॥

ಸೂತ್ರ॥ ಬಳಿಕ ಸೋಪಾಧಿಕದಾನಕ್ಕೆ ಲಕ್ಷಣವನು ಹೇಳುತ್ತಿರ್ದಪಂ.

ಗ್ರಂಥ॥ ಫಲಾಭಿಸಂಧಿಸಂಯುಕ್ತಂ ದಾನಂ ಯದ್ವಿಹಿತಂ ಭವೇತ್ ।
ತತ್ಸೋಪಾಧಿಕಮಾಖ್ಯಾತಂ ಮುಮುಕ್ಷುಭಿರನಾದೃತಮ್ ॥

ಟೀಕು॥ ಯದ್ದಾನಂ=ಆವುದಾನೊಂದು ದಾನವು, ಫಲಾಭಿಸಂಧಿಸಂಯುಕ್ತಂ=ಫಲದ ಬಯಕೆಯೊಡನೆ ಕೂಡಿದ್ದದಾಗಿ, ವಿಹಿತಂ=ಮಾಡಲುಪಟ್ಟ ಅದು, ಭವೇತ್=ಅಹುದು, ತತ್=ಆ ದಾನವು, ಸೋಪಾಧಿಕಂ=ಸೋಪಾಧಿಕದಾನವೆಂದು, ಆಖ್ಯಾತಂ=ಹೇಳಲುಪಟ್ಟಿತ್ತು. ಮುಮುಕ್ಷುಭಿಃ= ಮುಮುಕ್ಷುಗಳಿಂದಲಾದಡೆ, ಅನಾದೃತಂ=ಪ್ರೀತಿಮಾಡಲುಪಡದೆಯಿದ್ದ ಅದು. ॥೮೦॥

ಇತಿ ಸೋಪಾಧಿಕಮಾಟಸ್ಥಲಮ್

## ೧೪. ಭಕ್ತಸ್ಥಲೇ ನಿರುಪಾಧಿಕಮಾಟಸ್ಥಲಮ್

ಸೂತ್ರ॥ ಬಳಿಕ ನಿರುಪಾಧಿಕದಾನಕ್ಕೆ ಲಕ್ಷಣವನು ಹೇಳುತ್ತಿರ್ದಪಂ.

ಗ್ರಂಥ॥ ಫಲಾಭಿಸಂಧಿನಿರ್ಮುಕ್ತಮೀಶ್ವರಾರ್ಪಿತಕಾಂಕ್ಷಿತಮ್ ।
ನಿರುಪಾಧಿಕಮಾಖ್ಯಾತಂ ದಾನಂ ದಾನವಿಶಾರದೈಃ ॥

ಟೀಕು॥ ಫಲಾಭಿಸಂಧಿನಿರ್ಮುಕ್ತಂ=ಫಲದ ಬಯಕೆಯಿಂದೆ ಬಿಡಲುಪಟ್ಟ, ಈಶ್ವರಾರ್ಪಿತ ಕಾಂಕ್ಷಿತಂ= ಈಶ್ವರಾರ್ಪಿತವೆಂದು ಬಯಸಲುಪಟ್ಟ, ದಾನಂ=ದಾನವು, ನಿರುಪಾಧಿಕಂ= ನಿರುಪಾಧಿಕದಾನವೆಂದು, ದಾನವಿಶಾರದೈಃ=ದಾನಕರ್ಮದಲ್ಲಿ ಪ್ರವೀಣರಾದವರಿಂದೆ, ಆಖ್ಯಾತಂ=ಹೇಳಲುಪಟ್ಟಿತ್ತು. ॥೮೧॥

ಇತಿ ನಿರುಪಾಧಿಕಮಾಟಸ್ಥಲಮ್

## ೧೫. ಭಕ್ತಸ್ಥಲೇ ಸಹಜಮಾಟಸ್ಥಲಮ್

**ಸೂತ್ರ||** ಬಳಿಕ ಸಹಜದಾನಕ್ಕೆ ಲಕ್ಷಣವನು ಹೇಳುತ್ತಿರ್ದಪಂ.

ಗ್ರಂಥ|| **ಆದಾತೃದಾತೃದೇಯಾನಾಂ ಶಿವಭಾವಂ ವಿಚಿಂತಯನ್ |**
**ಆತ್ಮನೋಽಕರ್ತೃಭಾವಂ ಚ ಯದ್ದತ್ತಂ ಸಹಜಂ ಭವೇತ್ ||**

**ಟೀಕು||** ಆದಾತೃ=ತೆಗೆದುಕೊಂಡ ಭಕ್ತನಿಗೆ, ದಾತೃ=ಕೊಡುವ ಕರ್ತೃವಿಗೆ, ದೇಯಾನಾಂ=ಕೊಡಲು ಯೋಗ್ಯವಾದ ಪದಾರ್ಥಂಗಳಿಗೆ, ಶಿವಭಾವಂ=ಶಿವಸ್ವರೂಪವಹತನವನು, ಆತ್ಮನಃ=ತನಗೆ, ಅಕರ್ತೃ ಭಾವಂ ಚ=ಕರ್ತೃವಲ್ಲದಿಹತನವನು, ವಿಚಿಂತಯನ್=ಧ್ಯಾನಿಸುತ್ತಾ, ಯತ್ ದತ್ತಂ=ಆವುದಾನೊಂದು ಕೊಡಲುಪಟ್ಟಿತ್ತು, ತತ್=ಆ ದಾನವಾಯಿತ್ತಾದೊಡೆ, ಸಹಜಂ=ಸಹಜದಾನವೆಂದು, ಭವೇತ್=ಅಹುದು.

**ತಾತ್ಪರ್ಯ||** "ಭೋಕ್ತಾ ಭೋಜ್ಯಂ ಪ್ರೇರಿತಾರಂ ಚ ಮತ್ವಾ
ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್" ಯೆಂಬ ಶ್ವೇತಾಶ್ವತರ ಶ್ರುತಿಯಿಂದೆ ಉಪಕ್ರಮದ ಪಿಂಡಸ್ಥಲ ರಹಸ್ಯವನು ಉಪಸಂಹಾರದಿಂದ ಸಹಜದಾನಸ್ಥಲದಲ್ಲಿ ತಿಳಿವುದು. **||೮೨||**

**ಸೂತ್ರ||** ಬಳಿಕ ಈ ಸಹಜದಾನದ ಮಹತ್ವವನು ಹೇಳುತ್ತಿರ್ದಪಂ.

ಗ್ರಂಥ|| **ಸಹಜಂ ದಾನಮುತ್ಕೃಷ್ಟಂ ಸರ್ವದಾನೋತ್ತಮೋತ್ತಮಮ್ |**
**ಶಿವಜ್ಞಾನಪ್ರದಂ ಪುಂಸಾಂ ಜನ್ಮರೋಗನಿವರ್ತಕಮ್ ||**

**ಟೀಕು||** ಸಹಜಂ ದಾನಂ=ಸಹಜದಾನವು, ಸರ್ವದಾನೋತ್ತಮೋತ್ತಮಂ= ಸಮಸ್ತದಾನೋತ್ತ ಮಂಗಳಲ್ಲಿ ಉತ್ತಮವಾಗಿ, ಉತ್ಕೃಷ್ಟಂ=ಶ್ರೇಷ್ಠವಾಗಿರ್ದ ಅದು. ಪುಂಸಾಂ=ಪುರುಷರುಗಳಿಗೆ, ಜನ್ಮರೋಗನಿವರ್ತಕಂ=ಸಂಸಾರವ್ಯಾಧಿಯನು ಪರಿಹರಿಸುತ್ತಿರ್ದ, ಶಿವಜ್ಞಾನಪ್ರದಂ=ಶಿವಜ್ಞಾನವನು ಕೊಡುತ್ತಿರ್ದ ಅದು. **||೮೩||**

**ಸೂತ್ರ||** ಬಳಿಕ ಸಹಜದಾನವನು ಪ್ರಕಾರಾಂತರದಿಂದೆ ಹೇಳುತ್ತಿರ್ದಪಂ.

ಗ್ರಂಥ|| **ಶಿವಾಯ ಶಿವಭಕ್ತಾಯ ದೀಯತೇ ಯದಿ ಕಿಂಚನ |**
**ಭಕ್ತ್ಯಾ ತದಪಿ ವಿಖ್ಯಾತಂ ಸಹಜಂ ದಾನಮುತ್ತಮಮ್ ||**

**ಟೀಕು||** ಶಿವಾಯ=ಶಿವನಿಗೋಸುಗ, ಶಿವಭಕ್ತಾಯ=ಶಿವಭಕ್ತನಿಗೋಸುಗ, ಕಿಂಚನ=ಏನೊಂದು ವಸ್ತುವಾದಡೂ, ಭಕ್ತ್ಯಾ=ಭಕ್ತಿಯಿಂದೆ, ಯದಿ ದೀಯತೇ=ಎತ್ತಲಾನೂ ಕೊಡುತ್ತಿರ್ದ್ದಪುದೆ, ತದಪಿ=ಆ ದಾನವಾಯಿತ್ತಾದೊಡೆಯು, ಉತ್ತಮಂ=ಶ್ರೇಷ್ಠವಾದ, ಸಹಜಂ ದಾನಂ=ಸಹಜದಾನವೆಂದು, ವಿಖ್ಯಾತಂ=ಪ್ರಸಿದ್ಧವೆಂದು ಹೇಳಲುಪಟ್ಟಿತ್ತು. ||೮೪||

**ಸೂತ್ರ||** ಬಳಿಕ ಏಕಪುಷ್ಪದಾನಫಲವನು ಹೇಳುತ್ತಿರ್ದ್ದಪಂ.

**ಗ್ರಂಥ||** **ದಾನಾತ್ಸ್ವರ್ಣಸಹಸ್ರಸ್ಯ ಸತ್ಪಾತ್ರೇ ಯತ್ಫಲಂ ಭವೇತ್ ।**
**ಏಕಪುಷ್ಪಪ್ರದಾನೇನ ಶಿವೇ ತತ್ಫಲಮಿಷ್ಯತೇ ॥**

**ಟೀಕು||** ಸತ್ಪಾತ್ರೇ=ಸತ್ಪಾತ್ರದಲ್ಲಿ, ಸ್ವರ್ಣಸಹಸ್ರಸ್ಯ=ಸಹಸ್ರಸುವರ್ಣದ, ದಾನಾತ್=ದಾನದ ದೆಸೆಯಿಂದೆ, ಯತ್ಫಲಂ=ಆವುದಾನೊಂದು ಫಲವು, ಭವೇತ್=ಅಹುದು. ಶಿವೇ ವಿಷಯೇ=ಶಿವಲಿಂಗ ವಿಷಯವಾಗಿ, ಏಕಪುಷ್ಪಪ್ರದಾನೇನ=ಒಂದು ಪುಷ್ಪವ ಸಮರ್ಪಿಸುವವರಿಂದೆ, ತತ್ಫಲಂ=ಆ ಫಲವು, ಇಷ್ಯತೇ=ಇಚ್ಛೈಸಲುಪಡುತ್ತಿರ್ದ್ದಪುದು. ||೮೫||

**ಸೂತ್ರ||** ಬಳಿಕ ದಾನಕರ್ಮಕ್ಕೆ ಶಿವಲಿಂಗ ಶ್ರೀಗುರು ಶಿವಯೋಗೀಶ್ವರರಿಗೆ ಸತ್ಪಾತ್ರವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಶಿವ ಏವ ಪರಂ ಪಾತ್ರಂ ಸರ್ವವಿದ್ಯಾನಿಧಿರ್ಗುರುಃ ।**
**ತಸ್ಮೈ ದತ್ತಂ ತು ಯತ್ಕಿಂಚಿತ್ತದನಂತಫಲಂ ಭವೇತ್ ॥**

**ಟೀಕು||** ಶಿವ ಏವ=ಶಿವಲಿಂಗವೇ, ಪರಂ ಪಾತ್ರಂ=ದಾನಕ್ಕೆ ಉತ್ಕರ್ಷವಾದ ಸತ್ಪಾತ್ರವು. ತಥಾ=ಹಾಂಗೆಯೇ, ಸರ್ವವಿದ್ಯಾ ನಿಧಿಃ ಗುರುಃ=ಸಮಸ್ತ ವಿದ್ಯಂಗಳಿಗೆ ನಿಧಿಯಾದ ಶ್ರೀಗುರುವು; ಪರಂ ಪಾತ್ರಂ=ದಾನಕ್ಕೆ ಸರ್ವೋತ್ಕರ್ಷವಾದ ಸತ್ಪಾತ್ರವು. ತಸ್ಮೈ=ಆ ಶ್ರೀಗುರುವಿಗೋಸುಗ, ಯತ್ ಕಿಂಚಿತ್=ಆವುದಾನೊಂದು ವಸ್ತುವು, ದತ್ತಂ=ಕೊಡಲುಪಟ್ಟಿತ್ತು, ತತ್=ಆ ದಾನವಾಯಿತ್ತಾದೊಡೆ, ಅನಂತ ಫಲಂ=ಕಡೆಯಿಲ್ಲದ ಫಲವುಳ್ಳದು, ಭವೇತ್=ಅಹುದು. ||೮೬||

**ಗ್ರಂಥ||** **ಶಿವಯೋಗೀ ಶಿವಸ್ಸಾಕ್ಷಾತ್ ಶಿವಜ್ಞಾನಮಹೋದಧಿಃ ।**
**ಯತ್ಕಿಂಚಿದ್ದೀಯತೇ ತಸ್ಮೈ ತದ್ದಾನಂ ಪಾರಮಾರ್ಥಿಕಮ್ ॥**

**ಟೀಕು||** ಶಿವಜ್ಞಾನ ಮಹೋದಧಿಃ=ಶಿವಜ್ಞಾನಕ್ಕೆ ಮಹಾಸಮುದ್ರಸ್ಥಾನನಾಗಿರ್ದ್ದ, ಶಿವಯೋಗೀ=ಶಿವಯೋಗೀಶ್ವರನೇ, ಸಾಕ್ಷಾತ್ ಶಿವಃ=ಪ್ರತ್ಯಕ್ಷನಾದ ಶಿವನೇ; ತಸ್ಮೈ=ಆ ಶಿವಯೋಗೀ

ಶ್ವರನಿಗೋಸುಗ, ಯತ್ಕಿಂಚಿತ್=ಆವುದಾನೊಂದು ವಸ್ತುವು, ದೀಯತೇ=ಕೊಡಲುಪಡುತ್ತಿರ್ದ್ದಪುದು, ತತ್ ದಾನಂ=ಆ ದಾನವು, ಪಾರಮಾರ್ಥಿಕಂ=ಪರಮಾರ್ಥಸಿದ್ಧವಾಗಿದ್ದ ಅದು. ||೮೭||

**ಸೂತ್ರ||** ಬಳಿಕ ಆ ಶಿವಯೋಗೀಶ್ವರನೆ ಸತ್ಪಾತ್ರವೆಂದು ಸೂತ್ರತ್ರಯದಿಂದೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||** **ಶಿವಯೋಗೀ ಮಹತ್ಪಾತ್ರಂ ಸರ್ವೇಷಾಂ ದಾನಕರ್ಮಣಿ ।**
**ತಸ್ಮಾನ್ನಾಸ್ತಿ ಪರಂ ಕಿಂಚಿತ್ಪಾತ್ರಂ ಶಾಸ್ತ್ರವಿಚಾರತಃ ॥**

**ಟೀಕು||** ದಾನಕರ್ಮಣಿ ವಿಷಯೇ=ದಾನಕರ್ಮ ವಿಷಯವಾಗಿ, ಸರ್ವೇಷಾಂ=ಸಮಸ್ತರಿಗೂ ಶಿವಯೋಗೀ=ಶಿವಯೋಗೀಶ್ವರನೇ, ಮಹತ್ಪಾತ್ರಂ=ಮಹಾಸತ್ಪಾತ್ರವು. ತಸ್ಮಾತ್=ಆ ಶಿವಯೋಗೀಶ್ವರನ ದೆಸೆಯಿಂದೆ, ಪರಂ ಪಾತ್ರಂ=ಉತ್ಕೃಷ್ಟವಾದ ಸತ್ಪಾತ್ರವು, ಶಾಸ್ತ್ರವಿಚಾರತಃ=ಶಾಸ್ತ್ರವಿಚಾರದದೆಸೆಯಿಂದ, ಕಿಂಚಿತ್=ಒಪ್ಪಚ್ಚಿಯೂ, ನಾಸ್ತಿ=ಉಂಟಾಗುತ್ತಿರದು. ||೮೮||

**ಗ್ರಂಥ||** **ಭಿಕ್ಷಾಮಾತ್ರಪ್ರದಾನೇನ ಶಾಂತಾಯ ಶಿವಯೋಗಿನೇ ।**
**ಯತ್ಫಲಂ ಲಭ್ಯತೇ ನೈತದ್ಯಜ್ಞಕೋಟಿಶತೈರಪಿ ॥**

**ಟೀಕು||** ಶಾಂತಾಯ=ರಾಗದ್ವೇಷರಹಿತನಾದ, ಶಿವಯೋಗಿನೇ=ಶಿವಯೋಗೀಶ್ವರನಿಗೋಸುಗ, ಭಿಕ್ಷಾಮಾತ್ರಪ್ರದಾನೇನ=ಒಂದು ತುತ್ತು ಭಿಕ್ಷವನೀಡುವದರಿಂದೆ, ಯತ್ಫಲಂ=ಆವುದಾನೊಂದು ಫಲವು, ಲಭ್ಯತೇ=ಪಡೆಯಲುಪಡುತ್ತಿರ್ದ್ದಪುದು, ಏತತ್=ಈ ಫಲವು, ಯಜ್ಞಕೋಟಿಶತೈರಪಿ=ಕೋಟಿ ಶತ ಯಜ್ಞಂಗಳಿಂದಲಾಯಿತ್ತಾದೊಡೆಯು, ನ ಲಭ್ಯತೇ=ಪಡೆಯಲುಪಡುತ್ತಿರದಿರ್ದ್ದಪುದು. ||೮೯||

**ಗ್ರಂಥ||** **ಶಿವಯೋಗಿನಿ ಸಂತೃಪ್ತೇ ತೃಪ್ತೋ ಭವತಿ ಶಂಕರಃ ।**
**ತತ್ತೃಪ್ತ್ಯಾ ತನ್ಮಯಂ ವಿಶ್ವಂ ತೃಪ್ತಿಮೇತಿ ಚರಾಚರಮ್ ॥**

**ಟೀಕು||** ಶಿವಯೋಗಿನಿ=ಶಿವಯೋಗೀಶ್ವರನು, ಸಂತೃಪ್ತೇ ಸತಿ=ಸಂತೃಪ್ತನಾಗಲಾಗಿ, ಶಂಕರಃ=ಪರಮೇಶ್ವರನು, ತೃಪ್ತೋ ಭವತಿ=ತೃಪ್ತನಾಗುತ್ತಿರ್ದ್ದಪನು. ತತ್ತೃಪ್ತ್ಯಾ=ಆ ಪರಮೇಶ್ವರನ ತೃಪ್ತಿಯಿಂದೆ, ತನ್ಮಯಂ=ಆತನ ಸ್ವರೂಪವಾದ, ಚರಾಚರಂ ವಿಶ್ವಂ="ಅಯಾಮಾತ್ಮಾಬ್ರಹ್ಮ ಸರ್ವಂ ಖಲ್ವಿದಂ ಬ್ರಹ್ಮ"ಯೆಂಬ ಶ್ರುತಿಯಿಂದೆ ಚರಾಚರಾತ್ಮಕವಾದ ವಿಶ್ವರು, ತೃಪ್ತಿಂ=ಸಂತೃಪ್ತಿಯನು, ಏತಿ=ಎಯ್ದುತ್ತಿರ್ದ್ದಪುದು. ||೯೦||

**ಸೂತ್ರ||** ಬಳಿಕ ಆವಪ್ರಕಾರದಿಂದವೂ ಶಿವಯೋಗೀಶ್ವರನಿಗೆ ತೃಪ್ತಿಯ ಮಾಡಬೇಕೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ತಸ್ಮಾತ್ಸರ್ವಪ್ರಯತ್ನೇನ ಯೇನ ಕೇನಾಪಿ ಕರ್ಮಣಾ ।**
**ತೃಪ್ತಿಂ ಕುರ್ಯಾತ್ಸದಾಕಾಲಮನ್ನಾದ್ಯೈ ಶ್ಶಿವಯೋಗಿನಃ ॥**

**ಟೀಕು||** ತಸ್ಮಾತ್=ಅದುಕಾರಣವಾಗಿ, ಸರ್ವಪ್ರಯತ್ನೇನ=ಸಮಸ್ತಪ್ರಯತ್ನದಿಂದವೂ, ಯೇನ ಕೇನಾಪಿ ಕರ್ಮಣಾ=ಆವಾವ ಕ್ರಿಯೆಯಿಂದಲಾದಡೂ, ಶಿವಯೋಗಿನಃ=ಶಿವಯೋಗೀಶ್ವರನಿಗೆ, ಅನ್ನಾದ್ಯೈಃ=ಅನ್ನ ಮೊದಲಾದವರಿಂದೆ, ಸದಾಕಾಲಂ=ಎಲ್ಲಾ ಕಾಲದಲ್ಲಿಯು, ತೃಪ್ತಿಂ=ಸಂತೃಪ್ತಿಯನು, ಕುರ್ಯಾತ್=ಮಾಡುವುದು. ||೯೧||

**ಸೂತ್ರ||** ಬಳಿಕ ಸಹಜದಾನ ಸಂಪನ್ನನೆ ಶಿವನೆಂದು ಹೇಳುತ್ತಿರ್ದಪಂ.

**ಗ್ರಂಥ||** **ನಿರುಪಾಧಿಕಚಿದ್ರೂಪಪರಾನಂದಾತ್ಮವಸ್ತುನಿ ।**
**ಸಮಾಪ್ತಂ ಸಕಲಂ ಯಸ್ಯ ಸ ದಾನೀ ಶಂಕರಸ್ಸ್ವಯಮ್ ॥**

**ಟೀಕು||** ನಿರುಪಾಧಿಕಚಿದ್ರೂಪಪರಾನಂದಾತ್ಮವಸ್ತುನಿ=ಉಪಾಧಿರಹಿತವಾಗಿ ಸಚ್ಚಿದಾನಂದಾತ್ಮಕವಾದ ಪರವಸ್ತುವಿನಲ್ಲಿ, ಯಸ್ಯ=ಆವನಾನೊರ್ವ ಶಿವಭಕ್ತನ, ಸಕಲಂ=ಸಮಸ್ತಪದಾರ್ಥವು, ಸಮಾಪ್ತಂ=ಸಮಾಪ್ತಿಯಮಾಡಲುಪಟ್ಟಿತ್ತು; ಸ ದಾನೀ=ಆ ಸಹಜದಾನಿಯಾದಡೆ, ಸ್ವಯಂ=ತಾನೆ, ಶಂಕರಃ=ಶಿವನು. ||೯೨||

**ಸೂತ್ರ||** ಬಳಿಕ ಸಹಜದಾನಸಂಪನ್ನನಾದ ಶಿವಭಕ್ತನೆ ಮಾಹೇಶ್ವರತ್ವವನು ಎಯ್ದುತ್ತಿರ್ದಪನೆಂದು ಹೇಳುತ್ತಿರ್ದಪಂ.

**ವೃತ್ತ||** **ಉಕ್ತಾಖಿಲಾಚಾರಪರಾಯಣೋಽಸೌ ಸದಾ ವಿತನ್ವನ್ ಸಹಜಂ ತು ದಾನಮ್ ।**
**ಬ್ರಹ್ಮಾದಿಸಂಪತ್ಸು ವಿರಕ್ತಚಿತ್ತೋ ಭಕ್ತೋ ಹಿ ಮಾಹೇಶ್ವರತಾಮುಪೈತಿ ॥**

**ಟೀಕು||** ಉಕ್ತಾಖಿಲಾಚಾರಪರಾಯಣಃ=ಈ ಭಕ್ತಸ್ಥಲದಲ್ಲಿ ಹೇಳಲುಪಟ್ಟ ಸಮಸ್ತ ಶಿವಾಚಾರದಲ್ಲಿ ತತ್ಪರನಾಗಿ, ಸಹಜಂ ದಾನಂ ತು=ಸಹಜದಾನವಾಯಿತ್ತಾದೊಡೆ, ಸದಾ=ಎಲ್ಲಾ ಕಾಲದಲ್ಲಿಯು, ವಿತನ್ವನ್=ವಿಸ್ತರಿಸುತ್ತಿರ್ದ್ದ, ಬ್ರಹ್ಮಾದಿಸಂಪತ್ಸು=ಬ್ರಹ್ಮವಿಷ್ಣ್ವಾದಿಗಳ ಸಂಪತ್ತಿಗಳಲ್ಲಿ, ವಿರಕ್ತಚಿತ್ತಃ=ವಿರಕ್ತಬುದ್ಧಿಯುಳ್ಳ, ಅಸೌ ಭಕ್ತಃ=ಈ ಶಿವಭಕ್ತನೆ, ಮಾಹೇಶ್ವರತಾಂ=ಮಾಹೇಶ್ವರತ್ವವನು, ಉಪೈತಿ=ಬಳಿವಿಡಿದು ಎಯ್ದುತ್ತಿರ್ದ್ದಪನು. ಹಿ=ಪ್ರಸಿದ್ಧವು.

**ತಾತ್ಪರ್ಯ||** ದೇಹದ್ರವ್ಯಕ್ಷೇತ್ರಂಗಳನು ಶ್ರೀಗುರುಜಂಗಮಲಿಂಗಕ್ಕೆ ಸಮರ್ಪಿಸಿ ಶ್ರೀಗುರುವಿನ ಕರಕಮಲದಲ್ಲಿ ಹುಟ್ಟಿ ಜಂಗಮದೇವರ ತೀರ್ಥಪ್ರಸಾದದಿಂದೆ ಬದುಕಿ ಮಹಾಲಿಂಗದಲ್ಲಿ ಅಯಿಕ್ಯವ

ಬಯಸುವ ಶಿವಭಕ್ತನು ಮಾಹೇಶ್ವರ ಸಂಬಂಧವಾದ ಸದಾಚಾರ ಉಳ್ಳಾತನಾಗಿ ಮಾಹೇಶ್ವರನೆನಿಸಿಕೊಂಬನೆಂಬುದರ್ಥ. ||೬೨||

**ಇತಿ ದಾನತ್ರಯಸ್ಥಲಮ್**

**ಶ್ರೀ ವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಭಕ್ತಸ್ಥಲೇ ಮಾಹೇಶ್ವರಸ್ಯ ನವವಿಧಸ್ಥಲಪ್ರಸಂಗೋ ನಾಮ ನವಮಃ ಪರಿಚ್ಛೇದಃ ಸಮಾಪ್ತಃ**

# ದ್ವಿತೀಯಂ ಮಾಹೇಶ್ವರಸ್ಥಲಮ್

**ಅಗಸ್ತ್ಯ ಉವಾಚ॥**

**ಸೂತ್ರ॥** ಭಕ್ತಸ್ಥಲ ಸಮಾಪ್ತಿಯಾದನಂತರದಲ್ಲಿ ಅಗಸ್ತ್ಯ ಮುನೀಶ್ವರನು ರೇಣುಕಗಣೇಶ್ವರನನು ಪ್ರಶ್ನೆಯಂ ಮಾಡಿ ಕೇಳುತ್ತಿರ್ದ್ದಪಂ.

**ಗ್ರಂಥ॥** **ಭಕ್ತಸ್ಥಲಂ ಸಮಾಖ್ಯಾತಂ ಭವತಾ ಗಣನಾಯಕ ।**
**ಕೇನ ವಾ ಧರ್ಮಭೇದೇನ ಭಕ್ತೋ ಮಾಹೇಶ್ವರೋ ಭವೇತ್ ॥**

**ಟೀಕು॥** ಭೋ ಗಣನಾಯಕ=ಎಲೆ ರೇಣುಕಗಣೇಶ್ವರನೆ!, ಭವತಾ=ನಿನ್ನಿಂದೆ, ಭಕ್ತಸ್ಥಲಂ= ಭಕ್ತಸ್ಥಲವು, ಸಮಾಖ್ಯಾತಂ=ಹೇಳಲುಪಟ್ಟಿತ್ತು. ಭಕ್ತಃ=ಶಿವಭಕ್ತನು, ಕೇನ ವಾ ಧರ್ಮಭೇದೇನ=ಆವಾಚಾರ ಭೇದದಿಂದೆ, ಮಾಹೇಶ್ವರಃ=ಮಾಹೇಶ್ವರನು, ಭವೇತ್=ಅಹನು? ॥೧॥

**ರೇಣುಕ ಉವಾಚ॥** ರೇಣುಕಗಣೇಶ್ವರನು ಅಗಸ್ತ್ಯ ಮುನಿಗೆ ಉತ್ತರವನು ನಿರೂಪಿಸುತ್ತಿರ್ದ್ದಪನು.

**ಗ್ರಂಥ॥** **ಕೇವಲೇ ಸಹಜೇ ದಾನೇ ನಿಷ್ಣಾತಃ ಶಿವತತ್ಪರಃ ।**
**ಬ್ರಹ್ಮಾದಿಸ್ಥಾನ ವಿಮುಖೋ ಭಕ್ತೋ ಮಾಹೇಶ್ವರಃ ಸ್ಮೃತಃ ॥**

**ಟೀಕು॥** ಕೇವಲೇ ಸಹಜೇ ದಾನೇ=ಬರಿಯ ಸಹಜದಾನದಲ್ಲಿ, ನಿಷ್ಣಾತಃ=ಕುಶಲನಾಗಿ, ಬ್ರಹ್ಮಾದಿಸ್ಥಾನ ವಿಮುಖಃ=ಬ್ರಹ್ಮವಿಷ್ಣ್ವಾದಿ ಪದಂಗಳಲ್ಲಿ ಅಡ್ಡಲಾದ ಮುಖವುಳ್ಳ, ಭಕ್ತಃ=ಶಿವಭಕ್ತನು, ಶಿವತತ್ಪರಃ= ಮಹೇಶ್ವರನೊರ್ವನಲ್ಲಿಯೆ ತತ್ಪರನಾಗಲಾಗಿ, ಮಾಹೇಶ್ವರಃ=ಮಾಹೇಶ್ವರನೆಂದು,ಸ್ಮೃತಃ=ನೆನೆಯಲು ಪಟ್ಟನು. ॥೨॥

**ಸೂತ್ರ॥** ಬಳಿಕ ಆ ಅರ್ಥವನೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ॥** **ಭಕ್ತೇರ್ಯದಾ ಸಮುತ್ಕರ್ಷಃ ಭವೇದ್ವೈರಾಗ್ಯಗೌರವಾತ್ ।**
**ತದಾ ಮಾಹೇಶ್ವರಃ ಪ್ರೋಕ್ತೋ ಭಕ್ತಃ ಸ್ಥಿರವಿವೇಕವಾನ್ ॥**

**ಟೀಕು॥** ಭಕ್ತೇಃ=ಶಿವಭಕ್ತಿಗೆ, ಸಮುತ್ಕರ್ಷಃ=ಲೇಸಾದ ಉತ್ಕರ್ಷವು, ವೈರಾಗ್ಯ ಗೌರವಾತ್=ವೈರಾಗ್ಯದ ಗುರುತ್ವದಿಂದೆ, ಯದಾ-ಆವಕಾಲದಲ್ಲಿ, ಭವೇತ್=ಅಹುದು, ತದಾ=ಆ ಕಾಲದಲ್ಲಿ, ಸ್ಥಿರವಿವೇಕವಾನ್=ಸ್ಥಿರವಾದ ವಿವೇಕವುಳ್ಳ, ಭಕ್ತಃ=ಶಿವಭಕ್ತನು, ಮಾಹೇಶ್ವರಃ=ಮಾಹೇಶ್ವರನೆಂದು, ಪ್ರೋಕ್ತಃ=ಹೇಳಲುಪಟ್ಟನು. ॥೩॥

**ಸೂತ್ರ॥** ಬಳಿಕ ಮಾಹೇಶ್ವರಸ್ಥಲದ ಅವಾಂತರಸ್ಥಲಗಳುದ್ದೇಶವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥**

**ಮಾಹೇಶ್ವರಸ್ಥಲಂ ವಕ್ಷ್ಯೇ ಯಥೋಕ್ತಂ ಶಂಭುನಾ ಪುರಾ ।**
**ಮಾಹೇಶ್ವರಪ್ರಶಂಸಾಽಽದೌ ಲಿಂಗನಿಷ್ಠಾ ತತಃ ಪರಮ್ ॥**

**ಪೂರ್ವಾಶ್ರಯನಿರಾಸಶ್ಚ ತಥಾಽದ್ವೈತನಿರಾಕೃತಿಃ ।**
**ಆಹ್ವಾನವರ್ಜನಂ ಪಶ್ಚಾದಷ್ಟಮೂರ್ತಿನಿರಾಕೃತಿಃ ॥**

**ಸರ್ವಗತ್ವನಿರಾಸಶ್ಚ ಶಿವತ್ವಂ ವಿಶ್ವಭಕ್ತಯೋಃ ।**
**ಏವಂ ನವವಿಧಂ ಪ್ರೋಕ್ತಂ ಮಾಹೇಶ್ವರಮಹಾಸ್ಥಲಮ್ ॥**

**ಟೀಕು॥** ಪುರಾ=ಪೂರ್ವದಲ್ಲಿ, ಶಂಭುನಾ=ಪರಮೇಶ್ವರನಿಂದೆ, ಯಥಾ ಉಕ್ತಂ=ಹೇಗೆ ಹೇಳಲುಪಟ್ಟಿತ್ತು, ತಥಾ=ಹಾಗೆಯೆ, ಮಾಹೇಶ್ವರಸ್ಥಲಂ=ಮಾಹೇಶ್ವರಸ್ಥಲವನು, ವಕ್ಷ್ಯೇ=ಹೇಳಿಹೆನು. ಆದೌ=ಮೊದಲಲ್ಲಿ, ಮಾಹೇಶ್ವರಪ್ರಶಂಸಾ=ಮಾಹೇಶ್ವರಪ್ರಶಂಸಾಸ್ಥಲವು, ತತಃ ಪರಂ=ಅದರ ನಂತರದಲ್ಲಿ, ಲಿಂಗನಿಷ್ಠಾ=ಲಿಂಗನಿಷ್ಠಾಸ್ಥಲವು, ಪೂರ್ವಾಶ್ರಯನಿರಾಸಶ್ಚ=ಪೂರ್ವಾಶ್ರಯನಿರಾಸನ ಸ್ಥಲವು, ತಥಾ=ಹಾಗೆಯೇ, ಅದ್ವೈ ೖತನಿರಾಕೃತಿಃ=ಅದ್ವೈತನಿರಸನಸ್ಥಲವು, ಪಶ್ಚಾತ್=ಬಳಿಕ ಆಹ್ವಾನವರ್ಜನಂ=ಆಹ್ವಾನ ನಿರಸನಸ್ಥಲವು, ಅಷ್ಟಮೂರ್ತಿನಿರಾಕೃತಿಃ=ಅಷ್ಟಮೂರ್ತಿನಿರಸನಸ್ಥಲವು, ಸರ್ವಗತ್ವನಿರಾಸಶ್ಚ=ಸರ್ವಗತ್ವನಿರಸನಸ್ಥಲವು, ಶಿವತ್ವಂ ವಿಶ್ವಭಕ್ತಯೋಃ=ಶಿವಜಗನ್ಮಯಸ್ಥಲವು, ಭಕ್ತದೇಹಿಕಲಿಂಗಸ್ಥಲವೂ, ಏವಂ=ಈ ಪ್ರಕಾರದಿಂದೆ, ಮಾಹೇಶ್ವರ ಮಹಾಸ್ಥಲಂ=ದೊಡ್ಡಿತ್ತಾದ ಮಾಹೇಶ್ವರಸ್ಥಲವು, ನವವಿಧಂ=ಒಂಭತ್ತು ಪ್ರಕಾರವುಳ್ಳುದಾಗಿ, ಪ್ರೋಕ್ತಂ=ಹೇಳಲುಪಟ್ಟಿತ್ತು. ॥೬॥

**ಸೂತ್ರ॥** ಬಳಿಕ ಆ ಉದ್ದೇಶವಾದ ಅವಾಂತರಸ್ಥಲಂಗಳಿಗೆ ಲಕ್ಷಣವ ಹೇಳಿಹೆನೆಂದು ಹೇಳುತ್ತಿರ್ದಪಂ.

**ಗ್ರಂಥ॥**

**ಆದಿತಃ ಕ್ರಮಶೋ ವಕ್ಷ್ಯೇ ಸ್ಥಲಭೇದಸ್ಯ ಲಕ್ಷಣಮ್ ।**
**ಸಮಾಹಿತೇನ ಮನಸಾ ಶ್ರೂಯತಾಂ ಭವತಾ ಮುನೇ ॥**

**ಟೀಕು॥** ಸ್ಥಲಭೇದಸ್ಯ=ಅವಾಂತರಸ್ಥಲಭೇದದ, ಲಕ್ಷಣಂ=ಲಕ್ಷಣವನು, ಆದಿತಃ ಕ್ರಮಶಃ= ಮೊದಲಿಂದ ಕ್ರಮವಾಗಿ, ವಕ್ಷ್ಯೇ=ಹೇಳಿಹೆನು. ಭೋ ಮುನೇ=ಎಲೈ ಅಗಸ್ತ್ಯಮುನಿಯೆ! ಭವತಾ= ನಿನ್ನಿಂದೆ, ಸಮಾಹಿತೇನ ಮನಸಾ=ಏಕಾಗ್ರಚಿತ್ತದಿಂದೆ, ಶ್ರೂಯತಾಂ=ಕೇಳಲುಪಡಲಿ. ॥೭॥

## ೧೬. ಮಾಹೇಶ್ವರಸ್ಥಲೇ ಮಾಹೇಶ್ವರಪ್ರಶಂಸಾಸ್ಥಲಮ್

**ಸೂತ್ರ॥** "ವಿಶ್ವಾಧಿಪೋ ರುದ್ರೋ ಮಹರ್ಷಿಃ ಹಿರಣ್ಯಗರ್ಭಂ ಜನಯಾಮಾಸ ಪೂರ್ವಮ್। ಸ ನೋ ಬುಧ್ಯಾ ಶುಭಯಾ ಸಂಯುನಕ್ತಿ"॥ಯೆಂಬ ಶ್ವೇತಾಶ್ವತರಶ್ರುತ್ಯರ್ಥವನು ಪ್ರಕಾಶಿಸುತ್ತ ತ್ರಯೋದಶಸೂತ್ರಂಗಳಿಂದೆ ಮಾಹೇಶ್ವರಪ್ರಶಂಸೆಯನು ಹೇಳುತ್ತಿರ್ದಪಂ.

**ಗ್ರಂಥ॥** **ವಿಶ್ವಸ್ಮಾದಧಿಕೋ ರುದ್ರಃ ವಿಶ್ವಾನುಗ್ರಹಕಾರಕಃ ।**
**ಇತಿ ಯಸ್ಯ ಸ್ಥಿರಾ ಬುದ್ಧಿಃ ಸ ವೈ ಮಾಹೇಶ್ವರಃ ಸ್ಮೃತಃ ॥**

**ಟೀಕು॥** ವಿಶ್ವಾನುಗ್ರಹಕಾರಕಃ=ಸಮಸ್ತ ದೇವದಾನವಾದಿಗಳಿಗೆ ಅನುಗ್ರಹವನು ಮಾಡುತ್ತಿರ್ದ, ರುದ್ರಃ="ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ" ಯೆಂದು ಶ್ರುತಿ ಪ್ರಸಿದ್ಧವಾದ ರುದ್ರನು, ವಿಶ್ವಸ್ಮಾತ್='ವಿಶ್ವಂ ನಾರಾಯಣಂ ಹರಿಮ್' ಯೆಂದು ಶ್ರುತಿ ಪ್ರಸಿದ್ಧವಾದ ವಿಶ್ವರೂಪನಾದ ನಾರಾಯಣನದೆಸೆಯಿಂದೆ, ಅಧಿಕಃ ಇತಿ=ಅಧಿಕನೆಂದು, ಯಸ್ಯ=ಆವಾತನ, ಬುದ್ಧಿಃ=ಬುದ್ಧಿಯು, ಸ್ಥಿರಾ=ದೃಢವಾಗಿದ್ದ ಅದು, ಸ ವೈ=ಆತನೀಗ, ಮಾಹೇಶ್ವರಃ=ಮಾಹೇಶ್ವರನೆಂದು, ಸ್ಮೃತಃ=ನೆನೆಯಲು ಪಟ್ಟನು. ॥೮॥

**ಸೂತ್ರ॥** ಬಳಿಕ "ಮಾ ತ್ವಾ ರುದ್ರ ಚಕ್ರುಧಾಮೋ ನಮೋಭಿರ್ಮಾದುಷ್ಟತಿವೃಷಭಂ ಮಾನಹೂತಿ"ಯೆಂಬ ಋಗ್ವೇದಾರ್ಥವನು, "ಖದ್ಯೋತೋ ಯದಿ ಚಂಡಭಾನುಸದೃಶಃ ಸಾಮ್ಯೋ ಹರಿಃ ಶಂಭುನಾ ಕಿಂಪಾಕೋ ಯದಿ ಚಂದನೇನ ಸದೃಶಃ ಸಾಮ್ಯೋಽಹಮೀಶೇನ ತು" ಯೆಂಬ ಬ್ರಹ್ಮಗೀತಾರ್ಥವನು, "ಯಥಾಸ್ಯಾಪಾನಯೋಃ ಸಾಮ್ಯಂ ಛಿದ್ರತ್ವೇಽಪಿ ನ ವಿದ್ಯತೇ। ದೇವತ್ವೇಪಿ ತಥಾ ವಿಷ್ಣೋ ರುದ್ರಸಾಮ್ಯಂ ನ ವಿದ್ಯತೇ॥" ಯೆಂಬ ಸೂತಗೀತಾರ್ಥವನು ಪ್ರಕಾಶಿಸುತ್ತ ಮಾಹೇಶ್ವರನನು ಹೇಳುತ್ತಿರ್ದಪಂ.

**ಗ್ರಂಥ॥** **ಬ್ರಹ್ಮಾದ್ಯೈರ್ಮಲಿನಪ್ರಾಯೈಃ ನಿರ್ಮಲೇ ಪರಮೇಶ್ವರೇ ।**
**ಸಾಮ್ಯೋಕ್ತಿಂ ಯೋ ನ ಸಹತೇ ಸ ವೈ ಮಾಹೇಶ್ವರಾಭಿಧಃ ॥**

**ಟೀಕು॥** ನಿರ್ಮಲೇ=ಮಲರಹಿತನಾಗಿರ್ದ, ಪರಮೇಶ್ವರೇ ವಿಷಯೇ=ಮಹೇಶ್ವರವಿಷಯವಾಗಿ, ಮಲಿನಪ್ರಾಯೈಃ=ಮಲಯುಕ್ತವಾದಭಿಪ್ರಾಯವುಳ್ಳ, ಬ್ರಹ್ಮಾದ್ಯೈಃ=ಬ್ರಹ್ಮವಿಷ್ಣ್ವಾದಿ ದೇವತೆಗಳೊಡನೆ, ಸಾಮ್ಯೋಕ್ತಿಂ=ಸಮಾನರೆಂಬ ನುಡಿಯನು, ಯಃ=ಆವನಾನೊಬ್ಬ ಶಿವಭಕ್ತನು, ನ ಸಹತೇ=ಸೈರಿಸುತ್ತಿರನು ಸ ವೈ=ಆತನೀಗ, ಮಾಹೇಶ್ವರಾಭಿಧಃ=ಮಾಹೇಶ್ವರನೆಂಬ ಹೆಸರುಳ್ಳಾತನು. ॥೬॥

**ಸೂತ್ರ||** "ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ಬ್ರಹ್ಮಾಧಿಪತಿಃ ಬ್ರಹ್ಮಣೋಽಧಿಪತಿಃ ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಮ್"। ಯೆಂಬ ನಾರಾಯಣೋಪನಿಷದರ್ಥವನು,

"ಈಶ್ವರಃ ಸರ್ವ ಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ।
ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥" ಯೆಂಬ ಭಗವದ್ಗೀತಾರ್ಥವನು ಪ್ರಕಾಶಿಸುತ್ತ ಮಾಹೇಶ್ವರನನು ಹೇಳುತ್ತಿರ್ದಪಂ.

**ಗ್ರಂಥ||** **ಈಶ್ವರಃ ಸರ್ವಭೂತಾನಾಂ ಬ್ರಹ್ಮಾದೀನಾಂ ಮಹಾನಿತಿ ।**
**ಬುದ್ಧಿಯೋಗಾತ್ತದಾಸಕ್ತೋ ಭಕ್ತೋ ಮಾಹೇಶ್ವರಃ ಸ್ಮೃತಃ ॥**

**ಟೀಕು||** ಬ್ರಹ್ಮಾದೀನಾಂ=ಬ್ರಹ್ಮವಿಷ್ಣುಮೊದಲಾಗುಳ್ಳ, ಸರ್ವಭೂತಾನಾಂ=ಪಶುಗಳಾದ ಸಮಸ್ತ ಪ್ರಾಣಿಗಳಿಗೆ, ಈಶ್ವರಃ=ಪ್ರೇರಕನಾದ ಪರಮೇಶ್ವರನೊರ್ವನೆ, ಮಹಾನಿತಿ=ಶ್ರೇಷ್ಠನುಯೆಂಬ, ಬುದ್ಧಿಯೋಗಾತ್=ಬುದ್ಧಿಯೋಗದದೆಸೆಯಿಂದೆ, ತದಾಸಕ್ತಃ=ಆ ಪರಮೇಶ್ವರನಲ್ಲಿ ಆಸಕ್ತನಾದ, ಭಕ್ತಃ=ಶಿವಭಕ್ತನು, ಮಾಹೇಶ್ವರಃ=ಮಾಹೇಶ್ವರನೆಂದು, ಸ್ಮೃತಃ=ನೆನೆಯಲುಪಟ್ಟನು. ||೧೦||

**ಸೂತ್ರ||** ಬಳಿಕ ಮಾಹೇಶ್ವರನೊರ್ವನೆ ಮುಕ್ತಿಪ್ರದನೆಂದು ಆವಾತನು ತಿಳಿವುತ್ತಿರ್ದ್ದಪನು ಆತನೀಗ ಮಾಹೇಶ್ವರನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಬ್ರಹ್ಮಾದಿದೇವತಾಜಾಲಂ ಮೋಹಿತಂ ಮಾಯಯಾ ಸದಾ ।**
**ಅಶಕ್ತಂ ಮುಕ್ತಿದಾನೇ ತು ಕ್ಷಯಾತಿಶಯಸಂಯುತಮ್ ॥**

**ಅನಾದಿಮುಕ್ತೋ ಭಗವಾನೇಕ ಏವ ಮಹೇಶ್ವರಃ ।**
**ಮುಕ್ತಿದಶ್ಚೇತಿ ಯೋ ವೇದ ಸ ವೈ ಮಾಹೇಶ್ವರಃ ಸ್ಮೃತಃ ॥**

**ಟೀಕು||** ಕ್ಷಯಾತಿಶಯಸಂಯುತಂ=ಜನನಮರಣಾದಿಗಳ ಅತಿಶಯದೊಡನೆ ಕೂಡಿರ್ದ್ದ, ಬ್ರಹ್ಮಾದಿದೇವತಾಜಾಲಂ=ಬ್ರಹ್ಮವಿಷ್ಣ್ವಾದಿ ದೇವತೆಗಳ ಸಮೂಹವು, ಸದಾ=ಎಲ್ಲಾಕಾಲದಲ್ಲಿಯು, ಮಾಯಯಾ=ಮಾಯಾಪಾಶದಿಂದೆ, ಮೋಹಿತಂ ಸನ್=ಮೋಹಿಸಲುಪಟ್ಟದಾಗುತವು, ಮುಕ್ತಿದಾನೇ ತು=ಪರಾಪರಮೋಕ್ಷಂಗಳನು ಕೊಡುವಲ್ಲಿಯಾಯಿತ್ತಾದೊಡೆ, ಅಶಕ್ತಂ=ಸಮರ್ಥವಲ್ಲದೆಯಿದ್ದ ಅದು, ಅನಾದಿಮುಕ್ತಃ=ನಿತ್ಯಮುಕ್ತನಾಗಿ, ಭಗವಾನ್=ಷಡ್ಗುಣೈಶ್ವರ್ಯಸಂಪನ್ನನಾದ, ಮಹೇಶ್ವರಃ ಏಕ ಏವ="ತತ್ಪರಂ ಬ್ರಹ್ಮ ಸ ಏಕಃ, ಸ ಏಕೋ ರುದ್ರಃ, ಸ ಈಶಾನಃ, ಸ ಭಗವಾನ್। ಸ ಮಹೇಶ್ವರಃ ಸ ಮಹಾದೇವಃ'', ಇತಿಯೆಂದು ಅಥರ್ವಶಿರಃಪ್ರಸಿದ್ಧವಾದ ಮಾಹೇಶ್ವರನೊರ್ವನೆ,

ಮುಕ್ತಿವಲ್ಲೇತಿ=ಪರಾಪರಮೋಕ್ಷವನು ಕೊಡುತ್ತಿರ್ದ್ದಾತನು ಎಂದು, ಯಃ=ಆವಾತನು, ವೇದ=ಅರಿವುತ್ತಿರ್ದ್ದಪನು, ಸ ವೈ=ಆತನೀಗ, ಮಾಹೇಶ್ವರಃ=ಮಾಹೇಶ್ವರನೆಂದು, ಸ್ಮೃತಃ=ನೆನೆಯಲುಪಟ್ಟನು. ||೧೨||

**ಸೂತ್ರ||** ಬಳಿಕ ಬ್ರಹ್ಮಾದಿ ಸಂಪತ್ತಿಯನು ತೃಣದೋಪಾದಿಯಲ್ಲಿ ತಿಳಿದು ಶಿವಾನಂದದಲ್ಲಿ ತತ್ಪರನಾದಾತನೀಗ ವೀರಮಾಹೇಶ್ವರನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| **ಕ್ಷಯಾತಿಶಯಸಂಯುಕ್ತಾ ಬ್ರಹ್ಮವಿಷ್ಣ್ವಾದಿ ಸಂಪದಃ ।**
**ತೃಣವನ್ಮನ್ಯತೇ ಯುಕ್ತ್ಯಾ ವೀರಮಾಹೇಶ್ವರಃ ಸದಾ ॥**

**ಟೀಕು||** ಕ್ಷಯಾತಿಶಯಸಂಯುಕ್ತಾಃ=ವಿನಾಶದ ಅತಿಶಯದೊಡನೆ ಕೂಡಿರ್ದ್ದ, ಬ್ರಹ್ಮವಿಷ್ಣ್ವಾದಿ ಸಂಪದಃ=ಬ್ರಹ್ಮ ವಿಷ್ಣು ಮೊದಲಾದ ದೇವತೆಗಳ ಸಂಪತ್ತಿಗಳನು, ವೀರಮಾಹೇಶ್ವರಃ=ವೀರಮಾಹೇಶ್ವರನು, ಯುಕ್ತ್ಯಾ=ಯುಕ್ತಿಯಿಂದೆ, ತೃಣವತ್=ತೃಣದೋಪಾದಿಯಲ್ಲಿ, ಸದಾ=ಎಲ್ಲಾ ಕಾಲದಲ್ಲಿಯೂ, ಮನ್ಯತೇ=ತಿಳಿವುತ್ತಿರ್ದ್ದಪನು. ||೧೩||

ಗ್ರಂಥ|| **ಶಬ್ದಸ್ಪರ್ಶಾದಿಸಂಪನ್ನೇ ಸುಖಲೇಶೇ ತು ನಿಃಸ್ಪೃಹಃ ।**
**ಶಿವಾನಂದೇ ಸಮುತ್ಕಂಠೋ ವೀರಮಾಹೇಶ್ವರೋ ಭವೇತ್ ॥**

**ಟೀಕು||** ಶಬ್ದಸ್ಪರ್ಶಾದಿಸಂಪನ್ನೇ=ಶಬ್ದಸ್ಪರ್ಶಾದಿ ವಿಷಯಂಗಳಿಂದೆ ಸಂಪನ್ನವಾದ, ಸುಖಲೇಶೇ ತು=ಅಲ್ಪಸುಖದಲ್ಲಿಯಾಯಿತ್ತಾದಡೆ, ನಿಃಸ್ಪೃಹಃ=ವಿರಕ್ತನಾಗಿ, ಶಿವಾನಂದೇ=ನಿತ್ಯವಾದ ಶಿವಾನಂದದಲ್ಲಿ, ಸಮುತ್ಕಂಠಃ=ಪ್ರೀತಿಯುಳ್ಳಾತನೀಗ, ವೀರಮಾಹೇಶ್ವರಃ=ವೀರಮಾಹೇಶ್ವರನು, ಭವೇತ್=ಅಹನು.

**ಸೂತ್ರ||** ಬಳಿಕ ವೀರಮಾಹೇಶ್ವರಾಚಾರ ಭೇದವನು ಷಟ್‌ಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| **ಪರಸ್ತ್ರೀಸಂಗನಿರ್ಮುಕ್ತಃ ಪರದ್ರವ್ಯಪರಾಙ್ಮುಖಃ ।**
**ಶಿವಾರ್ಥಕಾರ್ಯಸಂಪನ್ನಶ್ಶಿವಾಗಮಪರಾಯಣಃ ॥**

**ಶಿವಸ್ತುತಿರಸಾಸ್ವಾದಮೋದಮಾನಮನಾಶ್ಶುಚಿಃ ।**
**ಶಿವೋತ್ಕರ್ಷಪ್ರಮಾಣಾನಾಂ ಸಂಪಾದನಸಮುದ್ಯತಃ ॥**

**ನಿರ್ಮಮೋ ನಿರಹಂಕಾರೋ ನಿರಸ್ತಕ್ಲೇಶಪಂಜರಃ ।**
**ಅಸ್ಪೃಷ್ಟಮದಸಂಬಂಧೋ ಮಾತ್ಸರ್ಯಾವೇಶವರ್ಜಿತಃ ॥**

ನಿರಸ್ತಮದನೋನ್ಮೇಷೋ ನಿರ್ಧೂತಕ್ರೋಧವಿಪ್ಲವಃ ।
ಸದಾ ಸಂತುಷ್ಟಹೃದಯಸ್ಸರ್ವಪ್ರಾಣಿಹಿತೇ ರತಃ ॥

ನಿವಾರಣಸಮುದ್ಯೋಗೀ ಶಿವಕಾರ್ಯವಿರೋಧಿನಾಮ್ ।
ಸಹಚಾರೀ ಸದಾಕಾಲಂ ಶಿವೋತ್ಕರ್ಷಾಭಿಧಾಯಿಭಿಃ ॥

ಶಿವಾಪಕರ್ಷಸಂಪ್ರಾಪ್ತೌ ಪ್ರಾಣತ್ಯಾಗೇಽಪ್ಯಶಂಕಿತಃ ।
ಶಿವೈಕನಿಷ್ಠಸ್ಸರ್ವಾತ್ಮಾ ವೀರಮಾಹೇಶ್ವರೋ ಭವೇತ್ ॥

**ಟೀಕು॥** ಪರಸ್ತ್ರೀಸಂಗನಿರ್ಮುಕ್ತಃ=ಪರಸ್ತ್ರೀಯರಸಂಗದಿಂದೆ ಬಿಡಲುಪಟ್ಟ, ಪರದ್ರವ್ಯ ಪರಾಙ್ಮುಖಃ=ಪರದ್ರವ್ಯ ಸ್ವೀಕಾರ್ಯದಲ್ಲಿ ಅಡ್ಡಲಾದ ಮುಖವುಳ್ಳ, ಶಿವಾರ್ಥಕಾರ್ಯಸಂಪನ್ನಃ= ಶಿವಾರ್ಥವಾದ ಕಾರ್ಯದಲ್ಲಿ ಸಂಪನ್ನನಾಗಿದ್ದ, ಶಿವಾಗಮ ಪರಾಯಣಃ=ಶಿವಾಗಮಂಗಳಲ್ಲಿ ತತ್ಪರನಾಗಿದ್ದ, ಶಿವಸ್ತುತಿರಸಾಸ್ವಾದಮೋದಮಾನಮನಾಃ=ಶಿವಸ್ತೋತ್ರರಸದ ಸ್ವೀಕಾರದಲ್ಲಿ ಸಂತೋಷಿಸುತ್ತಿರ್ದ್ದ ಮನಸ್ಸುಳ್ಳ, ಶುಚಿಃ=ಶುದ್ಧಾತ್ಮನನಾಗಿರ್ದ್ದ, ಶಿವೋತ್ಕರ್ಷಪ್ರಮಾಣಾನಾಂ= ಶಿವಾಧಿಕ್ಯವನು ಉತ್ಕರ್ಷವ ಮಾಡುವಲ್ಲಿ ಪ್ರಮಾಣವಾದ ಶಾಸ್ತ್ರಂಗಳ, ಸಂಪಾದನ ಸಮುದ್ಯತಃ= ಸಂಪಾದಿಸುವಲ್ಲಿ ಉದ್ಯುಕ್ತನಾಗಿರ್ದ್ದ, ನಿರ್ಮಮಃ=ತೊಲಗಲುಪಟ್ಟ ಮಮತೆಯುಳ್ಳ, ನಿರಹಂಕಾರಃ=ತೊಲಗಲುಪಟ್ಟ ಅಹಂಕಾರವುಳ್ಳ, ನಿರಸ್ತಕ್ಲೇಶಪಂಜರಃ=ತೊಲಗಿಸಲುಪಟ್ಟ ಅವಿದ್ಯಾದಿಕ್ಲೇಷಂಗಳ ಸಮೂಹವುಳ್ಳ, ಅಸ್ಪೃಷ್ಟಮದಸಂಬಂಧಃ=ಸೋಂಕಲುಪಡದೆಯಿದ್ದ ಮದದ ಸಂಬಂಧವುಳ್ಳ, ಮಾತ್ಸರ್ಯಾವೇಶವರ್ಜಿತಃ=ಮಾತ್ಸರ್ಯದ ವಶದಿಂದೆ ಬಿಡಲುಪಟ್ಟ, ನಿರಸ್ತಮದನೋನ್ಮೇಷಃ=ತೊಗಿಸಲುಪಟ್ಟ ಕಾಮೋದ್ರೇಕವುಳ್ಳ, ನಿರ್ಧೂತಕ್ರೋಧವಿಪ್ಲವಃ= ಕೊಡಹಲುಪಟ್ಟ ಕೋಪದಿಂದಲಾದ ಬಾಧೆಯುಳ್ಳ, ಸದಾ ಸಂತುಷ್ಟ ಹೃದಯಃ=ನಿತ್ಯಸಂತೋಷನಾದ ಹೃದಯವುಳ್ಳ, ಸರ್ವಪ್ರಾಣಿಹಿತೇ ರತಃ=ಸಮಸ್ತಪ್ರಾಣಿಗಳಿಗೆ ಹಿತವಮಾಡುವಲ್ಲಿ ಪ್ರೀತಿಯುಳ್ಳ, ಶಿವಕಾರ್ಯವಿರೋಧಿನಾಂ=ಶಿವಕಾರ್ಯಕ್ಕೆ ವಿರೋಧಿಗಳಾದ ಶಿವದ್ರೋಹಿಗಳ, ನಿವಾರಣಸಮುದ್ಯೋಗೀ=ತೊಲಗಿಸುವಲ್ಲಿ ಲೇಸಾದ ಉದ್ಯೋಗವುಳ್ಳ, ಶಿವೋತ್ಕರ್ಷಾಭಿಧಾಯಿಭಿಃ= ಶಿವಾಧಿಕ್ಯವನು ಹೇಳುತ್ತಿರ್ದ್ದ ಅವರೊಡನೆ, ಸದಾ ಕಾಲಂ=ಎಲ್ಲಾ ಕಾಲದಲ್ಲಿಯೂ, ಸಹಚಾರೀ= ಕೂಡಿಚರಿಸುತ್ತಿರ್ದ್ದ, ಶಿವಾಪಕರ್ಷಸಂಪ್ರಾಪ್ತೌ ಸತ್ಯಾಂ=ಶಿವನಿಂದೆಯಾಗಲಾಗಿ, ಪ್ರಾಣತ್ಯಾಗೇಽಪಿ= ಪ್ರಾಣತ್ಯಾಗದಲ್ಲಿಯಾಯಿತ್ತಾದೊಡೆ, ಅಶಂಕಿತಃ=ಸಂದೇಹಿಸದೆಯಿದ್ದ, ಸರ್ವಾತ್ಮಾ=ಶಿವಸ್ವರೂಪನಾಗಿ, ಶಿವೈಕನಿಷ್ಠಃ=ಶಿವಲಿಂಗವೊಂದರಲ್ಲಿಯೆ ತತ್ಪರನಾಗಿದ್ದಾತನೇ, ವೀರಮಾಹೇಶ್ವರಃ=ವೀರಮಾಹೇಶ್ವರನು, ಭವೇತ್=ಅಹನು. ॥೨೦॥

**ಇತಿ ಮಾಹೇಶ್ವರಪ್ರಶಂಸಾಸ್ಥಲಮ್**

## ೧೭. ಮಾಹೇಶ್ವರಸ್ಥಲೇ ಲಿಂಗನಿಷ್ಠಾಸ್ಥಲಮ್

**ಸೂತ್ರ||** ಬಳಿಕ ಮಾಹೇಶ್ವರನಿಂದೆ ಮಾಡಲುಯೋಗ್ಯವಾದ ಶಿವಲಿಂಗನಿಷ್ಠೆಯನು ದಶಸೂತ್ರಂಗಳಿಂದೆ ಹೇಳುತ್ತಿರ್ದಪಂ.

ಗ್ರಂಥ|| **ಅಸ್ಯ ಮಾಹೇಶ್ವರಸ್ಯೋಕ್ತಂ ಲಿಂಗನಿಷ್ಠಾಮಹಾಸ್ಥಲಮ್ |**
**ಪ್ರಾಣಾತ್ಯಯೇಽಪಿ ಸಂಪನ್ನೇ ಯದತ್ಯಾಜ್ಯಂ ವಿಧೀಯತೇ ||**

**ಟೀಕು||** ಯತ್=ಆವುದಾನೊಂದು ಲಿಂಗನಿಷ್ಠಾಸ್ಥಲವು, ಪ್ರಾಣಾತ್ಯಯೇ=ಪ್ರಾಣಸಂಕಟವು, ಸಂಪನ್ನೇ ಸತ್ಯಪಿ=ಆಗಲಿಕೆಯಾಗಿಯು, ಅತ್ಯಾಜ್ಯಂ=ಬಿಡಲುಯೋಗ್ಯವಲ್ಲವೆಂದು, ವಿಧೀಯತೇ=ವಿಧಿಸಲು ಪಡುತ್ತಿರ್ದಪುದು. ತತ್‌ಲಿಂಗನಿಷ್ಠಾ ಮಹಾಸ್ಥಲಮ್=ದೊಡ್ಡಿತ್ತಾದ ಆ ಶಿವಲಿಂಗನಿಷ್ಠಾಸ್ಥಲವು, ಅಸ್ಯ ಮಾಹೇಶ್ವರಸ್ಯ=ಮಾಹೇಶ್ವರನೊರ್ವನಲ್ಲಿಯೆ ತತ್ಪರನಾದ ಈ ಮಾಹೇಶ್ವರನಿಗೆ, ಉಕ್ತಂ=ಹೇಳಲುಪಟ್ಟಿತ್ತು. ||೨೧||

**ಸೂತ್ರ||** ಬಳಿಕ "ವರಂ ಪ್ರಾಣಪರಿತ್ಯಾಗಃ ಛೇದನಂ ಶಿರಸೋಽಪಿ ವಾ|
ನ ತ್ವನಭ್ಯರ್ಚ್ಯ ಭುಂಜೀಯಾದ್ಭಗವಂತಂ ತ್ರಿಯಂಬಕಮ್"|| ಯೆಂಬ ಶಿವಧರ್ಮಾರ್ಥವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

ಗ್ರಂಥ|| **ಅಪಗಚ್ಛತು ಸರ್ವಸ್ವಂ ಶಿರಶ್ಛೇದನಮಸ್ತು ವಾ |**
**ಮಾಹೇಶ್ವರೋ ನ ಮುಂಚೇತ ಲಿಂಗಪೂಜಾಮಹಾವ್ರತಮ್ ||**

**ಟೀಕು||** ಸರ್ವಸ್ವಂ=ಸಮಸ್ತ ದ್ರವ್ಯವು, ಅಪಗಚ್ಛತು=ಹೋಗಲಿ, ಶಿರಶ್ಛೇದನಂ ವಾ=ಶಿರಶ್ಛೇದನ ವಾಯಿತ್ತಾದೊಡೆಯು, ಅಸ್ತು=ಆಗಲಿ, ಮಾಹೇಶ್ವರಃ=ವೀರಮಾಹೇಶ್ವರನು, ಲಿಂಗಪೂಜಾಮಹಾ ವ್ರತಂ=ಶಿವಲಿಂಗಪೂಜಾರೂಪವಾದ ಮಹಾವ್ರತವನು, ನ ಮುಂಚೇತ=ಬಿಡಲಾಗದು. ||೨೨||

ಗ್ರಂಥ|| **ಲಿಂಗಪೂಜಾಮಕೃತ್ವಾ ತು ಯೇ ನ ಭುಂಜಂತಿ ಮಾನವಾಃ |**
**ತೇಷಾಂ ಮಹಾತ್ಮನಾಂ ಹಸ್ತೇ ಮೋಕ್ಷಲಕ್ಷ್ಮೀರುಪಸ್ಥಿತಾ ||**

**ಟೀಕು||** ಯೇ ಮಾನವಾಃ=ಆರು ಕೆಲಂಬರು ಮನುಷ್ಯರು, ಲಿಂಗಪೂಜಾಂ=ಶಿವಲಿಂಗ ಪೂಜೆಯನು, ಅಕೃತ್ವಾ ತು=ಮಾಡದೆ, ನ ಭುಂಜಂತಿ=ಭೋಜನವ ಮಾಡರು; ತೇಷಾಂ ಮಹಾತ್ಮನಾಂ= ಆ ಮಹಾಪುರುಷರ, ಹಸ್ತೇ=ಹಸ್ತದಲ್ಲಿ, ಮೋಕ್ಷಲಕ್ಷ್ಮೀಃ=ಮೋಕ್ಷಸಂಪತ್ತಿಯು, ಉಪಸ್ಥಿತಾ=ಇರುತ್ತಿರ್ದಪುದು. ||೨೩||

**ಸೂತ್ರ||** ಬಳಿಕ ಆ ಅರ್ಥವನೆ ಸೂತ್ರದ್ವಯದಿಂದೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||** **ಕಿಮನ್ಯೈರ್ಧರ್ಮಕಲಿಲೈಃ ಕೀಕಷಾರ್ಥಪ್ರದಾಯಿಭಿಃ ।**
**ಸಾಕ್ಷಾನ್ಮೋಕ್ಷಪ್ರದಶ್ಶಂಭೋರ್ಧರ್ಮೋ ಲಿಂಗಾರ್ಚನಾತ್ಮಕಃ ॥**

**ಟೀಕು||** ಶಂಭೋಃ ಲಿಂಗಾರ್ಚನಾತ್ಮಕಃ=ಶಿವಲಿಂಗಪೂಜೆಯ ಸ್ವರೂಪವಾಗುಳ್ಳ, ಧರ್ಮಃ=ಧರ್ಮವು, ಸಾಕ್ಷಾತ್=ಪ್ರತ್ಯಕ್ಷವಾಗಿ, ಮೋಕ್ಷಪ್ರದಃ=ಮೋಕ್ಷವನು ಕೊಡುತ್ತಿರ್ದ್ದ ಅದು. ಅನ್ಯೈಃ=ಲಿಂಗಪೂಜೆಯಿಂದೆ ಭಿನ್ನವಾಗಿರ್ದ್ದ, ಕೀಕಷಾರ್ಥಪ್ರದಾಯಿಭಿಃ=ಕುತ್ಸಿತವಾದ ಅಲ್ಪಾರ್ಥವನು ಕೊಡುತ್ತಿರ್ದ್ದ, ಧರ್ಮಕಲಿಲೈಃ=ಕ್ಷುದ್ರಧರ್ಮಂಗಳಿಂದೆ, ಕಿಂ=ಏನು ಪ್ರಯೋಜನವು? ಏನೂ ಫಲವಿಲ್ಲವೆಂಬುದರ್ಥ. ||೨೪||

**ಗ್ರಂಥ||** **ಅರ್ಪಿತೇನಾನ್ನಪಾನೇನ ಲಿಂಗೇ ನಿಯಮಪೂಜಿತೇ ।**
**ಯೇ ದೇಹವೃತ್ತಿಂ ಕುರ್ವಂತಿ ಮಹಾಮಾಹೇಶ್ವರಾ ಹಿ ತೇ ॥**

**ಟೀಕು||** ನಿಯಮಪೂಜಿತೇ=ಗುರೂಕ್ತ ನಿಯಮದಿಂದೆ ಪೂಜಿಸಲುಪಟ್ಟ, ಲಿಂಗೇ=ಶಿವಲಿಂಗದಲ್ಲಿ, ಅರ್ಪಿತೇನ=ಸಮರ್ಪಿಸಲುಪಟ್ಟ, ಅನ್ನಪಾನೇನ=ಅನ್ನಪಾನದಿಂದೆ, ದೇಹವೃತ್ತಿಂ=ದೇಹವರ್ತನೆಯನು, ಕುರ್ವಂತಿ=ಮಾಡುತ್ತಿರ್ದ್ದಪರು; ತೇ=ಅವರು, ಮಹಾಮಾಹೇಶ್ವರಾಃ=ಮಹಾವೀರ ಮಾಹೇಶ್ವರರೆಂದು, ಹಿ=ಪ್ರಸಿದ್ಧವು. ||೨೫||

**ಸೂತ್ರ||** ಬಳಿಕ "ಯದ್ಧಿ ಮನಸಾ ಧ್ಯಾಯತಿ ತದ್ವಾಚಾ ವದತಿ ತತ್ಕರ್ಮಣಾ ಕರೋತಿ" ಯೆಂಬ ಯಜರ್ವೇದಾರ್ಥವನು ಪ್ರಕಾಶಿಸುತ್ತ ತ್ರಿಕರಣಂಗಳಿಂದೆ ಶಿವಲಿಂಗದಲ್ಲಿ ನಿಷ್ಠರಾದವರೆ ಶಿವಸ್ವರೂಪರೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಚಿನ್ಮಯೇ ಶಾಂಕರೇ ಲಿಂಗೇ ಸ್ಥಿರಂ ಯೇಷಾಂ ಮನಸ್ಸದಾ ।**
**ವಿಮುಕ್ತೇತರಸರ್ವಾರ್ಥಂ ತೇ ಶಿವಾಃ ನಾತ್ರ ಸಂಶಯಃ ॥**

**ಟೀಕು||** ಯೇಷಾಂ=ಆರುಕೆಲಂಬರ, ಮನಃ=ಚಿತ್ತವು, ವಿಮುಕ್ತೇತರ ಸರ್ವಾರ್ಥಂ ಸತ್=ಬಿಡಲುಪಟ್ಟ ತುಚ್ಛವಾದ ಸಮಸ್ತಪ್ರಯೋಜನವುಳ್ಳದಾಗುತಲು, ಚಿನ್ಮಯೇ=ಚಿದ್ರೂಪವಾಗಿರ್ದ್ದ, ಶಾಂಕರೇ ಲಿಂಗೇ=ಶಿವಲಿಂಗದಲ್ಲಿ, ಸದಾ=ಎಲ್ಲಾಕಾಲದಲ್ಲಿಯು, ಸ್ಥಿರಂ=ಸ್ಥಿರವಾಗಿದ್ದದು; ತೇ=ಅವರು, ಶಿವಾಃ=ಶಿವಸ್ವರೂಪರೆ. ಅತ್ರ=ಇಲ್ಲಿ, ನ ಸಂಶಯಃ=ಸಂದೇಹವಿಲ್ಲ. ||೨೬||

**ಗ್ರಂಥ||** **ಲಿಂಗೇ ಯಸ್ಯ ಮನೋ ಲೀನಂ ಲಿಂಗಸ್ತುತಿಪರಾ ಚ ವಾಕ್ ।**
**ಲಿಂಗಾರ್ಚನಪರೌ ಹಸ್ತೌ ಸ ರುದ್ರೋ ನಾತ್ರ ಸಂಶಯಃ ॥**

**ಟೀಕು॥** ಯಸ್ಯ=ಆವಾತನ, ಮನಃ=ಮನಸ್ಸು, ಲಿಂಗೇ=ಶಿವಲಿಂಗದಲ್ಲಿ, ಲೀನಂ=ಅಡಗಿದ್ದ ಅದು, ಯಸ್ಯ=ಆವಾತನ, ವಾಕ್=ನುಡಿಯು, ಲಿಂಗಸ್ತುತಿಪರಾ ಚ=ಶಿವಲಿಂಗಸ್ತೋತ್ರವೆ ಪರವಾಗುಳ್ಳ ಅದು, ಯಸ್ಯ=ಆವಾತನ, ಹಸ್ತೌ=ಹಸ್ತಂಗಳು, ಲಿಂಗಾರ್ಚನಪರೌ=ಶಿವಲಿಂಗಪೂಜೆಯಲ್ಲಿ ತತ್ಪರವಾಗಿದ್ದ ಇವು, ಸಃ=ಆತನು, ರುದ್ರಃ=ರುದ್ರನು. ಅತ್ರ=ಇಲ್ಲಿ, ನ ಸಂಶಯಃ=ಸಂದೇಹವಿಲ್ಲ. ॥೨೭॥

**ಸೂತ್ರ॥** ಬಳಿಕ ಲಿಂಗನಿಷ್ಠನ ಮಹತ್ವವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ಲಿಂಗನಿಷ್ಠಸ್ಯ ಕಿಂ ತಸ್ಯ ಕರ್ಮಣಾ ಸ್ವರ್ಗಹೇತುನಾ ।**
**ನಿತ್ಯಾನಂದಶಿವಪ್ರಾಪ್ತಿರ್ಯಸ್ಯ ಶಾಸ್ತ್ರೇಷು ನಿಶ್ಚಿತಾ ॥**

**ಟೀಕು॥** ಯಸ್ಯ ಲಿಂಗನಿಷ್ಠಸ್ಯ=ಆವನಾನೊರ್ವ ಶಿವಲಿಂಗನಿಷ್ಠನಿಗೆ, ನಿತ್ಯಾನಂದಶಿವಪ್ರಾಪ್ತಿಃ= ನಿತ್ಯಾನಂದರೂಪವಾದ ಶಿವಪದಪ್ರಾಪ್ತಿಯು, ಶಾಸ್ತ್ರೇಷು,= ಶಿವಾಗಮಂಗಳಲ್ಲಿ, ನಿಶ್ಚಿತಾ=ನಿಶ್ಚೈಸಲುಪಟ್ಟಿತ್ತು, ತಸ್ಯ=ಆ ಶಿವಲಿಂಗನಿಷ್ಠನಿಗೆ, ಸ್ವರ್ಗಹೇತುನಾ=ಸ್ವರ್ಗಗತಿಗೆ ಕಾರಣವಾದ, ಕರ್ಮಣಾ= ಯಜ್ಞಕರ್ಮದಿಂದೆ, ಕಿಂ=ಏನು ಪ್ರಯೋಜನವು? ಏನೂ ಪ್ರಯೋಜನವಿಲ್ಲವೆಂಬುದರ್ಥ. ॥೨೮॥

**ಗ್ರಂಥ॥** **ಲಿಂಗನಿಷ್ಠಾಪರಂ ಶಾಂತಂ ಭೂತಿರುದ್ರಾಕ್ಷಸಂಯುತಮ್ ।**
**ಪ್ರಶಂಸಂತಿ ಸದಾಕಾಲಂ ಬ್ರಹ್ಮಾದ್ಯಾ ದೇವತಾ ಮುದಾ ॥**

**ಟೀಕು॥** ಶಾಂತಂ=ರಾಗದ್ವೇಷರಹಿತನಾಗಿ, ಭೂತಿರುದ್ರಾಕ್ಷಸಂಯುತಂ=ಭಸ್ಮರುದ್ರಾಕ್ಷೆಯೊಡನೆ ಕೂಡಿರ್ದ, ಲಿಂಗನಿಷ್ಠಾಪರಂ=ಶಿವಲಿಂಗನಿಷ್ಠೆಯಲ್ಲಿ ತತ್ಪರನಾದ ಮಾಹೇಶ್ವರನು, ಬ್ರಹ್ಮಾದ್ಯಾ ದೇವತಾಃ=ಬ್ರಹ್ಮವಿಷ್ಣು ಮೊದಲಾಗುಳ್ಳ ದೇವತೆಗಳು, ಮುದಾ=ಸಂತೋಷದಿಂದೆ, ಸದಾಕಾಲಂ= ಎಲ್ಲಾಕಾಲದಲ್ಲಿಯು, ಪ್ರಶಂಸಂತಿ=ಕೊಂಡಾಡುತ್ತಿರ್ದಪರು. ॥೨೯॥

**ಇತಿ ಲಿಂಗನಿಷ್ಠಾಸ್ಥಲಮ್**

## ೧೮. ಮಾಹೇಶ್ವರಸ್ಥಲೇ ಪೂರ್ವಾಶ್ರಯನಿರಸನಸ್ಥಲಮ್

**ಸೂತ್ರ॥** ಬಳಿಕ "ಗುರುಸಂಸ್ಕೃತಭಾವಸ್ಸನ್ ಗುರುನಿರ್ಮಿತದೇಹವಾನ್।
ವಿಸ್ಮೃತ್ಯ ಪೂರ್ವದುರ್ಭಾವಂ ತದಧೀನಃ ಸಮಾಚರೇತ್"॥ ಯೆಂಬ ಯೋಗಜಾಗಮಾರ್ಥವನು ಪ್ರಕಟಿಸುತ್ತ ಲಿಂಗನಿಷ್ಠನಾಗಿರ್ದಂಥಾ ಬಿಡಲು ಯೋಗ್ಯವಾದ ಪೂರ್ವಾಶ್ರಯನಿರಸನಸ್ಥಲವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಲಿಂಗೈಕನಿಷ್ಠಹೃದಯಃ ಸದಾ ಮಾಹೇಶ್ವರೋ ಜನಃ ।**
**ಪೂರ್ವಾಶ್ರಯಗತಾನ್ ಧರ್ಮಾಂಸ್ತ್ಯಜೇತ್ಸ್ವಾಚಾರರೋಧಕಾನ್ ॥**

**ಟೀಕು॥** ಸದಾ=ಎಲ್ಲಾಕಾಲದಲ್ಲಿಯೂ,ಲಿಂಗೈಕನಿಷ್ಠಹೃದಯಃ=ಶಿವಲಿಂಗವೊಂದರಲ್ಲಿಯೆ ತತ್ಪರವಾದ ಹೃದಯವುಳ್ಳ, ಮಾಹೇಶ್ವರೋ ಜನಃ=ಪೇರಮಾಹೇಶ್ವರಜನವು, ಪೂರ್ವಾಶ್ರಯಗತಾನ್=ಪೂರ್ವಾಶ್ರಯಂಗಳನು ಎಯಿದಿರ್ದ್ದ, ಸ್ವಾಚಾರರೋಧಕಾನ್=ತನ್ನ ಸಮಯಾಚಾರಕ್ಕೆ ವಿರೋಧವಾಗಿರ್ದ್ದ, ಧರ್ಮಾನ್=ಪ್ರಾಕೃತಾಚಾರಂಗಳನು, ತ್ಯಜೇತ್=ಬಿಡುವುದು. ॥೩೦॥

ಗ್ರಂಥ॥ **ಸ್ವಜಾತಿಕುಲಜಾನ್ ಧರ್ಮಾನ್ ಲಿಂಗನಿಷ್ಠಾವಿರೋಧಿನಃ ।**
**ತ್ಯಜನ್ಮಾಹೇಶ್ವರೋ ಜ್ಞೇಯಃ ಪೂರ್ವಾಶ್ರಯನಿರಾಸಕಃ ॥**

**ಟೀಕು॥** ಲಿಂಗನಿಷ್ಠಾವಿರೋಧಿನಃ=ಶಿವಲಿಂಗನಿಷ್ಠೆಗೆ ವಿರೋಧವಾಗಿರ್ದ್ದ, ಸ್ವಜಾತಿ ಕುಲಜಾನ್ ಧರ್ಮಾನ್=ತನ್ನ ಜಾತಿಕುಲದಲ್ಲಿ ಪುಟ್ಟಿರ್ದ್ದ ಧರ್ಮಂಗಳನು, ತ್ಯಜನ್=ಬಿಡುತ್ತಿರ್ದ್ದ, ಮಾಹೇಶ್ವರಃ=ಮಾಹೇಶ್ವರನೀಗ, ಪೂರ್ವಾಶ್ರಯನಿರಾಸಕಃ=ಪೂರ್ವಾಶ್ರಯನಿರಾಸಕನೆಂದು, ಜ್ಞೇಯಃ= ಅರಿಯಲು ಯೋಗ್ಯವು. ॥೩೧॥

**ಸೂತ್ರ॥** ಬಳಿಕ ಶಿವಸಂಸ್ಕಾರಿಗಳಿಗೆ ಪ್ರಾಕೃತಾಚಾರ ಪ್ರಯೋಜನವಿಲ್ಲವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಶಿವಸಂಸ್ಕಾರಯೋಗೇನ ವಿಶುದ್ಧಾನಾಂ ಮಹಾತ್ಮನಾಮ್ ।**
**ಕಿಂ ಪೂರ್ವಕಾಲಿಕೈರ್ಧರ್ಮೈಃ ಪ್ರಾಕೃತಾನಾಂ ಹಿ ತೇ ಮತಾಃ ॥**

**ಟೀಕು॥** ಶಿವಸಂಸ್ಕಾರಯೋಗೇನ=ಶಿವದೀಕ್ಷೆಯ ಸಂಸ್ಕಾರ ಸಂಬಂಧದಿಂದೆ, ವಿಶುದ್ಧಾನಾಂ= ನಿರ್ಮಲರಾದ, ಮಹಾತ್ಮನಾಂ=ಮಹಾಪುರುಷರಿಗೆ, ಪೂರ್ವಕಾಲಿಕೈಃ=ಮೊದಲು ಪುಟ್ಟಿರ್ದ್ದ, ಧರ್ಮೈಃ=ಧರ್ಮಂಗಳಿಂದೆ, ಕಿಂ=ಏನು? ತೇ=ಆ ಪೂರ್ವಕಾಲಿಕದಲ್ಲಿ ಪುಟ್ಟಿರ್ದ ಧರ್ಮಂಗಳು, ಪ್ರಾಕೃತಾನಾಂ=ಶಿವಸಂಸ್ಕಾರಹೀನರಾದ ಪ್ರಾಕೃತರಿಗೆ, ಮತಾಃ=ಸಂಮತಂಗಳು. ಹಿ=ಪ್ರಸಿದ್ಧವು.॥೩೨॥

ಗ್ರಂಥ॥ **ಶಿವಸಂಸ್ಕಾರಯೋಗೇನ ಶಿವಧರ್ಮಾನುಷಂಗಿಣಾಮ್ ।**
**ಪ್ರಾಕೃತಾನಾಂ ನ ಧರ್ಮೇಷು ಪ್ರವೃತ್ತಿರುಪಪದ್ಯತೇ ॥**

**ಟೀಕು॥** ಶಿವಸಂಸ್ಕಾರಯೋಗೇನ=ಶಿವಸಂಸ್ಕಾರದ ಸಂಬಂಧದಿಂದೆ, ಶಿವಧರ್ಮಾನುಷಂಗಿಣಾಂ= ಶಿವಧರ್ಮವನು ಬಳಿವಿಡಿದುಯೆಯ್ದುತ್ತಿರ್ದ್ದ ವಿಶುದ್ಧರಿಗೆ, ಪ್ರಾಕೃತಾನಾಂ=ಪ್ರಾಕೃತರ, ಧರ್ಮೇಷು=ಆಚಾರಂಗಳಲ್ಲಿ, ಪ್ರವೃತ್ತಿಃ=ವರ್ತನವು, ನೋಪಪದ್ಯತೇ=ಪುಟ್ಟುತ್ತಿರದು.

**ತಾತ್ಪರ್ಯ||** ವಿಶುದ್ಧಾತ್ಮರಿಗೆ ಪ್ರಾಕೃತರ ಧರ್ಮದಲ್ಲಿ ಪ್ರವರ್ತನವಿಲ್ಲವೆಂಬುದರ್ಥ. ||೩೩||

**ಸೂತ್ರ||** ಬಳಿಕ ದ್ವಿವಿಧ ನರರುಗಳಾದ ವಿಶುದ್ಧರ ಪ್ರಾಕೃತರ ಲಕ್ಷಣವನು ಹೇಳುತ್ತಿರ್ದಪಂ.

ಗ್ರಂಥ|| **ವಿಶುದ್ಧಾಃ ಪ್ರಾಕೃತಾಶ್ಚೇತಿ ದ್ವಿವಿಧಾ ಮಾನುಷಾಃ ಸ್ಮೃತಾಃ ।**
**ಶಿವಸಂಸ್ಕಾರಿಣಃ ಶುದ್ಧಾಃ ಪ್ರಾಕೃತಾ ಇತರೇ ಮತಾಃ ॥**

**ಟೀಕು||** ಮಾನುಷಾಃ=ಮನುಷ್ಯರು, ವಿಶುದ್ಧಾಃ=ವಿಶುದ್ಧರೆಂದು, ಪ್ರಾಕೃತಾಶ್ಚೇತಿ=ಪ್ರಾಕೃತರೆಂದು, ದ್ವಿವಿಧಾಃ=ಎರಡು ಪ್ರಕಾರವುಳ್ಳವರಾಗಿ, ಸ್ಮೃತಾಃ=ನೆನೆಯಲುಪಟ್ಟರು. ಶಿವಸಂಸ್ಕಾರಿಣಃ=ಶಿವದೀಕ್ಷಾ ಸಂಸ್ಕಾರವುಳ್ಳವರೆ, ಶುದ್ಧಾಃ=ವಿಶುದ್ಧರು, ಇತರೇ=ಉಳಿದವರು, ಪ್ರಾಕೃತಾಃ=ಪ್ರಾಕೃತರೆಂದು, ಮತಾಃ=ಸಂಮತವು. ||೩೪||

**ಸೂತ್ರ||** ಬಳಿಕ ವರ್ಣಾಶ್ರಮಧರ್ಮವು ದ್ವಿವಿಧವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

ಗ್ರಂಥ|| **ವರ್ಣಾಶ್ರಮಾದಿಧರ್ಮಾಣಾಂ ವ್ಯವಸ್ಥಾ ಹಿ ದ್ವಿಧಾ ಮತಾ ।**
**ಏಕಾ ಶಿವೇನ ನಿರ್ದಿಷ್ಟಾ ಬ್ರಹ್ಮಣಾ ಕಥಿತಾ ಪರಾ ॥**

**ಟೀಕು||** ವರ್ಣಾಶ್ರಮಾದಿಧರ್ಮಾಣಾಂ=ಬ್ರಾಹ್ಮಣಾದಿವರ್ಣ ಬ್ರಹ್ಮಚರ್ಯಾದ್ಯಾಶ್ರಮಂಗಳ ಅಧಿಧರ್ಮಂಗಳ, ವ್ಯವಸ್ಥಾ=ವ್ಯವಸ್ಥೆಯು, ದ್ವಿಧಾ = ಎರಡು ಪ್ರಕಾರದಿಂದೆ, ಮತಾ=ಸಂಮತವು, ಏಕಾ=ಒಂದು ವ್ಯವಸ್ಥೆಯು, ಶಿವೇನ=ಶಿವನಿಂದೆ, ನಿರ್ದಿಷ್ಟಾ=ನಿರ್ದೇಶಿಸಲುಪಟ್ಟಿತ್ತು. ಪರಾ=ಎರಡನೆಯ ವ್ಯವಸ್ಥೆಯು, ಬ್ರಹ್ಮಣಾ=ಬ್ರಹ್ಮನಿಂದೆ, ಕಥಿತಾ=ಹೇಳಲುಪಟ್ಟಿತ್ತು. ||೩೫||

**ಸೂತ್ರ||** ಬಳಿಕ ಆ ಅರ್ಥವನೆ ವಿಶೇಷಿಸುತ್ತಿರ್ದಪಂ.

ಗ್ರಂಥ|| **ಶಿವೋಕ್ತಧರ್ಮನಿಷ್ಠಾ ತು ಶಿವಾಶ್ರಮನಿಷೇವಿಣಾಮ್ ।**
**ಶಿವಸಂಸ್ಕಾರಹೀನಾನಾಂ ಧರ್ಮಃ ಪೈತಾಮಹಃ ಸ್ಮೃತಃ ॥**

**ಟೀಕು||** ಶಿವಾಶ್ರಮನಿಷೇವಿಣಾಂ=ಶಿವಾಶ್ರಮವನು ಸೇವಿಸುತ್ತಿರ್ದ ಅವರಿಗೆ, ಶಿವೋಕ್ತ ಧರ್ಮನಿಷ್ಠಾ ತು=ಶಿವನಿಂದೆ ಹೇಳಲುಪಟ್ಟ ಶಿವಧರ್ಮನಿಷ್ಠೆಯು, ಹಿ=ಪ್ರಸಿದ್ಧವು, ಶಿವಸಂಸ್ಕಾರ ಹೀನಾನಾಂ=ಶಿವಸಂಸ್ಕಾರವಿಲ್ಲದ ಪ್ರಾಕೃತರಿಗೆ, ಪೈತಾಮಹೋ ಧರ್ಮಃ=ಬ್ರಹ್ಮನಿಂದೆ ಹೇಳಲುಪಟ್ಟ ಧರ್ಮವು, ಸ್ಮೃತಃ=ನೆನೆಯಲುಪಟ್ಟಿತ್ತು. ||೩೬||

**ಸೂತ್ರ॥** ಬಳಿಕ ಶಿವಸಂಸ್ಕಾರಿಗೆ ಜಾತಿಸೂತಕವಿಲ್ಲವೆಂದು ದೃಷ್ಟಾಂತಪೂರ್ವಕವಾಗಿ ಹೇಳುತ್ತಿರ್ದ್ದಪಂ.

**ಗ್ರಂಥ॥** **ಶಿವಸಂಸ್ಕಾರಯುಕ್ತೇಷು ಜಾತಿಭೇದೋ ನ ವಿದ್ಯತೇ ।**
**ಕಾಷ್ಠೇಷು ವಹ್ನಿದಗ್ಧೇಷು ಯಥಾ ರೂಪಂ ನ ವಿದ್ಯತೇ ॥**

**ಟೀಕು॥** ವಹ್ನಿದಗ್ಧೇಷು=ಅಗ್ನಿಯಿಂದ ದಹಿಸಲುಪಟ್ಟ, ಕಾಷ್ಠೇಷು=ಕಾಷ್ಠಂಗಳಲ್ಲಿ, ಯಥಾ=ಹೇಗೆ, ರೂಪಂ=ರೂಪವು, ನ ವಿದ್ಯತೇ=ಉಂಟಾಗುತ್ತಿರದು, ತಥಾ=ಹಾಗೆ, ಶಿವಸಂಸ್ಕಾರಯುಕ್ತೇಷು= ಶಿವಸಂಸ್ಕಾರದೊಡನೆ ಕೂಡಿರ್ದ್ದ ಶಿವಭಕ್ತರಲ್ಲಿ, ಜಾತಿಭೇಧಃ=ಜಾತಿಭೇದವು, ನ ವಿದ್ಯತೇ= ಉಂಟಾಗುತ್ತಿರದು. ॥೩೭॥

**ಸೂತ್ರ॥** ಬಳಿಕ "ಶಿವಸಂಸ್ಕಾರಸಂಯುಕ್ತೇ ಜಾತಿಭೇದಂ ನ ಕಾರಯೇತ್।
ಶಿವಲಿಂಗೇ ಶಿಲಾಬುದ್ಧಿಂ ಕುರ್ವಾಣ ಇಹ ಪಾತಕಃ"॥ ಯೆಂಬ ಶಿವರಹಸ್ಯಾರ್ಥವನೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ॥** **ತಸ್ಮಾತ್ಸರ್ವಪ್ರಯತ್ನೇನ ಶಿವಸಂಸ್ಕಾರಸಂಯುತಃ ।**
**ಜಾತಿಭೇದಂ ನ ಕುರ್ವೀತ ಶಿವಭಕ್ತೇ ಕದಾಚನ ॥**

**ಟೀಕು॥** ತಸ್ಮಾತ್=ಅದುಕಾರಣವಾಗಿ, ಸರ್ವಪ್ರಯತ್ನೇನ=ಸಮಸ್ತಪ್ರಯತ್ನದಿಂದವು, ಶಿವಸಂಸ್ಕಾರಸಂಯುತಃ=ಶಿವಸಂಸ್ಕಾರದೊಡನೆ ಕೂಡಿರ್ದ್ದ ಆತನು, ಶಿವಭಕ್ತೇ=ಶಿವಭಕ್ತನಲ್ಲಿ, ಕದಾಚನ=ಒಂದುವೇಳೆಯು, ಜಾತಿಭೇದಂ=ಜಾತಿಭೇದವನು, ನ ಕುರ್ವೀತ=ಮಾಡಲಾಗದು. ॥೩೮॥

**ಇತಿ ಪೂರ್ವಾಶ್ರಯನಿರಸನಸ್ಥಲಮ್**

## ೧೯ ಮಾಹೇಶ್ವರಸ್ಥಲೇ ಸರ್ವಾದ್ವೈತನಿರಸನಸ್ಥಲಮ್

**ಸೂತ್ರ||** ಬಳಿಕ ಲಿಂಗನಿಷ್ಠವಾಗಿ ಪೂರ್ವಾಶ್ರಯನಿರಸನವ ಮಾಡಿದ ಮಾಹೇಶ್ವರನು ಲಿಂಗನಿಷ್ಠೆಗೆ ವಿರುದ್ಧವಾದ ಸರ್ವಾದ್ವೈತವನು ನಿರಸನವನು ಮಾಡಬೇಕೆಂದು ಅದ್ವೈತನಿರಸನಸ್ಥಲವನು ಸಪ್ತ ಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಪೂಜ್ಯಪೂಜಕಯೋರ್ಲಿಂಗಜೀವಯೋರ್ಭೇದವರ್ಜನೇ |**
**ಪೂಜಾಕರ್ಮಾದ್ಯಸಂಪತ್ತೇರ್ಲಿಂಗನಿಷ್ಠಾವಿರೋಧತಃ ||**

**ಸರ್ವಾದ್ವೈತವಿಚಾರಸ್ಯ ಜ್ಞಾನಾಭಾವೇ ವ್ಯವಸ್ಥಿತೇಃ |**
**ಭವೇನ್ಮಾಹೇಶ್ವರಃ ಕರ್ಮೀ ಸರ್ವಾದ್ವೈತನಿರಾಸಕಃ ||**

**ಟೀಕು||** ಪೂಜ್ಯಪೂಜಕಯೋಃ=ಪೂಜ್ಯಪೂಜಕರಾದ, ಲಿಂಗಜೀವಯೋಃ=ಶಿವಲಿಂಗಜೀವಾತ್ಮರ್ಗೆ, ಭೇದವರ್ಜನೇ ಸತಿ=ಭೇದವಿಲ್ಲದೆಯಿರಲಿಕೆಯಾಗಿ, ಲಿಂಗನಿಷ್ಠಾವಿರೋಧತಃ=ಶಿವಲಿಂಗನಿಷ್ಠೆಗೆ ವಿರೋಧವಾದ ಕಾರಣವಾಗಿ, ಪೂಜಾಕರ್ಮಾದ್ಯಸಂಪತ್ತೇಃ=ಶಿವಲಿಂಗಪೂಜಾಕರ್ಮ ಮೊದಲಾದ ಕ್ರಿಯಾಸಂಪತ್ತಿಯಿಲ್ಲವಾದ ಕಾರಣವಾಗಿ, ಸರ್ವಾದ್ವೈತ ವಿಚಾರಸ್ಯ=ಸರ್ವಾದ್ವೈತದ ವಿಚಾರದ, ವ್ಯವಸ್ಥಿತೇಃ=ವರ್ತನಕ್ಕೆ, ಜ್ಞಾನಾಭಾವೇ ಸತಿ=ಜ್ಞಾನವಿಲ್ಲದೆ ಇರಲಾಗಿ, ಕರ್ಮೀ ಮಾಹೇಶ್ವರಃ=ಶಿವಲಿಂಗ ಪೂಜಾದಿಕರ್ಮವುಳ್ಳ ಮಾಹೇಶ್ವರನು, ಸರ್ವಾದ್ವೈತನಿರಾಸಕಃ=ಸರ್ವಾದ್ವೈತವನು ನಿರಸನವ ಮಾಡುತ್ತಿರ್ದ ಆತನು, ಭವೇತ್=ಅಹನು.

**ತಾತ್ಪರ್ಯ||** "ಯಾವದಾಯುಸ್ತ್ರಯೋ ವಂದ್ಯಾಃ ವೇದಾಂತೋ ಗುರುರೀಶ್ವರಃ" ಯೆಂಬ ವೇದಾಂತವಾಕ್ಯವುಂಟಾಗಿ," ಕ್ರಿಯಾದ್ವೈತಂ ನ ಕರ್ತವ್ಯಮ್" ಯೆಂಬ ಸಿದ್ಧಾಂತವಾಕ್ಯವುಂಟಾಗಿ ಲಿಂಗನಿಷ್ಠನಾದ ಮಾಹೇಶ್ವರನು ಸರ್ವಾದ್ವೈತವ ಮಾಡಬಾರದೆಂಬುದರ್ಥ. ||೪೦||

**ಸೂತ್ರ||** ಬಳಿಕ "ಜ್ಞಾಜ್ಞೌ ದ್ವಾವಜಾವೀಶನೀಶಾ
ವಜಾ ಹ್ಯೇಕಾ ಭೋಕ್ತೃಭೋಗ್ಯಾರ್ಥಯುಕ್ತಾ|
ಅನಂತಂಶ್ಚಾತ್ಮಾ ವಿಶ್ವರೂಪೋ ಹ್ಯಕರ್ತಾ
ತ್ರಯಂ ಯದಾ ವಿಂದತೇ ಬ್ರಹ್ಮಮೇತತ್''||

ಯೆಂಬ ಶ್ವೇತಾಶ್ವತರ ಶ್ರುತ್ಯರ್ಥವನು ಪ್ರಕಟಿಸುತ್ತ ಅದ್ವೈತನಿರಸನವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಪ್ರೇರಕಂ ಶಂಕರಂ ಬುಧ್ವಾ ಪ್ರೇರ್ಯಮಾತ್ಮಾನಮೇವ ಚ |**
**ಭೇದಾತ್ತಂ ಪೂಜಯೇನ್ನಿತ್ಯಂ ನ ಚಾದ್ವೈತಪರೋ ಭವೇತ್ ||**

**ಟೀಕು||** ಶಂಕರಂ=ಪರಮೇಶ್ವರನನು, ಪ್ರೇರಕಂ ಚ="ಧಿಯೋ ಯೋ ನಃ ಪ್ರಚೋದಯಾತ್" ಯೆಂಬ ಗಾಯತ್ರಿಮಂತ್ರವಾಕ್ಯದಿಂದೆ ಪ್ರೇರಕನನಾಗಿ, ಆತ್ಮಾನಂ=ಪ್ರೇರ್ಯಂ ಏವ=ಜೀವಾತ್ಮನನು ಪ್ರೇರ್ಯನನಾಗಿ, ಬುಧ್ವಾ=ತಿಳಿದು, ಇತಿ=ಈ ಪ್ರಕಾರದಿಂದೆ, ಭೇದಾತ್=ಪ್ರೇರಕನಾದ ಶಿವನನು, ನಿತ್ಯಂ=ಆವಾಗವು, ಪೂಜಯೇತ್=ಪೂಜಿಸುವುದು. ಅದ್ವೈತಪರಶ್ಚ=ಅದ್ವೈತದಲ್ಲಿ ತತ್ಪರನಾಗಿದ್ದಾತನು, ನ ಭವೇತ್=ಆಗಲಾಗದು. ||೪೧||

**ಸೂತ್ರ||** ಬಳಿಕ ಆ ಅರ್ಥವನೆ ಪ್ರಕಟಿಸುತ್ತಿರ್ದಪಂ.

**ಗ್ರಂಥ||** **ಪತಿಸ್ಸಾಕ್ಷಾನ್ಮಹಾದೇವಃ ಪಶುರೇಷ ತದಾಶ್ರಯಃ ।**
**ಅನಯೋಃ ಸ್ವಾಮಿಭೃತ್ಯತ್ವಮಭೇದೇ ಕಥಮಿಷ್ಯತೇ ॥**

**ಟೀಕು||** ಮಹಾದೇವಃ=ಪರಮೇಶ್ವರನು, ಸಾಕ್ಷಾತ್=ಪ್ರತ್ಯಕ್ಷವಾದ, ಪತಿಂ='ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಂ ಶಿವಮಚ್ಯುತಮ್" ಯೆಂದು ಶ್ರುತಿ ಪ್ರಸಿದ್ಧವಾದ ಪತಿಯು, ಏಷಃ=ಈ ಆತ್ಮನು, ತದಾಶ್ರಯಃ=ಆ ಪತಿಯಾಶ್ರಯವುಳ್ಳ, ಪಶುಃ="ಕಿಂಚಿದ್‌ಜ್ಞಃ ಸೇಶ್ವರಃ ಪಶುಃ"ಯೆಂದು ಶಿವಾಗಮಜ್ಞ ಪ್ರಸಿದ್ಧವಾದ ಪಶುವು, ಅನಯೋಃ=ಈ ಪತಿ ಪಶುಗಳಿಗೆ, ಅಭೇದೇ ಸತಿ=ಭೇದವಿಲ್ಲದಿರಲಿಕೆಯಾಗಿ ಸ್ವಾಮಿಭೃತ್ಯತ್ವಂ=ಒಡೆಯ-ಬಂಟತನವು, ಕಥಂ=ಆವ ಪ್ರಕಾರದಿಂದೆ, ಇಷ್ಯತೇ=ಇಚ್ಛೈಸಲುಪಡುತ್ತಿರ್ದಪುದು. ಆ ಭೇದದಲ್ಲಿ ಒಡೆಯ ಬಂಟತನವಿಲ್ಲವೆಂಬುದರ್ಥ. ||೪೨||

**ಸೂತ್ರ||** ಬಳಿಕ "ಪಶುಪಶುಪತಿಯೋಗೋ ದೃಗ್ಯುಗೈಕ್ಯಪ್ರಯೋಗೋ
ಗಗನಗಗನದೇಶಃ ಸಿಂಧುಸಿಂಧುಪ್ರದೇಶಃ ।
ಸಮಸಮರಸರೂಪೋ ಭಿನ್ನಭಿನ್ನಸ್ವರೂಪೋ
ನಿಶಿ ಸಮರಸಕಾಂತಾವಲ್ಲಭಾಶ್ಲೇಷಕಾಂತಃ" ॥

ಯೆಂದು ನಿಗಮಾಗಮಶಿರಸ್ಸಿದ್ಧವಾದ ಶಿವಾದ್ವೈತಜ್ಞಾನವು ಜ್ಞಾನಹೀನನಿಗೆ ಆಗದೆಂದು ಹೇಳುತ್ತಿರ್ದಪಂ.

**ಗ್ರಂಥ||** **ಸಾಕ್ಷಾತ್ಕೃತಂ ಪರಂ ತತ್ತ್ವಂ ಯದಾ ಭವತಿ ಬೋಧತಃ ।**
**ತದಾಽದ್ವೈತಸಮಾಪತ್ತಿರ್ಜ್ಞಾನಹೀನಸ್ಯ ನ ಕ್ವಚಿತ್ ॥**

**ಟೀಕು||** ಬೋಧತಃ=ಶ್ರುತಿಗುರುಸ್ವಾನುಭವಸಿದ್ಧವಾದ, ಬೋಧೆಯದೆಸೆಯಿಂದೆ ಪರಂ, ತತ್ತ್ವಂ= ಪರಶಿವ ಪರಬ್ರಹ್ಮ ಪರಲಿಂಗವೆಂಬ ಸಂಜ್ಞೆಯುಳ್ಳ ನಿಜಾನ್ಯನನ್ಯವಾದ ಪರತತ್ತ್ವವು, ಯದಾ=ಯಾವಾಗ, ಸಾಕ್ಷಾತ್ಕೃತಂ="ಆತ್ಮಾಶ್ರಯೇತರೇತರಾಶ್ರಯಚೈಕಾಶ್ರಯ" ದೋಷವಿಲ್ಲದೆ, "ಅಪ್ರತ್ಯಕ್ಷಮಪರೋಕ್ಷತ್ವಾತ್"

ಯೆಂಬೀ ವಾಕ್ಯವುಂಟಾಗಿ ಪರಿಶೇಷಪ್ರಮಾಣೆನಿಂದೆ ಪ್ರತ್ಯಕ್ಷೀಕರಿಸಲುಪಟ್ಟುದು, ಭವತಿ=ಆಗುತ್ತಿರ್ದ್ದಪುದು. ತದಾಽದ್ವೈತಸಮಾಪತ್ತಿಃ=ಆ ಪ್ರಕಾರವಾದ ಶಿವಾದ್ವೈತಜ್ಞಾನವು, ಜ್ಞಾನಹೀನಸ್ಯ=ಜ್ಞಾನಹೀನನಿಗೆ, ಕ್ವಚಿತ್=ಒಂದೆಡೆಯಲ್ಲಿಯು, ನ=ಇಲ್ಲ. ||೪೩||

**ಸೂತ್ರ||** ಬಳಿಕ ಈ ಶಿವಜೀವರ ಭೇದಕ್ಕೆ ಕಾರಣವನು ಹೇಳಿ ಈ ಶಿವಾದ್ವೈತವನು ಶಿವಲಿಂಗಪೂಜಾದಿಕರ್ಮವುಳ್ಳ ಮಾಹೇಶ್ವರನು ಆಚರಿಸಲಾಗದೆಂದು ಹೇಳುತ್ತಿರ್ದ್ದಪಂ.

ಗ್ರಂಥ|| **ಭೇದಸ್ಯ ಕರ್ಮಹೇತುತ್ವಾದ್ವ್ಯವಹಾರಃ ಪ್ರವರ್ತತೇ |**
**ಲಿಂಗಪೂಜಾದಿಕರ್ಮಸ್ಥೋ ನ ಚಾದ್ವೈತಂ ಸಮಾಚರೇತ್ ||**

**ಟೀಕು||** ಭೇದಸ್ಯ ವ್ಯವಹಾರಃ=ಶಿವಜೀವರ ಭೇದದ ವ್ಯವಹಾರವು, ಕರ್ಮಹೇತುತ್ವಾತ್= ಕ್ರಿಯೆ ಕಾರಣವಾಗುಳ್ಳದಾದಕಾರಣವಾಗಿ, ಪ್ರವರ್ತತೇ=ಪ್ರವರ್ತಿಸುತ್ತಿರ್ದ್ದಪುದು. ಅತಃ=ಇದು ಕಾರಣವಾಗಿ, ಲಿಂಗಪೂಜಾದಿಕರ್ಮಸ್ಥಃ=ಶಿವಲಿಂಗಪೂಜೆ ಶಿವನಾಮಜಪ ಮೊದಲಾದ ಕರ್ಮದಲ್ಲಿರುತ್ತಿರ್ದ್ದ ಮಾಹೇಶ್ವರನು, ಅದ್ವೈತಂ ಚ=ಅದ್ವೈತವನಾದರೆ, ನ ಸಮಾಚರೇತ್=ಆಚರಿಸಲಾಗದು. ||೪೪||

**ಸೂತ್ರ||** ಬಳಿಕ ಆ ಅರ್ಥವನೆ ಪ್ರಕಟಿಸುತ್ತಿರ್ದ್ದಪಂ.

ಗ್ರಂಥ|| **ಪೂಜಾದಿವ್ಯವಹಾರಸ್ಸ್ಯಾದ್ಭೇದಾಶ್ರಯತಯಾ ಸದಾ |**
**ಲಿಂಗಪೂಜಾಪರಸ್ತಸ್ಮಾನ್ನಾದ್ವೈತೇ ನಿರತೋ ಭವೇತ್ ||**

**ಟೀಕು||** ಭೇದಾಶ್ರಯತಯಾ=ಶಿವಜೀವರ ಭೇದವನು ಆಶ್ರಯಿಸುವತನದಿಂದೆ, ಸದಾ=ಎಲ್ಲಾ ಕಾಲದಲ್ಲಿಯು, ಪೂಜಾದಿವ್ಯವಹಾರಃ=ಶಿವಲಿಂಗಪೂಜೆ ಮೊದಲಾಗುಳ್ಳ ವ್ಯವಹಾರವು, ಸ್ಯಾತ್= ಅಹುದು. ತಸ್ಮಾತ್=ಅದು ಕಾರಣವಾಗಿ, ಲಿಂಗಪೂಜಾಪರಃ=ಶಿವಲಿಂಗಪೂಜೆಯಲ್ಲಿ ತತ್ಪರನಾದ ಮಾಹೇಶ್ವರನು, ಅದ್ವೈತೇ=ಅದ್ವೈತದಲ್ಲಿ, ನಿರತಃ=ಆಸಕ್ತನು, ನ ಭವೇತ್=ಆಗಲಾಗದು. ||೪೫||

**ಇತ್ಯದ್ವೈತನಿರಸನಸ್ಥಲಮ್**

## ೨೦. ಮಾಹೇಶ್ವರಸ್ಥಲೇ ಆಹ್ವಾನನಿರಸನಸ್ಥಲಮ್

**ಸೂತ್ರ||** ಈ ಪ್ರಕಾರದಿಂದೆ ಅದ್ವೈತನಿರಸನವ ಮಾಡಿ ಶಿವಲಿಂಗಪೂಜಾರ್ಥವಾಗಿ ದ್ವೈತವನಂಗೀಕರಿಸಿದ ಮಾಹೇಶ್ವರನು ಶೈವರೋಪಾದಿಯಲ್ಲಿ ಶಿವಲಿಂಗದಲ್ಲಿ ಶಿವನನು ಪೂಜಾರ್ಥವಾಗಿ ಆಹ್ವಾನವ ಮಾಡಲಾಗದೆಂದು ಆಹ್ವಾನನಿರಸನಸ್ಥಲವನು ಹೇಳುತ್ತಿರ್ದ್ದಪಂ.

ಗ್ರಂಥ॥ **ಲಿಂಗಾರ್ಚನಪರಶ್ಶುದ್ಧಸ್ಸರ್ವಾದ್ವೈತನಿರಾಸಕಃ**
**ಸ್ವೇಷ್ಟಲಿಂಗೇ ಶಿವಾಕಾರೇ ನ ತಮಾವಾಹಯೇಚ್ಛಿವಮ್**

**ಟೀಕು॥** ಲಿಂಗಾರ್ಚನಪರಃ=ಶಿವಲಿಂಗಪೂಜೆಯಲ್ಲಿ ತತ್ಪರನಾಗಿ, ಸರ್ವಾದ್ವೈತನಿರಾಸಕಃ=ಸರ್ವಾದ್ವೈತವನು ನಿರಸನವಮಾಡುತ್ತಿರ್ದ್ದ, ಶುದ್ಧಃ=ನಿತ್ಯಶುದ್ಧನಾದ ವೀರಮಾಹೇಶ್ವರನು. ಶಿವಾಕಾರೇ=ಶಿವಸ್ವರೂಪವುಳ್ಳ, ಸ್ವೇಷ್ಟಲಿಂಗೇ=ತನ್ನ ಇಷ್ಟಲಿಂಗದಲ್ಲಿ, ತಂ ಶಿವಂ=ಪ್ರಸಿದ್ಧವಾದ ಶಿವನನು. ನಾವಾಹಯೇತ್=ಆಹ್ವಾನವ ಮಾಡಲಾಗದು. ॥೪೬॥

**ಸೂತ್ರ॥** ಬಳಿಕ ಆಹ್ವಾನನಿರಸನಕ್ಕೆ ಕಾರಣವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಯದಾ ಶಿವಕಲಾಯುಕ್ತಂ ಲಿಂಗಂ ದದ್ಯಾನ್ಮಹಾಗುರುಃ ।**
**ತದಾರಭ್ಯ ಶಿವಸ್ತತ್ರ ತಿಷ್ಠತ್ಯಾಹ್ವಾನಮತ್ರ ಕಿಮ್ ॥**

**ಟೀಕು॥** ಮಹಾಗುರುಃ=ಮಹಾ ಶ್ರೀಗುರುನಾಥನು, ಶಿವಕಲಾಯುಕ್ತಂ=ಶಿವಕಲೆಯೊಡನೆ ಕೂಡಿರ್ದ್ದ, ಲಿಂಗಂ=ಶಿವಲಿಂಗವನು, ಯದಾ= ಆವಕಾಲದಲ್ಲಿ, ದದ್ಯಾತ್=ಕೊಟ್ಟನು, ತದಾರಭ್ಯ=ಅಂದುತೊಡಗಿ, ತತ್ರ=ಆ ಶಿವಲಿಂಗದಲ್ಲಿ, ಶಿವಃ=ಶಿವನು, ತಿಷ್ಠತಿ=ಇರುತ್ತಿರ್ದ್ದಪನು. ಅತ್ರ=ಈ ಶಿವಲಿಂಗದಲ್ಲಿ, ಆಹ್ವಾನಂ=ಆಹ್ವಾನವು, ಕಿಂ=ಏನು ಕಾರಣ? ಏನು ಕಾರಣವಿಲ್ಲವೆಂಬುದರ್ಥ. ॥೪೭॥

ಗ್ರಂಥ॥ **ಸಸಂಸ್ಕಾರೇಷು ಲಿಂಗೇಷು ಸದಾ ಸನ್ನಿಹಿತಶ್ಶಿವಃ ।**
**ತತ್ರಾಹ್ವಾನಂ ನ ಕರ್ತವ್ಯಂ ಪ್ರತಿಪತ್ತಿವಿರೋಧಕಮ್ ॥**

**ಟೀಕು॥** ಸಸಂಸ್ಕಾರೇಷು=ಶಿವದೀಕ್ಷಾರೂಪವಾದ ಸಂಸ್ಕಾರದೊಡನೆ ಕೂಡಿವರ್ತಿಸುತ್ತಿರ್ದ್ದ, ಲಿಂಗೇಷು=ಶಿವಲಿಂಗಂಗಳಲ್ಲಿ, ಶಿವಃ=ಪರಮೇಶ್ವರನು, ಸದಾಸನ್ನಿಹಿತಃ=ನಿತ್ಯಸನ್ನಿಹಿತನಾಗಿದ್ದಾತನು, ತತ್ರ=ಆ ಶಿವಲಿಂಗಂಗಳಲ್ಲಿ, ಪ್ರತಿಪತ್ತಿವಿರೋಧಕಂ=ವೀರಶೈವಜ್ಞಾನಕ್ಕೆ ವಿರೋಧವಾದ, ಆಹ್ವಾನಂ=ಆಹ್ವಾನವು, ನ ಕರ್ತವ್ಯಂ=ಮಾಡಲುಯೋಗ್ಯವಲ್ಲ.

**ತಾತ್ಪರ್ಯ॥** "ಆರಗ್ವಧೇಷು ಬಿಲ್ವೇಷು ಲಿಂಗೇಷು ಗುರುಮೂರ್ತಿಷು ।
ಶಿವಯೋಗೀ ಶರೀರೇಷು ಸದಾ ಸನ್ನಿಹಿತಃ ಶಿವಃ"॥ ಯೆಂದು ಶಿವರಹಸ್ಯವುಂಟಾಗಿ ನಿತ್ಯಸಿದ್ಧವಾದ ಶಿವನಿಗೆ ಆಹ್ವಾನ ಸಲ್ಲದೆಂಬುದರ್ಥ. ॥೪೮॥

**ಸೂತ್ರ॥** ಬಳಿಕ ಆಹ್ವಾನವಿಲ್ಲದ ವಿಸರ್ಜನವು ಬೇಡವೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ನಾಹ್ವಾನಂ ನ ವಿಸರ್ಗಂ ಚ ಸ್ವೇಷ್ಟಲಿಂಗೇ ತು ಕಾರಯೇತ್ ।**
**ಲಿಂಗನಿಷ್ಠಾಪರೋ ನಿತ್ಯಮಿತಿ ಶಾಸ್ತ್ರಸ್ಯ ನಿಶ್ಚಯಃ ॥**

**ಟೀಕು||** ನಿತ್ಯಂ=ಆವಾಗವು, ಲಿಂಗನಿಷ್ಠಾಪರಃ=ಶಿವಲಿಂಗನಿಷ್ಠೆಯಲ್ಲಿ ತತ್ಪರನಾದ ವೀರಮಾಹೇಶ್ವರನು, ಸ್ವೇಷ್ಟಲಿಂಗೇ ತು=ತನ್ನ ಇಷ್ಟಲಿಂಗದಲ್ಲಿಯಾಯಿತ್ತಾದೊಡೆ, ಆಹ್ವಾನಂ=ಆಹ್ವಾನವನು, ವಿಸರ್ಗಂ ಚ=ವಿಸರ್ಜನವನಾದಡು, ನ ಕಾರಯೇತ್=ಮಾಡಲಾಗದು. ಇತಿ=ಹೀಗೆಂದು, ಶಾಸ್ತ್ರಸ್ಯ ನಿಶ್ಚಯಃ=ವೀರಶೈವಶಾಸ್ತ್ರ ನಿಶ್ಚಯವು. ||೪೮||

**ಇತ್ಯಾಹ್ವಾನನಿರಸನಸ್ಥಲಮ್**

## ೨೧. ಮಾಹೇಶ್ವರಸ್ಥಲೇ ಅಷ್ಟಮೂರ್ತಿನಿರಸನಸ್ಥಲಮ್

**ಸೂತ್ರ||** ಬಳಿಕ ಶಿವಲಿಂಗವೆ ಶಿವನೆಂಬ ಭಾವದಿಂದೆ ಆಹ್ವಾನವ ಮಾಡಿದ ಮಾಹೇಶ್ವರನು ಪೃಥಿವ್ಯಪ್ತೇಜೋವಾಯ್ವಾಕಾಶಚಂದ್ರಸೂರ್ಯಾತ್ಮರೂಪವಾದ ಅಷ್ಟಮೂರ್ತಿಗಳು ಶಿವನದೆಸೆಯಿಂದೆ ಭಿನ್ನವೆಂದು ದೃಷ್ಟಾಂತಪೂರ್ವಕವಾಗಿ ಅಷ್ಟಮೂರ್ತಿನಿರಸನವನು ಮಾಡುತ್ತಿರ್ದ್ದಪಂ.

**ಗ್ರಂಥ||** **ಯಥಾಽಽತ್ಮಶಿವಯೋರೈಕ್ಯಂ ನ ಮತಂ ಕರ್ಮಸಂಗಿನಃ ।**
**ತಥಾ ಶಿವಾತ್ಪೃಥಿವ್ಯಾದೇರದ್ವೈತಮಪಿ ನೇಷ್ಯತೇ ॥**

**ಟೀಕು||** ಕರ್ಮಸಂಗಿನಃ=ಶಿವಪೂಜಾದಿ ಕರ್ಮಸಂಗವುಳ್ಳ ಮಾಹೇಶ್ವರನಿಗೆ, ಆತ್ಮಶಿವಯೋಃ= ಶಿವಾತ್ಮರ, ಐಕ್ಯಂ=ಅದ್ವೈತವು, ಯಥಾ=ಹೇಗೆ, ನ ಮತಂ=ಸಂಮತವಲ್ಲ. ತಥಾ=ಹಾಗೆಯೆ, ಶಿವಾತ್ಪೃಥಿವ್ಯಾದೇಃ=ಶಿವನದೆಸೆಯಿಂದೆ ಪೃಥಿವಿ ಮೊದಲಾಗುಳ್ಳ ಅಷ್ಟತನುವಿಗೆಯು, ಅದ್ವೈತ ಮಪಿ=ಐಕ್ಯರೂಪವಾದ ಅದ್ವೈತವಾಯಿತ್ತಾದೊಡೆ, ನೇಷ್ಯತೇ=ಇಚ್ಛೈಸಲುಪಡುತ್ತಿರದು. ಹೇಗೆ ತನುತ್ರಯದದೆಸೆಯಿಂದೆ ಆತ್ಮನು ಭಿನ್ನನು, ಹಾಗೆಯೆ ಅಷ್ಟತನುಗಳದೆಸೆಯಿಂದೆ ಶಿವನೂ ಭಿನ್ನನೆಂಬುದರ್ಥ. ||೫೦||

**ಸೂತ್ರ||** "ಯಸ್ಯ ಪೃಥಿವೀ ಶರೀರಮ್" ಯೆಂಬುದರಿಂದ ತೊಡಗಿ
"ಯಸ್ಯಾತ್ಮಾಶರೀರಮ್" ಯೆಂಬುದು ಕಡೆಯಾದ ಬೃಹದಾರಣ್ಯಕಶ್ರುತ್ಯರ್ಥವನು,

"ದ್ವಯಮುಷ್ಣಂ ದ್ವಯಂ ಶೀತಮನುಷ್ಣಾಶೀತಲಂ ದ್ವಯಮ್।
ದ್ವಯಮಸ್ಪರ್ಶಮಿತ್ಯಷ್ಟೌ ಪಾಂತು ವೋ ಹರಮೂರ್ತಯಃ''॥

"ವಿಶ್ವಂ ಮಹೇಶ್ವರ! ಭವಾನಧಿತಿಷ್ಠತೀತಿ।
ವಿಶ್ವಾತ್ಮತಾಮುಪಚರಂತಿ ಯದಾಗಮಾಸ್ತೇ"॥ಯೆಂಬ ಅಭಿಯುಕ್ತವಾಕ್ಯಾರ್ಥವನು ಪ್ರಕಾಶಿಸುತ್ತ ಪೂರ್ವೋಕ್ತಾರ್ಥವನೆ ಪ್ರಕಟಿಸುತ್ತಿರ್ದಪಂ.

ಗ್ರಂಥ॥ **ಪೃಥಿವ್ಯಾದ್ಯಷ್ಟಮೂರ್ತಿತ್ವಮೀಶ್ವರಸ್ಯ ಪ್ರಕೀರ್ತಿತಮ್ ।**
**ತದಧಿಷ್ಠಾತೃಭಾವೇನ ನ ಸಾಕ್ಷಾದೇಕಭಾವತಃ ॥**

**ಟೀಕು॥** ಈಶ್ವರಸ್ಯ=ಪರಮೇಶ್ವರನಿಗೆ, ಪೃಥಿವ್ಯಾದ್ಯಷ್ಟಮೂರ್ತಿತ್ವಂ=ಪೃಥಿವಿ ಮೊದಲಾದ ಅಷ್ಟಮೂರ್ತಿಯುಳ್ಳತನವು, ತದಧಿಷ್ಠಾತೃಭಾವೇನ=ಆ ಪೃಥಿವ್ಯಾದ್ಯಷ್ಟಮೂರ್ತಿಗಳಿಗೆ ಅಧಿಷ್ಠಾತೃವಹತನದಿಂದ, ಪ್ರಕೀರ್ತಿತಂ=ಹೇಳಲುಪಟ್ಟಿತ್ತು. ಸಾಕ್ಷಾತ್=ಪ್ರತ್ಯಕ್ಷವಾದ, ಏಕಭಾವತಃ= ಐಕ್ಯದದೆಸೆಯಿಂದೆ, ನ ಪ್ರಕೀರ್ತಿತಂ=ಹೇಳಲುಪಟ್ಟುದಿಲ್ಲ. ॥೫೧॥

**ಸೂತ್ರ॥** "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ ಸರ್ವಾಣಿ ಚೇಂದ್ರಿಯಾಣಿ।
ಸಹ ಭೂತೈರ್ನ ಕಾರಣಂ ಕಾರಣಂ ತು ಧ್ಯೇಯಃ ಶಂಭುರಾಕಾಶಮಧ್ಯೇ"॥ ಯೆಂಬ ಅಥರ್ವಶಿಖಾರ್ಥವನು ಪ್ರಕಾಶಿಸುತ್ತ ಕಾರ್ಯಕಾರಣಸ್ವರೂಪವನು ದೃಷ್ಟಾಂತಪೂರ್ವಕವಾಗಿ ಹೇಳುತ್ತಿರ್ದಪಂ.

ಗ್ರಂಥ॥ **ಪೃಥ್ವ್ಯಾದಿಕಮಿದಂ ಸರ್ವಂ ಕಾರ್ಯಂ ಕರ್ತಾ ಮಹೇಶ್ವರಃ ।**
**ನೈತತ್ಸಾಕ್ಷಾನ್ಮಹೇಶೋಽಯಂ ಕುಲಾಲೋ ಮೃತ್ತಿಕಾ ಯಥಾ ॥**

**ಟೀಕು॥** ಪೃಥ್ವ್ಯಾದಿಕಂ=ಪೃಥ್ವಿ ಮೊದಲಾಗುಳ್ಳ, ಇದಂ ಸರ್ವಂ=ಈ ಸಮಸ್ತವು, ಕಾರ್ಯಂ= "ಕಾರಣತ್ರಯಜನ್ಯಂ ಕಾರ್ಯಮ್"ಯೆಂದು ತರ್ಕೋಕ್ತಿಯುಂಟಾಗಿ ಕಾರಣತ್ರಯದಿಂದೆ, ಹುಟ್ಟಿದ ಕಾರ್ಯವು, ಕರ್ತಾ=ನಿಮಿತ್ತಕಾರಣನಾದ, ಮಹೇಶ್ವರಃ=ಮಹೇಶ್ವರನು ಕುಲಾಲಃ=ನಿಮಿತ್ತಕಾರಣನಾದ ಕುಂಬಾರನು, ಯಥಾ ಮೃತ್ತಿಕಾ=ಹೇಗೆ ನೈಮಿತ್ತಿಕ ಉಪಾದಾನಕಾರಣವಾದ ಮಣ್ಣು ಮುದ್ದೆಯಲ್ಲಿಲ್ಲ. ತಥಾ=ಹಾಗೆ, ಸಾಕ್ಷಾನ್ಮಹೇಶಃ=ಸಾಕ್ಷಾತ್ ಮಹೇಶನುಯೆಂಬ ಪ್ರತ್ಯಕ್ಷವಾದ, ಅಯಂ=ಈ ಪರಮೇಶ್ವರನು. ಏತತ್=ಈ ಕಾರ್ಯರೂಪವಾದ ಜಗತ್ತು, ನ=ಅಲ್ಲ. ॥೫೨॥

**ಸೂತ್ರ॥** ಬಳಿಕ ಪೃಥಿವ್ಯಾದ್ಯಷ್ಟಮೂರ್ತಿಗಳೊಳಗೆ ಶಿವನು ಚೈತನ್ಯಸ್ವರೂಪನೆಂದು ಹೇಳುತ್ತಿರ್ದಪಂ.

ಗ್ರಂಥ॥ **ಪೃಥಿವ್ಯಾದ್ಯಾತ್ಮಪರ್ಯಂತಪ್ರಪಂಚೋ ಹ್ಯಷ್ಟಧಾ ಸ್ಥಿತಃ ।**
**ದೇಹಮೀಶಸ್ಯ ಚಾತ್ಮಾಯಂ ಸರ್ವತತ್ತ್ವ ನಿಯಾಮಕಃ ॥**

**ಟೀಕು||** ಪೃಥಿವ್ಯಾದಿಃ=ಪೃಥ್ವಿವ್ಯಪ್ತೇಜೋವಾಯ್ವಾಕಾಶಚಂದ್ರಸೂರ್ಯಾಗ್ನಿಹೋತ್ರಿರೂಪ ಮೊದಲಾಗಿ, ಈಶಸ್ಯ=ಶಿವನ, ದೇಹಃ=ದೇಹವಾಗಿರ್ದ್ದ, ಪ್ರಪಂಚಃ=ಆತ್ಮಕಡೆಯಾದ, ಅಷ್ಟಧಾ=ಎಂಟು ಪ್ರಕಾರದಿಂದೆ, ಸ್ಥಿತಃ=ಇರುತ್ತಿರ್ದ್ದಪುದು. ಆತ್ಮಾ=ಅಷ್ಟತನುಗಳಿಗೆ ಚೈತನ್ಯರೂಪನಾದ, ಅಯಂ=ಈ ಪರಮೇಶ್ವರನು, ಸರ್ವತತ್ತ್ವನಿಯಾಮಕಃ=ನಿಗಮಾಗಮೋಕ್ತವಾದ ಸಮಸ್ತತತ್ತ್ವವನು ನಿಯಮಿಸುತ್ತಿರ್ದ್ದ ಆತನು. ಹಿ=ಪ್ರಸಿದ್ಧವು. ||೫೩||

**ಸೂತ್ರ||** ಬಳಿಕ ಪರಮೇಶ್ವರನಿಗೆ ಅಷ್ಟತನುಗಳೊಳಗೆ ಸಮರಸೈಕ್ಯವಿಲ್ಲವೆಂಬುದಕ್ಕೆ ಕಾರಣವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಅಚೇತನತ್ವಾತ್ಪೃಥ್ವ್ಯಾದೇರಜ್ಞತ್ವಾದಾತ್ಮನಸ್ತಥಾ ।**
**ಸರ್ವಜ್ಞಸ್ಯ ಮಹೇಶಸ್ಯ ನೈಕರೂಪತ್ವಮಿಷ್ಯತೇ ॥**

**ಟೀಕು||** ಪೃಥ್ವ್ಯಾದೇಃ=ಪೃಥುವಿ ಮೊದಲಾದ ಮೂರ್ತಿಗೆ, ಅಚೇತನತ್ವಾತ್=ಜಡತ್ವವಾದ ಕಾರಣವಾಗಿ, ತಥಾ=ಹಾಗೆ, ಆತ್ಮನಃ=ಜೀವಾತ್ಮನಿಗೆ, ಅಜ್ಞತ್ವಾತ್=ಅವಿದ್ಯಾವಾರಕತ್ವದಿಂದೆ ಅಜ್ಞತ್ವವಾದ ಕಾರಣವಾಗಿ, ಸರ್ವಜ್ಞಸ್ಯ=ಸರ್ವಜ್ಞನಾಗಿ ಸರ್ವಕರ್ತೃವಾದ, ಮಹೇಶಸ್ಯ=ಪರಮೇಶ್ವರನಿಗೆ, ಏಕರೂಪತ್ವಂ=ಏಕರೂಪವುಳ್ಳತನವು, ನೇಷ್ಯತೇ=ಇಚ್ಛೈಸಲುಪಡುತ್ತಿರದು. ||೫೪||

**ಸೂತ್ರ||** ಬಳಿಕ ದೇಹದೇಹಿಗಳ ಭೇದವು ಭೇದ್ಯವಾಗಿ ಗೋಚರವೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ಶರೀರಭೂತಾದೇತಸ್ಮಾತ್ಪ್ರಪಂಚಾತ್ಪರಮೇಷ್ಠಿನಃ ।**
**ಆತ್ಮಭೂತಸ್ಯ ದೇವಸ್ಯ ನಾಭೇದೋ ನ ಪೃಥಕ್ ಸ್ಥಿತಿಃ ॥**

**ಟೀಕು||** ಶರೀರಭೂತಾತ್=ಪೃಥಿವ್ಯಾದಿ ಆತ್ಮಕಡೆಯಾದ ಅಷ್ಟತನುರೂಪವಾದ, ಏತಸ್ಮಾತ್ ಪ್ರಪಂಚಾತ್=ಈ ಜಗತ್ಪ್ರಪಂಚಿನದೆಸೆಯಿಂದೆ, ಆತ್ಮಭೂತಸ್ಯ=ಚೈತನ್ಯರೂಪವಾದ, ದೇವಸ್ಯ=ಕ್ರೀಡಾ ಶೀಲನಾದ, ಪರಮೇಷ್ಠಿನಃ=ಪರಮೇಶ್ವರನಿಗೆ, ಅಭೇದಃ=ಐಕ್ಯವು, ನ=ಇಲ್ಲ. ಪೃಥಕ್ ಸ್ಥಿತಿಃ=ಪ್ರಪಂಚಿಗೆ ಶಿವನದೆಸೆಯಿಂದೆ ಬೇಕಿರುವತನವು, ನ=ಇಲ್ಲ.

**ತಾತ್ಪರ್ಯ||** "ಅಯಮಾತ್ಮಾ ಬ್ರಹ್ಮ"ಯೆಂದು ಶ್ರುತಿಯುಂಟಾಗಿ, ಇಲ್ಲಿ ಆತ್ಮ ಶಬ್ದವು ಶಿವವಾಚಕ. ಅದರಿಂದೆ ದೇಹ-ದೇಹಿಗಳ ಭೇದವನು ತಿಳಿಯುವುದು. ||೫೫||

**ಸೂತ್ರ||** ಬಳಿಕ ಅಷ್ಟಮೂರ್ತಿ ನಿರಸನಸ್ಥಲವನು ಸಮಾಪ್ತಿಯಂ ಮಾಡುತ್ತಿರ್ದ್ದಪಂ.

ಗ್ರಂಥ॥ ಇತಿ ಯಶ್ಚಿಂತಯೇನ್ನಿತ್ಯಂ ಪೃಥ್ವಾದೇರಷ್ಟಮೂರ್ತಿತಃ ।
ವಿಲಕ್ಷಣಂ ಮಹಾದೇವಂ ಸೋಽಷ್ಟಮೂರ್ತಿನಿರಾಸಕಃ ॥

ಟೀಕು॥ ಇತಿ=ಈ ಪ್ರಕಾರದಿಂದೆ, ಯಃ=ಆವನಾನೊಬ್ಬ ಮಾಹೇಶ್ವರನು, ಪೃಥ್ವ್ಯಾದೇಃ=ಪೃಥ್ವಿ ಮೊದಲಾಗುಳ್ಳ, ಅಷ್ಟಮೂರ್ತಿತಃ=ಅಷ್ಟಮೂರ್ತಿಯದೆಸೆಯಿಂದೆ, ಮಹಾದೇವಂ=ಪರಮೇಶ್ವರನನು, ವಿಲಕ್ಷಣಂ=ಭಿನ್ನವಾಗಿದ್ದಾತನಾಗಿ, ನಿತ್ಯಂ=ಆವಾಗವು, ಚಿಂತಯೇತ್=.ಧ್ಯಾನಿಸುತ್ತಿದ್ದಪಂ .ಸಃ=ಆತನು ಅಷ್ಟಮೂರ್ತಿನಿರಾಸಕಃ=ಅಷ್ಟಮೂರ್ತಿನಿರಸನವ ಮಾಡುತ್ತಿರ್ದ್ದ ಆತನು. ॥೫೬॥

ಇತ್ಯಷ್ಟಮೂರ್ತಿನಿರಸನಸ್ಥಲಮ್

## ೨೨. ಮಾಹೇಶ್ವರಸ್ಥಲೇ ಸರ್ವಗತತ್ವನಿರಸನಸ್ಥಲಮ್

ಸೂತ್ರ॥ ಬಳಿಕ ಮಾಹೇಶ್ವರನ ಶಿವಲಿಂಗನಿಷ್ಠೆಗೆ ವಿರೋಧವಾದ ಸರ್ವಗತನಿರಸನಸ್ಥಲವನು ಹೇಳುತ್ತಿರ್ದ್ದಪಂ.

ಗ್ರಂಥ॥ ಸರ್ವಗತ್ವೇ ಮಹೇಶಸ್ಯ ಸರ್ವತ್ರಾರಾಧನಂ ಭವೇತ್ ।
ನ ಲಿಂಗಮಾತ್ರೇ ತನ್ನಿಷ್ಠೋ ನ ಶಿವಂ ಸರ್ವಗಂ ಸ್ಮರೇತ್ ॥

ಟೀಕು॥ ಮಹೇಶಸ್ಯ=ಪರಮೇಶ್ವರನಿಗೆ, ಸರ್ವಗತ್ವೇ=ಸರ್ವವ್ಯಾಪಕತ್ವವಾಗಲಿಕೆಯಾಗಿ ಸರ್ವತ್ರ=ಎಲ್ಲಾಕಡೆಯಲ್ಲಿಯು, ಆರಾಧನಂ=ಆರಾಧನೆಯು, ಭವೇತ್=ಅಪುದು. ಲಿಂಗಮಾತ್ರೇ= ಲಿಂಗಮಾತ್ರದಲ್ಲಿ, ತನ್ನಿಷ್ಠಃ=ಆ ಪರಮೇಶ್ವರನ ನಿಷ್ಠೆಯು, ನ=ಇಲ್ಲ. ಅತಃ=ಇದು ಕಾರಣವಾಗಿ, ಶಿವಂ=ಪರಮೇಶ್ವರನನು, ಸರ್ವಗಂ=ಸರ್ವವ್ಯಾಪಕನಾಗಿ, ನ ಸ್ಮರೇತ್=ನೆನೆಯಲಾಗದು. ॥೫೭॥

ಸೂತ್ರ॥ ಬಳಿಕ ಶಿವನು ಸರ್ವವ್ಯಾಪಕನಾದಡೂ ಲಿಂಗದಲ್ಲಿಯೇ ವಿಶೇಷವಾಗಿರುವನೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಸರ್ವಗೋಽಪಿ ಸ್ಥಿತಶ್ಶಂಭುಃ ಸ್ವಾಧಾರೇ ಹಿ ವಿಶೇಷತಃ ।
ತಸ್ಮಾದನ್ಯತ್ರ ವಿಮುಖಃ ಸ್ವೇಷ್ಟಲಿಂಗೇ ಯಜೇಚ್ಛಿವಮ್ ॥

ಟೀಕು॥ ಶಂಭುಃ=ಪರಮೇಶ್ವರನು, ಸರ್ವಗೋಽಪಿ=ಸರ್ವವ್ಯಾಪಕನಾಯಿತ್ತಾದೊಡೆಯು, ಸ್ವಾಧಾರೇಽಪಿ=ತನಗಾಶ್ರಯವಾದ ಲಿಂಗದಲ್ಲಿಯಾಯಿತ್ತಾದೊಡೆ, ವಿಶೇಷತಃ=ಮಿಗಿಲಾಗಿ,

ಸ್ಥಿತಃ=ಇರುತ್ತಿರ್ದ್ದಪನು. ತಸ್ಮಾತ್=ಅದು ಕಾರಣವಾಗಿ, ಅನ್ಯತ್ರ=ಮತ್ತೊಂದೆಡೆಯಲ್ಲಿ, ವಿಮುಖಃ ಸನ್=ಅಡ್ಡಲಾದ ಮುಖವುಳ್ಳಾತನಾಗುತಲು, ಸ್ವೇಷ್ಟಲಿಂಗೇ=ತನ್ನ ಇಷ್ಟಲಿಂಗದಲ್ಲಿ, ಶಿವಂ= ಪರಮೇಶ್ವರನನು, ಯಜೇತ್=ಪೂಜಿಸುವುದು. ||೫೮||

**ಸೂತ್ರ||** ಬಳಿಕ ಆ ಅರ್ಥವನೆ ದೃಷ್ಟಾಂತಪೂರ್ವಕವಾಗಿ ಹೇಳುತ್ತಿರ್ದ್ದಪಂ.

**ಗ್ರಂಥ||**

**ಶಿವಸ್ಸರ್ವಗತಶ್ಚಾಪಿ ಸ್ವಾಧಾರೇ ವ್ಯಜ್ಯತೇಽಧಿಕಮ್ ।**
**ಶಮೀಗರ್ಭೇ ಯಥಾ ವಹ್ನಿರ್ವಿಶೇಷೇಣ ವಿಭಾವ್ಯತೇ ॥**

**ಟೀಕು||** ವಹ್ನಿಃ=ಸರ್ವವ್ಯಾಪಕವಾದ ಅಗ್ನಿಯು, ಶಮೀಗರ್ಭೇ=[ಶಮೀ]ಮರದಲ್ಲಿ ಯಥಾ=ಹೇಗೆ, ವಿಶೇಷೇಣ=ವಿಶೇಷದಿಂದೆ, ವಿಭಾವ್ಯತೇ=ಭಾವಿಸಲುಪಡುತ್ತಿರ್ದ್ದಪುದು. ತಥಾ=ಹಾಗೆ, ಶಿವಃ= ಪರಮೇಶ್ವರನು, ಸರ್ವಗತಶ್ಚಾಪಿ=ಸರ್ವವ್ಯಾಪಕನಾಯಿತ್ತಾದಡೆಯು, ಸ್ವಾಧಾರೇ= ತನಗಾಶ್ರಯವಾದ ಲಿಂಗದಲ್ಲಿಯೇ, ಅಧಿಕಂ=ಮಿಗಿಲಾಗಿ, ವ್ಯಜ್ಯತೇ=ವ್ಯಂಜಕವಾಗುತ್ತಿರ್ದ್ದಪನು. ||೫೮||

**ಸೂತ್ರ||** ಬಳಿಕ ಆ ಅರ್ಥವನೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||**

**ಸರ್ವಗತ್ವಂ ಮಹೇಶಸ್ಯ ಸರ್ವಶಾಸ್ತ್ರವಿನಿಶ್ಚಿತಮ್ ।**
**ತಥಾಪ್ಯಾಶ್ರಯಲಿಂಗಾದೌ ಪೂಜಾರ್ಥಮಧಿಕಾ ಸ್ಥಿತಿಃ ॥**

**ಟೀಕು||** ಮಹೇಶಸ್ಯ=ಪರಮೇಶ್ವರನಿಗೆ, ಸರ್ವಗತ್ವಂ=ಸರ್ವವ್ಯಾಪಕತ್ವವು, ಸರ್ವಶಾಸ್ತ್ರ ವಿನಿಶ್ಚಿತಂ= ಸಮಸ್ತಶಾಸ್ತ್ರದಿಂದೆ ನಿಶ್ಚೈಸಲುಪಟ್ಟ ಅದು, ತಥಾಪಿ=ಹಾಗಾಯಿತ್ತಾದೊಡೆಯು, ಆಶ್ರಯಲಿಂಗಾದೌ= ಆಶ್ರಯವಾದ ಲಿಂಗ ಮೊದಲಾಗುಳ್ಳ ಮೂರ್ತಿ ವಿಶೇಷದಲ್ಲಿ, ಪೂಜಾರ್ಥಂ=ಪೂಜೆಗೋಸುಗವಾಗಿ, ಸ್ಥಿತಿಃ=ಇರುವತನವು, ಅಧಿಕಾ=ಮಿಗಿಲಾಗಿದ್ದ ಅದು. ||೬೦||

**ಸೂತ್ರ||** ಬಳಿಕ "ಯಾ ತೇ ರುದ್ರ ಶಿವಾ ತನೂಃ ಅಘೋರಾಽಪಾಪಕಾಶೀತಿ"ಯೆಂಬ ಶ್ರೀರುದ್ರಾರ್ಥ ವನು ಪ್ರಕಟಿಸುತ್ತ ಆ ಅರ್ಥವನೆ ಹೇಳುತ್ತಿರ್ದ್ದಪಂ.

**ಗ್ರಂಥ||**

**ನಿತ್ಯಂ ಭಾಸಿ ತದೀಯಸ್ತ್ವಂ ಯಾ ತೇ ರುದ್ರ ಶಿವಾ ತನೂಃ ।**
**ಅಘೋರಾಽಪಾಪಕಾಶೀತಿ ಶ್ರುತಿರಾಹ ಸನಾತನೀ ॥**

**ಟೀಕು||** ಭೋ ರುದ್ರ=ಎಲೆ ಪರಮೇಶ್ವರನೆ, ತೇ=ನಿನ್ನ, ಯಾ ತನೂಃ=ಆವುದಾನೊಂದು ಲಿಂಗರೂಪವಾದ ಮೂರ್ತಿಯು, ಶಿವಾ=ಮಂಗಲವಾಗಿರ್ದ್ದ ಅದು, ಅಘೋರಾ=ಭಯಂಕರವಲ್ಲದೆ,

[ಇರ್ದ್ದ ಅದು], ಅಪಾಪಕಾಶೀ=ಪಾಪರಹಿತವಾಗಿರ್ದ್ದ ಅದು, ತ್ವಂ=ನೀನು, ತದೀಯಃ=ಆ ಲಿಂಗಸಂಬಂಧವುಳ್ಳಾತನಾಗಿ, ನಿತ್ಯಂ=ಆವಾಗವು, ಭಾಸಿ=ಪ್ರಕಾಶಿಸುತ್ತಿರ್ದ್ದಪೆ, ಇತಿ=ಹೀಗೆಂದು, ಸನಾತನೀ=ಕೇಡಿಲ್ಲದೆಯಿದ್ದ, ಶ್ರುತಿಃ=ವೇದವು, ಆಹ=ಹೇಳುತ್ತಿರ್ದ್ದಪುದು. ||೬೧||

ಗ್ರಂಥ|| ತಸ್ಮಾತ್ಸರ್ವಪ್ರಯತ್ನೇನ ಸರ್ವಸ್ಥಾನಪರಾಙ್ಮುಖಃ ।
ಸ್ವೇಷ್ಟಲಿಂಗೇ ಮಹಾದೇವಂ ಪೂಜಯೇತ್ಪೂಜಕೋತ್ತಮಃ ॥

**ಟೀಕು||** ತಸ್ಮಾತ್=ಆ ಶ್ರುತಿಪ್ರಸಿದ್ಧವಾದ ಕಾರಣವಾಗಿ, ಪೂಜಕೋತ್ತಮಃ=ಶಿವಪೂಜಕರಲ್ಲಿ ಶ್ರೇಷ್ಠವಾದ ಮಾಹೇಶ್ವರನು, ಸರ್ವಪ್ರಯತ್ನೇನ=ಸಮಸ್ತಪ್ರಯತ್ನದಿಂದವು, ಸರ್ವಸ್ಥಾನಪರಾಙ್ಮುಖಃ ಸನ್=ಎಲ್ಲಾಕಡೆಯಲ್ಲಿಯು ಅಡ್ಡಲಾದ ಮುಖವುಳ್ಳಾತನಾಗುತವು, ಸ್ವೇಷ್ಟಲಿಂಗೇ=ತನ್ನ ಸಂಬಂಧವಾದ ಇಷ್ಟಲಿಂಗದಲ್ಲಿ, ಮಹಾದೇವಂ=ಪರಮೇಶ್ವರನನು, ಪೂಜಯೇತ್=ಪೂಜಿಸುವುದು. ||೬೨||

**ಸೂತ್ರ||** ಬಳಿಕ ಸರ್ವಗತನಿರಸನಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ|| ಶಿವಸ್ಯ ಸರ್ವಗತ್ವೇಽಪಿ ಸರ್ವತ್ರ ರತಿವರ್ಜಿತಃ ।
ಸ್ವೇಷ್ಟಲಿಂಗೇ ಯಜನ್ ದೇವಂ ಸರ್ವಗತ್ವನಿರಾಸಕಃ ॥

**ಟೀಕು||** ಶಿವಸ್ಯ=ಪರಮೇಶ್ವರನಿಗೆ, ಸರ್ವಗತ್ವೇಽಪಿ=ಸರ್ವವ್ಯಾಪಕತ್ವವುಂಟಾಗಲಿಕೆಯಾಗಿಯು, ಸರ್ವತ್ರ=ಎಲ್ಲಾಕಡೆಯಲ್ಲಿ, ರತಿವರ್ಜಿತಃ=ಪ್ರೀತಿಯಿಲ್ಲದೆ ಇದ್ದಾತನಾಗಿ, ಸ್ವೇಷ್ಟಲಿಂಗೇ=ತನ್ನ ಇಷ್ಟ ಲಿಂಗದಲ್ಲಿಯೆ, ದೇವಂ=ಪರಮೇಶ್ವರನನು, ಯಜನ್=ಪೂಜಿಸುತ್ತಿರ್ದ್ದ ಮಾಹೇಶ್ವರನು, ಸರ್ವಗತ್ವನಿರಾಸಕಃ=ಸರ್ವಗತ್ವನಿರಾಸಕನು, ಭವೇತ್=ಅಹನು. ||೬೩||

**ಇತಿ ಸರ್ವಗತತ್ತ್ವನಿರಸನಸ್ಥಲಮ್**

## ೨೩. ಮಾಹೇಶ್ವರಸ್ಥಲೇ ಶಿವಜಗನ್ಮಯಸ್ಥಲಮ್

**ಸೂತ್ರ||** ಬಳಿಕ ಪೂಜಾರ್ಥವಾಗಿ ಸರ್ವಗತ್ವನಿರಾಸಕನಾದ ಮಾಹೇಶ್ವರನು ಕೂಡುವ ಶಿವನಿಗೆ ಸರ್ವಗತ್ವವನು ಭಾವಿಸಬೇಕೆಂದು ಶಿವಜಗನ್ಮಯಸ್ಥಲವನು ಹೇಳುತ್ತಿರ್ದ್ದಪಂ.

ಗ್ರಂಥ|| ಪೂಜಾವಿಧೌ ನಿಯಮ್ಯತ್ವಾಲ್ಲಿಂಗಮಾತ್ರೇ ಸ್ಥಿತಂ ಶಿವಮ್ ।
ಪೂಜಯನ್ನಪಿ ದೇವಸ್ಯ ಸರ್ವಗತ್ವಂ ವಿಭಾವಯೇತ್ ॥

**ಟೀಕು॥** ಪೂಜಾವಿಧೌ ನಿಯಮ್ಯತ್ವಾತ್=ಪೂಜಾವಿಧಿಗೆ ನಿಯಮವಾದ ಕಾರಣವಾಗಿ, ಲಿಂಗಮಾತ್ರೇ=ಲಿಂಗಮಾತ್ರದಲ್ಲಿಯೆ, ಸ್ಥಿತಂ=ಇರುತ್ತಿರ್ದ್ದ, ಶಿವಂ=ಶಿವನನು, ಪೂಜಯನ್ನಪಿ= ಪೂಜಿಸುತ್ತಿದ್ದಾತನಾಯಿತ್ತಾದೊಡೆಯು, ದೇವಸ್ಯ=ಲಿಂಗಸ್ಥಿತನಾದ ಪರಮೇಶ್ವರಂಗೆ, ಸರ್ವಗತ್ವಂ= ಸರ್ವಜಗದ್ವ್ಯಾಪಕತ್ವವನು, ವಿಭಾವಯೇತ್=ವಿಶೇಷವಾಗಿ ಭಾವಿಸುವುದು. ॥೬೪॥

**ಸೂತ್ರ॥** ಬಳಿಕ "ಆತ್ಮನ ಆಕಾಶಸ್ಸಂಭೂತಃ ಆಕಾಶಾದ್ವಾಯುಃ।
ವಾಯೋರಗ್ನಿಃ ಅಗ್ನೇರಾಪಃ ಅದ್ಭ್ಯಃ ಪೃಥಿವೀ"॥ಯೆಂಬ ಶ್ರುತ್ಯರ್ಥವನು ಪ್ರಕಾಶಿಸುತ್ತ ಕಾರ್ಯಕಾರಣವನು ಸಾಧಿಸಿ ಶಿವನಲ್ಲಿ ಸರ್ವಜಗತ್ತು ತೋರುತ್ತಿಪ್ಪುದೆಂದು ಅಷ್ಟಸೂತ್ರಂಗಳಿಂದೆ ದೃಷ್ಟಾಂತಪೂರ್ವಕವಾಗಿ ಶಿವಜಗನ್ಮಯಸ್ಥಲವನು ಹೇಳುತ್ತಿರ್ದ್ದಪಂ.

ಗ್ರಂಥ॥ **ಯಸ್ಮಾದೇತತ್ಸಮುತ್ಪನ್ನಂ ಮಹಾದೇವಾಚ್ಚರಾಚರಮ್ ।**
**ತಸ್ಮಾದೇತನ್ನ ಭಿದ್ಯೇತ ಯಥಾ ಕುಂಭಾದಿಕಂ ಮೃದಃ ॥**

**ಟೀಕು॥** ಯಸ್ಮಾತ್ ಮಹಾದೇವಾತ್=ಆವನಾನೊರ್ವ ಪರಮೇಶ್ವರನದೆಸೆಯಿಂದೆ, ಚರಾಚರಂ= ಜಂಗಮಸ್ಥಾವರರೂಪವಾದ, ಏತತ್=ಈ ಜಗತ್ತು, ಸಮುತ್ಪನ್ನಂ=ಹುಟ್ಟಿತ್ತು; ತಸ್ಮಾತ್= ಆ ಪರಮೇಶ್ವರನದೆಸೆಯಿಂದೆ, ಏತತ್=ಈ ಜಗತ್ತು, ನ ಭಿದ್ಯೇತ=ಭಿನ್ನವಾಗುತ್ತಿರದು. ಮೃದಃ = ಕಾರಣರೂಪವಾದ ಮಣ್ಣುಮುದ್ದೆಯದೆಸೆಯಿಂದೆ, ಸಮುತ್ಪನ್ನಂ=ಹುಟ್ಟಿದ, ಕುಂಭಾದಿಕಂ=ಕುಂಭ ಮೊದಲಾಗುಳ್ಳ ಕಾರ್ಯವು, ಯಥಾ=ಹೇಗೆ, ನ ಭಿದ್ಯತೇ=ಮಣ್ಣಿನದೆಸೆಯಿಂದೆ ಭಿನ್ನವಾಗುತ್ತಿರದು? ಹಾಗೆಯೆ ನಿಮಿತ್ತೋಪಾದಾನಕಾರಣವಾದ ಶಿವನದೆಸೆಯಿಂದೆ ಹುಟ್ಟಿದ ಜಗತ್ತು ಶಿವನಿಂದೆ ಭಿನ್ನವಲ್ಲವೆಂಬುದರ್ಥ. ॥೬೫॥

ಗ್ರಂಥ॥ **ಶಿವತತ್ತ್ವಾತ್ಸಮುತ್ಪನ್ನಂ ಜಗದಸ್ಮಾನ್ನ ಭಿದ್ಯತೇ ।**
**ಫೇನೋರ್ಮಿಬುದ್ಬುದಾಕಾರಂ ಯಥಾ ಸಿಂಧೋರ್ನ ಭಿದ್ಯತೇ ॥**

**ಟೀಕು॥** ಶಿವತತ್ತ್ವಾತ್=ಶಿವತತ್ತ್ವದದೆಸೆಯಿಂದೆ, ಸಮುತ್ಪನ್ನಂ=ಹುಟ್ಟಿದ, ಜಗತ್=ಜಗತ್ತು, ಅಸ್ಮಾತ್=ಈ ಶಿವತತ್ತ್ವದದೆಸೆಯಿಂದೆ, ನ ಭಿದ್ಯತೇ=ಭಿನ್ನವಾಗುತ್ತಿರದು. ಸಿಂಧೋಃ=ಸಮುದ್ರದ ದೆಸೆಯಿಂದೆ, ಸಮುತ್ಪನ್ನಂ=ಹುಟ್ಟಿದ, ಫೇನೋರ್ಮಿಬುದ್ಬದಾಕಾರಂ=ನೊರೆತೆರೆಬೊಬ್ಬುಳಿಕೆಗಳಾ ಕಾರವು, ಯಥಾ=ಹೆಂಗೆ, ನ ಭಿದ್ಯತೇ=ಭಿನ್ನವಾಗುತ್ತಿರದು? ॥೬೬॥

ಗ್ರಂಥ॥ **ಪತ್ರಶಾಖಾದಿರೂಪೇಣ ಯಥಾ ತಿಷ್ಠತಿ ಪಾದಪಃ ।**
**ತಥಾ ಭೂಮ್ಯಾದಿರೂಪೇಣ ಶಿವ ಏಕೋ ವಿರಾಜತೇ ॥**

**ಟೀಕು||** ಪಾದಪಃ=ವೃಕ್ಷವು, ಪತ್ರಶಾಖಾದಿರೂಪೇಣ=ಪತ್ರ ಶಾಖ ಪುಷ್ಪ ಫಲ ಮೊದಲಾಗುಳ್ಳ ರೂಪಿನಿಂದೆ, ಯಥಾ=ಹೇಗೆ, ತಿಷ್ಠತಿ=ಇರುತ್ತಿರ್ದ್ದಪುದು. ತಥಾ=ಹಾಗೆ, ಶಿವ ಏಕಃ=ಶಿವನೊರ್ವನೆ, ಭೂಮ್ಯಾದಿರೂಪೇಣ=ಭೂಮಿ ಮೊದಲಾಗುಳ್ಳ ಜಗದ್ರೂಪಿನಿಂದೆ, ವಿರಾಜತೇ=ಒಪ್ಪುತ್ತಿರ್ದ್ದಪನು. ||೬೭||

**ಗ್ರಂಥ||** **ಯಥಾ ತಂತುಭಿರುತ್ಪನ್ನಃ ಪಟತಂತುಮಯಃ ಸ್ಮೃತಃ ।**
**ತಥಾ ಶಿವಾತ್ಸಮುತ್ಪನ್ನಂ ಶಿವ ಏವ ಚರಾಚರಮ್ ॥**

**ಟೀಕು||** ತಂತುಭಿಃ=ನೂಲುಗಳಿಂದೆ, ಉತ್ಪನ್ನಃ=ಹುಟ್ಟಿದ, ಪಟಃ=ವಸ್ತ್ರವು, ಯಥಾ=ಹೇಗೆ, ತಂತುಮಯಃ=ತಂತುಮಯವಾಗಿ, ಸ್ಮೃತಃ=ನೆನೆಯಲುಪಟ್ಟಿತ್ತು, ತಥಾ=ಹಾಗೆ, ಶಿವಾತ್=ಶಿವತತ್ತ್ವದ ದೆಸೆಯಿಂದೆ, ಸಮುತ್ಪನ್ನಂ=ಹುಟ್ಟಿದ, ಚರಾಚರಂ=ಜಂಗಮಸ್ಥಾವರರೂಪವಾದ ಜಗತ್ತು, ಶಿವ ಏವ=ಶಿವಮಯವಾಗಿದ್ದ ಅದು. ||೬೮||

**ಗ್ರಂಥ||** **ಆತ್ಮಶಕ್ತಿವಿಕಾಸೇನ ಶಿವೋ ವಿಶ್ವಾತ್ಮನಾ ಸ್ಥಿತಃ ।**
**ಕುಟೀಭಾವಾದ್ಯಥಾ ಭಾತಿ ಪಟಃ ಸ್ವಸ್ಯ ಪ್ರಸಾರಣಾತ್ ॥**

**ಟೀಕು||** ಶಿವಃ=ಪರಮೇಶ್ವರನು, ಆತ್ಮಶಕ್ತಿವಿಕಾಸೇನ=ತನ್ನ ಪರಿಗ್ರಹಶಕ್ತಿಯ ಹರಹಿನಿಂದೆ, ವಿಶ್ವಾತ್ಮನಾ=ವಿಶ್ವರೂಪಿನಿಂದೆ, ಸ್ಥಿತಃ=ಇರುತ್ತಿರ್ದ್ದಪನು;ಪಟಃ=ವಸ್ತ್ರವು, ಸ್ವಸ್ಯ=ತನ್ನ, ಪ್ರಸಾರಣಾತ್= ಹರಹುವುದರದೆಸೆಯಿಂದೆ, ಕುಟೀಭಾವಾತ್=ಗುಡಾರವಹತನದಿಂದೆ, ಯಥಾ=ಹೇಗೆ, ಭಾತಿ=ಒಪ್ಪುತ್ತಿರ್ದ್ದಪುದು. ||೬೯||

**ಗ್ರಂಥ||** **ತಸ್ಮಾಚ್ಛಿವಮಯಂ ಸರ್ವಂ ಜಗದೇತಚ್ಚರಾಚರಮ್ ।**
**ತದಭಿನ್ನತಯಾ ಭಾತಿ ಸರ್ಪತ್ವಮಿವ ರಜ್ಜುತಃ ॥**

**ಟೀಕು||** ತಸ್ಮಾತ್=ಅದು ಕಾರಣವಾಗಿ, ಚರಾಚರಂ=ಜಂಗಮಸ್ಥಾವರರೂಪವಾದ, ತದೇತತ್ಸರ್ವಂ ಜಗತ್=ಆ ಈ ಸಮಸ್ತ ಜಗತ್ತು, ಶಿವಮಯಂ ತತ್=ತಂತುಪಟನ್ಯಾಯ ಪಟಕುಟೀಭಾವನ್ಯಾಯದಿಂದೆ ಶಿವಮಯವಾಗಿರ್ದ್ದ ಅದು, ರಜ್ಜುತಃ=ರಜ್ಜುವಿನದೆಸೆಯಿಂದೆ, ಸರ್ಪತ್ವಮಿವ=ಸರ್ಪತ್ವದೋಪಾದಿಯಲ್ಲಿ, ಅಭಿನ್ನತಯಾ=ಭಿನ್ನವಿಲ್ಲದಿಹತನದಿಂದವೆ, ಭಾತಿ=ಒಪ್ಪುತ್ತಿರ್ದ್ದಪುದು. ||೭೦||

**ಸೂತ್ರ||** ಬಳಿಕ ಮಿಥ್ಯೆಯಾದ ಜಗತ್ತು ತಥ್ಯವಾದ ಶಿವನಲ್ಲಿ ತೋರುತ್ತಿರ್ಪ್ಪುದೆಂದು ದೃಷ್ಟಾಂತಪೂರ್ವಕವಾಗಿ ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** ರಜ್ಜೌ ಸರ್ಪತ್ವವದ್ಭಾತಿ ಶುಕ್ತೌ ಚ ರಜತತ್ವವತ್ ।
ಚೋರತ್ವವದಪಿ ಸ್ಥಾಣೌ ಮರೀಚ್ಯಾಂ ಚ ಜಲತ್ವವತ್ ॥

ಗಂಧರ್ವಪುರವದ್ವ್ಯೋಮ್ನಿ ಸಚ್ಚಿದಾನಂದಲಕ್ಷಣೇ ।
ನಿರಸ್ತಭೇದಸದ್ಭಾವೇ ಶಿವೇ ವಿಶ್ವಂ ವಿರಾಜತೇ ॥

**ಟೀಕು||** ರಜ್ಜೌ=ರಜ್ಜುವಿನಲ್ಲಿಯ, ಸರ್ಪತ್ವವತ್= ಸರ್ಪತ್ವದೋಪಾದಿಯಲ್ಲಿ; ಶುಕ್ತೌ=ಚಿಪ್ಪಿನಲ್ಲಿಯ, ರಜತತ್ವವತ್= ಬೆಳ್ಳಿಯೋಪಾದಿಯಲ್ಲಿ; ಸ್ಥಾಣೌ=ಕೊರಡಿನಲ್ಲಿಯ, ಚೋರತ್ವವತ್= ಕಳ್ಳನೋಪಾದಿಯಲ್ಲಿ; ಮರೀಚ್ಯಾಂ ಚ=ಮರೀಚಿಕಾ ಜಲದಲ್ಲಿಯು, ಜಲತ್ವವತ್= ಜಲದೋಪಾದಿಯಲ್ಲಿ; ವ್ಯೋಮ್ನಿ=ಆಕಾಶದಲ್ಲಿಯ, ಗಂಧರ್ವಪುರವತ್= ಗಂಧರ್ವಪುರದೋ ಪಾದಿಯಲ್ಲಿ, ಭಾತಿ=ನಿತ್ಯಪ್ರಕಾಶನಾಗಿ, ಸಚ್ಚಿದಾನಂದಲಕ್ಷಣೇ=ಸಚ್ಚಿದಾನಂದಸ್ವರೂಪವುಳ್ಳ, ನಿರಸ್ತಭೇದಸದ್ಭಾವೇ=ತೊಲಗಿಸಲುಪಟ್ಟ ಭೇದಸದ್ಭಾವವುಳ್ಳ, ಶಿವೇಽಪಿ=ಶಿವನಲ್ಲಿಯಾಯಿತ್ತಾದೊಡೆ, ವಿಶ್ವಂ=ಸಮಸ್ತ ಜಗತ್ತು, ವಿರಾಜತೇ=ಒಪ್ಪುತ್ತಿರ್ದಪುದು.

**ತಾತ್ಪರ್ಯ||** ಸಂಶಯವಿಪರ್ಯಾಯಭ್ರಾಂತ್ಯಾತಪೇಂದ್ರಜಾಲವನಧಿಕರಿಸಿಕೊಂಡು ರಾತ್ರಿ ದಿವದಲ್ಲಿ ತೋರುವ ಈ ಅಯಿದು ದೃಷ್ಟಾಂತವನು ಕ್ರಮದಿಂದೆ ತಿಳಿವುದು. ||೭೨||

ಇತಿ ಶಿವಜಗನ್ಮಯಸ್ಥಲಮ್

## ೨೪. ಮಾಹೇಶ್ವರಸ್ಥಲೇ ಭಕ್ತದೇಹಿಕಲಿಂಗಸ್ಥಲಮ್

**ಸೂತ್ರ||** ಬಳಿಕ "ವೇದವೇದಾಂತವಾಕ್ಯಾರ್ಥಸಂಧಾನಾತೀತವರ್ತನಃ|
ಭಕ್ತಭಾವಪರಾನಂದೋ ಭಕ್ತಭಾವೈಕಗೋಚರಃ"||ಯೆಂಬ ಯೋಗಜಾಗಮಾರ್ಥವನು ಪ್ರಕಟಿಸುತ್ತ ಶಿವ ಜಗನ್ಮಯನಾದರು ಭಕ್ತರ ಹೃದಯದಲ್ಲಿಯೆ ಪ್ರಕಾಶಿಸುತ್ತಿರ್ದಪನುಯೆಂದು ಭಕ್ತದೇಹಿಕಲಿಂಗಸ್ಥಲವನು ಸಪ್ತಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ||** ಸಮಸ್ತಜಗದಾತ್ಮಾಪಿ ಶಂಕರಃ ಪರಮೇಶ್ವರಃ ।
ಭಕ್ತಾನಾಂ ಹೃದಯಾಂಭೋಜೇ ವಿಶೇಷೇಣ ವಿರಾಜತೇ ॥

**ಟೀಕು||** ಶಂಕರಃ=ಸುಖವನು ಮಾಡುತ್ತಿರ್ದ, ಪರಮೇಶ್ವರಃ=ಪರಮ ಶಿವನು, ಸಮಸ್ತ ಜಗದಾತ್ಮಾಪಿ=ಸರ್ವಜಗನ್ಮಯನಾಯಿತ್ತಾದೊಡೆಯು, ಭಕ್ತಾನಾಂ=ಭಕ್ತರ, ಹೃದಯಾಂಭೋಜೇ=

ಹೃದಯಕಮಲದಲ್ಲಿ, ವಿಶೇಷೇಣ=ವಿಶೇಷದಿಂದ, ವಿರಾಜತೇ=ಒಪ್ಪುತ್ತಿರ್ದ್ದಪನು. ||೭೪||

ಗ್ರಂಥ|| **ಕೈಲಾಸೇ ಮಂದರೇ ಚೈವ ಹಿಮಾದ್ರೌ ಕನಕಾಚಲೇ ।**
**ಹೃದಯೇಷು ಚ ಭಕ್ತಾನಾಂ ವಿಶೇಷೇಣ ವ್ಯವಸ್ಥಿತಃ ॥**

**ಟೀಕು||** ಕೈಲಾಸೇ=ರಜತಾಚಲದಲ್ಲಿ, ಮಂದರೇ ಚ=ಮಂದರಾದ್ರಿಯಲ್ಲಿಯು, ಹಿಮಾದ್ರೌ= ಹಿಮವತ್ಪರ್ವತದಲ್ಲಿಯು, ಕನಕಾಚಲೇ=ಹೇಮಾದ್ರಿಯಲ್ಲಿಯು, ಭಕ್ತಾನಾಂ ಚ=ಶಿವಭಕ್ತರ, ಹೃದಯೇಷು ಏವ=ಹೃದಯಕಮಲಂಗಳಲ್ಲಿಯು, ಶಿವಃ=ಪರಮೇಶ್ವರನು, ವಿಶೇಷೇಣ=ವಿಶೇಷದಿಂದವೆ ವ್ಯವಸ್ಥಿತಃ=ಇರುತ್ತಿರ್ದ್ದಪನು. ||೭೩||

**ಸೂತ್ರ||** ಬಳಿಕ ಆ ಅರ್ಥವನೆ ದೃಷ್ಟಾಂತಪೂರ್ವಕವಾಗಿ ಹೇಳುತ್ತಿರ್ದ್ದಪಂ.

ಗ್ರಂಥ|| **ಸರ್ವಾತ್ಮಾಪಿ ಪರಿಚ್ಛಿನ್ನೋ ಯಥಾ ಬಿಂಬೇಷು ವರ್ತತೇ ।**
**ತಥಾ ಸ್ವಕೀಯಭಕ್ತೇಷು ಶಂಕರೋ ಭಾಸತೇ ಸದಾ ॥**

**ಟೀಕು||** [ಸೂರ್ಯಃ=ಸೂರ್ಯನು,] ಸರ್ವಾತ್ಮಾಪಿ=ಸರ್ವವ್ಯಾಪಕವಾದ ತೇಜೋರೂಪ ಉಳ್ಳಾತನಾಯಿತ್ತಾದೊಡೆಯು, ಯಥಾ=ಹೇಗೆ, ಬಿಂಬೇಷು=ಮಂಡಲಂಗಳಲ್ಲಿ ಪರಿಚ್ಛಿನ್ನಃ=ಹವಣಿಸಲು ಪಟ್ಟ ಸ್ವರೂಪವುಳ್ಳಾತನಾಗಿ, ವರ್ತತೇ=ವರ್ತಿಸುತ್ತಿರ್ದ್ದಪನು. ತಥಾ=ಹಾಗೆಯೆ, ಶಂಕರಃ= ಪರಮೇಶ್ವರನು, ಸರ್ವಾತ್ಮಾಪಿ=ಸರ್ವಜಗನ್ಮಯಸ್ವರೂಪನಾಯಿತ್ತಾದೊಡೆಯು, ಸ್ವಕೀಯ ಭಕ್ತೇಷು=ತನ್ನ ಭಕ್ತರಲ್ಲಿ, ಸದಾ=ಎಲ್ಲಾಕಾಲದಲ್ಲಿಯು, ಭಾಸತೇ=ಪ್ರಕಾಶಿಸುತ್ತಿರ್ದ್ದಪನು. ||೭೫||

ಗ್ರಂಥ|| **ನಿತ್ಯಂ ಭಾತಿ ತ್ವದೀಯೇಷು ಯಾ ತೇ ರುದ್ರ ಶಿವಾ ತನೂಃ ।**
**ಅಘೋರಾಽಪಾಪಕಾಶೀತಿ ಶ್ರುತಿರಾಹ ಸನಾತನೀ ॥**

**ಟೀಕು||** ಭೋ ರುದ್ರ=ಎಲೈ ಪರಮೇಶ್ವರನೆ! ತೇ=ನಿನ್ನ, ಯಾ=ಆವುದಾನೊಂದು, ತನೂಃ=ಲಿಂಗಮೂರ್ತಿಯು, ಅಘೋರಾ=ಭಯಂಕರವಲ್ಲದೆ, ಅಪಾಪಕಾಶೀತಿ=ಪಾಪರಹಿತವಾಗಿದ್ದ ಅದು, ಸಾ=ಆ ಲಿಂಗಮೂರ್ತಿಯು, ತ್ವದೀಯೇಷು=ನಿನ್ನ ಸಂಬಂಧವಾದ ಭಕ್ತರಲ್ಲಿ, ನಿತ್ಯಂ=ಆವಾಗವು, ಭಾತಿ=ಪ್ರಕಾಶಿಸುತ್ತಿರ್ದ್ದಪುದು. ಇತಿ = ಹೀಗೆಂದು, ಸನಾತನೀ = ಕೇಡಿಲ್ಲದೆಯಿದ್ದ, ಶ್ರುತಿಃ=ವೇದವು ಆಹ= ಹೇಳುತ್ತಿರ್ದ್ದಪುದು. ||೭೫||

**ಸೂತ್ರ||** ಬಳಿಕ ಭಕ್ತಾದಿ ಷಡುಸ್ಥಲಜ್ಞಾನಿಗಳಲ್ಲಿಯು ಪರಶಿವನು ಪ್ರಕಾಶಿಸುತ್ತಿರ್ದ್ದಪನೆಂದು, ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ವಿಶುದ್ಧೇಷು ವಿರಕ್ತೇಷು ವಿವೇಕಿಷು ಮಹಾತ್ಮಸು ।**
**ಶಿವಸ್ತಿಷ್ಠತಿ ಸರ್ವಾತ್ಮಾ ಶಿವಲಾಂಛನಧಾರಿಷು ॥**

**ಟೀಕು||** ವಿಶುದ್ಧೇಷು=ನಿರ್ಮಲರಾದ ಶಿವಭಕ್ತರಲ್ಲಿ, ಶಿವಲಾಂಛನಧಾರಿಷು=ಶಿವಲಾಂಛನವ ಧರಿಸಿರ್ದ್ದ ಮಹೇಶ್ವರರಲ್ಲಿ, ವಿರಕ್ತೇಷು=ವಿಷಯಂಗಳಲ್ಲಿ ವಿರಕ್ತರಾದ ಪ್ರಸಾದಿಗಳಲ್ಲಿ, ವಿವೇಕಿಷು= ಜೀವೇಶ್ವರರ ವಿವೇಕವುಳ್ಳ ಪ್ರಾಣಲಿಂಗಿಗಳಲ್ಲಿ, ಮಹಾತ್ಮಸು=ಮಹಾಪುರುಷರಾದ ಶರಣರಲ್ಲಿಯು, ಸರ್ವಾತ್ಮಾ=ಸರ್ವಜಗನ್ಮಯನಾಗಿರ್ದ್ದ, ಶಿವಃ=ಶಿವನು, ತಿಷ್ಠತಿ=ಇರುತ್ತಿರ್ದ್ದಪನು. ||೭೭||

**ಗ್ರಂಥ||** **ನಿತ್ಯಂ ಸಂತೋಷಯುಕ್ತಾನಾಂ ಜ್ಞಾನನಿರ್ಧೂತಕರ್ಮಣಾಮ್ ।**
**ಮಾಹೇಶ್ವರಾಣಾಮಂತಸ್ಥೋ ವಿಭಾತಿ ಪರಮೇಶ್ವರಃ ॥**

**ಟೀಕು||** ಪರಮೇಶ್ವರಃ=ಪರಮಶಿವನು, ನಿತ್ಯಂಸಂತೋಷಯುಕ್ತಾನಾಂ=ಶಿವಸುಖದಿಂದಲಾದ ನಿತ್ಯಸಂತೋಷದೊಡನೆ ಕೂಡಿರ್ದ್ದ, ಜ್ಞಾನನಿರ್ಧೂತಕರ್ಮಣಾಂ=ಶಿವಜ್ಞಾನದಿಂದೆ ಕೊಡಹಲುಪಟ್ಟ ಸಂಚಿತಾದಿ ಕರ್ಮಂಗಳುಳ್ಳ, ಮಾಹೇಶ್ವರಾಣಾಂ=ವೀರಮಾಹೇಶ್ವರರಾದ ಶಿವಲಿಂಗೈಕ್ಯರ, ಅಂತಸ್ಥಃ= ಹೃದಯಕಮಲದಲ್ಲಿ ಇರುತ್ತಿರ್ದ್ದ ಆತನಾಗಿ, ವಿಭಾತಿ=ಪ್ರಕಾಶಿಸುತ್ತಿರ್ದ್ದಪಂ. ||೭೮||

**ಸೂತ್ರ||** ಬಳಿಕ "ಈಶಾನಃ ಶಿವ ಏಕೋ ಧ್ಯೇಯಃ ಶಿವಂಕರಃ।
ಸರ್ವಮನ್ಯತ್ಪರಿತ್ಯಜ್ಯ ಸಮಾಪ್ತಾಥರ್ವಶಿಖಾ"॥ ಯೆಂಬ ಶ್ರುತ್ಯರ್ಥವನು ಪ್ರಕಾಶಿಸಿ ದೇವಾತಾಂತರಂಗಳನು ಬಿಟ್ಟು ಮಾಹೇಶ್ವರನೊರ್ವನಲ್ಲಿಯೆ ತತ್ಪರನಾದ ವೀರಮಾಹೇಶ್ವರನು ಪ್ರಸಾದಿಯಾಗುತ್ತಿರ್ದ್ದಪನೆಂದು ಮಾಹೇಶ್ವರಸ್ಥಲವನು ಸಮಾಪ್ತಿಯಂ ಮಾಡುತ್ತಿರ್ದ್ದಪಂ.

**ವೃತ್ತ||** **ಅನ್ಯತ್ರ ಶಂಭೋರತಿಮಾತ್ರಶೂನ್ಯೋ**
**ನಿಜೇಷ್ಟಲಿಂಗೇ ನಿಯತಾಂತರಾತ್ಮಾ ।**
**ಶಿವಾತ್ಮಕಂ ವಿಶ್ವಮಿದಂ ವಿಬುಧ್ಯನ್**
**ಮಾಹೇಶ್ವರೋಽಸೌ ಭವತಿ ಪ್ರಸಾದೀ ॥**

**ಟೀಕು||** ಅಸೌ ಮಾಹೇಶ್ವರಃ=ಲಿಂಗನಿಷ್ಠಾದ್ಯಾಚಾರವುಳ್ಳ ವೀರಮಾಹೇಶ್ವರನು, ಶಂಭೋಃ= ಪರಮೇಶ್ವರನಪದೆಸೆಯಿಂದೆ, ಅನ್ಯತ್ರ=ಉಳಿದ ದೇವತಾಂತರಂಗಳಲ್ಲಿ, ರತಿಮಾತ್ರಶೂನ್ಯಃ= ಪ್ರೀತಿಮಾತ್ರವಲ್ಲದೆಯಿದ್ದಾತನಾಗಿ, ನಿಜೇಷ್ಟಲಿಂಗೇ=ತನ್ನ ಇಷ್ಟಲಿಂಗದಲ್ಲಿ, ನಿಯತಾಂತರಾತ್ಮಾ=

ನಿಯಮಿಸಲುಪಟ್ಟ ಅಂತಃಕರಣವುಳ್ಳಾತನಾಗಿ, ಇದಂ ವಿಶ್ವಂ=ಈ ಸಮಸ್ತ ಜಗತ್ತನು, ಶಿವಾತ್ಮಕಂ=ಶಿವಸ್ವರೂಪವುಳ್ಳದನಾಗಿ, ವಿಬುಧ್ಯನ್ ಸನ್=ಅರಿವುತ್ತಿರ್ದ್ದಾತನಾಗುತಲು, ಪ್ರಸಾದೀ=ಪ್ರಸಾದಿಯು, ಭವತಿ= ಆಗುತ್ತಿರ್ದ್ದಪನು. ॥೭೯॥

ಇತಿ ಭಕ್ತದೇಹಿಕಲಿಂಗಸ್ಥಲಮ್

ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಮಾಹೇಶ್ವರಸ್ಯ ನವವಿಧಸ್ಥಲಪ್ರಸಂಗೋ ನಾಮ ದಶಮಃ ಪರಿಚ್ಛೇದಃ ಸಮಾಪ್ತಃ

## ಪ್ರಸಾದಿನಃ ಸಪ್ತವಿಧಸ್ಥಲಪ್ರಸಂಗಃ
## ತೃತೀಯಂ ಪ್ರಸಾದಿಸ್ಥಲಮ್

**ಅಗಸ್ತ್ಯ ಉವಾಚ॥**

ಅಗಸ್ತ್ಯಮುನೀಶ್ವರನು ಪ್ರಶ್ನೆಯಂ ಮಾಡಿ ಕೇಳುತ್ತಿರ್ದ್ದಪಂ.

**ಗ್ರಂಥ॥** **ಉಕ್ತೋ ಮಾಹೇಶ್ವರಸ್ಸಾಕ್ಷಾಲ್ಲಿಂಗನಿಷ್ಠಾದಿಧರ್ಮವಾನ್ ।**
**ಕಥಮೇಷ ಪ್ರಸಾದೀತಿ ಕಥ್ಯತೇ ಗಣನಾಯಕಃ ॥**

**ಟೀಕು॥** ಭೋ ಗಣನಾಯಕ=ಎಲೆ ರೇಣುಕ ಗಣೇಶ್ವರನೇ! ಸಾಕ್ಷಾತ್=ಪ್ರತ್ಯಕ್ಷವಾದ, ಲಿಂಗನಿಷ್ಠಾದಿ ಧರ್ಮವಾನ್=ಶಿವಲಿಂಗನಿಷ್ಠೆ ಮೊದಲಾದ ಧರ್ಮವುಳ್ಳ, ಮಾಹೇಶ್ವರಃ=ಪರಮೇಶ್ವರನು, ಉಕ್ತಃ=ಹೇಳಲುಪಟ್ಟನು. ಏಷಃ=ಈ ಪರಮೇಶ್ವರನೆ, ಕಥಂ=ಆವ ಪ್ರಕಾರದಿಂದೆ, ಪ್ರಸಾದೀತಿ= ಪ್ರಸಾದಿಯೆಂದು, ಕಥ್ಯತೇ=ಹೇಳಲುಪಡುತ್ತಿರ್ದ್ದಪನು. ॥೧॥

**ರೇಣುಕ ಉವಾಚ॥**

ರೇಣುಕಗಣೇಶ್ವರನು ಉತ್ತರವನು ನಿರೂಪಿಸುತ್ತಿರ್ದ್ದಪಂ.

**ಗ್ರಂಥ॥** **ಲಿಂಗನಿಷ್ಠಾದಿಭಾವೇನ ಧ್ವಸ್ತಪಾಪನಿಬಂಧನಃ ।**
**ಮನಃ ಪ್ರಸಾದಯೋಗೇನ ಪ್ರಸಾದೀತ್ಯೇಷ ಕಥ್ಯತೇ ॥**

**ಟೀಕು॥** ಲಿಂಗನಿಷ್ಠಾದಿಭಾವೇನ=ಶಿವಲಿಂಗನಿಷ್ಠೆ ಮೊದಲಾದ ಭಾವದಿಂದೆ, ಧ್ವಸ್ತಪಾಪ ನಿಬಂಧನಃ=ಕೆಡಿಸಲುಪಟ್ಟ ಪಾಪ ಸಮೂಹವುಳ್ಳ, ಏಷಃ=ಈ ವೀರಮಾಹೇಶ್ವರನು, ಮನಃಪ್ರಸಾದ ಯೋಗೇನ=ಮನಃಪ್ರಸನ್ನತೆಯ ಸಂಬಂಧದಿಂದೆ, ಪ್ರಸಾದೀತಿ=ಪ್ರಸಾದಿಯೆಂದು, ಕಥ್ಯತೇ=ಹೇಳಲು ಪಡುತ್ತಿರ್ದ್ದಪನು. ॥೨॥

**ಸೂತ್ರ॥** ಬಳಿಕ ಮಹತ್ವಬೋಧಕವಾದ ಪ್ರಸಾದಿಸ್ಥಲವು ಅವಾಂತರಸ್ಥಲಭೇದದಿಂದೆ ಸಪ್ತವಿಧವೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** **ಪ್ರಸಾದಿಸ್ಥಲಮಿತ್ಯೇತದಸ್ಯ ಮಾಹಾತ್ಮ್ಯಬೋಧಕಮ್ ।**
**ಅಂತರಸ್ಥಲಭೇದೇನ ಸಪ್ತಧಾ ಪರಿಕೀರ್ತಿತಮ್ ॥**

**ಟೀಕು||** ಅಸ್ಯ=ಭಕ್ತಮಾಹೇಶ್ವರಸ್ಥಲೋಕ್ತವಾದ ಈ ಸದಾಚಾರ ಸಮೂಹದ, ಮಾಹಾತ್ಮ್ಯ ಬೋಧಕಂ=ಮಹತ್ವವನು ಬೋಧಿಸುತ್ತಿರ್ದ್ದ, ಏತತ್ ಪ್ರಸಾದಿಸ್ಥಲಂ=ಈ ಪ್ರಸಾದಿಸ್ಥಲವು. ಅಂತರ ಸ್ಥಲಭೇದೇನ=ಅವಾಂತರಸ್ಥಲಭೇದದಿಂದೆ, ಸಪ್ತಧಾ=ಏಳು ಪ್ರಕಾರವಾಗಿ, ಪರಿಕೀರ್ತಿತಂ= ಹೇಳಲುಪಟ್ಟಿತ್ತು. ||೩||

**ಸೂತ್ರ||** ಬಳಿಕ ಸ್ಥಲೋದ್ದೇಶವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಪ್ರಸಾದಿಸ್ಥಲಮಾದೌ ತು ಗುರುಮಾಹಾತ್ಮ್ಯಕಂ ತತಃ ।**
**ತತೋ ಲಿಂಗಪ್ರಶಂಸಾ ಚ ತತೋ ಜಂಗಮಗೌರವಮ್ ॥**

**ತತೋ ಭಕ್ತಸ್ಯ ಮಾಹಾತ್ಮ್ಯಂ ತತಃ ಶರಣಕೀರ್ತನಮ್ ।**
**ಶಿವಪ್ರಸಾದಮಾಹಾತ್ಮ್ಯಮಿತಿ ಸಪ್ತಪ್ರಕಾರಕಮ್ ॥**

**ಟೀಕು||** ಆದೌ ತು=ಮೊದಲಲ್ಲಿಯಾಯಿತ್ತಾದೊಡೆ, ಪ್ರಸಾದಿಸ್ಥಲಂ=ಪ್ರಸಾದಿಸ್ಥಲವು, ತತಃ=ಬಳಿಕ, ಗುರುಮಾಹಾತ್ಮ್ಯಕಂ=ಗುರುಮಾಹಾತ್ಮ್ಯಸ್ಥಲವು. ತತಃ=ಬಳಿಕ, ಲಿಂಗಪ್ರಶಂಸಾ ಚ=ಶಿವಲಿಂಗ ಮಹತ್ವಸ್ಥಲವು, ತತಃ=ಬಳಿಕ, ಜಂಗಮಗೌರವಂ=ಜಂಗಮಮಾಹಾತ್ಮ್ಯಸ್ಥಲವು, ತತಃ=ಬಳಿಕ, ಭಕ್ತಸ್ಯ=ಶಿವಭಕ್ತನ, ಮಾಹಾತ್ಮ್ಯಂ=ಮಹತ್ವಸ್ಥಲವು. ತತಃ=ಬಳಿಕ, ಶರಣಕೀರ್ತನಂ=ಶರಣನ ಮಹತ್ವಸ್ಥಲವು. ತತಃ=ಬಳಿಕ, ಶಿವಪ್ರಸಾದಮಾಹಾತ್ಮ್ಯಂ=ಶಿವಪ್ರಸಾದಮಹತ್ವಸ್ಥಲವು. ಇತಿ=ಈ ಪ್ರಕಾರದಿಂದೆ, ಸಪ್ತಪ್ರಕಾರಕಂ=ಪ್ರಸಾದಿಸ್ಥಲವು ಸಪ್ತಪ್ರಕಾರವಾಗಿದ್ದ ಅದು. ||೫||

**ಸೂತ್ರ||** ಬಳಿಕ ಉದ್ದೇಶಕ್ಕೆ ಕ್ರಮದಿಂದೆ ಲಕ್ಷಣವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಕ್ರಮಾಲ್ಲಕ್ಷಣಮೇತೇಷಾಂ ಕಥಯಾಮಿ ಮಹಾಮುನೇ ।**

**ಟೀಕು||** ಭೋ ಮಹಾಮುನೇ=ಎಲೈ ಅಗಸ್ತ್ಯಮುನಿಯೆ! ಏತೇಷಾಂ=ಈ ಉದ್ದಿಷ್ಟವಾದ ಅವಾಂತರ ಸ್ಥಲಂಗಳಿಗೆ, ಕ್ರಮಾತ್=ಕ್ರಮದಿಂದೆ, ಲಕ್ಷಣಂ=ಲಕ್ಷಣವನು, ಕಥಯಾಮಿ=ಹೇಳುತ್ತಿದ್ದೇನೆ. ||೬||

## ೨೫. ಪ್ರಸಾದಿಸ್ಥಲೇ ಪ್ರಸಾದಿಸ್ಥಲಮ್

**ಸೂತ್ರ||** ಬಳಿಕ "ಚಿತ್ತಸ್ಯ ಹಿ ಪ್ರಸಾದೇನ ಹಂತಿ ಕರ್ಮ ಶುಭಾಶುಭಮ್।
ಪ್ರಸನ್ನಾತ್ಮಾऽತ್ಮನಿ ಸ್ಥಿತ್ವಾ ಸುಖಮಕ್ಷಯಮಶ್ನುತೇ"|| ಯೆಂಬ ಮೈತ್ರೇಯ ಶ್ರುತ್ಯರ್ಥವನು ಪ್ರಕಾಶಿಸುತ್ತ ಶಿವಪ್ರಸಾದದಿಂದಲಾಗುವ ಮನಃಪ್ರಸನ್ನತೆಯನು ದ್ವಾದಶ ಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ನೈರ್ಮಲ್ಯಂ ಮನಸೋ ಲಿಂಗಂ ಪ್ರಸಾದ ಇತಿ ಕಥ್ಯತೇ ।**
**ಶಿವಸ್ಯ ಲಿಂಗರೂಪಸ್ಯ ಪ್ರಸಾದಾದೇಷ ಸಿಧ್ಯತಿ ॥**

**ಟೀಕು||** ಮನಸಃ=ಚಿತ್ತದ, ನೈರ್ಮಲ್ಯಂ ಲಿಂಗಂ=ನಿರ್ಮಲವಾದ ಕುರುಹೆ, ಪ್ರಸಾದ ಇತಿ=ಪ್ರಸಾದವೆಂದು, ಕಥ್ಯತೇ=ಹೇಳಲುಪಡುತ್ತಿರ್ದ್ದಪುದು. ಏಷಃ=ಈ ಚಿತ್ತಪ್ರಸನ್ನತೆಯೆ, ಲಿಂಗರೂಪಸ್ಯ ಶಿವಸ್ಯ=ಲಿಂಗರೂಪವಾದ ಪರಮೇಶ್ವರನ, ಪ್ರಸಾದಾತ್=ಪ್ರಸಾದದದೆಸೆಯಿಂದೆ, ಸಿದ್ಧ್ಯತಿ= ಸಿದ್ಧಿಸುತ್ತಿರ್ದ್ದಪುದು. ||೭||

**ಗ್ರಂಥ||** **ಶಿವಪ್ರಸಾದೋ ಯದ್ದ್ರವ್ಯಂ ಶಿವಾಯ ವಿನಿವೇದಿತಮ್ ।**
**ನಿರ್ಮಾಲ್ಯಂ ತತ್ತು ಶೈವಾನಾಂ ಮನೋನೈರ್ಮಲ್ಯಕಾರಣಮ್ ॥**

**ಟೀಕು||** ಯತ್ ದ್ರವ್ಯಂ=ಆವುದಾದನೊಂದು ದ್ರವ್ಯವು, ಶಿವಾಯ=ಶಿವಲಿಂಗಕ್ಕೋಸುಗ, ವಿನಿವೇದಿತಂ=ಸಮರ್ಪಿಸಲುಪಟ್ಟಿತ್ತು, ಶಿವಪ್ರಸಾದಃ=ಶಿವಲಿಂಗಪ್ರಸಾದವಾಗಿದ್ದ, ತತ್ತು ನಿರ್ಮಾಲ್ಯಂ=ಆ ನಿರ್ಮಾಲ್ಯವಾಯಿತ್ತಾದೊಡೆ, ಶೈವಾನಾಂ=ವೀರಶೈವರ, ಮನೋನೈರ್ಮಲ್ಯ ಕಾರಣಂ=ಮನಸ್ಸಿನ ನಿರ್ಮಲತ್ವಕ್ಕೆ ಕಾರಣವಾಗಿದ್ದ ಅದು. ||೮||

**ಗ್ರಂಥ||** **ಮನಃ ಪ್ರಸಾದಸಿದ್ಧ್ಯರ್ಥಂ ನಿರ್ಮಾಲ್ಯಂ ಜ್ಞಾನಕಾರಣಮ್ ।**
**ಶಿವಪ್ರಸಾದಂ ಸ್ವೀಕುರ್ವನ್ ಪ್ರಸಾದೀತ್ಯೇಷ ಕಥ್ಯತೇ ॥**

**ಟೀಕು||** ಜ್ಞಾನಕಾರಣಂ=ಶಿವಜ್ಞಾನಕ್ಕೆ ಕಾರಣವಾದ, ಶಿವಪ್ರಸಾದಂ ನಿರ್ಮಾಲ್ಯಂ=ಶಿವಲಿಂಗ ಪ್ರಸಾದವಾದ ನಿರ್ಮಾಲ್ಯವನು, ಮನಃ ಪ್ರಸಾದಸಿದ್ಧ್ಯರ್ಥಂ=ಮನಸ್ಸಿನ ಪ್ರಸನ್ನತೆಯ ಸಿದ್ಧಿಗೋಸುಗವಾಗಿ, ಸ್ವೀಕುರ್ವನ್=ಸ್ವೀಕರಿಸುತ್ತಿರ್ದ್ದ, ಏಷಃ=ಈ ವೀರಮಾಹೇಶ್ವರನು, ಪ್ರಸಾದೀತಿ=ಪ್ರಸಾದಿಯೆಂದು, ಕಥ್ಯತೇ=ಹೇಳಲುಪಡುತ್ತಿರ್ದ್ದಪನು. ||೯||

**ಸೂತ್ರ||** ಬಳಿಕ "ಆಹಾರಶುದ್ಧೌ ಸತ್ವಶುದ್ಧಿಃ ಸತ್ಯಶುದ್ಧೌ ಧ್ರುವಾ ಸ್ಮೃತಿಃ।
ಸ್ಮೃತೇರ್ಲಾಭೇ ಸರ್ವಗ್ರಂಥೀನಾಂ ವಿಪ್ರಮೋಕ್ಷಃ"॥ ಯೆಂಬ ಛಾಂದೋಗ್ಯ ಶ್ರುತ್ಯರ್ಥವನು ಪ್ರಕಟಿಸುತ್ತ ಶಿವಪ್ರಸಾದ ಸ್ವೀಕಾರದಿಂದೆ ಚಿತ್ತಪ್ರಸನ್ನತೆಯ ಪಡೆವುತ್ತಿರ್ದ್ದಪನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಅನ್ನಶುದ್ಧ್ಯಾ ಹಿ ಸರ್ವೇಷಾಂ ಸತ್ವಶುದ್ಧಿರುದಾಹೃತಾ ।**
**ವಿಶುದ್ಧಮನ್ನಜಾತಂ ಹಿ ಯಚ್ಛಿವಾಯ ಸಮರ್ಪಿತಮ್ ॥**

**ತದೇವ ಸರ್ವಕಾಲಂ ತು ಭುಂಜಾನೋ ಲಿಂಗತತ್ಪರಃ ।**
**ಮನಃಪ್ರಸಾದಮತುಲಂ ಲಭತೇ ಜ್ಞಾನಕಾರಣಮ್ ॥**

**ಟೀಕು॥** ಅನ್ನಶುದ್ಧ್ಯಾ ಹಿ=ಅನ್ನಶುದ್ಧಿಯಿಂದಲಾಯಿತ್ತಾದೊಡೆ, ಸರ್ವೇಷಾಂ=ಸರ್ವರಿಗೆ, ಸತ್ವಶುದ್ಧಿಃ=ಸತ್ವಶುದ್ಧಿಯು, ಉದಾಹೃತಾ=ಹೇಳಲುಪಟ್ಟಿತ್ತು. ಯತ್=ಆವುದಾನೊಂದು ಅನ್ನವು, ಶಿವಾಯ=ಶಿವಲಿಂಗಕ್ಕೋಸುಗ, ಸಮರ್ಪಿತಂ=ಸಮರ್ಪಿಸಲುಪಟ್ಟಿತ್ತು. ವಿಶುದ್ಧಂ=ನಿರ್ಮಲವಾದ, ತದೇವ ಅನ್ನಜಾತಂ=ಆ ಪ್ರಸಾದಾನ್ನ ಸಮೂಹವನಾಯಿತ್ತಾದೊಡೆ, ಸರ್ವಕಾಲಂ ತು=ಎಲ್ಲಾ ಕಾಲದಲ್ಲಿಯಾಯಿತ್ತಾದೊಡೆಯು, ಲಿಂಗತತ್ಪರಃ=ಶಿವಲಿಂಗದಲ್ಲಿ ತತ್ಪರನಾಗಿ, ಭುಂಜಾನಃ=ಭೋಗಿಸುತ್ತಿರ್ದ ಪ್ರಸಾದಿಯು, ಜ್ಞಾನಕಾರಣಂ=ಶಿವಜ್ಞಾನಕ್ಕೆ ಕಾರಣವಾಗಿ, ಅತುಲಂ=ಸಮಾನವಲ್ಲದೆಯಿದ್ದ, ಮನಃಪ್ರಸಾದಂ=ಚಿತ್ತಪ್ರಸನ್ನತೆಯನು, ಲಭತೇ=ಪಡೆವುತ್ತಿರ್ದಪನು. ॥೧೧॥

**ಸೂತ್ರ॥** ಬಳಿಕ "ಯದ್ಯದಾತ್ಮಹಿತಂ ವಸ್ತು ತತ್ತತ್ ಸರ್ವಂ ಶಿವಾರ್ಪಿತಮ್" ಯೆಂಬ ಶಿವರಹಸ್ಯಾರ್ಥವನು ಪ್ರಕಟಿಸುತ್ತಿರ್ದಪಂ.

**ಗ್ರಂಥ॥** **ಆತ್ಮಭೋಗಾಯ ನಿಯತಂ ಯದ್ಯದ್ದ್ರವ್ಯಂ ಸಮಾಹಿತಮ್ ।**
**ತತ್ತತ್ ಸಮರ್ಪ್ಯ ದೇವಾಯ ಭುಂಜೀತಾತ್ಮವಿಶುದ್ಧಯೇ ॥**

**ಟೀಕು॥** ಯತ್ ಯತ್ ದ್ರವ್ಯಂ=ಆವಾವ ದ್ರವ್ಯವು, ಆತ್ಮಭೋಗಾಯ=ತನ್ನ ಭೋಗಕ್ಕೋಸುಗ, ನಿಯತಂ=ನಿಯಮವಾಗಿ, ಸಮಾಹಿತಂ=ಸಂಪಾದಿಸಿಗಳಿಸಲುಪಟ್ಟಿತ್ತು, ತತ್ ತತ್=ಆಯಾಯ ದ್ರವ್ಯವನು, ದೇವಾಯ=ಶಿವಲಿಂಗಕ್ಕೋಸುಗ, ಸಮರ್ಪ್ಯ=ಸಮರ್ಪಿಸಿ, ಆತ್ಮವಿಶುದ್ಧಯೇ= ಅಂತಃಕರಣಶುದ್ಧಿಗೋಸುಗ, ಭುಂಜೀತ=ಭೋಗಿಸುವುದು. ॥೧೨॥

**ಸೂತ್ರ॥** ಬಳಿಕ "ಭಿಷಕ್ತಮಂ ತ್ವಾಂ ಭಿಷಜಾಂ ಶೃಣೋಮಿ" ಯೆಂಬ ವೇದಪಾದಸ್ತವಾರ್ಥವನು ಪ್ರಕಾಶಿಸುತ ಶಿವಪ್ರಸಾದ ಮಹತ್ವವನು ಪಂಚಸೂತ್ರಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ನಿತ್ಯಸಿದ್ಧೇನ ದೇವೇನ ಭಿಷಜಾ ಜನ್ಮರೋಗಿಣಾಮ್ ।**
**ಯದ್ಯತ್ಪ್ರಸಾದಿತಂ ಭುಕ್ತ್ವಾ ತತ್ತಜ್ಜನ್ಮರಸಾಯನಮ್ ॥**

**ಆರೋಗ್ಯಕಾರಣಂ ಪುಂಸಾಮಂತಃಕರಣಶುದ್ಧಿದಮ್ ।**
**ತಾಪತ್ರಯಮಹಾರೋಗಸಮುದ್ಧರಣಭೇಷಜಮ್ ॥**

ವಿದ್ಯಾವೈಶದ್ಯಕರಣಂ ವಿನಿಪಾತವಿಘಾತನಮ್ ।
ದ್ವಾರಂ ಜ್ಞಾನಾವತಾರಸ್ಯ ಮೋಹಚ್ಛೇದಸ್ಯ ಕಾರಣಮ್ ॥

ವೈರಾಗ್ಯಸಂಪದೋ ಮೂಲಂ ಮಹಾನಂದಪ್ರವರ್ಧನಮ್ ।
ದುರ್ಲಭಂ ಪಾಪಚಿತ್ತಾನಾಂ ಸುಲಭಂ ಶುದ್ಧಕರ್ಮಣಾಮ್ ॥

ಆದೃತಂ ಬ್ರಹ್ಮವಿಷ್ಣ್ವಾದ್ಯೈರ್ವಸಿಷ್ಠಾದ್ಯೈಶ್ಚ ತಾಪಸೈಃ ।
ಶಿವಸ್ವೀಕೃತಮನ್ನಾದ್ಯಂ ಸ್ವೀಕಾರ್ಯಂ ಸಿದ್ಧಿಕಾಂಕ್ಷಿಭಿಃ ॥

**ಟೀಕು॥** ಜನ್ಮರೋಗಿಣಾಂ=ಭವರೋಗವುಳ್ಳ ಅವರಿಗೆ, ಭಿಷಜಾ=ವೈದ್ಯನಾಗಿ,ನಿತ್ಯಸಿದ್ಧೇನ= ಸಂಸಾರವ್ಯಾಧಿಗೆ ರಸಾಯನವಾಗಿದ್ದ ಅದು, ತತ್=ಆ ಶಿವಲಿಂಗಪ್ರಸಾದವೆ ಶಿವಲಿಂಗದಲ್ಲಿ ನಿತ್ಯಸಿದ್ಧನಾದ, ದೇವೇನ=ಪರಮೇಶ್ವರನಿಂದೆ, ಯತ್ ಯತ್=ಆವಾವ ದ್ರವ್ಯವು, ಭುಕ್ತ್ವಾ=ಭೋಗಿಸಿ, ಪ್ರಸಾದಿತಂ=ಪ್ರಸಾದವ ಮಾಡಲುಪಟ್ಟಿತ್ತು. ತತ್ ತತ್=ಆ ಸಮಸ್ತದ್ರವ್ಯವು, ಜನ್ಮರಸಾಯನಂ= ಸಂಸಾರವ್ಯಾಧಿಗೆ ರಸಾಯನವಾಗಿದ್ದ ಅದು. ತತ್=ಆ ಶಿವಲಿಂಗ ಪ್ರಸಾದವೆ, ಪುಂಸಾಂ=ಪುರುಷರಿಗೆ, ಆರೋಗ್ಯಕಾರಣಂ=ಆರೋಗ್ಯಕ್ಕೆ ಕಾರಣವಾಗಿ, ಅಂತಃಕರಣ ಶುದ್ಧಿದಂ= ಅಂತಃಕರಣಂಗಳಿಗೆ ನಿರ್ಮಲತ್ವವನು ಕೊಡುತ್ತಿರ್ದ್ದ, ತಾಪತ್ರಯ ಮಹಾರೋಗ=ತಾಪತ್ರಯವೆಂಬ ಮಹಾವ್ಯಾಧಿಯ, ಸಮುದ್ಧರಣ ಭೇಷಜಂ=ಬೇರುಸಹಿತ ಕೀಳುವುದಕ್ಕೆ ಓಷಧವಾಗಿದ್ದ, ವಿದ್ಯಾವೈಶದ್ಯಕರಣಂ=ವಿದ್ಯಂಗಳ ವಿಶೇಷ ಸಿದ್ಧಿಗಳಿಗೆ ಕಾರಣವಾಗಿರ್ದ್ದ, ವಿನಿಪಾತವಿಘಾತನಂ=ವಿಘ್ನಂಗಳನು ತೊಲಗಿಸುತ್ತಿರ್ದ್ದ, ಜ್ಞಾನಾವತಾರಸ್ಯ=ಶಿವಜ್ಞಾನಾವತಾರಕ್ಕೆ, ದ್ವಾರಂ=ಬಾಗಿಲಾಗಿರ್ದ್ದ, ಮೋಹಚ್ಛೇದಸ್ಯ ಕಾರಣಂ= ಅಜ್ಞಾನವನು ಛೇದಿಸುವದಕ್ಕೆ ಕಾರಣವಾಗಿರ್ದ್ದ, ವೈರಾಗ್ಯಸಂಪದಃ=ವೈರಾಗ್ಯಸಂಪತ್ತಿಗೆ, ಮೂಲಂ= ಮೂಲಕಾರಣವಾಗಿರ್ದ್ದ, ಮಹಾನಂದಪ್ರವರ್ಧನಂ= ದೊಡ್ಡಿತ್ತಾದ ಶಿವಸುಖವನೆ ಹೆಚ್ಚಿಸುತ್ತಿರ್ದ್ದ, ಪಾಪಚಿತ್ತಾನಾಂ=ಪಾಪಿಷ್ಠರಿಗೆ, ದುರ್ಲಭಂ=ಪಡೆಯಲು ಶಕ್ಯವಲ್ಲದೆಯಿರ್ದ್ದ, ಶುದ್ಧಕರ್ಮಣಾಂ= ಪುಣ್ಯಾತ್ಮರಿಗೆ, ಸುಲಭಂ=ಸುಖದಿಂದೆ ಪಡೆಯಲು ಶಕ್ಯವಾಗಿರ್ದ್ದ, ಬ್ರಹ್ಮವಿಷ್ಣ್ವಾದ್ಯೈಃ=ಬ್ರಹ್ಮವಿಷ್ಣು ಮೊದಲಾಗುಳ್ಳ ದೇವತೆಗಳಿಂದೆ, ವಸಿಷ್ಠಾದ್ಯೈಃ=ವಸಿಷ್ಠ ಮೊದಲಾಗುಳ್ಳ, ತಾಪಸೈಶ್ಚ=ತಪಸ್ವಿಗಳಿಂದೆಯು, ಆದೃತಂ=ಪ್ರೀತಿಮಾಡಲುಪಟ್ಟ, ಶಿವಸ್ವೀಕೃತಂ=ಶಿವಲಿಂಗದಿಂದೆ ಸ್ವೀಕರಿಸಲುಪಟ್ಟ, ಅನ್ನಾದ್ಯಂ=ಅನ್ನ ಮೊದಲಾದ ಪ್ರಸಾದದ್ರವ್ಯವು, ಸಿದ್ಧಿಕಾಂಕ್ಷಿಭಿಃ= ಇಹಪರದಲ್ಲಿಯ ಭೋಗಮೋಕ್ಷಸಿದ್ಧಿಯನು ಬಯಸುತ್ತಿರ್ದ್ದ ಪ್ರಸಾದಿಗಳಿಂದೆ, ಸ್ವೀಕಾರ್ಯಂ=ಸ್ವೀಕರಿಸಲು ಯೋಗ್ಯವು. ॥೧೭॥

**ಸೂತ್ರ॥** ಬಳಿಕ ಪ್ರಸಾದ ಸ್ವೀಕಾರದಿಂದೆ ಸರ್ವಪಾಪಕ್ಷಯವಹುದೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** ಪತ್ರಂ ಪುಷ್ಪಂ ಫಲಂ ತೋಯಂ ಯಚ್ಛಿವಾಯ ನಿವೇದಿತಮ್ ।
ತತ್ತತ್ಸ್ವೀಕಾರಯೋಗೇನ ಸರ್ವಪಾಪಕ್ಷಯೋ ಭವೇತ್ ॥

**ಟೀಕು||** ಪತ್ರಂ=ಬಿಲ್ವಾದಿ ಪತ್ರೆಯು, ಪುಷ್ಪಂ=ಕುಮುದಾದಿ ಕುಸುಮವು, ಫಲಂ=ನಾಳಿಕೇರಾದಿ ಫಲವು, ತೋಯಂ=ಉದಕವು, ಯತ್=ಉಳಿದ ಆವ ವಸ್ತುವು, ಶಿವಾಯ=ಶಿವಲಿಂಗಕ್ಕೋಸುಗ, ನಿವೇದಿತಂ=ಸಮರ್ಪಿಸಲುಪಟ್ಟಿತ್ತು, ತತ್ತತ್‌ಸ್ವೀಕಾರಯೋಗೇನ=ಆಯಾ ಪ್ರಸಾದವಸ್ತುಗಳ ಸ್ವೀಕಾರಸಂಬಂಧದಿಂದೆ, ಸರ್ವಪಾಪಕ್ಷಯಃ=ಸಮಸ್ತಪಾಪಕ್ಷಯವು, ಭವೇತ್=ಅಹುದು. ||೧೭||

**ಸೂತ್ರ||** ಬಳಿಕ ಶಿವಲಿಂಗಪ್ರಸಾದದೋಪಾದಿಯಲ್ಲಿಯೆ ಶ್ರೀ ಗುರುವಿನ ಶಿವಯೋಗೀಶ್ವರನ ಪ್ರಸಾದವು ಸ್ವೀಕರಿಸಲು ಯೋಗ್ಯವೆಂದು ಹೇಳಿ ಪ್ರಸಾದಿಸ್ಥಲವನು ಮುಗಿಯುಸುತ್ತಿರ್ದಪಂ.

**ಗ್ರಂಥ||** **ಯಥಾ ಶಿವಪ್ರಸಾದಾನ್ನಂ ಸ್ವೀಕಾರ್ಯಂ ಲಿಂಗತತ್ಪರೈಃ ।**
**ತಥಾ ಗುರೋಃ ಪ್ರಸಾದಾನ್ನಂ ತಥೈವ ಶಿವಯೋಗಿನಾಮ್ ॥**

**ಟೀಕು||** ಲಿಂಗತತ್ಪರೈಃ=ಶಿವಲಿಂಗದಲ್ಲಿ ತತ್ಪರರಾದ ಪ್ರಸಾದಿಗಳಿಂದೆ, ಶಿವಪ್ರಸಾದಾನ್ನಂ= ಶಿವಲಿಂಗಪ್ರಸಾದವಾದ ಅನ್ನವು, ಯಥಾ=ಹೇಗೆ, ಸ್ವೀಕಾರ್ಯಂ=ಸ್ವೀಕರಿಸಲು ಯೋಗ್ಯವು, [ತಥಾ= ಹಾಗೆ, ಗುರೋಃ=ಶ್ರೀ ಗುರುವಿನ,] ಪ್ರಸಾದಾನ್ನಂ=ಪ್ರಸಾದಾನ್ನವು, ಶಿವಯೋಗಿನಾಂ=ಶಿವಯೋಗಿಗಳ ತಥೈವ=ಹಾಗೆ ಪ್ರಸಾದಾನ್ನವು ಸ್ವೀಕರಿಸಲು ಯೋಗ್ಯವು. ||೧೮||

**ಇತಿ ಪ್ರಸಾದಿಸ್ಥಲಮ್**

## ೨೬. ಪ್ರಸಾದಿಸ್ಥಲೇ ಗುರುಮಾಹಾತ್ಮ್ಯಸ್ಥಲಮ್

**ಸೂತ್ರ||** ಬಳಿಕ ಪ್ರಸಾದನಿಷ್ಠನಿಂದರಿಯಲು ಯೋಗ್ಯವಾದ ಗುರುಮಹತ್ವವನು ಸೂತ್ರ ತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಗುರುರೇವಾತ್ರ ಸರ್ವೇಷಾಂ ಕಾರಣಂ ಸಿದ್ಧಿಕರ್ಮಣಾಮ್ ।**
**ಗುರುರೂಪೋ ಮಹಾದೇವೋ ಯತಸ್ಸಾಕ್ಷಾದುಪಸ್ಥಿತಃ ॥**

**ಟೀಕು||** ಅತ್ರ=ಇಲ್ಲಿ, ಸರ್ವೇಷಾಂ ಸಿದ್ಧಿಕರ್ಮಣಾಂ=ಭೋಗಮೋಕ್ಷರೂಪವಾದ ಸಮಸ್ತಸಿದ್ಧಿ ಕರ್ಮಗಳಿಗೆ, ಗುರುರೇವ='ನ ಗುರೋರಧಿಕಂ ನ ಗುರೋರಧಿಕಮ್' ಯೆಂದು ಶಿವರಹಸ್ಯ ಪ್ರಸಿದ್ಧವಾದ ಶ್ರೀ ಗುರುವೆ, ಕಾರಣಂ=ಕಾರಣವು. ಯತಃ=ಆವುದಾನೊಂದು ಕಾರಣವಾಗಿ ಮಹಾದೇವಃ=ಪರಮೇಶ್ವರನು, ಸಾಕ್ಷಾತ್=ಪ್ರತ್ಯಕ್ಷವಾದ, ಗುರುರೂಪಃ=ಶ್ರೀ ಗುರುರೂಪವುಳ್ಳಾತ ನಾಗಿ, ಉಪಸ್ಥಿತಃ=ಇರುತ್ತಿರ್ದಪನು. ||೨೦||

ಗ್ರಂಥ॥ **ನಿಷ್ಕಲೋ ಹಿ ಮಹಾದೇವೋ ನಿತ್ಯಜ್ಞಾನಮಹೋದಧಿಃ ।**
**ಸಕಲೋ ಗುರುರೂಪೇಣ ಸರ್ವಾನುಗ್ರಾಹಕೋ ಭವೇತ್ ॥**

**ಟೀಕು॥** ನಿತ್ಯಜ್ಞಾನಮಹೋದಧಿಃ=ನಿತ್ಯವಾದ ಜ್ಞಾನಕ್ಕೆ ಮಹಾಸಮುದ್ರನಾಗಿ, ನಿಷ್ಕಲಃ= ನಿಷ್ಕಲನಾದ, ಮಹಾದೇವಃ=ಪರಮೇಶ್ವರನು, ಗುರುರೂಪೇಣ=ಗುರುರೂಪಿನಿಂದೆ, ಸಕಲಃ=ಸಕಲನಾಗಿ, ಸರ್ವಾನುಗ್ರಾಹಕಃ=ಸಮಸ್ತವರ್ಣಾಶ್ರಮಿಗಳಿಗೆ ಅನುಗ್ರಹವ ಮಾಡುತ್ತಿರ್ದ್ದಾತನು, ಭವೇತ್= ಅಹನು. ಹಿ=ಪ್ರಸಿದ್ಧವು. ॥೨೧॥

ಗ್ರಂಥ॥ **ಯಶ್ಶಿವಸ್ಸ ಗುರುರ್ಜ್ಞೇಯೋ ಯೋ ಗುರುಸ್ಸಶಿವಃ ಸ್ಮೃತಃ ।**
**ನ ತಯೋರಂತರಂ ಕುರ್ಯಾದ್ ಜ್ಞಾನಾವಾಪ್ತೌ ಮಹಾಮತಿಃ ॥**

**ಟೀಕು॥** ಯಃ ಶಿವಃ=ಆವನಾನೊರ್ವ ಶಿವನುಂಟು, ಸಃ=ಆ ಶಿವನು, ಗುರುಃ=ಶ್ರೀಗುರುವೆಂದು ಜ್ಞೇಯಃ=ಅರಿಯಲು ಯೋಗ್ಯವು. ಯೋ ಗುರುಃ=ಆವನಾನೊಬ್ಬ ಶ್ರೀಗುರುವುಂಟು, ಸಃ ಶಿವಃ=ಆತನೆ ಶಿವನೆಂದು, ಸ್ಮೃತಃ=ನೆನೆಯಲುಪಟ್ಟಿತ್ತು. ತಯೋಃ=ಆ ಶಿವ ಗುರುಗಳಿಗೆ, ಅಂತರಂ=ಭೇದವನು, ಮಹಾಮತಿಃ=ಮಹಾಬುದ್ಧಿಯುಳ್ಳ ಪ್ರಸಾದಿಯು, ಜ್ಞಾನಾವಾಪ್ತೌ=ಶಿವಜ್ಞಾನವನು ಪಡೆಯಲೋಸುಗ ವಾಗಿ, ನ ಕುರ್ಯಾತ್=ಮಾಡಲಾಗದು. ॥೨೨॥

**ಸೂತ್ರ॥** ಬಳಿಕ "ಯಥಾಽಹಂ ಸರ್ವಲೋಕಾನಾಂ ಗುರುರಂಬಿಕಯಾ ಸಹ"ಯೆಂಬ ಶಿವ ವಾಕ್ಯದಿಂದೆ, ಶಿವಸದೃಶವಾದ ಶ್ರೀಗುರುವನು ಉಳಿದವರಿಗೆ ಸಮಾನವಾಗಿ ನುಡಿಯದೆ ಪೂಜಿಸುವುದೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಹಸ್ತಪಾದಾದಿಸಾಮ್ಯೇನ ನೇತರೈಸ್ಸದೃಶಂ ವದೇತ್ ।**
**ಆಚಾರ್ಯಂ ಜ್ಞಾನದಂ ಶುದ್ಧಂ ಶಿವರೂಪತಯಾ ಸ್ಥಿತಮ್ ॥**

**ಟೀಕು॥** ಶುದ್ಧಂ=ನಿರ್ಮಲಾತ್ಮಕನಾಗಿ, ಜ್ಞಾನದಂ=ಶಿವಜ್ಞಾನವನು ಕೊಡುತ್ತಿರ್ದ್ದ, ಶಿವರೂಪತಯಾ ಸ್ಥಿತಂ=ಉಮಾಮಹೇಶ್ವರ ಸ್ವರೂಪಿನಿಂದೆ ಇರುತ್ತಿರ್ದ್ದ, ಆಚಾರ್ಯಂ=ಶ್ರೀಗುರುವನು, ಹಸ್ತಪಾದಾದಿ ಸಾಮ್ಯೇನ=ಹಸ್ತಪಾದ ಮೊದಲಾದ ಅವಯವಂಗಳ ಸಮಾನತೆಯಿಂದೆ, ಇತರೈಃ=ಪ್ರಾಕೃತರೊಡನೆ, ಸದೃಶಂ=ಸಮಾನವಾಗಿದ್ದಾತನಾಗಿ, ನ ವದೇತ್=ನುಡಿಯಲಾಗದು. ॥೨೩॥

ಗ್ರಂಥ॥ **ಆಚಾರ್ಯಸ್ಯಾವಮಾನೇನ ಶ್ರೇಯಃ ಪ್ರಾಪ್ತಿರ್ವಿಹನ್ಯತೇ ।**
**ತಸ್ಮಾನ್ನಿಃಶ್ರೇಯಸಪ್ರಾಪ್ತ್ಯೈ ಪೂಜಯೇತ್ತಂ ಸಮಾಹಿತಃ ॥**

**ಟೀಕು||** ಆಚಾರ್ಯಸ್ಯ=ಆಚಾರ್ಯನ, ಅವಮಾನೇನ=ಉದಾಸೀನದಿಂದೆ, ಶ್ರೇಯಃ ಪ್ರಾಪ್ತಿಃ=ಮುಕ್ತಿಯನೆಯ್ದುವುದು, ವಿಹನ್ಯತೇ=ಕೆಡಿಸಲುಪಡುತ್ತಿರ್ದ್ದಪುದು. ತಸ್ಮಾತ್=ಅದು ಕಾರಣವಾಗಿ, ನಿಃಶ್ರೇಯಸಃ ಪ್ರಾಪ್ತ್ಯೈ= ಮೋಕ್ಷವನೆಯ್ದಲೋಸುಗವಾಗಿ, ತಂ=ಆ ಆಚಾರ್ಯನನು, ಸಮಾಹಿತಃ= ಏಕಾಗ್ರಚಿತ್ತವುಳ್ಳಾತನಾಗಿ, ಪೂಜಯೇತ್=ಪೂಜಿಸುವುದು. ||೨೩||

**ಸೂತ್ರ||** ಬಳಿಕ "ಯಸ್ಯ ದೇವೇ ಪರಾ ಭಕ್ತಿಃ ಯಥಾ ದೇವೇ ತಥಾ ಗುರೌ" ಯೆಂಬ ಶ್ವೇತಾಶ್ವತರಶ್ರುತ್ಯರ್ಥವನು ಪ್ರಕಟಿಸಿ ಗುರುಮಹತ್ವಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಗುರುಭಕ್ತಿವಿಹೀನಸ್ಯ ಶಿವಭಕ್ತಿರ್ನ ಜಾಯತೇ ।**
**ತತಃ ಶಿವೇ ಯಥಾ ಭಕ್ತಿಸ್ತಥಾ ಭಕ್ತಿರ್ಗುರಾವಪಿ ॥**

**ಟೀಕು||** ಗುರುಭಕ್ತಿವಿಹೀನಸ್ಯ=ಗುರುಭಕ್ತಿ ವಿರಹಿತನಾದಾತನಿಗೆ, ಶಿವಭಕ್ತಿಃ=ಶಿವಲಿಂಗದಲ್ಲಿಯ ಭಕ್ತಿಯು, ನ ಜಾಯತೇ=ಹುಟ್ಟುತ್ತಿರದು ತತಃ=ಅದು ಕಾರಣವಾಗಿ, ಶಿವೇ=ಶಿವನಲ್ಲಿಯ, ಭಕ್ತಿಃ=ಭಕ್ತಿಯು, ಯಥಾ=ಹೇಗೆಯು, ತಥಾ=ಹಾಗೆ, ಗುರಾವಪಿ=ಗುರುವಿನಲ್ಲಿಯಾಯಿತ್ತಾದೊಡೆಯು, ಭಕ್ತಿಃ=ಭಕ್ತಿಯು. ||೨೪||

**ಇತಿ ಗುರುಮಾಹಾತ್ಮ್ಯಸ್ಥಲಮ್**

## ೨೭. ಪ್ರಸಾದಿಸ್ಥಲೇ ಲಿಂಗಮಾಹಾತ್ಮ್ಯಸ್ಥಲಮ್

**ಸೂತ್ರ||** ಬಳಿಕ ಗುರುಕೃಪೆಯಿಂದರಿಯಲು ಯೋಗ್ಯವಾದ ಶಿವಲಿಂಗಮಹತ್ವವನು ದಶಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಗುರುಮಾಹಾತ್ಮ್ಯಯೋಗೇನ ನಿಜಜ್ಞಾನಾತಿರೇಕತಃ ।**
**ಲಿಂಗಸ್ಯಾಪಿ ಚ ಮಾಹಾತ್ಮ್ಯಂ ಸರ್ವೋತ್ಕೃಷ್ಟಂ ವಿಭಾವ್ಯತೇ ॥**

**ಟೀಕು||** ಗುರುಮಾಹಾತ್ಮ್ಯಯೋಗೇನ=ಗುರುಮಹತ್ವದ ಸಂಬಂಧದಿಂದೆ, ನಿಜಜ್ಞಾನಾತಿರೇಕತಃ= ನಿಜಜ್ಞಾನಾಧಿಕ್ಯದದೆಸೆಯಿಂದೆಯು, ಲಿಂಗಸ್ಯ=ಶಿವಲಿಂಗದ, ಮಾಹಾತ್ಮ್ಯಮಪಿ ಚ=ಮಹತ್ವ ವಾಯಿತ್ತಾದೊಡೆಯು, ಸರ್ವೋತ್ಕೃಷ್ಟಂ=ಸರ್ವೋತ್ಕೃಷ್ಟವಾಗಿದ್ದುದಾಗಿ, ವಿಭಾವ್ಯತೇ=ಭಾವಿಸಲು ಪಡುತ್ತಿರ್ದ್ದ ಅದು. ||೨೬||

ಗ್ರಂಥ॥ ಶಿವಸ್ಯ ಬೋಧಲಿಂಗಂ ಯದ್ಗುರುಬೋಧಿತಚೇತಸಾ ।
ತದೇವ ಲಿಂಗಂ ವಿಜ್ಞೇಯಂ ಶಾಂಕರಂ ಸರ್ವಕಾರಣಮ್ ॥

ಟೀಕು॥ ಶಿವಸ್ಯ=ಶಿವನ, ಯತ್ ಬೋಧಲಿಂಗಂ=ಆವುದಾನೊಂದು ಚಿನ್ಮಯವಾದ ಲಿಂಗವುಂಟು, ತತ್ ಶಾಂಕರಂ ಲಿಂಗಮೇವ=ಆ ಶಿವಸಂಬಂಧವಾದ ಲಿಂಗವೆ, ಸರ್ವಕಾರಣಂ=ಸಮಸ್ತಕ್ಕೆ ಕಾರಣವಾಗಿದ್ದುದಾಗಿ, ಗುರುಬೋಧಿತ ಚೇತಸಾ=ಗುರುವಿನಿಂದೆ ಬೋಧಿಸಲುಪಟ್ಟ ಚಿತ್ತವುಳ್ಳಾತನಿಂದೆ, ವಿಜ್ಞೇಯಂ=ಅರಿಯಲು ಯೋಗ್ಯವು. ॥೨೭॥

ಸೂತ್ರ॥ ಬಳಿಕ ಪರಶಿವ ಪರಬ್ರಹ್ಮವೆಂಬ ಪರ್ಯಾಯನಾಮವುಳ್ಳ ಮಹಾಲಿಂಗಮಹತ್ವವು ಗುರೂಪದೇಶವಿಲ್ಲದೆ ಅರಿಯಬಾರದೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ ಪರಂ ಪವಿತ್ರಮಮಲಂ ಲಿಂಗಂ ಬ್ರಹ್ಮ ಸನಾತನಮ್ ।
ಶಿವಾಭಿಧಾನಂ ಚಿನ್ಮಾತ್ರಂ ಸದಾನಂದಂ ನಿರಂಕುಶಮ್ ॥

ಕಾರಣಂ ಸರ್ವಲೋಕಾನಾಂ ವೇದಾನಾಮಪಿ ಕಾರಣಮ್ ।
ಪೂರಣಂ ಸರ್ವತತ್ತ್ವಾನಾಂ ತಾರಣಂ ಜನ್ಮವಾರಿಧೇಃ ॥

ಜ್ಯೋತಿರ್ಮಯಮನಿರ್ದೇಶ್ಯಂ ಯೋಗಿನಾಮಾತ್ಮನಿ ಸ್ಥಿತಮ್ ।
ಕಥಂ ವಿಜ್ಞಾಯತೇ ಲೋಕೇ ಮಹಾಗುರುದಯಾಂ ವಿನಾ ॥

ಟೀಕು॥ ಪವಿತ್ರಂ=ಪರಮಪವಿತ್ರವಾಗಿ, ಅಮಲಂ=ನಿರ್ಮಲವಾಗಿ, ಸನಾತನಂ=ನಿತ್ಯವಾಗಿ, ಚಿನ್ಮಾತ್ರಂ=ಚಿದ್ರೂಪವಾಗಿ, ಸದಾನಂದಂ=ಸದಾನಂದರೂಪವಾಗಿ, ನಿರಂಕುಶಂ=ತಡೆಹಿಲ್ಲದ, ಪರಂಬ್ರಹ್ಮ="ತತ್ಪರಂ ಬ್ರಹ್ಮ ಸ ಏಕಃ ಸ ಏಕೋ ರುದ್ರಃ" ಯೆಂಬ ಶ್ರುತಿಯಿಂದೆ ಪರಬ್ರಹ್ಮವೆಂಬ ಸಂಜ್ಞೆಯುಳ್ಳ, ಸರ್ವಲೋಕಾನಾಂ=ಸಮಸ್ತಭುವನಂಗಳಿಗೆ, ಕಾರಣಂ=ಕಾರಣವಾಗಿರ್ದ, ವೇದಾನಾಮಪಿ=ವೇದಂಗಳಿಗಾಯಿತ್ತಾದೊಡೆಯು, ಕಾರಣಂ=ಕಾರಣವಾಗಿದ್ದ, ಸರ್ವತತ್ತ್ವಾನಾಂ= ಸಮಸ್ತ ತತ್ತ್ವಗಳ, ಪೂರಣಂ=ಒಬ್ಬುಳಿಕೆಯಾಗಿದ್ದ, ಜನ್ಮವಾರಿಧೇಃ=ಸಂಸಾರಸಮುದ್ರದೆಸೆಯಿಂದೆ, ತಾರಣಂ= ದಾಂಟಿಸುತ್ತಿರ್ದ, ಪರಂ ಶಿವಾಭಿಧಾನಂ="ಶಿವ ಏಕೋ ಧ್ಯೇಯಃ ಶಿವಂಕರಃ"ಯೆಂಬ ಶ್ರುತಿಯಿಂದೆ ಪರಮಶಿವನೆಂಬ ಹೆಸರುಳ್ಳ, ಯೋಗಿನಾಂ=ಶಿವಯೋಗೀಶ್ವರರಿಂದೆ, ಅನಿರ್ದೇಶ್ಯಂ=ನಿರ್ದೇಶಿಸಲು ಯೋಗ್ಯವಲ್ಲದೆ, ಆತ್ಮಸ್ಥಿತಂ=ನಿಜದಲ್ಲಿಯಿರುತ್ತಿರ್ದ, ಜ್ಯೋತಿರ್ಮಯಂ="ಪರಂ ಲಿಂಗಂ ಸ್ಥಾಣು-ವಜ್ಜ್ವಲತಿ ಲಿಂಗಮದೃಶ್ಯಮ್" ಯೆಂದು ಯಾಜ್ಞ್ಯವಲ್ಕ್ಯೋಪನಿಷತ್ಪ್ರಸಿದ್ಧವಾದ ಮಹಾಲಿಂಗವು, ಲೋಕೇ=ಲೋಕದಲ್ಲಿ, ಮಹಾಗುರುದಯಾಂ ವಿನಾ=ಮಹಾಗುರುವಿನ ಕೃಪೆ ಹೊರತಾಗಿ, ಕಥಂ=ಆವ ಪ್ರಕಾರದಿಂದೆ, ಜ್ಞಾಯತೇ=ಅರಿಯಲುಪಡುತ್ತಿರ್ದಪುದು? ಆವ ಪ್ರಕಾರದಿಂದವು ಅರಿಯಬಾರ ದೆಂಬುದರ್ಥ.

**ತಾತ್ಪರ್ಯ॥** "ತದೇ ಜ್ಞಾನಂ ಸದ್ಗುರೋರ್ಜ್ಞೇಯಂ ನಾನ್ಯಥಾ ಶಾಸ್ತ್ರಕೋಟಿಭಿಃ"ಯೆಂಬ ಶಿವರಹಸ್ಯವುಂಟಾಗಿ ಶಿವಲಿಂಗ ಮಹತ್ವವು ಶ್ರೀಗುರುವಿನದೆಸೆಯಿಂದವೆ ಅರಿಯಲು ಯೋಗ್ಯವೆಂಬುದರ್ಥ. ॥೩೦॥

**ಸೂತ್ರ॥** ಬಳಿಕ "ವರಾಹೋ ವಿಷ್ಣುರ್ನಿಮಮಜ್ಜ ಭೂಮೌ।
ಬ್ರಹ್ಮೋತ್ಪಪಾತ ದಿವಮಾಶು ಗೃಧ್ರಃ"॥ ಯೆಂಬ ಲಿಂಗಸೂತ್ರಾರ್ಥವನು ಪ್ರಕಾಶಿಸುತ್ತ ಮೊದಲರ್ಥವನೆ ವಿಶೇಷಿಸುತ್ತಿರ್ದಪಂ.

**ಗ್ರಂಥ॥** **ಬ್ರಹ್ಮಣಾ ವಿಷ್ಣುನಾ ಪೂರ್ವಂ ಯಲ್ಲಿಂಗಂ ಜ್ಯೋತಿರಾತ್ಮಕಮ್ ।**
**ಅಪರಿಚ್ಛೇದ್ಯಮಭವತ್ಕೇನ ವಾ ಪರಿಬೋಧ್ಯತೇ ॥**

**ಟೀಕು॥** ಜ್ಯೋತಿರಾತ್ಮಕಂ=ಜ್ಯೋತಿರ್ಮಯವಾಗಿರ್ದ್ದ, ಯಲ್ಲಿಂಗಂ=ಆವುದಾನೊಂದುಲಿಂಗವು, ಬ್ರಹ್ಮಣಾ=ಬ್ರಹ್ಮನಿಂದೆ, ವಿಷ್ಣುನಾ=ವಿಷ್ಣುವಿನಿಂದೆಯು, ಪೂರ್ವಂ=ಮೊದಲು, ಅಪರಿಚ್ಛೇದ್ಯಂ=ಹವಣಿಸಲು ಯೋಗ್ಯವಲ್ಲದೆಯಿರ್ದ್ದ ಅದು, ಅಭವತ್=ಆಯಿತ್ತು. ತತ್=ಆ ಮಹಾಲಿಂಗವು, ಕೇನ ವಾ=ಆವಾತನಿಂದೆ, ಪರಿಬೋಧ್ಯತೇ=ಅರಿಯಲುಪಡುತ್ತಿರ್ದ್ದಪುದು? ಆರಿಂದಲೂ ಅರಿಯಲಾಗದೆಂಬುದರ್ಥ. ॥೩೧॥

**ಸೂತ್ರ॥** ಬಳಿಕ "ವಿಶ್ವಾದಿಷೋ ರುದ್ರೋ ಮಹರ್ಷಿಃ ಹಿರಣ್ಯಗರ್ಭಂ ಜನಯಾಮಾಸ
ಪೂರ್ವಮ್। ಸ ನೋ ಬುಧ್ಯಾ ಶುಭಯಾ ಸಂಯುನಕ್ತು"॥ ಯೆಂಬ ಶ್ವೇತಾಶ್ವತರ ಶ್ರುತ್ಯರ್ಥವನು ಪ್ರಕಾಶಿಸಿ ಹೇಳುತ್ತಿರ್ದ್ದಪಂ.

**ಗ್ರಂಥ॥** **ವಿಶ್ವಾಧಿಪತ್ಯಮೀಶಸ್ಯ ಲಿಂಗಮೂರ್ತೇಃ ಸ್ವಭಾವಜಮ್ ।**
**ಅನನ್ಯದೇವಸಾದೃಶ್ಯಂ ಶ್ರುತಿರಾಹ ಸನಾತನೀ ॥**

**ಟೀಕು॥** ಲಿಂಗಮೂರ್ತೇಃ=ಶಿವಲಿಂಗಮೂರ್ತಿಯಾದ, ಈಶಸ್ಯ=ಪರಮೇಶ್ವರನಿಗೆ, ಸ್ವಭಾವಜಂ=ಸ್ವಭಾವದಿಂದೆ ಹುಟ್ಟಿದ, ಅನನ್ಯದೇವಸಾದೃಶ್ಯಂ=ಬ್ರಹ್ಮವಿಷ್ಣುಮೊದಲಾದ ಅನ್ಯ ದೇವತೆಗಳಿಗೆ ಸಮಾನವಲ್ಲದೆಯಿದ್ದ, ವಿಶ್ವಾಧಿಪತ್ಯಂ=ವಿಶ್ವಕ್ಕೆವೊಡೆಯನಹತನವನು, ಸನಾತನೀ=ಕೇಡಿಲ್ಲದೆಯಿದ್ದ, ಶ್ರುತಿಃ=ವೇದವು, ಆಹ=ಹೇಳುತ್ತಿರ್ದ್ದಪುದು. ॥೩೨॥

**ಸೂತ್ರ॥** ಬಳಿಕ "ಕ್ರಿಯಾಶಕ್ತ್ಯಾತ್ಮಕಂ ಪೀಠಂ।
ಜ್ಞಾನಶಕ್ತ್ಯಾತ್ಮನಃ ಪ್ರಭೋಃ"॥ ಯೆಂಬ ಶಿವಾಗಮಾರ್ಥವನು ಪ್ರಕಟಿಸಿ ಮಹಾಲಿಂಗವು ಶಿವಶಕ್ತ್ಯಾತ್ಮಕವೆಂದು ಹೇಳುತ್ತಿರ್ದ್ದಪಂ.

ಗ್ರಂಥ॥ **ಪೀಠಿಕಾ ಪರಮಾ ಶಕ್ತಿರ್ಲಿಂಗಂ ಸಾಕ್ಷಾತ್ಪರಶ್ಶಿವಃ ।**
**ಶಿವಶಕ್ತಿಸಮಾಯೋಗಂ ವಿಶ್ವಂ ಲಿಂಗಂ ತದುಚ್ಯತೇ ॥**

**ಟೀಕು॥** ಪರಮಾಶಕ್ತಿಃ=ಉತ್ಕರ್ಷವಾದ ಕ್ರಿಯಾಶಕ್ತಿಯೆ, ಪೀಠಿಕಾ=ಪೀಠಿಕೆಯು. ಸಾಕ್ಷಾತ್=ಪ್ರತ್ಯಕ್ಷವಾದ, ಪರಃ ಶಿವಃ=ಚಿನ್ಮಯವಾದ ಪರಶಿವನೆ, ಲಿಂಗಂ=ಲಿಂಗವು. ಶಿವಶಕ್ತಿಸಮಾಯೋಗಂ=ಶಿವಶಕ್ತಿಗಳ ಸಂಬಂಧವುಳ್ಳ, ತಲ್ಲಿಂಗಂ=ಆ ಲಿಂಗವು, ವಿಶ್ವಂ=ಜಗದ್ರೂಪವೆಂದು, ಉಚ್ಯತೇ=ಹೇಳಲುಪಡುತ್ತಿರ್ದಪುದು.

**ತಾತ್ಪರ್ಯ॥** "ನ ವಜ್ರಚಕ್ರಾಂಕಸರೋರುಹಾಂಕಂ ಲಿಂಗಾಂಕಿತಂ ಪಶ್ಯ ಜಗದ್ಭಗಾಂಕಮ್"।
"ಜ್ಞಾನಕರ್ಮೇಂದ್ರಿಯೈರ್ವಿಶ್ವಂ ಚಿತ್ಕ್ರಿಯಾಲಿಂಗರೂಪಕಮ್"॥ ಯೆಂಬ ಪುರಾಣವಾಕ್ಯವುಂಟಾಗಿ, ಸರ್ವಜಗತ್ತು ಶಿವಶಕ್ತ್ಯಾತ್ಮಕವೆಂಬುದರ್ಥ. ॥೩೩॥

**ಸೂತ್ರ॥** ಬಳಿಕ ಶಿವಯೋಗಿಗಳ ಮುಕ್ತಿಗಾಶ್ರಯವಾದ ಮಹಾಲಿಂಗವೆ ಪರಬ್ರಹ್ಮವೆಂದು ಹೇಳುತ್ತಿರ್ದಪಂ.

ಗ್ರಂಥ॥ **ಬಹುನಾಽತ್ರ ಕಿಮುಕ್ತೇನ ಲಿಂಗಂ ಬ್ರಹ್ಮ ಸನಾತನಮ್ ।**
**ಯೋಗಿನೋ ಯತ್ರ ಲೀಯಂತೇ ಮುಕ್ತಪಾಶನಿಬಂಧನಾಃ ॥**

**ಟೀಕು॥** ಅತ್ರ=ಇಲ್ಲಿ, ಬಹುನೋಕ್ತೇನ ಕಿಂ=ಹಲವು ಮಾತಿನಿಂದೇನು? ಯೋಗಿನಃ=ಸನಕಾದಿ ಶಿವಯೋಗಿಗಳು, ಮುಕ್ತಪಾಶನಿಬಂಧನಾಃ ಸಂತಃ=ಬಿಡಲುಪಟ್ಟ ಪಂಚಪಾಶಗ್ರಂಥಿಗಳುಳ್ಳವರಾಗುತವು, ಯತ್ರ=ಆವೆಡೆಯಲ್ಲಿ, ಲೀಯಂತೇ=ಲಯಿಸುತ್ತಿರ್ದಪರು, ತಲ್ಲಿಂಗಂ=ಆ ಮಹಾಲಿಂಗವೆ, ಸನಾತನಂ=ಕೇಡಿಲ್ಲದೆಯಿದ್ದ, ಬ್ರಹ್ಮ=ಪರಬ್ರಹ್ಮವು. ॥೩೪॥

**ಸೂತ್ರ॥** ಬಳಿಕ "ತವ ಶ್ರಿಯೈ ಮರುತೋಽಮರ್ಜಯಂತ
ರುದ್ರ ಯತ್ತೇ ಜನಿಮ ಚಾರು ಚಿತ್ರಮ್
ಪರಂ ಯದ್ವಿಷ್ಣೋರುಪಮಂ ನಿಧಾಯಿ"॥ ಯೆಂಬ ಋಗ್ವೇದಾರ್ಥವನು ಪ್ರಕಟಿಸಿ ಲಿಂಗಮಹತ್ವಸ್ಥಲವನು ಮುಗಿಯಿಸುತ್ತಿರ್ದಪಂ.

ಗ್ರಂಥ॥ **ಬ್ರಹ್ಮಾದಯಸ್ಸುರಾಸ್ಸರ್ವೇ ಮುನಯಶ್ಶೌನಕಾದಯಃ ।**
**ಶಿವಲಿಂಗಾರ್ಚನಾದೇವ ಸ್ವಂ ಸ್ವಂ ಪದಮವಾಪ್ನುಯುಃ ॥**

**ಟೀಕು॥** ಬ್ರಹ್ಮಾದಯಃ=ಬ್ರಹ್ಮವಿಷ್ಣು ಮೊದಲಾಗುಳ್ಳ, ಸರ್ವೇಸುರಾಃ=ಸಮಸ್ತದೇವತೆಗಳು,

ಶೌನಕಾದಯಃ=ಶೌನಕಮೊದಲಾಗುಳ್ಳ, ಮುನಯಃ=ಮುನಿಗಳು. ಶಿವಲಿಂಗಾರ್ಚನಾದೇವ=ಶಿವಲಿಂಗ ಪೂಜೆಯದೆಸೆಯಿಂದವೆ, ಸ್ವಂ ಸ್ವಂ ಪದಂ=ತಮ್ಮ ತಮ್ಮ ಸಂಪತ್ತಿಯನು, ಅವಾಪ್ನುಯುಃ= ಪಡೆದರು.

**ಇತಿ ಲಿಂಗಮಾಹಾತ್ಮ್ಯಸ್ಥಲಮ್**

## ೨೮. ಪ್ರಸಾದಿಸ್ಥಲೇ ಜಂಗಮಮಾಹಾತ್ಮ್ಯಸ್ಥಲಮ್

**ಸೂತ್ರ||** ಬಳಿಕ ಶ್ರೀಗುರುಶಿವಲಿಂಗ ಮಹತ್ವದಿಂದೆ ಅರಿಯಲು ಯೋಗ್ಯವಾದ ಜಂಗಮ ಮಹತ್ವವನು ಹೇಳುತ್ತಿರ್ದಪಂ

**ಗ್ರಂಥ||** **ಗುರುಶಿಷ್ಯಸಮಾರೂಢಲಿಂಗಮಾಹಾತ್ಮ್ಯಸಂಪದಃ ।**
**ಸರ್ವಂ ಚಿದ್ರೂಪವಿಜ್ಞಾನಾಜ್ಜಂಗಮಾಧಿಕ್ಯಮುಚ್ಯತೇ ॥**

**ಟೀಕು||** ಗುರುಶಿಷ್ಯಸಮಾರೂಢ="ಆಚಾರ್ಯಃ ಪೂರ್ವ ರೂಪಮ್। ಅಂತೇವಾಸ್ಯುತ್ತರ ರೂಪಮ್। ವಿದ್ಯಾ ಸಂಧಿಃ"। ಯೆಂಬ ಶ್ರುತಿಯುಂಟಾಗಿ ಗುರುಶಿಷ್ಯರ ಮಧ್ಯವನು ಏರಿದ್ದ, ಲಿಂಗಮಾಹಾತ್ಮ್ಯ ಸಂಪದಃ=ಶಿವಲಿಂಗಮಹತ್ವದ ಸಂಪತ್ತಿಯದೆಸೆಯಿಂದೆ, ಸರ್ವಂ=ಸಮಸ್ತ ಜಗತ್ತನು, ಚಿದ್ರೂಪ ವಿಜ್ಞಾನಾತ್=ಚಿತ್ಕ್ರಿಯಾರೂಪವನಾಗಿ ಅರಿವುತ್ತಿದ್ದಾತನಾದ ಕಾರಣವಾಗಿ, ಜಂಗಮಾಧಿಕ್ಯಂ= ಜಂಗಮದೇವರ ಮಹತ್ವವು, ಉಚ್ಯತೇ=ಹೇಳಲುಪಡುತ್ತಿರ್ದಪುದು. ||೩೬||

**ಸೂತ್ರ||** ಬಳಿಕ ಜಂಗಮ ಶಬ್ದಾರ್ಥವನು ಹೇಳುತ್ತಿರ್ದಪಂ.

**ಗ್ರಂಥ||** **ಜಾನಂತ್ಯತಿಶಯಾದ್ಯೇ ತು ಶಿವಂ ವಿಶ್ವಪ್ರಕಾಶಕಮ್ ।**
**ಸ್ವಸ್ವರೂಪತಯಾ ತೇ ತು ಜಂಗಮಾ ಇತಿ ಕೀರ್ತಿತಾಃ ॥**

**ಟೀಕು||** ಯೇ ತು=ಆರು ಕೆಲಂಬರು, ವಿಶ್ವಪ್ರಕಾಶಕಂ=ತನ್ನ ಚಿತ್ಕ್ರಿಯೆಗಳಿಂದೆ ವಿಶ್ವವನು ಪ್ರಕಾಶಿಸುತ್ತಿರ್ದ, ಶಿವಂ=ಶಿವನನು, ಸ್ವಸ್ವರೂಪತಯಾ=ತಮ್ಮ ಸ್ವರೂಪವಹತನದಿಂದವೆ, ಅತಿಶಯಾತ್=ಅತಿಶಯವಾಗಿ, ಜಾನಂತಿ=ಅರಿವುತ್ತಿರ್ದಪರು. ತೇ ತು=ಅವರಾಯಿತ್ತಾದೊಡೆ ಜಂಗಮಾ ಇತಿ=ಜಂಗಮರೆಂದು, ಕೀರ್ತಿತಾಃ=ಹೇಳಲುಪಟ್ಟರು. ||೩೭||

**ಸೂತ್ರ||** ಬಳಿಕ ಶಿವಯೋಗೀಶ್ವರರೆಂದು ಪ್ರಸಿದ್ಧರಾದ ಜಂಗಮದೇವರ ಮಹತ್ವವನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಯೇ ಪಶ್ಯಂತಿ ಜಗಜ್ಜಾಲಂ ಚಿದ್ರೂಪಂ ಶಿವರೂಪತಃ ।**
**ನಿರ್ಧೂತಮಲಸಂಸ್ಪರ್ಶಾಸ್ತೇ ಸ್ಮೃತಾಶ್ಶಿವಯೋಗಿನಃ ॥**

**ಟೀಕು||** ಯೇ=ಆರು ಕೆಲಂಬರು ಜಂಗಮದೇವರುಗಳು, ಜಗಜ್ಜಾಲಂ=ಸಮಸ್ತಜಗತ್ತನು, ಶಿವರೂಪತಃ=ಶಿವಶಕ್ತ್ಯಾತ್ಮಕವಾದ ಸ್ವರೂಪಿನದೆಸೆಯಿಂದವೆ, ಚಿದ್ರೂಪಂ=ಚಿತ್ಕ್ರಿಯಾಸ್ವರೂಪ ವುಳ್ಳದನಾಗಿ, ಪಶ್ಯಂತಿ=ಕಾಣುತ್ತಿರ್ದ್ದಪರು; ತೇ=ಅವರುಗಳು, ನಿರ್ಧೂತಮಲಸಂಸ್ಪರ್ಶಾಃ=ಕೊಡಪಲು ಪಟ್ಟ ಮಲಸಂಗವುಳ್ಳ, ಶಿವಯೋಗಿನಃ=ಶಿವಯೋಗೀಶ್ವರರೆಂದು, ಸ್ಮೃತಾಃ=ಸಂಮತರು. ||೩೮||

**ಗ್ರಂಥ||** **ಜಿತಕಾಮಾ ಜಿತಕ್ರೋಧಾ ಮೋಹಗ್ರಂಥಿವಿಭೇದಿನಃ ।**
**ಸಮಲೋಷ್ಠಾಶ್ಮಕನಕಾಸ್ಸಾಧವಃ ಶಿವಯೋಗಿನಃ ॥**

**ಟೀಕು||** ಜಿತಕಾಮಾಃ=ಗೆಲಲುಪಟ್ಟ ಕಾಮನುಳ್ಳ, ಜಿತಕ್ರೋಧಾಃ=ಗೆಲಲುಪಟ್ಟ ಕೋಪವುಳ್ಳ, ಮೋಹಗ್ರಂಥಿವಿಭೇದಿನಃ=ಮೋಹಗ್ರಂಥಿಯನು ಬಿಡುತ್ತಿರ್ದ್ದ, ಸಮಲೋಷ್ಠಾಷ್ಮಕನಕಾಃ=ಸಮಾನವಾಗಿ ಕಾಣುತ್ತಿರ್ದ್ದ ಹೆಂಟೆಕಲ್ಲು ಸುವರ್ಣಂಗಳುಳ್ಳ, ಸಾಧವಃ=ಸತ್ಪುರುಷರು, ಶಿವಯೋಗಿನಃ=ಶಿವ ಯೋಗೀಶ್ವರರು. ||೩೯||

**ಸೂತ್ರ||** ಬಳಿಕ ಶಿವಯೋಗೀಶ್ವರರ ವರ್ತನೆಯನು ಹೇಳುತ್ತಿರ್ದ್ದಪಂ.

**ಗ್ರಂಥ||** **ಸಮಶ್ಶತ್ರೌ ಚ ಮಿತ್ರೇ ಚ ಸಾಕ್ಷಾತ್ಕೃತಶಿವಾತ್ಮಕಾಃ ।**
**ನಿಃಸ್ಪೃಹಾ ನಿರಂಹಕಾರಾಃ ವರ್ತಂತೇ ಶಿವಯೋಗಿನಃ ॥**

**ಟೀಕು||** ಶಿವಯೋಗಿನಃ=ಶಿವಯೋಗೀಶ್ವರರು, ಸಾಕ್ಷಾತ್ಕೃತಶಿವಾತ್ಮಕಾಃಸಂತಃ=ಪ್ರತ್ಯಕ್ಷೀಕರಿಸಲುಪಟ್ಟ ಶಿವಸ್ವರೂಪವುಳ್ಳವರಾಗುತವು, ಶತ್ರೌ=ಹಗೆಯಲ್ಲಿಯು, ಮಿತ್ರೇ ಚ=ಸ್ನೇಹಿತನಲ್ಲಿಯು, ಸಮಾಃ=ಸಮಾನದೃಷ್ಠಿಯುಳ್ಳವರಾಗಿ, ನಿರಹಂಕಾರಾಃ=ಅಹಂಕಾರವಿಲ್ಲದೆಯಿದ್ದ, ನಿಃಸ್ಪೃಹಾಃ= ವಿರಕ್ತರುಗಳಾಗಿ, ವರ್ತಂತೇ=ವರ್ತಿಸುತ್ತಿರ್ದ್ದಪರು. ||೪೦||

**ಸೂತ್ರ||** ಬಳಿಕ ಆ ಅರ್ಥವನೆ ಪ್ರಕಟಿಸುತ್ತಿರ್ದ್ದಪಂ.

**ಗ್ರಂಥ||** **ದುರ್ಲಭಂ ಹಿ ಶಿವಜ್ಞಾನಂ ದುರ್ಲಭಂ ಶಿವಚಿಂತನಮ್ ।**
**ಯೇಷಾಮೇತದ್ದ್ವಯಂ ಚಾಸ್ತಿ ತೇ ಹಿ ಸಾಕ್ಷಾಚ್ಛಿವಾತ್ಮಕಾಃ ॥**

**ಟೀಕು||** ಶಿವಜ್ಞಾನಂ=ಶಿವಜ್ಞಾನವು, ದುರ್ಲಭಂ=ದುರ್ಲಭವಾಗಿರ್ದ್ದ ಅದು, ಶಿವಚಿಂತನಂ ಚ=

ಶಿವಧ್ಯಾನವು, ದುರ್ಲಭಂ=ದುರ್ಲಭವಾಗಿರ್ದ್ದ ಅದು, ಏತತ್‌ದ್ವಯಂ=ಈ ಎರಡು, ಯೇಷಾಂ= ಆರು ಕೆಲಂಬರು ಶಿವಯೋಗೀಶ್ವರಿಗೆ, ಅಸ್ತಿ=ಉಂಟು;ತೇ ಹಿ=ಅವರಾಯಿತ್ತಾದೊಡೆ, ಸಾಕ್ಷಾತ್ ಶಿವಾತ್ಮಕಾಃ=ಪ್ರತ್ಯಕ್ಷವಾದ ಶಿವಸ್ವರೂಪವುಳ್ಳ ಅವರುಗಳು, ಹಿ= ಪ್ರಸಿದ್ಧವು. ||೪೧||

**ಸೂತ್ರ||** ಬಳಿಕ "ನಿರಪೇಕ್ಷಂ ಮುನಿಂ ಶಾಂತಂ ನಿರ್ವೈರಂ ಸಮದರ್ಶಿನಮ್
ಅನುವ್ರಜಾಮ್ಯಹಂ ನಿತ್ಯಂ ಪೂಜಯತ್ಯಂಘ್ರಿರೇಣುಭಿಃ

ಏಷ ಜ್ಞಾನೀ ವಸೇದ್ಯತ್ರ ಸ ದೇಶಃ ಪುಣ್ಯಭಾಜನಃ ।
ದರ್ಶನಾದರ್ಚನಾತ್ತಸ್ಯ ತ್ರಿಸಪ್ತಕುಲಸಂಯುತಾಃ ।
ಜನಾಃ ಮುಕ್ತಿಪದಂ ಯಾಂತಿ ಕಿಂ ಪುನಸ್ತತ್ಪರಾಯಣಃ"|| ಯೆಂಬ ಯೋಗಜಾಗಮಾರ್ಥವನು ಸೂತ್ರತ್ರಯದಿಂದೆ ಪೇಳುತ್ತಿರ್ದ್ದಪಂ.

**ಗ್ರಂಥ||** **ಪಾದಾಗ್ರರೇಣವೋ ಯತ್ರ ಪತಂತಿ ಶಿವಯೋಗಿನಾಮ್ ।**
**ತದೇವ ಸದನಂ ಪುಣ್ಯಂ ಪಾವನಂ ಗೃಹಮೇಧಿನಾಮ್ ||**

**ಟೀಕು||** ಶಿವಯೋಗಿನಾಂ=ಶಿವಯೋಗೀಶ್ವರರ, ಪಾದಾಗ್ರರೇಣವಃ=ಪಾದದ ತುದಿಯ ಧೂಳುಗಳು, ಗೃಹಮೇಧಿನಾಂ=ಗೃಹಸ್ಥರ, ಯತ್ರ=ಆವುದಾನೊಂದು ಗೃಹದಲ್ಲಿ, ಪತಂತಿ=ಬೀಳುತ್ತಿರ್ದ್ದಪವು, ತದೇವ ಸದನಂ=ಆ ಗೃಹವೆ, ಪಾವನಂ=ಪವಿತ್ರವಾದ, ಪುಣ್ಯಂ=ಪುಣ್ಯಕ್ಷೇತ್ರವಾಗಿರ್ದ್ದ ಅದು. ||೪೨||

**ಗ್ರಂಥ||** **ಸರ್ವಸಿದ್ಧಿಕರಂ ಪುಂಸಾಂ ದರ್ಶನಂ ಶಿವಯೋಗಿನಾಮ್ ।**
**ಸ್ಪರ್ಶನಂ ಪಾಪಶಮನಂ ಪೂಜನಂ ಮುಕ್ತಿಸಾಧನಮ್ ||**

**ಟೀಕು||** ಶಿವಯೋಗಿನಾಂ=ಶಿವಯೋಗೀಶ್ವರರ, ದರ್ಶನಂ=ದರ್ಶನವು, ಪುಂಸಾಂ= ಪುರುಷರುಗಳಿಗೆ, ಸರ್ವಸಿದ್ಧಿಕರಂ=ಸಮಸ್ತಸಿದ್ಧಿಯನು ಮಾಡುತ್ತಿರ್ದ್ದ ಅದು; ಸ್ಪರ್ಶನಂ=ಸೋಂಕುವುದು, ಪಾಪಶಮನಂ=ಸರ್ವಪಾಪವನು ಪರಿಹರಿಸುತ್ತಿರ್ದ್ದ ಅದು;ಪೂಜನಂ=ಪೂಜೆಯು, ಮುಕ್ತಿಸಾಧನಂ= ಪರಾಪರಮೋಕ್ಷಕ್ಕೆ ಸಾಧನವಾಗಿರ್ದ್ದ ಅದು. ||೪೩||

**ಗ್ರಂಥ||** **ಮಹತಾಂ ಶಿವತಾತ್ಪರ್ಯವೇದಿನಾಮನುಮೋದಿನಾಮ್ ।**
**ಕಿಂ ವಾ ಫಲಂ ನ ಸಿದ್ಧ್ಯೇತ ಸಂಪರ್ಕಾಚ್ಛಿವಯೋಗಿನಾಮ್ ||**

**ಟೀಕು||** ಮಹತಾಂ=ಮಹಾಪುರುಷರಾಗಿ, ಶಿವತಾತ್ಪರ್ಯವೇದಿನಾಂ=ಶಿವರಹಸ್ಯಾಭಿಪ್ರಾಯವನು ಅರಿವುತ್ತಿರ್ದ್ದ, ಅನುಮೋದಿನಾಂ=ಶಿವಸುಖವುಳ್ಳ, ಶಿವಯೋಗಿನಾಂ=ಶಿವಯೋಗೀಶ್ವರರ,

ಸಂಪರ್ಕಾತ್=ಸಂಪರ್ಕದದೆಸೆಯಿಂದೆ, ಕಿಂ ವಾ ಫಲಂ=ಆವ ಫಲವು, ನ ಸಿದ್ಧ್ಯೇತ=ಸಿದ್ಧಿಸದು? ಸಮಸ್ತಫಲವು ಸಿದ್ಧಿಸುವುದೆಂಬುದರ್ಥ. ||೪೪||

**ಇತಿ ಜಂಗಮಮಹತ್ವಸ್ಥಲಮ್**

## ೨೯. ಪ್ರಸಾದಿಸ್ಥಲೇ ಭಕ್ತಮಾಹಾತ್ಮ್ಯಸ್ಥಲಮ್

**ಸೂತ್ರ||** ಬಳಿಕ ಗುರುಲಿಂಗಜಂಗಮ ಮಹತ್ವದಲ್ಲಿ ಲಂಪಟನಾದ ಭಕ್ತನ ಮಹತ್ವವನು ದ್ವಾದಶ ಸೂತ್ರಂಗಳಿಂದೆ ಹೇಳುತ್ತಿರ್ದಪಂ.

ಗ್ರಂಥ|| **ಗುರೋರ್ಲಿಂಗಸ್ಯ ಮಾಹಾತ್ಮ್ಯಕಥನಾಚ್ಛಿವಯೋಗಿನಾಮ್ ।**
**ಸಿದ್ಧಂ ಭಕ್ತಸ್ಯ ಮಾಹಾತ್ಮ್ಯಂ ತಥಾಪ್ಯೇಷ ಪ್ರಶಸ್ಯತೇ ॥**

**ಟೀಕು||** ಗುರೋಃ=ಶ್ರೀಗುರುವಿನ, ಲಿಂಗಸ್ಯ=ಲಿಂಗದ, ಶಿವಯೋಗಿನಾಂ=ಶಿವಯೋಗೀಶ್ವರರ, ಮಾಹಾತ್ಮ್ಯಕಥನಾತ್=ಮಹತ್ವವ ಹೇಳುವಾತನಾದ ಕಾರಣವಾಗಿ, ಭಕ್ತಸ್ಯ=ಶಿವಭಕ್ತನ, ಮಾಹಾತ್ಮ್ಯಂ=ಮಹತ್ವವು, ಸಿದ್ಧಂ=ಸಿದ್ಧವಾಗಿರ್ದ್ದ ಅದು; ತಥಾಪಿ=ಆ ಪ್ರಕಾರದಿಂದೆ, ಏಷಃ=ಈ ಶಿವಭಕ್ತನು, ಪ್ರಶಸ್ಯತೇ=ಕೊಂಡಾಡಲುಪಡುತ್ತಿರ್ದ್ದಪನು. ||೪೫||

**ಸೂತ್ರ||** ಬಳಿಕ "ಯದ್ಧಿ ಮನಸಾ ಧ್ಯಾಯತಿ, ತದ್ವಾಚಾ ವದತಿ, ತತ್ಕರ್ಮಣಾ ಕರೋತಿ" ಯೆಂಬ ಶ್ರುತ್ಯರ್ಥವನು ಪ್ರಕಟಿಸಿ ಭಕ್ತಶಬ್ದನಿರ್ವಚನವನು ಹೇಳುತ್ತಿರ್ದ್ದಪನು.

ಗ್ರಂಥ|| **ಭಜಂತಿ ಯೇ ಮಹಾದೇವಂ ಪರಮಾತ್ಮಾನಮವ್ಯಯಮ್ ।**
**ಕರ್ಮಣಾ ಮನಸಾ ವಾಚಾ ತೇ ಭಕ್ತಾ ಇತಿ ಕೀರ್ತಿತಾಃ ॥**

**ಟೀಕು||** ಯೇ=ಆರು ಕೆಲಂಬರು, ಅವ್ಯಯಂ=ಕೇಡಿಲ್ಲದೆ, ಪರಮಾತ್ಮಾನಂ=ಪರಬ್ರಹ್ಮಸ್ವರೂಪವಾದ, ಮಹಾದೇವಂ= ಶಿವಲಿಂಗವನು, ಮನಸಾ=ಮನಸ್ಸಿನಿಂದೆ, ವಾಚಾ=ನುಡಿಯಿಂದೆ, ಕರ್ಮಣಾ=ಕಾಯಕರ್ಮದಿಂದೆ, ಭಜಂತಿ=ಸೇವಿಸುತ್ತಿರ್ದ್ದಪರು, ತೇ=ಅವರು, ಭಕ್ತಾ ಇತಿ=ಶಿವಭಕ್ತರೆಂದು ಕೀರ್ತಿತಾಃ=ಹೇಳಲುಪಟ್ಟರು. ||೪೬||

**ಸೂತ್ರ||** ಬಳಿಕ ಶಿವಭಕ್ತಿಯುಳ್ಳವನೆ ಭಕ್ತನೆಂದು ಹೇಳುತ್ತಿರ್ದ್ದಪಂ.

ಗ್ರಂಥ|| **ದುರ್ಲಭಾ ಹಿ ಶಿವೇ ಭಕ್ತಿಸ್ಸಂಸಾರಭಯತಾರಿಣೀ ।**
**ಸಾ ಯತ್ರ ವರ್ತತೇ ಸಾಕ್ಷಾತ್ಸ ಭಕ್ತಃ ಪರಿಗೀಯತೇ ॥**

**ಟೀಕು॥** ಸಂಸಾರಭಯತಾರಿಣೇ=ಸಂಸಾರಭಯವನು ಪರಿಹರಿಸುತ್ತಿರ್ದ್ದ, ಶಿವೇ=ಶಿವಲಿಂಗ ದಲ್ಲಿಯ, ಭಕ್ತಿಃ=ಭಕ್ತಿಯು, ದುರ್ಲಭಾ ಹಿ=ಪಡೆಯಲು ಶಕ್ಯವಲ್ಲದೆಯಿರ್ದ್ದ ಅದು; ಸಾ=ಆ ಶಿವಭಕ್ತಿಯು, ಯತ್ರ=ಆವಾತನಲ್ಲಿ, ಸಾಕ್ಷಾತ್=ಪ್ರತ್ಯಕ್ಷವಾಗಿ, ವರ್ತತೇ=ವರ್ತಿಸುತ್ತಿರ್ದ್ದಪುದು, ಸಃ=ಆತನು, ಭಕ್ತಃ=ಶಿವಭಕ್ತನೆಂದು, ಪರಿಗೀಯತೇ=ಹೇಳಲುಪಡುತ್ತಿರ್ದ್ದಪನು. ॥೪೭॥

**ಸೂತ್ರ॥** ಬಳಿಕ ಶಿವಭಕ್ತಿವಿಹೀನನಿಗೆ ಆವ ಸತ್ಕೃತ್ಯದಿಂದವು ಫಲವಿಲ್ಲವೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥**
**ಕಿಂ ವೇದೈಃ ಕಿಂ ತತಃ ಶಾಸ್ತ್ರೈಃ ಕಿಂ ಯಜ್ಞೈಃ ಕಿಂ ತಪೋವ್ರತೈಃ ।**
**ನಾಸ್ತಿ ಚೇಚ್ಛಾಂಕರೀ ಭಕ್ತಿರ್ದೇಹಿನಾಂ ಜನ್ಮರೋಗಿಣಾಮ್ ॥**

**ಟೀಕು॥** ಜನ್ಮರೋಗಿಣಾಂ=ಭವರೋಗವುಳ್ಳ, ದೇಹಿನಾಂ=ದೇಹಿಗಳಿಗೆ, ಶಾಂಕರೀ ಭಕ್ತಿಃ= ಶಿವಸಂಬಂಧವಾದ ಭಕ್ತಿಯು, ನಾಸ್ತಿ ಚೇತ್=ಎತ್ತಲಾನು ಇಲ್ಲವೆ, ತರ್ಹಿ=ಅಹಗಾಯಿತ್ತಾದಡೆ, ವೇದೈಃ= ಚತುರ್ವೇದಂಗಳಿಂದೆ, ಕಿಂ=ಏನು? ತತಃ=ಬಳಿಕ, ಶಾಸ್ತ್ರೈಃ="ಅಪರಂ ಶಾಸ್ತ್ರಮುತ್ತಮಮ್" ಯೆಂಬಾಗಮವಾಕ್ಯದಿಂದೆ ಶಾಸ್ತ್ರವಾಚಕವಾದ ಇಪ್ಪತ್ತೆಂಟು ಶಿವಾಗಮಗಳಿಂದೆಯು, ಕಿಂ=ಏನು? ಯಜ್ಞೈಃ=ಬಹುವಿಧಯಜ್ಞಂಗಳಿಂದೆಯು, ಕಿಂ=ಏನು? ತಪೋವ್ರತೈಃ=ತಪೋವ್ರತಂಗಳಿಂದೆಯು, ಕಿಂ=ಏನು? ಏನೂ ಇಲ್ಲವೆಂಬುದರ್ಥ. ॥೪೮॥

**ಸೂತ್ರ॥** ಬಳಿಕ "ಕ್ರಿಯಾದಕ್ಷೋ ದಕ್ಷಃ"ಯೆಂಬ ಮಹಿಮ್ನಸ್ತವಾರ್ಥವನು ಪ್ರಕಟಿಸುತ್ತ ಶಿವವಿರಹಿತವಾಗಿ ಮಾಡಿದ ಸತ್ಕರ್ಮವೆ ದುಷ್ಕರ್ಮವೆಂದು ದೃಷ್ಟಾಂತಪೂರ್ವಕವಾಗಿ ಹೇಳುತ್ತಿರ್ದ್ದಪಂ.

**ಗ್ರಂಥ॥**
**ಶಿವಭಕ್ತಿವಿಹೀನಸ್ಯ ಸುಕೃತಂ ಚಾಪಿ ನಿಷ್ಫಲಮ್ ।**
**ವಿಪರೀತಫಲಂ ಚ ಸ್ಯಾದ್ದಕ್ಷಸ್ಯಾಪಿ ಮಹಾಧ್ವರೇ ॥**

**ಟೀಕು॥** ಶಿವಭಕ್ತಿವಿಹೀನಸ್ಯ=ಶಿವಭಕ್ತಿವಿಹೀನನಾಗಿದ್ದಾತನಿಗೆ, ಸುಕೃತಂ ಚಾಪಿ=ಪುಣ್ಯಕರ್ಮವಾಯಿತ್ತಾದೊಡೆಯು, ನಿಷ್ಫಲಂ=ನಿಷ್ಫಲವು. ದಕ್ಷಸ್ಯಾಪಿ=ಶಿವಭಕ್ತಿರಹಿತನಾದ ದಕ್ಷಬ್ರಹ್ಮನಿಗಾಯಿತ್ತಾದೊಡೆ, ಮಹಾಧ್ವರೇ=ಮಹಾಯಜ್ಞದಲ್ಲಿಯ ಸತ್ಕರ್ಮವು, ವಿಪರೀತಫಲಂ=ವಿಪರೀತಫಲವುಳ್ಳ ಅದು, ಯಥಾ=ಹೇಗೆ, ಸ್ಯಾತ್=ಅಹುದು? ॥೪೯॥

**ಸೂತ್ರ॥** ಬಳಿಕ "ಸತಾಂ ವೃತ್ತಂ ತ್ಯಕ್ತ್ವಾ" ಯೆಂಬ ಮಹಿಮ್ನಸ್ತವಾರ್ಥವನು ಪ್ರಕಟಿಸುತ್ತ ಶಿವಯುಕ್ತವಾಗಿ ಮಾಡಿದ ದುಷ್ಕರ್ಮವೆ ಸತ್ಕರ್ಮವೆಂದು ದೃಷ್ಟಾಂತಪೂರ್ವಕವಾಗಿ ಹೇಳುತ್ತಿರ್ದ್ದಪಂ.

**ಗ್ರಂಥ||** **ಅತ್ಯಂತಪಾಪಕರ್ಮಾಽಪಿ ಶಿವಭಕ್ತ್ಯಾ ವಿಶುಧ್ಯತಿ ।**
**ಚಂಡೋ ಯಥಾ ಪುರಾ ಭಕ್ತ್ಯಾ ಪಿತೃಹಾಽಪಿ ಶಿವೋಽಭವತ್ ॥**

**ಟೀಕು||** ಅತ್ಯಂತಪಾಪಕರ್ಮಾಽಪಿ=ಅತ್ಯಂತಪಾಪಕರ್ಮವುಳ್ಳಾತನಾಯಿತ್ತಾದೊಡೆಯು, ಶಿವಭಕ್ತ್ಯಾ=ಶಿವಭಕ್ತಿಯಿಂದೆ, ವಿಶುಧ್ಯತಿ=ಶುದ್ಧಾತ್ಮನಾಗುತ್ತಿರ್ದಪನು. ಪುರಾ=ಪೂರ್ವದಲ್ಲಿ, ಚಂಡಃ=ಚಂಡೇಶಪಿಳ್ಳೆಯರು, ಪಿತೃಹಾಽಪಿ=ತಂದೆಯ ಕೊಂದಾತನಾಯಿತ್ತಾದೊಡೆಯು, ಭಕ್ತ್ಯಾ=ಶಿವಭಕ್ತಿಯಿಂದೆ, ಯಥಾ=ಹೇಗೆ, ಶಿವಃ=ಶಿವಸ್ವರೂಪವಾಗಿದ್ದಾತನು, ಅಭವತ್=ಆದನು. ||೫೦||

**ಸೂತ್ರ||** ಬಳಿಕ ಶಿವಭಕ್ತರಿಗೆ ಕರ್ಮಪಾಶವಿಲ್ಲವೆಂದು ಹೇಳುತ್ತಿರ್ದಪಂ.

**ಗ್ರಂಥ||** **ಸುಕೃತಂ ದುಷ್ಕೃತಂ ಚಾಪಿ ಶಿವಭಕ್ತಸ್ಯ ನಾಸ್ತಿ ಹಿ ।**
**ಶಿವಭಕ್ತಿವಿಹೀನಾನಾಂ ಕರ್ಮಪಾಶನಿಬಂಧನಮ್ ॥**

**ಟೀಕು||** ಶಿವಭಕ್ತಸ್ಯ=ಶಿವಭಕ್ತನಿಗೆ, ಸುಕೃತಂ=ಪುಣ್ಯವು, ದುಷ್ಕೃತಂ ಚಾಪಿ=ಪಾಪವಾಯಿತ್ತಾದೊಡೆಯು, ನಾಸ್ತಿ=ಇಲ್ಲ. ಶಿವಭಕ್ತಿವಿಹೀನಾನಾಂ=ಶಿವಭಕ್ತಿಯಿಲ್ಲದೆಯಿದ್ದವರಿಗೆ, ಕರ್ಮಪಾಶನಿಬಂಧನಂ=ಪುಣ್ಯಪಾಪರೂಪವಾದ ಕರ್ಮಪಾಶದ ಬಂಧನವು, ಹಿ=ಪ್ರಸಿದ್ಧವು. ||೫೧||

**ಸೂತ್ರ||** ಬಳಿಕ ಆ ಅರ್ಥವನೆ ದೃಷ್ಟಾಂತಪೂರ್ವಕವಾಗಿ ಸೂತ್ರದ್ವಯದಿಂದೆ ಹೇಳುತ್ತಿರ್ದಪಂ

**ಗ್ರಂಥ||** **ಶಿವಾಶ್ರಿನಾಂ ಜಂತೂನಾಂ ಕರ್ಮಣಾ ನಾಸ್ತಿ ಸಂಗಮಃ ।**
**ವಾಜಿನಾಂ ದಿನನಾಥಸ್ಯ ಕಥಂ ತಿಮಿರಜಂ ಭಯಮ್ ॥**

**ಟೀಕು||** ಶಿವಾಶ್ರಿತಾನಾಂ=ಶಿವಸಮಯಾಶ್ರಿತರಾದ, ಜಂತೂನಾಂ=ದೇಹಿಗಳಿಗೆ,ಕರ್ಮಣಾ=ಪುಣ್ಯಪಾಪರೂಪವಾದ ಕರ್ಮದೊಡನೆ, ಸಂಗಮಃ=ಸಂಪರ್ಕವು, ನಾಸ್ತಿ=ಇಲ್ಲ. ದಿನನಾಥಸ್ಯ=ಸೂರ್ಯನ, ವಾಜಿನಾಂ=ಕುದುರೆಗಳಿಗೆ, ತಿಮಿರಜಂ ಭಯಂ=ಅಂಧಕಾರದಿಂದೆ ಹುಟ್ಟಿದ ಭೀತಿಯು, ಕಥಂ=ಹೇಗೆಯು? ಇಲ್ಲವೆಂಬುದರ್ಥ. ||೫೨||

**ಗ್ರಂಥ||** **ನಿರೋದ್ಧುಂ ನ ಕ್ಷಮಂ ಕರ್ಮ ಶಿವಭಕ್ತಾನ್ವಿಶೃಂಖಲಾನ್ ।**
**ಕಥಂ ಮತ್ತಗಜಾನ್ರುಂಧೇಚ್ಛೃಂಖಲಾ ಬಿಸತಂತುಜಾ ॥**

**ಟೀಕು||** ಕರ್ಮ=ಪುಣ್ಯಪಾಪರೂಪವಾದ ಕರ್ಮವು, ವಿಶೃಂಖಲಾನ್=ತಡೆಹಿಲ್ಲದೆಯಿರ್ದ, ಶಿವಭಕ್ತಾನ್=ಶಿವಭಕ್ತರನು, ನಿರೋದ್ಧುಂ=ತಡೆಯಲು, ನ ಕ್ಷಮಂ=ಸಮರ್ಥವಲ್ಲ. ಬಿಸತಂತುಜಾ

ಶೃಂಖಲಾ=ತಾವರೆಯ ನೂಲೊಳಗೆ ಹುಟ್ಟಿದ ಸಂಕಲೆಯು. ಮತ್ತಗಜಾನ್=ಮದಸೊಕ್ಕಿದ ಆನೆಗಳನು, ಕಥಂ ರುಂಧೇತ್=ಹೇಗೆ ತಡೆವುದು? ಹೇಗೆಯು ತಡೆಯದೆಂಬುದರ್ಥ. ||೫೩||

**ಸೂತ್ರ||** ಬಳಿಕ ಇದು ಕಾರಣವಾಗಿ ಶಿವಭಕ್ತನೆ ಪೂಜ್ಯನೆಂದು ಹೇಳುತ್ತಿರ್ದಪಂ.

**ಗ್ರಂಥ||** **ಬ್ರಾಹ್ಮಣಃ ಕ್ಷತ್ರಿಯೋ ವಾಽಪಿ ವೈಶ್ಯೋ ವಾ ಶೂದ್ರ ಏವ ವಾ ।**
**ಅಂತ್ಯಜೋ ವಾ ಶಿವೇ ಭಕ್ತಿಃ ಶಿವವನ್ಮಾನ್ಯ ಏವ ಸಃ ॥**

**ಟೀಕು||** ಬ್ರಾಹ್ಮಣಃ=ಬ್ರಾಹ್ಮಣನಾದರು, ಕ್ಷತ್ರಿಯೋ ವಾಽಪಿ=ಕ್ಷತ್ರಿಯನಾಯಿತ್ತಾದೊಡೆಯು, ವೈಶ್ಯೋ ವಾ=ವೈಶ್ಯನಾದಡೂ, ಶೂದ್ರ ಏವ ವಾ=ಶೂದ್ರನಾಯಿತ್ತಾದೊಡೆಯು, ಅಂತ್ಯಜೋ ವಾ=ಅಂತ್ಯಜನಾಯಿತ್ತಾದೊಡೆಯು, ಶಿವೇ ಭಕ್ತಿಃ=ಶಿವನಲ್ಲಿ ಭಕ್ತಿಯುಳ್ಳ, ಸಃ=ಆ ಭಕ್ತನು, ಶಿವವತ್=ಶಿವನೋಪಾದಿಯಲ್ಲಿ, ಮಾನ್ಯ ಏವ=ಮನ್ನಿಸಲು ಯೋಗ್ಯವಾಗಿದ್ದಾತನೆ. ||೫೪||

**ಸೂತ್ರ||** ಬಳಿಕ ಶಿವಭಕ್ತರಿಗೆ ಜಾತಿಭೇದವಿಲ್ಲವೆಂದು ಹೇಳುತ್ತಿರ್ದಪಂ.

**ಗ್ರಂಥ||** **ಶಿವಭಕ್ತಿಸಮಾವೇಶೇ ಕ್ವ ಜಾತಿಪರಿಕಲ್ಪನಾ ।**
**ಇಂಧನೇಷ್ವಗ್ನಿಯುಕ್ತೇಷು ಕೋ ವಾ ಭೇದಃ ಪ್ರಕೀರ್ತ್ಯತೇ ॥**

**ಟೀಕು||** ಶಿವಭಕ್ತಿಸಮಾವೇಶೇ=ಶಿವಭಕ್ತ್ಯಾವೇಶದಲ್ಲಿ, ಜಾತಿಪರಿಕಲ್ಪನಾ=ಜಾತಿಭೇದವು, ಕ್ವ=ಆವುದು? ಇಂಧನೇಷು= ಕಾಷ್ಠಂಗಳು, ಅಗ್ನಿಯುಕ್ತೇಷುಸತ್ಸು=ಅಗ್ನಿಯೊಡನೆ ಕೂಡಲಿಕೆಯಾಗಿ, ಕೋ ವಾ ಭೇದಃ=ಆವ ಭೇದವು, ಪ್ರಕೀರ್ತ್ಯತೇ=ಹೇಳಲುಪಡುತ್ತಿರ್ದಪುದು? ಆವ ಭೇದವು ಇಲ್ಲವೆಂಬುದರ್ಥ. ||೫೫||

**ಸೂತ್ರ||** ಬಳಿಕ ಶಿವಭಕ್ತರೆ ಗಣೇಶ್ವರರೆಂದು ಹೇಳಿ ಭಕ್ತಮಹತ್ವಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ||** **ಶುದ್ಧಾ ನಿಯಮಸಂಯುಕ್ತಾಃ ಶಿವಾರ್ಪಿತಫಲಾಗಮಾಃ ।**
**ಅರ್ಚಯಂತಿ ಶಿವಂ ಲೋಕೇ ವಿಜ್ಞೇಯಾಸ್ತೇ ಗಣೇಶ್ವರಾಃ ॥**

**ಟೀಕು||** ಯೇ=ಆರು ಕೆಲಂಬರು, ಶುದ್ಧಾಃ=ಶುದ್ಧಾತ್ಮರಾಗಿ, ನಿಯಮಸಂಯುಕ್ತಾಃ=ಶಿವವ್ರತದೊಡನೆ ಕೂಡಿ, ಶಿವಾರ್ಪಿತಫಲಾಗಮಾಃಸಂತಃ=ಶಿವಾರ್ಪಿತವಾದ ಫಲಾಗಮವುಳ್ಳವರಾಗುತವು, ಶಿವಂ=ಶಿವಲಿಂಗವನು, ಅರ್ಚಯಂತಿ=ಪೂಜಿಸುತ್ತಿರ್ದಪರು. ತೇ=ಅವರು, ಲೋಕೇ=ಈ ಲೋಕದಲ್ಲಿಯ, ಗಣೇಶ್ವರಾಃ=ಗಣೇಶ್ವರರಾಗಿ, ವಿಜ್ಞೇಯಾಃ=ಅರಿಯಲು ಯೋಗ್ಯರು.

ತಾತ್ಪರ್ಯ॥ "ನಾಶಿವಸ್ಯ ಶಿವೋಪಾಸ್ತಿಃ ನಾರುದ್ರೋ ರುದ್ರಮರ್ಚಯೇತ್"।
''ಯೇ ರುದ್ರಲೋಕೇ ತದವತೀರ್ಯ ರುದ್ರಾಃ"॥ ಯೆಂಬಿವು ಮೊದಲಾದ ಶಿವಧರ್ಮಗ್ರಂಥಗಳಿಂದೆ ಶಿವಭಕ್ತರೆ ರುದ್ರರೆಂದು ತಿಳಿವುದು. ॥೫೬॥

### ಇತಿ ಭಕ್ತಮಹತ್ವಸ್ಥಲಮ್

## ೩೦. ಪ್ರಸಾದಿಸ್ಥಲೇ ಶರಣಮಹತ್ವಸ್ಥಲಮ್

**ಸೂತ್ರ॥** ಬಳಿಕ ಗುರುಲಿಂಗಾದಿಗಳ ಮಹತ್ವವನು ತಿಳಿದು ಶಿವನೊರ್ವನೆ ರಕ್ಷಕನೆಂದು ಎಯ್ದುವ ಶರಣಮಹತ್ವಸ್ಥಲವನು ಹೇಳುತ್ತಿರ್ದಪಂ.

**ಗ್ರಂಥ॥** **ಗುರುಲಿಂಗಾದಿ ಮಾಹಾತ್ಮ್ಯಬೋಧಾನ್ವೇಷಣಸಂಗತಃ ।**
**ಸರ್ವಾತ್ಮನಾ ಶಿವಾಪತ್ತಿಃ ಶರಣಸ್ಥಾನಮುಚ್ಯತೇ ॥**

**ಟೀಕು॥** ಗುರುಲಿಂಗಾದಿ=ಗುರುಲಿಂಗ ಮೊದಲಾಗುಳ್ಳ ಶಿವಯೋಗೀ ಶಿವಭಕ್ತರ, ಮಾಹಾತ್ಮ್ಯ ಬೋಧಾನ್ವೇಷಣಸಂಗತಃ=ಮಹತ್ವಬೋಧೆಯನು ಅರಸುವ ಸಂಬಂಧದದೆಸೆಯಿಂದೆಯು' ಸರ್ವಾತ್ಮನಾ=ಎಲ್ಲಾ ಪ್ರಕಾರದಿಂದೆಯು, ಶಿವಾಪತ್ತಿಃ=ಶಿವನೊರ್ವನೆ ರಕ್ಷಕನೆಂದು ಎಯ್ದುವತನವು, ಶರಣಸ್ಥಾನಂ=ಶರಣಸ್ಥಾನವೆಂದು, ಉಚ್ಯತೇ=ಹೇಳಲುಪಡುತ್ತಿರ್ದಪುದು. ॥೫೭॥

**ಸೂತ್ರ॥** ಬಳಿಕ "ಈಶಾನಃ ಶಿವ ಏಕೋ ಧ್ಯೇಯಃ ಶಿವಂಕರಃ।
ಸರ್ವಮನ್ಯತ್ಪರಿತ್ಯಜ್ಯ ಸಮಾಪ್ತಾಥರ್ವಶಿಖಾ"॥ ಯೆಂಬ ಶ್ರುತ್ಯರ್ಥವನು ಪ್ರಕಟಿಸಿ ಶರಣ ಶಬ್ದಾರ್ಥವನೆ ವಿಶೇಷಿಸುತ್ತಿರ್ದಪಂ.

**ಗ್ರಂಥ॥** **ಬ್ರಹ್ಮಾದಿವಿಬುಧಾನ್ಸರ್ವಾನ್ಮುಕ್ತ್ವಾ ಪ್ರಾಕೃತವೈಭವಾನ್ ।**
**ಪ್ರಪದ್ಯತೇ ಶಿವಂ ಯತ್ತು ಶರಣಂ ತದುದಾಹೃತಮ್ ॥**

**ಟೀಕು॥** ಪ್ರಾಕೃತವೈಭವಾನ್=ಪ್ರಕೃತಿಜನ್ಯವಾದ ಸಂಪತ್ತಿಯುಳ್ಳ, ಸರ್ವಾನ್=ಸಮಸ್ತರಾದ, ಬ್ರಹ್ಮಾದಿ ವಿಬುಧಾನ್=ಬ್ರಹ್ಮವಿಷ್ಣುಮೊದಲಾಗುಳ್ಳ ದೇವತೆಗಳನು, ಮುಕ್ತ್ವಾ=ಬಿಟ್ಟು, ಶಿವಂ=ಪರಮೇಶ್ವರನನು, ಯತ್=ಆವುದಾನೊಂದು, ಪ್ರಪದ್ಯತೇ=ಎಯ್ದುತ್ತಿರ್ದಪುದು, ತತ್=ಅದಾಯಿತ್ತಾದೊಡೆ, ಶರಣಂ=ಶರಣನೆಂದು, ಉದಾಹೃತಂ=ಹೇಳಲುಪಟ್ಟಿತ್ತು. ॥೫೮॥

**ಸೂತ್ರ॥** ಬಳಿಕ ಶರಣಾಗತ ಶಬ್ದವನು ಹೇಳುತ್ತಿರ್ದಪಂ.

ಗ್ರಂಥ॥ ಶರಣ್ಯಸ್ಸರ್ವಭೂತಾನಾಂ ಶಂಕರಶ್ಶಶಿಶೇಖರಃ ।
ಸರ್ವಾತ್ಮನಾ ಪ್ರಪನ್ನಸ್ತಂ ಶರಣಾಗತ ಉಚ್ಯತೇ ॥

**ಟೀಕು॥** ಶಶಿಶೇಖರಃ=ಚಂದ್ರಮೌಲಿಯಾಗಿ, ಶಂಕರಃ=ಸುಖವನು ಮಾಡುತ್ತಿರ್ದ್ದ ಪರಮೇಶ್ವರನು, ಸರ್ವಭೂತಾನಾಂ=ಸಮಸ್ತಪ್ರಾಣಿಗಳ, ಶರಣ್ಯಃ=ರಕ್ಷಿಸುವಲ್ಲಿ ಸಾಧುವಾಗಿದ್ದಾತನು, ತಂ=ಆ ಪರಮೇಶ್ವರನನು, ಸರ್ವಾತ್ಮನಾ=ಸರ್ವಪ್ರಕಾರದಿಂದೆಯು, ಪ್ರಪನ್ನಃ=ರಕ್ಷಿಸುಯೆಂದು ಮರೆಹೊಕ್ಕ ಆತನು, ಶರಣಾಗತಃ=ಶರಣಾಗತನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ॥೫೯॥

**ಸೂತ್ರ॥** ಬಳಿಕ ಶರಣಾರ್ಥಿ ಶಬ್ದವನು ಹೇಳುತ್ತಿರ್ದ್ದಪಂ.

ಗ್ರಂಥ॥ ವಿಮುಕ್ತಭೋಗಲಾಲಸ್ಯೋ ದೇವತಾಂತರನಿಃಸ್ಪೃಹಃ ।
ಶಿವಮಭ್ಯರ್ಥಯನ್ಮೋಕ್ಷಂ ಶರಣಾರ್ಥೀತಿ ಗೀಯತೇ ॥

**ಟೀಕು॥** ವಿಮುಕ್ತಭೋಗಲಾಲಸ್ಯಃ=ಬಿಡಲುಪಟ್ಟ ಭೋಗಲಂಪಟತ್ವವುಳ್ಳ, ದೇವತಾಂತರ ನಿಃಸ್ಪೃಹಃ=ದೇವತಾಂತರ ಪದವಿಗಳಲ್ಲಿ ವಿರಕ್ತನಾಗಿ, ಶಿವಂ=ಪರಮೇಶ್ವರನನು. ಮೋಕ್ಷಂ=ಮೋಕ್ಷ ವನು, ಅಭ್ಯರ್ಥಯನ್=ಬೇಡಿಕೊಳ್ಳುತ್ತಿದ್ದಾತನೀಗ, ಶರಣಾರ್ಥೀತಿ=ಶರಣಾರ್ಥಿಯೆಂಬಾತನೆಂದು, ಗೀಯತೇ=ಹೇಳಲುಪಡುತ್ತಿರ್ದ್ದಪನು. ॥೬೦॥

**ಸೂತ್ರ॥** ಬಳಿಕ ಶಿವನ ಮರೆಹೊಕ್ಕವರಿಗೆ ಆವ ಸತ್ಕರ್ಮವು ಬೇಡವೆಂದು ಹೇಳುತ್ತಿರ್ದ್ದಪಂ.

ಗ್ರಂಥ॥ ಯೇ ಪ್ರಪನ್ನಾ ಮಹಾದೇವಂ ಮನೋವಾಕ್ಕಾಯಕರ್ಮಭಿಃ ।
ತೇಷಾಂ ತು ಕರ್ಮಜಾತೇನ ಕಿಂ ವಾ ದೇವಾದಿತರ್ಪಣೈಃ ॥

**ಟೀಕು॥** ಯೇ=ಆರು ಕೆಲಂಬರು, ಮಹಾದೇವಂ=ಪರಮೇಶ್ವರನನು, ಮನೋವಾಕ್ಕಾಯ ಕರ್ಮಭಿಃ=ಮನ ವಚನ ಕಾಯಕರ್ಮಂಗಳಿಂದ ಧ್ಯಾನಿಸುತ್ತಿಪ್ಪ ಪೂಜಾರೂಪವಾದ ಕ್ರೀಯಿಂದೆ, ಪ್ರಪನ್ನಾಃ=ರಕ್ಷಿಸುಯೆಂದು ಮರೆಹೊಗುವರು, ತೇಷಾಂ=ಅವರಿಗೆ, ಕರ್ಮಜಾತೇನ ತು=ಯಜ್ಞಾದಿ ಕರ್ಮಸಮೂಹದಿಂದಲಾಯಿತ್ತಾಬೊಡೆಯು, ದೇವಾದಿತರ್ಪಣೈಃ=ದೇವರ್ಷಿ ಮೊದಲಾದ ತರ್ಪಣಂಗಳಿಂದವು, ಕಿಂ ವಾ=ಏನು ಫಲವು? ಏನೂ ಫಲವಿಲ್ಲವೆಂಬುದರ್ಥ. ॥೬೧॥

**ಸೂತ್ರ॥** ಬಳಿಕ ಆ ಅರ್ಥವನೆ ಸೂತ್ರತ್ರಯದಿಂದೆ ವಿಶೇಷಿಸಿ ಹೇಳುತ್ತಿರ್ದ್ದಪಂ.

ಗ್ರಂಥ॥ **ಸರ್ವೇಷಾಮಪಿ ಯಜ್ಞಾನಾಂ ಕ್ಷಯಃ ಸ್ವರ್ಗಃ ಫಲಾಯತೇ ।**
**ಅಕ್ಷಯಂ ಫಲಮಾಪ್ನೋತಿ ಪ್ರಪನ್ನಃ ಪರಮೇಶ್ವರಮ್ ॥**

**ಟೀಕು॥** ಸರ್ವೇಷಾಂ=ಸಮಸ್ತಜನರುಗಳಿಗೆ, ಯಜ್ಞಾನಾಮಪಿ=ಯಜ್ಞಮರ್ಕಂಗಳಿಂದಲಾಯಿತ್ತಾದೊಡೆ, ಗಂತವ್ಯಃ=ಎಯ್ದಲು ಯೋಗ್ಯವಾದ, ಕ್ಷಯಃ=ಕೇಡನುಳ್ಳ ಆಶ್ರಯವು, ಸ್ವರ್ಗಃ ಫಲಾಯತೇ=ಸ್ವರ್ಗಫಲವಾಗುತ್ತಿರ್ದಪುದು. ಪರಮೇಶ್ವರಂ=ಪರಮೇಶ್ವರನನು, ಪ್ರಪನ್ನಃ=ಮರೆಹೊಕ್ಕ ಆತನು, ಅಕ್ಷಯಂ ಫಲಂ=ಕೇಡಿಲ್ಲದೆಯಿರ್ದ ಮೋಕ್ಷಫಲವನು, ಆಪ್ನೋತಿ= ಎಯ್ದುತ್ತಿರ್ದಪನು. ॥೬೨॥

ಗ್ರಂಥ॥ **ಪ್ರಪನ್ನಪಾರಿಜಾತಸ್ಯ ಭವಸ್ಯ ಪರಮಾತ್ಮನಃ ।**
**ಪ್ರಪತ್ತ್ಯಾ ಕಿನ್ನ ಜಾಯೇತ ಪಾಪಿನಾಮಪಿ ದೇಹಿನಾಮ್ ॥**

**ಟೀಕು॥** ಪ್ರಪನ್ನಪಾರಿಜಾತಸ್ಯ=ಮರೆಹೊಕ್ಕವರಿಗೆ ಕಲ್ಪವೃಕ್ಷವಾಗಿರ್ದ, ಪರಮಾತ್ಮನಃ= ಪರಬ್ರಹ್ಮಸ್ವರೂಪವಾದ, ಭವಸ್ಯ=ಶಿವನ, ಪ್ರಪತ್ತ್ಯಾ=ರಕ್ಷಕನಾಗಿ ಎಯ್ದಿದರಿಂದೆ, ಪಾಪಿನಾಂ=ಪಾಪಿಗಳಾದ, ದೇಹಿನಾಮಪಿ=ದೇಹಿಗಳಿಗಾಯಿತ್ತಾದೊಡೆಯು, ಕಿಂ=ಏನು ಫಲವು, ನ ಜಾಯೇತ=ಆಗದು? ಸರ್ವಫಲವು ಆಗುವುದೆಂಬುದರ್ಥ. ॥೬೩॥

ಗ್ರಂಥ॥ **ಪ್ರಪನ್ನಾನಾಂ ಮಹಾದೇವಂ ಪರಿಪಕ್ವಾಂತರಾತ್ಮನಾಮ್ ।**
**ಜನ್ಮೈವ ಜನ್ಮನಾಽನ್ಯೇಷಾಂ ವೃಥಾ ಜನನಸಂಗಿನಾಮ್ ॥**

**ಟೀಕು॥** ಮಹಾದೇವಂ=ಪರಮೇಶ್ವರನನು, ಪ್ರಪನ್ನಾನಾಂ=ಮರೆಹೊಕ್ಕ, ಪರಿಪಕ್ವಾಂತರಾತ್ಮನಾಂ=ಪರಿಪಕ್ವವಾದಂತಃಕರಣವುಳ್ಳವರ, ಜನ್ಮ=ಜನ್ಮವು, ಜನ್ಮೈವ=ಸಫಲವಾದ ಜನ್ಮವೆ; ವೃಥಾಜನನಸಂಗಿನಾಂ=ವ್ಯರ್ಥವಾದ ಜನ್ಮಸಂಬಂಧವುಳ್ಳ, ಅನ್ಯೇಷಾಂ=ಉಳಿದವರ, ಜನ್ಮ=ಹುಟ್ಟು, ನ ಜನ್ಮೈವ=ಹುಟ್ಟಲ್ಲವೆ? ॥೬೪॥

ಸೂತ್ರ॥ ಬಳಿಕ ಆ ಅರ್ಥವನೆ ವಿಶೇಷಿಸುತ್ತಿರ್ದಪಂ.

ಗ್ರಂಥ॥ **ದುರ್ಲಭಂ ಮಾನುಷಂ ಪ್ರಾಪ್ಯ ಜನನಂ ಜ್ಞಾನಸಾಧನಮ್ ।**
**ಯೇ ನ ಜಾನಂತಿ ದೇವೇಶಂ ತೇಷಾಮಾತ್ಮಾ ನಿರರ್ಥಕಃ ॥**

**ಟೀಕು॥** ದುರ್ಲಭಂ=ಪಡೆಯಲು ಶಕ್ಯವಲ್ಲದೆಯಿರ್ದ, ಮಾನುಷಂ ಜನನಂ=ಮನುಷ್ಯಜನ್ಮವನು, ಪ್ರಾಪ್ಯ=ಎಯ್ದಿ, ಜ್ಞಾನಸಾಧನಂ=ಶಿವಜ್ಞಾನಕ್ಕೆ ಸಾಧನವಾದ, ದೇವೇಶಂ=ಪರಮೇಶ್ವರನನು, ಯೇ=ಆರು ಕೆಲಂಬರು, ನ ಜಾನಂತಿ=ಅರಿವುತ್ತಿರರು. ತೇಷಾಂ=ಅವರ, ಆತ್ಮಾ=ಆತ್ಮನು, ನಿರರ್ಥಕಃ=ವ್ಯರ್ಥವಾಗಿರ್ದಾತನು. ॥೬೫॥

**ಸೂತ್ರ||** ಬಳಿಕ "ಕುಲಂ ಪವಿತ್ರಂ ಜನನೀ ಕೃತಾರ್ಥಾ"ಯೆಂಬ ಸೂತಸಂಹಿತಾರ್ಥವನು ಪೇಳ್ದಿಸಿ ಶರಣಮಹತ್ವಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ||** **ತತ್ಕುಲಂ ಹಿ ಸದಾ ಶುದ್ಧಂ ಸಫಲಂ ತಸ್ಯ ಜೀವಿತಮ್ ।**
**ಯಸ್ಯ ಚಿತ್ತಂ ಶಿವೇ ಸಾಕ್ಷಾದ್ವಿಲೀನಮಬಹಿರ್ಮುಖಮ್ ॥**

**ಟೀಕು||** ಯಸ್ಯ=ಆವಾತನ, ಚಿತ್ತಂ=ಮನಸ್ಸು, ಸಾಕ್ಷಾತ್=ಪ್ರತ್ಯಕ್ಷವಾದ, ಶಿವೇ=ಶಿವಲಿಂಗದಲ್ಲಿ, ಅಬಹಿರ್ಮುಖಂ=ಬಹಿರ್ಮುಖವಿಲ್ಲದಹಣಯಹಗಹುದು ಅಹಗೆ, ವಿಲೀನಂ=ವಿಶೇಷವಾಗಿ ಲಯವನೆಯ್ದುವದು. ತತ್ಕುಲಂ ಹಿ=ಆತನ ಕುಲವಾಯಿತ್ತಾದೊಡೆ, ಸದಾ ಶುದ್ಧಂ=ನಿತ್ಯ ಶುದ್ಧವಾಗಿದ್ದ ಅದು, ತಸ್ಯ ಜೀವಿತಂ=ಆತನ ಬದುಕು, ಸಫಲಂ=ಸಫಲವಾಗಿದ್ದ ಅದು. **||೬೬||**

**ಇತಿ ಶರಣಮಹತ್ವಸ್ಥಲಮ್**

## ೩೧. ಪ್ರಸಾದಿಸ್ಥಲೇ ಪ್ರಸಾದಮಹತ್ವಸ್ಥಲಮ್

**ಸೂತ್ರ||** ಬಳಿಕ ಮೊದಲು ಹೇಳಿದ ಗುರುಲಿಂಗಾದಿ ಮಹತ್ವಾನುಭವಸ್ಥಿತಿಯು ಶಿವಪ್ರಸಾದದಿಂದ ಸುಲಭವಾದ ಕಾರಣವಾಗಿ ಈಗ ಶಿವಪ್ರಸಾದ ಮಹತ್ವವನು ಹೇಳುತ್ತಿರ್ದಪಂ.

**ಗ್ರಂಥ||** **ಗುರುಲಿಂಗಾದಿಮಾಹಾತ್ಮ್ಯವಿಶೇಷಾನುಭವಸ್ಥಿತಿಃ ।**
**ಯಸ್ಮಾಚ್ಛಿವಪ್ರಸಾದಾತ್ಸ್ಯಾತ್ತದಸ್ಯ ಮಹಿಮೋಚ್ಯತೇ ॥**

**ಟೀಕು||** ಗುರುಲಿಂಗಾದಿ=ಗುರುಲಿಂಗಮೊದಲಾಗುಳ್ಳ ಶಿವಯೋಗೀ ಶಿವಭಕ್ತಶರಣರ, ಮಾಹಾತ್ಮ್ಯ ವಿಶೇಷಾನುಭವಸ್ಥಿತಿಃ=ಮಹತ್ವ ವಿಶೇಷದ ಅನುಭವವರ್ತನೆಯು, ಯಸ್ಮಾತ್=ಆವುದಾನೊಂದು ಕಾರಣವಾಗಿ, ಶಿವಪ್ರಸಾದಾತ್=ಶಿವಪ್ರಸಾದದದೆಸೆಯಿಂದವೆ, ಸ್ಯಾತ್=ಅಹುದು; ತತ್=ಅದು ಕಾರಣವಾಗಿ, ಅಸ್ಯ=ಈ ಶಿವಪ್ರಸಾದದ, ಮಹಿಮಾ=ಮಹಿಮೆಯು, ಉಚ್ಯತೇ=ಹೇಳಲು ಪಡುತ್ತಿರ್ದಪುದು. **||೬೭||**

**ಸೂತ್ರ||** ಬಳಿಕ ಶರಣಾಗತರಿಗೆ ಶಿವನು ಪ್ರಸನ್ನನಹುದೆಂದು ಹೇಳುತ್ತಿರ್ದಪಂ.

**ಗ್ರಂಥ||** **ಸದಾ ಲಿಂಗೈಕನಿಷ್ಠಾನಾಂ ಗುರುಪೂಜಾನುಷಂಗಿಣಾಮ್ ।**
**ಪ್ರಪನ್ನಾನಾಂ ವಿಶುದ್ಧಾನಾಂ ಪ್ರಸೀದತಿ ಮಹೇಶ್ವರಃ ॥**

**ಟೀಕು॥** ಸದಾ=ಎಲ್ಲಾಕಾಲದಲ್ಲಿಯೂ, ಲಿಂಗೈಕನಿಷ್ಠಾನಾಂ=ಶಿವಲಿಂಗವೊಂದರಲ್ಲಿಯೆ ತತ್ಪರರಾಗಿ, ಗುರುಪೂಜಾನುಷಂಗಿಣಾಂ=ಶ್ರೀಗುರುವಿನ ಪೂಜೆಯಲ್ಲಿ ಆಸಕ್ತರಾದ, ವಿಶುದ್ಧಾನಾಂ=ನಿರ್ಮಲವಾಗಿ, ಪ್ರಪನ್ನಾನಾಂ=ಶಿವನನು ಮರೆಹೊಕ್ಕವರಿಗೆ, ಮಹೇಶ್ವರಃ=ಪರಮೇಶ್ವರನು, ಪ್ರಸೀದತಿ=ಪ್ರಸನ್ನನಾಗುತ್ತಿರ್ದಪನು. ॥೬೮॥

**ಸೂತ್ರ॥** ಬಳಿಕ ಆ ಶಿವಪ್ರಸಾದ ಉಳಿದವರಿಗೆ ದುರ್ಲಭವೆಂದು ಹೇಳುತ್ತಿರ್ದಪಂ.

ಗ್ರಂಥ॥ **ಪ್ರಸಾದೋ ಹಿ ಮಹೇಶಸ್ಯ ದುರ್ಲಭಃ ಪರಿಕೀರ್ತ್ಯತೇ ।**
**ಘೋರಸಂಸಾರತಾಪನಿವೃತ್ತಿರ್ಯೇನ ಜಾಯತೇ ॥**

**ಟೀಕು॥** ಯೇನ=ಆವುದಾನೊಂದು ಶಿವಪ್ರಸಾದದಿಂದೆ, ಘೋರಸಂಸಾರಸಂತಾಪನಿವೃತ್ತಿಃ=ಭಯಂಕರವಾದ ಸಂಸಾರಸಂತಾಪದ ತೊಲಗಿಕೆಯು, ಜಾಯತೇ=ಆಗುತ್ತಿರ್ದಪುದು. ಸಃ ಮಹೇಶಸ್ಯ ಪ್ರಸಾದಃ=ಆ ಶಿವಪ್ರಸಾದವು, ದುರ್ಲಭಃಹಿ=ದುರ್ಲಭವೆಂದು, ಪರಿಕೀರ್ತ್ಯತೇ=ಹೇಳಲುಪಡುತ್ತಿರ್ದಪುದು. ॥೬೯॥

ಸೂತ್ರ॥ ಬಳಿಕ ಸಮಸ್ತ ಸತ್ಕರ್ಮಂಗಳು ಆ ಶಿವಪ್ರಸಾದದ ಸಿದ್ಧಿಗೋಸುಗವೆಂದು ಹೇಳುತ್ತಿರ್ದಪಂ.

ಗ್ರಂಥ॥ **ಯಜ್ಞಾಸ್ತಪಾಂಸಿ ಮಂತ್ರಾಣಾಂ ಜಪಶ್ಚಿಂತಾ ಪ್ರಬೋಧನಮ್ ।**
**ಪ್ರಸಾದಾರ್ಥಂ ಮಹೇಶಸ್ಯ ಕೀರ್ತಿತಾನಿ ನ ಸಂಶಯಃ ॥**

**ಟೀಕು॥** ಯಜ್ಞಾಃ=ಯಜ್ಞಂಗಳು, ತಪಾಂಸಿ=ತಪಸ್ಸುಗಳು, ಮಂತ್ರಾಣಾಂ=ಪಂಚಾಕ್ಷರಾದಿ ಮಂತ್ರಗಳು, ಜಪಃ=ಜಪವು, ಚಿಂತಾ=ಶಿವಧ್ಯಾನವು, ಪ್ರಬೋಧನಂ=ಶಿವಜ್ಞಾನವು, ಮಹೇಶಸ್ಯ=ಪರಮೇಶ್ವರನ, ಪ್ರಸಾದಾರ್ಥಂ=ಪ್ರಸನ್ನತೆಗೋಸುಗ, ಕೀರ್ತಿತಾನಿ=ಹೇಳಲುಪಟ್ಟವು. ನ ಸಂಶಯಃ=ಸಂದೇಹವಿಲ್ಲ. ॥೭೦॥

**ಸೂತ್ರ॥** ಬಳಿಕ ಆ ಶಿವಪ್ರಸಾದದಿಂದವೆ ಶಿವಭಕ್ತಿಪರಮುಕ್ತಿಸಿದ್ಧಿಗಳಹುದೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಪ್ರಸಾದಮೂಲಾ ಸರ್ವೇಷಾಂ ಭಕ್ತಿರವ್ಯಭಿಚಾರಿಣೀ ।**
**ಶಿವಪ್ರಸಾದಹೀನಸ್ಯ ಭಕ್ತಿಶ್ಚಾಪಿ ನ ಸಿಧ್ಯತಿ ॥**

**ಟೀಕು॥** ಸರ್ವೇಷಾಂ=ಸಮಸ್ತ ಜನರಿಗು, ಅವ್ಯಭಿಚಾರಿಣೀ ಭಕ್ತಿಃ=ವ್ಯಭಿಚಾರವಿಲ್ಲದೆಯಿದ್ದ ಶಿವಭಕ್ತಿಯು, ಪ್ರಸಾದಮೂಲಾ=ಶಿವಪ್ರಸಾದವೆ ಮೂಲಕಾರಣವಾಗುಳ್ಳ ಅದು. ಶಿವಪ್ರಸಾದ

ಹೀನಸ್ಯ=ಶಿವಪ್ರಸಾದವಿಲ್ಲದೆಯಿದ್ದಾತನಿಗೆ, ಭಕ್ತಿಶ್ಚಾಪಿ=ಶಿವಭಕ್ತಿಯಾಯಿತ್ತಾದೊಡೆಯು, ನ ಸಿಧ್ಯತಿ=ಸಿದ್ಧಿಸುತ್ತಿರದು. ||೨೦||

ಗ್ರಂಥ|| **ಗರ್ಭಸ್ಥೋ ಜಾಯಮಾನೋ ವಾ ಜಾತೋ ವಾ ಬ್ರಾಹ್ಮಣೋಽಥ ವಾ ।**
**ಅಂತ್ಯಜೋ ವಾಽಪಿ ಮುಚ್ಯೇತ ಪ್ರಸಾದೇ ಸತಿ ಶಾಂಕರೇ ॥**

**ಟೀಕು||** ಗರ್ಭಸ್ಥಃ ವಾ=ಗರ್ಭದಲ್ಲಿಯಿರುತ್ತಿದ್ದಾತನಾಯಿತ್ತಾದೊಡೆಯು, ಜಾಯಮಾನೋ ವಾ=ಹುಟ್ಟುತ್ತಿದ್ದಾತನಾಯಿತ್ತಾದೊಡೆಯು, ಜಾತೋಃ ವಾ=ಹುಟ್ಟಿದಾತನಾಯಿತ್ತಾದೊಡೆಯು, ಬ್ರಾಹ್ಮಣೋಽಥ ವಾ=ಬ್ರಾಹ್ಮಣನಾಯಿತ್ತಾದೊಡೆಯು,ಅಂತ್ಯಜೋಃ ವಾಽಪಿ=ಶ್ವಪಚನಾಯಿತ್ತಾದೊಡೆಯು, ಶಾಂಕರೇ ಪ್ರಸಾದೇ ಸತಿ=ಶಿವಪ್ರಸಾದವಾಗಲಿಕೆಯಾಗಿ, ಮುಚ್ಯೇತ=ಮುಕ್ತನಾಗುವನು. ||೨೧||

**ಸೂತ್ರ||** ಬಳಿಕ ಬ್ರಹ್ಮಾದಿಗಳು ಶಿವಪ್ರಸಾದದಿಂದವೆ ನಿತ್ಯಸಿದ್ಧರೆಂದು ಹೇಳುತ್ತಿರ್ದಪಂ.

ಗ್ರಂಥ|| **ಬ್ರಹ್ಮಾದ್ಯಾ ವಿಬುಧಾಸ್ಸರ್ವೇ ಸ್ವಸ್ವಸ್ಥಾನನಿವಾಸಿನಃ ।**
**ನಿತ್ಯಸಿದ್ಧಾ ಭವಂತ್ಯೇವ ಪ್ರಸಾದಾತ್ಪಾರಮೇಶ್ವರಾತ್ ॥**

**ಟೀಕು||** ಸ್ವಸ್ವಸ್ಥಾನನಿವಾಸಿನಃ=ತಮ್ಮ ತಮ್ಮ ಪದದಲ್ಲಿಯಿರುತ್ತಿರ್ದ್ದ, ಬ್ರಹ್ಮಾದ್ಯಾಃ=ಬ್ರಹ್ಮವಿಷ್ಣು ಮೊದಲಾಗುಳ್ಳ, ಸರ್ವೇ ವಿಬುಧಾಃ=ಸಮಸ್ತ ದೇವತೆಗಳು, ಪಾರಮೇಶ್ವರಾತ್-ಪರಮೇಶ್ವರ ಸಂಬಂಧವಾದ, ಪ್ರಸಾದಾತ್=ಪ್ರಸಾದದದೆಸೆಯಿಂದೆ, ನಿತ್ಯಸಿದ್ಧಾಃ=ನಿತ್ಯಸಿದ್ಧರು, ಭವಂತ್ಯೇವ=ಆಗುತ್ತಿರ್ದ್ದಪರೆ. ||೨೨||

**ಸೂತ್ರ||** ಬಳಿಕ "ಭೋಕ್ತಾ ಭೋಗ್ಯಂ ಪ್ರೇರಯಿತಾ ಭೋಗೋಪಕರಣಾನಿ ಚ।
ಸರ್ವಂ ಶಿವಮಯಂ ಭಾತಿ ಪ್ರಾಸಾದಾತ್ಪಾರಮೇಶ್ವರಾತ್"|| ಯೆಂಬ ಸೂತಸಂಹಿತಾರ್ಥವನು ಪ್ರಕಟಿಸುತ್ತ ಶಿವಪ್ರಸಾದದಿಂದೆ ಸರ್ವವೂ ಶಿವಸ್ವರೂಪವಹುದೆಂದು ಹೇಳುತ್ತಿರ್ದ್ದಪಂ.

ಗ್ರಂಥ|| **ಪ್ರಸಾದೇ ಶಾಂಭವೇ ಸಿದ್ಧೇ ಪರಮಾನಂದಕಾರಣೇ ।**
**ಸರ್ವಂ ಶಿವಮಯಂ ವಿಶ್ವಂ ದೃಶ್ಯತೇ ನಾತ್ರ ಸಂಶಯಃ ॥**

**ಟೀಕು||** ಪರಮಾನಂದಕಾರಣೇ=ಪರಮಾನಂದಕ್ಕೆ ಕಾರಣವಾದ, ಶಾಂಭವೇ ಪ್ರಸಾದೇ=ಶಿವಪ್ರಸಾದವು, ಸಿದ್ಧೇ ಸತಿ=ಸಿದ್ಧವಾಗಲಿಕೆಯಾಗಿ, ಸರ್ವಂ ವಿಶ್ವಂ=ಸಮಸ್ತ ಜಗತ್ತು, ಶಿವಮಯಂ=ಶಿವಸ್ವರೂಪವಾಗಿಯೆ, ದೃಶ್ಯತೇ=ಕಾಣಲುಪಡುತ್ತಿರ್ದ್ದಪುದು. ಅತ್ರ=ಇಲ್ಲಿ, ನ ಸಂಶಯಃ=ಸಂದೇಹವಿಲ್ಲ. ||೨೪||

**ಸೂತ್ರ||** ಬಳಿಕ ಶಿವಪ್ರಸಾದಮಹತ್ವವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಸಂಸಾರಚಕ್ರನಿರ್ವಾಹನಿಮಿತ್ತಂ ಕರ್ಮ ಕೇವಲಮ್ ।**
**ಪ್ರಸಾದೇನ ವಿನಾ ಶಂಭೋರ್ನ ಕಸ್ಯಾಪಿ ನಿವರ್ತತೇ ॥**

**ಟೀಕು||** ಸಂಸಾರಚಕ್ರ ನಿರ್ವಾಹ ನಿಮಿತ್ತಂ=ಸಂಸಾರ ಚಕ್ರವನು ನಿರ್ವಹಿಸುವುದಕ್ಕೆ ಕಾರಣವಾಗಿರ್ದ್ದ, ಕರ್ಮಕೇವಲಂ=ಕರ್ಮಪಾಶವೊಂದೇ, ಶಂಭೋಃ ಪ್ರಸಾದೇನ ವಿನಾ=ಶಿವಪ್ರಸಾದ ಹೊರತಾಗಿ, ಕಸ್ಯಾಪಿ=ಆವಾತನಿಗಾಯಿತ್ತಾದೊಡೆಯು, ನ ನಿವರ್ತತೇ=ತೊಲಗುತ್ತಿರದು. ||೭೫||

**ಗ್ರಂಥ||** **ಬಹುನಾಽತ್ರ ಕಿಮುಕ್ತೇನ ನಾಸ್ತಿ ನಾಸ್ತಿ ಜಗತ್ರಯೇ ।**
**ಸಮಾನಮಧಿಕಂ ಚಾಪಿ ಪ್ರಸಾದಸ್ಯ ಮಹೇಶಿತುಃ ॥**

**ಟೀಕು||** ಅತ್ರ=ಇಲ್ಲಿ, ಬಹುನೋಕ್ತೇನ ಕಿಂ=ಹಲವು ಮಾತಿನಿಂದೇನು? ಜಗತ್ತ್ರಯೇ=ಮೂರು ಲೋಕದಲ್ಲಿಯೇ, ಮಹೇಶಿತುಃ=ಪರಮೇಶ್ವರನ, ಪ್ರಸಾದಸ್ಯ=ಪ್ರಸಾದಕ್ಕೆ, ಸಮಾನಂ=ಸಮಾನವು, ಅಧಿಕಂ ಚಾಪಿ=ಅಧಿಕವಾಗಿದ್ದವಾಯಿತ್ತಾದೊಡೆಯು, ನಾಸ್ತಿ ನಾಸ್ತಿ=ಇಲ್ಲ ಇಲ್ಲ. ||೭೬||

**ಸೂತ್ರ||** ಬಳಿಕ ಶಿವಪ್ರಸಾದ ಸಿದ್ಧನಾದ ಪ್ರಸಾದಿಯೆ ಪ್ರಾಣಲಿಂಗಿಯೆಂದು ಹೇಳುತ್ತಿರ್ದ್ದಪಂ.

**ವೃತ್ತ||** **ಶಿವಪ್ರಸಾದೇ ಸತಿ ಯೋಗಭಾಜಿ ಸರ್ವಂ ಶಿವೈಕಾತ್ಮತಯಾ ವಿಭಾತಿ ।**
**ಸ್ವಕರ್ಮಮುಕ್ತಃ ಶಿವಭಾವಿತಾತ್ಮಾ ಸ ಪ್ರಾಣಲಿಂಗೀತಿ ನಿಗದ್ಯತೇಽಸೌ ॥**

**ಟೀಕು||** ಯೋಗಭಾಜಿ=ಸ್ವರೂಪವಾಗಿ ಸ್ವರೂಪವೃದ್ಧಿಯಿಲ್ಲದೆ ಸಜಾತೀಯವಾಗಿ, ಸಮಾನಾ= ಸಮಾನವಾದ ಶಿವಯೋಗವನು ಭಜಿಸುತ್ತಿರ್ದ್ದ, ಶಿವಪ್ರಸಾದೇ ಸತಿ=ಶಿವಪ್ರಸಾದವು ಸಿದ್ಧವಾಗಲಿಕೆಯಾಗಿ, ಸರ್ವಂ=ಸಮಸ್ತ ಜಗತ್ತು, ಶಿವೈಕಾತ್ಮತಯಾ=ಶಿವನೊಡನೆ ಏಕಾತ್ಮವಹತನದಿಂದೆ, ವಿಭಾತಿ=ಒಪ್ಪುತ್ತಿರ್ದ್ದಪುದು. ಅತ ಏವ=ಇದು ಕಾರಣವಾಗಿ, ಶಿವಭಾವಿತಾತ್ಮಾ=ಶಿವ ಸ್ವರೂಪಿನಿಂದೆ ಭಾವಿಸಲುಪಟ್ಟ ಆತ್ಮಸ್ವರೂಪವುಳ್ಳ, ಅಸೌ=ಆ ಈ ಪ್ರಸಾದಿಯು, ಸ್ವಕರ್ಮಮುಕ್ತಃ ಸನ್= ತನ್ನ ಕರ್ಮಪಾಶದಿಂದೆ ಬಿಡಲುಪಟ್ಟಾತನಾಗತಲು, ಸಃ=ಆತನ, ಪ್ರಾಣಲಿಂಗೀತಿ=ಪ್ರಾಣಲಿಂಗಿಯೆಂದು, ನಿಗದ್ಯತೇ= ಹೇಳಲುಪಡುತ್ತಿರ್ದ್ದಪನು. ||೭೭||

**ಇತಿ ಶಿವಪ್ರಸಾದಮಹತ್ವಸ್ಥಲಮ್**

**ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಪ್ರಸಾದಿನಶ್ಚ ಸಪ್ತವಿಧಸ್ಥಲಪ್ರಸಂಗೋ ನಾಮ ಏಕಾದಶಃ ಪರಿಚ್ಛೇದಃ ಸಮಾಪ್ತಃ**

## ಪ್ರಾಣಲಿಂಗಿನಃ ಪಂಚಸ್ಥಲಪ್ರಸಂಗಃ
## ಚತುರ್ಥಂ ಪ್ರಾಣಲಿಂಗಿಸ್ಥಲಮ್

**ಅಗಸ್ತ್ಯಮುನಿಃ ಉವಾಚ॥**

**ಸೂತ್ರ॥** ಅಗಸ್ತ್ಯಮುನಿ ಪ್ರಶ್ನೆಯ ಮಾಡಿ ಕೇಳುತ್ತಿರ್ದ್ದಪಂ.

ಗ್ರಂಥ॥ **ಭಕ್ತೋ ಮಾಹೇಶ್ವರಶ್ಚೇತಿ ಪ್ರಸಾದೀತಿ ನಿಬೋಧಿತಃ ।**
**ಏಕ ಏವ ಕಥಂ ಚೈಷಃ ಪ್ರಾಣಲಿಂಗೀತಿ ಕಥ್ಯತೇ ॥**

**ಟೀಕು॥** ಏಕ ಏವ=ಒಬ್ಬನೆ, ಭಕ್ತಃ=ಭಕ್ತನೆಂದು, ಮಾಹೇಶ್ವರಶ್ಚೇತಿ=ಮಾಹೇಶ್ವರನೆಂದು, ಪ್ರಸಾದೀತಿ=ಪ್ರಸಾದಿಯೆಂದು, ನಿಬೋಧಿತಃ=ಬೋಧಿಸಲುಪಟ್ಟನು. ಏಷಃ ಚ=ಈತನಾಯಿತ್ತಾದೊಡೆ, ಕಥಂ=ಆವಪ್ರಕಾರದಿಂದೆ, ಪ್ರಾಣಲಿಂಗೀತಿ=ಪ್ರಾಣಲಿಂಗಿಯೆಂದು, ಕಥ್ಯತೇ=ಹೇಳಲುಪಡುತ್ತಿರ್ದ್ದಪನು? ॥೧॥

**ರೇಣುಕ ಉವಾಚ॥**

**ಸೂತ್ರ॥** ರೇಣುಕಗಣೇಶ್ವರನು ಉತ್ತರವನು ನಿರೂಪಿಸುತ್ತಿರ್ದ್ದಪಂ

ಗ್ರಂಥ॥ **ಭಕ್ತೋ ಮಾಹೇಶ್ವರಶ್ಚೈಷಃ ಪ್ರಸಾದೀತಿ ಚ ಕೀರ್ತಿತಃ ।**
**ಕರ್ಮಪ್ರಾಧಾನ್ಯಯೋಗೇನ ಜ್ಞಾನಯೋಗೋಽಸ್ಯ ಕಥ್ಯತೇ ॥**

**ಟೀಕು॥** ಇತಿ ಕರ್ಮಪ್ರಾಧಾನ್ಯ ಯೋಗೇನ=ಈ ಪ್ರಕಾರವಾದ ಕರ್ಮಕಾಂಡದ ಕ್ರಿಯಾಪ್ರಧಾನಯೋಗದಿಂದೆ, ಏಷಃ=ಈತನು, ಭಕ್ತಃ=ಭಕ್ತನೆಂದು, ಮಾಹೇಶ್ವರಃ=ಮಾಹೇಶ್ವರನೆಂದು, ಪ್ರಸಾದೀತಿ=ಪ್ರಸಾದಿಯೆಂದು, ಕೀರ್ತಿತಃ=ಹೇಳಲುಪಟ್ಟನು. ಅಸ್ಯ=ಈ ಪ್ರಾಣಲಿಂಗಿಗೆ, ಜ್ಞಾನಯೋಗಃ=ಜ್ಞಾನವಾಯಿತ್ತಾದೊಡೆ, ಕಥ್ಯತೇ=ಹೇಳಲುಪಡುತ್ತಿರ್ದ್ದಪುದು. ॥೨॥

**ಸೂತ್ರ॥** ಬಳಿಕ "ಸರ್ವತತ್ತ್ವಮಯಃ ಪ್ರಾಣಃ ಸರ್ವಜ್ಞಾನಮಯಃ ಶಿವಃ।
ಅನಯೋರ್ಯೋಗಮೇವೈತತ್ಪ್ರಾಣಲಿಂಗಮಿಹೋಚ್ಯತೇ"॥ಯೆಂದು ವೀರಾಗಮೋಕ್ತವಾದ ಪ್ರಾಣಲಿಂಗವುಳ್ಳಾತನೆ ಪ್ರಾಣಲಿಂಗಿಯೆಂದು ಪೇಳುತ್ತಿರ್ದ್ದಪಂ.

**ಗ್ರಂಥ||** **ಲಿಂಗಂ ಚಿದಾತ್ಮಕಂ ಬ್ರಹ್ಮ ತಚ್ಛಕ್ತಿಃ ಪ್ರಾಣರೂಪಿಣೀ ।**
**ತದ್ರೂಪಲಿಂಗವಿಜ್ಞಾನೀ ಪ್ರಾಣಲಿಂಗೀತಿ ಕಥ್ಯತೇ ॥**

**ಟೀಕು||** ಚಿದಾತ್ಮಕಂ ಬ್ರಹ್ಮ=ಚಿದ್ರೂಪವಾದ ಪರಬ್ರಹ್ಮವೆ, ಲಿಂಗಂ=ಶಿವಲಿಂಗವು; ತಚ್ಛಕ್ತಿ=ಆ ಶಿವಲಿಂಗದ ಶಕ್ತಿಯು, ಪ್ರಾಣರೂಪಿಣೀ=ಪ್ರಣವಸ್ವರೂಪವಾದ ಪ್ರಾಣವೆ ಸ್ವರೂಪವಾಗುಳ್ಳ ಅದು, ತದ್ರೂಪಲಿಂಗವಿಜ್ಞಾನೀ=ಆ ಪ್ರಕಾರವಾದ ಶಿವಲಿಂಗವನರಿವುತ್ತಿರ್ದ್ದಾತನು, ಪ್ರಾಣಲಿಂಗೀತಿ=ಪ್ರಾಣ ಲಿಂಗಿಯೆಂದು, ಕಥ್ಯತೇ=ಹೇಳಲುಪಡುತ್ತಿರ್ದ್ದಪನು. ||೩||

**ಸೂತ್ರ||** ಬಳಿಕ ಪ್ರಾಣಲಿಂಗಿಯ ಅವಾಂತರಸ್ಥಲ ಭೇದವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಪ್ರಾಣಲಿಂಗಿಸ್ಥಲಂ ಚೈತತ್ಪಂಚಸ್ಥಲಸಮನ್ವಿತಮ್ ।**
**ಪ್ರಾಣಲಿಂಗಿಸ್ಥಲಂ ಚಾದೌ ಪ್ರಾಣಲಿಂಗಾರ್ಚನಂ ತತಃ ॥**

**ಶಿವಯೋಗಸಮಾಧಿಶ್ಚ ತತೋ ಲಿಂಗನಿಜಸ್ಥಲಮ್ ।**
**ಅಂಗಲಿಂಗಸ್ಥಲಂ ಚಾಥ ಕ್ರಮಾದೇಷಾಂ ಭಿದೋಚ್ಯತೇ ॥**

**ಟೀಕು||** ಏತತ್ ಪ್ರಾಣಲಿಂಗಿಸ್ಥಲಂ=ಈ ಪ್ರಾಣಲಿಂಗಿಸ್ಥಲವು, ಪಂಚಸ್ಥಲಸಮನ್ವಿತಂ=ಐದು ಅವಾಂತರಸ್ಥಲದೊಡನೆ ಕೂಡಿರ್ದ್ದ ಅದು. ಆದೌ ಚ=ಮೊದಲಲ್ಲಿ, ಪ್ರಾಣಲಿಂಗಿಸ್ಥಲಂ=ಪ್ರಾಣಲಿಂಗಿ ಸ್ಥಲವು, ತತಃ=ಬಳಿಕ, ಪ್ರಾಣಲಿಂಗಾರ್ಚನಂ=ಪ್ರಾಣಲಿಂಗಾರ್ಚನ ಸ್ಥಲವು, ತತಃ=ಬಳಿಕ, ಶಿವಯೋಗಸಮಾಧಿಶ್ಚ=ಶಿವಯೋಗಸಮಾಧಿಸ್ಥಲವು, ತತಃ=ಬಳಿಕ, ಲಿಂಗನಿಜಸ್ಥಲಂ= ಲಿಂಗನಿಜಸ್ಥಲವು, ಅಥ=ಅನಂತರದಲ್ಲಿ, ಅಂಗಲಿಂಗಸ್ಥಲಂ ಚ=ಅಂಗಲಿಂಗಸ್ಥಲವು, ಏಷಾಂ=ಈ ಸ್ಥಲಂಗಳ, ಭಿದಾ=ಭೇದವು, ಕ್ರಮಾತ್=ಕ್ರಮದಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೫||

## ೩.೨. ಪ್ರಾಣಲಿಂಗಿಸ್ಥಲೇ ಪ್ರಾಣಲಿಂಗಿಸ್ಥಲಮ್

**ಸೂತ್ರ||** ಬಳಿಕ "ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ"ಯೆಂಬ ಅಥರ್ವಶಿಖಾರ್ಥವನು,
"ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ।
ಮಧ್ಯೇ ವಾಮನಮಾಸೀನಂ ವಿಶ್ವೇದೇವಾ ಉಪಾಸತೇ"|| ಯೆಂಬ ಕಠವಲ್ಲೀ ಶ್ರುತ್ಯರ್ಥವನು ಪ್ರಕಾಶಿಸುತ್ತ ಪ್ರಾಣಲಿಂಗಿಸ್ಥಲವನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಪ್ರಾಣಾಪಾನಸಮಾಘಾತಾತ್ಕಂದಮಧ್ಯಾದ್ಯದುತ್ಥಿತಮ್ ।**
**ಪ್ರಾಣಲಿಂಗಂ ತದಾಖ್ಯಾತಂ ಪ್ರಾಣಾಪಾನನಿರೋಧಿಭಿಃ ॥**

ಟೀಕು॥ ಪ್ರಾಣಾಪಾನಸಮಾಘಾತಾತ್=ದೇಸಿಕೋಪದೇಶದಿಂದೆ ಪ್ರಾಣಾಪಾನಸಂಘಟ್ಟವಾಗಲಾಗಿ, ಯತ್=ಆವುದಾನೊಂದು ಜ್ಯೋತಿಯು, ಕಂದಮಧ್ಯಾತ್=[ನಾಭಿ]ಕಂದಮಧ್ಯದದೆಸೆಯಿಂದೆ, ಯತ್ ಉತ್ಥಿತಂ=ಹುಟ್ಟಿರ್ದ್ದ ಅದು, ತತ್=ಆ ಜ್ಯೋತಿಯು, ಪ್ರಾಣಲಿಂಗಂ=ಪ್ರಾಣಲಿಂಗವೆಂದು, ಪ್ರಾಣಾಪಾನನಿರೋಧಿಭಿಃ=ಪ್ರಾಣಾಪಾನನಿರೋಧವುಳ್ಳ ಶಿವಯೋಗಿಗಳಿಂದೆ, ಆಖ್ಯಾತಂ=ಹೇಳಲು ಪಟ್ಟಿತ್ತು. ॥೬॥

ಗ್ರಂಥ॥ ಪ್ರಾಣೋ ಯತ್ರ ಲಯಂ ಯಾತಿ ಭಾಸ್ಕರೇ ತುಹಿನಂ ಯಥಾ
ತತ್ಪ್ರಾಣಲಿಂಗಮುದ್ದಿಷ್ಟಂ ತದ್ಧಾರೀ ಸ್ಯಾತ್ತದಾಕೃತಿಃ

ಟೀಕು॥ ಪ್ರಾಣಃ=ಪ್ರಾಣವು, ಯತ್ರ=ಆವುದಾನೊಂದು ಲಿಂಗದಲ್ಲಿ, ಲಯಂ=ಲಯವನು, ಭಾಸ್ಕರೇ=ಸೂರ್ಯನಲ್ಲಿ, ತುಹಿನಂ ಯಥಾ=ಹಿಮದೋಪಾದಿಯಲ್ಲಿ, ಯಾತಿ=ಎಯ್ದುತ್ತಿರ್ದ್ದಪುದು. ತತ್=ಅದು, ಪ್ರಾಣಲಿಂಗಂ=ಪ್ರಾಣಲಿಂಗವೆಂದು, ಉದ್ದಿಷ್ಟಂ=ಉದ್ದೇಶಿಸಲುಪಟ್ಟಿತ್ತು. ತದ್ಧಾರೀ=ಆ ಪ್ರಾಣಲಿಂಗಧಾರಕನು, ತದಾಕೃತಿಃ=ಆ ಪ್ರಾಣಲಿಂಗಸ್ವರೂಪವುಳ್ಳ ಆತನು, ಸ್ಯಾತ್=ಅಹನು. ॥೭॥

ಗ್ರಂಥ॥ ಜ್ಞಾನಿನಾಂ ಯೋಗಯುಕ್ತಾನಾಮಂತಃ ಸ್ಫುರತಿ ದೀಪವತ್
ಚಿದಾಕಾರಂ ಪರಂ ಬ್ರಹ್ಮ ಲಿಂಗಮಜ್ಞೈರ್ನ ಭಾವ್ಯತೇ

ಟೀಕು॥ ಚಿದಾಕಾರಂ=ಅರಿವೆ ಸ್ವರೂಪವಾಗುಳ್ಳ, ಪರಂ ಬ್ರಹ್ಮ=ಪರಬ್ರಹ್ಮರೂಪವಾದ, ಲಿಂಗಂ=ಪ್ರಾಣಲಿಂಗವು, ಯೋಗಯುಕ್ತಾನಾಂ=ಶಿವಯೋಗದೊಡನೆ ಕೂಡಿರ್ದ್ದ, ಜ್ಞಾನಿನಾಂ=ಶಿವ ಜ್ಞಾನಿಗಳ, ಅಂತಃ=ಹೃದಯಕಮಲದಲ್ಲಿ, ದೀಪವತ್=ದೀಪದೋಪಾದಿಯಲ್ಲಿ, ಸ್ಫುರತಿ=ಪ್ರಕಾಶಿಸು ತ್ತಿರ್ದ್ದಪುದು. ಅಜ್ಞೈಃ=ಗುರೂಪದೇಶರಹಿತರಾದ ಅಜ್ಞಾನಿಗಳಿಂದೆ, ನ ಭಾವ್ಯತೇ=ಭಾವಿಸಲು ಪಡುತ್ತಿರದು.

ತಾತ್ಪರ್ಯ॥ "ಹೃದಯೇ ವೈ ಬ್ರಹ್ಮ ಸೋಮಸೂರ್ಯಾಗ್ನಿಮಂಡಲೇ।
ನಿವಾತದೀಪೋಪಮಸ್ಥಾಯಿ ಹೃದ್ಯಂತರ್ಜ್ಯೋತಿಃ ಪುರುಷಃ"॥ ಯೆಂಬ ಮೊದಲಾದ ಸರ್ವೋಪನಿಷತ್ತುಗಳಲ್ಲಿ ಪ್ರಸಿದ್ಧವಾದ ಪ್ರಾಣಲಿಂಗಸ್ವರೂಪವು ಉಪದೇಶಹೀನರಿಗೆ ಆಗದೆಂಬುದರ್ಥ. ॥೮॥

ಸೂತ್ರ॥ ಬಳಿಕ "ಆತ್ಮಸ್ಥಮತ್ಯಂತರುಚಿಂ ಪ್ರಶಾಂತಮ್"॥ಯೆಂಬ ಶಿವಯೋಗಪ್ರದೀಪಿಕಾ ಸೂತ್ರಾರ್ಥವನು ಸೂತ್ರತ್ರಯದಿಂದೆ ಪ್ರಕಟಿಸುತ್ತಿರ್ದ್ದಪಂ.

ಗ್ರಂಥ॥ ಅಂತಃಸ್ಥಿತಂ ಪರಂ ಲಿಂಗಂ ಜ್ಯೋತೀರೂಪಂ ಶಿವಾತ್ಮಕಮ್
ವಿಹಾಯ ಬಾಹ್ಯಲಿಂಗಸ್ಥಾ ವಿಮೂಢಾಃ ಇತಿ ಕೀರ್ತಿತಾಃ

**ಟೀಕು||** ಜ್ಯೋತೀರೂಪಂ=ಜ್ಯೋತಿರ್ಮಯವಾಗಿ, ಅಂತಃಸ್ಥಿತಂ=ಹೃತ್ಕಂಜಮಧ್ಯದಲ್ಲಿಯಿರುತ್ತಿರ್ದ್ದ, ಶಿವಾತ್ಮಕಂ=ಶಿವಸ್ವರೂಪವಾದ, ಪರಂ ಲಿಂಗಂ=ಸರ್ವೋತ್ಕರ್ಷವಾದ ಪ್ರಾಣಲಿಂಗವನು, ವಿಹಾಯ=ಬಿಟ್ಟು, ಬಾಹ್ಯಲಿಂಗಸ್ಥಾ=ಬಾಹ್ಯಲಿಂಗದಲ್ಲಿ ತತ್ಪರರಾಗಿ ಇರುತ್ತಿರ್ದ್ದ ಅವರು, ವಿಮೂಢಾಃ ಇತಿ=ವಿಶೇಷವಾದ ಮೂಢರೆಂದು, ಕೀರ್ತಿತಾಃ=ಹೇಳಲುಪಟ್ಟುದು. ||೯||

**ಗ್ರಂಥ||**
**ಸಂವಿಲ್ಲಿಂಗಪರಾಮರ್ಶೀ ಬಾಹ್ಯವಸ್ತುಪರಾಙ್ಮುಖಃ ।**
**ಯಸ್ಸದಾ ವರ್ತತೇ ಯೋಗೀ ಪ್ರಾಣಲಿಂಗೀ ಸ ಉಚ್ಯತೇ ॥**

**ಟೀಕು||** ಯಃ=ಆವನಾನೊಬ್ಬನು, ಬಾಹ್ಯವಸ್ತುಪರಾಙ್ಮುಖಃ=ಬಾಹ್ಯಲಿಂಗಪೂಜಾದಿಗಳಲ್ಲಿ ಅಡ್ಡಲಾದ ಮುಖವುಳ್ಳಾತನಾಗಿ, ಸದಾ=ಎಲ್ಲಾಕಾಲದಲ್ಲಿಯು, ಸಂವಿಲ್ಲಿಂಗಪರಾಮರ್ಶೀ=ಅಭ್ಯಂತರದಲ್ಲಿ ಚಿದ್ರೂಪವಾದ ಪ್ರಾಣಲಿಂಗವಿಚಾರವುಳ್ಳಾತನಾಗಿ, ವರ್ತತೇ=ಇರುತ್ತಿರ್ದ್ದಪನು. ಸ ಯೋಗೀ= ಆ ಶಿವಯೋಗೀಶ್ವರನು, ಪ್ರಾಣಲಿಂಗೀತಿ=ಪ್ರಾಣಲಿಂಗಿಯೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ||೧೦||

**ಗ್ರಂಥ||**
**ಮಾಯಾವಿಕಲ್ಪಜಂ ವಿಶ್ವಂ ಹೇಯಂ ಸಂಚಿಂತ್ಯ ನಿತ್ಯಶಃ ।**
**ಚಿದಾನಂದಮಯೇ ಲಿಂಗೇ ವಿಲೀನಃ ಪ್ರಾಣಲಿಂಗವಾನ್ ॥**

**ಟೀಕು||** ಮಾಯಾವಿಕಲ್ಪಜಂ=ಮಾಯಾವಿಕಲ್ಪದಿಂದೆ ಹುಟ್ಟಿದ, ವಿಶ್ವಂ=ಸಮಸ್ತಪ್ರಪಂಚನು, ಹೇಯಂ=ಬಿಡಲುಯೋಗ್ಯವಾಗಿದ್ದುದನಾಗಿ, ನಿತ್ಯಶಃ=ಎಲ್ಲಾಕಾಲದಲ್ಲಿಯು, ಸಂಚಿಂತ್ಯ=ಧ್ಯಾನಿಸಿ, ಚಿದಾನಂದಮಯೇ=ಚಿದಾನಂದಾತ್ಮಕವಾದ, ಲಿಂಗೇ=ಪ್ರಾಣಲಿಂಗದಲ್ಲಿ, ವಿಲೀನಂಃ=ಮನೋಲಯ ವುಳ್ಳಾತನೀಗ, ಪ್ರಾಣಲಿಂಗವಾನ್=ಪ್ರಾಣಲಿಂಗಿಯು. ||೧೧||

**ಸೂತ್ರ||** ಬಳಿಕ ಪ್ರಾಣಲಿಂಗಿಸ್ಥಲವನು ಮುಗಿಸುತ್ತಿರ್ದ್ದಪಂ.

**ಗ್ರಂಥ||**
**ಸತ್ತಾ ಪ್ರಾಣಮಯೀ ಶಕ್ತಿಃ ಸದ್ರೂಪಂ ಪ್ರಾಣಲಿಂಗಕಮ್ ।**
**ತತ್ಸಾಮರಸ್ಯವಿಜ್ಞಾನಾತ್ಪ್ರಾಣಲಿಂಗೀತಿ ಕಥ್ಯತೇ ॥**

**ಟೀಕು||** ಸತ್ತಾ=ಸದ್ರೂಪವಾದ, ಶಕ್ತಿಃ=ಶಿವಶಕ್ತಿಯೇ, ಪ್ರಾಣಮಯೀ=ಪ್ರಣವರೂಪವಾದ ಪ್ರಾಣವೆ ಸ್ವರೂಪವಾಗುಳ್ಳ ಅದು, ಪ್ರಾಣಲಿಂಗಕಂ=ಪ್ರಾಣಲಿಂಗವೆ. ಸದ್ರೂಪಂ=ಸದ್ರೂಪವುಳ್ಳ ಅದು, ತತ್ಸಾಮರಸ್ಯವಿಜ್ಞಾನಾತ್=ಸದ್ರೂಪವಾದ ಶಕ್ತಿಗಳ ಸಮರಸಜ್ಞಾನದದೆಸೆಯಿಂದೆ, ಪ್ರಾಣಲಿಂಗೀತಿ=ಪ್ರಾಣಲಿಂಗಿಯೆಂದು, ಕಥ್ಯತೇ=ಹೇಳಲುಪಡುತ್ತಿರ್ದ್ದಪನು. ||೧೨||

**ಇತಿ ಪ್ರಾಣಲಿಂಗಿಸ್ಥಲಮ್**

## ೩೩. ಪ್ರಾಣಲಿಂಗಿಸ್ಥಲೇ ಪ್ರಾಣಲಿಂಗಾರ್ಚನಸ್ಥಲಮ್

**ಸೂತ್ರ||** ಬಳಿಕ ಸರ್ವಯೋಗಶಾಸ್ತ್ರಪ್ರಸಿದ್ಧನಾದ ಪ್ರಾಣಲಿಂಗಿಯಿಂದೆ ಮಾಡಲು ಯೋಗ್ಯವಾದ ಪ್ರಾಣಲಿಂಗಾರ್ಚನೆಯನು ಸಪ್ತಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ||**

**ಅಂತರ್ಗತಂ ಚಿದಾಕಾರಂ ಲಿಂಗಂ ಶಿವಮಯಂ ಪರಮ್ ।**
**ಪೂಜ್ಯತೇ ಭಾವಪುಷ್ಪೈರ್ಯತ್ಪ್ರಾಣಲಿಂಗಾರ್ಚನಂ ಹಿ ತತ್ ॥**

**ಟೀಕು||** ಅಂತರ್ಗತಂ=ಹೃತ್ಕಮಲವನು ಎಯ್ದಿರ್ದ್ದ, ಚಿದಾಕಾರಂ=ಅರಿವೆಸ್ವರೂಪವಾಗುಳ್ಳ, ಪರಂ=ಸರ್ವೋತ್ಕರ್ಷವಾಗಿರ್ದ್ದ, ಯತ್=ಆವುದಾನೊಂದು, ಶಿವಮಯಂ ಲಿಂಗಂ=ಶಿವಸ್ವರೂಪವಾದ ಪ್ರಾಣಲಿಂಗವು, ಭಾವಪುಷ್ಪೈಃ=ಭಾವಪುಷ್ಪಂಗಳಿಂದೆ, ಪೂಜ್ಯತೇ=ಪೂಜಿಸಲುಪಡುತ್ತಿರ್ದ್ದಪುದು, ತತ್=ಅದು, ಪ್ರಾಣಲಿಂಗಾರ್ಚನಂ=ಪ್ರಾಣಲಿಂಗಪೂಜೆಯು, ಹಿ=ಪ್ರಸಿದ್ಧವು. ||೧೩||

**ಸೂತ್ರ||** ಬಳಿಕ ಪ್ರಾಣಲಿಂಗಾಶ್ರಯವಾದ ಊರ್ಧ್ವ ಹೃದಯಕಮಲವನು ಪ್ರಕಟಿಸುತ್ತಿರ್ದ್ದಪಂ.

**ಗ್ರಂಥ||**

**ಅಂತಃಪವನಸಂಸ್ಪೃಷ್ಟೇ ಸುಸೂಕ್ಷ್ಮಾಂಬರಶೋಭಿತೇ ।**
**ಮೂರ್ಧನ್ಯಚಂದ್ರವಿಗಲತ್ಸುಧಾಸೇಕಾತಿಶೀತಲೇ ॥**

**ಬದ್ಧೇಂದ್ರಿಯನವದ್ವಾರೇ ಬೋಧದೀಪೇ ಹೃದಾಲಯೇ ।**
**ಪದ್ಮಪೀಠೇ ಸಮಾಸೀನಂ ಚಿಲ್ಲಿಂಗಂ ಶಿವವಿಗ್ರಹಮ್ ।**
**ಭಾವಯಿತ್ವಾ ಸದಾಕಾಲಂ ಪೂಜಯೇದ್ಭಾವವಸ್ತುಭಿಃ ॥**

**ಟೀಕು||** ಅಂತಃಪವನಸಂಸ್ಪೃಷ್ಟೇಃ=ಪ್ರಾಣವಾಯುವಿನಿಂದೆ ವ್ಯಾಪಿಸಲುಪಟ್ಟ, ಸುಸೂಕ್ಷ್ಮಾಂಬರಶೋಭಿತೇ=ಪರಮಸೂಕ್ಷ್ಮವಾದಾಕಾಶದಿಂದೆ ಒಪ್ಪುತ್ತಿರ್ದ್ದ, ಮೂರ್ಧನ್ಯಚಂದ್ರವಿಗಲತ್=ಬ್ರಹ್ಮರಂಧ್ರದಲ್ಲಿಯ ಪೂರ್ಣಚಂದ್ರನದೆಸೆಯಿಂದೆ ಒಸರುತ್ತಿದ್ದ, ಸುಧಾಸೇಕಾತಿಶೀತಲೇ=ಅಮೃತಸೇಚನೆಯಿಂದೆ ಅತ್ಯಂತ ಶೈತ್ಯವಾಗಿದ್ದ, ಬದ್ಧೇಂದ್ರಿಯನವದ್ವಾರೇ=ಕಟ್ಟಲುಪಟ್ಟ ಇಂದ್ರಿಯಂಗಳೆಂಬ ಒಂಭತ್ತು ಬಾಗಿಲುಳ್ಳ, ಬೋಧದೀಪೇ=ಶಿವಜ್ಞಾನದೀಪವುಳ್ಳ, ಹೃದಾಲಯೇ=ಹೃದಯವೆಂಬ ಮನೆಯಲ್ಲಿ, ಪದ್ಮಪೀಠೇ ಸಮಾಸೀನಂ=ಅಷ್ಟದಳಕಮಲದ ಕರ್ಣಿಕೆಯಲ್ಲಿಯಿರುತ್ತಿರ್ದ್ದ, ಶಿವವಿಗ್ರಹಂ=ಪರಮಶಿವನಿಗೆ ದೇಹವಾಗಿದ್ದ, ಚಿಲ್ಲಿಂಗಂ=ಚಿದ್ರೂಪವಾದ ಪ್ರಾಣಲಿಂಗವನು, ಭಾವಯಿತ್ವಾ=ಗುರೂಪದೇಶದಿಂದೆ ಸಾಕ್ಷಾತ್ಕರಿಸಿ ಧ್ಯಾನಿಸಿ, ಭಾವವಸ್ತುಭಿಃ=ಭಾವದ್ರವ್ಯಂಗಳಿಂದವೆ, ಸದಾಕಾಲಂ=ಎಲ್ಲಾಕಾಲದಲ್ಲಿಯೂ, ಪೂಜಯೇತ್=ಪೂಜಿಸುವುದು. ||೧೪||

**ಸೂತ್ರ||** ಬಳಿಕ ಪೂಜಾವಿಧಿಯನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಕ್ಷಮಾಭಿಷೇಕಸಲಿಲಂ ವಿವೇಕೋ ವಸ್ತ್ರಮುಚ್ಯತೇ ।
ಸತ್ಯಮಾಭರಣಂ ಪ್ರೋಕ್ತಂ ವೈರಾಗ್ಯಂ ಪುಷ್ಪಮಾಲಿಕಾ ॥

ಗಂಧಸ್ಸಮಾಧಿಸಂಪತ್ತಿರಕ್ಷತಾ ನಿರಹಂಕೃತಿಃ ।
ಶ್ರದ್ಧಾಧೂಪೋ ಮಹಾಜ್ಞಾನಂ ಜಗದ್ಭಾಸಿಪ್ರದೀಪಿಕಾ ॥

ಭ್ರಾಂತಿಮೂಲಪ್ರಪಂಚಸ್ಯ ನೈವೇದ್ಯಂ ತನ್ನಿವೇದನಮ್ ।
ಮೌನಂ ಘಂಟಾಪರಿಸ್ಪಂದಸ್ತಾಂಬೂಲಂ ವಿಷಯಾರ್ಪಣಮ್ ॥

ವಿಷಯಭ್ರಾಂತಿರಾಹಿತ್ಯಂ ತತ್ಪ್ರದಕ್ಷಿಣಕಲ್ಪನಾ ।
ಬುದ್ಧೇಸ್ತದಾತ್ಮಿಕಾ ಶಕ್ತಿರ್ನಮಸ್ಕಾರಕ್ರಿಯಾ ಮತಾ ॥

ಏವಂವಿಧೈರ್ಭಾವಶುದ್ಧೈರುಪಚಾರೈರದೂಷಿತೈಃ ।
ಪ್ರತ್ಯಙ್ಮುಖಮನಾ ಭೂತ್ವಾ ಪೂಜಯೇಲ್ಲಿಂಗಮಾಂತರಮ್ ॥

**ಟೀಕು॥** ಕ್ಷಮಾ=ಸೈರಣೆಯೆ, ಅಭಿಷೇಕಸಲಿಲಂ=ಅಭಿಷೇಕೋದಕವು;ವಿವೇಕಃ=ವಿವೇಕವೆ, ವಸ್ತ್ರಂ=ವಸ್ತ್ರವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ಸತ್ಯಂ=ಸತ್ಯವೆ, ಆಭರಣಂ=ಆಭರಣ ವೆಂದು, ಪ್ರೋಕ್ತಂ=ಹೇಳಲುಪಟ್ಟಿತ್ತು. ವೈರಾಗ್ಯಂ=ವೈರಾಗ್ಯವೆ, ಪುಷ್ಪಮಾಲಿಕಾ=ಪುಷ್ಪಮಾಲೆಯು; ಸಮಾಧಿಸಂಪತ್ತಿಃ=ಸಮಾಧಿಸಂಪತ್ತಿಯೆ, ಗಂಧಃ=ಗಂಧವು. ನಿರಹಂಕೃತಿಃ=ನಿರಹಂಕಾರವೆ, ಅಕ್ಷತಾಃ=ಅಕ್ಷತೆಯು. ಶ್ರದ್ಧಾ=ಶ್ರದ್ಧೆಯೆ, ಧೂಪಃ=ಧೂಪವು; ಮಹಾಜ್ಞಾನಂ=ದೊಡ್ಡಿತ್ತಾದ ಶಿವಜ್ಞಾನವೆ, ಜಗದ್ಭಾಸಿಪ್ರದೀಪಿಕಾ=ಜಗತ್ತನು ಪ್ರಕಾಶಿಸುತ್ತಿರ್ದ್ದ ದೀಪವು. ಭ್ರಾಂತಿಮೂಲಪ್ರಪಂಚಸ್ಯ=ಭ್ರಾಂತಿಗೆ ಮೂಲಕಾರಣವಾದ ಪ್ರಪಂಚಿನ, ನೈವೇದ್ಯಂ=ನೈವೇದ್ಯವೀಗ, ತಂ ನಿವೇದನಂ=ಆ ಲಿಂಗಕ್ಕೆ ಸಮರ್ಪಿಸಲುಪಟ್ಟ ನೈವೇದ್ಯವು; ಮೌನಂ=ಮೌನಮುದ್ರೆಯೆ, ಘಂಟಾಪರಿಸ್ಪಂದಃ=ಘಂಟಾನಾದವು; ವಿಷಯಾರ್ಪಣಂ=ವಿಷಯಂಗಳ ಸಮರ್ಪಣೆಯೆ, ತಾಂಬೂಲಂ=ತಾಂಬೂಲವು; ವಿಷಯಭ್ರಾಂತಿರಾಹಿತ್ಯಂ=ವಿಷಯಂಗಳ ಭ್ರಾಂತಿಯಿಲ್ಲದಿಪತನವೆ, ತತ್ಪ್ರದಕ್ಷಿಣಕಲ್ಪನಾ=ಆ ಲಿಂಗದ ಪ್ರದಕ್ಷಿಣಕ್ರಿಯೆಯು, ಬುದ್ಧೇಃ=ಬುದ್ಧಿಗೆ, ತದಾತ್ಮಿಕಾ ಶಕ್ತಿಃ=ಆ ಪ್ರಾಣಲಿಂಗ ಸ್ವರೂಪವಾಗುವ ಸಾಮರ್ಥ್ಯವೆ, ನಮಸ್ಕಾರಕ್ರಿಯಾ=ನಮಸ್ಕಾರಕ್ರಿಯೆಯೆಂದು, ಮತಾ=ಸಂಮತವು. ಏವಂ ವಿಧೈಃ=ಈ ಪ್ರಕಾರವಾಗಿ, ಭಾವಶುದ್ಧೈಃ=ಭಾವದಿಂದೆ ಶುದ್ಧವಾಗಿ, ಅದೂಷಿತೈಃ=ನಿಂದಿಸಲುಪಡದೆಯಿದ್ದ, ಉಪಚಾರೈಃ=ಉಪಚಾರಂಗಳಿಂದೆ, ಪ್ರತ್ಯಙ್ಮುಖಮನಾ ಭೂತ್ವಾ=ಪಶ್ಚಿಮಚಕ್ರಕ್ಕೆ ಅಭಿಮುಖವಾದ ಚಿತ್ತವುಳ್ಳಾತನಾಗಿ, ಆಂತರಂ ಲಿಂಗಂ=ಅಷ್ಟದಳಕಮಲಮಧ್ಯಸ್ಥಿತವಾದ ಪ್ರಾಣಲಿಂಗವನು, ಪೂಜಯೇತ್=ಪೂಜಿಸುವುದು. ॥೨೦॥

**ಇತಿ ಪ್ರಾಣಲಿಂಗಾರ್ಚನಸ್ಥಲಮ್**

## ೩೪. ಪ್ರಾಣಲಿಂಗಿಸ್ಥಲೇ ಶಿವಯೋಗಸಮಾಧಿಸ್ಥಲಮ್

**ಸೂತ್ರ॥** ಬಳಿಕ "ಚಿತ್ತವೃತ್ತಿನಿರೋಧೋ ಯೋಗಃ"ಯೆಂಬ ಶ್ರುತ್ಯರ್ಥವನು ಪ್ರಕಟಿಸುತ್ತ ಪ್ರಾಣಲಿಂಗಾರ್ಚನೆಯಿಂದೊದಗುವ ಶಿವಯೋಗಸಮಾಧಿಸ್ಥಲವನು ಹೇಳುತ್ತಿರ್ದಪಂ.

ಗ್ರಂಥ॥ **ಅಂತಃಕ್ರಿಯಾರತಸ್ಯಾಸ್ಯ ಪ್ರಾಣಲಿಂಗಾರ್ಚನಕ್ರಮೈಃ ।**
**ಶಿವಾತ್ಮಧ್ಯಾನಸಂಪತ್ತಿಃ ಸಮಾಧಿರಿತಿ ಕಥ್ಯತೇ ॥**

**ಟೀಕು॥** ಪ್ರಾಣಲಿಂಗಾರ್ಚನಕ್ರಮೈಃ=ಪ್ರಾಣಲಿಂಗಪೂಜೆಯಕ್ರಮಂಗಳಿಂದೆ, ಅಂತಃಕ್ರಿಯಾರತಃ= ಅಂತರಂಗಕ್ರಿಯೆಯಲ್ಲಿ ತತ್ಪರನಾಗಿದ್ದ, ಅಸ್ಯ=ಈ ಪ್ರಾಣಲಿಂಗಿಗೆ, ಶಿವಾತ್ಮಧ್ಯಾನ ಸಂಪತ್ತಿಃ= ಲಿಂಗಾಂಗರೂಪವಾದ ಶಿವಜೀವರ ಸಮಾನಸಮರಸರೂಪವಾದ ಧ್ಯಾನಸಂಪತ್ತಿಯೆ, ಸಮಾಧಿರಿತಿ= ಸಮಾಧಿಯೆಂದು, ಕಥ್ಯತೇ=ಹೇಳಲುಪಡುತ್ತಿರ್ದಪುದು. ॥೨೧॥

**ಸೂತ್ರ॥** ಬಳಿಕ "ಯೋಽಸಾವಸೌ ಪುರುಷಃ ಸೋಽಹಮ್"ಯೆಂಬ ಶ್ರುತ್ಯರ್ಥವನು ಪ್ರಕಟಿಸಿ ಅಜಪಗಾಯತ್ರೀ ರೂಪವಾದ ಶಿವಯೋಗಸಮಾಧಿಯನು ಹೇಳುತ್ತಿರ್ದಪಂ.

ಗ್ರಂಥ॥ **ಸರ್ವತತ್ತ್ವೋಪರಿಗತಂ ಸಚ್ಚಿದಾನಂದಭಾಸುರಮ್ ।**
**ಸ್ವಪ್ರಕಾಶಮನಿರ್ದೇಶ್ಯಮವಾಙ್ಮನಸಗೋಚರಮ್ ॥**

**ಉಮಾಖ್ಯಯಾ ಮಹಾಶಕ್ತ್ಯಾ ದೀಪಿತಂ ಚಿತ್ಸ್ವರೂಪಯಾ ।**
**ಹಂಸರೂಪಂ ಪರಾತ್ಮಾನಂ ಸೋಽಹಂಭಾವೇನ ಭಾವಯೇತ್ ।**
**ತದೇಕತಾನತಾ ಸಿದ್ಧಿಃ ಸಮಾಧಿಃ ಪರಮೋ ಮತಃ ॥**

**ಟೀಕು॥** ಸರ್ವತತ್ತ್ವೋಪರಿಗತಂ=ಪೃಥುವ್ಯಾದಿ ಶಿವತತ್ತ್ವಾಂತವಾದ ಸಮಸ್ತತತ್ತ್ವಂಗಳ ಊರ್ಧ್ವಭಾಗವನು ಎಯ್ದಿರ್ದ್ದ, ಸಚ್ಚಿದಾನಂದ ಭಾಸುರಂ=ಸತ್ತು ಚಿತ್ತು ಆನಂದಸ್ವರೂಪಿನಿಂದೆ ಒಪ್ಪುತ್ತಿರ್ದ್ದ, ಅವಾಙ್ಮನಸಗೋಚರಂ="ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ"ಯೆಂಬ ಶ್ರುತಿಯುಂಟಾಗಿ ವಾಙ್ಮಯಕ್ಕೆ ವಿಷಯವಲ್ಲದೆಯಿರ್ದ್ದ, ಅನಿರ್ದೇಶ್ಯಂ ಸ್ವಪ್ರಕಾಶಂ= ಪೃಥಃಕ್ಕರಿಸಿ ನಿರ್ದೇಶಿಸಬಾರದೆಯಿರ್ದ್ದ ನಿಜಪ್ರಕಾಶವನು; ಚಿತ್ಸ್ವರೂಪಯಾ=ಅರಿವೆ ಸ್ವರೂಪ ವಾಗುಳ್ಳ, ಉಮಾಖ್ಯಯಾ=ಉಮೆಯೆಂಬ ಹೆಸರುಳ್ಳ, ಮಹಾಶಕ್ತ್ಯಾ=ಶುಕ್ಲಪಟನ್ಯಾಯದೋಪಾದಿಯಲ್ಲಿ ಪ್ರಣವರೂಪವಾದ ಸಮವೇತಶಕ್ತಿಯಿಂದೆ, ದೀಪಿತಂ=ಪ್ರಕಾಶಿಲುಪಟ್ಟ, ಹಂಸರೂಪಂ ಪರಾತ್ಮಾನಂ=ಹಂಸರೂಪವಾದ ಪರಮಾತ್ಮನನು, ಸಃ=ಆ ಪರಶಿವನೆ, ಅಹಂ=ನಾನು, ಇತಿ ಭಾವೇನ=

ಹೀಗೆಂಬ ಭಾವದಿಂದೆ, ಭಾವಯೇತ್=ಭಾವಿಸುವುದು. ತದೇಕತಾನತಾ ಸಿದ್ಧಿಃ=ಆ ಜೀವೇಶ್ವರರ ಏಕತ್ವಸಿದ್ಧಿಯೆ, ಪರಮಃ ಸಮಾಧಿಃ=ಮಹಾಸಮಾಧಿಯೆಂದು. ಮತಃ=ಸಂಮತವು.

**ತಾತ್ಪರ್ಯ॥** "ಪ್ರಕ್ರಾಂತಪ್ರಸಿದ್ಧಾನುಭೂತಾರ್ಥಸ್ತಚ್ಛಬ್ದೋ ಯಚ್ಛಬ್ದೋ ಪಾದಾನಂನಾಪೇಕ್ಷತೇ" ಯೆಂಬ 'ಸಃ' ಯೆಂಬ ತಚ್ಛಬ್ಧವು ಪ್ರಸಿದ್ಧವಾದ ಪರಮೇಶ್ವರನೆಂಬುದರ್ಥ. "ಅಹಂ ಶಬ್ದಸ್ಯರೂಢ ತ್ವಾಲ್ಲೋಕೇ ಜೀವಾತ್ಮವಸ್ತುನಿ"ಯೆಂಬ ಸೂತಸಂಹಿತೋಕ್ತಿಯಿಂದೆ, ಅಕಾರಾದಿ ಹಕಾರಾಂತವಾದ ವರ್ಣಾಧ್ವಪಾಶದಿಂದೆ ಕಟ್ಟಲುಪಟ್ಟ ಜೀವಾತ್ಮನೆ ಅಹಂ ಶಬ್ದ ವಾಚ್ಯನು. "ಸೋಽಹಂಕೃತ್ವಾತ್ಮ ಮಂತ್ರಂ ಸ್ವಪದಪರಪದಮ್"ಯೆಂಬುದು ಮೊದಲಾದ ಯೋಗಶಾಸ್ತ್ರೋಕಿಯಿಂದೆಯು, ಗುರೂಕ್ತಿ ಸ್ವಾನುಭವಂಗಳಿಂದೆಯು ಶಿವಯೋಗಸಮಾಧಿಯನು ನಿಶ್ಚೈಸುವುದು. ॥೨೩॥

**ಸೂತ್ರ॥** ಬಳಿಕ "ಪ್ರಾಣರೂಪ ಇಹ ಜೀವ ಉಚ್ಯತೇ
ಲಿಂಗರೂಪ ಇತಿ ಶಂಕರಃ ಸ್ಮೃತಃ ।
ಯಸ್ತದೈಕ್ಯಮಿತಿ ವೇದಿತಾಽನಯೋಃ
ಪ್ರಾಣಲಿಂಗವಿದಸೌ ಶಿವಯೋಗೀ"॥ ಯೆಂಬ ಶಾಂಕರಸಂಹಿತಾರ್ಥವನು ಪ್ರಕಟಿಸುತ್ತ ಸಮಾಧಿಸ್ಥಲ ಲಕ್ಷಣವನು ಹೇಳುತ್ತಿರ್ದಪಂ.

**ಗ್ರಂಥ॥** **ಪರಬ್ರಹ್ಮ ಮಹಾಲಿಂಗಂ ಪ್ರಾಣೋ ಜೀವಃ ಪ್ರಕೀರ್ತಿತಃ ।**
**ತದೇಕಭಾವಮನನಾತ್ಸಮಾಧಿಸ್ಥಃ ಪ್ರಕೀರ್ತಿತಃ ॥**

**ಟೀಕು॥** ಮಹಾಲಿಂಗಂ=ಮಹಾಲಿಂಗವೆ, ಪರಬ್ರಹ್ಮ=ಪರಬ್ರಹ್ಮವಾಚಕವಾದ ಪರಮಶಿವನೆಂದು, ಪ್ರೋಕ್ತಂ=ಹೇಳಲುಪಟ್ಟಿತ್ತು. ಪ್ರಾಣಃ=ಪ್ರಾಣವೆ "ಪ್ರಾಣಾರೂಢೋ ಭವೇಜ್ಜೀವಃ" ಯೆಂಬಾಗಮ ವಾಕ್ಯವುಂಟಾಗಿ, ಜೀವಃ=ಜೀವಾತ್ಮನೆಂದು, ಪ್ರಕೀರ್ತಿತಃ=ಹೇಳಲುಪಟ್ಟನು. ತದೇಕಭಾವ ಮನನಾತ್=ಆ ಲಿಂಗಾಂಗಳನಧಿಕರಿಸಿಕೊಂಡಿರ್ದ ಲಿಂಗಾಂಗಿಗಳ ಸಮಾನಸಮರಸವಾದ ಐಕ್ಯಧ್ಯಾನವುಳ್ಳಾತನಾದ ಕಾರಣವಾಗಿ, ಸಮಾಧಿಸ್ಥಃ=ಶಿವಯೋಗಸಮಾಧಿಯಲ್ಲಿ ಇರುತ್ತಿರ್ದಾತನೆಂದು, ಪ್ರಕೀರ್ತಿತಃ=ಹೇಳಲುಪಟ್ಟನು. ॥೨೪॥

**ಸೂತ್ರ॥** ಬಳಿಕ 'ಗುದಮವಷ್ಟಭ್ಯಾಧಾರಾದ್ವಾಯುಮುತ್ಥಾಪ್ಯ ಸ್ವಾಧಿಷ್ಠಾನಂ ತ್ರಿಃಪ್ರದಕ್ಷಿಣೀಕೃತ್ಯ ಮಣಿಪೂರಕಂ ಗತ್ವಾ ಅನಾಹತಮತಿಕ್ರಮ್ಯ ವಿಶುದ್ಧೌ ಪ್ರಾಣಲಿಂಗಂ ನಿರುಧ್ಯ ಆಜ್ಞಾಮನುಯಾನ್, ಬ್ರಹ್ಮರಂಧ್ರಂ ಧ್ಯಾಯನ್ ತ್ರಿಮಾತ್ರೋಽಹಮಿತಿ ಸರ್ವದಾ ಧ್ಯಾಯೇತ್' ಯೆಂಬ ಹಂಸೋಪನಿಷ ದರ್ಥವನು ಪ್ರಕಟಿಸುತ್ತಿರ್ದಪಂ.

ಗ್ರಂಥ॥ ಅಂತಃಷಟ್ ಚಕ್ರರೂಢಾನಿ ಪಂಕಜಾನಿ ವಿಭಾವಯೇತ್ ।
ಬ್ರಹ್ಮಾದಿಸ್ಥಾನಭೂತಾನಿ ಭ್ರೂಮಧ್ಯಾಂತಾನಿ ಮೂಲತಃ ॥

ಭ್ರೂಮಧ್ಯಾದೂರ್ಧ್ವಭಾಗೇ ತು ಸಹಸ್ರದಲಮಂಬುಜಮ್ ।
ಭಾವಯೇತ್ತತ್ರ ವಿಮಲಂ ಚಂದ್ರಬಿಂಬಂ ತದಂತರೇ ॥

ಸೂಕ್ಷ್ಮರಂಧ್ರಂ ವಿಜಾನೀಯಾತ್ತತ್ಕೈಲಾಸಪದಂ ವಿದುಃ ।
ತತ್ರಸ್ಥಂ ಭಾವಯೇಚ್ಛಂಭುಂ ಸರ್ವಕಾರಣಕಾರಣಮ್ ॥

**ಟೀಕು॥** ಅಂತಃ=ಜೀವೇಶ್ವರರಿಗಾಶ್ರಯವಾದ ಸೂಕ್ಷ್ಮದೇಹಮಧ್ಯದಲ್ಲಿ, ಷಟ್ಚಕ್ರರೂಢಾನಿ= ಷಟ್ಚಕ್ರಂಗಳಲ್ಲಿ ಹುಟ್ಟಿರ್ದ್ದ, ಪಂಕಜಾನಿ=ಷಟ್ಕಮಲಂಗಳನು, ಮೂಲತಃ=ಆಧಾರತೊಡಗಿ, ಭ್ರೂಮಧ್ಯಾಂತಾನಿ=ಆಜ್ಞಾಚಕ್ರವೆ ಕಡೆಯಾಗುಳ್ಳ, ಬ್ರಹ್ಮಾದಿಸ್ಥಾನಭೂತಾನಿ=ಬ್ರಹ್ಮಾದಿಸ್ಥಾನಂಗಳನಾಗಿ, ಭಾವಯೇತ್=ಗುರೂಪದೇಶದಿಂದೆ ಭಾವಿಸುವುದು. ಭ್ರೂಮಧ್ಯಾತ್=ಆಜ್ಞಾಚಕ್ರದದೆಸೆಯಿಂದೆ, ಊರ್ಧ್ವಭಾಗೇ ತು=ಊರ್ಧ್ವಭಾಗವಾದ ಬ್ರಹ್ಮರಂಧ್ರದಲ್ಲಿಯಾಯಿತ್ತಾದೊಡೆ, ಸಹಸ್ರದಲ ಮಂಬುಜಂ=ಸಹಸ್ರದಳ ಕಮಲವನು, ಭಾವಯೇತ್-ಭಾವಿಸುವುದು. ತತ್ರ=ಆ ಸಹಸ್ರದಳ ಕಮಲದಲ್ಲಿ, ವಿಮಲಂ ಚಂದ್ರಬಿಂಬಂ=ನಿರ್ಮಲವಾದ ಚಂದ್ರಮಂಡಲವನು, ಭಾವಯೇತ್=ಧ್ಯಾನಿಸುವುದು. ತದಂತರೇ=ಆ ಚಂದ್ರಮಂಡಲ ಮಧ್ಯದಲ್ಲಿ, ಸೂಕ್ಷ್ಮರಂಧ್ರಂ=ವಾಲಾಗ್ರಮಾತ್ರದೋಪಾದಿಯಲ್ಲಿ ಪರಮ ಸೂಕ್ಷ್ಮವಾದ ರಂಧ್ರವನು, ವಿಜಾನೀಯಾತ್=ಉಪದೇಶದಿಂದೆ ಅರಿವುದು. ತತ್=ಆ ಸೂಕ್ಷ್ಮರಂಧ್ರವನೆ, ಕೈಲಾಸಪದಂ=ಕೈಲಾಸಸ್ಥಾನವಾಗಿ, ವಿದುಃ=ಅರಿವುತ್ತಿರ್ದ್ದಪರು. ತತ್ರಸ್ಥಂ=ಆ ಕೈಲಾಸದಲ್ಲಿರುತ್ತಿರ್ದ್ದ, ಶಂಭುಂ=ಪರಮೇಶ್ವರನನು, ಸರ್ವಕಾರಣಕಾರಣಂ=ಸಮಸ್ತಕಾರಣಂಗಳಿಗೆ ಕಾರಣವಾಗಿದ್ದಾತನಾಗಿ, ಭಾವಯೇತ್=ಧ್ಯಾನಿಸುವುದು.

**ತಾತ್ಪರ್ಯ॥** ಚಿತ್ಕ್ರಿಯೇಂದ್ರಿಯರೂಪವಾದ ಲಿಂಗೋದ್ಧಾರಪ್ರಸಿದ್ಧವಾದ ಷಟ್ಚಕ್ರ ಕಮಲಾದಿ ಸಂಜ್ಞೆಗಳನು ಸೋಸಲಿ ರೇವಣಾರಾಧ್ಯರಿಂದೆ ಸಂಗ್ರಹಿಸಲುಪಟ್ಟ ಉಪದೇಶಮಂಜರಿಯಿಂದೆಯು, ಸ್ವಾನುಭಾವ ಗುರೂಕ್ತಿಗಳಿಂದೆಯು ನಿಶ್ಚೈಸುವುದು. ಗ್ರಂಥ ಬಾಹುಲ್ಯವಾದೀತೆಂದು ಸಂಮತಿಯ ಬರೆದುದಿಲ್ಲ. ॥೨೭॥

**ಸೂತ್ರ॥** ಬಳಿಕ ಆಧಾರಸ್ವಾಧಿಸ್ಥಾನದ ಪೃಥುವೀಜಲಸಂಘಟ್ಟದಿಂದಲಾದ ಪಂಕದಲ್ಲಿ ಮಣಿಪೂರಕರೂಪವಾದ ನಾಭಿಕಂದ ಹುಟ್ಟಿ ಆ ಕಂದದಿಂದೆ ಹುಟ್ಟಿದ ಅನಾಹತರೂಪವಾದ ಹೃದಯಕಮಲದ ದ್ವಾದಶದಳಕಮಲದಲ್ಲಿ ದ್ವಾದಶಕಲಾಯುಕ್ತವಾದ ಸೂರ್ಯಮಂಡಲವಿಹುದು. ಅದರ ಮೇಲೆ ಷೋಡಶದಳದೊಡನೆಕೂಡಿ ವಿಶುದ್ಧಿಕಮಲದಲ್ಲಿ ಷೋಡಶಕಲೆಯುಳ್ಳ ಚಂದ್ರಮಂಡಲವಿಹುದು. ಅದರ ಮೇಲೆ ದ್ವಿದಳವಾದಾಜ್ಞಾಕಮಲದಲ್ಲಿ ದ್ವಿ ಶಿರಸ್ಸು ದಶಕಲೆಗಳುಳ್ಳ

ವಹ್ನಿಮಂಡಲವಿಹುದು. ಅದರ ಮೇಲೆ ಸಹಸ್ರದಳಕಮಲವಾದ ಬ್ರಹ್ಮರಂಧ್ರದಲ್ಲಿ ಈ ಅಷ್ಟತ್ರಿಂಶತ್ ಕಲೆಯೊಡನೆ ಕೂಡಿದ ಕುಂಡಲಿ ಮಂಡಲದ ಮೇಲೆ ಲಿಂಗಾಂಗಸಮರಸರೂಪವಾದ ಶಿವಯೋಗ ಸಮಾಧಿಯುಳ್ಳ ಪ್ರಾಣಲಿಂಗಿಗೆ ಶಿವಾನಂದವಲ್ಲದೆ ಮಾಯಾಜನ್ಯವಾದ ಸುಖವಿಲ್ಲವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಬಹಿರ್ವಾಸನಯಾ ವಿಶ್ವಂ ವಿಕಲ್ಪಾರ್ಥಂ ಪ್ರಕಾಶತೇ ।**
**ಅಂತರ್ವಾಸಿತಚಿತ್ತಾನಾಮಾತ್ಮಾನಂದಃ ಪ್ರಕಾಶತೇ ॥**

**ಟೀಕು||** ಬಹಿರ್ವಾಸನಯಾ=ಬಹಿರ್ಮುಖವಾದ ವಾಸನೆಯಿಂದೆ, ವಿಶ್ವಂ=ಸಮಸ್ತ ಜಗತ್ತು, ವಿಕಲ್ಪಾರ್ಥಂ=ಸಂಕಲ್ಪ ವಿಕಲ್ಪವಾದ ಪ್ರಯೋಜನವುಳ್ಳದಾಗಿ, ಪ್ರಕಾಶತೇ=ಪ್ರಕಾಶಿಸುತ್ತಿರ್ದಪುದು. ಅಂತರ್ವಾಸಿತ ಚಿತ್ತಾನಾಂ=ಅಂತರ್ಮುಖವಾಗಿ ಪರಿಮಳಿಸಲುಪಟ್ಟ ಚಿತ್ತವುಳ್ಳ ಪ್ರಾಣಲಿಂಗಿಗಳಿಗೆ, ಆತ್ಮಾನಂದಃ=ಶಿವಾನಂದವೆ, ಪ್ರಕಾಶತೇ=ಪ್ರಕಾಶಿಸುತ್ತಿರ್ದಪುದು. ||೨೮||

**ಗ್ರಂಥ||** **ಆತ್ಮಾರಣಿಸಮುತ್ಥೇನ ಪ್ರಮೋದಮಥನಾತ್ಸುಧೀಃ ।**
**ಜ್ಞಾನಾಗ್ನಿನಾ ದಹೇಸ್ಸರ್ವಂ ಪಾಶಜಾಲಂ ಜಗನ್ಮಯಮ್ ॥**

**ಟೀಕು||** ಸುಧೀಃ=ಬುದ್ಧಿಯುಳ್ಳ ಪ್ರಾಣಲಿಂಗಿಯು, ಪ್ರಮೋದಮಥನಾತ್=ಶಿವಸುಖವೆಂಬ ಮಥನದ ದೆಸೆಯಿಂದೆ, ಆತ್ಮಾರಣಿ ಸಮುತ್ಥೇನ=ಆತ್ಮನೆಂಬ ಅರಣಿಯದೆಸೆಯಿಂದೆ ಹುಟ್ಟಿರ್ದ್ದ, ಜ್ಞಾನಾಗ್ನಿನಾ=ಶಿವಜ್ಞಾನವೆಂಬ ಅಗ್ನಿಯಿಂದೆ, ಸರ್ವಂ ಜಗನ್ಮಯಂ=ಸಮಸ್ತ ಜಗದ್ರೂಪವಾಗಿರ್ದ್ದ, ಪಾಶಜಾಲಂ=ಮಲಮಾಯಾದಿ ಪಾಶಸಮೂಹವನು, ದಹೇತ್=ಸುಡುವನು. ||೨೯||

**ಸೂತ್ರ||** ಬಳಿಕ ಶಿವಧ್ಯಾನ ಮಹತ್ವವನು ಸೂತ್ರದ್ವಯದಿಂದೆ ಹೇಳಿ ಶಿವಯೋಗಸಮಾಧಿಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ||** **ಸಂಸಾರವಿಷವೃಕ್ಷಸ್ಯ ಪಂಚಕ್ಲೇಶಪಲಾಶಿನಃ ।**
**ಛೇದನೇ ಕರ್ಮಮೂಲಸ್ಯ ಪರಶುಶ್ಶಿವಭಾವನಾ ॥**

**ಟೀಕು||** ಕರ್ಮಮೂಲಸ್ಯ=ಧರ್ಮಾಧರ್ಮರೂಪವಾದ ಕರ್ಮವೆ ಮೂಲವಾಗುಳ್ಳ, ಪಂಚಕ್ಲೇಶಪಲಾಶಿನಃ=ಅವಿದ್ಯಾದಿ ಪಂಚಕ್ಲೇಶಂಗಳೆ ಪರ್ಣಂಗಳಾಗುಳ್ಳ, ಸಂಸಾರವಿಷವೃಕ್ಷಸ್ಯ= ಜನನ ಮರಣ ರೂಪವಾದ ಸಂಸಾರವೆಂಬ ವೃಕ್ಷವ, ಛೇದನೇ=ತರಿವುದಕ್ಕೆ, ಶಿವಭಾವನಾ=ಶಿವಧ್ಯಾನವೆ, ಪರಶುಃ=ಕೊಡಲಿಯಾಗಿರ್ದ್ದ ಅದು. ||೩೦||

ಗ್ರಂಥ॥ **ಅಜ್ಞಾನರಾಕ್ಷಸೋನ್ಮೇಷಕಾರಿಣಃ ಸಂಹೃತಾತ್ಮನಃ ।**
**ಶಿವಧ್ಯಾನಂ ತು ಸಂಸಾರತಮಸಶ್ಚಂಡಭಾಸ್ಕರಃ ॥**

**ಟೀಕು॥** ಅಜ್ಞಾನರಾಕ್ಷಸೋನ್ಮೇಷಕಾರಿಣಃ=ಅಜ್ಞಾನವೆಂಬ ರಾಕ್ಷಸರಿಗೆ ನಯನೋನ್ಮೀಲನವನು ಮಾಡುತ್ತಿರ್ದ್ದ, ಸಂಹೃತಾತ್ಮನಃ ಸಂಸಾರತಮಸಃ=ದಟ್ಟೈಸಿದ ಸಂಸಾರವೆಂಬ ಕತ್ತಲೆಗೆ, ಶಿವಧ್ಯಾನಂ ತು=ಶಿವಧ್ಯಾನಾವಾಯಿತ್ತಾದೊಡೆ, ಚಂಡಭಾಸ್ಕರಃ=ಪ್ರಚಂಡ ಸೂರ್ಯನಾಗಿರ್ದ್ದ ಅದು. ॥೩೧॥

**ಇತಿ ಶಿವಯೋಗಸಮಾಧಿಸ್ಥಲಮ್**

## ೩೫. ಪ್ರಾಣಲಿಂಗಿಸ್ಥಲೇ ನಿಜಲಿಂಗಸ್ಥಲಮ್

**ಸೂತ್ರ॥** ಬಳಿಕ ಶಿವಯೋಗಸಮಾಧಿಸಂಪನ್ನನಿಗೆ ಪ್ರತ್ಯಕ್ಷವಾದ ಲಿಂಗನಿಜಸ್ಥಲವನು ಹೇಳುತ್ತಿರ್ದ್ದಪಂ.

ಗ್ರಂಥ॥ **ಸ್ವಾಂತಃಸ್ಥಶಿವಲಿಂಗಸ್ಯ ಪ್ರತ್ಯಕ್ಷಾನುಭವಸ್ಥಿತಿಃ ।**
**ಯಯೈವ ಪರಲಿಂಗಸ್ಯ ನಿಜಮಿತ್ಯುಚ್ಯತೇ ಬುಧೈಃ ॥**

**ಟೀಕು॥** ಸ್ವಾಂತಃಸ್ಥ ಶಿವಲಿಂಗಸ್ಯ=ಹೃದಯಕಮಲದಲ್ಲಿಯಿರುತ್ತಿರ್ದ್ದ ಶಿವಲಿಂಗದ, ಯಯಾ= ಆವುದಾನೊಂದು, ಪ್ರತ್ಯಕ್ಷಾನುಭವಸ್ಥಿತಿಃ=ಸಾಕ್ಷಾತ್ಕಾರವಾದ ಅನುಭವಸ್ಥಿತಿಯುಂಟು, ಸೈವ=ಆ ಅನುಭವಸ್ಥಿತಿಯೆ, ಪರಲಿಂಗಸ್ಯ=ಮಹಾಲಿಂಗದ, ನಿಜಮಿತಿ=ನಿಜವೆಂದು, ಬುಧೈಃ=ಶಿವಲಿಂಗಜ್ಞಾನಿಗಳಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ॥೩೨॥

**ಸೂತ್ರ॥** ಬಳಿಕ ನಿಜಲಿಂಗಸ್ವರೂಪವನು ಸೂತ್ರತ್ರಯದಿಂದ ಹೇಳುತ್ತಿರ್ದ್ದಪಂ.

ಗ್ರಂಥ॥ **ಬ್ರಹ್ಮವಿಷ್ಣ್ವಾದಯೋ ದೇವಾಃ ಸರ್ವೇ ವೇದಾದಯಸ್ತಥಾ ।**
**ಲೀಯಂತೇ ಯತ್ರ ಗಮ್ಯಂತೇ ತಲ್ಲಿಂಗಂ ಬ್ರಹ್ಮ ಕೇವಲಮ್ ॥**

**ಟೀಕು॥** ಬ್ರಹ್ಮವಿಷ್ಣ್ವಾದಯಃ=ಬ್ರಹ್ಮವಿಷ್ಣು ಮೊದಲಾಗುಳ್ಳ, ಸರ್ವೇ ದೇವಾಃ=ಸಮಸ್ತದೇವತೆಗಳು, ತಥಾ=ಹಾಗೆಯೇ, ಸರ್ವೇ ವೇದಾದಯಃ=ಸಮಸ್ತ ವೇದಾಗಮ ಮೊದಲಾಗುಳ್ಳ ಶಾಸ್ತ್ರಂಗಳು, ಯತ್ರ=ಆವಲ್ಲಿ, ಲೀಯಂತೇ=ಅಡಗುತ್ತಿರ್ದ್ದಪವು, ಗಮ್ಯಂತೇ=ಹೊರಡುತ್ತಿರ್ದ್ದಪುವು, ತತ್=ಅದು, ಲಿಂಗಂ=ಲಿಂಗಶಬ್ದವಾಚ್ಯವಾದ, ಬ್ರಹ್ಮ ಕೇವಲಂ=ಪರಬ್ರಹ್ಮವೇ. ॥೩೩॥

**ಗ್ರಂಥ||** **ಚಿದಾನಂದಮಯಸ್ಸಾಕ್ಷಾಚ್ಛಿವ ಏವ ನಿರಂಜನಃ ।**
**ಲಿಂಗಮಿತ್ಯುಚ್ಯತೇ ನಾನ್ಯದ್ಯತಃ ಸ್ಯಾದ್ವಿಶ್ವಸಂಭವಃ ॥**

**ಟೀಕು||** ಯತಃ=ಆವುದಾನೊಂದು ಬ್ರಹ್ಮದದೆಸೆಯಿಂದೆ, ವಿಶ್ವಸಂಭವಃ=ವಿಶ್ವೋತ್ಪತ್ತಿಯು, ಸ್ಯಾತ್=ಅಹುದು; ಲಿಂಗಂ=ಲಿಂಗಶಬ್ದವಾಚ್ಯವಾದ, ತತ್=ಆ ಬ್ರಹ್ಮವೆ, ಚಿದಾನಂದಮಯಃ=ಸಚ್ಚಿದಾನಂದರೂಪವಾಗಿ, ನಿರಂಜನಃ=ದೋಷರಹಿತವಾದ, ಸಾಕ್ಷಾತ್=ಪ್ರತ್ಯಕ್ಷವಾದ, ಶಿವ ಏವ=ಶಿವನೆಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ಅನ್ಯತ್=ಶಿವನದೆಸೆಯಿಂದನ್ಯವಾದ ವಸ್ತು, ನೋಚ್ಯತೇ=ಹೇಳಲುಪಡುತ್ತಿರದು. ||೩೪||

**ಗ್ರಂಥ||** **ಬಹುನಾಽತ್ರ ಕಿಮುಕ್ತೇನ ಲಿಂಗಮಿತ್ಯುಚ್ಯತೇ ಬುಧೈಃ ।**
**ಶಿವಾಭಿಧಂ ಪರಂ ಬ್ರಹ್ಮ ಚಿದ್ರೂಪಂ ಜಗದಾಸ್ಪದಮ್ ॥**

**ಟೀಕು||** ಅತ್ರ=ಇಲ್ಲಿ, ಬಹುನೋಕ್ತೇನ ಕಿಂ=ಹಲವು ಮಾತಿನಿಂದೇನು? ಜಗದಾಸ್ಪದಂ=ಸಮಸ್ತ ಜಗತ್ತಿಗಾಶ್ರಯವಾಗಿ, ಚಿದ್ರೂಪಂ=ಅರಿವೆ ಸ್ವರೂಪವಾಗುಳ್ಳ, ಪರಂ ಬ್ರಹ್ಮ=ಪರಬ್ರಹ್ಮವೆ, ಶಿವಾಭಿಧಂ=ಪರಮಶಿವನೆಂಬ ಹೆಸರುಳ್ಳ, ಲಿಂಗಮಿತಿ=ನಿಜಲಿಂಗವೆಂದು, ಬುಧೈಃ=ವಿದ್ವಾಂಸರಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೩೫||

**ಸೂತ್ರ||** ಬಳಿಕ ಮಾಯಿಕವೇದಾಂತವಾದಮತಸಿದ್ಧವಾದ ಲಿಂಗವನು ನಿಜಲಿಂಗವಲ್ಲವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ವೇದಾಂತವಾಕ್ಯಜಾಂ ವಿದ್ಯಾಂ ಲಿಂಗಮಾಹುಸ್ತಥಾಽಪರೇ ।**
**ತದಸದ್ಜ್ಞೇಯರೂಪತ್ವಾಲ್ಲಿಂಗಸ್ಯ ಬ್ರಹ್ಮರೂಪಿಣಃ ॥**

**ಟೀಕು||** ವೇದಾಂತವಾಕ್ಯಜಾಂ ವಿದ್ಯಾಂ="ಪ್ರಜ್ಞಾನಂ ಬ್ರಹ್ಮ"। "ಅಹಂ ಬ್ರಹ್ಮಾಸ್ಮಿ"। "ತತ್ತ್ವ ಮಸಿ"। "ಅಯಮಾತ್ಮಾ ಬ್ರಹ್ಮ"। ಯೆಂಬ ವೇದಾಂತ ವಾಕ್ಯದಿಂದೆ ಹುಟ್ಟಿದ ವಿದ್ಯೆಯನು, ತಥಾಲಿಂಗಂ=ಆ ಪ್ರಕಾರವಾದ ನಿಜಲಿಂಗವನಾಗಿ ಅಪರೆ ಕೆಲಂಬರಾದ ವೇದಾಂತ ಜ್ಞಾನಿಗಳು, ಆಹುಃ=ಹೇಳುತ್ತಿರ್ದ್ದಪರು. ತತ್=ಆ ವೇದಾಂತಜ್ಞಾನರೂಪವಾದ ಲಿಂಗವು, ಬ್ರಹ್ಮರೂಪಿಣಃ= ಬ್ರಹ್ಮರೂಪವಾದ, ಲಿಂಗಸ್ಯ=ನಿಜಲಿಂಗದಿಂದೆ, ಜ್ಞೇಯ ರೂಪತ್ವಾತ್=ಅರಿಯಲು ಯೋಗ್ಯವಾದ ರೂಪುಳ್ಳದಾದ ಕಾರಣವಾಗಿ, ಅಸತ್=ಪ್ರಶಸ್ತವಲ್ಲ. ||೩೬||

**ಗ್ರಂಥ||** **ಅವ್ಯಕ್ತಂ ಲಿಂಗಮಿತ್ಯಾಹುರ್ಜಗತಾಂ ಮೂಲಕಾರಣಮ್ ।**
**ಲಿಂಗೀ ಮಾಹೇಶ್ವರಶ್ಚೇತಿ ಮತಮೇತದಸಂಗತಮ್ ॥**

**ಟೀಕು||** ಜಗತಾಂ=ಸಮಸ್ತ ಜಗತ್ತುಗಳಿಗೆ, ಮೂಲಕಾರಣಂ=ಮೂಲಕಾರಣವಾಗಿರ್ದ್ದ, ಅವ್ಯಕ್ತಂ=ಮಾಯಾತತ್ತ್ವವನೆ, ಲಿಂಗಮಿತಿ= ಲಿಂಗವೆಂದು, ಮಾಹೇಶ್ವರಃ = ಪರಮೇಶ್ವರನೆ, ಲಿಂಗೀಚೇತಿ =ಲಿಂಗವುಳ್ಳಾತನೆಂದು, ಆಹುಃ=ಹೇಳುತ್ತಿರ್ದ್ದಪರು.ಏತತ್ ಮತಂ="ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಮ್" ಯೆಂದು ಶ್ರೇತಾಶ್ವತರ ಪ್ರಸಿದ್ಧವಾದ ಈ ಮತವು, ಅಸಂಗತಂ=ಪ್ರಾಣಲಿಂಗಿಗಳಿಗೆ ಸಂಗತವಲ್ಲ. ||೩೭||

ಸೂತ್ರ|| ಬಳಿಕ "ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಮ್
ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ|
ತಮೇವ ಭಾಂತಮನುಭಾತಿ ಸರ್ವಮ್
ತಸ್ಯ ಭಾಸಾ ಸರ್ವಮಿದಂ ವಿಭಾತಿ"|| ಯೆಂಬ ಕಠವಲ್ಲೀ ಶ್ರುತ್ಯರ್ಥವನು ಪ್ರಕಟಿಸುತ್ತ ಪ್ರಾಣಲಿಂಗಿಗಳಿಗೆ ಸಂಗತವಾದ ನಿಜಲಿಂಗಸ್ವರೂಪವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| **ನ ಸೂರ್ಯೋ ಭಾತಿ ತತ್ರೇಂದುರ್ನವಿದ್ಯುನ್ನ ಚ ಪಾವಕಃ ।**
**ನ ತಾರಕಾ ಮಹಾಲಿಂಗೇ ದ್ಯೋತಮಾನೇ ಪರಾತ್ಮನಿ ॥**

**ಟೀಕು||** ಪರಾತ್ಮನಿ=ಪರಮಾತ್ಮರೂಪವಾದ, ತತ್ರ ಮಹಾಲಿಂಗೇ=ಆ ಮಹಾನಿಜಲಿಂಗವು, ದ್ಯೋತಮಾನೇ ಸತಿ=ಪ್ರಕಾಶಿಸಲುಪಡಲಿಕೆಯಾಗಿ, ಸೂರ್ಯಃ=ಸೂರ್ಯನು, ನ ಭಾತಿ=ಪ್ರಕಾಶಿಸುತ್ತಿರನು, ಇಂದುಃ=ಚಂದ್ರನು, ನ ಭಾತಿ=ಪ್ರಕಾಶಿಸುತ್ತಿರನು. ಪಾವಕಃ=ಅಗ್ನಿಯು, ನ ಭಾತಿ=ಪ್ರಕಾಶಿಸುತ್ತಿರದು. ವಿದ್ಯುತ್=ಮಿಂಚು, ನ ಭಾತಿ=ಪ್ರಕಾಶಿಸುತ್ತಿರದು. ತಾರಕಾಃ=ನಕ್ಷತ್ರಗಳು, ನ ಭಾತಿ= ಪ್ರಕಾಶಿಸುತ್ತಿರವು. ||೩೮||

ಗ್ರಂಥ|| **ಜ್ಯೋತಿರ್ಮಯಂ ಪರಂ ಲಿಂಗಂ ಶ್ರುತಿರಾಹ ಶಿವಾತ್ಮಕಮ್ ।**
**ತಸ್ಯ ಭಾಸಾ ಸರ್ವಮಿದಂ ಪ್ರತಿಭಾತಿ ನ ಸಂಶಯಃ ॥**

**ಟೀಕು||** ಶಿವಾತ್ಮಕಂ=ಪರಮಶಿವನಸ್ವರೂಪವಾಗಿರ್ದ್ದ, ಪರಂ ಲಿಂಗಂ=ಮಹಾಲಿಂಗವೆ, ಜ್ಯೋತಿರ್ಮಯಂ=ಜ್ಯೋತಿರ್ಮಯವಾಗಿದ್ದ ಅದು, ತಸ್ಯ=ಆ ಜ್ಯೋತಿರ್ಲಿಂಗದ, ಭಾಸಾ=ಕಾಂತಿಯಿಂದೆ, ಇದಂ ಸರ್ವಂ=ಸೂರ್ಯಚಂದ್ರಾಗ್ನಿ ಮೊದಲಾಗುಳ್ಳ ಈ ಸಮಸ್ತವು, ಪ್ರತಿಭಾತಿ=ಬಳಿವಿಡಿದು ಪ್ರಕಾಶಿಸುತ್ತಿರ್ದ್ದಪುದು. ನ ಸಂಶಯಃ=ಸಂದೇಹವಿಲ್ಲ. ಇತಿ=ಹೀಗೆಂದು ಶ್ರುತಿಃ=ಕಠವಲ್ಲೀ ಶ್ರುತಿಯು, ಆಹ=ಹೇಳುತ್ತಿರ್ದ್ದಪುದು. ||೩೯||

**ಸೂತ್ರ||** ಬಳಿಕ ಲಿಂಗಮಹತ್ವವನು ಹೇಳಿ ಸೂತ್ರದ್ವಯದಿಂದೆ ಲಿಂಗಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಲಿಂಗಾನ್ನಾಸ್ತಿ ಪರಂ ತತ್ತ್ವಂ ಯದಸ್ಮಾಜ್ಜಾಯತೇ ಜಗತ್ ।**
**ಯದೇತದ್ರೂಪತಾಂ ಧತ್ತೇ ಯದತ್ರ ಲಯಮಶ್ನುತೇ ॥**

**ಟೀಕು||** ಯತ್ರ=ಆವುದಾನೊಂದು ಲಿಂಗದಲ್ಲಿ, ಯತ್=ಆವುದಾನೊಂದು ಕಾರಣವಾಗಿ, ಯತ್ ಏತತ್ ಜಗತ್=ಆವುದಾನೊಂದು ಈ ಜಗತ್ತು, ಜಾಯತೇ=ಹುಟ್ಟುತ್ತಿರ್ದ್ದಪುದು. ರೂಪತಾಂ= ಸ್ಥಿತಿಯನು, ಧತ್ತೇ=ಧರಿಸುತ್ತಿರ್ದ್ದಪುದು. ಲಯಂ=ಸಂಹಾರವನು, ಅಶ್ನುತೇ=ಅನುಭವಿಸುತ್ತಿರ್ದ್ದಪುದು. ತತ್=ಅದು ಕಾರಣವಾಗಿ, ಅಸ್ಮಾತ್‌ಲಿಂಗಾತ್=ಈ ಲಿಂಗದದೆಸೆಯಿಂದೆ, ಪರಂ ತತ್ತ್ವಂ=ಪರತತ್ತ್ವವು, ನಾಸ್ತಿ=ಇಲ್ಲ. ||೪೦||

**ಗ್ರಂಥ||** **ತಸ್ಮಾಲ್ಲಿಂಗಂ ಪರಂ ಬ್ರಹ್ಮ ಸಚ್ಚಿದಾನಂದಲಕ್ಷಣಮ್ ।**
**ನಿಜರೂಪಮಿತಿ ಧ್ಯಾನಾತ್ತದವಸ್ಥಾ ಪ್ರಜಾಯತೇ ॥**

**ಟೀಕು||** ತಸ್ಮಾತ್=ಅದುಕಾರಣವಾಗಿ, ಸಚ್ಚಿದಾನಂದ ಲಕ್ಷಣಂ=ಸಚ್ಚಿದಾನಂದವೆ ಸ್ವರೂಪವಾಗುಳ್ಳ, ಪರಂ ಬ್ರಹ್ಮ=ಪರಬ್ರಹ್ಮವೆ, ಲಿಂಗಂ ನಿಜರೂಪಮಿತಿ=ನಿಜಸ್ವರೂಪವಾದ ಲಿಂಗವೆಂಬ, ಧ್ಯಾನಾತ್=ಧ್ಯಾನದದೆಸೆಯಿಂದೆ, ತದವಸ್ಥಾ=ಲಿಂಗವೆ ನಿಜವೆಂಬ ಅವಸ್ಥೆಯು, ಪ್ರಜಾಯತೇ= ಹುಟ್ಟುತ್ತಿರ್ದ್ದಪುದು. ||೪೧||

**ಇತಿ ನಿಜಲಿಂಗಸ್ಥಲಮ್**

## ೩೬. ಪ್ರಾಣಲಿಂಗಿಸ್ಥಲೇ ಅಂಗಲಿಂಗಸ್ಥಲಮ್

**ಸೂತ್ರ||** ಬಳಿಕ ಲಿಂಗನಿಜವೆ ಅಂಗದಲುಳ್ಳ ಅಂಗಲಿಂಗಿಯನು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಜ್ಞಾನಮಂಗಮಿತಿ ಪ್ರಾಹುರ್ಜ್ಞೇಯಂ ಲಿಂಗಂ ಸನಾತನಮ್ ।**
**ವಿದ್ಯತೇ ತದ್ವಯಂ ಯಸ್ಯ ಸೋಽಂಗಲಿಂಗೀತಿ ಕೀರ್ತಿತಃ ॥**

**ಟೀಕು||** ಜ್ಞಾನಂ=ಶಿವಜ್ಞಾನವುಳ್ಳ ಜೀವನೆ, ಲಿಂಗಮಿತಿ=ಲಿಂಗವೆಂದು, ಪ್ರಾಹುಃ=ಹೇಳುತ್ತಿರ್ದ್ದ ಪರು. ಜ್ಞೇಯಂ=ಶಿವಜ್ಞಾನದಿಂದೆ ಅಪರೋಕ್ಷವಾಗಿ ಅರಿಯಲು ಯೋಗ್ಯವಾದ ಶಿವನನೆ, ಸನಾತನಂ=ಕೇಡಿಲ್ಲದೆಯಿರ್ದ್ದ, ಲಿಂಗಂ=ಲಿಂಗವನಾಗಿ, ಪ್ರಾಹುಃ=ಹೇಳುತ್ತಿರ್ದ್ದಪರು. ತತ್‌ದ್ವಯಂ= ಆ ಎರಡು, ಯಸ್ಯ=ಆವನಾನೊಬ್ಬ ಪ್ರಾಣಲಿಂಗಿಗೆ, ವಿದ್ಯತೇ=ಉಂಟಾಗುತ್ತಿರ್ದ್ದಪುದು, ಸಃ=ಆ ಪ್ರಾಣಲಿಂಗಿಯು, ಅಂಗಲಿಂಗೀತಿ=ಅಂಗಲಿಂಗ ಉಳ್ಳಾತನೆಂದು, ಕೀರ್ತಿತಃ=ಹೇಳಲುಪಟ್ಟನು.

**ತಾತ್ಪರ್ಯ॥** "ದ್ವಾ ಸುಪರ್ಣಾ ಸಯುಜಾ ಸಖಾಯಾ" ಯೆಂಬ ಶ್ವೇತಾಶ್ವತರಶ್ರುತಿಯಿಂದೆ ಜೀವೇಶ್ವರರೀಗ ಅಂಗಲಿಂಗ ಶಬ್ದ ವಾಚ್ಯರೆಂಬುದರ್ಥ. ॥೪೨॥

**ಗ್ರಂಥ॥** **ಅಂಗೇ ಲಿಂಗಂ ಸಮಾರೂಢಂ ಲಿಂಗೇ ಚಾಂಗಮುಪಸ್ಥಿತಮ್ ।**
**ಏತದಸ್ತಿ ದ್ವಯಂ ಯಸ್ಯ ಸ ಭವೇದಂಗಲಿಂಗವಾನ್ ॥**

**ಟೀಕು॥** ಅಂಗೇ=ಚಿದಾತ್ಮನಲ್ಲಿ, ಲಿಂಗಂ=ಶಿವಲಿಂಗವು, ಸಮಾರೂಢಂ=ಸಮರಸವಾಗಿಯಿರುತ್ತಿರ್ದ್ದಪುದು. ಲಿಂಗೇ ಚ=ಲಿಂಗದಲ್ಲಿ, ಅಂಗಂ=ಅಂಗವು, ಉಪಸ್ಥಿತಂ=ಸಮರಸವಾಗಿ ಇರುತ್ತಿರ್ದ್ದಪುದು. ಯಸ್ಯ=ಆವನಾನೊಬ್ಬನು ಪ್ರಾಣಲಿಂಗಿಗೆ, ಏತತ್ ದ್ವಯಂ=ಈ ಎರಡೂ, ಅಸ್ತಿ=ಉಂಟು ಸಃ=ಆ ಪ್ರಾಣಲಿಂಗಿಯು, ಅಂಗಲಿಂಗವಾನ್=ಅಂಗಲಿಂಗವುಳ್ಳಾತನು, ಭವೇತ್=ಅಹನು. ॥೪೩॥

**ಗ್ರಂಥ॥** **ಜ್ಞಾತ್ವಾ ಯಃ ಸತತಂ ಲಿಂಗಂ ಸ್ವಾಂತಸ್ಥಂ ಜ್ಯೋತಿರಾತ್ಮಕಮ್ ।**
**ಪೂಜಯೇದ್ಭಾವಯನ್ನಿತ್ಯಂ ತಂ ವಿದ್ಯಾದಂಗಲಿಂಗಿನಮ್ ॥**

**ಟೀಕು॥** ಯಃ=ಆವನಾನೊಬ್ಬಾತನು ಪ್ರಾಣಲಿಂಗಿಯು, ಸ್ವಾಂತಸ್ಥಂ=ಹೃದಯಕಮಲದಲ್ಲಿಯಿರುತ್ತಿರ್ದ್ದ, ಜ್ಯೋತಿರಾತ್ಮಕಂ=ಜ್ಯೋತಿರ್ಮಯವಾಗಿ, ನಿತ್ಯಂ=ಕೇಡಿಲ್ಲದೆಯಿದ್ದ, ಲಿಂಗಂ=ನಿಜಲಿಂಗವನು, ಜ್ಞಾತ್ವಾ=ಶ್ರುತಿಗುರುಸ್ವಾನುಭವಂಗಳಿಂದೆ ತಿಳಿದು, ಸತತಂ=ಆವಾಗವು, ಪೂಜಯನ್= ಪೂಜಿಸುತ್ತ, ಭಾವಯನ್=ಧ್ಯಾನಿಸುವನು, ತಂ=ಆ ಪ್ರಾಣಲಿಂಗಿಯನು, ಅಂಗಲಿಂಗಿನಂ=ಅಂಗಲಿಂಗವುಳ್ಳಾತನಾಗಿ, ವಿದ್ಯಾತ್=ಅರಿವುದು. ॥೪೪॥

**ಸೂತ್ರ॥** ಬಳಿಕ ನಿಜಲಿಂಗ ಪರ್ಯಾಯನಾಮವನು ಹೇಳಿ ಆ ಲಿಂಗದಲ್ಲಿ ದೃಢಚಿತ್ತವುಳ್ಳವನೆ ಜೀವನ್ಮುಕ್ತನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಜ್ಞಾಯತೇ ಲಿಂಗಮೇವೈಕಂ ಸರ್ವೈಃ ಶಾಸ್ತ್ರೈಃ ಸನಾತನೈಃ ।**
**ಬ್ರಹ್ಮೇತಿ ವಿಶ್ವಧಾಮೇತಿ ವಿಮುಕ್ತೇಃ ಪದಮಿತ್ಯಪಿ ॥**

**ಟೀಕು॥** ಏಕಂ ಲಿಂಗಮೇವ=ಒಂದು ನಿಜಲಿಂಗವೆ, ಬ್ರಹ್ಮೇತಿ=ಪರಬ್ರಹ್ಮವೆಂದು, ವಿಶ್ವಧಾಮೇತಿ=ವಿಶ್ವಕ್ಕಾಶ್ರಯನೆಂದು, ವಿಮುಕ್ತೇಃ ಪದಮಿತಿ=ಪರಮುಕ್ತಿಸ್ಥಾನವೆಂದು, ಸನಾತನೈಃ=ಕೇಡಿಲ್ಲದೆಯಿರ್ದ್ದ, ಸರ್ವೈಃ ಶಾಸ್ತ್ರೈರಪಿ=ಸಮಸ್ತಶಾಸ್ತ್ರಂಗಳಿಂದವಾಯಿತ್ತಾದೊಡೆ, ಜ್ಞಾಯತೇ=ಅರಿಯಲುಪಡುತ್ತಿರ್ದ್ದಪುದು. ॥೪೫॥

**ಗ್ರಂಥ॥** **ಮುಕ್ತಿರೂಪಮಿದಂ ಲಿಂಗಮಿತಿ ಯಸ್ಯ ಮನಃಸ್ಥಿತಿಃ ।**
**ಸ ಮುಕ್ತೋ ದೇಹಯೋಗೇಽಪಿ ಸ ಜ್ಞಾನೀ ಸ ಮಹಾಗುರುಃ ॥**

**ಟೀಕು॥** ಇದಂ ಲಿಂಗಂ=ಈ ನಿಜಲಿಂಗವು, ಮುಕ್ತಿರೂಪಮಿತಿ=ಪರಮುಕ್ತಿಸ್ವರೂಪೆಂದು, ಯಸ್ಯ=ಆವನಾನೊಬ್ಬ ಪ್ರಾಣಲಿಂಗಿಗೆ, ಮನಃಸ್ಥಿತಿಃ=ಚಿತ್ತವೃತ್ತಿಯುಂಟು, ಸಃ=ಆತನು, ದೇಹ ಯೋಗೇಽಪಿ=ದೇಹಯೋಗದಲ್ಲಿಯಾಯಿತ್ತಾದೊಡೆಯು, ಮುಕ್ತಃ=ಮುಕ್ತನು. ಸ ಜ್ಞಾನೀ=ಆತನು ಶಿವಜ್ಞಾನಿಯು. ಸ ಮಹಾಗುರುಃ=ಆತನೆ ಶ್ರೀಮಹಾಗುರುವು. ॥೪೬॥

**ಸೂತ್ರ॥** ಬಳಿಕ ಲಿಂಗನಿಜವನರಿಯದವರಿಗೆ ಮೋಕ್ಷವಿಲ್ಲವೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** **ಅನಾದಿನಿಧನಂ ಲಿಂಗಂ ಕಾರಣಂ ಜಗತಾಮಿತಿ ।**
**ಯೇ ನ ಜಾನಂತಿ ತೇ ಮೂಢಾ ಮೋಕ್ಷಮಾರ್ಗ ಬಹಿಷ್ಕೃತಾಃ ॥**

**ಟೀಕು॥** ಅನಾದಿನಿಧನಂ=ಸೃಷ್ಟಿಸಂಹಾರವಿಲ್ಲದೆಯಿರ್ದ್ದ, ಲಿಂಗಂ=ನಿಜಲಿಂಗವನು, ಜಗತಾಂ ಕಾರಣಮಿತಿ=ಜಗತ್ತಿಗೆ ಕಾರಣವೆಂದು, ಯೇ=ಆರು ಕಲಂಬರು, ನ ಜಾನಂತಿ=ಅರಿವುತ್ತಿರರು, ತೇ=ಅವರು, ಮೋಕ್ಷಮಾರ್ಗ ಬಹಿಷ್ಕೃತಾಃ=ಮೋಕ್ಷಮಾರ್ಗಕ್ಕೆ ಹೊರಗಾಗಿ ಮಾಡಲುಪಟ್ಟ, ಮೂಢಾಃ=ಮೂಢಾತ್ಮರು. ॥೪೭॥

**ಸೂತ್ರ॥** ಬಳಿಕ ಪ್ರಾಣಲಿಂಗಾರ್ಚನಾದಿ ಧರ್ಮವುಳ್ಳ ಪ್ರಾಣಲಿಂಗಿಯೆ ಜ್ಞಾನಪರಿಪಕ್ವತೆಯಿಂದೆ ಶರಣನೆಂಬ ಹೆಸರುಳ್ಳಾತನೆಂದು ಹೇಳಿ ಪ್ರಾಣಲಿಂಗಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ವೃತ್ತ॥** **ಯಃ ಪ್ರಾಣಲಿಂಗಾರ್ಚನಭಾವಪೂರ್ವೈರ್ಧರ್ಮೈರುಪೇತಶ್ಶಿವಭಾವಿತಾತ್ಮಾ।**
**ಸ ಏವ ತುರ್ಯಃ ಪರಿಕೀರ್ತಿತೋಽಸೌ ಸಂವಿದ್ವಿಪಾಕಾಚ್ಛರಣಾಭಿಧಾನಃ ॥**

**ಟೀಕು॥** ಯಃ=ಆವನಾನೊಬ್ಬ ಪ್ರಾಣಲಿಂಗಿಯು, ಪ್ರಾಣಲಿಂಗಾರ್ಚನಭಾವಪೂರ್ವೈಃ=ಪ್ರಾಣ ಲಿಂಗಪೂಜಾಚಾರವೆ ಮೊದಲಾಗುಳ್ಳ, ಧರ್ಮೈಃ=ಶಿವಾಚಾರಗಳೊಡನೆ, ಉಪೇತಃ=ಕೂಡಿ, ಶಿವಭಾವಿತಾತ್ಮಾ=ಲಿಂಗಸ್ವರೂಪವಾಗಿ ಭಾವಿಸಲುಪಟ್ಟ ಅಂಗಸ್ವರೂಪವುಳ್ಳಾತನು, ತುರ್ಯಃ= ನಾಲ್ಕನೆಯವನಾಗಿರ್ದ್ದ, ಸ ಏವಾಽಸೌ=ಆ ಈ ಪ್ರಾಣಲಿಂಗಿಯೆ, ಸಂವಿದ್ವಿಪಾಕಾತ್=ಜ್ಞಾನಪರಿಪಾಕದ ದೆಸೆಯಿಂದೆ, ಶರಣಾಭಿಧಾನಃ=ಶರಣನೆಂಬ ಹೆಸರುಳ್ಳಾತನಾಗಿ, ಪರಿಕೀರ್ತಿತಃ=ಹೇಳಲುಪಡುತ್ತಿರ್ದ್ದ ಪನು. ॥೪೮॥

**ಇತ್ಯಂಗಲಿಂಗಸ್ಥಲಮ್**

**ಇತಿ ಶ್ರೀವೀರಶೈವ ಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ**
**ಪ್ರಾಣಲಿಂಗಿನಃ ಪಂಚಸ್ಥಲಪ್ರಸಂಗೋ ನಾಮ ದ್ವಾದಶಃ ಪರಿಚ್ಛೇದಃ ಸಮಾಪ್ತಃ**

## ಪಂಚಮಂ ಶರಣಸ್ಥಲಮ್

**ಅಗಸ್ತ್ಯ ಉವಾಚ॥**

**ಸೂತ್ರ॥** ಅಗಸ್ತ್ಯಮುನಿ ಪ್ರಶ್ನೆಯನು ಮಾಡುತ್ತಿರ್ದ್ದಪಂ.

**ಗ್ರಂಥ॥** **ಮಾಹೇಶ್ವರಃ ಪ್ರಸಾದೀತಿ ಪ್ರಾಣಲಿಂಗೀತಿ ಬೋಧಿತಃ ।**
**ಕಥಮೇಷ ಸಮಾದಿಷ್ಟಃ ಪುನಶ್ಶರಣಸಂಜ್ಞಕಃ ॥**

**ಟೀಕು॥** ಮಾಹೇಶ್ವರಃ=ಮಾಹೇಶ್ವರನೆಂದು, ಪ್ರಸಾದೀತಿ=ಪ್ರಸಾದಿಯೆಂದು, ಬೋಧಿತಃ= ಬೋಧಿಸಲುಪಟ್ಟ, ಏಷಃ ಪ್ರಾಣಲಿಂಗೀ=ಈ ಪ್ರಾಣಲಿಂಗಿಯೆ, ಏಷಃ=ಈತನೆ, ಪುನಃ=ಮರಳಿ ಕಥಂ=ಆವಾವ ಪ್ರಕಾರದಿಂದೆ, ಶರಣಸಂಜ್ಞಕಃ=ಶರಣನೆಂಬ ಹೆಸರುಳ್ಳಾತನಾಗಿ, ಸಮಾದಿಷ್ಟಃ= ಹೇಳಲುಪಟ್ಟನು? ॥೧॥

**ರೇಣುಕ ಉವಾಚ॥**

**ಸೂತ್ರ॥** ರೇಣುಕಗಣೇಶ್ವರನು ಉತ್ತರವನು ನಿರೂಪಿಸುತ್ತಿರ್ದ್ದಪಂ.

**ಗ್ರಂಥ॥** **ಅಂಗಲಿಂಗೀ ಜ್ಞಾನರೂಪಸ್ಸತೀ ಜ್ಞೇಯಶ್ಶಿವಃ ಪತಿಃ ।**
**ಯತ್ಸೌಖ್ಯಂ ತತ್ಸಮಾವಶೇ ತದ್ವಾನ್ ಶರಣನಾಮವಾನ್ ॥**

**ಟೀಕು॥** ಜ್ಞಾನರೂಪಃ=ಶಿವಜ್ಞಾನವೆ ಸ್ವರೂಪವಾಗುಳ್ಳ, ಅಂಗಲಿಂಗೀ=ಅಂಗಲಿಂಗಸಮರಸ ವುಳ್ಳ ಪ್ರಾಣಲಿಂಗಿಯು, ಸತೀ=ಸತಿಯೆಂದು, ಜ್ಞೇಯಃ=ಅರಿಯಲು ಯೋಗ್ಯವು, ಶಿವಃ=ಶಿವಲಿಂಗವೆ ಪತಿಃ=ಪತಿಯೆಂದು, ಜ್ಞೇಯಃ=ಅರಿಯಲು ಯೋಗ್ಯವು. ತತ್ಸಮಾವೇಶೇ=ಆ ಅಂಗಲಿಂಗ ರೂಪವಾದ ಸ್ತ್ರೀ ಪುರುಷ ಸಮಾನ ಸಮರಸರೂಪವಾದ ಯೋಗದಲ್ಲಿ, ಯತ್ ಸೌಖ್ಯಂ="ಯಥಾ ಸ್ತ್ರಿಯಾ ಸಂಪರಿಷ್ವಕ್ತೋ ನ ಬಾಹ್ಯ ಕಿಂಚನ ವೇದ ನಾಂತರಂ। ಏವಮೇವಾಯಂ ಪುರುಷಃ ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದ ನಾಂತರಮ್॥" ಯೆಂದು ಬೃಹದಾರಣ್ಯಕ ಶ್ರುತಿಸಿದ್ಧವಾದ ಆವುದಾನೊಂದು ಸೌಖ್ಯವುಂಟು, ತದ್ವಾನ್=ಆ ಸೌಖ್ಯವುಳ್ಳಾತನೇ, ಶರಣನಾಮವಾನ್=ಶರಣನೆಂಬ ಹೆಸರುಳ್ಳ ಆತನು. ॥೨॥

**ಸೂತ್ರ॥** ಬಳಿಕ ಅವಾಂತರಸ್ಥಲಭೇದಂಗಳನು ಹೇಳುತ್ತಿರ್ದ್ದಪಂ

ಗ್ರಂಥ॥ ಸ್ಥಲಮೇತತ್ಸಮಾಖ್ಯಾತಂ ಚತುರ್ಧಾ ಧರ್ಮಭೇದತಃ ।
ಆದೌ ಶರಣಸಮಾಖ್ಯಾತಂ ತತಃ ತಾಮಸವರ್ಜನಮ್ ॥

ತತೋ ನಿರ್ದೇಶಮುದ್ದಿಷ್ಟಂ ಶೀಲಸಂಪಾದನಂ ತತಃ ।
ಕ್ರಮಾಲ್ಲಾಕ್ಷಣಮೇತೇಷಾಂ ಕಥಯಾಮಿ ನಿಶಮ್ಯತಾಮ್ ॥

**ಟೀಕು॥** ಏತತ್ ಸ್ಥಲಂ=ಈ ಶರಣಸ್ಥಲವು, ಧರ್ಮಭೇದತಃ=ಆಚಾರಭೇದದದೆಸೆಯಿಂದೆ, ಚತುರ್ಧಾ=ನಾಲ್ಕುಪ್ರಕಾರವಾಗಿ, ಸಮಾಖ್ಯಾತಂ=ಹೇಳಲುಪಟ್ಟಿತ್ತು. ಆದೌ=ಮೊದಲಲ್ಲಿ, ಶರಣಂ=ಶರಣ ಸ್ಥಲವು ಸಮಾಖ್ಯಾತಂ=ಹೇಳಲುಪಟ್ಟಿತ್ತು. ತತಃ=ಬಳಿಕ ತಾಮಸವರ್ಜನಂ= ತಾಮಸನಿರಸನಸ್ಥಲವು, ತತಃ=ಬಳಿಕ, ನಿರ್ದೇಶಂ=ನಿರ್ದೇಶಸ್ಥಲವು, ತತಃ=ಬಳಿಕ, ಶೀಲಸಂಪಾದನಂ= ಶೀಲಸಂಪಾದನಸ್ಥಲವು, ಉದ್ದಿಷ್ಟಂ=ಉದ್ದೇಶಿಸಲುಪಟ್ಟಿತ್ತು. ಏತೇಷಾಂ=ಈ ನಾಲ್ಕು ಸ್ಥಲಂಗಳ ಲಕ್ಷಣಂ=ಲಕ್ಷಣವನು, ಕ್ರಮಾತ್=ಕ್ರಮದಿಂದೆ, ಕಥಯಾಮಿ=ಹೇಳುತ್ತಿದ್ದೇನೆ. ನಿಶಮ್ಯತಾಂ= ಕೇಳಲುಪಡಲಿ. ॥೪॥

**ಸೂತ್ರ॥** ಬಳಿಕ "ಸತೀ ಚಾಹಂ ಪತಿರ್ಲಿಂಗಂ ಹೃದಿ ಯುಕ್ತಃ ಸ್ವಯಂಪ್ರಭುಃ।
ಪ್ರಾಪಂಚಿಕಸುಖಂ ನಾಸ್ತಿ ಶರಣಸ್ಥಲಮುತ್ತಮಮ್"॥ ಯೆಂಬ ಶಾಂಕರ ಸಂಹಿತಾರ್ಥವನು ಪ್ರಕಟಿಸುತ್ತ ಶರಣಸ್ಥಲವುಳ್ಳಾತನನು ಹೇಳುತ್ತಿರ್ದಪಂ.

## ೩೭. ಶರಣಸ್ಥಲೇ ಶರಣಸ್ಥಲಮ್

ಗ್ರಂಥ॥ **ಸತೀವ ರಮಣೇ ಯಸ್ತು ಶಿವೇ ಶಕ್ತಿಂ ವಿಭಾವಯನ್ ।
ತದನ್ಯವಿಮುಖಃ ಸೋಽಯಂ ಜ್ಞಾತಃ ಶರಣನಾಮವಾನ್ ॥**

**ಟೀಕು॥** ರಮಣೇ ವಿಷಯೇ=ಪ್ರಾಣಕಾಂತನ ವಿಷಯವಾಗಿ, ಸತೀವ=ಪತಿವ್ರತೆಯಾದ ಸ್ತ್ರೀಯೋಪಾದಿಯಲ್ಲಿ, ಯಸ್ತು=ಆವನಾನೊಬ್ಬ ಶರಣನಾಯಿತ್ತಾದೊಡೆ, ಶಿವೇ ವಿಷಯೇ=ಶಿವಲಿಂಗ ವಿಷಯವಾಗಿ, ಶಕ್ತಿಂ=ತನ್ನನ್ನು ಶಕ್ತಿಯನಾಗಿ, ವಿಭಾವಯನ್=ಭಾವಿಸುತ್ತ, ತದನ್ಯ ವಿಮುಖಃ=ಆ ಶಿವಲಿಂಗದದೆಸೆಯಿಂದೆ ಅನ್ಯವಾದ ದೇವತಾಂತರಂಗಳಲ್ಲಿ ಅಡ್ಡಮುಖವುಳ್ಳಾತನು, ಸಃ ಅಯಂ=ಆ ಈತನೇ, ಶರಣನಾಮವಾನ್=ಶರಣಸ್ಥಲವುಳ್ಳಾತನೆಂದು, ಜ್ಞಾತಃ=ಅರಿಯಲುಪಡುವನು. ॥೫॥

**ಸೂತ್ರ॥** ಬಳಿಕ ಶಿವಲಿಂಗಾಸಕ್ತನೆ ಶರಣನೆಂದು ದೃಷ್ಟಾಂತಪೂರ್ವಕವಾಗಿ, ಸಪ್ತಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಪರಿಜ್ಞಾತೇ ಶಿವೇ ಸಾಕ್ಷಾತ್ಕೋವಾಽನ್ಯಮಭಿಕಾಂಕ್ಷತಿ ।**
**ನಿಧಾನೇ ಮಹತಿ ಪ್ರಾಪ್ತೇ ಕಃ ಕಾಚಂ ಯಾಚತೇಽನ್ಯತಃ ॥**

**ಟೀಕು||** ಶಿವೇ=ಶಿವಲಿಂಗವು, ಸಾಕ್ಷಾತ್=ಪ್ರತ್ಯಕ್ಷವಾಗಿ, ಪರಿಜ್ಞಾತೇ ಸತಿ=ಅರಿಯಲುಪಡೆಯಲಿಕೆಯಾಗಿ, ಕಃ=ಆವಾತನು, ಅನ್ಯಂ=ದೇವತಾಂತರವನು, ಅಭಿಕಾಂಕ್ಷತಿ=ಬಯಸುತ್ತಿರ್ದಪನು? ಬಯಸಲಿಲ್ಲವೆಂಬುದರ್ಥ. ಮಹತಿ ನಿಧಾನೇಪ್ರಾಪ್ತೇ ಸತಿ=ಮಹಾನಿಧಿಯು ಬರಲಿಕೆಯಾಗಿ ಕಃ=ಆವಾತನು, ಕಾಚಂ=ಗಾಜನು, ಅನ್ಯತಃ=ಮತ್ತೊರ್ವನದೆಸೆಯಿಂದೆ, ಯಾಚತೇ=ಬೇಡುತ್ತಿರ್ದಪನು? ಬೇಡಲಿಲ್ಲವೆಂಬುದರ್ಥ. ||೬||

**ಗ್ರಂಥ||** **ಶಿವಾನಂದಂ ಸಮಾಸಾದ್ಯ ಕೋ ವಾಽನ್ಯಮುಪತಿಷ್ಠತೇ ।**
**ಗಂಗಾಽಮೃತಂ ಪರಿತ್ಯಜ್ಯ ಕಃ ಕಾಂಕ್ಷೇನ್ಮೃಗತೃಷ್ಣಿಕಾಮ್ ॥**

**ಟೀಕು||** ಶಿವಾನಂದಂ=ಶಿವಾನಂದವನು, ಸಮಾಸಾದ್ಯ=ಎಯ್ದಿ, ಕೋ ವಾ=ಆರು ತಾನೆ, ಅನ್ಯಂ=ಮಿಕ್ಕಾದ ದೇವತೆಗಳನು, ಉಪತಿಷ್ಠತೇ=ಆಶ್ರಯಿಸಿಯಾನು? ಯಾರನ್ನೂ ಇಲ್ಲವೆಂದರ್ಥ. ಗಂಗಾಮೃತಂ=ಗಂಗೋದಕವನು, ಪರಿತ್ಯಜ್ಯ=ಬಿಟ್ಟು, ಕಃ=ಆವಾತನು, ಮೃಗತೃಷ್ಣಿಕಾಂ=ಮರೀಚಿಕಾ ಜಲವನು, ಕಾಂಕ್ಷೇತ್=ಇಚ್ಛಿಸಿಯಾನು? ಹಾಗೆ ಶಿವನ ಹೊರತು ಅನ್ಯ ದೇವತೆಗಳ ವಿಷಯದಲ್ಲಿ ವಿಮುಖನಾದವನೇ ಶರಣನೆಂದರ್ಥ. ||೭||

**ಗ್ರಂಥ||** **ಸಂಸಾರತಿಮಿರಚ್ಛೇದೇ ವಿನಾ ಶಂಕರಭಾಸ್ಕರಮ್ ।**
**ಪ್ರಭವಂತಿ ಕಥಂ ದೇವಾಃ ಖದ್ಯೋತಾ ಇವ ದೇಹಿನಾಮ್ ॥**

**ಟೀಕು||** ದೇಹಿನಾಂ=ಜೀವರುಗಳ, ಸಂಸಾರತಿಮಿರಚ್ಛೇದೇ=ಸಂಸಾರವೆಂಬ ಕಗ್ಗತ್ತಲೆಯನು ತೊಲಗಿಸುವಲ್ಲಿ, ಶಂಕರಭಾಸ್ಕರಂ=ಶಿವಲಿಂಗವೆಂಬ ಸೂರ್ಯ ಹೊರತಾಗಿ, ಖದ್ಯೋತಾ ಇವ ಸ್ಥಿತಾಃ=ಮಿಂಚುಂಬುಳುಗಳೋಪಾದಿಯಲ್ಲಿಯಿರುತ್ತಿರ್ದ್ದ, ದೇವಾಃ=ವಿಷ್ಣ್ವಾದಿ ದೇವತೆಗಳು, ಕಥಂ ಪ್ರಭವಂತಿ=ಆವ ಪ್ರಕಾರದಿಂದೆ ಸಮರ್ಥರಾಗುತ್ತಿರ್ದಪರು? ಸಮರ್ಥರಲ್ಲವೆಂಬುದರ್ಥ. ||೮||

**ಗ್ರಂಥ||** **ಸಂಸಾರಾರ್ತಃ ಶಿವಂ ಯಾಯಾದ್ಬ್ರಹ್ಮಾದ್ಯೈಃ ಕಿಂ ಫಲಂ ಸುರೈಃ ।**
**ಚಕೋರಸ್ತೃಷಿತಃ ಪಶ್ಯೇಚ್ಚಂದ್ರಂ ಕಿಂ ತಾರಕಾ ಅಪಿ ॥**

**ಟೀಕು||** ಸಂಸಾರಾರ್ತಃ=ಸಂಸಾರದಿಂದೆ ನೊಂದಾತನು, ಶಿವಂ=ಶಿವನನು, ಯಾಯಾತ್=ಎಯ್ದುವದು. ಬ್ರಹ್ಮಾದ್ಯೈಃ=ಬ್ರಹ್ಮವಿಷ್ಣು ಮೊದಲಾಗುಳ್ಳ, ಸುರೈಃ=ದೇವತೆಗಳಿಂದೆ, ಕಿಂ ಫಲಂ=ಏನುಫಲವು? ಏನೂ ಫಲವಿಲ್ಲವೆಂಬುದರ್ಥ. ತೃಷಿತಃ=ಸಂಜಾತವಾದ ಬಾಯಾರಿಕೆ ಉಳ್ಳ, ಚಕೋರಃ=

ಚಕೋರಪಕ್ಷಿಯು, ಚಂದ್ರಂ=ಚಂದ್ರನನು, ಪಶ್ಯೇತ್=ನೋಡುವುದು. ತಾರಕಾ ಅಪಿ=ನಕ್ಷತ್ರಗಳನಾಯಿತ್ತಾದೊಡೆ, ಪಶ್ಯೇತ್ ಕಿಂ=ನೋಡುವುದೆಯೇನು? ನೋಡಲಿಲ್ಲವೆಂಬುದರ್ಥ. ॥೯॥

**ಗ್ರಂಥ॥** ಶಿವ ಏವ ಸಮಸ್ತಾನಾಂ ಶರಣ್ಯಃ ಶರಣಾರ್ಥಿನಾಮ್ ।
ಸಂಸಾರೋರಗದಷ್ಟಾನಾಂ ಸರ್ವಜ್ಞಃ ಸರ್ವದೋಷಹಾ ॥

**ಟೀಕು॥** ಸಂಸಾರೋರಗದಷ್ಟಾನಾಂ=ಸಂಸಾರವೆಂಬ ಸರ್ಪನಿಂದೆ ಕಚ್ಚಲುಪಟ್ಟ, ಅತ ಏವ=ಇದುಕಾರಣವಾಗಿಯೆ, ಶರಣಾರ್ಥಿನಾಂ ಸಮಸ್ತಾನಾಂ=ರಕ್ಷಣೆಯನು ಬಯಸುತ್ತಿರ್ದ್ದ ಸಮಸ್ತ ಜನರುಗಳಿಗೆ, ಶರಣ್ಯಃ=ರಕ್ಷಿಸುವಲ್ಲಿ ಸಾಧುವಾಗಿರ್ದ್ದ, ಸರ್ವಜ್ಞಃ ಶಿವ ಏವ= ಸರ್ವಜ್ಞನಾದ ಶಿವನೊರ್ವನೆ, ಸರ್ವದೋಷಹಾ=ಸಮಸ್ತದೋಷವನು ಪರಿಹರಿಸುತ್ತಿರ್ದ್ದ ಆತನು. ॥೧೦॥

**ಗ್ರಂಥ॥** ಶಿವಜ್ಞಾನೇ ಸಮುತ್ಪನ್ನೇ ಪರಾನಂದಃ ಪ್ರಕಾಶತೇ ।
ತದಾಸಕ್ತಮನಾ ಯೋಗೀ ನಾನ್ಯತ್ರ ರಮತೇ ಸುಧೀಃ ॥

**ಟೀಕು॥** ಶಿವಜ್ಞಾನೇ=ಶಿವಲಿಂಗಜ್ಞಾನವು, ಸಮುತ್ಪನ್ನೇಸತಿ=ಹುಟ್ಟಲಿಕೆಯಾಗಿ, ಪರಾನಂದಃ= ಪರಮಾನಂದವು, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪುದು. ತದಾಸಕ್ತಮನಾಃ=ಆ ಶಿವಜ್ಞಾನದಲ್ಲಿ ಲಂಪಟವಾದ ಚಿತ್ತವುಳ್ಳ, ಸುಧೀಃ ಯೋಗೀ=ಲೇಸಾದ ಬುದ್ಧಿಯುಳ್ಳ ಶಿವಯೋಗಿಯು, ಅನ್ಯತ್ರ= ಮತ್ತೊಂದೆಡೆಯಲ್ಲಿ, ನ ರಮತೇ=ಕ್ರೀಡಿಸುತ್ತಿರನು. ॥೧೧॥

**ಸೂತ್ರ॥** ಬಳಿಕ ಶರಣಸ್ಥಲವನು ಮುಗಿಯುಸುತ್ತಿರ್ದ್ದಪಂ.

**ಗ್ರಂಥ॥** ತಸ್ಮಾತ್ಸರ್ವಪ್ರಯತ್ನೇನ ಶಂಕರಂ ಶರಣಂ ಗತಃ ।
ತದನಂತಸುಖಂ ಪ್ರಾಪ್ಯ ಮೋದತೇ ನಾನ್ಯಚಿಂತಯಾ ॥

**ಟೀಕು॥** ತಸ್ಮಾತ್=ಅದು ಕಾರಣವಾಗಿ, ಸರ್ವಪ್ರಯತನ್ನೇನ=ಸಮಸ್ತಪ್ರಯತ್ನದಿಂದೆಯು, ಶಂಕರಂ=ಶಿವನನು, ಶರಣಂ=ರಕ್ಷಕನಾಗಿ, ಗತಃ=ಎಯ್ದಿರ್ದ್ದ ಆತನು, ತದನಂತಸುಖಂ ಪ್ರಾಪ್ಯ=ಆ ಶಿವನದೆಸೆಯಿಂದಲಾದ ಅನಂತಸುಖಲಾಭದಿಂದೆ, ಮೋದತೇ=ಸಂತೋಷಿಸುತ್ತಿರ್ದ್ದಪನು. ಅನ್ಯ ಚಿಂತಯಾ=ದೇವತಾಂತರಧ್ಯಾನದಿಂದೆ, ನ ಮೋದತೇ=ಸಂತೋಷಿಸುತ್ತಿರನು. ॥೧೨॥

**ಇತಿ ಶರಣಸ್ಥಲಮ್**

## ೩೮. ಶರಣಸ್ಥಲೇ ತಾಮಸನಿರಸನಸ್ಥಲಮ್

**ಸೂತ್ರ॥** ಬಳಿಕ ಶರಣನಿಂದೆ ಮಾಡಲುಯೋಗ್ಯವಾದ ತಾಮಸನಿರಸನವನು ಹೇಳುತ್ತಿರ್ದ್ದಪಂ.

**ಗ್ರಂಥ॥** **ಶಿವಾಸಕ್ತಪರಾನಂದಮೋದಿನಾ ಗುರುಣಾ ಯತಃ ।**
**ನಿರಸ್ಯಂತೇ ತಮೋಭಾವಾಸ್ಸ ತಾಮಸನಿರಾಸಕಃ ॥**

**ಟೀಕು॥** ಶಿವಾಸಕ್ತ=ಶಿವನಲ್ಲಿ ತತ್ಪರನಾಗಿ, ಪರಾನಂದಮೋದಿನಾ=ಪರಮಾನಂದದಿಂದೆ ಸಂತೋಷಿಸುತ್ತಿರ್ದ್ದ, ಗುರುಣಾ=ಶ್ರೇಷ್ಠನಾಗಿರ್ದ್ದ, ಯೇನ=ಆವನಾನೊಬ್ಬ ಶರಣನಿಂದೆ, ತಮೋಭಾವಾಃ=ತಮೋಗುಣಚೇಷ್ಟೆಗಳು, ಯತಃ=ಆವುದಾನೊಂದು ಕಾರಣವಾಗಿ, ನಿರಸ್ಯಂತೇ= ತೊಲಗಿಸಲುಪಡುತ್ತಿರ್ದ್ದಪವು. ತತಃ=ಅದು ಕಾರಣವಾಗಿ, ಸಃ=ಆತನು, ತಾಮಸನಿರಾಸಕಃ=ತಾಮಸ ನಿರಸನವ ಮಾಡುತ್ತಿರ್ದ್ದ ಆತನು, ಭವೇತ್=ಅಹನು. ॥೧೩॥

**ಸೂತ್ರ॥** ಬಳಿಕ ತಮೋಗುಣಮಿಶ್ರವಾದ ಜ್ಞಾನದಿಂದೆ ಗತಿಯಿಲ್ಲವೆಂದು ಹೇಳಿ ಸತ್ವಗುಣ ಧರ್ಮವನು ಹೇಳುತ್ತಿರ್ದ್ದಪಂ.

**ಗ್ರಂಥ॥** **ಯಸ್ಯ ಜ್ಞಾನಂ ತಮೋಮಿಶ್ರಂ ನ ತಸ್ಯ ಗತಿರಿಷ್ಯತೇ ।**
**ಸತ್ವಂ ಹಿ ಜ್ಞಾನಯೋಗಸ್ಯ ನೈರ್ಮಲ್ಯಂ ವಿದುರುತ್ತಮಾಃ ॥**

**ಟೀಕು॥** ಯಸ್ಯ=ಆವನಾನೊಬ್ಬನ, ಜ್ಞಾನಂ=ಜ್ಞಾನವು, ತಮೋಮಿಶ್ರಂ=ತಮೋಗುಣದೊಡನೆ ಮಿಶ್ರವಾಗಿದ್ದ ಅದು, ತಸ್ಯ=ಆತನಿಗೆ, ಗತಿಃ=ಸದ್ಗತಿಯು, ನೇಷ್ಯತೇ=ಇಚ್ಛೈಸಲುಪಡುತ್ತಿರದು. ಸತ್ವಂ ಹಿ=ಸತ್ವಗುಣವನಾಯಿತ್ತಾದೊಡೆ, ಜ್ಞಾನಯೋಗಸ್ಯ=ಜ್ಞಾನಯೋಗಕ್ಕೆ, ನೈರ್ಮಲ್ಯಂ=ನಿರ್ಮಲವಾದ ಸಾಧನವನಾಗಿ, ಉತ್ತಮಾಃ=ಶ್ರೇಷ್ಠರುಗಳು, ವಿದುಃ=ಅರಿವುತ್ತಿರ್ದ್ದಪರು. ॥೧೪॥

ಸೂತ್ರ॥ ಬಳಿಕ "ಸತ್ವಾತ್ ಸುಖಂ ಚ ಜ್ಞಾನಂ ಚ ವೈರಾಗ್ಯಂ ಶೌಕ್ಲ್ಯಮೇವ ಚ।
ದುಃಖಂ ಪ್ರವೃತ್ತಿರಾಗೌ ಚ ಲೌಹಿತ್ಯಂ ರಜಸೋ ಭವೇತ್।
ಮೋಹೀ ಭ್ರಾಂತಿಸ್ತಥಾಽಽಲಸ್ಯಂ ಕಾರ್ಷ್ಣ್ಯಂ ಚ ತಮಸೋ ಭವೇತ್"॥
ಯೆಂಬ ಸೂತಸಂಹಿತಾರ್ಥವನು ಪ್ರಕಟಿಸುತ್ತ ಗುಣತ್ರಯಯುಕ್ತರನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಶಮೋ ದಮೋ ವಿವೇಕಶ್ಚ ವೈರಾಗ್ಯಂ ಪೂರ್ಣಭಾವನಾ ।**
**ಕ್ಷಾಂತಿಃ ಕಾರುಣ್ಯಸಂಪತ್ತಿಃ ಶ್ರದ್ಧಾ ಸತ್ಯಸಮುದ್ಭವಾ ॥**

**ಶಿವಭಕ್ತಿಃ ಪರೋ ಧರ್ಮಶ್ಶಿವಜ್ಞಾನಸ್ಯ ಬಾಂಧವಾಃ ।**
**ಏತೈರ್ಯುಕ್ತೋ ಮಹಾಯೋಗೀ ಸಾತ್ವಿಕಃ ಪರಿಕೀರ್ತಿತಃ ॥**

**ಟೀಕು॥** ಶಮಃ=ಶಾಂತಿಯು, ದಮಃ=ಇಂದ್ರಿಯನಿಗ್ರಹವು, ವಿವೇಕಃ ಚ=ಜೀವೇಶ್ವರರ ವಿವೇಕವು, ವೈರಾಗ್ಯಂ=ವಿಷಯ ವಿರಕ್ತಿಯು, ಪೂರ್ಣಭಾವನಾ=ಪರಿಪೂರ್ಣಧ್ಯಾನವು, ಕ್ಷಾಂತಿಃ=ಸೈರಣೆ, ಕಾರುಣ್ಯಸಂಪತ್ತಿಃ=ಕೃಪಾಸಂಪತ್ತಿಯು, ಸತ್ಯಸಮುದ್ಭವಾ ಶ್ರದ್ಧಾ=ಸತ್ಯದಿಂದೆ ಹುಟ್ಟಿದ ಶ್ರದ್ಧೆಯು, ಶಿವಭಕ್ತಿಃ=ಶಿವಭಕ್ತಿಯು, ಪರೋ ಧರ್ಮಃ=ಉತ್ಕೃಷ್ಟವಾದ ಶಿವಾಚಾರವು, ಶಿವಜ್ಞಾನಸ್ಯ=ಶಿವಜ್ಞಾನಕ್ಕೆ, ಬಾಂಧವಾಃ=ಬಂಧುಗಳಾಗಿರ್ದ್ದ, ಏತೈಃ=ಈ ದಶಗುಣಂಗಳೊಡನೆ, ಯುಕ್ತಃ=ಕೂಡಿರ್ದ್ದ, ಮಹಾಯೋಗೀ=ಮಹಾಯೋಗೀಶ್ವರನೆ, ಸಾತ್ವಿಕಃ=ಸತ್ವಗುಣಯುಕ್ತನೆಂದು, ಪರಿಕೀರ್ತಿತಃ=ಹೇಳಲು ಪಟ್ಟನು. ॥೧೬॥

**ಸೂತ್ರ॥** ಬಳಿಕ ರಜೋಗುಣಯುಕ್ತನನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಕಾಮಕ್ರೋಧಮಹಾಮೋಹಮದಮಾತ್ಸರ್ಯವಾರಣಾಃ ।**
**ಶಿವಜ್ಞಾನಮೃಗೇಂದ್ರಸ್ಯ ಕಥಂ ತಿಷ್ಠಂತಿ ಸನ್ನಿಧೌ ॥**

**ಟೀಕು॥** ಕಾಮಕ್ರೋಧಮಹಾಮೋಹಮದಮಾತ್ಸರ್ಯವಾರಣಾಃ=ಕಾಮ ಕ್ರೋಧ ಮಹಾ ಮೋಹ ಮದ ಮಾತ್ಸರ್ಯವೆಂಬ ಗಜಂಗಳು, ಶಿವಜ್ಞಾನ ಮೃಗೇಂದ್ರಸ್ಯ=ಶಿವಜ್ಞಾನವೆಂಬ ಸಿಂಹದ, ಸನ್ನಿಧೌ=ಸಮೀಪದಲ್ಲಿ, ಕಥಂ=ಆವ ಪ್ರಕಾರದಿಂದೆ, ತಿಷ್ಠಂತಿ=ಇರುತ್ತಿರ್ದ್ದವು? ಇರಲಮ್ಮವೆಂಬುದರ್ಥ.॥೧೭॥

**ಗ್ರಂಥ॥** **ಯತ್ರ ಕುತ್ರಾಪಿ ವಾ ದ್ವೇಷೀ ಪ್ರಪಂಚೇ ಶಿವರೂಪಿಣಿ ।**
**ಶಿವದ್ವೇಷೀ ಸ ವಿಜ್ಞೇಯೋ ರಜಸಾऽऽವಿಷ್ಟಮಾನಸಃ ॥**

**ಟೀಕು॥** ರಜಸಾऽऽವಿಷ್ಟಮಾನಸಃ=ರಜೋಗುಣರೂಪವಾದ ಕಾಮಕ್ರೋಧಾದಿಗಳಿಂದೆ ಮುಸುಕಲು ಪಟ್ಟ ಮನಸ್ಸುಳ್ಳ, ಯಃ=ಆವನಾನೊಬ್ಬನು, ಶಿವರೂಪಿಣಿ=ಶಿವಸ್ವರೂಪವುಳ್ಳ, ಯತ್ರಕುತ್ರ ಪ್ರಪಂಚೇऽಪಿ=ಆವಾವಪ್ರಪಂಚಿನಲ್ಲಿಯಾಯಿತ್ತಾದೊಡೆಯು, ದ್ವೇಷೀ=ದ್ವೇಷವುಳ್ಳ ಸಃ=ಆತನು, ಶಿವದ್ವೇಷೀ=ಶಿವದ್ವೇಷಿಯೆಂದು, ವಿಜ್ಞೇಯಃ=ಅರಿಯಲು ಯೋಗ್ಯನು. ॥೧೮॥

**ಸೂತ್ರ॥** ಬಳಿಕ ತಮೋಗುಣಯುಕ್ತನನು ಹೇಳುತ್ತಿರ್ದ್ದಪಂ.

**ಗ್ರಂಥ॥** **ಯೋ ದ್ವೇಷ್ಟಿ ಸಕಲಾನ್ ಲೋಕಾನ್ ಯೋ ವಾऽಹಂಕುರುತೇ ಸದಾ ।**
**ಯೋऽಸತ್ಯಭಾವನಾಯುಕ್ತಸ್ಸ ತಾಮಸ ಇತಿ ಸ್ಮೃತಃ ।**

**ಟೀಕು॥** ಯಃ=ಆವನಾನೊಬ್ಬ ಆತನು, ಸಕಲಾನ್ ಲೋಕಾನ್=ಸಮಸ್ತ ಜನರುಗಳನು, ದ್ವೇಷ್ಟಿ=ದ್ವೇಷಿಸುತ್ತಿರ್ದ್ದಪನು, ಯೋ ವಾ=ಆವಾತನು, ಸದಾ=ಎಲ್ಲಾ ಕಾಲದಲ್ಲಿಯು, ಅಹಂ ಕುರುತೇ= ಅಹಂಕರಿಸುತ್ತಿರ್ದ್ದಪನು. ಯಃ=ಆವಾತನು, ಅಸತ್ಯಭಾವನಾಯುಕ್ತಃ=ಅಸತ್ಯಭಾವದೊಡನೆ ಕೂಡಿದ್ದಾತನು, ಸಃ=ಆತನು, ತಾಮಸ ಇತಿ=ತಮೋಗುಣಯುಕ್ತನೆಂದು, ಸ್ಮೃತಃ=ನೆನೆಯಲ್ಪಪಟ್ಟನು. ॥೧೯॥

**ಸೂತ್ರ॥** ಬಳಿಕ ಈ ತಮೋಗುಣವು ಶರಣರಿಗೆ ಇಲ್ಲವೆಂದು ಸೂತ್ರದ್ವಯದಿಂದೆ ಹೇಳಿ ತಾಮಸನಿರಸನಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ॥** **ತಮೋಮೂಲಾ ಹಿ ಸಂಜಾತಾ ರಾಗದ್ವೇಷಾದಿಪಾದಪಾಃ ।**
**ಶಿವಜ್ಞಾನಕುಠಾರೇಣ ಛೇದ್ಯಂತೇ ಹಿ ನಿರಂತರಮ್ ॥**

**ಟೀಕು॥** ತಮೋಮೂಲಾ ಹಿ=ತಮೋಗುಣವೆ ಬೇರಾಗುಳ್ಳವಾಗಿ, ಸಂಜಾತಾಃ=ಹುಟ್ಟಿರ್ದ್ದ ರಾಗದ್ವೇಷಾದಿಪಾದಪಾಃ=ಕಾಮಕ್ರೋಧಾದಿ ರಾಜಸವೃಕ್ಷಂಗಳು, ಶಿವಜ್ಞಾನಕುಠಾರೇಣ=ಸಾತ್ವಿಕವಾದ ಶಿವಜ್ಞಾನವೆಂಬ ಕೊಡಲಿಯಿಂದೆ, ನಿರಂತರಂ=ಎಡದೆರಹಿಲ್ಲದೆ, ಛೇದ್ಯಂತೇ=ಶರಣರಿಂದೆ ಛೇದಿಸಲುಪಡುತ್ತಿರ್ದ್ದಪವು. ॥೨೦॥

**ಗ್ರಂಥ॥** **ಶಿವಜ್ಞಾನೇ ಸಮುತ್ಪನ್ನೇ ಸಹಸ್ರಾದಿತ್ಯಸನ್ನಿಭೇ ।**
**ಕುತಸ್ತಮೋವಿಕಾರಾಃ ಸ್ಯುಃ ಮಹತಾಂ ಶಿವಯೋಗಿನಾಮ್ ॥**

**ಟೀಕು॥** ಸಹಸ್ರಾದಿತ್ಯಸನ್ನಿಭೇ=ಸಾವಿರ ಸೂರ್ಯರಿಗೆ ಸಮಾನವಾಗಿರ್ದ್ದ, ಶಿವಜ್ಞಾನೇ=ಶಿವಜ್ಞಾನವು, ಸಮುತ್ಪನ್ನೇ ಸತಿ=ಹುಟ್ಟಲಿಕೆಯಾಗಿ, ಮಹತಾಂ=ಮಹಾಪುರುಷರಾದ, ಶಿವಯೋಗಿನಾಂ= ಶಿವಶರಣರಿಗೆ, ತಮೋವಿಕಾರಾಃ=ತಮೋಗುಣವಿಕಾರವಾಗಿರ್ದ್ದ ಅಂಧಕಾರಂಗಳು, ಕುತಃ ಸ್ಯುಃ= ಎಲ್ಲಿ ಅಹವು? ಆಗವೆಂಬುದರ್ಥ. ॥೨೧॥

**ಇತಿ ತಾಮಸನಿರಸನಸ್ಥಲಮ್**

## ೩೯. ಶರಣಸ್ಥಲೇ ನಿರ್ದೇಶಸ್ಥಲಮ್

**ಸೂತ್ರ॥** ಬಳಿಕ ತಾಮಸನಿರಸನದಿಂದೆ ಪ್ರಕಾಶಿಸುವ ಶಿವಜ್ಞಾನನಿರ್ದೇಶಸ್ಥಲವನು ಹೇಳುತ್ತಿರ್ದ್ದಪಂ.

**ಗ್ರಂಥ॥** **ನಿರಾಕೃತ್ಯ ತಮೋಭಾಗಂ ಸಂಸಾರಸ್ಯ ಪ್ರವರ್ತಕಮ್ ।**
**ನಿರ್ದಿಶ್ಯತೇ ತು ಯದ್‌ಜ್ಞಾನಂ ಸ ನಿರ್ದೇಶ ಇತಿ ಸ್ಮೃತಃ ॥**

**ಟೀಕು||** ಸಂಸಾರಸ್ಯ=ಸಂಸಾರಕ್ಕೆ, ಪ್ರವರ್ತಕಂ=ಮೂಲಕಾರಣವಾಗಿ ವರ್ತಿಸುತ್ತಿರ್ದ್ದ, ತಮೋಭಾಗಂ=ತಮೋಗುಣ ಭಾಗೆಯನು, ನಿರಾಕೃತ್ಯ=ತೊಲಗಿಸಿ, ಯತ್ ಜ್ಞಾನಂ ತು=ಆವುದಾನೊಂದು ಶಿವಜ್ಞಾನವಾಯಿತ್ತಾದೊಡೆ, ನಿರ್ದಿಶ್ಯತೇ=ನಿರ್ದೇಶಿಸಲುಪಡುತ್ತಿರ್ದ್ದಪುದು. ಸಃ=ಅದು, ನಿರ್ದೇಶ ಇತಿ=ನಿರ್ದೇಶವೆಂದು, ಸ್ಮೃತಃ=ನೆನೆಯಲುಪಟ್ಟಿತು. ||೨೨||

**ಸೂತ್ರ||** ಬಳಿಕ ಶಿವಜ್ಞಾನವನು ನಿರ್ದೇಶಿಸುವ ಗುರುಮಹತ್ವವನು ದೃಷ್ಟಾಂತಪೂರ್ವಕವಾಗಿ, ಸಪ್ತಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಗುರುರೇವ ಪರಂ ತತ್ತ್ವಂ ಪ್ರಕಾಶಯತಿ ದೇಹಿನಾಮ್ ।**
**ಕೋ ವಾ ಸೂರ್ಯಂ ವಿನಾ ಲೋಕೇ ತಮಸೋ ವಿನಿವರ್ತತೇ ॥**

**ಟೀಕು||** ಗುರುರೇವ="ಘೃಣಾತೀತ ಚಿತ್ತತ್ವಮತೋ ಗುರುಃ। ಸ್ಯಾದ್ಯಃಸಂಶಯಚ್ಛೇದಕ ಏವ ಸ ಸ್ಯಾತ್" ಯೆಂದು ಶಿವರಹಸ್ಯ ಪ್ರಸಿದ್ಧವಾದ ಶ್ರೀ ಗುರುವೆ, ದೇಹಿನಾಂ=ಪರಿಪಕ್ವರಾದ ದೇಹಿಗಳಿಗೆ, ಪರಂ ತತ್ತ್ವಂ=ಪರತತ್ತ್ವವನು, ಪ್ರಕಾಶಯತಿ=ಪ್ರಕಾಶಿಸುತ್ತಿರ್ದ್ದಪನು. ಲೋಕೇ=ಲೋಕದಲ್ಲಿ, ಸೂರ್ಯಂ ವಿನಾ=ಸೂರ್ಯ ಹೊರತಾಗಿ, ಕೋ ವಾ=ಆವಾತನು, ತಮಸೋऽಪಿ ವಿನಿವರ್ತತೇ=ಅಂಧಕಾರವನು ತೊಲಗಿಸುವ ಆತನು? ಆವಾತನೂ ತೊಲಗಿಸಲಿಲ್ಲವೆಂಬುದರ್ಥ. ||೨೩||

**ಗ್ರಂಥ||** **ಅಂತರೇಣ ಗುರುಂ ಸಿದ್ಧಂ ಕಥಂ ಸಂಸಾರನಿಷ್ಕೃತಿಃ ।**
**ನಿದಾನಜ್ಞಂ ವಿನಾ ವೈದ್ಯಂ ಕಿಂ ವಾ ರೋಗೋ ನಿವರ್ತತೇ ॥**

**ಟೀಕು||** ಸಿದ್ಧಂ ಗುರುಮಂತರೇಣ=ಸಿದ್ಧನಾದ ಶ್ರೀಗುರು ಹೊರತಾಗಿ, ಸಂಸಾರಸ್ಯ ನಿಷ್ಕೃತಿಃ=ಭವರೋಗದ ಬಿಡುಗಡೆಯು, ಕಥಂ=ಹೇಗಹುದು? ಹೇಗೆಯೂ ಆಗದೆಂಬುದರ್ಥ. ನಿದಾನಜ್ಞಂ=ರೋಗಚಿಕಿತ್ಸೆಯನು ಬಲ್ಲ, ವೈದ್ಯಂ ವಿನಾ=ವೈದ್ಯ ಹೊರತಾಗಿ, ರೋಗಃ=ವ್ಯಾಧಿಯು, ನಿವರ್ತತೇ ಕಿಂ ವಾ=ತೊಲಗುವದೇಯೇನು? ತೊಲಗಲಿಲ್ಲವೆಂಬುದರ್ಥ. ||೨೪||

**ಗ್ರಂಥ||** **ಅಜ್ಞಾನಮಲಿನಂ ಚಿತ್ತದರ್ಪಣಂ ಯೋ ವಿಶೋಧಯೇತ್ ।**
**ಪ್ರಜ್ಞಾವಿಭೂತಿಯೋಗೇನ ತಮಾಹುರ್ಗುರುಸತ್ತಮಮ್ ॥**

**ಟೀಕು||** ಅಜ್ಞಾನಮಲಿನಂ=ಅಜ್ಞಾನವೆಂಬ ಕಿಲುಬು ಹಿಡಿದ, ಚಿತ್ತದರ್ಪಣಮ್=ಚಿತ್ತವೆಂಬ ದರ್ಪಣವನು, ಪ್ರಜ್ಞಾವಿಭೂತಿಯೋಗೇನ="ಪ್ರಜ್ಞಾನಂ ಬ್ರಹ್ಮ"ಯೆಂದು ಶ್ರುತಿಪ್ರಸಿದ್ಧವಾದ ಶಿವಜ್ಞಾನವೆಂಬ ವಿಭೂತಿಯಸಂಬಂಧದಿಂದೆ, ವಿಶೋಧಯೇತ್=ನಿರ್ಮಲವನುಮಾಡುವನು, ತಂ=ಆತನನು, ಗುರುಸತ್ತಮಂ=ಗುರುಶ್ರೇಷ್ಠನನಾಗಿ, ಆಹುಃ=ಹೇಳುತ್ತಿರ್ದ್ದಪರು. ||೨೫||

**ಗ್ರಂಥ॥** **ಅಪರೋಕ್ಷಿತತತ್ತ್ವಸ್ಯ ಜೀವನ್ಮುಕ್ತಸ್ವಭಾವಿನಃ ।**
**ಗುರೋಃ ಕಟಾಕ್ಷೇ ಸಂಸಿದ್ಧೇ ಕೋ ವಾ ಲೋಕೇಷು ದುರ್ಲಭಃ ॥**

**ಟೀಕು॥** ಅಪರೋಕ್ಷಿತತತ್ತ್ವಸ್ಯ=ಸ್ವಸ್ವರೂಪಿನಿಂದೆ ಸಾಕ್ಷಾತ್ಕರಿಸಲುಪಟ್ಟ ಶಿವತತ್ತ್ವವುಳ್ಳ, ಜೀವನ್ಮುಕ್ತ ಸ್ವಭಾವಿನಃ="ವಿಕಲ್ಪರಹಿತಂ ಜ್ಞಾನಂ ನಿಷೇಧರಹಿತಾ ಕ್ರಿಯಾ। ಅಲೋಕರಂಜಕಂ ರೂಪಂ ಜೀವನ್ಮುಕ್ತಸ್ಯ ಲಕ್ಷಣಮ್॥" ಯೆಂದು ವಾಸಿಷ್ಠದಲ್ಲಿ ಹೇಳಲುಪಟ್ಟ ಜೀವನ್ಮುಕ್ತನ ಸ್ವಭಾವವುಳ್ಳ, ಗುರೋಃ=ಶ್ರೀಗುರುವಿನ, ಕಟಾಕ್ಷೇ=ಕೃಪಾರಸಪೂರಿತವಾದ ಕಡೆಗಣ್ಣನೋಟವು, ಸಂಸಿದ್ಧೇ ಸತಿ=ಸಿದ್ಧವಾಗಲಿಕೆಯಾಗಿ ಲೋಕೇಷು=ಲೋಕಂಗಳಲ್ಲಿ, ಕೋ ವಾ ದುರ್ಲಭಃ=ಆವನು ಪಡೆಯಲು ಶಕ್ಯವಲ್ಲ.? ಸರ್ವರೂ ಪಡೆಯಬಹುದೆಂಬುದರ್ಥ. **॥೨೬॥**

**ಸೂತ್ರ॥** ಬಳಿಕ "ಗುರವೋ ಬಹವಃ ಸಂತಿ ಶಿಷ್ಯವಿತ್ತಾಪಹಾರಕಾಃ।
ಶಿಷ್ಯಹೃತ್ತಾಪಹಾರಸ್ತು ಗುರುರೇಕೋಽಪಿ ದುರ್ಲಭಃ"॥ ಯೆಂಬ ಶಿವರಹಸ್ಯಾರ್ಥವನು ಸೂತ್ರತ್ರಯದಿಂದೆ ಪ್ರಕಟಿಸುತ್ತಿರ್ದ್ದಪಂ.

**ಗ್ರಂಥ॥** **ಕೈವಲ್ಯಕಲ್ಪತರವೋ ಗುರವಃ ಕರುಣಾಲಯಾಃ ।**
**ದುರ್ಲಭಾ ಹಿ ಜಗತ್ಯಸ್ಮಿನ್ ಶಿವಾದ್ವೈತಪರಾಯಣಾಃ ॥**

**ಟೀಕು॥** ಕರುಣಾಲಯಾಃ=ಕೃಪೆಗೆ ಆಶ್ರಯವಾಗಿ, ಶಿವಾದ್ವೈತಪರಾಯಣಾಃ=ಶಿವಾದ್ವೈತದಲ್ಲಿ ತತ್ಪರರಾಗಿ, ಕೈವಲ್ಯಕಲ್ಪತರವಃ=ಪರಾಪರಮೋಕ್ಷವ ಕೊಡುವದಕ್ಕೆ ಕಲ್ಪವೃಕ್ಷಂಗಳಾದ, ಗುರವಃ= ಶ್ರೀಗುರುಗಳು, ಅಸ್ಮಿನ್ ಜಗತಿ=ಈ ಲೋಕದಲ್ಲಿ, ದುರ್ಲಭಾಃ=ಪಡೆಯಲು ಸಖ್ಯವಲ್ಲದೆಯಿದ್ದ ಅವರು, ಹಿ=ಪ್ರಸಿದ್ಧವು. **॥೨೭॥**

**ಗ್ರಂಥ॥** **ಕ್ಷೀರಾಬ್ಧಿರಿವ ಸಿಂಧೂನಾಂ ಸುಮೇರುರಿವ ಭೂಭೃತಾಮ್ ।**
**ಗ್ರಹಾಣಾಮಿವ ತಿಗ್ಮಾಂಶುರ್ಮಣೀನಾಮಿವ ಕೌಸ್ತುಭಃ ॥**

**ದ್ರುಮಾಣಾಮಿವ ಭದ್ರಶ್ರೀರ್ದೇವಾನಾಮಿವ ಶಂಕರಃ ।**
**ಗುರುಃ ಶಿವಃ ಪರಃ ಶ್ಲಾಘ್ಯೋ ಗುರೂಣಾಂ ಪ್ರಾಕೃತಾತ್ಮನಾಮ್ ॥**

**ಟೀಕು॥** ಸಿಂಧೂನಾಂ=ಸಮುದ್ರಂಗಳಿಗೆ, ಕ್ಷೀರಾಬ್ಧಿರಿವ=ಕ್ಷೀರಸಮುದ್ರದೋಪಾದಿಯಲ್ಲಿ, ಭೂಭೃತಾಂ= ಪರ್ವತಂಗಳಿಗೆ, ಸುಮೇರುರಿವ=ಹೇಮಾದ್ರಿಯೋಪಾದಿಯಲ್ಲಿ, ಗ್ರಹಾಣಾಂ=ಗ್ರಹಗಳಿಗೆ, ತಿಗ್ಮಾಂಶುರಿವ=ಸೂರ್ಯನೋಪಾದಿಯಲ್ಲಿ, ಮಣೀನಾಂ=ರತ್ನಂಗಳಿಗೆ, ಕೌಸ್ತುಭ ಇವ=ಕೌಸ್ತುಭದೋಪಾದಿಯಲ್ಲಿ, ದ್ರುಮಾಣಾಂ=ವೃಕ್ಷಂಗಳಿಗೆ, ಭದ್ರಶ್ರೀರಿವ=ಮಲಯಜದೋಪಾದಿಯಲ್ಲಿ, ದೇವಾನಾಂ=

ದೇವತೆಗಳಿಗೆ, ಶಂಕರ ಇವ=ಪರಮೇಶ್ವರನೋಪಾದಿಯಲ್ಲಿ, ಪ್ರಾಕೃತಾತ್ಮನಾಂ ಗುರೂಣಾಂ=ಪ್ರಾಕೃತ ಸ್ವಭಾವವುಳ್ಳ ಗುರುಗಳಿಗೆ, ಶಿವಃ ಪರಃ=ಶಿವಲಿಂಗದಲ್ಲಿ ತತ್ಪರನಾದ, ಗುರುಃ=ಶ್ರೀಗುರುಸ್ವಾಮಿಯು ಶ್ಲಾಘ್ಯಃ=ಪೂಜ್ಯನಾಗಿದ್ದಾತನು. ||೨೯||

**ಇತಿ ನಿರ್ದೇಶಸ್ಥಲಮ್**

## ೪೦ ಶರಣಸ್ಥಲೇ ಶೀಲಸಂಪಾದನಸ್ಥಲಮ್

**ಸೂತ್ರ||** ಬಳಿಕ ಆ ಶ್ರೀಗುರುವಿನಿಂದೆ ನಿರ್ದೇಶಿಸಲುಪಟ್ಟ ಶಿವಜ್ಞಾನವನು ಅರಿವ ಇಚ್ಛೆಯೀಗ ಶೀಲವೆಂದು ಹೇಳಿ ಸಪ್ತಸೂತ್ರಂಗಳಿಂದೆ ಶೀಲವುಳ್ಳಾತನನು ಹೇಳುತ್ತಿರ್ದಪಂ.

**ಗ್ರಂಥ||** **ಜಿಜ್ಞಾಸಾ ಶಿವತತ್ತ್ವಸ್ಯ ಶೀಲಮಿತ್ಯುಚ್ಯತೇ ಬುಧೈಃ ।**
**ನಿರ್ದೇಶ್ಯಯೋಗಾದಾರ್ಯಾಣಾಂ ತದ್ವಾನ್ ಶೀಲೀತಿ ಕಥ್ಯತೇ ॥**

**ಟೀಕು||** ಆರ್ಯಾಣಾಂ=ಪೂರ್ವೋಕ್ತ ಲಕ್ಷಣವನುಳ್ಳ ಆಚಾರ್ಯರಿಂದೆ, ನಿರ್ದೇಶ್ಯ ಯೋಗಾತ್=ನಿರ್ದೇಶಿಸಲು ಯೋಗ್ಯವಾದ ಜ್ಞಾನಯೋಗದದೆಸೆಯಿಂದೆ, ಶಿವತತ್ತ್ವಸ್ಯ=ಶಿವತತ್ತ್ವದ, ಜಿಜ್ಞಾಸಾ=ಅರಿವ ಇಚ್ಛೆಯು, ಶೀಲಮಿತಿ=ಶೀಲವೆಂದು, ಬುಧೈಃ=ಜ್ಞಾನಿಗಳಿಂದೆ, ಉಚ್ಯತೇ=ಹೇಳಲು ಪಡುತ್ತಿರ್ದಪುದು. ತದ್ವಾನ್=ಆ ಶೀಲವುಳ್ಳಾತನೀಗ, ಶೀಲೀತಿ=ಶೀಲಿಯೆಂದು, ಕಥ್ಯತೇ=ಹೇಳಲು ಪಡುತ್ತಿರ್ದಪನು. ||೩೦||

**ಗ್ರಂಥ||** **ಪ್ರಪನ್ನಾರ್ತಿಹರೇ ದೇವೇ ಪರಮಾತ್ಮನಿ ಶಂಕರೇ ।**
**ಭಾವಸ್ಯ ಸ್ಥಿರತಾಯೋಗಃ ಶೀಲಮಿತ್ಯುಚ್ಯತೇ ಬುಧೈಃ ॥**

**ಟೀಕು||** ಪ್ರಪನ್ನಾರ್ತಿಹರೇ=ರಕ್ಷಿಸುಯೆಂದು ಮರೆಹೊಕ್ಕವರ ದುಃಖವನು ಪರಿಹರಿಸುತ್ತಿರ್ದ, ದೇವೇ=ಕ್ರೀಡಾಶೀಲನಾಗಿರ್ದ, ಪರಮಾತ್ಮನಿ=ಪರಬ್ರಹ್ಮರೂಪವಾದ, ಶಂಕರೇ=ಪರಶಿವನಲ್ಲಿ, ಭಾವಸ್ಯ=ಭಾವದಲ್ಲಿ, ಸ್ಥಿರತಾಯೋಗಃ=ಸ್ಥಿರತ್ವಯೋಗವು, ಶೀಲಮಿತಿ=ಶೀಲವೆಂದು, ಬುಧೈಃ=ಜ್ಞಾನಿಗಳಿಂದೆ, ಉಚ್ಯತೇ=ಹೇಳಲುಪಡುತ್ತಿರ್ದಪುದು. ||೩೧||

**ಗ್ರಂಥ||** **ಶೀಲಂ ಶಿವೈಕವಿಜ್ಞಾನಂ ಶಿವಧ್ಯಾನೈಕತಾನತಾ ।**
**ಶಿವಪ್ರಾಪ್ತಿಸಮುತ್ಕಂಠಾ ತದ್ಯೋಗೀ ಶೀಲವಾನ್ ಸ್ಮೃತಃ ॥**

**ಟೀಕು||** ಶೀಲಂ=ಶೀಲವು, ಶಿವೈಕವಿಜ್ಞಾನಂ=ಶಿವಲಿಂಗವೊಂದರಲ್ಲಿಯ ವಿಶೇಷ ಜ್ಞಾನವು,

ಶಿವಧ್ಯಾನೈಕತಾನತಾ=ಶಿವಲಿಂಗಧ್ಯಾನವೊಂದರಲ್ಲಿಯೇ ವಿಸ್ತಾರವು, ತದ್ಯೋಗೀ=ಆ ಶೀಲಯೋಗವುಳ್ಳಾತನು, ಶಿವಪ್ರಾಪ್ತಿಸಮುತ್ಕಂಠಾ=ಶಿವತತ್ತ್ವವನು ಎಯ್ದುವ ಲವಲವಿಕೆಯದೆಸೆಯಿಂದೆ, ಶೀಲವಾನ್=ಶೀಲವುಳ್ಳಾತನೆಂದು, ಸ್ಮೃತಃ=ನೆನೆಯಲುಪಟ್ಟನು. ||೩೨||

**ಗ್ರಂಥ||** **ಶಿವಾದನ್ಯತ್ರ ವಿಜ್ಞಾನೇ ವೈಮುಖ್ಯಂ ಯಸ್ಯ ಸುಸ್ಥಿರಮ್ ।**
**ತದಾಸಕ್ತಮನೋವೃತ್ತಿಸ್ತಮಾಹುಃ ಶೀಲಭಾಜನಮ್ ॥**

**ಟೀಕು||** ಶಿವಾತ್=ಶಿವಲಿಂಗದದೆಸೆಯಿಂದೆ, ಅನ್ಯತ್ರವಿಜ್ಞಾನೇ=ದೇವತಾಂತರಜ್ಞಾನದಲ್ಲಿ, ವೈಮುಖ್ಯಂ=ಅಡ್ಡಲಾದ ಮುಖವುಳ್ಳತನವು, ಯಸ್ಯ=ಆವ ಶರಣಂಗೆ, ಸುಸ್ಥಿರಂ=ಅತ್ಯಂತ ದೃಢವಾಗಿರ್ದ್ದ ಅದು, ಯಸ್ಯ=ಆವಾತನ, ಮನೋವೃತ್ತಿಃ=ಮನೋವ್ಯಾಪಾರವು, ತದಾಸಕ್ತ=ಆ ಶಿವಲಿಂಗದಲ್ಲಿಯೆ ಲಂಪಟವಾಗಿದ್ದ ಅದು, ತಂ=ಆತನನು, ಶೀಲಭಾಜನಂ=ಶೀಲವನು ಭಜಿಸುತ್ತಿರ್ದ್ದ ಆತನನಾಗಿ, ಆಹುಃ=ಹೇಳುತ್ತಿರ್ದ್ದಪರು. ||೩೩||

**ಗ್ರಂಥ||** **ಪತಿವ್ರತಾಯಾ ಯಚ್ಛೀಲಂ ಪತಿರಾಗಾತ್ಪ್ರಶಸ್ಯತೇ ।**
**ತಥಾ ಶಿವಾನುರಾಗೇಣ ಸುಶೀಲೋ ಭಕ್ತ ಉಚ್ಯತೇ ॥**

**ಟೀಕು||** ಪತಿವ್ರತಾಯಾಃ=ಪತಿವ್ರತೆಯ, ಯತ್‌ಶೀಲಂ=ಆವುದಾನೊಂದು ಶೀಲವು, ಪತಿರಾಗಾತ್=ಪತಿಯ ರಾಗದದೆಸೆಯಿಂದೆ, ಪ್ರಶಸ್ಯತೇ=ಪೂಜ್ಯವಾಗುತ್ತಿರ್ದ್ದಪುದು, ತಥಾ=ಹಾಗೆಯೇ, ಶಿವಾನುರಾಗೇಣ=ಶಿವಲಿಂಗದಲ್ಲಿಯ ಅನುರಾಗದಿಂದೆ, ಭಕ್ತಃ=ಬೇರ್ಪಡಿಸಲುಪಡದೆಯಿದ್ದ ಶರಣನೀಗ, ಸುಶೀಲಃ=ಶೋಭನವಾದ ಶೀಲವುಳ್ಳಾತನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು.

**ತಾತ್ಪರ್ಯ||** ಶರಣಸತಿ ಲಿಂಗಪತಿಯಾದ ಕಾರಣವಾಗಿ ಪತಿವ್ರತೆಯ ದೃಷ್ಟಾಂತವು ಹೇಳಲುಪಟ್ಟಿತ್ತು. ||೩೪||

**ಸೂತ್ರ||** ಬಳಿಕ ಆ ಅರ್ಥವನೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||** **ಪತಿಂ ವಿನಾ ಯಥಾ ಸ್ತ್ರೀಣಾಂ ಸೇವಾಽನ್ಯಸ್ಯ ತು ಗರ್ಹಣಾ ।**
**ಶಿವಂ ವಿನಾ ತಥಾಽನ್ಯೇಷಾಂ ಸೇವಾ ನಿಂದಾ ಕೃತಾತ್ಮನಾಮ್ ॥**

**ಟೀಕು||** ಸ್ತ್ರೀಣಾಂ=ಸ್ತ್ರೀಯರಿಗೆ, ಪತಿಂ ವಿನಾ=ಪ್ರಾಣಕಾಂತ ಹೊರತಾಗಿ, ಅನ್ಯಸ್ಯ=ಮತ್ತೊರ್ವ ಪುರುಷನ, ಸೇವಾ ತು=ಸೇವೆಯು, ಯಥಾ=ಹೇಗೆ, ಗರ್ಹಣಾಂ=ನಿಂದೆಯು; ತಥಾ=ಹಾಗೆಯೇ ಕೃತಾತ್ಮನಾಂ=ಕೃತಕೃತ್ಯರಾದ ಶರಣರಿಗೆ, ಶಿವಂ ವಿನಾ=ಪತಿಯಾದ ಶಿವಲಿಂಗ ಹೊರತಾಗಿ,ಅನ್ಯೇಷಾಂ=ದೇವತಾಂತರದ, ಸೇವಾ=ಸೇವೆಯು, ನಿಂದ್ಯಾ=ನಿಂದಿಸಲು ಯೋಗ್ಯವಾಗಿದ್ದ ಅದು. ||೩೫||

**ಗ್ರಂಥ||** ಬಹುನಾಽತ್ರ ಕಿಮುಕ್ತೇನ ಶಿವಜ್ಞಾನೈಕನಿಷ್ಠತಾ ।
ಶೀಲಮಿತ್ಯುಚ್ಯತೇ ಸದ್ಭಿಶ್ಶೀಲವಾಂಶಸ್ತತ್ಪರೋ ಮತಃ ॥

**ಟೀಕು||** ಅತ್ರ=ಇಲ್ಲಿ, ಬಹುನೋಕ್ತೇನ ಕಿಂ=ಹಲವು ಮಾತಿನಿಂದೇನು? ಶಿವಜ್ಞಾನೈಕ ನಿಷ್ಠತಾ=ಶ್ರೀಗುರುವಿನಿಂದೆ ನಿರ್ದೇಶಿಸಲುಪಟ್ಟ ಶಿವಜ್ಞಾನವೊಂದರಲ್ಲಿಯ ನಿಷ್ಠೆಯೆ, ಶೀಲಮಿತಿ=ಶೀಲವೆಂದು, ಸದ್ಭಿಃ=ಸತ್ಪುರುಷರಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ತತ್ಪರಃ=ಆ ಶೀಲದಲ್ಲಿ ಆಸಕ್ತನಾಗಿದ್ದಾತನು, ಶೀಲವಾನ್=ಶೀಲವುಳ್ಳಾತನೆಂದು, ಮತಃ=ಸಂಮತವು. ||೩೬||

**ಸೂತ್ರ||** ಬಳಿಕ ಶೀಲಸಂಪಾದನೆಯುಳ್ಳ ಶರಣನೆ ಶಿವಲಿಂಗೈಕ್ಯನೆಂದು ಹೇಳಿ ಶರಣಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ವೃತ್ತ||** ಶಿವಾತ್ಮಬೋಧೈಕರತಃ ಸ್ಥಿರಾಶಯಃ ಶಿವಂ ಪ್ರಪನ್ನೋ ಜಗತಾಮಧೀಶ್ವರಮ್ ।
ಶಿವೈಕನಿಷ್ಠಾಹಿತಶೀಲಭೂಷಣಃ ಶಿವೈಕ್ಯವಾನೇಷ ಹಿ ಕಥ್ಯತೇ ಬುಧೈಃ ॥

**ಟೀಕು||** ಶಿವಾತ್ಮಬೋಧೈಕರತಃ=ಲಿಂಗಾಂಗಜ್ಞಾನವೊಂದರಲ್ಲಿಯೆ ತತ್ಪರನಾಗಿ, ಜಗತಾಂ=ಸಮಸ್ತ ಜಗತ್ತುಗಳಿಗೆ, ಅಧೀಶ್ವರಂ=ಒಡೆಯನಾಗಿದ್ದ, ಶಿವಂ=ಪರಮೇಶ್ವರನನು, ಪ್ರಪನ್ನಃ=ರಕ್ಷಿಸುಯೆಂದು ಮರೆಹೊಕ್ಕು, ಸ್ಥಿರಾಶಯಃ=ಶರಣಸತಿ ಲಿಂಗಪತಿಯೆಂಬ ದೃಢವಾದ ಭಾವವುಳ್ಳ, ಶಿವೈಕನಿಷ್ಠಾಹಿತಶೀಲಭೂಷಣಃ=ಶಿವಲಿಂಗವೊಂದರಲ್ಲಿಯ ನಿಷ್ಠೆಯಿಂದೆ ಮಾಡಲುಪಟ್ಟ ಶೀಲವೆ ಅಲಂಕಾರವಾಗುಳ್ಳ, ಏಷಃ=ಈ ಶರಣನು, ಶಿವೈಕ್ಯವಾನ್=ಶಿವಲಿಂಗೈಕ್ಯವುಳ್ಳಾತನೆಂದು, ಬುಧೈಃ=ಜ್ಞಾನಿಗಳಿಂದೆ, ಕಥ್ಯತೇ=ಹೇಳಲುಪಡುತ್ತಿರ್ದ್ದಪನು. ಹಿ=ಪ್ರಸಿದ್ಧವು. ||೩೭||

## ಇತಿ ಶೀಲಸಂಪಾದನಸ್ಥಲಮ್

## ಇತಿ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಶರಣಸ್ಯ ಚತುರ್ವಿಧಸ್ಥಲಪ್ರಸಂಗೋ ನಾಮ ತ್ರಯೋದಶಃ ಪರಿಚ್ಛೇದಃ ಸಮಾಪ್ತಃ

## ಶಿವಲಿಂಗೈಕ್ಯಸ್ಯ ಚತುರ್ವಿಧಸ್ಥಲಪ್ರಸಂಗಃ
## ಷಷ್ಠಂ ಐಕ್ಯಸ್ಥಲಮ್

**ಅಗಸ್ತ್ಯ ಉವಾಚ॥**

ಅಗಸ್ತ್ಯಮುನಿಯು ಪ್ರಶ್ನೆಯಮಾಡಿ ಕೇಳುತ್ತಿರ್ದ್ದಪಂ.

**ಗ್ರಂಥ॥** **ತಾಮಸತ್ಯಾಗಸಂಬಂಧಾನ್ನಿರ್ದೇಶಾಚ್ಛೀಲತಸ್ತಥಾ ।**
**ಶರಣಾಖ್ಯಸ್ಯ ಭೂಯೋಽಸ್ಯ ಕಥಮೈಕ್ಯನಿರೂಪಣಮ್ ॥**

**ಟೀಕು॥** ತಾಮಸತ್ಯಾಗಸಂಬಂಧಾತ್=ತಾಮಸನಿರಸನದ ಸಂಬಂಧದದೆಸೆಯಿಂದೆ, ನಿರ್ದೇಶಾತ್=ಜ್ಞಾನನಿರ್ದೇಶದದೆಸೆಯಿಂದೆ, ತಥಾ=ಹಾಗೆಯೇ, ಶೀಲತಃ=ಶೀಲಸಂಪಾದನೆಯದೆಸೆಯಿಂದೆಯು, ಶರಣಾಖ್ಯಸ್ಯ=ಶರಣನೆಂಬ ಹೆಸರುಳ್ಳ, ಅಸ್ಯ=ಈತನಿಗೆ, ಭೂಯಃ=ಮರಳಿ, ಐಕ್ಯನಿರೂಪಣಂ=ಶಿವಲಿಂಗೈಕ್ಯನೆಂದು ಹೇಳುವುದು, ಕಥಂ=ಹೇಗೆ? ॥೧॥

**ಶ್ರೀ ರೇಣುಕ ಉವಾಚ॥**

**ಸೂತ್ರ॥** ರೇಣಕಗಣೇಶ್ವರನು ಪ್ರಶ್ನೋತ್ತರವನು ನಿರೂಪಿಸುತ್ತಿರ್ದ್ದಪಂ.

**ಗ್ರಂಥ॥** **ಪ್ರಾಣಲಿಂಗಾದಿಯೋಗೇನ ಸುಖಾತಿಶಯಮೇಯಿವಾನ್ ।**
**ಶರಣಾಖ್ಯಃ ಶಿವೇನೈಕ್ಯಭಾವನಾದೈಕ್ಯವಾನ್ ಭವೇತ್ ॥**

**ಟೀಕು॥** ಪ್ರಾಣಲಿಂಗಾದಿಯೋಗೇನ=ಪ್ರಾಣಲಿಂಗಾದಿಗಳ ಸಂಬಂಧದಿಂದೆ, ಶರಣಾಖ್ಯಃ=ಶರಣನೆಂಬ ಹೆಸರುಳ್ಳಾತನು, ಸುಖಾತಿಶಯಂ=ಶಿವಸುಖದ ಅತಿಶಯವನು, ಏಯಿವಾನ್ ಸನ್=ಎಯ್ದಿರ್ದಾತನಾಗುತಲು, ಶಿವೇನ=ಶಿವಲಿಂಗದೊಡನೆ, ಐಕ್ಯಭಾವನಾತ್=ಏಕತ್ವವನು ಭಾವಿಸುವದರ ದೆಸೆಯಿಂದೆ, ಐಕ್ಯವಾನ್=ಶಿವಲಿಂಗೈಕ್ಯ ಉಳ್ಳಾತನು, ಭವೇತ್=ಅಹನು. ॥೨॥

**ಸೂತ್ರ॥** ಬಳಿಕ ಅವಾಂತರಸ್ಥಲಭೇದವನು ಹೇಳುತ್ತಿರ್ದ್ದಪಂ.

**ಗ್ರಂಥ॥** **ಐಕ್ಯಸ್ಥಲಮಿದಂ ಪ್ರೋಕ್ತಂ ಚತುರ್ಧಾ ಮುನಿಪುಂಗವ ।**
**ಐಕ್ಯಮಾಚಾರಸಂಪತ್ತಿರೇಕಭಾಜನಮೇವ ಚ ।**
**ಸಹಭೋಜನಮಿತ್ಯೇಷಾಂ ಕ್ರಮಾಲ್ಲಕ್ಷಣಮುಚ್ಯತೇ ॥**

**ಟೀಕು||** ಭೋ ಮುನಿಪುಂಗವ=ಎಲೈ ಮುನಿಶ್ರೇಷ್ಠನಾದ ಅಗಸ್ತ್ಯನೇ! ಇದಂ ಐಕ್ಯಸ್ಥಲಂ=ಈ ಐಕ್ಯಸ್ಥಲವು, ಚತುರ್ಧಾ=ನಾಲ್ಕು ಪ್ರಕಾರವಾಗಿ, ಪ್ರೋಕ್ತಂ=ಹೇಳಲುಪಟ್ಟಿತ್ತು. ಐಕ್ಯಂ=ಐಕ್ಯಸ್ಥಲವು, ಆಚಾರಸಂಪತ್ತಿಃ=ಸರ್ವಾಚಾರಸಂಪತ್ತಿಸ್ಥಲವು, ಏಕಭಾಜನಂ=ಏಕಭಾಜನಸ್ಥಲವು, ಸಹಭೋಜನಂ ಚ= ಸಹಭೋಜನಸ್ಥಲವು, ಏತೇಷಾಂ=ಈ ಸ್ಥಲಂಗಳ, ಲಕ್ಷಣಂ=ಲಕ್ಷಣವು, ಕ್ರಮಾತ್=ಕ್ರಮದಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೩||

**ಸೂತ್ರ||** ಬಳಿಕ "ಏಕಮೇವ ತದ್ಭವತಿ ಅವಿಕಲ್ಪೋ ವಿಕಲ್ಪೋ ವಾಽತ್ರ ಕಾಚನ ಭಿದಾಽಸ್ತಿ ನೈವಾತ್ರ ಕಿಂಚನ ಭಿದಾಽಸ್ತ್ಯತ್ರ ಭಿದಾಮಿವ ಮನ್ಯಮಾನಃ ಶತಧಾ ಸಹಸ್ರಧಾ ಭಿನ್ನಃ ಮೃತ್ಯೋರ್ಮೃತ್ಯುಮಾಪ್ನೋತಿ ತದೇವ ತದ್ದ್ವಯಂ ಸ್ವಪ್ರಕಾಶಮ್"|| ಯೆಂಬ ಉತ್ತರತಾಪನೀಯೋಪನಿಷದರ್ಥವನು ಪ್ರಕಾಶಿಸುತ್ತ ಲಿಂಗೈಕ್ಯ ಲಕ್ಷಣವನು ಪಂಚಸೂತ್ರಂಗಳಿಂದೆ ಪ್ರತಿಪಾದಿಸುತ್ತಿರ್ದ್ದಪಂ.

## ೪೧ ಐಕ್ಯಸ್ಥಲೇ ಐಕ್ಯಸ್ಥಲಮ್

**ಗ್ರಂಥ||** **ವಿಷಯಾನಂದಕಣಿಕಾನಿಸ್ಪೃಹೋ ನಿರ್ಮಲಾಶಯಃ ।**
**ಶಿವಾನಂದಮಹಾಸಿಂಧುಮಜ್ಜನಾದೈಕ್ಯಮುಚ್ಯತೇ ॥**

**ಟೀಕು||** ವಿಷಯಾನಂದಕಣಿಕಾನಿಸ್ಪೃಹಃ=ವಿಷಯಾನಂದವೆಂಬ ತುಂತುರ್ವನಿಗಳಲ್ಲಿ ವಿರಕ್ತನಾಗಿ, ನಿರ್ಮಲಾಶಯಃ=ನಿರ್ಮಲವಾದ ಭಾವವುಳ್ಳಾತನೆ, ಶಿವಾನಂದಮಹಾಸಿಂಧು ಮಜ್ಜನಾತ್= ಶಿವಾನಂದವೆಂಬ ಮಹಾಸಮುದ್ರದಲ್ಲಿ ಮುಳುಗುವದರದೆಸೆಯಿಂದೆ, ಐಕ್ಯಂ=ಲಿಂಗೈಕ್ಯವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೪||

**ಗ್ರಂಥ||** **ನಿರ್ಧೂತಮಲಸಂಬಂಧೋ ನಿಷ್ಕಲಂಕಮನೋಗತಃ ।**
**ಶಿವೋಽಹಮಿತಿ ಭಾವೇನ ನಿರೂಢೋ ಹಿ ಶಿವೈಕ್ಯತಾಮ್ ॥**

**ಟೀಕು||** ನಿರ್ಧೂತಮಲಸಂಬಂಧಃ=ಕೊಡಹಲುಪಟ್ಟ ಮಲಸಂಪರ್ಕವುಳ್ಳ, ನಿಷ್ಕಲಂಕಮನೋಗತಃ= ಕಲಂಕಿಲ್ಲದೆಯಿರ್ದ್ದಮನೋವ್ಯಾಪಾರವುಳ್ಳಾತನಾಗಿ, ಶಿವೋಽಹಮಿತಿ=ಶಿವನೆ ನಾನೆಂಬ, ಭಾವೇನ=ಭಾವದಿಂದೆ, ಶಿವೈಕ್ಯತಾಂ=ಶಿವಲಿಂಗೈಕ್ಯನಹತನವನು, ನಿರೂಢಃ=ಹಿಡಿದಿದ್ದ ಆತನು, ಹಿ=ಪ್ರಸಿದ್ಧವು. ||೫||

**ಗ್ರಂಥ||** **ಶಿವೇನೈಕ್ಯಂ ಸಮಾಪನ್ನಶ್ಚಿದಾನಂದಸ್ವರೂಪಿಣಾ ।**
**ನ ಪಶ್ಯತಿ ಜಗಜ್ಜಾಲಂ ಮಾಯಾಕಲ್ಪಿತವೈಭವಮ್ ॥**

**ಟೀಕು॥** ಚಿದಾನಂದಸ್ವರೂಪಿಣಾ=ಸಚ್ಚಿದಾನಂದಸ್ವರೂಪವುಳ್ಳ, ಶಿವೇನ=ಶಿವಲಿಂಗದೊಡನೆ, ಐಕ್ಯಂ=ಏಕತ್ವವನು; ಸಮಾಪನ್ನಃ=ಎಯಿದಿರ್ದ್ದ ಲಿಂಗೈಕ್ಯನು, ಮಾಯಾಕಲ್ಪಿತವೈಭವಂ=ಮಾಯೆಯಿಂದೆ ಕಲ್ಪಿಸಲುಪಟ್ಟ ವೈಭವವುಳ್ಳ, ಜಗಜ್ಜಾಲಂ=ಜಗತ್ಸಮೂಹವನು, ನ ಪಶ್ಯತಿ=ಕಾಣುತ್ತಿರನು. ॥೬॥

**ಗ್ರಂಥ॥** **ಬ್ರಹ್ಮಾಂಡಬುದ್ಬುದೋದ್ಭೇದವಿಜೃಂಭೀ ತತ್ತ್ವವೀಚಿಮಾನ್ ।**
**ಮಾಯಾಸಿಂಧುರ್ಲಯಂ ಯಾತಿ ಶಿವೈಕ್ಯಬಡಬಾನಲೇ ॥**

**ಟೀಕು॥** ಬ್ರಹ್ಮಾಂಡಬುದ್ಬುದೋದ್ಭೇದವಿಜೃಂಭೀ=ಬ್ರಹ್ಮಾಂಡಗಳೆಂಬ ಬೊಬ್ಬುಳಿಕೆಗಳ ಹೊರಹೊಮ್ಮಿಕ್ಕೆಯಿಂದೆ ಉಬ್ಬುತ್ತಿರ್ದ್ದ, ತತ್ತ್ವವೀಚಿಮಾನ್=ಷಟ್ತ್ರಿಂಶತ್ ತತ್ತ್ವಂಗಳೆಂಬ ತೆರೆಗಳುಳ್ಳ, ಮಾಯಾಸಿಂಧುಃ=ಮಾಯೆಯೆಂಬಸಮುದ್ರವು, ಶಿವೈಕ್ಯಬಡಬಾನಲೇ=ಶಿವಲಿಂಗೈಕ್ಯನೆಂಬ ಬಡಬಾಗ್ನಿಯಲ್ಲಿ, ಲಯಂ=ನಾಶವನು, ಯಾತಿ=ಎಯ್ದುತ್ತಿರ್ದ್ದಪುದು. ॥೭॥

**ಗ್ರಂಥ॥** **ಮಾಯಾಶಕ್ತಿತಿರೋಧನಾಚ್ಛಿವೇ ಭೇದವಿಕಲ್ಪನಾ ।**
**ಆತ್ಮನಸ್ತದ್ವಿನಾಶೇ ತು ನಾದ್ವೈತಾತ್ಕಿಂಚಿದಿಷ್ಯತೇ ॥**

**ಟೀಕು॥** ಆತ್ಮನಃ=ಆತ್ಮನಿಗೆ, ಶಿವೇ=ಶಿವನಲ್ಲಿಯು, ಭೇದವಿಕಲ್ಪನಾ=ಭೇದವಿಕಲ್ಪವು, ಮಾಯಾಶಕ್ತಿತಿರೋಧನಾತ್=ಮಾಯಾಶಕ್ತಿಯ ಮರೆಯದೆಸೆಯಿಂದೆ, ಸ್ಯಾತ್=ಅಹುದು; ತದ್ವಿನಾಶೇ ತು=ಆ ಮಾಯಾ ಶಕ್ತಿಯ ಮರೆವೆಯು ಹೋಗಲಾಗಿ, ಅದ್ವೈತಾತ್=ಐಕ್ಯದದೆಸೆಯಿಂದೆ, ಕಿಂಚಿತ್= ಒಪ್ಪಚ್ಚಿ ಭೇದವು, ನೇಷ್ಯತೇ=ಇಚ್ಛೈಸಲುಪಡುತ್ತಿರದು. ॥೮॥

**ಸೂತ್ರ॥** ಬಳಿಕ "ಅಹಮೇಕೋ ನ ಮೇ ಕಶ್ಚಿನ್ನಾಹಮನ್ಯಸ್ಯ ಕಸ್ಯಚಿತ್।
ನ ತಂ ಪಶ್ಯಾಮಿ ಯಸ್ಯಾಹಂ ನ ತಂ ಪಶ್ಯಾಮಿ ಯೋ ಮಮ॥" ಯೆಂಬ ದೇವೀಕಾಲೋತ್ತರಸೂತ್ರಾರ್ಥವನು ಪ್ರಕಾಶಿಸುತ್ತ ಶಿವಲಿಂಗೈಕ್ಯನಿಗೆ ಸಿದ್ಧವಾದ ಶಿವಾದ್ವೈತವನು ಪಂಚಸೂತ್ರಂಗಳಿಂದೆ ಪ್ರತಿಪಾದಿಸುತ್ತಿರ್ದ್ದಪಂ.

**ಗ್ರಂಥ॥** **ಪಶುತ್ವಂ ಚ ಪತಿತ್ವಂ ಚ ಮಾಯಾಮೋಹವಿಕಲ್ಪಿತಮ್ ।**
**ತಸ್ಮಿನ್ಪ್ರಲಯಮಾಪನ್ನೇ ಕಃ ಪಶುಃ ಕೋ ನು ವಾ ಪತಿಃ ॥**

**ಟೀಕು॥** ಪಶುತ್ವಂ ಚ=ಜೀವತ್ವವು, ಪತಿತ್ವಂ ಚ=ಶಿವತ್ವವು, ಮಾಯಾಮೋಹ ವಿಕಲ್ಪಿತಂ= ಮಾಯಾ ಭ್ರಾಂತಿಯಿಂದೆ ಸಂಕಲ್ಪಿಸಲುಪಟ್ಟ ಅದು. ತಸ್ಮಿನ್=ಆ ಮಾಯಾ ಮೋಹವು, ಪ್ರಲಯಂ=ನಾಶವನು, ಆಪನ್ನೇ ಸತಿ=ಎಯಿದಲಿಕೆಯಾಗಿ, ಪಶುಃ ಕಃ=ಅಂಗಶಬ್ದವಾಚ್ಯನಾದ ಪಶುವಾರು? ಪತಿಃ ಕೋ ವಾ=ಲಿಂಗಶಬ್ದವಾಚ್ಯನಾದ ಪತಿ ಯಾರು? ಪಶುಪತಿತ್ವ ಭೇದವಿಲ್ಲವೆಂಬುದರ್ಥ. ॥೯॥

**ಗ್ರಂಥ||** **ಘೋರಸಂಸಾರಸರ್ಪಸ್ಯ ಭೇದವಲ್ಮೀಕಶಾಯಿನಃ |**
**ಬಾಧಕಂ ಪರಮಾದ್ವೈತಭಾವನಾ ಪರಮೌಷಧಮ್ ||**

**ಟೀಕು||** ಭೇದವಲ್ಮೀಕಶಾಯಿನಃ=ಜೀವೇಶ್ವರರ ಭೇದವೆಂಬ ಹುತ್ತದಲ್ಲಿ ಮಲಗಿರ್ದ್ದ, ಘೋರಸಂಸಾರಸರ್ಪಸ್ಯ=ಭಯಂಕರವಾದ ಸಂಸಾರವೆಂಬ ಸರ್ಪನಿಗೆ, ಪರಮಾದ್ವೈತಭಾವನಾ ಪರಮೌಷಧಂ=ಅಂಗಲಿಂಗೈಕ್ಯರೂಪವಾದ ಪರಮಾದ್ವೈತಭಾವನೆಯೆಂಬ ಪರಮೌಷಧವೆ, ಭಾಧಕಂ= ಬಾಧಕವಾಗಿದ್ದ ಅದು. ||೧೦||

**ಗ್ರಂಥ||** **ಭೇದಬುದ್ಧಿಸಮುತ್ಪನ್ನಮಹಾಸಂಸಾರಸಾಗರಮ್ |**
**ಅದ್ವೈತಬುದ್ಧಿಪೋತೇನ ಸಮುತ್ತರತಿ ದೇಶಿಕಃ ||**

**ಟೀಕು||** ಭೇದಬುದ್ಧಿಸಮುತ್ಪನ್ನ=ಜೀವೇಶ್ವರರ ಭೇದಬುದ್ಧಿಯಿಂದೆ ಹುಟ್ಟಿದ, ಮಹಾಸಂಸಾರ ಸಾಗರಂ=ದೊಡ್ಡಿತ್ತಾದ ಸಂಸಾರವೆಂಬ ಸಮುದ್ರವನು, ಅದ್ವೈತಬುದ್ಧಿಪೋತೇನ=ಶಿವಾದ್ವೈತವೆಂಬ ಹಡಗಿನಿಂದೆ, ದೇಶಿಕಃ=ಶಿವಲಿಂಗೈಕ್ಯನು, ಸಮುತ್ತರತಿ=ದಾಂಟುತ್ತಿರ್ದ್ದಪನು. ||೧೧||

**ಗ್ರಂಥ||** **ಅಜ್ಞಾನತಿಮಿರೋದ್ರಿಕ್ತಾ ಕಾಮರಕ್ಷಃ ಕ್ರಿಯಾಕರೀ |**
**ಸಂಸಾರಕಾಲರಾತ್ರಿಸ್ತು ನಶ್ಯೇದದ್ವೈತಭಾನುನಾ ||**

**ಟೀಕು||** ಅಜ್ಞಾನತಿಮಿರೋದ್ರಿಕ್ತಾ=ಅಜ್ಞಾನವೆಂಬ ಕಗ್ಗತ್ತಲೆಯಿಂದೆ ಉನ್ಮುಕ್ತವಾಗಿದ್ದ ,ಕಾಮರಕ್ಷಃ ಕ್ರಿಯಾಕರೀ=ಕಾಮವೆಂಬ ರಾಕ್ಷಸರ ಕರ್ಮವನು ಮಾಡಿಸುತ್ತಿರ್ದ್ದ, ಸಂಸಾರಕಾಲರಾತ್ರಿಸ್ತು= ಸಂಸಾರವೆಂಬ ಕಾಳರಾತ್ರಿಯಾಯಿತ್ತಾದೊಡೆ, ಅದ್ವೈತಭಾನುನಾ=ಶಿವಾದ್ವೈತವೆಂಬ ಸೂರ್ಯನಿಂದೆ, ನಶ್ಯೇತ್=ಕೆಡುವುದು. ||೧೨||

**ಗ್ರಂಥ||** **ತಸ್ಮಾದದ್ವೈತಭಾವಸ್ಯ ಸದೃಶೋ ನಾಸ್ತಿ ಯೋಗಿನಾಮ್ |**
**ಉಪಾಯೋ ಘೋರಸಂಸಾರಮಹಾತಾಪನಿವೃತ್ತಯೇ ||**

**ಟೀಕು||** ತಸ್ಮಾತ್=ಅದು ಕಾರಣವಾಗಿ, ಘೋರಸಂಸಾರಮಹಾತಾಪನಿವೃತ್ತಯೇ=ಭಯಂಕರವಾದ ಸಂಸಾರವೆಂಬ ಮಹಾಸಂತಾಪದ ತೊಲಗಿಕೆಗೋಸುಗವಾಗಿ, ಅದ್ವೈತಭಾವಸ್ಯ=ಶಿವಾದ್ವೈತಭಾವಕ್ಕೆ, ಸದೃಶಃ= ಸಮಾನವಾದ, ಉಪಾಯಃ=ಉಪಾಯವು, ಯೋಗಿನಾಂ=ಶಿವಯೋಗೀಶ್ವರರಿಗೆ, ನಾಸ್ತಿ=ಇಲ್ಲ. ||೧೩||

**ಸೂತ್ರ||** ಬಳಿಕ ಶಿವಾದ್ವೈತಸುಖಾತಿಶಯವನು ಹೇಳಿ ಐಕ್ಯಸ್ಥಲವನು ಸೂತ್ರದ್ವಯದಿಂದೆ ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ **ಅದ್ವೈತಭಾವನಾಜಾತಂ ಕ್ಷಣಮಾತ್ರೇಽಪಿ ಯತ್ಸುಖಮ್ ।**
**ತತ್ಸುಖಂ ಕೋಟಿವರ್ಷೇಣ ಪ್ರಾಪ್ಯತೇ ನೈವ ಭೋಗಿಭಿಃ ॥**

**ಟೀಕು॥** ಕ್ಷಣಮಾತ್ರೇಽಪಿ=ಕ್ಷಣಮಾತ್ರದಲ್ಲಿಯಾಯಿತ್ತಾದೊಡೆ, ಅದ್ವೈತಭಾವನಾಜಾತಂ=ಶಿವಾದ್ವೈತಭಾವನೆಯಿಂದೆ ಹುಟ್ಟಿದ, ಯತ್‌ಸುಖಂ=ಆವುದಾನೊಂದು ಸುಖವುಂಟು, ತತ್ ಸುಖಂ=ಆ ಸುಖವು, ಭೋಗಿಭಿಃ=ರಾಜಭೋಗಿಗಳಿಂದೆ, ಕೋಟಿವರ್ಷೇಣೈವ=ಕೋಟಿವರ್ಷದಿಂದೆಯು, ನ ಪ್ರಾಪ್ಯತೇ=ಎಯಿದಲುಪಡುತ್ತಿರದು. ॥೧೪॥

ಗ್ರಂಥ॥ **ಚಿತ್ತವೃತ್ತಿಸಮಾಲೀನಜಗತಶ್ಶಿವಯೋಗಿನಃ ।**
**ಶಿವಾನಂದಪರಿಸ್ಫೂರ್ತಿರ್ಮುಕ್ತಿರಿತ್ಯಭಿಧೀಯತೇ ॥**

**ಟೀಕು॥** ಚಿತ್ತವೃತ್ತಿಸಮಾಲೀನಜಗತಃ=ಚಿತ್ತವೃತ್ತಿಯಲ್ಲಿ ಅಡಗಲುಪಟ್ಟ ಜಗತ್ತುಳ್ಳ, ಶಿವಯೋಗಿನಃ=ಶಿವಯೋಗೀಶ್ವರನಿಗೆ, ಶಿವಾನಂದಪರಿಸ್ಫೂರ್ತಿಃ=ಶಿವನಾನಂದದ ಪರಿಪೂರ್ಣತೆಯು, ಮುಕ್ತಿರಿತಿ=ಮುಕ್ತಿಯೆಂದು, ಅಭಿಧೀಯತೇ=ಹೇಳಲುಪಡುತ್ತಿರ್ದ್ದಪುದು. ॥೧೫॥

**ಇತ್ಯೈಕ್ಯಸ್ಥಲಮ್**

## ೪೨. ಐಕ್ಯಸ್ಥಲೇ ಆಚಾರಸಂಪತ್ತಿಸ್ಥಲಮ್

**ಸೂತ್ರ॥** ಬಳಿಕ "ಯಥಾ ರವಿಸ್ಸರ್ವರಸಾನ್ ಪ್ರಭುಂಕ್ತೇ ಹುತಾಶನಶ್ಚಾಪಿ ಹಿ ಸರ್ವಭಕ್ಷಕಃ।
ತಥೈವ ಯೋಗೀ ವಿಷಯಾನ್ ಪ್ರಭುಂಕ್ತೇ ನ ಲಿಪ್ಯತೇ ಕರ್ಮಶುಭಾಶು-ಭೈಶ್ಚ"॥
ಯೆಂಬ ಶಿವರಹಸ್ಯಾರ್ಥವನು ಪ್ರಕಟಿಸುತ್ತ ಶಿವಲಿಂಗೈಕ್ಯನ ಸ್ವೇಚ್ಛಾಚಾರಸಂಪತ್ತಿಯನು ದ್ವಾದಶಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಶಿವೈಕಭಾವನಾಪನ್ನಶಿವತ್ವೋ ದೇಹವಾನಪಿ ।**
**ದೇಶಿಕೋ ಹಿ ನ ಲಿಪ್ಯೇತ ಸ್ವಾಚಾರ್ಯೈಃ ಸೂತಕಾದಿಭಿಃ ॥**

**ಟೀಕು॥** ಶಿವೈಕಭಾವನಾಪನ್ನಶಿವತ್ವಃ=ಶಿವನಲ್ಲಿಯ ಏಕತ್ವಭಾವದಿಂದೆ ಎಯ್ದಲುಪಟ್ಟ ಶಿವತ್ವವುಳ್ಳ, ದೇಶಿಕಃ=ಶಿವಲಿಂಗೈಕ್ಯನು, ದೇಹವಾನಪಿ=ಜೀವನ್ಮುಕ್ತನಾಗಿ ದೇಹವುಳ್ಳಾತನಾಯಿತ್ತಾದೊಡೆಯು, ಸೂತಕಾದಿಭಿಃ=ಸೂತಕ ಮೊದಲಾಗುಳ್ಳ, ಸ್ವಾಚಾರ್ಯೈಃ=ಸ್ವೇಚ್ಛಾಚಾರಂಗಳಿಂದೆ, ನ ಲಿಪ್ಯೇತ=ಲೇಪಿಸುತ್ತಿರನು. ॥೧೬॥

**ಗ್ರಂಥ॥** **ಶಿವಾದ್ವೈತಪರಿಜ್ಞಾನೇ ಸ್ಥಿತೇ ಸತಿ ಮನಸ್ವಿನಾಮ್ ।**
**ಕರ್ಮಣಾ ಕಿಂ ನು ಭಾವ್ಯಂ ಸ್ಯಾದಕೃತೇನ ಕೃತೇನ ವಾ ॥**

**ಟೀಕು॥** ಮನಸ್ವಿನಾಂ=ಲಿಂಗೈಕ್ಯದಲ್ಲಿಯೆ ಮನಸ್ಸುಳ್ಳ ಅವರುಗಳಿಗೆ, ಶಿವಾದ್ವೈತಪರಿಜ್ಞಾನೇ= ಶಿವಾದ್ವೈತಜ್ಞಾನವು, ಸ್ಥಿತೇ ಸತಿ=ಸ್ಥಿರವಾಗಲಿಕೆಯಾಗಿ, ಅಕೃತೇನ ಕರ್ಮಣಾ=ದುಷ್ಕರ್ಮದಿಂದೆಯು, ಕೃತೇನ ಕರ್ಮಣಾವಾ=ವಾಸಿತಕರ್ಮದಿಂದಲಾಯಿತ್ತಾದೊಡೆಯು, ಕಿಂ ನು ಭಾವ್ಯಂ ಸ್ಯಾತ್=ಏನಾದೀತು? ಏನೂ ಆಗದೆಂಬುದರ್ಥ. ॥೧೭॥

**ಗ್ರಂಥ॥** **ಶಂಭೋರೇಕತ್ವಭಾವೇನ ಸರ್ವತ್ರ ಸಮದರ್ಶನಃ ।**
**ಕುರ್ವನ್ನಪಿ ಮಹಾಕರ್ಮ ನ ತತ್ಫಲಮವಾಪ್ನುಯಾತ್ ॥**

**ಟೀಕು॥** ಸರ್ವತ್ರ ಸಮದರ್ಶನಃ="ಹರೋ ವಾ ಹರೇ ವಾ"? ಯೆಂಬ ಅಭಿಯುಕ್ತ ವಾಕ್ಯದಿಂದೆ ಎಲ್ಲಾ ಕಡೆಯಲ್ಲಿ ಸಮಾನವಾದ ದರ್ಶನವುಳ್ಳ ಲಿಂಗೈಕ್ಯನು, ಶಂಭೋಃ=ಶಿವಲಿಂಗದ, ಏಕತ್ವಭಾವೇನ=ಐಕ್ಯಭಾವದಿಂದೆ, ಮಹಾಕರ್ಮ=ಪುಣ್ಯಪಾಪರೂಪವಾದ ಮಹಾಕರ್ಮವನು, ಕುರ್ವನ್ನಪಿ=ಮಾಡುತ್ತಿರ್ದ್ದಾತನಾಯಿತ್ತಾದೊಡೆಯು, ತತ್ಫಲಂ=ಆ ಕರ್ಮಫಲವನು, ನಾವಾಪ್ನುಯಾತ್= ಎಯ್ದುತ್ತಿರನು. ॥೧೮॥

**ಸೂತ್ರ॥** ಬಳಿಕ "ಸರ್ವತ್ರ ಸಮದರ್ಶಿನಃ"ಯೆಂಬ ಆ ಅರ್ಥವನೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ॥** **ಸುಕೃತೀ ದುಷ್ಕೃತೀ ವಾಽಪಿ ಬ್ರಾಹ್ಮಣೋ ವಾಂತ್ಯಜೋಽಪಿ ವಾ ।**
**ಶಿವೈಕಭಾವಯುಕ್ತಾನಾಂ ಸದೃಶೋ ಭವತಿ ಧ್ರುವಮ್ ॥**

**ಟೀಕು॥** ಶಿವೈಕಭಾವಯುಕ್ತಾನಾಂ=ಶಿವನಲ್ಲಿಯ ಐಕ್ಯಭಾವದೊಡನೆ ಕೂಡಿರ್ದ್ದ ಲಿಂಗೈಕ್ಯರಿಗೆ, ಸುಕೃತೀ=ಪುಣ್ಯಾತ್ಮನಾದರೂ, ದುಷ್ಕೃತೀ ವಾಽಪಿ=ಪಾಪಿಷ್ಠನಾಯಿತ್ತಾದೊಡೆಯು, ಸದೃಶಃ=ಸಮಾನವು. ಬ್ರಾಹ್ಮಣೋ ವಾ=ಬ್ರಾಹ್ಮಣನಾದೊಡೆಯು, ಅಂತ್ಯಜೋಽಪಿ ವಾ=ಶ್ವಪಚನಾಯಿತ್ತಾದೊಡೆಯು, ಸದೃಶಃ= ಸಮನು, ಭವತಿ=ಆಗುತ್ತಿರ್ದ್ದಪನು. ಧ್ರುವಂ=ನಿಶ್ಚಯವು. ॥೧೯॥

**ಗ್ರಂಥ॥** **ವರ್ಣಾಶ್ರಮಸದಾಚಾರೈರ್ಜ್ಞಾನಿನಾಂ ಕಿಂ ಪ್ರಯೋಜನಮ್ ।**
**ಲೌಕಿಕಸ್ತು ಸದಾಚಾರಃ ಫಲಾಭಾವೇ ವಿಭಾವ್ಯತೇ ॥**

**ಟೀಕು॥** ಜ್ಞಾನಿನಾಂ=ಶಿವಜ್ಞಾನಿಗಳಿಗೆ, ವರ್ಣಾಶ್ರಮ ಸದಾಚಾರೈಃ=ಬ್ರಹ್ಮಚರ್ಯಾದ್ಯಾಶ್ರಮಂಗಳ ಸದಾಚಾರಂಗಳಿಂದೆ, ಕಿಂಪ್ರಯೋಜನಂ=ಏನು ಪ್ರಯೋಜನವು? ಏನೂ ಪ್ರಯೋಜನವಿಲ್ಲ ವೆಂಬುದರ್ಥ. ಲೌಕಿಕಃ ಸದಾಚಾರಸ್ತು=ಶಿವಜ್ಞಾನಿಗೆ ಲೌಕಿಕ ಪ್ರಸಿದ್ಧವಾದ ಸದಾಚಾರವಾಯಿತ್ತಾ-

ದೊಡು, ಫಲಾಭಾವೇಽಪಿ=ಫಲದ ಅಭಾವದಲ್ಲಿಯಾಯಿತ್ತಾದೊಡೆ, ವಿಭಾವ್ಯತೇ=ಭಾವಿಸಲು ಪಡುತ್ತಿರ್ದಪುದು. ॥೨೦॥

ಗ್ರಂಥ॥ ನಿರ್ದಗ್ಧಕರ್ಮಬೀಜಸ್ಯ ನಿರ್ಮಲಜ್ಞಾನವಹ್ನಿನಾ ।
ದೇಹಿವದ್ಭಾಸಮಾನಸ್ಯ ದೇಹಯಾತ್ರಾ ತು ಲೌಕಿಕೀ ॥

ಟೀಕು॥ ನಿರ್ಮಲಜ್ಞಾನವಹ್ನಿನಾ=ನಿರ್ಮಲವಾದ ಶಿವಜ್ಞಾನವೆಂಬ ಅಗ್ನಿಯಿಂದೆ, ನಿರ್ದಗ್ಧಕರ್ಮಬೀಜಸ್ಯ=ಮಿಗಿಲಾಗಿ ಹುರಿಯಲುಪಟ್ಟ ಕರ್ಮವೆಂಬ ಬೀಜವುಳ್ಳ, ದೇಹಿವತ್=ದೇಹಿಯೋಪಾದಿಯಲ್ಲಿ, ಭಾಸಮಾನಸ್ಯ=ಒಪ್ಪುತ್ತಿರ್ದ ಲಿಂಗೈಕ್ಯನ, ದೇಹಯಾತ್ರಾತು=ದೇಹಯಾತ್ರೆಯಾಯಿತ್ತಾದೊಡೆ, ಲೌಕಿಕೀ=ಲೋಕಸಿದ್ಧವಾದ ಅದು. ॥೨೧॥

ಸೂತ್ರ॥ ಬಳಿಕ "ಅಥ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ"।
"ಅಥ ತಸ್ಯ ಪುತ್ರಾ ದಾಯಮುಪಯಂತಿ ಸುಹೃದಃ ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಮ್"।
"ಯಥಾ ಪುಷ್ಕರಪಲಾಶಮಾಪೋ ನ ಶ್ಲಿಷ್ಯಂತೇ।
ಏವಂ ವಿದಿ ಹಿ ಪಾಪಂ ಕರ್ಮ ನ ಶ್ಲಿಷ್ಯತೇ।
"ಸ ಉತ್ತಮಃ ಪುರುಷಃ ಸ ತತ್ರ ಪರ್ಯೇತಿ॥" ಯೆಂಬ ಛಾಂದೋಗ್ಯ ಶ್ರುತ್ಯರ್ಥವನು ಪ್ರಕಟಿಸುತ್ತಿರ್ದಪಂ.

ಗ್ರಂಥ॥ ಶಿವಜ್ಞಾನಸಮಾಪನ್ನಸ್ಥಿರವೈರಾಗ್ಯಲಕ್ಷಣಃ ।
ಸ್ವಕರ್ಮಣಾ ನ ಲಿಪ್ಯೇತ ಪದ್ಮಪತ್ರಮಿವಾಂಭಸಾ ॥

ಟೀಕು॥ ಶಿವಜ್ಞಾನಸಮಾಪನ್ನ=ಶಿವಜ್ಞಾನದಿಂದೆ ಎಯ್ದಲ್ಪಟ್ಟ, ಸ್ಥಿರವೈರಾಗ್ಯಲಕ್ಷಣಃ=ದೃಢವಾದ ವೈರಾಗ್ಯಚಿಹ್ನವುಳ್ಳ ಲಿಂಗೈಕ್ಯನು, ಸ್ವಕರ್ಮಣಾ=ಸ್ವೇಚ್ಛಾಕರ್ಮದಿಂದೆ, ಅಂಭಸಾ=ಉದಕದಿಂದೆ, ಪದ್ಮಪತ್ರಮಿವ=ತಾವರೆಯೆಲೆಯೋಪಾದಿಯಲ್ಲಿ, ನ ಲಿಪ್ಯೇತ=ಲೇಪಿಸುತ್ತಿರನು. ॥೨೨॥

ಸೂತ್ರ॥ ಬಳಿಕ "ಯಥಾ ವಾಯುಸ್ಸುಶೀಘ್ರೋಽಪಿ
ಮುಕ್ತ್ವಾಽಽಕಾಶಂ ನ ಗಚ್ಛತಿ"।
''ಜ್ಞೇಯ ನಿಕ್ಷೇಪ ಚಿತ್ತಸ್ತು ವಿಷಯಸ್ಥಾಂ ನ ಮುಂಚತಿ"॥ ಯೆಂಬ ನಿಃಶ್ವಾಸಕಾರಿಕಾ ಸೂತ್ರಾರ್ಥವನು ಪ್ರಕಟಿಸುತ್ತ ಶಿವಲಿಂಗೈಕ್ಯನ ಕ್ರೀಯೆಲ್ಲವು ಶಿವಲಿಂಗಪೂಜೋಪಚಾರವೆಂದು ಹೇಳುತ್ತಿರ್ದಪಂ.

ಗ್ರಂಥ॥ ಗಚ್ಛನ್ತಿಷ್ಠನ್ ಸ್ವಪನ್ ವಾಽಪಿ ಜಾಗ್ರನ್ ವಾಽಪಿ ಮಹಾಮತಿಃ ।
ಶಿವಜ್ಞಾನಸಮಾಯೋಗಾಚ್ಛಿವಪೂಜಾಪರಸ್ಸದಾ ॥

**ಟೀಕು॥** ಮಹಾಮತಿಃ=ಮಹಾಬುದ್ಧಿಯುಳ್ಳ ಲಿಂಗೈಕ್ಯನು, ಗಚ್ಛನ್=ನಡೆವಾಗ, ತಿಷ್ಠನ್=ನಿಲುವಾಗ, ಸ್ವಪನ್=ಮಲಗುವಾಗ, ಜಾಗ್ರನ್ನಪಿ=ಎಚ್ಚರಿರುವಾಗ ಆಯಿತ್ತಾದೊಡೆಯು, ಸದಾಽಪಿ=ಎಲ್ಲಾ ಕಾಲದಲ್ಲಿಯಾಯಿತ್ತಾದೊಡೆಯು, ಶಿವಜ್ಞಾನಸಮಾಯೋಗಾತ್=ಶಿವಜ್ಞಾನದ ಸಂಬಂಧದ ದೆಸೆಯಿಂದೆ, ಶಿವಪೂಜಾಪರಃ=ಶಿವಲಿಂಗಪೂಜೋಪಚಾರದಲ್ಲಿಯೆ ತತ್ಪರನಾಗಿರ್ದ್ದಾತನು. ॥೨೩॥

**ಗ್ರಂಥ॥** **ಯದ್ಯತ್ಪಶ್ಯತಿ ಸಾಮೋದಂ ವಸ್ತು ಲೋಕೇಷು ದೇಶಿಕಃ ।**
**ಶಿವದರ್ಶನಸಂಪತ್ತಿಸ್ತತ್ರ ತತ್ರ ಮಹಾತ್ಮನಃ ॥**

**ಟೀಕು॥** ದೇಶಿಕಃ=ಲಿಂಗೈಕ್ಯನು, ಲೋಕೇಷು=ಲೋಕಂಗಳಲ್ಲಿ, ಯತ್ ಯತ್ ವಸ್ತು=ಆವಾವ ವಸ್ತುವನು, ಸಾಮೋದಂ=ಪ್ರೀತಿಯೊಡನೆ ಕೂಡಿ, ಪಶ್ಯತಿ=ನೋಡುತ್ತಿರ್ದ್ದಪನು, ತತ್ರ ತತ್ರ=ಅಲ್ಲಿ ಅಲ್ಲಿಯೇ, ಮಹಾತ್ಮನಃ=ಮಹಾಪುರುಷನಾದ ಶಿವಲಿಂಗೈಕ್ಯನಿಗೆ, ಶಿವದರ್ಶನಸಂಪತ್ತಿಃ=ಶಿವಾಲೋಕನ ಸಂಪತ್ತಿಯು, ಭವೇತ್=ಅಹುದು. ॥೨೪॥

**ಸೂತ್ರ॥** ಬಳಿಕ "ಆತ್ಮಾ ತ್ವಂ ಗಿರಿಜಾ ಮತಿಃ ಸಹಚರಾಃ ಪ್ರಾಣಾಃ ಶರೀರಂ ಗೃಹಂ
ಪೂಜಾ ತೇ ವಿಷಯೋಪಭೋಗರಚನಾ ನಿದ್ರಾ ಸಮಾಧಿಸ್ಥಿತಿಃ ।
ಸಂಚಾರಃ ಪದಯೋಃ ಪ್ರದಕ್ಷಿಣವಿಧಿಃ ಸ್ತೋತ್ರಾಣಿ ಸರ್ವಾ ಗಿರೋ ।
ಯದ್ಯತ್ಕರ್ಮ ಕರೋಮಿ ತತ್ತದಖಿಲಂ ಶಂಭೋ! ತವಾರಾಧನಮ್"॥ ಯೆಂಬ ಅಭಿಯುಕ್ತವಾಕ್ಯಾರ್ಥವನು ಪ್ರಕಟಿಸುತ್ತ ತ್ರಿಕರಣಶುದ್ಧವಾದ ಶಿವಲಿಂಗಪೂಜೋಪಚಾರವನು ಸೂತ್ರತ್ರಯದಿಂದೆ ಹೇಳಿ ಆಚಾರಸಂಪತ್ತಿಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ॥** **ಯದ್ಯಚ್ಚಿಂತಯತೇ ಯೋಗೀ ಮನಸಾ ಶುದ್ಧಭಾವನಃ ।**
**ತತ್ತಚ್ಛಿವಮಯತ್ವೇನ ಶಿವಧ್ಯಾನಮುದಾಹೃತಮ್ ॥**

**ಟೀಕು॥** ಶುದ್ಧಭಾವನಃ=ನಿರ್ಮಲವಾದ ಭಾವವುಳ್ಳ, ಯೋಗೀ=ಶಿವಯೋಗೀಶ್ವರನು, ಮನಸಾ=ಚಿತ್ತದಿಂದೆ, ಯತ್ ಯತ್=ಆವಾವುದನು, ಚಿಂತಯತೇ=ಧ್ಯಾನಿಸುತ್ತಿರ್ದ್ದಪನು, ತತ್ ತತ್=ಆ ಆ ಸಮಸ್ತವು, ಶಿವಮಯತ್ವೇನ=ಶಿವಮಯವಹತನದಿಂದೆ, ಶಿವಧ್ಯಾನಂ=ಶಿವಧ್ಯಾನವೆಂದು ಉದಾಹೃತಂ=ಹೇಳಲುಪಟ್ಟಿತ್ತು. ॥೨೫॥

**ಗ್ರಂಥ॥** **ಯತ್ಕಿಂಚಿದ್ಭಾಷಿತಂ ಲೋಕೇ ಸ್ವೇಚ್ಛಯಾ ಶಿವಯೋಗಿನಾ ।**
**ಶಿವಸ್ತೋತ್ರಮಿದಂ ಸರ್ವಂ ಯಸ್ಮಾತ್ಸರ್ವಾತ್ಮಕಃ ಶಿವಃ ॥**

**ಟೀಕು॥** ಶಿವಯೋಗಿನಾ=ಶಿವಯೋಗೀಶ್ವರನಿಂದೆ, ಸ್ವೇಚ್ಛಯಾ=ತನ್ನಿಚ್ಛೆಯಿಂದೆ, ಯತ್ ಕಿಂಚಿತ್= ಆವುದಾನೊಂದು, ಲೋಕೇ=ಲೋಕದಲ್ಲಿ, ಭಾಷಿತಂ=ನುಡಿಯಲುಪಟ್ಟಿತ್ತು, ಯಸ್ಮಾತ್=

ಆವುದಾನೊಂದು, ಕಾರಣವಾಗಿ, ಶಿವಃ=ಪರಮೇಶ್ವರನು, ಸರ್ವಾತ್ಮಕಃ=ಸರ್ವಸ್ವರೂಪನು, ತಸ್ಮಾತ್=ಅದು ಕಾರಣವಾಗಿ, ಇದಂ ಸರ್ವಂ=ಈ ಸಮಸ್ತವಾಗ್ಜಾಲವು, ಶಿವಸ್ತೋತ್ರಂ=ಶಿವ ಸ್ತೋತ್ರವು.

ಗ್ರಂಥ|| **ಯಾ ಯಾ ಚೇಷ್ಟಾ ಸಮುತ್ಪನ್ನಾ ಜಾಯತೇ ಶಿವಯೋಗಿನಾಮ್ ।**
**ಸಾ ಸಾ ಪೂಜಾ ಮಹೇಶಸ್ಯ ಸರ್ವದಾ ತದ್ಗತಾತ್ಮನಾಮ್ ॥**

**ಟೀಕು||** ಶಿವಯೋಗಿನಾಂ=ಶಿವಯೋಗೀಶ್ವರರಿಗೆ, ಯಾ ಯಾ ಚೇಷ್ಟಾ=ಆವಾವ ವ್ಯಾಪಾರವು, ಸಮುತ್ಪನ್ನಾ=ಹುಟ್ಟಿದುದು, ಜಾಯತೇ=ಆಗುತ್ತಿರ್ದ್ದಪುದು. ತದ್ಗತಾತ್ಮನಾಂ=ಆ ಶಿವಲಿಂಗವನು ಎಯ್ದಿದ ಸ್ವರೂಪವುಳ್ಳ ಶಿವೈಕ್ಯರ, ಸಾ ಸಾ=ಆಯಾ ವ್ಯಾಪಾರವು, ಸರ್ವದಾ=ಎಲ್ಲಾ ಕಾಲದಲ್ಲಿಯು, ಮಹೇಶಸ್ಯ ಪೂಜಾ=ಶಿವಲಿಂಗಪೂಜೆಯು. ||೨೭||

**ಇತಿ ಆಚಾರಸಂಪತ್ತಿಸ್ಥಲಮ್**

## ೪೩. ಐಕ್ಯಸ್ಥಲೇ ಏಕಭಾಜನಸ್ಥಲಮ್

**ಸೂತ್ರ||** ಬಳಿಕ "ಪರೇಽವ್ಯಯೇ ಸರ್ವ ಏಕೀಭವಂತಿ"ಯೆಂಬ ಮುಂಡಕೋಪನಿಷದರ್ಥವನು ಪ್ರಕಟಿಸುತ್ತ ಸರ್ವಾಚಾರ ಸಂಪತ್ತಿಯುಳ್ಳ ಶಿವೈಕ್ಯನಿಗೆ ಏಕಭಾಜನಸ್ಥಲವನು ಪಂಚಸೂತ್ರಂಗಳಿಂದೆ ಪ್ರತಿಪಾದಿಸುತ್ತಿರ್ದ್ದಪಂ.

ಗ್ರಂಥ|| **ವಿಶ್ವಂ ಶಿವಮಯಂ ಚೇತಿ ಸದಾ ಭಾವಯತೋ ಧಿಯಾ ।**
**ಶಿವೈಕಭಾಜನಾತ್ಮತ್ವಾದೇಕಭಾಜನಮುಚ್ಯತೇ ॥**

**ಟೀಕು||** ವಿಶ್ವಂ=ಸಮಸ್ತವು, ಶಿವಮಯಂ ಚೇತಿ=ಶಿವಲಿಂಗಮಯವೆಂದು, ಸದಾ=ಎಲ್ಲಾ ಕಾಲದಲ್ಲಿಯು, ಧಿಯಾ=ಬುದ್ಧಿಯಿಂದೆ, ಭಾವಯತಃ=ಭಾವಿಸುತ್ತಿರ್ದ್ದ ಲಿಂಗೈಕ್ಯನಿಗೆ, ಶಿವೈಕಭಾಜನಾತ್ಮತ್ವಾತ್=ಶಿವನೆ ಏಕಭಾಜನಸ್ವರೂಪನಾದ ಕಾರಣವಾಗಿ, ಏಕಭಾಜನಂ=ಏಕಭಾಜನಸ್ಥಲವು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೨೮||

ಗ್ರಂಥ|| **ಸ್ವಸ್ಯ ಸರ್ವಸ್ಯ ಲೋಕಸ್ಯ ಶಿವಸ್ಯಾದ್ವೈತದರ್ಶನಾತ್ ।**
**ಏಕಭಾಜನಯೋಗೇನ ಪ್ರಸಾದೈಕ್ಯಮತಿರ್ಭವೇತ್ ॥**

**ಟೀಕು||** ಸ್ವಸ್ಯ=ತನಗೆ, ಸರ್ವಸ್ಯಲೋಕಸ್ಯ=ಸಮಸ್ತಲೋಕಕ್ಕೆ, ಶಿವಸ್ಯ=ಶಿವನಿಗೆ, ಅದ್ವೈತದರ್ಶನಾತ್=ಐಕ್ಯವನು ಕಾಬುದರದೆಸೆಯಿಂದೆ, ಏಕಭಾಜನಯೋಗೇನ=ಏಕಭಾಜನದ ಸಂಬಂಧದಿಂದೆಯು, ಪ್ರಸಾದೈಕ್ಯಮತಿಃ=ಪ್ರಸಾದದಲ್ಲಿಯ ಏಕತ್ವಬುದ್ಧಿಯು, ಭವೇತ್=ಅಹುದು. ||೨೯||

ಗ್ರಂಥ॥ ಶಿವೇ ವಿಶ್ವಮಿದಂ ಸರ್ವಂ ಶಿವಃ ಸರ್ವತ್ರ ಭಾಸತೇ ।
ಆಧಾರಾಧೇಯಭಾವೇನ ಶಿವಸ್ಯ ಜಗತಃ ಸ್ಥಿತಿಃ ॥

**ಟೀಕು॥** ಇದಂ ಸರ್ವಂ ವಿಶ್ವಂ=ಈ ಸಮಸ್ತ ಜಗತ್ತು, ಶಿವೇ=ಶಿವಲಿಂಗದಲ್ಲಿ, ಭಾಸತೇ= ಒಪ್ಪುತ್ತಿರ್ದ್ದ ಪುದು. ಶಿವಃ=ಶಿವನು, ಸರ್ವತ್ರ=ಸಮಸ್ತ ಜಗತ್ತಿನಲ್ಲಿ, ಭಾಸತೇ=ಪ್ರಕಾಶಿಸುತ್ತಿರ್ದ್ದ ಪನು. ಅತಃ=ಇದು ಕಾರಣವಾಗಿ, ಶಿವಸ್ಯ=ಶಿವನಿಗು, ಜಗತಃ=ಜಗತ್ತಿಗು, ಆಧಾರಾಧೇಯ ಭಾವೇನ= ಆಶ್ರಯಾಶ್ರಯೀ ಭಾವದಿಂದೆ, ಪರಸ್ಪರಂ=ಅನ್ಯೋನ್ಯವಾಗಿ, ಸ್ಥಿತಿಃ=ಇರುವತನವು. ॥೩೦॥

ಗ್ರಂಥ॥ ಚಿದೇಕಭಾಜನಂ ಯಸ್ಯ ಚಿತ್ತವೃತ್ತೇಃ ಶಿವಾತ್ಮಕಮ್ ।
ನಾನ್ಯತ್ತಸ್ಯ ಕಿಮೇತೇನ ಮಾಯಾಮೂಲೇನ ವಸ್ತುನಾ ॥

**ಟೀಕು॥** ಯಸ್ಯ=ಆವನಾನೊಬ್ಬ ಲಿಂಗೈಕ್ಯನ, ಚಿತ್ತವೃತ್ತೇಃ=ಮನೋವ್ಯಾಪಾರದ, ಚಿತ್=ಅರಿವೆ, ಶಿವಾತ್ಮಕಂ=ಶಿವಸ್ವರೂಪವಾಗಿರ್ದ್ದ, ಏಕಭಾಜನಂ=ಏಕಭಾಜನವು. ತಸ್ಯ=ಆತನಿಗೆ, ಮಾಯಾ ಮೂಲೇನ=ಮಾಯಾಪ್ರಪಂಚೇ ಮೂಲಕಾರಣವಾಗುಳ್ಳ, ಏತೇನ ವಸ್ತುನಾ=ಈ ವಸ್ತುವಿನಿಂದೆ, ಕಿಂ=ಏನು ಪ್ರಯೋಜನವು? ಏನೂ ಪ್ರಯೋಜನವಿಲ್ಲವೆಂಬುದರ್ಥ. ನ ಅನ್ಯತ್=ಮತ್ತೊಂದು ಪ್ರಯೋಜನವುಯಿಲ್ಲ. ॥೩೧॥

ಗ್ರಂಥ॥ ಚಿತ್ಪ್ರಕಾಶಯತೇ ವಿಶ್ವಂ ತದ್ವಿನಾ ನಾಸ್ತಿ ವಸ್ತು ಹಿ ।
ಚಿದೇಕವಸ್ತುಚಿತ್ತಾನಾಂ ಕಿಂ ಮಾಯಾಪರಿಕಲ್ಪಿತೈಃ ॥

**ಟೀಕು॥** ವಿಶ್ವಂ=ಸಮಸ್ತವನು, ಚಿತ್=ಅರಿವೆ, ಪ್ರಕಾಶಯತೇ=ಪ್ರಕಾಶಿಸುತ್ತಿರ್ದ್ದಪುದು. ತದ್ವಿನಾಚಿತ್= ತೇಜಸ್ಸು ಹೊರತಾಗಿ, ವಸ್ತು=ಸಮಸ್ತ ವಸ್ತುವು, ನಾಸ್ತಿ= ಇಲ್ಲವು. ಅತಃ=ಇದು ಕಾರಣವಾಗಿ, ಚಿದೇಕವಸ್ತು ಚಿತ್ತಾನಾಂ=ಚಿತ್ತೊಂದರಲ್ಲಿಯೇ ತತ್ಪರವಾದ ಚಿತ್ತವುಳ್ಳ, ಶಿವಲಿಂಗೈಕ್ಯರಿಗೆ, ಮಾಯಾಪರಿಕಲ್ಪಿತೈಃ=ಮಾಯಾಕಲ್ಪಿತಂಗಳಾದ ಪ್ರಪಂಚುಗಳಿಂದ, ಕಿಂ=ಏನು? ಏನೂ ಪ್ರಯೋಜನವಿಲ್ಲವೆಂಬುದರ್ಥ.

**ಸೂತ್ರ॥** ಬಳಿಕ ಏಕಭಾಜಾನಸ್ಥಲವನು ಮುಗಿಯಿಸುತ್ತಿರ್ದ್ದಪ್ಪಂ.

ಗ್ರಂಥ ॥ ವೃತ್ತಿಶೂನ್ಯೇ ಸ್ವಹೃದಯೇ ಶಿವಲೀನೇ ನಿರಾಕುಲೇ ।
ಯಸ್ಸದಾ ವರ್ತತೇ ಯೋಗೀ ಸ ಮುಕ್ತೋ ನಾತ್ರ ಸಂಶಯ ॥

ಟೀಕು ॥ ಯಃ ಯೋಗೀ=ಆವನಾನೊಬ್ಬಾ ಶಿವಯೋಗೀಶ್ವರನು, ವೃತ್ತಿಶೂನ್ಯೇ=ವ್ಯಾಪಾರವಿಲ್ಲದೆ, ನಿರಾಕುಲೇ=ಕದಡದೆ, ಶಿವಲೀನೇ=ಶಿವಲಿಂಗದಲ್ಲಿ ಅಡಗಿದ, ಸ್ವಹೃದಯೇ=ತನ್ನ ಹೃದಯದಲ್ಲಿ, ಸದಾ=ಎಲ್ಲಾಕಾಲದಲ್ಲಿಯೂ, ವರ್ತತೇ=ವರ್ತಿಸುತ್ತಿರ್ದ್ದಪನು. ಸಃ=ಆತನು, ಮುಕ್ತಃ=ಜೀವನ್ಮುಕ್ತನು. ಅತ್ರ=ಇಲ್ಲಿ, ಸಂಶಯಃ=ಸಂದೇಹವು, ನ=ಇಲ್ಲ.

**ಇತ್ಯೇಕಭಾಜನಸ್ಥಲಮ್**

## ೪೪. ಐಕ್ಯಸ್ಥಲೇ ಸಹಭೋಜನಸ್ಥಲಮ್

ಸೂತ್ರ॥ ಬಳಿಕ "ಅಗ್ರಾಹ್ಯಮಗ್ರಾಹ್ಯೇಣ ವಾಯುಂ ವಾಯವ್ಯೇನ ಸೋಮಂ ಸೌಮ್ಯೇನ ಗ್ರಸತಿ ಸ್ವೇನ ತೇಜಸಾ।
ತಸ್ಮಾದುಪಸಂಹರ್ತೇ ಮಹಾಗ್ರಾಸಾಯ ವೈ ನಮೋನಮಃ॥"ಯೆಂಬ ಅಥರ್ವಶಿರೋರ್ಥವನು ಪ್ರಕಟಿಸುತ್ತ ಏಕಭಾಜನವುಳ್ಳ ಶಿವಲಿಂಗೈಕ್ಯನಿಗೆ ಸಹಭೋಜನಸ್ಥಲವನು ದಶಸೂತ್ರಂಗಳಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಗುರೋಶ್ಶಿವಸ್ಯ ಶಿಷ್ಯಸ್ಯ ಸ್ವಸ್ವರೂಪತಯಾ ಸ್ಮೃತಿಃ**
**ಸಹಭೋಜನಮಾಖ್ಯಾತಂ ಸರ್ವಗ್ರಾಸಾತ್ಮಭಾವತಃ**

ಟೀಕು॥ ಶಿವಸ್ಯ=ಶಿವಲಿಂಗಕ್ಕೆ, ಗುರೋಃ=ಶ್ರೀಗುರುವಿಗೆ, ಶಿಷ್ಯಸ್ಯ=ಶಿಷ್ಯನಿಗೆ, ಸ್ವಸ್ವರೂಪತಯಾ=ತನ್ನ ಸ್ವರೂಪವಹತನದಿಂದವೆ, ಸ್ಮೃತಿಃ=ನೆನವತನವು, ಸರ್ವಗ್ರಾಸಾತ್ಮಭಾವತಃ=ಸರ್ವಗ್ರಾಸವೆ ಸ್ವರೂಪವಾದ ಕಾರಣವಾಗಿ, ಸಹಭೋಜನಂ=ಸಹಭೋಜನವೆಂದು, ಆಖ್ಯಾತಂ=ಹೇಳಲುಪಟ್ಟಿತ್ತು. ॥೩೪॥

ಗ್ರಂಥ॥ **ಶಿವಂ ವಿಶ್ವಂ ಗುರುಂ ಸಾಕ್ಷಾದ್ಯೋಜಯೇನ್ನಿತ್ಯಮಾತ್ಮನಿ**
**ಏಕತ್ವೇನ ಚಿದಾಕಾರೇ ತದಿದಂ ಸಹಭೋಜನಮ್**

ಟೀಕು॥ ಶಿವಂ=ಶಿವನನು, ವಿಶ್ವಂ=ಜಗತ್ತನು, ಗುರುಂ=ಶ್ರೀಗುರುವನು, ಸಾಕ್ಷಾತ್=ಪ್ರತ್ಯಕ್ಷವಾಗಿ, ಚಿದಾಕಾರೇ=ಅರಿವೆ ಸ್ವರೂಪವಾಗುಳ್ಳ, ಆತ್ಮನಿ=ತನ್ನಲ್ಲಿ,ನಿತ್ಯಂ=ಆವಾಗವು, ಏಕತ್ವೇನ= ಐಕ್ಯವಹತನದಿಂದೆ, ಯೋಜಯೇತ್=ಕೂಡುವುದಾನೊಂದುಂಟು, ತದಿದಂ=ಆ ಇದೀಗ, ಸಹಭೋಜನಂ=ಸಹಭೋಜನವು. ॥೩೫॥

ಗ್ರಂಥ॥ **ಅಯಂ ಶಿವೋ ಗುರುಶ್ಚೈಷ ಜಗದೇತಚ್ಚರಾಚರಮ್**
**ಅಹಂ ಚೇತಿ ಮತಿರ್ಯಸ್ಯ ನಾಸ್ತ್ಯಸೌ ವಿಶ್ವಭೋಜಕಃ**

ಟೀಕು॥ ಅಯಂ ಶಿವಃ=ಈತನು ಶಿವನು, ಏಷಃ ಗುರುಶ್ಚ=ಈತನು ಶ್ರೀಗುರು, ಚರಾಚರಂ=ಜಂಗಮಸ್ಥಾವರರೂಪವಾದ, ಏತತ್ ಜಗತ್=ಇದು ಜಗತ್ತು, ಅಹಂ ಚ=ನಾನು, ಇತಿಮತಿಃ=ಹೀಗೆಂಬ ಬುದ್ಧಿಯು, ಯಸ್ಯ=ಆವಾತಂಗೆ, ನಾಸ್ತಿ=ಇಲ್ಲವು; ಅಸೌ=ಈ ಲಿಂಗೈಕ್ಯನು, ವಿಶ್ವಭೋಜಕಃ=ಸಮಸ್ತರೊಡನೆ ಸಹಭೋಜನವುಳ್ಳ ಆತನು. ॥೩೬॥

ಗ್ರಂಥ॥ **ಅಹಂ ಭೃತ್ಯಃ ಶಿವಃ ಸ್ವಾಮೀ ಶಿಷ್ಯೋऽಹಂ ಗುರುರೇವ ವೈ**
**ಇತಿ ಯಸ್ಯ ಮತಿರ್ನಾಸ್ತಿ ಸ ಚಾದ್ವೈತಪದೇ ಸ್ಥಿತಃ**

ಟೀಕು॥ ಅಹಂ ಭೃತ್ಯಃ=ನಾನು ಭೃತ್ಯನು, ಶಿವಃ ಸ್ವಾಮೀ=ಶಿವನು ಒಡೆಯನು, ಅಹಂ ಶಿಷ್ಯಃ=ನಾನು ಶಿಷ್ಯನು, ಏಷ ವೈ ಗುರುಃ=ಈತನು ಶ್ರೀಗುರು, ಇತಿ ಮತಿಃ=ಹೀಗೆಂಬ ಬುದ್ಧಿಯು, ಯಸ್ಯ=ಆವಾತಂಗೆ, ನಾಸ್ತಿ=ಇಲ್ಲವು, ಸ ಚ=ಆ ಶಿವಲಿಂಗೈಕ್ಯನು, ಅದ್ವೈತಪದೇ=ಶಿವಾದ್ವೈತಪದದಲ್ಲಿ, ಸ್ಥಿತಃ=ಇರುತ್ತಿರ್ದ ಆತನು. ॥ ೩೭ ॥

ಗ್ರಂಥ॥ **ಅಹಂ ಶಿವೋ ಗುರುಶ್ಚಾಹಮಹಂ ವಿಶ್ವಂ ಚರಾಚರಮ್**
**ಯಯಾ ವಿಜ್ಞಾಯತೇ ಸಮ್ಯಕ್‌ಪೂರ್ಣಾಹಂತೇತಿ ಸಾ ಸ್ಮೃತಾ**

ಟೀಕು॥ ಅಹಂ ಶಿವಃ=ನಾನೇ ಶಿವನು, ಅಹಂ ಗುರುಶ್ಚ=ನಾನೇ ಶ್ರೀಗುರುವು, ಅಹಂ ಚರಾಚರಂ ವಿಶ್ವಂ=ನಾನೇ ಸ್ಥಾವರಜಂಗಮಾತ್ಮಕವಾದ ಜಗತ್ತು, ಇತಿ=ಹೀಗೆಂದು, ಯಯಾ=ಆವುದಾನೊಂದು ಅಹಂಕೃತಿಯಿಂದೆ, ಸಮ್ಯಕ್=ಲೇಸಾಗಿ, ವಿಜ್ಞಾಯತೇ=ಅರಿಯಲುಪಡುತ್ತಿರ್ದಪುದು, ಸಾ=ಅದು, ಪೂರ್ಣಾಹಂತೇತಿ=ಪೂರ್ಣಾಹಂಕಾರವೆಂದು, ಸ್ಮೃತಾ=ನೆನೆಯಲುಪಟ್ಟಿತ್ತು. ॥೩೮॥

ಸೂತ್ರ॥ ಬಳಿಕ "ದ್ವೈತಮಿಂಧನಮಿದಂ ಚಿದಗ್ನಿನಾ ಕಲ್ಪನಾಹವಿರಿಮಾ ಸ್ವವೃತ್ತಯಃ।
ದೇವತಾಸ್ವಮಹಿಮಾ ಸ್ಥಿತಿಃ ಫಲಂ ಸತ್ವ ಹೋತೃವದಯಂ ನ ಕಿಂ ಯಜೇತ್"॥
ಯೆಂಬ ವಾಸಿಷ್ಠಾರ್ಥವನು ಪ್ರಕಟಿಸುತ್ತ ಸಹಭೋಜನ ಸಂಪನ್ನನೆ ವಿಶ್ವಹೋಮಿಯೆಂದು ಹೇಳುತ್ತಿರ್ದಪಂ.

ಗ್ರಂಥ॥ **ಪರಾಹಂತಾಮಯೇ ಸ್ವಾತ್ಮಪಾವಕೇ ವಿಶ್ವಭಾಸ್ವತಿ**
**ಇದಂತಾಹವ್ಯಹೋಮೇನ ವಿಶ್ವಹೋಮೀತಿ ಕಥ್ಯತೇ**

ಟೀಕು॥ ವಿಶ್ವಭಾಸ್ವತಿ=ಎಲ್ಲಾಕಡೆಯಲ್ಲಿಯು ಪ್ರಕಾಶಿಸುತ್ತಿರ್ದ, ಪರಾಹಂತಾಮಯೇ= ಸರ್ವೋತ್ಕರ್ಷವಾದ ಪೂರ್ಣಾಹಂಕಾರವೆ ಸ್ವರೂಪವಾಗುಳ್ಳ, ಸ್ವಾತ್ಮಪಾವಕೇ=ಪರಮಾತ್ಮನೆಂಬ ಅಗ್ನಿಯಲ್ಲಿ, ಇದಂತಾ ಹವ್ಯಹೋಮೇನ="ದ್ವೈತ್ಯೈಧೋಹವ್ಯ ಹೋಮೇನ" ದ್ವೈತವೆಂಬ ಅರಣಿ ಹವಿಸ್ಸುಗಳ ಹೋಮದಿಂದೆ, ವಿಶ್ವಹೋಮೀತಿ= ವಿಶ್ವಹೋಮಿವುಳ್ಳಾತನೆಂದು, ಕಥ್ಯತೇ=ಹೇಳಲುಪಡುತ್ತಿರ್ದಪನು. ॥೩೯॥

ಸೂತ್ರ॥ ಬಳಿಕ "ಅಂತರ್ಮುಖತಯಾ ಸರ್ವಂ ಚಿದ್ವಹ್ನೋತ್ರೇ ಜಗತೂಣಾಂ
ಜುಹ್ವಂತನ್ನಿವರ್ತಂತೇ ಮುನೇ ಚಿತ್ತಜವಿಭ್ರಮಾಃ।" ಯೆಂಬ ಪುರಾಣಾರ್ಥವನು ಪ್ರತಿಪಾದಿಸುತ್ತಿರ್ದಪಂ.

ಗ್ರಂಥ॥ ಆಧಾರವಹ್ನೌ ಚಿದ್ರೂಪೇ ಭೇದಜಾತಂ ಜಗದ್ಧವಿಃ
ಜುಹೋತಿ ಜ್ಞಾನಯಜ್ವಾ ಯಸ್ಸ ಜ್ಞೇಯೋ ವಿಶ್ವಹವ್ಯಭುಕ್

ಟೀಕು॥ ಯಃ=ಆವನಾನೊಬ್ಬನು, ಚಿದ್ರೂಪೇ=ಅರಿವೇ ಸ್ವರೂಪವಾಗುಳ್ಳ, ಆಧಾರವಹ್ನೌ=ಮೂಲಾಧಾರವೆಂಬ ಸಂಜ್ಞೆಯುಳ್ಳ ಆಜ್ಞಾಚಕ್ರದ ಜ್ಞಾನಾಗ್ನಿಯಲ್ಲಿ, ಭೇದಜಾತಂ=ದ್ವೈತದಿಂದೆ ಹುಟ್ಟಿದ, ಜಗದ್ಧವಿಃ=ಜಗತ್ತೆಂಬ ಹವಿಸ್ಸನು, ಜುಹೋತಿ=ಬೇಳುತ್ತಿರ್ದ್ದಪನು. ಸಃ=ಆತನು, ವಿಶ್ವಹವ್ಯಭುಕ್=ಸಮಸ್ತಜಗತ್ತೆಂಬ ಹವಿಸ್ಸನು ಭಕ್ಷಿಸುತ್ತಿರ್ದ್ದ, ಜ್ಞಾನಯಜ್ವಾ=ಜ್ಞಾನಯಜ್ಞದೀಕ್ಷಿತನೆಂದು, ಜ್ಞೇಯಃ=ಅರಿಯಲು ಯೋಗ್ಯನು. ॥೪೦॥

ಗ್ರಂಥ॥ ಚಿದಾಕಾರೇ ಪರಾಕಾಶೇ ಪರಮಾನಂದಭಾಸ್ವತಿ
ವಿಲೀನಚಿತ್ತವೃತ್ತೀನಾಂ ಕಾ ವಾ ವಿಶ್ವಕ್ರಮಸ್ಥಿತಿಃ

ಟೀಕು॥ ಪರಾಕಾಶೇ=ಸರ್ವೋತ್ಕರ್ಷವಾದ ಆಜ್ಞಾಯೆಂಬ ಸಂಜ್ಞೆಯುಳ್ಳ ಊರ್ಧ್ವಹೃದಯಾಕಾಶದಲ್ಲಿ, ಚಿದಾಕಾರೇ=ಅರಿವೆ ಸ್ವರೂಪವಾಗುಳ್ಳ, ಪರಮಾನಂದ ಭಾಸ್ವತಿ=ಪರಮಾನಂದಸ್ವರೂಪವಾದ ಮಹಾಲಿಂಗವೆಂಬ ಸೂರ್ಯನಲ್ಲಿ, ವಿಲೀನ ಚಿತ್ತವೃತ್ತೀನಾಂ=ಅಡಗಲುಪಟ್ಟ ಮನೋ ವ್ಯಾಪಾರವುಳ್ಳ ಲಿಂಗೈಕ್ಯರಿಗೆ, ವಿಶ್ವಕ್ರಮಸ್ಥಿತಿಃ=ಜಗದ್ವ್ಯಾಪಾರದಲ್ಲಿ ಹೆಜ್ಜೆಯನಿಡುವತನವು, ಕಾವಾ=ಆವುದು? ಆವುದು ಇಲ್ಲವೆಂಬುದರ್ಥ. ॥೪೧॥

ಸೂತ್ರ॥ ಬಳಿಕ ಸಹಭೋಜನಸಂಪನ್ನನಾದ ಶಿವಲಿಂಗೈಕ್ಯನಿಗೆ ಲಭಿಸುವ ಮುಕ್ತಿಸ್ವರೂಪವನು ಸೂತ್ರದ್ವಯದಿಂದೆ ನಿರೂಪಿಸುತ್ತಿರ್ದ್ದಪಂ.

ಗ್ರಂಥ॥ ನಿರಸ್ತವಿಶ್ವಸಂಬಾಧೇ ನಿಷ್ಕಲಂಕೇ ಚಿದಂಬರೇ
ಭಾವಯೇಲ್ಲೀನಮಾತ್ಮಾನಂ ಸಾಮರಸ್ಯಸ್ವಭಾವತಃ

ಸೈಷಾ ವಿದ್ಯಾ ಪರಾ ಜ್ಞೇಯಾ ಸತ್ತಾನಂದಪ್ರಕಾಶಿನೀ
ಮುಕ್ತಿರಿತ್ಯುಚ್ಯತೇ ಸದ್ಭಿರ್ಜಗನ್ಮೋಹನಿವರ್ತಿನೀ

ಟೀಕು॥ ನಿರಸ್ತವಿಶ್ವಸಂಬಾಧೇ=ತೊಲಗಿಸಲುಪಟ್ಟ ಸಮಸ್ತ ಜಗದ ಬಾಧೆಯುಳ್ಳ, ನಿಷ್ಕಲಂಕೇ=ಕಲಂಕ ರಹಿತವಾಗಿರ್ದ್ದ, ಚಿದಂಬರೇ=ಚಿದಾಕಾಶಸ್ವರೂಪವಾದ ಮಹಾಲಿಂಗದಲ್ಲಿ, ಆತ್ಮಾನಂ=ಅಂಗಶಬ್ದವಾಚ್ಯವಾದ ತನ್ನನು, ಸಾಮರಸ್ಯಸ್ವಭಾವತಃ=ಸ್ವರೂಪಹಾನಿ ಸ್ವರೂಪ ವೃದ್ಧಿಯಿಲ್ಲದೆ ಸಜಾತೀಯವಾದ ಸಮಾನಸಮರಸಸ್ವಭಾವದಿಂದವೆ, ಲೀನಂ=ಬೆರಸಿರ್ದ್ದ ಆತನನಾಗಿ, ಭಾವಯೇತ್=ಭಾವಿಸುವುದು. ಸಾ ಏಷಾ=ಆ ಇದೆ, ಸತ್ತಾನಂದ ಪ್ರಕಾಶಿನೀ= ಸಚ್ಚಿದಾನಂದಸ್ವರೂಪವನೆ ಪ್ರಕಾಶಿಸುತ್ತಿರ್ದ್ದ,

ಪರಾವಿದ್ಯಾ=ಪರವಿದ್ಯೆಯೆಂದು, ಜ್ಞೇಯಾ=ಅರಿಯಲು ಯೋಗ್ಯವು. ಸಾ ಏಷಾ=ಆ ಇದೆ, ಜಗನ್ಮೋಹನಿವರ್ತಿನೀ=ಸಮಸ್ತ ಜಗದ್ಭ್ರಾಂತಿಯನು ತೊಲಗಿಸುತ್ತಿರ್ದ್ದ, ಪರಾಮುಕ್ತಿರಿತಿ=ಪರಾಮುಕ್ತಿಯೆಂದು, ಸದ್ಭಿಃ=ಸತ್ಪುರುಷರಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ॥೪೩॥

ಸೂತ್ರ॥ ಬಳಿಕ ಆ ಶಿವಲಿಂಗೈಕ್ಯನೆ ಆ ಮೋಕ್ಷಲಕ್ಷ್ಮಿಗೆ ಆಶ್ರಯವೆಂದು ಹೇಳಿ ಸಹಭೋಜನ ಸ್ಥಲವನು ಸಮಾಪ್ತಿಯ ಮಾಡುತ್ತಿರ್ದ್ದಪಂ.

**ವೃತ್ತ॥ ಭಕ್ತಾದಿಧಾಮಾರ್ಪಿತಧರ್ಮಯೋಗಾತ್ಪ್ರಾಪ್ತೈಕಭಾವಃ ಪರಮಾದ್ಭುತೇನ ।**
**ಶಿವೇನ ಚಿದ್ವ್ಯೋಮಮಯೇನ ಸಾಕ್ಷಾನ್ಮೋಕ್ಷಶ್ರಿಯೋ ಭಾಜನತಾಮುಪೈತಿ ॥**

ಟೀಕು॥ ಚಿದ್ವ್ಯೋಮಮಯೇನ=ಊರ್ಧ್ವಹೃತ್ಕಮಲಮಧ್ಯದಲ್ಲಿಯ ಚಿದಾಕಾಶಸ್ವರೂಪಿನಿಂದೆ, ಪರಮಾದ್ಭುತೇನ=ಮಹದಾಶ್ಚರ್ಯ ರೂಪನಾದ, ಶಿವೇನ=ಶಿವಲಿಂಗದೊಡನೆ, ಪ್ರಾಪ್ತೈಕ ಭಾವಃ= "ಪಶುಪಶುಪತಿಯೋಗೋ ದೃಗ್ಯುಕ್ಯಪ್ರಯೋಗಃ।"ಯೆಂದು ಅಭಿಯುಕ್ತವಾಕ್ಯ ಉಂಟಾಗಿ, ದೃಗ್ಯುಗೈಕ್ಯದೋಪಾದಿಯಲ್ಲಿ ಸ್ವರೂಪಹಾನಿ ಸ್ವರೂಪವೃದ್ಧಿಯಿಲ್ಲದೆ ಸಜಾತೀಯವಾದ ಸಮರಸತ್ವದಿಂದೆ ಎಯ್ದಲುಪಟ್ಟ ಐಕ್ಯಸ್ವಭಾವವುಳ್ಳ ಶಿವಲಿಂಗೈಕ್ಯನು, ಭಕ್ತಾದಿಧಾಮಾರ್ಪಿತಧರ್ಮಯೋಗಾತ್=ಭಕ್ತಾದಿಸ್ಥಲದಲ್ಲಿಯಿರುತ್ತಿರ್ದ್ದ ಸದಾಚಾರಸಂಬಂಧದದೆಸೆಯಿಂದೆ, ಸಾಕ್ಷಾತ್=ಪ್ರತ್ಯಕ್ಷವಾದ, ಮೋಕ್ಷಶ್ರಿಯಃ= ಪರಮೋಕ್ಷ ಲಕ್ಷ್ಮಿಗೆ, ಭಾಜನತಾಂ=ಆಶ್ರಯವಹತನವನು, ಉಪೈತಿ=ಎಯ್ದುತ್ತಿರ್ದ್ದಪನು. ॥೪೪॥

**ಇತಿ ಸಹಭೋಜನಸ್ಥಲಮ್**

**ಶ್ರೀರೇಣುಕಾಗಸ್ತ್ಯ ಸಂವಾದೇ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಂ ಸಿದ್ಧಾಂತಬೋಧಿನ್ಯಾಖ್ಯಾಯಾಂ ಶಿವಲಿಂಗೈಕ್ಯಸ್ಯ ಚತುರ್ವಿಧಸ್ಥಲ ಪ್ರಸಂಗೋ ನಾಮ ಚತುರ್ದಶಃ ಪರಿಚ್ಛೇದಃ ಸಮಾಪ್ತಃ**

**ಅಂತು ಭಕ್ತಸ್ಥಲ ೧೫ ಮಾಹೇಶ್ವರಸ್ಥಲ ೯**
**ಪ್ರಸಾದಿಸ್ಥಲ ೭ ಪ್ರಾಣಲಿಂಗಸ್ಥಲ ೫ ಶರಣಸ್ಥಲ ೪ ಐಕ್ಯಸ್ಥಲ ೪ ಅಂತು**
**ಅಂಗಸ್ಥಲ ೪೪**

## ಲಿಂಗಸ್ಥಲ ನಿರೂಪಣಾತ್ಮಕಃ ಉತ್ತರಭಾಗಃ
## ಲಿಂಗಸ್ಥಲೇ ಭಕ್ತಸ್ಥಲಗತನವವಿಧಲಿಂಗಪ್ರಸಂಗಃ
## ತತ್ರ ಲಿಂಗಸ್ಥಲಮ್

ಶ್ರೀಗುರುಂ ರೇಣುಕಂ ನತ್ವಾ ತನ್ನಾಮ್ನಾ ಲಿಖ್ಯತೇ ಮಯಾ ।
ಸ ಲಿಂಗಷಟ್ಸ್ಥಲೀ ಟೀಕಾ ಶ್ರೀಸಿದ್ಧಾಂತಶಿಖಾಮಣೇಃ ॥

**ಸೂತ್ರ॥** ಬಳಿಕ ಭಕ್ತ್ಯಾದ್ಯೈಕ್ಯಾಂತವಾದ ಷಟ್ಸ್ಥಲಂಗಳಲ್ಲಿ ಸಿದ್ಧವಾದ ಪಿಂಡಾದಿ ಸಹಭೋಜನಾಂತವಾದ ನಾಲ್ವತ್ತುನಾಲ್ಕು ಅವಾಂತರಸ್ಥಲೋಕ್ತವಾದ ಸದಾಚಾರಸಂಪನ್ನನಾಗಿ ವರ್ಣಾಶ್ರಮಾದಿ ಸಂಕಲ್ಪ ವಿಕಲ್ಪವಿಲ್ಲದೆ ಸಹಭೋಜನಸಂಪನ್ನನಾದ ಶಿವಲಿಂಗೈಕ್ಯನಿಂದೆ ಆಚರಿಸಲು ಯೋಗ್ಯಂಗಳಾದ ಲಿಂಗಸ್ಥಲಂಗಳನು ರೇಣುಕಗಣೇಶ್ವರನು ಅಗಸ್ತ್ಯಮುನಿಗೆ ಉಪದೇಶಿಸಿ ಹೇಳುತ್ತಿರ್ದ್ದಪಂ.

**ಗ್ರಂಥ॥** **ಷಟ್ಸ್ಥಲೋಕ್ತಸದಾಚಾರಸಂಪನ್ನಸ್ಯ ಯಥಾಕ್ರಮಮ್ ।**
**ಲಿಂಗಸ್ಥಲಾನಿ ಕಥ್ಯಂತೇ ಜೀವನ್ಮುಕ್ತಿಪರಾಣಿಚ ॥**

**ಟೀಕು॥** ಷಟ್ಸ್ಥಲೋಕ್ತಸದಾಚಾರ ಸಂಪನ್ನಸ್ಯ=ಆ ಷಡುಸ್ಥಲದಲ್ಲಿ ಹೇಳಲುಪಟ್ಟ ಸದಾಚಾರ ಸಂಪನ್ನನಾದ, ಯಥಾಕ್ರಮಂ=ಕ್ರಮವನು ಮೀರದೆ, ಲಿಂಗಸ್ಥಲಾನಿ= ಲಿಂಗಷಡುಸ್ಥಲಂಗಳು, ಜೀವನ್ಮುಕ್ತಿಪರಾಣಿ ಚ=ಜೀವನ್ಮುಕ್ತಿಯಲ್ಲಿ ತತ್ಪರವಾಗಿರ್ದ್ದವಾಗಿ, ಕಥ್ಯಂತೇ=ಹೇಳಲುಪಡುತ್ತಿರ್ದ್ದಪವು.

**ತಾತ್ಪರ್ಯ॥** ಅಂಗಾಚಾರವಳಿದು ಸಹಭೋಜನಸಂಪನ್ನನಾದ ಆದಕಾರಣವಾಗಿ ಮುಂದೆ ಲಿಂಗಾಚಾರಂಗಳು ಹೇಳಲುಪಡುತ್ತಿರ್ದ್ದಪವೆಂಬುದರ್ಥ. ॥೧॥

**ಅಗಸ್ತ್ಯ ಉವಾಚ॥**

ಅಗಸ್ತ್ಯಮುನಿಯು ಪ್ರಶ್ನೆಯಂಮಾಡಿ ನುಡಿವುತ್ತಿರ್ದ್ದಪಂ.

**ಗ್ರಂಥ॥** **ಭಕ್ತಾದ್ಯೈಕ್ಯಾವಸಾನಾನಿ ಷಡುಕ್ತಾನಿ ಸ್ಥಲಾನಿ ಚ ।**
**ಲಿಂಗಸ್ಥಲಾನಿ ಕಾನೀಹ ಕಥ್ಯಂತೇ ಕತಿ ವಾ ಪುನಃ ॥**

**ಟೀಕು॥** ಭಕ್ತಾದ್ಯೈಕ್ಯಾವಸಾನಾನಿ=ಭಕ್ತ ಮೊದಲಾಗಿ ಲಿಂಗೈಕ್ಯನೆ ಕಡೆಯಾಗುಳ್ಳ, ಷಡುಸ್ಥಲಾನಿ= ಷಡುಸ್ಥಲಂಗಳು, ಉಕ್ತಾನಿ=ಹೇಳಲುಪಟ್ಟವು. ಇಹ=ಇಲ್ಲಿ, ಪುನಃ=ಮರಳಿ, ಲಿಂಗಸ್ಥಲಾನಿ=ಲಿಂಗ ಸ್ಥಲಂಗಳು, ಕಾನಿ=ಆವವು? ಕತಿ ವಾ?=ಎಷ್ಟು ಪ್ರಕಾರವಾಗಿದ್ದವೆಂದು, ಕಥ್ಯಂತೇ=ಹೇಳಲು ಪಡುತ್ತಿರ್ದ್ದಪವು. ॥೨॥

**ರೇಣುಕ ಉವಾಚ॥**

ರೇಣುಕ ಗಣೇಶ್ವರನು ಪ್ರಶ್ನೋತ್ತರವನು ನಿರೂಪಿಸುತ್ತಿರ್ದಪಂ.

**ಗ್ರಂಥ॥** **ಗುರ್ವಾದಿ ಜ್ಞಾನಶೂನ್ಯಾಂತಾಃ ಭಕ್ತಾದಿಸ್ಥಲಸಂಶ್ರಿತಾಃ ।**
**ಸ್ಥಲಭೇದಾಃ ಪ್ರಕೀರ್ತ್ಯಂತೇ ಪಂಚಾಶತ್ಸಪ್ತ ಚಾಧುನಾ ॥**

**ಟೀಕು॥** ಭಕ್ತಾದಿಸ್ಥಲಸಂಶ್ರಿತಾಃ=ಭಕ್ತಾದ್ಯೈಕ್ಯಾಂತವಾದ ಲಿಂಗಷಡುಸ್ಥಲಂಗಳನಾಶ್ರಯಿಸಿರ್ದ್ದ, ಗುರ್ವಾದಿ ಜ್ಞಾನಶೂನ್ಯಾಂತಾಃ=ದೀಕ್ಷಾಗುರುಸ್ಥಲ ತೊಡಗಿ ಜ್ಞಾನಶೂನ್ಯಸ್ಥಲವೆ ಕಡೆಯಾಗುಳ್ಳ, ಪಂಚಾಶತ್ಸಪ್ತ ಸ್ಥಲಭೇದಾಃ ಚ=ಐವತ್ತೇಳು ಪ್ರಕಾರವಾದ ಸ್ಥಲಭೇದಂಗಳು, ಅಧುನಾ=ಈಗ ಪ್ರಕೀರ್ತ್ಯಂತೇ=ಹೇಳಲುಪಡುತ್ತಿರ್ದಪವು. ॥೩॥

**ಸೂತ್ರ॥** ಬಳಿಕ ಭಕ್ತಸ್ಥಲದಲ್ಲಿಯ ಲಿಂಗಸ್ಥಲದ ಅವಾಂತರಭೇದಂಗಳನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ಆದೌ ನವಸ್ಥಲಾನೀಹ ಭಕ್ತಸ್ಥಲಸಮಾಶ್ರಯಾತ್ ।**
**ಕಥ್ಯಂತೇ ಗುಣಸಾರೇಣ ನಾಮಾನ್ಯೇಷಾಂ ಪೃಥಕ್ ಶೃಣು ॥**

**ಟೀಕು॥** ಇಹ=ಈಗ ಲಿಂಗಷಡುಸ್ಥಲದಲ್ಲಿಯ, ಭಕ್ತಸ್ಥಲಸಮಾಶ್ರಯಾತ್=ಭಕ್ತಸ್ಥಲವನು ಆಶ್ರಯಿಸುವದರದೆಸೆಯಿಂದೆ, ಆದೌ=ಮೊದಲಲ್ಲಿ, ನವಸ್ಥಲಾನಿ=ಒಂಭತ್ತು ಅವಾಂತರಸ್ಥಲಂಗಳು, ಗುಣಸಾರೇಣ=ಗುಣಶ್ರೇಷ್ಠತ್ವದಿಂದೆ, ಕಥ್ಯಂತೇ=ಹೇಳಲುಪಡುತ್ತಿರ್ದಪವು. ಏಷಾಂ=ಈ ಅವಾಂತರಸ್ಥಲಂಗಳ, ನಾಮಾನಿ=ಹೆಸರುಗಳನು, ಪೃಥಕ್=ಬೇರೆ ಬೇರೆ, ಶೃಣು=ಕೇಳು. ॥೪॥

**ಗ್ರಂಥ॥** **ದೀಕ್ಷಾಗುರುಸ್ಥಲಂ ಪೂರ್ವಂ ತತಃ ಶಿಕ್ಷಾಗುರುಸ್ಥಲಮ್**
**ಪ್ರಜ್ಞಾಗುರುಸ್ಥಲಂ ಚಾಥ ಕ್ರಿಯಾಲಿಂಗಸ್ಥಲಂ ತತಃ**

**ಭಾವಲಿಂಗಸ್ಥಲಂ ಚಾಥ ಜ್ಞಾನಲಿಂಗಸ್ಥಲಂ ತತಃ**
**ಸ್ವಯಂ ಪರಂ ಚರಂ ಚೇತಿ ತೇಷಾಂ ಲಕ್ಷಣಮುಚ್ಯತೇ**

**ಟೀಕು॥** ಪೂರ್ವಂ=ಮೊದಲು, ದೀಕ್ಷಾಗುರುಸ್ಥಲಂ=ದೀಕ್ಷಾಗುರುಸ್ಥಲವು, ತತಃ=ಬಳಿಕ, ಶಿಕ್ಷಾಗುರುಸ್ಥಲಂ ಚ=ಶಿಕ್ಷಾಗುರುಸ್ಥಲವು, ಅಥ=ಅನಂತರದಲ್ಲಿ, ಪ್ರಜ್ಞಾಗುರುಸ್ಥಲಂ=ಪ್ರಜ್ಞಾಗುರುಸ್ಥಲವು, ತತಃ=ತದನಂತರದಲ್ಲಿ, ಕ್ರಿಯಾಲಿಂಗಸ್ಥಲಂ=ಕ್ರಿಯಾಲಿಂಗಸ್ಥಲವು, ಅಥ=ಅನಂತರದಲ್ಲಿ, ಭಾವಲಿಂಗ ಸ್ಥಲಂ=ಭಾವಲಿಂಗಸ್ಥಲವು, ತತಃ ಜ್ಞಾನಲಿಂಗಸ್ಥಲಂ ಚ=ಅನಂತರದಲ್ಲಿ ಜ್ಞಾನಲಿಂಗಸ್ಥಲವು,

ಸ್ವಯಂ=ಸ್ವಯ ಸ್ಥಲವು, ಚರಂ=ಚರಲಿಂಗಸ್ಥಲವು ಪರಂ=ಪರಸ್ಥಲವು, ಏತೇಷಾಂ=ಈ ಉದ್ದೇಶಿಸಲುಪಟ್ಟ ಒಂಬತ್ತು ಸ್ಥಲಂಗಳಿಗೆ, ಲಕ್ಷಣಂ=ಲಕ್ಷಣವು, ಉಚ್ಯತೇ=ಹೇಳಲ್ಪಡುತ್ತಂ ಇದ್ದೀತು. ||೬||

## ೧. ಭಕ್ತಸ್ಥಲೇ ದೀಕ್ಷಾಗುರುಸ್ಥಲಮ್

**ಸೂತ್ರ||** ಬಳಿಕ "ದೀಯತೇ ಚ ಯಯಾ ಜ್ಞಾನಂ ಕ್ಷೀಯತೇ ಚ ಮಲತ್ರಯಮ್ ।
ಸಾ ದೀಕ್ಷಾ ಸಂಜ್ಞಿತಾ ತಸ್ಯಾಂ ಗುರುರ್ದೀಕ್ಷಾಗುರುರ್ಮತಃ"|| ಯೆಂಬ ವಾತುಲೋತ್ತರಾರ್ಥವನು ಪ್ರಕಟಿಸುತ್ತ ಶಿವಲಿಂಗೈಕ್ಯನೆ ದೀಕ್ಷಾಗುರುವೆಂದು ಹೇಳುತ್ತಿರ್ದಪಂ.

**ಗ್ರಂಥ||**
**ದೀಯತೇ ಪರಮಂ ಜ್ಞಾನಂ ಕ್ಷೀಯತೇ ಪಾಶಬಂಧನಮ್**
**ಯಯಾ ದೀಕ್ಷೇತಿ ಸಾ ತಸ್ಯಾಂ ಗುರುಃರ್ದೀಕ್ಷಾಗುರುಃ ಸ್ಮೃತಃ**

**ಟೀಕು||** ಯಯಾ=ಆವುದಾನೊಂದರಿಂದೆ, ಪರಮಂ ಜ್ಞಾನಂ=ಉತ್ಕರ್ಷವಾದ ಶಿವಜ್ಞಾನವು, ದೀಯತೇ=ಕೊಡಲುಪಡುತ್ತಿರ್ದಪುದು. ಪಾಶಬಂಧನಂ=ಮಲಮಾಯಾದಿ ಪಾಶಬಂಧವು, ಕ್ಷೀಯತೇ= ಕೆಡಿಸಲುಪಡುತ್ತಿರ್ದಪುದು. ಸಾ=ಅದೇ, ದೀಕ್ಷೇತಿ=ದೀಕ್ಷೆಯೆಂದು, ಮತಾ=ಸಂಮತವು, ತಸ್ಯಾಂ=ಆ ದೀಕ್ಷೆಯಲ್ಲಿಯ, ಗುರುಃ=ಶ್ರೀಗುರುವೆ, ದೀಕ್ಷಾಗುರುಃ=ದೀಕ್ಷಾಗುರುವೆಂದು, ಸ್ಮೃತಃ=ನೆನೆಯಲುಪಟ್ಟನು.

ತಾತ್ಪರ್ಯ|| 'ದಾ ದಾನೇ', 'ಕ್ಷಿ ಕ್ಷಯೇ' ಯೆಂಬ ಧಾತುವಿನಿಂದೆ ನಿಷ್ಪನ್ನವಾದ ಚಿತ್ಕ್ರಿಯಾರೂಪ ವಾದ ದೀಕ್ಷೆಯನು 'ಗೃ ನಿಗರಣೇ'ಯೆಂಬ ಧಾತುವಿನಿಂದೆ 'ಗೃಣೋತೀತಿ ಗುರುಃ'ಯೆಂದು ಉಪದೇಶವ ಮಾಡುವ ಶಿವಲಿಂಗೈಕ್ಯನೆ ದೀಕ್ಷಾಗುರುವೆಂಬುದರ್ಥ. ||೭||

**ಸೂತ್ರ||** ಬಳಿಕ ಗುರು ಶಬ್ದಕ್ಕೆ ನಿರ್ವಚನವನು ಹೇಳುತ್ತಿರ್ದಪಂ.

**ಗ್ರಂಥ||**
**ಗುಣಾತೀತಂ ಗುಕಾರಂ ಚ ರೂಪಾತೀತಂ ರುಕಾರಕಮ್ ।**
**ಗುಣಾತೀತಮರೂಪಂ ಚ ಯೋ ದದ್ಯಾತ್ಸ ಗುರುಃ ಸ್ಮೃತಃ ||**

**ಟೀಕು||** ಗುಕಾರಂ='ಗು' ಯೆಂಬ ಅಕ್ಷರವು, ಗುಣಾತೀತಂ=ಪ್ರೋಕ್ತ ಗುಣಂಗಳನು ಮೀರಿದ್ದ ಅದು. ರುಕಾರಕಂ='ರು' ಯೆಂಬ ಅಕ್ಷರವು, ರೂಪಾತೀತಂ=ಶುದ್ಧ ಮಾಯಾರೂಪನು ಮೀರಿದ್ದ ಅದು. ಗುಣಾತೀತಂ ಅರೂಪಂ ಚ=ಮಂಡಲತ್ರಯವಾದ ಗುಣತ್ರಯವನು ಮೀರಿ ಜ್ಯೋತಿರ್ಮಯವಾದ ಬೈಂದವ ಕಲಾರೂಪಿಲ್ಲದ ಚಿನ್ಮಯ ವಸ್ತುವನು, ಯಃ=ಆವಾತನು, ದದ್ಯಾತ್= ಉಪದೇಶಿಸಿ ಕೊಡುವನು, ಸಃ=ಆತನು, ಗುರುಃ='ಗೃಣೋತಿ ಚಿತ್ತತ್ವಮತೋ ಸ್ಯಾದ್ ಯಃ ಸಂಶಯಚ್ಛೇದಕ ಗುರುಃ ಸ್ಯಾದ್ ಯಃ ಸಂಶಯ ಚ್ಛೇದಕ ಏವ ಸಸ್ಯಾತ್'? ಯೆಂಬ ಶಿವರಹಸ್ಯವುಂಟಾಗಿ ಗುರುಶಬ್ದವಾಚ್ಯನೆಂದು, ಸ್ಮೃತಃ=ನೆನೆಯಲುಪಟ್ಟನು. ||೮||

**ಸೂತ್ರ॥** ಬಳಿಕ ಆಚಾರ್ಯ ಶಬ್ದಕ್ಕೆ ನಿರ್ವಚನವನು ಹೇಳುತ್ತಿರ್ದಪಂ.

ಗ್ರಂಥ॥ **ಆಚಿನೋತಿ ಚ ಶಾಸ್ತ್ರಾರ್ಥಾನಾಚಾರೇ ಸ್ಥಾಪಯತ್ಯಲಮ್ ।**
**ಸ್ವಯಮಾಚರತೇ ಯಸ್ಮಾದಾಚಾರ್ಯಸ್ತೇನ ಚೋಚ್ಯತೇ ॥**

**ಟೀಕು॥** ಯಸ್ಮಾತ್=ಆವುದಾನೊಂದು ಕಾರಣವಾಗಿ, ಶಾಸ್ತ್ರಾರ್ಥಾನ್=ವೀರಶೈವಶಾಸ್ತ್ರ ರಹಸ್ಯಾರ್ಥಂಗಳನು, ಆಚಿನೋತಿ=ಪ್ರಕಟಿಸಿ ಹೇಳುತ್ತಿರ್ದಪನು; ಆಚಾರೇ=ವೀರಶೈವಾಚಾರದಲ್ಲಿ, ಅಲಂ=ಮಿಗಿಲಾಗಿ, ಸ್ಥಾಪಯತಿ=ಶಿಷ್ಯರನು ಆಜ್ಞಾಪಿಸಿ ಇರಿಸುತ್ತಿರ್ದಪನು;ಸ್ವಯಂ ಚ=ತಾನು, ಆಚರತೇ=ವೀರಶೈವಾಚಾರದಲ್ಲಿ ಆಚರಿಸುತ್ತಿರ್ದಪನು; ತೇನ ಹಿ=ಅದುಕಾರಣದಿಂದೆ, ಆಚಾರ್ಯಃ= "ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ"ಯೆಂದು ಕಠವಲ್ಲೀ ಶ್ರುತಿ ಪ್ರಸಿದ್ಧವಾದ ಆಚಾರ್ಯ ಶಬ್ದವಾಚ್ಯನೆಂದು, ಉಚ್ಯತೇ=ಹೇಳಲುಪಡುತ್ತಿರ್ದಪನು. ॥೯॥

**ಸೂತ್ರ॥** ಬಳಿಕ ದೇಶಿಕಶಬ್ದ ನಿರ್ವಚನವನು ಹೇಳಿ ಶಿವಲಿಂಗೈಕ್ಯನೆ ಜಗದ್ಗುರುವೆಂದು ಸೂತ್ರದ್ವಯದಿಂದೆ ಹೇಳಿ ದೀಕ್ಷಾಗುರುಸ್ಥಲವನು ಮುಗಿಯಿಸುತ್ತಿರ್ದಪಂ.

ಗ್ರಂಥ॥ **ಷಡಧ್ವಾತೀತಯೋಗೇನ ಯತತೇ ಯಸ್ತು ದೇಶಿಕಃ ।**
**ಮಾಯಾಬ್ಧಿತಾರಣೋಪಾಯಹೇತುರ್ವಿಶ್ವಗುರುಶ್ಶಿವಃ ॥**

**ಟೀಕು॥** ಯಃ ದೇಶಿಕಃ="ಜ್ಞಾನಾನುಕ್ತಿಂ ದಿಶತಿ ಯಃ ಸಃ ದೇಶಿಕ ಇತಿ ಸ್ಮೃತಃ"ಯೆಂಬ ಕಾಮಿಕ ವಾಕ್ಯದಿಂದೆ ಪ್ರಸಿದ್ಧನಾದ ಆವನಾನೊಬ್ಬ ದೇಶಿಕನು, ಷಡಧ್ವಾತೀತಯೋಗೇನ="ಅಧ್ವನಾಮಧ್ವಪತೇ ಶ್ರೇಷ್ಠಸ್ಯಾಧ್ವನಃ ಪಾರಮಶೀಯ" ಯೆಂಬ ಶ್ರುತಿಯಿಂದೆ ಪ್ರಸಿದ್ಧವಾದ ವರ್ಣಪದಾದಿ ಷಡಧ್ವಾತೀತವಾದ ಪರಮಶಿವಯೋಗದಿಂದೆ, ಯತತೇ=ಉದ್ಯೋಗಿಸುತ್ತಿರ್ದಪನು. ಶಿವಃ=ಶಿವಲಿಂಗೈಕ್ಯನಾದ, ಸಃ ವಿಶ್ವಗುರುಃ=ಆ ಜಗದ್ಗುರುವೆ, ಮಾಯಾಬ್ಧಿತಾರಣೋಪಾಯಹೇತುಃ= ಮಾಯಾಸಮುದ್ರವನು ದಾಂಟಿಸುವ ಉಪಾಯಕ್ಕೆ ಕಾರಣವಾಗಿದ್ದ ಆತನು. ॥೧೦॥

ಗ್ರಂಥ॥ **ಅಖಂಡಂ ಯೇನ ಚೈತನ್ಯಂ ವ್ಯಜ್ಯತೇ ಸರ್ವವಸ್ತುಷು**
**ಆತ್ಮಯೋಗಪ್ರಭಾವೇನ ಸ ಗುರುರ್ವಿಶ್ವಭಾಸಕಃ**

**ಟೀಕು॥** ಯೇನ=ಆವನಾನೊಬ್ಬ ದೇಶಿಕನಿಂದೆ, ಸರ್ವವಸ್ತುಷು=ಸಮಸ್ತವಸ್ತುಗಳಲ್ಲಿಯ, ಅಖಂಡಂ ಚೈತನ್ಯಂ=ಅಖಂಡಿತವಾದ ಚೈತನ್ಯವು, ಆತ್ಮಯೋಗಪ್ರಭಾವೇನ=ಶಿವಯೋಗ ಸಾಮರ್ಥ್ಯದಿಂದೆ, ವ್ಯಜ್ಯತೇ=ವ್ಯಕ್ತೀಕರಿಸಲುಪಡುತ್ತಿರ್ದಪುದು. ಸ ಗುರುಃ=ಆ ಆಚಾರ್ಯನು, ವಿಶ್ವಭಾಸಕಃ=ಜಗತ್ಪ್ರಕಾಶಕನಾಗಿದ್ದ ಆತನು. ॥೧೧॥

**ಇತಿ ದೀಕ್ಷಾಗುರುಸ್ಥಲಮ್**

## ೨. ಭಕ್ತಸ್ಥಲೇ ಶಿಕ್ಷಾಗುರುಸ್ಥಲಮ್

**ಸೂತ್ರ॥** ಬಳಿಕ "ಬೋಧ್ಯಬೋಧಕಭಾವೇನ ಜ್ಞಾನದ್ವಾರೇಣ ಶಾಸ್ಯತೇ।
ಶಿಷ್ಯೋ ಹಿ ಯೇನ ಗುರುಣಾ ಸ ಶಿಕ್ಷಾಗುರುರುಚ್ಯತೇ"॥ ಯೆಂಬ ವಾತುಲೋಕ್ತಾರ್ಥವನು ಪ್ರಕಟಿಸುತ್ತ ಈ ದೀಕ್ಷಾಗುರುವೆ ಶಿಷ್ಯನ ಪ್ರಶ್ನೋತ್ತರವನು ಹೇಳುವದರಿಂದೆ ಶಿಕ್ಷಾಗುರುವೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** **ದೀಕ್ಷಾಗುರುರಸೌ ಶಿಕ್ಷಾಹೇತುಃ ಶಿಷ್ಯಸ್ಯ ಬೋಧಕಃ ।**
**ಪ್ರಶ್ನೋತ್ತರಪ್ರವಕ್ತಾ ಚ ಶಿಕ್ಷಾಗುರುರಿತೀರ್ಯತೇ ॥**

**ಟೀಕು॥** ಅಸೌ ದೀಕ್ಷಾ ಗುರುಃ=ಈ ದೀಕ್ಷಾಗುರುವೆ, ಶಿಷ್ಯಸ್ಯ ಬೋಧಕಃ=ಶಿಷ್ಯನಿಗೆ ಬೋಧಕವಾದ, ಪ್ರಶ್ನೋತ್ತರ ಪ್ರವಕ್ತಾ=ಪ್ರಶ್ನೆಗೆ ಉತ್ತರವನು ಹೇಳುತ್ತ, ಶಿಕ್ಷಾಹೇತುಶ್ಚ=ಶಿಕ್ಷೆಗೆ ಕಾರಣವಾದಾತನಾಗಿ, ಶಿಕ್ಷಾಗುರುರಿತಿ=ಶಿಕ್ಷಾಗುರುವೆಂದು, ಈರ್ಯತೇ=ಹೇಳಲುಪಡುತ್ತಿರ್ದ್ದಪನು. ॥೧೨॥

**ಗ್ರಂಥ॥** **ಬೋಧಕೋಽಯಂ ಸಮಾಖ್ಯಾತೋ ಬೋಧ್ಯಮೇತದಿತಿ ಸ್ಫುಟಮ್ ।**
**ಶಿಷ್ಯೇ ನಿಯುಜ್ಯತೇ ಯೇನ ಸ ಶಿಕ್ಷಾಗುರುರುಚ್ಯತೇ ॥**

**ಟೀಕು॥** ಅಯಂ=ಈತನು, ಬೋಧಕಃ=ಶಿವತತ್ತ್ವಪ್ರಬೋಧಕನು, ಸ್ಫುಟಂ=ದೇಶಿಕೋಪದೇಶದಿಂದೆ ಸ್ಫುಟವಾದ, ಏತತ್=ಈ ಶಿವಯೋಗ ಜ್ಞಾನವೆ, ಬೋಧ್ಯಂ=ಬೋಧ್ಯವು;ಇತಿ=ಹೀಗೆಂದು ಯೇನ=ಆವನಾನೊಬ್ಬ ಗುರುವಿನಿಂದೆ, ಶಿಷ್ಯೇ=ಶಿಷ್ಯನಲ್ಲಿ ಸಮಾಖ್ಯಾತಃ=ಬೋಧಿಸಲುಪಟ್ಟಾತನನಾಗಿ, ನಿಯುಜ್ಯತೇ=ನಿಯೋಗಿಸಬಪಡುತ್ತಿರ್ದ್ದಪನು. ಸಃ=ಆತನು, ಶಿಕ್ಷಾಗುರುಃ=ಶಿಕ್ಷಾಗುರುವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ॥೧೩॥

**ಸೂತ್ರ॥** ಬಳಿಕ "ಆಚಾರ್ಯಃ ಪೂರ್ವರೂಪಮ್।
ಅಂತೇವಾಸ್ಯುತ್ತರರೂಪಮ್।
ವಿದ್ಯಾ ಸಂಧಿಃ"॥
"ಆಚಾರ್ಯೋಽಂತೇವಾಸಿನಮನುಶಾಸ್ತಿ।"ಯೆಂಬ ಶ್ರುತ್ಯರ್ಥವನು ಸೂತ್ರದ್ವಯದಿಂದೆ ಪ್ರಕಟಿಸುತ್ತಿರ್ದ್ದಪಂ.

**ಗ್ರಂಥ॥** **ಸಂಸಾರತಿಮಿರೋನ್ಮಾಥಿಶರಚ್ಚಂದ್ರಮರೀಚಯಃ ।**
**ವಾಚೋ ಯಸ್ಯ ಪ್ರವರ್ತಂತೇ ತಮಾಚಾರ್ಯಂ ಪ್ರಚಕ್ಷತೇ ॥**

**ಟೀಕು||** ಯಸ್ಯ=ಆವಾತನ, ವಾಚಃ=ಉಪದೇಶವಾಕ್ಯಂಗಳು, ಸಂಸಾರತಿಮಿರೋನ್ಮಾರ್ಥಿ= ಸಂಸಾರವೆಂಬ ಅಂಧಕಾರವನು ತೊಲಗಿಸುವುದಕ್ಕೆ, ಶರಚ್ಚಂದ್ರಮರೀಚಯಃ=ಶರತ್ಕಾಲದ ಚಂದ್ರನ ಕಿರಣಂಗಳಾಗಿ, ಪ್ರವರ್ತಂತೇ=ವರ್ತಿಸುತ್ತಿರ್ದ್ದಪವು. ತಂ=ಆತನನು, ಆಚಾರ್ಯಂ=ಆಚಾರ್ಯ ಶಬ್ದವಾಚ್ಯನನಾಗಿ, ಪ್ರಚಕ್ಷತೇ=ಹೇಳುತ್ತಿರ್ದ್ದಪುದು. ||೧೪||

ಗ್ರಂಥ|| ದದಾತಿ ಯಃ ಪತಿಜ್ಞಾನಂ ಜಗನ್ಮಾಯಾನಿವರ್ತಕಮ್ ।
ಅದ್ವೈತವಾಸನೋಪಾಯಂ ತಮಾಚಾರ್ಯವರಂ ವಿದುಃ ॥

**ಟೀಕು||** ಯಃ=ಆವನಾನೊಬ್ಬನು, ಜಗನ್ಮಾಯಾನಿವರ್ತಕಂ=ಜಗದ್ರೂಪವಾದ ಮಾಯಾಪ್ರಪಂಚನು ತೊಲಗಿಸುತ್ತಿರ್ದ್ದ, ಅದ್ವೈತವಾಸನೋಪಾಯಂ ತು=ಶಿವಾದ್ವೈತವಾಸನೆಗೆ ಉಪಾಯವಾಗಿರ್ದ್ದ, ಪತಿಜ್ಞಾನಂ="ಪತಿಂ ವಿಶ್ವಸ್ಯಾತ್ಮೇಶ್ವರಂ ಶಾಶ್ವತಂ ಶಿವಮಚ್ಯುತಮ್" ಯೆಂದು ನಾರಾಯಣೋಪ ನಿಷತ್ಪ್ರಸಿದ್ಧವಾದ ಪತಿ ಜ್ಞಾನವನು, ದದಾತಿ=ಕೊಡುತ್ತಿರ್ದ್ದಪನು. ತಂ=ಆತನನು, ಆಚಾರ್ಯ ವರಂ=ಆಚಾರ್ಯಶ್ರೇಷ್ಠನನಾಗಿ, ವಿದುಃ=ಅರಿವುತ್ತಿರ್ದ್ದಪರು. ||೧೫||

**ಸೂತ್ರ||** ಬಳಿಕ ಶಿವಾದ್ವೈತಜ್ಞಾನಾಸನ್ನನಾಗಿ ಶಿಷ್ಯರ ಸಂಶಯವನು ಪರಿಹರಿಸುವಾತನೆ ಗುರುಶ್ರೇಷ್ಠನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| ಪೂರ್ವಪಕ್ಷಂ ಸಮಾದಾಯ ಜಗದ್ಭೇದವಿಕಲ್ಪನಮ್ ।
ಅದ್ವೈತಕೃತಸಿದ್ಧಾಂತೋ ಗುರುರೇಷ ಗುಣಾಧಿಕಃ ॥

**ಟೀಕು||** ಜಗದ್ಭೇದ ವಿಕಲ್ಪನಂ=ಜಗತ್ತಿನ ಭೇದವಿಕಲ್ಪವುಳ್ಳ, ಪೂರ್ವಪಕ್ಷಂ=ಪೂರ್ವಪಕ್ಷವನು, ಸಮಾದಾಯ=ಅಂಗೀಕರಿಸಿ, ಅದ್ವೈತ ಕೃತ ಸಿದ್ಧಾಂತಃ=ಶಿವಾದ್ವೈತದಲ್ಲಿ ಮಾಡಲುಪಟ್ಟ ಸಿದ್ಧಾಂತ ಪಕ್ಷವುಳ್ಳ, ಏಷಃ ಗುರುಃ=ಈ ಶಿಕ್ಷಾಗುರುವೆ, ಗುಣಾಧಿಕಃ=ಗುಣಾಧಿಕವುಳ್ಳಾತನು. ||೧೬||

ಗ್ರಂಥ|| ಸಂದೇಹವನಸಂದೋಹಸಮುಚ್ಛೇದಕುಠಾರಿಕಾ ।
ಯತ್ಸೂಕ್ತಿಧಾರಾ ವಿಮಲಾ ಸ ಗುರೂಣಾಂ ಶಿಖಾಮಣಿಃ ॥

**ಟೀಕು||** ವಿಮಲಾ=ನಿರ್ಮಲವಾಗಿದ್ದ, ಯತ್ ಸೂಕ್ತಿಧಾರಾ=ಆವನಾನೊರ್ವ ಗುರುವಿನ ಶೋಭನವಾದ ಉಪದೇಶವಾಕ್ಯಧಾರೆಯು, ಸಂದೇಹವನಸಂದೋಹ ಸಮುಚ್ಛೇದಕುಠಾರಿಕಾ=ಸಂಶಯ ವೆಂಬ ಅರಣ್ಯಸಮೂಹವನು ತರಿವುದಕ್ಕೆ ಕೊಡಲಿಯಾಗಿರ್ದ್ದ ಅದು. ಸಃ=ಆತನು, ಗುರೂಣಾಂ ಶಿಖಾಮಣಿಃ= ಗುರುಗಳಿಗೆ ಶಿರೋರತ್ನವಾಗಿದ್ದಾತನು. ||೧೭||

**ಸೂತ್ರ||** ಆ ಅರ್ಥವನೆ ಸೂತ್ರದ್ವಯದಿಂದೆ ವಿಶೇಷಿಸುತ್ತಿರ್ದಪಂ.

**ಗ್ರಂಥ||** **ಯತ್ಸೂಕ್ತಿದರ್ಪಣಾಭೋಗೇ ನಿರ್ಮಲೇ ದೃಶ್ಯತೇ ಸದಾ ।**
**ಮೋಕ್ಷಶ್ರೀರ್ಬಿಂಬರೂಪೇಣ ಸ ಗುರುರ್ಭವತಾರಕಃ ॥**

**ಟೀಕು||** ನಿರ್ಮಲೇ=ನಿರ್ಮಲವಾಗಿರ್ದ, ಯತ್ ಸೂಕ್ತಿದರ್ಪಣಾಭೋಗೇ=ಆವನಾನೊರ್ವ ಗುರುವಿನ ಉಪದೇಶವಾಕ್ಯವೆಂಬ ದರ್ಪಣದ ತೆರಪಿನಲ್ಲಿ, ಮೋಕ್ಷಶ್ರೀಃ=ಮೋಕ್ಷಲಕ್ಷ್ಮಿಯು, ಬಿಂಬರೂಪೇಣ=ಪ್ರತಿಬಿಂಬಸ್ವರೂಪಿನಿಂದೆ, ಸದಾ=ಎಲ್ಲಾ ಕಾಲದಲ್ಲಿಯು, ದೃಶ್ಯತೇ=ಕಾಣಲು ಪಡುತ್ತಿರ್ದಪುದು. ಸಃ ಗುರುಃ=ಆ ಶ್ರೀಗುರುವೆ, ಭವತಾರಕಃ=ಸಂಸಾರಸಾಗರವನು ದಾಂಟಿಸುತ್ತಿರ್ದ ಆತನು. ||೧೮||

**ಗ್ರಂಥ||** **ಶಿಷ್ಯಾಣಾಂ ಹೃದಯಾಲೇಖ್ಯಂ ಪ್ರದ್ಯೋತಯತಿ ಯಃ ಸ್ವಯಮ್ ।**
**ಜ್ಞಾನದೀಪಿಕಯಾಽನೇನ ಗುರುಣಾ ಕಃ ಸಮೋ ಭವೇತ್ ॥**

**ಟೀಕು||** ಯಃ=ಆವನಾನೊಬ್ಬ ಶ್ರೀ ಗುರು, ಶಿಷ್ಯಾಣಾಂ=ಶಿಷ್ಯರ, ಸ್ವಯಂ=ನಿಜರೂಪವಾದ, ಹೃದಯಾಲೇಖ್ಯಂ=ಹೃತ್ಕಮಲದಲ್ಲಿಯ ಚಿತ್ರವನು, ಜ್ಞಾನದೀಪಿಕಯಾ=ಶಿವಜ್ಞಾನವೆಂಬ ದೀಪದಿಂದೆ, ಪ್ರದ್ಯೋತಯತಿ=ಪ್ರಕಾಶಿಸುತ್ತಿರ್ದಪನು. ಅನೇನ ಗುರುಣಾ=ಈ ಶಿಕ್ಷಾಗುರುವಿನೊಡನೆ, ಕಃ ಸಮೋ ಭವೇತ್=ಆವಾತನು ಸಮಾನವಹನು? ಆರೂ ಸಮಾನವಿಲ್ಲವೆಂಬುದರ್ಥ. ||೧೯||

**ಸೂತ್ರ||** ಬಳಿಕ ಸಂಸಾರವಿನಾಶಕನಾದ ದೇಶಿಕನ ಪಡೆವುದು ದುರ್ಲಭವೆಂದು ಹೇಳಿ ಶಿಕ್ಷಾಗುರು ಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ||** **ಪರಮಾದ್ವೈತವಿಜ್ಞಾನಪರಮೌಷಧಿದಾನತಃ ।**
**ಸಂಸಾರರೋಗನಿರ್ಮಾಥೀ ದೇಶಿಕಃ ಕೇನ ಲಭ್ಯತೇ ॥**

**ಟೀಕು||** ಪರಮಾದ್ವೈತವಿಜ್ಞಾನ=ಸರ್ವೋತ್ಕರ್ಷವಾದ ಶಿವಾದ್ವೈತ ಜ್ಞಾನವೆಂಬ, ಪರಮೌಷಧಿದಾನತಃ=ದೊಡ್ಡಿತ್ತಾದ ಔಷಧವನು ಕೊಡುವದರದೆಸೆಯಿಂದೆ, ಸಂಸಾರರೋಗ ನಿರ್ಮಾಥೀ=ಸಂಸಾರರೋಗವನು ಪರಿಹರಿಸುತ್ತಿರ್ದ, ದೇಶಿಕಃ=ಆಚಾರ್ಯನು, ಕೇನ=ಆವಾತನಿಂದೆ, ಲಭ್ಯತೇ=ಪಡೆಯಲುಪಡುತ್ತಿರ್ದಪನು? ಆರಿಂದಲು ಪಡೆಯಬಾರದೆಂಬುದರ್ಥ. ||೨೦||

**ಇತಿ ಶಿಕ್ಷಾಗುರುಸ್ಥಲಮ್**

## ೩. ಭಕ್ತಸ್ಥಲೇ ಜ್ಞಾನಗುರುಸ್ಥಲಮ್

**ಸೂತ್ರ॥** ಬಳಿಕ "ಶಿವರೂಪಾನುಸಂಧಾಯಿ ಜ್ಞಾನಂ ಯೇನೋಪದಿಶ್ಯತೇ।
ಮುಮುಕ್ಷೋಃ ಮೋಕ್ಷಸಿದ್ಧ್ಯರ್ಥಂ ಸಃ ಜ್ಞಾನಗುರುರುಚ್ಯತೇ"॥ ಯೆಂಬ ವಾತುಲೋಕ್ತಾರ್ಥವನು ಪ್ರಕಟಿಸುತ್ತ ಈ ಶಿಕ್ಷಾಗುರುವೆ ಶಿವಜ್ಞಾನದಾನದಿಂದೆ ಜ್ಞಾನಗುರುವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ಉಪದೇಷ್ಟೋಪದೇಶಾನಾಂ ಸಂಶಯಚ್ಛೇದಕಾರಕಃ**
**ಸಮ್ಯಗ್‌ಜ್ಞಾನಪ್ರದಸ್ಸಾಕ್ಷಾದೇಷ ಜ್ಞಾನಗುರುಃ ಸ್ಮೃತಃ**

**ಟೀಕು॥** ಉಪದೇಶಾನಾಂ=ಉಪದೇಶರಹಸ್ಯಂಗಳ, ಉಪದೇಷ್ಟಾಂ=ಉಪದೇಶಿಸುತ್ತಿರ್ದ್ದ, ಸಂಶಯಚ್ಛೇದಕಾರಕಃ=ಶಿಷ್ಯರಸಂದೇಹವನು ಛೇದಿಸುತ್ತಿರ್ದ್ದ, ಏಷಃ=ಈ ಶಿಕ್ಷಾಗುರುವೆ, ಸಮ್ಯಕ್= ಲೇಸಾದ, ಸಾಕ್ಷಾತ್=ಪ್ರತ್ಯಕ್ಷವಾದ, ಜ್ಞಾನಪ್ರದಃ=ಶಿವಜ್ಞಾನವನು ಕೊಡುವಾತನಾಗಿ, ಜ್ಞಾನಗುರುಃ= ಜ್ಞಾನಗುರುವೆಂದು, ಸ್ಮೃತಃ=ನೆನೆಯಲುಪಟ್ಟನು. ॥೨೦॥

**ಗ್ರಂಥ॥** **ನಿರಸ್ತ ವಿಶ್ವಸಂಭೇದನಿರ್ವಿಕಾರಂ ಚಿದಂಬರಮ್ ।**
**ಸಾಕ್ಷಾತ್ಕರೋತಿ ಯೋ ಯುಕ್ತ್ಯಾ ಸ ಜ್ಞಾನಗುರುರಚ್ಯತೇ ॥**

**ಟೀಕು॥** ನಿರಸ್ತವಿಶ್ವಸಂಭೇದ=ನಿರಾಕರಿಸಲುಪಟ್ಟ ಜಗದ್ಭೇದವುಳ್ಳ, ನಿರ್ವಿಕಾರಂ=ವಿಕಾರರಹಿತವಾಗಿರ್ದ್ದ, ಚಿದಂಬರಂ=ಚಿದಾಕಾಶವನು, ಯಃ=ಆವಾತನು, ಯುಕ್ತ್ಯಾ=ನಿಜಾನುಭವಯುಕ್ತಿಯಿಂದೆ, ಸಾಕ್ಷಾತ್ಕರೋತಿ=ಪ್ರತ್ಯಕ್ಷೀಕರಿಸುತ್ತಿರ್ದ್ದಪಂ. ಸಃ=ಆತನು, ಜ್ಞಾನಗುರುಃ=ಜ್ಞಾನಗುರುವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ॥೨೨॥

**ಸೂತ್ರ॥** ಬಳಿಕ ಶಿವಜ್ಞಾನವನು ಸೂತ್ರದ್ವಯದಿಂದೆ ಕೊಂಡಾಡುತ್ತಿರ್ದ್ದಪಂ.

**ಗ್ರಂಥ॥** **ಕಲಂಕವಾನಸೌ ಚಂದ್ರಃ ಕ್ಷಯವೃದ್ಧಿಪರಿಪ್ಲುತಃ ।**
**ನಿಷ್ಕಲಂಕಸ್ಥಿತೋ ಜ್ಞಾನಚಂದ್ರಮಾ ನಿರ್ವಿಕಾರವಾನ್ ॥**

**ಟೀಕು॥** ಕ್ಷಯವೃದ್ಧಿಪರಿಪ್ಲುತಃ=ಕ್ಷಯವೃದ್ಧಿಗಳಿಂದೆ ಹೊರಳುತ್ತಿರ್ದ್ದ, ಅಸೌ ಚಂದ್ರಃ=ಈ ಚಂದ್ರನು, ಕಲಂಕವಾನ್=ಕಲಂಕವುಳ್ಳ ಆತನು; ನಿರ್ವಿಕಾರವಾನ್=ವಿಕಾರವಿಲ್ಲದೆ ಇದ್ದ, ಜ್ಞಾನ ಚಂದ್ರಮಾಃ=ಶಿವಜ್ಞಾನವೆಂಬ ಚಂದ್ರನು, ನಿಷ್ಕಲಂಕ ಸ್ಥಿತಃ=ಕಲಂಕಿಲ್ಲದೆಯಿರುತ್ತಿರ್ದ್ದ ಆತನು. ॥೨೩॥

**ಗ್ರಂಥ||** **ಪಾರ್ಶ್ವಸ್ಥತಿಮಿರಂ ಹಂತಿ ಪ್ರದೀಪೋ ಮಣಿನಿರ್ಮಿತಃ ।**
**ಸರ್ವಗಾಮಿತಮೋ ಹಂತಿ ಬೋಧದೀಪೋ ನಿರಂಕುಶಃ ॥**

**ಟೀಕು||** ಮಣಿನಿರ್ಮಿತಃ ಪ್ರದೀಪಃ=ರತ್ನದಿಂದೆ ನಿರ್ಮಿಸಲುಪಟ್ಟ ದೀಪವು, ಪಾರ್ಶ್ವಸ್ಥಂ ತಿಮಿರಂ ಹಂತಿ=ಎಡಬಲದಲ್ಲಿರುತ್ತಿರ್ದ್ದ ಅಂಧಕಾರವನು ತೊಲಗಿಸುತ್ತಿರ್ದ್ದಪುದು. ನಿರಂಕುಶಃ=ತಡೆಹಿಲ್ಲದೆ ಯಿರ್ದ್ದ, ಬೋಧದೀಪಃ=ಜ್ಞಾನದೀಪವು, ಸರ್ವಗಾಮಿ ತಮಃ=ಎಲ್ಲಾದಿಕ್ಕನು ಎಯ್ದಿರ್ದ್ದ ಅಂಧಕಾರವನು, ಹಂತಿ=ಕೆಡಿಸುತ್ತಿರ್ದ್ದಪುದು. ||೨೪||

**ಸೂತ್ರ||** ಬಳಿಕ ಆ ಶಿವಜ್ಞಾನೋಪದೇಶದಲ್ಲಿ ತತ್ಪರನಾದ ಶ್ರೀಗುರುವನು ಸೂತ್ರತ್ರಯದಿಂದೆ ಸ್ತುತಿಸುತ್ತಿರ್ದ್ದಪಂ.

**ಗ್ರಂಥ||** **ಸರ್ವಾರ್ಥಸಾಧಕಜ್ಞಾನವಿಶೇಷಾದೇಶತತ್ಪರಃ ।**
**ಜ್ಞಾನಾಚಾರ್ಯಸ್ಸಮಸ್ತಾನಾಮನುಗ್ರಹಕರಶ್ಶಿವಃ ॥**

**ಟೀಕು||** ಸರ್ವಾರ್ಥಸಾಧಕಜ್ಞಾನವಿಶೇಷಾದೇಶತತ್ಪರಃ=ಭೋಗಮೋಕ್ಷ ರೂಪವಾದ ಸಮಸ್ತ ಪ್ರಯೋಜನವನು ಸಾಧಿಸುತ್ತಿರ್ದ್ದ ಶಿವಜ್ಞಾನದ ವಿಶೇಷವಾದ ಉಪದೇಶದಲ್ಲಿ ತತ್ಪರನಾಗಿರ್ದ್ದ, ಜ್ಞಾನಾಚಾರ್ಯಃ=ಜ್ಞಾನಗುರುವೆ, ಸಮಸ್ತಾನಾಂ=ಸರ್ವರಿಗೆಯು, ಅನುಗ್ರಹಕರಃ=ಅನುಗ್ರಹವನು ಮಾಡುತ್ತಿರ್ದ್ದ, ಶಿವಃ=ಪ್ರತ್ಯಕ್ಷವಾದ ಶಿವನೆ. ||೨೫||

**ಗ್ರಂಥ||** **ಕಟಾಕ್ಷಚಂದ್ರಮಾ ಯಸ್ಯ ಜ್ಞಾನಸಾಗರವರ್ಧನಃ ।**
**ಸಂಸಾರತಿಮಿರಚ್ಛೇದೀ ಸ ಗುರುರ್ಜ್ಞಾನಪಾರಗಃ ॥**

**ಟೀಕು||** ಯಸ್ಯ=ಆವಾತನಾನೊಬ್ಬ ಆಚಾರ್ಯನ, ಕಟಾಕ್ಷ ಚಂದ್ರಮಾಃ=ಕಡೆಗಣ್ಣನೋಟವೆಂಬ ಚಂದ್ರನು, ಜ್ಞಾನಸಾಗರವರ್ಧನಃ=ಶಿವಜ್ಞಾನವೆಂಬ ಸಮುದ್ರವನು ಹೆಚ್ಚಿಸುತ್ತಿದ್ದ ಆತನು, ಸಂಸಾರಮಿತಿರಚ್ಛೇದೀ=ಸಂಸಾರವೆಂಬ ಅಂಧಕಾರವನು ಛೇದಿಸುತ್ತಿರ್ದ್ದ, ಸಃ ಗುರುಃ=ಆ ಶ್ರೀಗುರುವೆ, ಜ್ಞಾನಪಾರಗಃ=ಪರಾಪರಜ್ಞಾನವನು ಕಡೆಗಂಡ ಆತನು. ||೨೬||

**ಗ್ರಂಥ||** **ಬಹಿಸ್ತಿಮಿರವಿಚ್ಛೇತ್ತಾ ಭಾನುರೇಷ ಪ್ರಕೀರ್ತಿತಃ ।**
**ಬಹಿರಂತಸ್ತಮಚ್ಛೇದೀ ವಿಭುರ್ದೇಶಿಕಭಾಸ್ಕರಃ ॥**

**ಟೀಕು||** ಏಷ ಭಾನುಃ=ಈ ಸೂರ್ಯನು, ಬಹಿಸ್ತಿಮಿರವಿಚ್ಛೇತ್ತಾ=ಹೊರಗಣ ಅಂಧಕಾರವನು ತೊಲಗಿಸುತ್ತಿರ್ದ್ದ ಆತನು, ವಿಭುಃ=ಚಿದ್ವ್ಯಾಪಕನಾದ, ದೇಶಿಕಭಾಸ್ಕರಃ=ಜ್ಞಾನಾಚಾರ್ಯನೆಂಬ

ಸೂರ್ಯನು, ಬಹಿರಂತಸ್ತಮಚ್ಛೇದೀ=ಹೊರಗೊಳಗಣ ಅಜ್ಞಾನವೆಂಬ ಅಂಧಕಾರವನು ತೊಲಗಿಸುತ್ತಿರ್ದಾತನಾಗಿ, ಪ್ರಕೀರ್ತಿತಃ=ಹೇಳಲುಪಟ್ಟನು. ॥೨೭॥

**ಸೂತ್ರ॥** ಬಳಿಕ ಶಿವವೇಧಕರವಾದ ಶಿವಜ್ಞಾನವನು ಸೂಚಿಸಿ ಜ್ಞಾನಗುರುಸ್ಥಲವನು ಸೂತ್ರದ್ವಯದಿಂದೆ ಮುಗಿಯಿಸುತ್ತಿರ್ದಪಂ.

ಗ್ರಂಥ॥ **ಕಟಾಕ್ಷಲೇಶಮಾತ್ರೇಣ ವಿನಾ ಧ್ಯಾನಾದಿಕಲ್ಪನಮ್ ।**
**ಶಿವತ್ವಂ ಭಾವಯೇದ್ಯತ್ರ ಸ ವೇಧಃ ಶಾಂಭವೋ ಮತಃ ॥**

**ಟೀಕು॥** ಧ್ಯಾನಾದಿ ಕಲ್ಪನಂ ವಿನಾ=ಧ್ಯಾನಧಾರಣಾದಿ ಸಂಕಲ್ಪಹೊರತಾಗಿ, ಕಟಾಕ್ಷಲೇಶ ಮಾತ್ರೇಣ=ಶ್ರೀಗುರುವಿನ ಕೃಪಾಪಾಂಗ ದರ್ಶನ ಮಾತ್ರದಿಂದವೆ, ಯತ್ರ=ಆವೆಡೆಯಲ್ಲಿ, ಶಿವತ್ವಂ= ಶಿವತ್ವವು, ಭಾವಯೇತ್=ಅಹುದು; ಸ ವೇಧಃ=ಆ ವೇಧೆಯೇ, ಶಾಂಭವಃ=ಶಿವಸಂಬಂಧವಾಗಿದ್ದು ದೆಂದು, ಮತಃ=ಸಂಮತವು. ॥೨೮॥

ಗ್ರಂಥ॥ **ಶಿವವೇಧಕರೇ ಜ್ಞಾನೇ ದತ್ತೇ ಯೇನ ಸುನಿರ್ಮಲೇ ।**
**ಜೀವನ್ಮುಕ್ತೋ ಭವೇಚ್ಛಿಷ್ಯಃ ಸ ಗುರುಃ ಜ್ಞಾನಸಾಗರಃ ॥**

**ಟೀಕು॥** ಯೇನ=ಆವನಾನೊಬ್ಬ ಶ್ರೀಗುರುವಿನಿಂದೆ, ಸುನಿರ್ಮಲೇ=ಅತ್ಯಂತ ನಿರ್ಮಲವಾದ, ಶಿವವೇಧಕರೇ=ಶಿವವೇಧೆಯನು ಮಾಡುತ್ತಿರ್ದ್ದ, ಜ್ಞಾನೇ=ಶಿವಜ್ಞಾನವು, ದತ್ತೇ ಸತಿ=ಕೊಡಲುಪಡಲಿಕೆ ಯಾಗಿ, ಶಿಷ್ಯಃ=ಶಿಷ್ಯನು, ಜೀವನ್ಮುಕ್ತಃ=ಜೀವನ್ಮುಕ್ತನು, ಭವೇತ್=ಅಹನು ಸ ಗುರುಃ=ಆ ಶ್ರೀ ಗುರುವು, ಜ್ಞಾನಸಾಗರಃ=ಶಿವಜ್ಞಾನಕ್ಕೆ ಸಮುದ್ರವಾಗಿದ್ದಾತನು. ॥೨೯॥

**ಇತಿ ಜ್ಞಾನಗುರುಸ್ಥಲಮ್**

## ೪. ಭಕ್ತಸ್ಥಲೇ ಕ್ರಿಯಾಲಿಂಗಸ್ಥಲಮ್

**ಸೂತ್ರ॥** ಬಳಿಕ "ಇಷ್ಟಮೂರ್ಜಂ ತಪಸಾಽನುಯಚ್ಛತಿ।" ಯೆಂಬ ಅಥರ್ವಶ್ರುತ್ಯರ್ಥವನು,
''ಸಕಲಂ ದೃಕ್ಕಲಾಗ್ರಾಹ್ಯಮಿಷ್ಟಲಿಂಗಸ್ಥಲಂ ಮಹತ್ ।
ಇಷ್ಟಾವಾಪ್ತಿಕರಂ ಸಾಕ್ಷಾದನಿಷ್ಟಪರಿಹಾರಕಮ್'' ॥

''ಇಷ್ಟಮೂರ್ಜಂ ಸ್ವಭಕ್ತಾನಾಮನುಯಚ್ಛತಿ ಸರ್ವದಾ ।
ಇಷ್ಟಲಿಂಗಮಿತಿ ಪ್ರಾಹ ತಸ್ಮಾದಾಥರ್ವಣೀ ಶ್ರುತಿಃ"॥ ಯೆಂಬ

ವಾತುಲತಂತ್ರಾರ್ಥವನು ಪ್ರಕಟಿಸುತ್ತ ಆ ಜ್ಞಾನಗುರೂಪದಿಷ್ಟವಾದ ಕ್ರೀಯು ಆವೆಡೆಯಲ್ಲಿ ಲಯಿಸಿತು ಅದು ಕ್ರಿಯಾಲಿಂಗಸ್ಥಲವೆಂದು ಸಪ್ತಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ॥ ಗುರೋರ್ವಿಜ್ಞಾನಯೋಗೇನ ಕ್ರಿಯಾ ಯತ್ರ ವಿಲೀಯತೇ ।**
**ತತ್ಕ್ರಿಯಾಲಿಂಗಮಾಖ್ಯಾತಂ ಸರ್ವೈರಾಗಮಪಾರಗೈಃ ॥**

**ಟೀಕು॥** ಗುರೋಃ=ಜ್ಞಾನಗುರುವಿನ, ವಿಜ್ಞಾನಯೋಗೇನ=ವಿಶೇಷವಾದ ಜ್ಞಾನಯೋಗದಿಂದೆ, ಕ್ರಿಯಾ=ಕ್ರೀಯು, ಯತ್ರ=ಆವೆಡೆಯಲ್ಲಿ, ವಿಲೀಯತೇ=ಲಯಿಸುತ್ತಿರ್ದುದು. ತತ್=ಅದು, ಕ್ರಿಯಾಲಿಂಗಂ= ಕ್ರಿಯಾರ್ಥವಾದ ಇಷ್ಟಲಿಂಗವೆಂದು, ಆಗಮಪಾರಗೈಃ ಸರ್ವೈಃ=ಶಿವಸಿದ್ಧಾಂತ ಪಾರಂಗತರಾದ ಸಮಸ್ತ ವೀರಶೈವಾಚಾರ್ಯರಿಂದೆ, ಆಖ್ಯಾತಂ=ಹೇಳಲುಪಟ್ಟಿತ್ತು. ॥೩೦॥

**ಗ್ರಂಥ॥ ಪರಾನಂದಚಿದಾಕಾರಂ ಪರಬ್ರಹ್ಮೈವ ಕೇವಲಮ್ ।**
**ಲಿಂಗಂ ಸದ್ರೂಪತಾಪನ್ನಂ ಲಕ್ಷ್ಯತೇ ವಿಶ್ವಸಿದ್ಧಯೇ ॥**

**ಟೀಕು॥** ಪರಾನಂದ=ಪರಮಾನಂದರೂಪವಾಗಿ, ಚಿದಾಕಾರಂ=ಅರಿವೆ ಸ್ವರೂಪವಾಗಿ, ಸದ್ರೂಪತಾಪನ್ನಂ=ಉಂಟೆಂಬ ಸ್ವರೂಪವನೆಯ್ದಿರ್ದ್ದ, ಕೇವಲಂ ಪರಂ ಬ್ರಹ್ಮೈವ=ಬರಿಯ ಪರ ಬ್ರಹ್ಮವೆ, ವಿಶ್ವಸಿದ್ಧಯೇ=ಸಮಸ್ತಸತ್ಕ್ರಿಯಾಸಿದ್ಧಿಗೋಸುಗ, ಲಿಂಗಂ=ಇಷ್ಟಲಿಂಗವೆಂದು, ಲಕ್ಷ್ಯತೇ= ಕುರುಹುವಿಡಿಯಲುಪಡುತ್ತಿರ್ದಪದು. ॥೩೧॥

**ಗ್ರಂಥ॥ ಲಿಂಗಮೇವ ಪರಂಜ್ಯೋತಿರ್ಭವತಿ ಬ್ರಹ್ಮ ಕೇವಲಮ್ ।**
**ತಸ್ಮಾತ್ತತ್ಪೂಜನಾದೇವ ಸರ್ವಕರ್ಮಫಲೋದಯಃ ॥**

**ಟೀಕು॥** ಪರಂಜ್ಯೋತಿಃ=ಪರಂಜ್ಯೋತಿಸ್ವರೂಪವಾದ, ಕೇವಲಂ ಪರಬ್ರಹ್ಮೈವ=ಬರಿಯ ಬ್ರಹ್ಮವೆ, ಲಿಂಗಂ=ಕ್ರಿಯಾರ್ಥವಾದ ಇಷ್ಟಲಿಂಗವು, ಭವತಿ=ಆಗುತ್ತಿರ್ದಪುದು. ತಸ್ಮಾತ್=ಅದು ಕಾರಣವಾಗಿ, ತತ್ಪೂಜನಾದೇವ=ಆ ಇಷ್ಟಲಿಂಗಪೂಜೆಯದೆಸೆಯಿಂದವೆ, ಸರ್ವಕರ್ಮಫಲೋದಯಃ=ಸಮಸ್ತ ಸತ್ಕರ್ಮಫಲಂಗಳ ಉದಯವು, ಭವತಿ=ಆಗುತ್ತಿರ್ದಪುದು. ॥೩೨॥

**ಗ್ರಂಥ॥ ಪರಿತ್ಯಜ್ಯ ಕ್ರಿಯಾಸ್ಸರ್ವಾಃ ಲಿಂಗಪೂಜೈಕತತ್ಪರಾಃ ।**
**ವರ್ತಂತೇ ಯೋಗಿನಸ್ಸರ್ವೇ ತಸ್ಮಾಲ್ಲಿಂಗಂ ವಿಶಿಷ್ಯತೇ ॥**

**ಟೀಕು॥** ಸರ್ವೇ ಯೋಗಿನಃ=ಸನಕಾದಿ ಸಮಸ್ತಯೋಗೀಶ್ವರರು, ಸರ್ವಾಃ ಕ್ರಿಯಾಃ=ಸಮಸ್ತ ಕ್ರಿಯೆಗಳನು, ಪರಿತ್ಯಜ್ಯ=ಬಿಟ್ಟು, ಲಿಂಗಪೂಜೈಕತತ್ಪರಾಃ=ಇಷ್ಟಲಿಂಗಪೂಜೆಯೊಂದರಲ್ಲಿಯೇ ತತ್ಪರರಾಗಿ,

ವರ್ತಂತೇ=ವರ್ತಿಸುತ್ತಿರ್ದ್ದಪರು. ತಸ್ಮಾತ್=ಅದು ಕಾರಣವಾಗಿ, ಲಿಂಗಂ=ಕ್ರಿಯಾಲಿಂಗವು, ವಿಶಿಷ್ಯತೇ=ವಿಶೇಷಿಸಲುಪಡುತ್ತಿರ್ದ್ದಪುದು. ||೩೩||

ಗ್ರಂಥ|| **ಯಜ್ಞಾದಯಃ ಕ್ರಿಯಾಸ್ಸರ್ವಾಃ ಲಿಂಗಪೂಜಾಂಶಸಂಮಿತಾಃ ।**
**ಇತಿ ಯತ್ಪೂಜ್ಯತೇ ಸಿದ್ಧೈಸ್ತತ್ಕ್ರಿಯಾಲಿಂಗಮುಚ್ಯತೇ ॥**

**ಟೀಕು||** ಯಜ್ಞಾದಯಃ=ಯಜ್ಞ ಮೊದಲಾಗುಳ್ಳ, ಸರ್ವಾಕ್ರಿಯಾಃ=ಸಮಸ್ತ ಸತ್ಕರ್ಮಂಗಳು, ಲಿಂಗಪೂಜಾಂಶಸಂಮಿತಾಃ ಇತಿ=ಕ್ರಿಯಾಲಿಂಗಪೂಜಫಲಾಂಶಕ್ಕೆ ಸನತ್ಮಂಗಳೆಂದು, ಸಿದ್ಧೈಃ=ಸನಕಾದಿ ಸಿದ್ಧರುಗಳಿಂದೆ, ಯತ್=ಆವುದಾನೊಂದು ಲಿಂಗವು, ಪೂಜ್ಯತೇ=ಪೂಜಿಸಲುಪಡುತ್ತಿರ್ದ್ದಪುದು; ತತ್=ಅದು, ಕ್ರಿಯಾಲಿಂಗಂ=ಕ್ರಿಯಾರ್ಥವಾದ ಇಷ್ಟಲಿಂಗವೆಂದು, ಉಚ್ಯತೇ=ಪೇಳಲುಪಡುತ್ತಿರ್ದ್ದಪುದು. ||೩೪||

**ಸೂತ್ರ||** ಬಳಿಕ ಲಿಂಗಪೂಜಾಸಂಪನ್ನನಿಗೆ ಆವ ಕ್ರಿಯೆಯೂ ಬೇಡವೆಂದು ಹೇಳುತ್ತಿರ್ದ್ದಪಂ.

ಗ್ರಂಥ|| **ಕಿಂ ಯಜ್ಞೈರಗ್ನಿಹೋತ್ರಾದ್ಯೈಃ ಕಿಂ ತಪೋಭಿಶ್ಚ ದುಶ್ಚರೈಃ ।**
**ಲಿಂಗಾರ್ಚನರತಿರ್ಯಸ್ಯ ಸ ಸಿದ್ಧಃ ಸರ್ವಕರ್ಮಸು ॥**

**ಟೀಕು||** ಅಗ್ನಿಹೋತ್ರಾದ್ಯೈಃ=ಅಗ್ನಿಹೋತ್ರವೇ ಮೊದಲಾಗುಳ್ಳ, ಯಜ್ಞೈಃ=ಯಜ್ಞಂಗಳಿಂದೆ, ಕಿಂ=ಏನು? ದುಶ್ಚರೈಃ=ಆಚರಿಸಬಾರದೆಯಿದ್ದ, ತಪೋಭಿಶ್ಚ=ತಪಸ್ಸುಗಳಿಂದೆಯು, ಕಿಂ=ಏನು? ಯಸ್ಯ=ಆವಾತಂಗೆ, ಲಿಂಗಾರ್ಚನಾರತಿಃ=ಕ್ರಿಯಾಲಿಂಗಪೂಜಾಕ್ರಿಯೆಯಲ್ಲಿಯ ಪ್ರೀತಿಯುಂಟು, ಸಃ=ಆತನು, ಸರ್ವಕರ್ಮಸು ವಿಷಯೇ=ಸಮಸ್ತಕರ್ಮಂಗಳ ವಿಷಯವಾಗಿ, ಸಿದ್ಧಃ=ಸಿದ್ಧಿಯುಳ್ಳ ಆತನು. ||೩೫||

**ಸೂತ್ರ||** ಬಳಿಕ ಕ್ರಿಯಾಲಿಂಗಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ|| **ಬ್ರಹ್ಮವಿಷ್ಣ್ವಾದಯಸ್ಸರ್ವೇ ವಿಬುಧಾ ಲಿಂಗಮಾಶ್ರಿತಾಃ ।**
**ಸಿದ್ಧಾಃ ಸ್ವಸ್ವಪದೇ ಭಾಂತಿ ಜಗತ್ತಂತ್ರಾಧಿಕಾರಿಣಃ ॥**

**ಟೀಕು||** ಬ್ರಹ್ಮವಿಷ್ಣ್ವಾದಯಃ=ಬ್ರಹ್ಮವಿಷ್ಣು ಮೊದಲಾಗುಳ್ಳ, ಸರ್ವೇ ವಿಬುಧಾಃ=ಸಮಸ್ತ ದೇವತೆಗಳು, ಸಿದ್ಧಾಃ=ಸಿದ್ಧರುಗಳು, ಲಿಂಗಂ=ಕ್ರಿಯಾಲಿಂಗವನು, ಆಶ್ರಿತಾಃ ಸಂತಃ=ಆಶ್ರಯಿಸುತ್ತಿರ್ದ್ದಪರಾಗುತವು, ಸ್ವಸ್ವಪದೇ=ತಮ್ಮ ತಮ್ಮ ಪದದಲ್ಲಿ, ಜಗತ್ತಂತ್ರಾಧಿಕಾರಿಣಃ=ಜಗನ್ನಿರ್ಮಾಣಾದಿತಂತ್ರಾಧಿಕಾರಣವುಳ್ಳವರಾಗಿ, ಭಾಂತಿ=ಒಪ್ಪುತ್ತಿರ್ದ್ದಪರು. ||೩೬||

**ಇತಿ ಕ್ರಿಯಾಲಿಂಗಸ್ಥಲಮ್**

# ೫. ಭಕ್ತಸ್ಥಲೇ ಭಾವಲಿಂಗಸ್ಥಲಮ್

**ಸೂತ್ರ॥** ಬಳಿಕ "ಭಾವಗ್ರಾಹ್ಯಮನೀಡಾಖ್ಯಂ ಭಾವಾಭಾವಕರಂ ಪರಮ್।
ಕಲ್ಪಸರ್ಗಕರಂ ದೇವಂ ಯೇ ವಿದುಸ್ತೇ ಜಹುಸ್ತನುಮ್"॥ ಯೆಂಬ ಶ್ವೇತಾಶ್ವತರ ಶ್ರುತ್ಯರ್ಥವನು, "ನಿಷ್ಕಲಂ ಭಾವಲಿಂಗಂ ಸ್ಯಾತ್ ಭಾವಗ್ರಾಹ್ಯಂ ಪರಾತ್ಪರಮ್" ಯೆಂಬ ವಾತುಲ ತಂತ್ರಾರ್ಥವನು ಪ್ರಕಟಿಸುತ್ತ ಕ್ರಿಯೋಪಾದಿಯಲ್ಲಿ ಭಾವವು ಆವೆಡೆಯಲ್ಲಿ ಲಯಿಸುತ್ತಿರ್ದ್ದಪುದು ಅದು ಭಾವಲಯಕ್ಕೆ ಕಾರಣವಾದ ಪ್ರಾಣಲಿಂಗವೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** **ಕ್ರಿಯಾ ಯಥಾ ಲಯಂ ಪ್ರಾಪ್ತೌ ತಥಾ ಭಾವೋಽಪಿ ಲೀಯತೇ ।**
**ಯತ್ರ ತದ್ದೇಶಿಕೈರುಕ್ತಂ ಭಾವಲಿಂಗಮಿತಿ ಸ್ಫುಟಮ್ ॥**

**ಟೀಕು॥** ಕ್ರಿಯಾ=ಕ್ರೀಯು, ಯಥಾ=ಹೇಗೆ ಲಯಂ=ಲಯವನು, ಪ್ರಾಪ್ತೌ=ಎಯ್ದಿತ್ತು, ತಥಾ=ಹಾಗೆಯೇ, ಭಾವೋಽಪಿ=ಭಾವವಾಯಿತ್ತಾದೊಡೆ, ಯತ್ರ=ಆವೆಡೆಯಲ್ಲಿ, ಲೀಯತೇ=ಅಡಗುತ್ತಿರ್ದ್ದಪುದು. ತತ್=ಅದು, ಭಾವಲಿಂಗಮಿತಿ=ಭಾವಲಯಕ್ಕೆ ಕಾರಣವಾದ ಪ್ರಾಣಲಿಂಗವೆಂದು, ಸ್ಫುಟಂ=ಸ್ಪಷ್ಟವಾಗಿ, ದೇಶಿಕೈಃ=ಆಚಾರ್ಯರಿಂದೆ, ಉಕ್ತಂ=ಹೇಳಲುಪಟ್ಟಿತ್ತು. **॥೩೭॥**

**ಸೂತ್ರ॥** ಬಳಿಕ ಭಾವಲಿಂಗವನು ಸೂತ್ರತ್ರಯದಿಂದೆ ವಿಶೇಷಿಸುತ್ತಿರ್ದ್ದಪನು.

**ಗ್ರಂಥ॥** **ಭಾವೇನ ಗೃಹ್ಯತೇ ದೇವೋ ಭಗವಾನ್ಪರಮಃ ಶಿವಃ ।**
**ಕಿಂ ತೇನ ಕ್ರಿಯತೇ ತಸ್ಯ ನಿತ್ಯಪೂರ್ಣೋ ಹಿ ಸಂಸ್ಮೃತಃ ॥**

**ಟೀಕು॥** ಭಗವಾನ್=ಷಡ್ಗುಣೈಶ್ವರ್ಯಸಂಪನ್ನನಾಗಿ, ದೇವಃ=ಸಚ್ಚಿದಾನಂದರೂಪಿನಿಂದೆ ಕ್ರೀಡಾಶೀಲನಾದ, ಪರಮಃ ಶಿವಃ=ಪರಮ ಶಿವನು, ಭಾವೇನ=ಮನೋಭಾವದಿಂದೆ, ಗೃಹ್ಯತೇ= ಗ್ರಹಿಸಲುಪಡುತ್ತಿರ್ದ್ದಪನು. ತಸ್ಯ=ಆ ಪರಶಿವನಿಗೆ, ತೇನ=ಆ ಭಾವದಿಂದೆ, ಕಿಂ ಕ್ರಿಯತೇ=ಏನು ಮಾಡಲುಪಡುತ್ತಿರ್ದ್ದಪುದು? ಏನು ಪ್ರಯೋಜನವು ಮಾಡಲುಪಡಲಿಲ್ಲವೆಂಬುದರ್ಥ. ಸಃ=ಆ ಪರಶಿವನು, ನಿತ್ಯಪೂರ್ಣಃ=ನಿತ್ಯಪರಿಪೂರ್ಣತೆಯುಳ್ಳಾತನೆಂದು, ಸಂಸ್ಮೃತಃ=ನೆನೆಯಲುಪಟ್ಟನು. ಹಿ=ಪ್ರಸಿದ್ಧವು. **॥೩೮॥**

**ತಾತ್ಪರ್ಯ॥** ನಿತ್ಯಪರಿಪೂರ್ಣತೆಯೆ ಭಾವಗ್ರಾಹ್ಯಕ್ಕೆ ಕಾರಣವೆಂಬುದರ್ಥ.

**ಗ್ರಂಥ॥** **ಅಖಂಡಪರಮಾನಂದಬೋಧರೂಪಃ ಪರಶ್ಶಿವಃ ।**
**ಭಕ್ತಾನಾಮುಪಚಾರೇಣ ಭಾವಯೋಗಾತ್ಪ್ರಸೀದತಿ ॥**

**ಟೀಕು॥** ಅಖಂಡಪರಮಾನಂದಬೋಧರೂಪಃ=ಖಂಡಿತವಲ್ಲದೆಯಿರ್ದ್ದ ಪರಮಾನಂದ ಜ್ಞಾನವೆ ಸ್ವರೂಪವಾಗುಳ್ಳ, ಪರಃ ಶಿವಃ=ಪರಮಶಿವನು, ಭಕ್ತಾನಾಂ=ಶಿವಭಕ್ತರ, ಉಪಚಾರೇಣ= ಭಕ್ತ್ಯುಪಚಾರದಿಂದೆ, ಭಾವಯೋಗಾತ್=ಭಾವಯೋಗದದೆಸೆಯಿಂದೆಯು, ಪ್ರಸೀದತಿ=ಪ್ರಸನ್ನನಾಗು ತ್ತಿರ್ದ್ದಪನು. ॥೩೯॥

**ಗ್ರಂಥ॥** **ಮೃಚ್ಛಿಲಾವಿಹಿತಾಲ್ಲಿಂಗಾದ್ಭಾವಲಿಂಗಂ ವಿಶಿಷ್ಯತೇ ।**
**ನಿರಸ್ತಸರ್ವದೋಷತ್ವಾದ್ ಜ್ಞಾನಮಾರ್ಗಪ್ರವೇಶನಾತ್ ॥**

**ಟೀಕು॥** ಮೃಚ್ಛಿಲಾವಿಹಿತಾತ್=ಮೃತ್ತಿಕೆ ಶಿಲೆಯಿಂದೆ ಮಾಡಲುಪಟ್ಟ, ಲಿಂಗಾತ್=ಲಿಂಗದ ದೆಸೆಯಿಂದೆ, ಭಾವಲಿಂಗಂ=ಭಾವಲಯಕ್ಕೆ ಕಾರಣವಾದ ಪ್ರಾಣಲಿಂಗವು, ನಿರಸ್ತಸರ್ವದೋಷತ್ವಾತ್= ತೊಲಗಿಸಲುಪಟ್ಟ ಸಮಸ್ತ ದೋಷವುಳ್ಳದಾದ ಕಾರಣವಾಗಿ, ಜ್ಞಾನಮಾರ್ಗಪ್ರವೇಶನಾತ್=ಜ್ಞಾನ ಮಾರ್ಗವನು ಪ್ರವೇಶಿಸುವುದಾದಕಾರಣವಾಗಿ, ವಿಶಿಷ್ಯತೇ=ವಿಶೇಷಿಸಲುಪಡುತ್ತಿರ್ದ್ದಪುದು. ॥೪೦॥

**ಸೂತ್ರ॥** ಬಳಿಕ ಭಾವಲಿಂಗವುಳ್ಳಾತನನು ಹೇಳುತ್ತಿರ್ದ್ದಪಂ.

**ಗ್ರಂಥ॥** **ವಿಹಾಯ ಬಾಹ್ಯಲಿಂಗಾನಿ ಚಿಲ್ಲಿಂಗಂ ಮನಸಿ ಸ್ಮರನ್ ।**
**ಪೂಜಯೇದ್ಭಾವಪುಷ್ಪೈರ್ಯೋ ಭಾವಲಿಂಗೀತಿ ಕಥ್ಯತೇ ॥**

**ಟೀಕು॥** ಯಃ=ಆವನಾನೊಬ್ಬಾತನು, ಬಾಹ್ಯಲಿಂಗಾನಿ=ಮೃಚ್ಛಿಲಾದಿ ನಿರ್ಮಿತವಾದ ಬಾಹ್ಯ ಲಿಂಗಂಗಳನು, ವಿಹಾಯ=ಬಿಟ್ಟು, ಚಿಲ್ಲಿಂಗಂ="ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ" ಯೆಂದು ಅಥರ್ವಶ್ರುತಿಸಿದ್ಧವಾದ ಪ್ರಾಣಲಿಂಗವನು, ಮನಸಿ=ಹೃದಯದಲ್ಲಿ, ಸ್ಮರನ್ ಸನ್=ನೆನೆವುತ್ತಿರ್ದ್ದಾ ತನಾಗುತವು, ಭಾವಪುಷ್ಪೈಃ=ಭಾವಕಲ್ಪಿತವಾದ ಅಹಿಂಸಾದ್ಯಷ್ಟಪುಷ್ಪಂಗಳಿಂದೆ, ಪೂಜಯೇತ್= ಪೂಜಿಸುವನು. ಸಃ=ಆತನು, ಭಾವಲಿಂಗೀತಿ=ಭಾವಗೋಚರವಾದ ಪ್ರಾಣಲಿಂಗವುಳ್ಳಾತನೆಂದು, ಕಥ್ಯತೇ=ಹೇಳಲುಪಡುತ್ತಿರ್ದ್ದಪನು. ॥೪೧॥

**ಸೂತ್ರ॥** ಬಳಿಕ ಆ ಪ್ರಾಣಲಿಂಗಪೂಜಕನೆ ಶಿವಯೋಗಿಯೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** **ಮೂಲಾಧಾರೇಽಥವಾ ಚಿತ್ತೇ ಭ್ರೂಮಧ್ಯೇ ವಾ ಸುನಿರ್ಮಲಮ್ ।**
**ದೀಪಾಕಾರಂ ಯಜನ್ ಲಿಂಗಂ ಭಾವದ್ರವ್ಯೈರ್ಸ ಯೋಗವಾನ್ ॥**

**ಟೀಕು॥** ಮೂಲಾಧಾರೇ=ಮೂಲಾಧಾರಸಂಜ್ಞೆಯುಳ್ಳ ಪೂರ್ವಹೃದಯದಲ್ಲಿಯಾದರು, ಚಿತ್ತೇ= "ಚಿತ್ತಂ ತು ಚೇತೋ ಹೃದಯಂ" ಯೆಂದು ಚಿತ್ತಸಂಜ್ಞೆಯುಳ್ಳ ಮಧ್ಯಹೃದಯದಲ್ಲಿಯಾದರು, ಭ್ರೂಮಧ್ಯೇ

ವಾ=ಭ್ರೂಮಧ್ಯ ಸಂಜ್ಞೆಯುಳ್ಳ ಊರ್ಧ್ವ ಹೃದಯದಲ್ಲಿಯಾದರು, ದೀಪಾಕಾರಂ= "ಹೃದಯಕಮಲಮಧ್ಯೇ ದೀಪವದ್ವೇದಸಾರಂ ಪ್ರಣವಮಯಮತರ್ಕ್ಯಂ ಯೋಗಿಭಿರ್ಧ್ಯಾನಗಮ್ಯಮ್" ಯೆಂದು ಯೋಗಶಾಸ್ತ್ರ ಪ್ರಸಿದ್ಧವಾದ ದೀಪೋಪಮಾನವುಳ್ಳ, ಸುನಿರ್ಮಲಂ ಲಿಂಗಂ=ಅತ್ಯಂತ ನಿರ್ಮಲವಾದ ಪ್ರಾಣಲಿಂಗವನು, ಭಾವದ್ರವ್ಯೈಃ=ಭಾವವಸ್ತುಗಳಿಂದವೆ, ಯಃ=ಆವಾತನು, ಯಜನ್= ಪೂಜಿಸುವವನು, ಸಃ=ಆತನು, ಯೋಗವಾನ್=ಶಿವಯೋಗವುಳ್ಳಾತನು. ॥೪೨॥

**ಸೂತ್ರ॥** ಬಳಿಕ ಭಾವಪೂಜೆಯನು ವಿಶೇಷಿಸಿ ಶಿವಯೋಗೀಶ್ವರನು ಕ್ರಿಯಾಲಿಂಗದಲ್ಲಿ ತತ್ಪರನಲ್ಲವೆಂದು ಹೇಳುತ್ತಿರ್ದಪಂ.

**ಗ್ರಂಥ॥** **ಸ್ವಾನುಭೂತಿಪ್ರಮಾಣೇನ ಜ್ಯೋತಿರ್ಲಿಂಗೇನ ಸಂಯುತಃ ।**
**ಶಿಲಾಮೃದ್ದಾರುಸಂಭೂತಂ ನ ಲಿಂಗಂ ಪೂಜಯತ್ಯಸೌ ॥**

**ಟೀಕು॥** ಅಸೌ=ಈ ಶಿವಯೋಗೀಶ್ವರನು, ಸ್ವಾನುಭೂತಿಪ್ರಮಾಣೇನ=ತನ್ನ ಅನುಭವ ಪ್ರಮಾಣಿನಿಂದೆ, ಜ್ಯೋತಿರ್ಲಿಂಗೇನ=ಜ್ಯೋತಿರ್ಮಯವಾದ ಪ್ರಾಣಲಿಂಗದೊಡನೆ, ಸಂಯುತಃ ಸನ್=ಕೂಡಿದ್ದಾತನಾಗುತವು, ಶಿಲಾಮೃದ್ಧಾರುಸಂಭೂತಂ=ಪಾಷಾಣಮೃತ್ತಿಕೆಮರಗಳಿಂದೆ ಮಾಡಿದ, ಲಿಂಗಂ= ಕ್ರಿಯಾಲಿಂಗವನು, ನ ಪೂಜಯತಿ=ಪೂಜಿಸುತ್ತಿರನು. ॥೪೩॥

**ಸೂತ್ರ॥** ಬಳಿಕ ಭಾವಸಿದ್ಧವಾದ ಆ ಜ್ಯೋತಿರ್ಲಿಂಗ ಪೂಜೆಯನೆ ವಿಶೇಷಿಸಿ, ಭಾವಲಿಂಗ ಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ॥** **ಕ್ರಿಯಾರೂಪಾ ತು ಯಾ ಪೂಜಾ ಸಾ ಜ್ಞೇಯಾ ಸ್ವಲ್ಪಸಂವಿದಾಮ್ ।**
**ಅಂತರಾ ಭಾವಪೂಜಾ ತು ಶಿವಸ್ಯ ಜ್ಞಾನಿನಾಂ ಮತಾ ॥**

**ಟೀಕು॥** ಶಿವಸ್ಯ=ಶಿವಲಿಂಗದ, ಕ್ರಿಯಾರೂಪಾ ತು ಯಾ ಪೂಜಾ=ಕರ್ಮಕಾಂಡಪ್ರಸಿದ್ಧವಾದ ಕ್ರೀ ಸ್ವರೂಪವಾಗುಳ್ಳ ಆವುದಾನೊಂದು ಪೂಜೆಯುಂಟು, ಸಾ=ಆ ಪೂಜೆಯು, ಸ್ವಲ್ಪ ಸಂವಿದಾಮ್=ಅಲ್ಪಜ್ಞಾನಿಗಳಿಗೆ, ಮತಾ=ಸಂಮತವಾಗಿ, ಜ್ಞೇಯಾ=ಅರಿಯಲು ಯೋಗ್ಯವು; ಅಂತರಾ ಭಾವಪೂಜಾ ತು=ಜ್ಞಾನಕಾಂಡಪ್ರಸಿದ್ಧವಾದ ಅಂತಃಪೂಜೆಯಾಯಿತ್ತಾದೊಡೆ, ಜ್ಞಾನಿನಾಂ=ಪರಿಪೂರ್ಣವಾದ ಶಿವಜ್ಞಾನಿಗಳಿಗೆ, ಮತಾ=ಸಂಮತವು. ॥೪೪॥

**ಇತಿ ಭಾವಲಿಂಗಸ್ಥಲಮ್**

## ೬. ಭಕ್ತಸ್ಥಲೇ ಜ್ಞಾನಲಿಂಗಸ್ಥಲಮ್

**ಸೂತ್ರ॥** ಬಳಿಕ "ಅಚಿಂತ್ಯಂ ಚಾಪ್ರಮೇಯಂ ಚ ವ್ಯಕ್ತಾವ್ಯಕ್ತಂ ಪರಂ ಚ ಯತ್।
ಸೂಕ್ಷ್ಮಾತ್ಸೂಕ್ಷ್ಮತರಂ ಜ್ಞಾನಂ ತನ್ಮೇ ಮನಶ್ಶಿವಸಂಕಲ್ಪಮಸ್ತು" ॥
ಯೆಂಬ ಶಿವಸಂಕಲ್ಪೋಪನಿಷದರ್ಥವನು,
"ಪರಾತ್ಪರಂ ತು ಯತ್ಪ್ರೋಕ್ತಂ ತೃಪ್ತಿಲಿಂಗಂ ತದುಚ್ಯತೇ।
ಭಾವನಾತೀತಮವ್ಯಕ್ತಂ ಪರಂ ಬ್ರಹ್ಮ ಶಿವಾಭಿಧಮ್"॥ ಯೆಂಬ ವಾತುಲೋತ್ತರಾರ್ಥವನು ಪ್ರಕಟಿಸುತ್ತ ಆ ಭಾವಲಿಂಗವನು ಅರುಹಿಸುವ ಜ್ಞಾನವು ಆವೆಡೆಯಲ್ಲಿ ಲಯಿಸುವದು ಅದು ಜ್ಞಾನಲಿಂಗಸ್ಥಲವೆಂದು ಸಪ್ತಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ತದ್ಭಾವಜ್ಞಾಪಕಜ್ಞಾನಂ ಲಯಂ ಯತ್ರ ಸಮಶ್ನುತೇ ।**
**ತದ್ ಜ್ಞಾನಲಿಂಗಮಾಖ್ಯಾತಂ ಶಿವತತ್ತ್ವಾರ್ಥಕೋವಿದೈಃ ॥**

**ಟೀಕು॥** ತದ್ಭಾವಜ್ಞಾಪಕಜ್ಞಾನಂ=ಆ ಭಾವಲಿಂಗವನು ಅರುಹಿಸುವ ಜ್ಞಾನವು, ಯತ್ರ= ಆವೆಡೆಯಲ್ಲಿ, ಲಯಂ=ಲಯವನು, ಸಮಶ್ನುತೇ=ಎಯ್ದುತ್ತಿರ್ದಪುದು, ತತ್=ಅದು ಜ್ಞಾನಲಿಂಗಂ= ಜ್ಞಾನಲಿಂಗಕ್ಕಾಶ್ರಯವಾದ ತೃಪ್ತಿಲಿಂಗವೆಂದು, ಶಿವತತ್ತ್ವಾರ್ಥಕೋವಿದೈಃ=ಶಿವತತ್ತ್ವ ರಹಸ್ಯಾರ್ಥವನು ಬಲ್ಲ ವೀರಶೈವರಿಂದೆ, ಆಖ್ಯಾತಂ=ಹೇಳಲುಪಟ್ಟಿತ್ತು. ॥೪೫॥

**ಗ್ರಂಥ॥** **ತ್ರಿಮೂರ್ತಿಭೇದನಿರ್ಮುಕ್ತಂ ತ್ರಿಗುಣಾತೀತವೈಭವಮ್**
**ಬ್ರಹ್ಮಯದ್ಬೋಧ್ಯತೇ ತತ್ತು ಜ್ಞಾನಲಿಂಗಮುದಾಹೃತಮ್**

**ಟೀಕು॥** ತ್ರಿಮೂರ್ತಿಭೇದನಿರ್ಮುಕ್ತಂ=ಬ್ರಹ್ಮವಿಷ್ಣುರುದ್ರರೂಪವಾದ ತ್ರಿಮೂರ್ತಿಭೇದಂಗಳಿಂದೆ ಬಿಡಲುಪಟ್ಟ, ತ್ರಿಗುಣಾತೀತವೈಭವಂ=ಸತ್ವರಜಸ್ತಮೋಗುಣರೂಪವಾದ ಗುಣತ್ರಯವನು ಮೀರಿವರ್ತಿಸುತ್ತಿರ್ದ ಸಂಪತ್ತಿಯುಳ್ಳ, ಯತ್=ಆವುದಾನೊಂದು ಪರಬ್ರಹ್ಮವು, ಬೋಧ್ಯತೇ=ಶ್ರುತಿ ಗುರುಸ್ವಾನುಭವಂಗಳಿಂದೆ ಬೋಧಿಸಲುಪಡುತ್ತಿರ್ದಪುದು. ತತ್ತು=ಅದಾಯಿತ್ತಾದೊಡೆ, ಜ್ಞಾನಲಿಂಗಂ= ಜ್ಞಾನಕ್ಕಾಶ್ರಯವಾದ ತೃಪ್ತಿಲಿಂಗವೆಂದು, ಉದಾಹೃತಂ=ಹೇಳಲುಪಟ್ಟಿತ್ತು. ॥೪೬॥

**ಸೂತ್ರ॥** ಬಳಿಕ ಆ ಜ್ಞಾನಲಿಂಗವನು ಸೂತ್ರದ್ವಯದಿಂದೆ ವಿಶೇಷಿಸುತ್ತಿರ್ದಪಂ.

**ಗ್ರಂಥ॥** **ಸ್ಥೂಲೇ ಕ್ರಿಯಾಸಮಾಪತ್ತಿಸ್ಸೂಕ್ಷ್ಮೇ ಭಾವಸ್ಯ ಸಂಭವಃ ।**
**ಸ್ಥೂಲಸೂಕ್ಷ್ಮಪದಾತೀತೇ ಜ್ಞಾನಮೇವ ಪರಾತ್ಮನಿ ॥**

ಟೀಕು॥ ಸ್ಥೂಲೇ=ಸ್ಥೂಲವಾದ ಇಷ್ಟಲಿಂಗದಲ್ಲಿ, ಕ್ರಿಯಾಸಮಾಪತ್ತಿಃ=ಕ್ರಿಯಾರೂಪವಾದ ಪೂಜೆಯು, ಸೂಕ್ಷ್ಮೇ=ಸೂಕ್ಷ್ಮವಾದ ಪ್ರಾಣಲಿಂಗದಲ್ಲಿ, ಭಾವಸ್ಯಸಂಭವಃ=ನಿರ್ಮಲವಾದ ಭಾವದ ಉದ್ಭವವು, ಸ್ಥೂಲಸೂಕ್ಷ್ಮಪದಾತೀತೇ=ಸ್ಥೂಲಸೂಕ್ಷ್ಮಪದವನು ಮೀರಿರ್ದ್ದ, ಪರಾತ್ಮನಿ=ತೃಪ್ತಿಲಿಂಗ ರೂಪವಾದ ಪರಮಾತ್ಮನಲ್ಲಿ, ಜ್ಞಾನಮೇವ=ಜ್ಞಾನವೆ ಉತ್ಕೃಷ್ಠವಾದುದೆಂದು ತಿಳಿವುದು. ॥೪೭॥

**ಗ್ರಂಥ॥ ಕಲ್ಪಿತಾನಿ ಹಿ ರೂಪಾಣಿ ಸ್ಥೂಲಾನಿ ಪರಮಾತ್ಮನಃ ।**
**ಸೂಕ್ಷ್ಮಾಣ್ಯಪಿ ಚ ತೈಃ ಕಿಂ ವಾ ಪರಂ ಬೋಧಂ ಸಮಾಚರೇತ್ ॥**

**ಟೀಕು॥** ಪರಮಾತ್ಮನಃ=ಪರಬ್ರಹ್ಮಕ್ಕೆ, ಸ್ಥೂಲಾನಿ ರೂಪಾಣಿ=ಸ್ಥೂಲರೂಪುಗಳು, ಸೂಕ್ಷ್ಮಾಣಿ ರೂಪಾಣ್ಯಪಿ ಚ=ಸೂಕ್ಷ್ಮರೂಪುಗಳಾಯಿತ್ತಾದೊಡೆಯು, ಕಲ್ಪಿತಾನಿ=ಕಲ್ಪಿತಂಗಳಾಗಿರ್ದ್ದ ಅವು, ತೈಃ=ಆ ರೂಪುಗಳಿಂದೆ, ಕಿಂ ವಾ=ಏನು ಪ್ರಯೋಜನವು? ಏನೂ ಪ್ರಯೋಜನವಿಲ್ಲವೆಂಬುದರ್ಥ. ಅತಃ= ಅದು ಕಾರಣವಾಗಿ, ಪರಂ ಬೋಧಂ=ಪರಜ್ಞಾನರೂಪವಾದ ತೃಪ್ತಿಲಿಂಗವನೆ, ಸಮಾಚರೇತ್= ಆಚರಿಸುವುದು. ॥೪೮॥

**ಸೂತ್ರ॥** ಬಳಿಕ ಪರಜ್ಞಾನವನರಿದಾತನೆ ಜ್ಞಾನಲಿಂಗಿಯೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥ ಪರಾತ್ಪರಂ ತು ಯದ್ಬ್ರಹ್ಮ ಪರಮಾನಂದಲಕ್ಷಣಮ್ ।**
**ಶಿವಾಖ್ಯಂ ಜ್ಞಾಯತೇ ಯೇನ ಜ್ಞಾನಲಿಂಗೀತಿ ಕಥ್ಯತೇ ॥**

**ಟೀಕು॥** ಪರಾತ್ಪರಂ=ಪರಕ್ಕೆ ಪರವಾಗಿರ್ದ್ದ, ಪರಮಾನಂದ ಲಕ್ಷಣಂ=ಪರಮಾನಂದವೆ ಸ್ವರೂಪವಾಗುಳ್ಳ, ಶಿವಾಖ್ಯಂ=ಪರಮಶಿವನೆಂಬ ಹೆಸರುಳ್ಳ, ಯತ್‌ಬ್ರಹ್ಮ=ಆವುದಾನೊಂದು ಪರಬ್ರಹ್ಮವು, ಯೇನ=ಯಾವಾತನಿಂದೆ, ಜ್ಞಾಯತೇ=ಅರಿಯಲುಪಡುತ್ತಿರ್ದ್ದಪುದು, ಸಃ=ಆತನು, ಜ್ಞಾನಲಿಂಗೀತಿ=ಜ್ಞಾನಲಿಂಗಿಯೆಂದು, ಕಥ್ಯತೇ=ಹೇಳಲುಪಡುತ್ತಿರ್ದ್ದಪನು. ॥೪೯॥

**ಸೂತ್ರ॥** ಬಳಿಕ ಆ ಜ್ಞಾನಲಿಂಗಿಯೆ ಪರಮುಕ್ತನೆಂದು ಹೇಳಿ ಜ್ಞಾನಲಿಂಗಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ॥ ಬಾಹ್ಯಕ್ರಿಯಾಂ ಪರಿತ್ಯಜ್ಯ ಚಿಂತಾಮಪಿ ಚ ಮಾನಸೀಮ್ ।**
**ಅಖಂಡಜ್ಞಾನರೂಪತ್ವಂ ಯೋ ಭಜೇನ್ಮುಕ್ತ ಏವ ಸಃ ॥**

**ಟೀಕು॥** ಯಃ=ಆವನಾನೊಬ್ಬನು, ಬಾಹ್ಯಕ್ರಿಯಾಂ=ಇಷ್ಟಲಿಂಗಸಂಬಂಧವಾದ ಬಾಹ್ಯಪೂಜೆಕ್ರೀಯನು, ಪರಿತ್ಯಜ್ಯ=ಬಿಟ್ಟು, ಮಾನಸೀಂಚಿಂತಾಂ ಅಪಿ ಚ=ಪ್ರಾಣಲಿಂಗ ಸಂಬಂಧವಾದ ಧ್ಯಾನರೂಪವಾದ ಅಂತಃಪೂಜೆಯನಾಯಿತ್ತಾದೊಡೆಯು, ಪರಿತ್ಯಜ್ಯ=ಬಿಟ್ಟು, ಅಖಂಡಜ್ಞಾನರೂಪತ್ವಂ=ಖಂಡಿತವಿಲ್ಲದ

ಜ್ಞಾನವೆ ಸ್ವರೂಪವಾದ ತೃಪ್ತಿಲಿಂಗವನು, ಭಜೇತ್=ಸೇವಿಸುವನು. ಸಃ=ಆತನು, ಮುಕ್ತ ಏವ=ಪರಮುಕ್ತನೆ. ||೫೦||

ಇತಿ ಜ್ಞಾನಲಿಂಗಸ್ಥಲಮ್

## ೭. ಭಕ್ತಸ್ಥಲೇ ಸ್ವಯಂಸ್ಥಲಮ್

**ಸೂತ್ರ||** ಬಳಿಕ "ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ।
ಸ ಉತ್ತಮಃ ಪುರುಷಃ ತತ್ರ ಪರ್ಯೇತಿ।" ಯೆಂಬ ಛಾಂದೋಗ್ಯ
ಶ್ರುತ್ಯರ್ಥವನು,
ಪ್ರಾಣಲಿಂಗಪರಿಜ್ಞಾನಾನಂದಸ್ಸ ಶಿವಲಾಂಛನಃ।
ಬಾಹ್ಯಕರ್ಮಪರಿತ್ಯಾಗೀ ಸ ಸ್ವಯಂ ಲಿಂಗಮುಚ್ಯತೇ॥" ಯೆಂಬ ವಾತುಲೋತ್ತರಾರ್ಥವನು ಪ್ರಕಟಿಸುತ್ತ ಭಾವವನರುಹಿಸುವ ಜ್ಞಾನ, ಆ ಜ್ಞಾನದಲ್ಲಿ ಲಯಿಸುವುದು. ಆ ಜ್ಞಾನವುಳ್ಳಾತನೀಗ ಸ್ವಯಸ್ಥಲಸಂಪನ್ನನೆಂದು ಹೇಳುತ್ತಿರ್ದಪಂ.

**ಗ್ರಂಥ||** **ತದ್ಭಾವಜ್ಞಾಪಕಜ್ಞಾನಂ ಯತ್ರ ಜ್ಞಾನೇ ಲಯಂ ವ್ರಜೇತ್ ।**
**ತದ್ವಾನೇಷ ಸಮಾಖ್ಯಾತಃ ಸ್ವಾಭಿಧಾನೋ ಮನೀಷಿಭಿಃ ॥**

**ಟೀಕು||** ತದ್ಭಾವಜ್ಞಾಪಕಜ್ಞಾನಂ=ಆ ಭಾವವನರುಹಿಸುವ ಜ್ಞಾನವು, ಯತ್ರಜ್ಞಾನೇ=ಆ ಶಿವ ಜ್ಞಾನದಲ್ಲಿ, ಲಯಂ=ಲಯವನು, ವ್ರಜೇತ್=ಎಯ್ದುವುದು. ತದ್ವಾನ್=ಆ ಜ್ಞಾನವುಳ್ಳ, ಏಷಃ=ಈ ಜ್ಞಾನಲಿಂಗಿಯೆ, ಸ್ವಾಭಿಧಾನಃ=ಸ್ವಯಲಿಂಗವೆಂಬ ಹೆಸರುಳ್ಳಾತನಾಗಿ, ಮನೀಷಿಭಿಃ=ಜ್ಞಾನಿಗಳಿಂದೆ, ಸಮಾಖ್ಯಾತಃ= ಹೇಳಲುಪಟ್ಟನು. ||೫೧||

**ಸೂತ್ರ||** ಬಳಿಕ ಆ ಸ್ವಯಸಂಪನ್ನನಾದ ಜ್ಞಾನಲಿಂಗಿಯಾಚಾರವನು, ಚತುಸ್ಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಸ್ವಚ್ಛಂದಾಚಾರಸಂತುಷ್ಟೋ ಜ್ಯೋತಿರ್ಲಿಂಗಪರಾಯಣಃ ।**
**ಆತ್ಮಸ್ಥಸಕಲಾಕಾರಃ ಸ್ವಾಭಿಧೋ ಮುನಿಸತ್ತಮಃ ॥**

**ಟೀಕು||** ಸ್ವಚ್ಛಂದಾಚಾರಸಂತುಷ್ಟಃ=ಸ್ವೇಚ್ಛಾಚಾರದಿಂದೆ ಸಂತುಷ್ಟನಾಗಿರ್ದ, ಜ್ಯೋತಿರ್ಲಿಂಗ ಪರಾಯಣಃ=ಸ್ವಯಂ ಜ್ಯೋತಿರ್ಲಿಂಗದಲ್ಲಿ ತತ್ಪರನಾಗಿರ್ದ, ಆತ್ಮಸ್ಥಸಕಲಾಕಾರಃ=ಪರಮಾತ್ಮರೂಪಿನಲ್ಲಿಯಿರುತ್ತಿರ್ದ ಸಕಲಾಕಾರವುಳ್ಳ, ಮುನಿಸತ್ತಮಃ=ಎಲೆ ಮುನಿಶ್ರೇಷ್ಠನೆ, ಸ್ವಾಭಿಧಃ=ಸ್ವಯಲಿಂಗವೆಂಬ ಹೆಸರುಳ್ಳ ಆತನು. ||೫೧||

**ಗ್ರಂಥ||** **ನಿರ್ಮಮೋ ನಿರಹಂಕಾರೋ ನಿರಸ್ತಕ್ಲೇಶಪಂಚಕಃ |**
**ಭಿಕ್ಷಾಶೀ ಸಮಬುದ್ಧಿಶ್ಚ ಮುಕ್ತಪ್ರಾಯೋ ಮುನಿರ್ಭವೇತ್ ||**

**ಗ್ರಂಥ||** ನಿರ್ಮಮಃ=ತೊಲಗಲುಪಟ್ಟ ಮಮತ್ವವುಳ್ಳ, ನಿರಹಂಕಾರಃ=ತೊಲಗಲುಪಟ್ಟ ಅಹಂಕಾರವುಳ್ಳ, ನಿರಸ್ತಕ್ಲೇಶಪಂಚಕಃ=ನಿರಾಕರಿಸಲುಪಟ್ಟ ಅವಿದ್ಯಾದಿ ಪಂಚಕ್ಲೇಶಂಗಳುಳ್ಳ, ಭಿಕ್ಷಾಶೀ= ಭಿಕ್ಷಾಹಾರವುಳ್ಳ, ಸಮಬುದ್ಧಿಶ್ಚ=ಸರ್ವರಲ್ಲಿಯು ಸಮಾನವಾದ ಬುದ್ಧಿಯುಳ್ಳ, ಮುನಿಃ=ಸ್ವಯಲಿಂಗ ಸಂಜ್ಞೆಯುಳ್ಳ ಯತೀಶ್ವರನು, ಮುಕ್ತಪ್ರಾಯಃ=ಪರಮುಕ್ತರಿಗೆ ಸದೃಶವಾದಾತನು, ಭವೇತ್=ಅಹನು. ||೫೩||

**ಗ್ರಂಥ||** **ಯದೃಚ್ಛಾಲಾಭಸಂತುಷ್ಟೋ ಭಸ್ಮನಿಷ್ಠೋ ಜಿತೇಂದ್ರಿಯಃ |**
**ಸಮವೃತ್ತಿರ್ಭವೇದ್ಯೋಗೀ ಭಿಕ್ಷುಕೇ ವಾ ನೃಪೇಽಥವಾ ||**

**ಟೀಕು||** ಯದೃಚ್ಛಾಲಾಭಸಂತುಷ್ಟಃ=ಯಥಾಲಾಭಸಂತುಷ್ಟನಾಗಿದ್ದ, ಭಸ್ಮನಿಷ್ಠಃ=ಭಸ್ಮಧೂಳನಾದಿಗಳಲ್ಲಿ ನಿಷ್ಠೆಯುಳ್ಳ, ಜಿತೇಂದ್ರಿಯಃ=ಜಿತೇಂದ್ರಿಯನಾಗಿರ್ದ್ದ, ಯೋಗೀ=ಸ್ವಯಲಿಂಗವಾದ ಶಿವಯೋಗೀಶ್ವರನು, ಭಿಕ್ಷುಕೇ ವಾ=ಭಿಕ್ಷುಕನಲ್ಲಿಯಾಯಿತ್ತಾದೊಡು, ನೃಪೇಽಥವಾ=ರಾಜನಲ್ಲಿಯಾಯಿತ್ತಾದೊಡೆಯು, ಸಮವೃತ್ತಿಃ=ಸಮಾನವರ್ತನೆಯುಳ್ಳ ಆತನು, ಭವೇತ್=ಅಹನು. ||೫೪||

**ಗ್ರಂಥ||** **ಪಶ್ಯನ್ ಸರ್ವಾಣಿ ಭೂತಾನಿ ಸಂಸಾರಸ್ಥಾನಿ ಸರ್ವಶಃ |**
**ಸ್ಮಯಮಾನಃ ಪರಾನಂದೇ ಲೀನಾತ್ಮಾ ವರ್ತತೇ ಸುಧೀಃ ||**

**ಟೀಕು||** ಸುಧೀಃ=ಶೋಭನವಾದ ಬುದ್ಧಿಯುಳ್ಳ ಸ್ವಯಲಿಂಗವಾದ ಯತೀಶ್ವರನು, ಸರ್ವಶಃ= ಎಲ್ಲಾಕಡೆಯಲ್ಲಿ, ಸಂಸಾರಸ್ಥಾನಿ=ಸಂಸಾರಚಕ್ರದಲ್ಲಿಯಿರುತ್ತಿರ್ದ್ದ, ಸರ್ವಾಣಿ ಭೂತಾನಿ=ಸಮಸ್ತ ಪ್ರಾಣಿಗಳನು, ಪಶ್ಯನ್=ನೋಡುತ್ತ, ಸ್ಮಯಮಾನಃ=ಆಶ್ಚರ್ಯಪಡುತ್ತಿರ್ದ್ದಾತನಾಗುತವು, ಪರಾನಂದೇ= ಪರಮಾನಂದರೂಪವಾದ ಮಹಾಲಿಂಗದಲ್ಲಿ, ಲೀನಾತ್ಮಾ=ಅಡಗಿರ್ದ್ದಾತನಾಗಿ, ವರ್ತತೇ=ವರ್ತಿಸುತ್ತಿರ್ದ್ದಪನು. ||೫೫||

**ಸೂತ್ರ||** ಬಳಿಕ ಯತೀಶ್ವರನ ನಿತ್ಯಕರ್ಮವನು ಹೇಳಿ ಸ್ವಯಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಧ್ಯಾನಂ ಶೈವಂ ತಥಾ ಜ್ಞಾನಂ ಭಿಕ್ಷಾ ಚೈಕಾಂತಶೀಲತಾ |**
**ಯತೇಶ್ಚತ್ವಾರಿ ಕರ್ಮಾಣಿ ನ ಪಂಚಮಮಿಹೇಷ್ಯತೇ ||**

**ಟೀಕು||** ಶೈವಂ ಧ್ಯಾನಂ=ಶಿವಧ್ಯಾನವು, ತಥಾ=ಹಾಗೆಯೇ, ಶೈವಂ ಜ್ಞಾನಂ=ಶಿವಜ್ಞಾನವು,

ಭಿಕ್ಷಾ=ಭಿಕ್ಷಾಹಾರವು, ಏಕಾಂತಶೀಲತಾ ಚ=ಏಕಾಂತಶೀಲತ್ವವು, ಯತೇಃ=ಸ್ವಯಲಿಂಗವಾದ ಶಿವಯೋಗೀಶ್ವರನಿಗೆ, ಏತಾನಿ ಚತ್ವಾರಿ ಕರ್ಮಾಣಿ=ಈ ನಾಲ್ಕು ಕರ್ಮಂಗಳೆ. ಪಂಚಮಂ=ಐದನೆಯ ಕರ್ಮವು, ಇಹ=ಇಲ್ಲಿ, ನೇಷ್ಯತೇ=ಇಚ್ಛೈಸಲುಪಡುತ್ತಿರದು. ||೫೬||

## ಇತಿ ಸ್ವಯಂಸ್ಥಲಮ್

# ೮. ಭಕ್ತಸ್ಥಲೇ ಚರಸ್ಥಲಮ್

**ಸೂತ್ರ||** ಬಳಿಕ "ಆತ್ಮರತಿರಾತ್ಮಕ್ರೀಡಃ ಆತ್ಮಮಿಥುನಮಾತ್ಮಾನಂದಃ; ಸಃ ಸ್ವರಾಡ್ ಭವತಿ|
ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ"|| ಯೆಂಬ
ಛಾಂದೋಗ್ಯ ಶ್ರುತ್ಯರ್ಥವನು;

"ಅಹಂ ಮಮತ್ವಶೂನ್ಯಾತ್ಮಾನ್ನಿಜಬೋಧೈಕರೂಪದೃಕ್|
ಸ್ವಯಮೇವ ಸ್ವಯಂ ಭೂತ್ವಾ ಚರತೀತಿ ಚರಃ ಸ್ಮೃತಃ"|| ಯೆಂಬ
ವಾತುಲೋತ್ತರಾರ್ಥವನು ಪ್ರಕಟಿಸುತ್ತ ಆ ಸ್ವಯಲಿಂಗಸಂಪನ್ನನೆ ಸ್ವಯವಾಗಿ ಚರಿಸುವದರಿಂದೆ ಚರಲಿಂಗವೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ಸ್ವರೂಪಜ್ಞಾನಸಂಪನ್ನೋ ಧ್ವಸ್ತಾಹಂಮಮತಾಕೃತಿಃ |**
**ಸ್ವಯಮೇವ ಸ್ವಯಂ ಭೂತ್ವಾ ಚರತೀತಿ ಚರಾಭಿದಃ ||**

**ಟೀಕು||** ಧ್ವಸ್ತಾಹಂಮಮತಾಕೃತಿಃ=ಕೆಡಿಸಲುಪಟ್ಟ ಅಹಂ ಮಮತೆಗಳ ಆಕಾರವುಳ್ಳ, ಸ್ವರೂಪಜ್ಞಾನ ಸಂಪನ್ನಃ=ಸ್ವಸ್ವರೂಪಜ್ಞಾನ ಸಂಪನ್ನನಾದ ಆ ಸ್ವಯಲಿಂಗಿಯೆ, ಸ್ವಯಮೇವ ಸ್ವಯಂಭೂತ್ವಾ= ತಾನೇತಾನಾಗಿ, ಚರತೀತಿ=ಚರಿಸುವಾತನಾದ ಕಾರಣವಾಗಿ, ಚರಾಭಿದಃ=ಚರಲಿಂಗವೆಂಬ ಹೆಸರುಳ್ಳ ಆತನು. ||೫೭||

**ಸೂತ್ರ||** ಬಳಿಕ ಆ ಚರಲಿಂಗಾಚಾರವನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಕಾಮಕ್ರೋಧಾದಿನಿರ್ಮುಕ್ತಃ ಶಾಂತಿದಾಂತಿಸಮನ್ವಿತಃ |**
**ಸಮಬುಧ್ಯಾ ಚರೇದ್ಯೋಗೀ ಸರ್ವತ್ರ ಶಿವಬುದ್ಧಿಮಾನ್ ||**

**ಟೀಕು||** ಕಾಮಕ್ರೋಧಾದಿನಿರ್ಮುಕ್ತಃ=ಕಾಮಕ್ರೋಧಲೋಭಮೋಹ ಮೊದಲಾಗುಳ್ಳ ಅರಿಷಡ್ವರ್ಗಂಗಳಿಂದೆ ಬಿಡಲುಪಟ್ಟ, ಶಾಂತಿ ದಾಂತಿ ಸಮನ್ವಿತಃ=ಅಂತಃಕರಣ ಬಹಿಷ್ಕರಣ ನಿಗ್ರಹಗಳೊಡನೆ ಕೂಡಿರ್ದ್ದ, ಸರ್ವತ್ರ ಶಿವಬುದ್ಧಿಮಾನ್=ಎಲ್ಲಾ ಎಡೆಯಲ್ಲಿಯು ಶಿವಮಯವಾದ

ಬುದ್ಧಿಯುಳ್ಳ, ಯೋಗೀ=ಚರಲಿಂಗರೂಪವಾದ ಶಿವಯೋಗೀಶ್ವರನು, ಸರ್ವತ್ರ ಸಮಬುಧ್ಯಾ=ಎಲ್ಲಾ ಎಡೆಯಲ್ಲಿಯು ಸಮಾನವಾದ ಬುದ್ಧಿಯಿಂದೆ, ಚರೇತ್=ಚರಿಸುವುದು. ||೫೮||

**ಗ್ರಂಥ||** **ಇದಂ ಮುಖ್ಯಮಿದಂ ಹೀನಮಿತಿ ಚಿಂತಾಮಕಲ್ಪಯನ್ ।**
**ಸರ್ವತ್ರ ಸಂಚರೇದ್ಯೋಗೀ ಸರ್ವಂ ಬ್ರಹ್ಮೇತಿ ಭಾವಯನ್ ॥**

**ಟೀಕು||** ಯೋಗೀ=ಶಿವಯೋಗಿಯು, ಇದಂ ಮುಖ್ಯಂ=ಇದು ಮುಖ್ಯವು, ಇದಂ ಹೀನಂ=ಇದು ಹೀನವು, ಇತಿ=ಹೀಗೆಂದು, ಚಿಂತಾಂ=ಚಿಂತೆಯನು, ಅಕಲ್ಪಯನ್=ಮಾಡದೆ, ಸರ್ವಂ ಬ್ರಹ್ಮೇತಿ=ಸರ್ವವು ಬ್ರಹ್ಮವೆಂದು, ಭಾವಯನ್ ಸನ್=ಭಾವಿಸುತ್ತಿರ್ದಾತನಾಗುತವು, ಸರ್ವತ್ರ=ಎಲ್ಲಾ ಎಡೆಯಲ್ಲಿಯು, ಸಂಚರೇತ್=ಚರಿಸುವುದು. ||೫೯||

**ಗ್ರಂಥ||** **ನ ಸನ್ಮಾನೇಷು ಸಂಪ್ರೀತಿಂ ನಾವಮಾನೇಷು ಚ ವ್ಯಥಾಮ್ ।**
**ಕುರ್ವಾಣಃ ಸಂಚರೇದ್ಯೋಗೀ ಕೂಟಸ್ಥೇ ಸ್ವಾತ್ಮನಿ ಸ್ಥಿತಃ ॥**

**ಟೀಕು||** ಕೂಟಸ್ಥೇ ಸ್ವಾತ್ಮನಿ="ತುರ್ಯಸಾಕ್ಷಿಕಪ್ರತ್ಯಗಾತ್ಮ"ನೆಂಬ ಪರ್ಯಾಯನಾಮವುಳ್ಳ ಕೂಟಸ್ಥನಾದ ತನ್ನ ನಿಜದಲ್ಲಿ, ಸ್ಥಿತಃ=ಇರುತ್ತಿರ್ದ, ಯೋಗೀ=ಶಿವಯೋಗಿಯು, ಸನ್ಮಾನೇಷು= ಸನ್ಮಾನಂಗಳಲ್ಲಿ, ಸಂಪ್ರೀತಿಂ=ಲೇಸಾದ ಪ್ರೀತಿಯನು, ನ ಕುರ್ವಾಣಃ ಸನ್=ಮಾಡದೆಯಿರುತ್ತಿದ್ದಾತನಾಗುತಲು, ಅವಮಾನೇಷು=ಅವಮನ್ನಣೆಗಳಲ್ಲಿ, ವ್ಯಥಾಂ=ದುಃಖವನು, ನ ಕುರ್ವಾಣಃ ಸನ್=ಮಾಡದೆಯಿರುತ್ತಿದ್ದಾತನಾಗುತಲು, ಸಂಚರೇತ್=ಸಂಚರಿಸುವುದು. ||೬೦||

**ಗ್ರಂಥ||** **ಅಪ್ರಾಕೃತಗುಣೈಃ ಸ್ವೀಯೈಃ ಸರ್ವಂ ವಿಸ್ಮಾಪಯನ್ ಜನಮ್ ।**
**ಅದ್ವೈತಪರಮಾನಂದಮುದಿತೋ ದೇಹಿವಚ್ಚರೇತ್ ॥**

**ಟೀಕು||** ಅದ್ವೈತಪರಮಾನಂದಮುದಿತಃ=ಶಿವಾದ್ವೈತದಿಂದಲಾದ ಪರಮಾನಂದದಿಂದೆ ಸಂತೋಷಿಸಲುಪಟ್ಟ ಶಿವಯೋಗಿಯು, ಅಪ್ರಾಕೃತೈಃ=ಪ್ರಾಕೃತಂಗಳಲ್ಲದೆಯಿರ್ದ, ಸ್ವೀಯೈಃ ಗುಣೈಃ=ತನ್ನ ಸಂಬಂಧವಾದ ಗುಣಂಗಳಿಂದೆ, ಸರ್ವಂ ಜನಂ=ಸಮಸ್ತ ಜನವನು, ವಿಸ್ಮಾಪಯನ್=ಆಶ್ಚರ್ಯ ಪಡುತ್ತಿದ್ದಾತನಾಗುತಲು, ದೇಹಿವತ್=ದೇಹಿಯೋಪಾದಿಯಲ್ಲಿ, ಚರೇತ್=ಚರಿಸುವದು. ||೬೧||

**ಗ್ರಂಥ||** **ನ ಪ್ರಪಂಚೇ ನಿಜೇ ದೇಹೇ ನ ಧರ್ಮೇ ನ ಚ ದುಷ್ಕೃತೇ ।**
**ಗತವೈಷಮ್ಯಧೀ ರ್ಧೀರೋ ಯತಿಶ್ಚರತಿ ದೇಹಿವತ್ ॥**

**ಟೀಕು||** ಗತವೈಷಮ್ಯಧೀಃ=ವಿಧಿ ನಿಷೇಧಾದಿಗಳಲ್ಲಿ ತೊಲಗಲುಪಟ್ಟ ವೈಷಮ್ಯಬುದ್ಧಿಯುಳ್ಳ,

ಧೀರಃ=ಧೀರನಾದ, ಯತಿಃ=ಶಿವಯೋಗೀಶ್ವರನು, ನಿಜೇ=ತನ್ನ ಸಂಬಂಧವಾದ, ದೇಹೇ ಸತಿ=ದೇಹವುಂಟಾಗಲಿಕೆಯಾಗಿಯು ದೇಹೇವರ್ತದೇಹಿಯೋಪಾದಿಯಲ್ಲಿ, ಪ್ರಪಂಚೇ=ಪ್ರಪಂಚಿನಲ್ಲಿ, ನ ಚರತಿ=ಚರಿಸುತ್ತಿರನು. ಧರ್ಮೇ ಚ=ಪುಣ್ಯಕೃತ್ಯದಲ್ಲಿಯು, ನ ಚರತಿ=ಚರಿಸುತ್ತಿರನು. ದುಷ್ಕೃತೇಷು ಚ=ಪಾಪಕೃತ್ಯದಲ್ಲಿಯೂ, ನ ಚರತಿ=ಚರಿಸುತ್ತಿರನು. ||೬೨||

**ಸೂತ್ರ||** ಬಳಿಕ ಚರಲಿಂಗಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ||** **ಪ್ರಾಕೃತೈಶ್ವರ್ಯಸಂಪತ್ತಿಪರಾಙ್ಮುಖಮನಃ ಸ್ಥಿತಿಃ ।**
**ಚಿದಾನಂದನಿಜಾತ್ಮಸ್ಥೋ ಮೋದತೇ ಮುನಿಪುಂಗವಃ ॥**

**ಟೀಕು||** ಪ್ರಾಕೃತಃ=ಪ್ರಕೃತಿತತ್ತ್ವಸಂಭವರಾದ ಬ್ರಹ್ಮ ವಿಷ್ಣ್ವಾದಿಗಳ, ಐಶ್ವರ್ಯ=ಸಂಪತ್ತಿ ಒಡೆತನದಿಂದಲಾದ ಸಂಪತ್ತಿಯಲ್ಲಿ, ಪರಾಙ್ಮುಖಃ=ಅಡ್ಡಮುಖವಾದ, ಮನಃಸ್ಥಿತಿಃ=ಚಿತ್ತವೃತ್ತಿಯುಳ್ಳ, ಮುನಿಪುಂಗವಃ=ಯತಿಶ್ರೇಷ್ಠನು, ಚಿದಾನಂದನಿಜಾತ್ಮಸ್ಥಃ ಸನ್=ಸಚ್ಚಿದಾನಂದಾತ್ಮಕವಾದ ನಿಜಸ್ವರೂಪಿನಲ್ಲಿಯಿರುತ್ತಿರ್ದಾತನಾಗುತಲು, ಮೋದತೇ=ಸಂತೋಷಿಸುತ್ತಿರ್ದಪನು. ||೬೩||

### ಇತಿ ಚರಸ್ಥಲಮ್

## ೯. ಭಕ್ತಸ್ಥಲೇ ಪರಸ್ಥಲಮ್

**ಸೂತ್ರ||** ಬಳಿಕ "ತದ್ಬ್ರಹ್ಮಾಹಮಿತಿ ಜ್ಞಾತ್ವಾ ಬ್ರಹ್ಮ ಸಂಪದ್ಯತೇ ಪರಮ್"। ಯೆಂಬ ಬ್ರಹ್ಮಬಿಂದೂಪನಿಷದರ್ಥವನು,

"ಸ್ವಯಂ ಸ್ವಯತ್ವಮಾಸಾದ್ಯ ಚರತೋ ನ ಪರಃ ಸ್ಮೃತಃ।
ಅಸೌ ತತೋಽತೀತವರ್ಣಾಶ್ರಮತ್ವೇನ ಪರಃ ಸ್ಮೃತಃ"|| ಯೆಂಬ ವಾತುಲೋತ್ತರಾರ್ಥವನು ಪ್ರಕಟಿಸುತ್ತ ಸ್ವಸ್ವರೂಪಸಿದ್ಧನಾಗಿ ಚರಿಸುವ ಆ ಶಿವಯೋಗೀಶ್ವರನಿಗೆ ಪರವಿಲ್ಲವೆಂಬ ಜ್ಞಾನಕ್ಕೆ ಪರಲಿಂಗಸ್ಥಲವನು ಸಪ್ತಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಸ್ವಯಮೇವ ಸ್ವಯಂ ಭೂತ್ವಾ ಚರತಃ ಸ್ವಸ್ವರೂಪತಃ ।**
**ಪರಂ ನಾಸ್ತೀತಿ ಬೋಧಸ್ಯ ಪರತ್ವಮಭಿಧೀಯತೇ ॥**

**ಟೀಕು||** ಸ್ವಯಮೇವ ಸ್ವಯಂ ಭೂತ್ವಾ=ತಾನೇ ತಾನಾಗಿ, ಚರತಃ=ಚರಿಸುತ್ತಿರ್ದ ಆ ಶಿವಯೋಗೀಶ್ವರನ, ಸ್ವಸ್ವರೂಪತಃ=ಸ್ವಸ್ವರೂಪಿನದೆಸೆಯಿಂದೆ, ಪರಂ=ಪರವು, ನಾಸ್ತಿ ಇತಿ=ಇಲ್ಲವೆಂಬ,

ಬೋಧಸ್ಯ=ಜ್ಞಾನಕ್ಕೆ, ಪರತ್ವಂ=ಪರಲಿಂಗಸ್ವರೂಪವಹತನವು, ಅಭಿಧೀಯತೇ= ಹೇಳಲುಪಡುತ್ತಿರ್ದ್ದಪುದು. ||೬೪||

ಗ್ರಂಥ|| **ಸ್ವತಂತ್ರಃ ಸರ್ವಕೃತ್ಯೇಷು ಸ್ವಂ ಪರತ್ವೇನ ಭಾವಿತಃ ।**
**ತೃಣೀಕುರ್ವನ್ ಜಗಜ್ಜಾಲಂ ವರ್ತತೇ ಶಿವಯೋಗಿರಾಟ್ ॥**

**ಟೀಕು||** ಸ್ವಂ=ತನ್ನನು, ಪರತ್ವೇನ=ಪರವಹತನದಿಂದೆ, ಭಾವಿತಃ=ಭಾವಿಸಲುಪಟ್ಟ, ಶಿವಯೋಗಿರಾಟ್=ಶಿವಯೋಗೀಶ್ವರನು, ಸರ್ವಕೃತ್ಯೇಷು=ಸಮಸ್ತಕೃತ್ಯಂಗಳಲ್ಲಿ, ಸ್ವತಂತ್ರಃ=ಸ್ವತಂತ್ರನಾಗಿ, ಜಗಜ್ಜಾಲಂ=ಜಗತ್ಸಮೂಹವನು, ತೃಣೀಕುರ್ವನ್ ಸನ್=ತೃಣೀಕರಿಸುತ್ತಿರ್ದ್ದಾತನಾಗುತವು, ವರ್ತತೇ=ವರ್ತಿಸುತ್ತಿರ್ದ್ದಪನು. ||೬೫||

ಗ್ರಂಥ|| **ವರ್ಣಾಶ್ರಮಸಮಾಚಾರಮಾರ್ಗನಿಷ್ಠಾಪರಾಙ್ಮುಖಃ ।**
**ಸರ್ವೋತ್ಕೃಷ್ಟಂ ಸ್ವಮಾತ್ಮಾನಂ ಪಶ್ಯನ್ಯೋಗೀ ತು ಮೋದತೇ ॥**

**ಟೀಕು||** ವರ್ಣಾಶ್ರಮ=ಬ್ರಹ್ಮಚರ್ಯಾದ್ಯಾಶ್ರಮಂಗಳ, ಸಮಾಚಾರಮಾರ್ಗನಿಷ್ಠಾ ಪರಾಙ್ಮುಖಃ=ಸದಾಚಾರಮಾರ್ಗನಿಷ್ಠೆಯಲ್ಲಿ ಅಡ್ಡಲಾದ ಮುಖವನುಳ್ಳ, ಯೋಗೀ ತು=ಶಿವಯೋಗೀಶ್ವರನಾಯಿತ್ತಾದೊಡೆ, ಸ್ವಂ=ತನ್ನ ಸಂಬಂಧವಾದ, ಆತ್ಮಾನಂ=ನಿಜರೂಪವನು, ಸರ್ವೋತ್ಕೃಷ್ಟಂ=ಸರ್ವೋತ್ಕೃಷ್ಟವಾಗಿದ್ದಾತನಾಗಿ, ಪಶ್ಯನ್ ಸನ್=ನೋಡುತ್ತಿರ್ದ್ದಾತನಾಗುತವು, ಮೋದತೇ= ಸಂತೋಷಿಸುತ್ತಿರ್ದ್ದಪನು. ||೬೬||

ಗ್ರಂಥ|| **ವಿಶ್ವಾತೀತಂ ಪರಂ ಬ್ರಹ್ಮ ಶಿವಾಖ್ಯಂ ಚಿತ್ಸ್ವರೂಪಕಮ್ ।**
**ತದೇವಾಹಮಿತಿ ಜ್ಞಾನೀ ಸರ್ವೋತ್ಕೃಷ್ಟಃ ಸ ಉಚ್ಯತೇ ॥**

**ಟೀಕು||** ವಿಶ್ವಾತೀತಂ=ವಿಶ್ವವನು ಮೀರಿ ವರ್ತಿಸುತ್ತಿರ್ದ್ದ, ಶಿವಾಖ್ಯಂ=ಪರಶಿವನೆಂಬ ಹೆಸರುಳ್ಳ, ಚಿತ್ಸ್ವರೂಪಕಂ=ಅರಿವೆ ಸ್ವರೂಪವಾಗುಳ್ಳ, ತದೇವ ಪರಂ ಬ್ರಹ್ಮ=ಆ ಪರಬ್ರಹ್ಮವೆ, ಅಹಮಿತಿ=ನಾನೆಂಬ, ಜ್ಞಾನೀ=ಜ್ಞಾನವುಳ್ಳ, ಸಃ=ಆತನು, ಸರ್ವೋತ್ಕೃಷ್ಟಃ=ಸರ್ವೋತ್ಕೃಷ್ಟನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ||೬೭||

ಗ್ರಂಥ|| **ಅಚಲಂ ಧ್ರುವಮಾತ್ಮಾನಮನುಪಶ್ಯನ್ನಿರಂತರಮ್ ।**
**ನಿರಸ್ತವಿಶ್ವವಿಭ್ರಾಂತಿರ್ಜೀವನ್ಮುಕ್ತೋ ಭವೇನ್ಮುನಿಃ ॥**

**ಟೀಕು||** ಅಚಲಂ=ಚಂಚಲವಿಲ್ಲದೆ, ಧ್ರುವಂ=ನಿತ್ಯವಾಗಿರ್ದ್ದ, ಆತ್ಮಾನಂ=ಸ್ವಸ್ವರೂಪವನು,

ನಿರಂತರಂ=ಎಡೆಬಿಡದೆ, ಅನುಪಶ್ಯನ್=ಅನನ್ಯವಾಗಿ ಬಳಿಪಿಡಿದು ಕಾಣುತ್ತಿರ್ದ್ದ, ಮುನಿಃ=ಯೋಗೀಶ್ವರನು, ನಿರಸ್ತನಿಖಿಲವಿಭ್ರಾಂತಿಃ ಸನ್=ತೊಲಗಿಸಲುಪಟ್ಟ ಜಗದ್ಭ್ರಾಂತಿಯುಳ್ಳಾತನಾಗುತಲು, ಜೀವನ್ಮುಕ್ತಃ=ಜೀವನ್ಮುಕ್ತನು, ಭವೇತ್=ಅಹನು. ||೬೮||

ಗ್ರಂಥ|| ಬ್ರಹ್ಮಾದ್ಯಾಃ ಕಿಂ ನು ಕುರ್ವಂತಿ ದೇವತಾಃ ಕರ್ಮಮಾರ್ಗಗಾಃ |
ಕರ್ಮಾತೀತಪದಸ್ಥಸ್ಯ ಸ್ವಯಂ ಬ್ರಹ್ಮಸ್ವರೂಪಿಣಃ ||

ಟೀಕು|| ಸ್ವಯಂ=ತಾನೇ, ಬ್ರಹ್ಮಸ್ವರೂಪಿಣಃ=ಪರಬ್ರಹ್ಮಸ್ವರೂಪವುಳ್ಳಾತನಾಗಿ, ಕರ್ಮಾತೀತಪದಸ್ಥಸ್ಯ=ಪುಣ್ಯಪಾಪರೂಪವಾದ ಕರ್ಮಕಾಂಡವನು ಮೀರಿದ ಪದದಲ್ಲಿಯಿರುತ್ತಿರ್ದ್ದ ಶಿವಯೋಗೀಶ್ವರನಿಗೆ, ಕರ್ಮಮಾರ್ಗಗಾಃ=ಕರ್ಮಮಾರ್ಗವನು ಎಯ್ದುತ್ತಿರ್ದ್ದ, ಬ್ರಹ್ಮಾದ್ಯಾಃ=ಬ್ರಹ್ಮವಿಷ್ಣು ಮೊದಲಾಗುಳ್ಳ, ದೇವತಾಃ=ದೇವತೆಗಳು, ಕಿಂ ನು ಕುರ್ವಂತಿ=ಏನು ಸೇವೆಯನು ಮಾಡುತ್ತಿರರು? ಎಲ್ಲಾ ಸೇವೆಯನು ಮಾಡುತ್ತಿರ್ದ್ದಪರೆಂಬುದರ್ಥ. ||೬೯||

ಗ್ರಂಥ|| ಸ್ವೇಚ್ಛಯಾ ಸಂಚರೇದ್ಯೋಗೀ ವಿಮುಂಚನ್ ದೇಹಮಾನಿತಾಮ್ |
ದರ್ಶನೈಃ ಸ್ಪರ್ಶನೈಃ ಸರ್ವಾನಜ್ಞಾನಪಿ ವಿಮೋಚಯೇತ್ ||

ಟೀಕು|| ದೇಹಮಾನಿತಾಂ=ದೇಹಾಭಿಮಾನ ಉಳ್ಳತನವನು, ವಿಮುಂಚನ್=ಬಿಡುತ್ತಿರ್ದ್ದ, ಯೋಗೀ=ಶಿವಯೋಗೀಶ್ವರನು, ಸ್ವೇಚ್ಛಯಾ=ಸ್ವೇಚ್ಛಾಚಾರದಿಂದೆ, ಸಂಚರನ್ ಸನ್=ಚರಿಸುತ್ತಿರ್ದ್ದಾತನಾಗುತಲು, ದರ್ಶನೈಃ=ದರ್ಶನಂಗಳಿಂದೆ, ಸ್ಪರ್ಶನೈಃ=ಸ್ಪರ್ಶನಂಗಳಿಂದೆಯು, ಸರ್ವಾನ್ ಅಜ್ಞಾನಪಿ=ಸಮಸ್ತ ಅಜ್ಞಾನಿಗಳನಾಯಿತ್ತಾದೊಡೆ, ವಿಮೋಚಯೇತ್=ಮುಕ್ತರನು ಮಾಡುವನು. ||೭೦||

ಸೂತ್ರ|| ಬಳಿಕ "ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್|
ತದಾ ವಿದ್ವಾನ್ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ||"
ಯೆಂಬ ಮುಂಡಕೋಪನಿಷದರ್ಥವನು ಪ್ರಕಟಿಸುತ್ತ ಆ ಪರಲಿಂಗರೂಪನಾದ ಶಿವಯೋಗೀಶ್ವರನೆ ಶಿವಸಮಾನವಾದ ಜೀವನ್ಮುಕ್ತನೆಂದು ಹೇಳಿ ಪರಸ್ಥಲವನು ಮುಗಿಯಿಸುತ್ತಿರ್ದ್ದಪಂ.

ವೃತ್ತ|| ನಿತ್ಯೇ ನಿರ್ಮಲಭಾವನೇ ನಿರುಪಮೇ ನಿರ್ಧೂತವಿಶ್ವಭ್ರಮೇ
ಸತ್ತಾನಂದಚಿದಾತ್ಮಕೇ ಪರಶಿವೇ ಸಾಮ್ಯಂ ಗತಃ ಸಂಯಮೀ |
ಪ್ರಧ್ವಸ್ತಾಶ್ರಮವರ್ಣಧರ್ಮನಿಗಲಃ ಸ್ವಚ್ಛಂದಸಂಚಾರವಾನ್
ದೇಹೀವಾದ್ಭುತವೈಭವೋ ವಿಜಯತೇ ಜೀವನ್ವಿಮುಕ್ತಸ್ಸುಧೀಃ ||

ಟೀಕು|| ನಿತ್ಯೇ=ಕೇಡಿಲ್ಲದೆಯಿರ್ದ್ದ, ನಿರ್ಮಲಭಾವನೇ=ನಿರ್ಮಲವಾದ ಸ್ವರೂಪವುಳ್ಳ,

ನಿರುಪಮೇ=ಉಪಮಾತೀತವಾಗಿದ್ದ, ನಿರ್ಧೂತವಿಶ್ವಭ್ರಮೇ=ಕೊಡಹಲುಪಟ್ಟ ಸಮಸ್ತ ಭ್ರಾಂತಿಯುಳ್ಳ ಶಿವನಲ್ಲಿ, ಸಾಮ್ಯಂ ಗತಃ=ಸಮಾನತೆಯನೆಯಿದಿರ್ದ್ದ, ಸಂಯಮೀ=ಶಿವಯೋಗೀಶ್ವರನು, ಪ್ರಧ್ವಸ್ತಾಶ್ರಮವರ್ಣಧರ್ಮನಿಗಲಃ=ಕೆಡಿಸಲುಪಟ್ಟ ಚತುರಾಶ್ರಮ ಚತುರ್ವರ್ಣಂಗಳ ಧರ್ಮಸಂಕಲೆಯುಳ್ಳಾತನಾಗಿ, ದೇಹೀವ=ದೇಹಿಯೋಪಾದಿಯಲ್ಲಿ, ಸ್ವಚ್ಛಂದ ಸಂಚಾರವಾನ್= ಮನಬಂದಹಾಗೆ ನಡೆವುತ್ತಿರ್ದ್ದ, ಸುಧೀಃ=ಸುಬುದ್ಧಿಯುಳ್ಳ, ಜೀವನ್ವಿಮುಕ್ತಃ=ಜೀವನ್ಮುಕ್ತನಾಗಿ ಪರಲಿಂಗ ರೂಪನಾದ ಶಿವಯೋಗೀಶ್ವರನು, ಅದ್ಭುತವೈಭವಃಸನ್=ಆಶ್ಚರ್ಯವಾದ ಮಹತ್ವಸಂಪತ್ತಿಯುಳ್ಳಾತ ನಾಗುತಲು, ವಿಜಯತೇ=ಸರ್ವೋತ್ಕರ್ಷದಿಂದೆ ವರ್ತಿಸುತ್ತಿರ್ದ್ದಪನು.

**ತಾತ್ಪರ್ಯ॥** ಪಿಂಡಾದಿ ಸಹಜದಾನಾಂತವಾದ ಪಂಚಾದಶ ಸ್ಥಲಾಚಾರಸಂಪನ್ನನಾದ ಶಿವಭಕ್ತನ ಸ್ಥೂಲಸೂಕ್ಷ್ಮಕಾರಣವೆಂಬ ಅಂಗತ್ರಯಕ್ಕೆ ಗುರುಲಿಂಗ ಶಿವಲಿಂಗ ಜಂಗಮಲಿಂಗವೆಂಬ ಲಿಂಗತ್ರಯವನು ಕ್ರಮವಾಗಿ ಸ್ವಾನುಭವ ಗುರೂಕ್ತಿಗಳಿಂದೆ ಸಂಬಂಧಿಸಿಕೊಂಬುದು. ಗ್ರಂಥ ಬಾಹುಲ್ಯವಾದೀತೆಂದು ಸಂಮತಿಯ ಬರೆದುದಿಲ್ಲ.

**ಇತಿ ಪರಸ್ಥಲಮ್**

**ರೇಣುಕಾಗಸ್ತ್ಯಸಂವಾದೇ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಸಿದ್ಧಾಂತಸಂಬೋಧಿನ್ಯಾಖ್ಯಾಯಾಂ ಲಿಂಗಸ್ಥಲೇ ಭಕ್ತಸ್ಥಲವಿಷಯ ನವಲಿಂಗಸ್ಥಲ ಪ್ರಸಂಗೋ ನಾಮ ಪಂಚದಶಃ ಪರಿಚ್ಛೇದಃ ಸಮಾಪ್ತಃ**

## ಮಾಹೇಶ್ವರಸ್ಥಲಾಶ್ರಿತನವಲಿಂಗಪ್ರಸಂಗಃ
## ಲಿಂಗಸ್ಥಲೇ ಮಾಹೇಶ್ವರಸ್ಥಲಮ್

**ಅಗಸ್ತ್ಯ ಉವಾಚ॥**

**ಸೂತ್ರ॥** ಬಳಿಕ ಅಗಸ್ತ್ಯಮುನೀಶ್ವರನು ರೇಣುಕಗಣೇಶ್ವರನನು ಪ್ರಶ್ನೆಯಂ ಮಾಡಿ ಕೇಳುತ್ತಿರ್ದ್ದಪಂ.

**ಗ್ರಂಥ॥** **ಸ್ಥಲಾನಾಂ ನವಕಂ ಪ್ರೋಕ್ತಂ ಭಕ್ತಸ್ಥಲಸಮಾಶ್ರಯಮ್ ।**
**ಮಾಹೇಶ್ವರಸ್ಥಲೇ ಸಿದ್ಧಂ ಸ್ಥಲಭೇದಂ ವದಸ್ವ ಮೇ ॥**

**ಟೀಕು॥** ಭಕ್ತಸ್ಥಲಸಮಾಶ್ರಯಂ=ಭಕ್ತಸ್ಥಲವನಾಶ್ರಯಿಸಿರ್ದ್ದ, ಸ್ಥಲಾನಾಂ ನವಕಂ=ಒಂಭತ್ತು ಲಿಂಗಸ್ಥಲವು, ಪ್ರೋಕ್ತಂ=ಹೇಳಲುಪಟ್ಟಿತ್ತು. ಮಾಹೇಶ್ವರಸ್ಥಲೇ=ಮಾಹೇಶ್ವರಸ್ಥಲದಲ್ಲಿ, ಸಿದ್ಧಂ=ಸಿದ್ಧವಾಗಿದ್ದ, ಸ್ಥಲಭೇದಂ=ಸ್ಥಲಭೇದವನು, ಮೇ=ಎನಗೆ, ವದಸ್ವ=ಉಪದೇಶಿಸಿ ಹೇಳು. ॥೧॥

**ರೇಣುಕ ಉವಾಚ॥**

**ಸೂತ್ರ॥** ಬಳಿಕ ರೇಣುಕಗಣೇಶ್ವರನು ಅಗಸ್ತ್ಯಮುನಿಗೋಸುಗ ಉತ್ತರವನು ನಿರೂಪಿಸುತ್ತಿರ್ದ್ದಪಂ.

**ಗ್ರಂಥ॥** **ಮಾಹೇಶ್ವರಸ್ಥಲೇ ಸಂತಿ ಸ್ಥಲಾನಿ ನವ ತಾಪಸ ।**
**ಕ್ರಿಯಾಮಯಸ್ಥಲಂ ಪೂರ್ವಂ ತತೋ ಭಾವಾಗಮಸ್ಥಲಮ್ ॥**

**ಜ್ಞಾನಾಗಮಸ್ಥಲಂ ಚಾಥ ಸಕಾಯಸ್ಥಲಮೀರಿತಮ್ ।**
**ತತೋಽಕಾಯಸ್ಥಲಂ ಪ್ರೋಕ್ತಂ ಪರಕಾಯಸ್ಥಲಂ ತತಃ ॥**

**ಧರ್ಮಾಚಾರಸ್ಥಲಂ ಚಾಥ ಭಾವಾಚಾರಸ್ಥಲಂ ತತಃ ।**
**ಜ್ಞಾನಾಚಾರಸ್ಥಲಂ ಚೇತಿ ಕ್ರಮಾದೇಷಾಂ ಭಿದೋಚ್ಯತೇ ॥**

**ಟೀಕು॥** ಭೋ ತಾಪಸ=ಎಲೈ ತಪಸ್ವಿಯಾದ ಅಗಸ್ತ್ಯ ಮುನಿಯೆ! ಮಾಹೇಶ್ವರಸ್ಥಲೇ= ಮಾಹೇಶ್ವರ ಸ್ಥಲದಲ್ಲಿ, ನವ ಸ್ಥಲಾನಿ=ಒಂಭತ್ತು ಅವಾಂತರ ಸ್ಥಲಂಗಳು, ಸಂತಿ=ಉಂಟು. ಅವಾವುವೆಂದಡೆ ಆ ಸ್ಥಲೋದ್ದೇಶವನು ಹೇಳುತ್ತಿರ್ದ್ದಪಂ. ಪೂರ್ವಂ=ಮೊದಲು, ಕ್ರಿಯಾಗಮಸ್ಥಲಂ= ಕ್ರಿಯಾಗಮಸ್ಥಲವು, ತತಃ=ಬಳಿಕ, ಭಾವಾಗಮಸ್ಥಲಂ=ಭಾವಾಗಮಸ್ಥಲವು, ತತಃ=ಬಳಿಕ, ಜ್ಞಾನಾಗಮಸ್ಥಲಂ=ಜ್ಞಾನಾಗಮ ಸ್ಥಲವು, ಅಥ=ಅನಂತರದಲ್ಲಿ, ಸಕಾಯಸ್ಥಲಂ ಚ=ಸಕಾಯಾಸ್ಥಲವು, ಈರಿತಂ=ಹೇಳಲುಪಟ್ಟಿತ್ತು. ತತಃ=ಬಳಿಕ, ಅಕಾಯಸ್ಥಲಂ=ಅಕಾಯಸ್ಥಲವು, ಪ್ರೋಕ್ತಂ=ಹೇಳಲುಪಟ್ಟಿತ್ತು. ತತಃ=ಬಳಿಕ,

ಪರಕಾಯಸ್ಥಲಂ=ಪರಕಾಯಸ್ಥಲವು, ಅಥಃ=ಅನಂತರದಲ್ಲಿ, ಧರ್ಮಾಚಾರಸ್ಥಲಂ=ಧರ್ಮಾಚಾರಸ್ಥಲವು, ತತಃ=ಬಳಿಕ, ಭಾವಾಚಾರಸ್ಥಲಂ ಚ=ಭಾವಾಚಾರಸ್ಥಲವು, ತತಃ=ಬಳಿಕ, ಜ್ಞಾನಾಚಾರಸ್ಥಲಂ ಚ=ಜ್ಞಾನಾಚಾರಸ್ಥಲವು, ಏಷಾಂ=ಈ ಸ್ಥಲಂಗಳ, ಭಿದಾ=ಭೇದವು, ಕ್ರಮಾತ್=ಕ್ರಮವಾಗಿ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೪||

## ೧೦. ಮಾಹೇಶ್ವರಸ್ಥಲೇ ಕ್ರಿಯಾಗಮಸ್ಥಲಮ್

**ಸೂತ್ರ||** ಬಳಿಕ "ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ ।
ನೋ ಇತರಾಣಿ"ಯೆಂಬ ಯಜರ್ವೇದಾರ್ಥವನು,
"ಅಲ್ಪಕ್ರಿಯಾ ಬಹುಫಲಂ ವೀರಶೈವಂ ಮಹೇಶ್ವರೀ"|| ಯೆಂಬ ವಾತುಲ ತಂತ್ರಾರ್ಥವನು ಪ್ರಕಟಿಸುತ್ತ ಆ ಪರಸ್ಥಲಸಂಪನ್ನನಾದ ಶಿವಯೋಗೀಶ್ವರನೆ ಶಿವನು, ಆತನ ಪೂಜೆಯೆ ಕ್ರಿಯಾತತ್ಪರವಾದಾಗಮವೀಗ ಕ್ರಿಯಾಗಮವೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ಶಿವೋ ಹಿ ಪರಮಃ ಸಾಕ್ಷಾತ್ಪೂಜಾ ತಸ್ಯ ಕ್ರಿಯೋಚ್ಯತೇ ।**
**ತತ್ಪರಾ ಆಗಮಾ ಯಸ್ಮಾತ್ತದುಕ್ತೋಽಯಂ ಕ್ರಿಯಾಗಮಃ ||**

**ಟೀಕು||** ಪರಮಃ=ಆ ಪರಸ್ಥಲಸಂಪನ್ನನಾದ ಶಿವಯೋಗೀಶ್ವರನೇ, ಸಾಕ್ಷಾತ್ ಶಿವೋ ಹಿ =ಪ್ರತ್ಯಕ್ಷವಾದ ಶಿವನೆ. ತಸ್ಯ=ಆತನ, ಪೂಜಾ=ಪೂಜೆಯೆ, ಕ್ರಿಯಾ=ಕ್ರೀಯೆಂದು. ಉಚ್ಯತೇ=ಹೇಳಲು ಪಡುತ್ತಿರ್ದ್ದಪುದು. ಆಗಮಾಃ=ಆಗಮಂಗಳು, ಯಸ್ಮಾತ್=ಆವುದಾನೊಂದು ಕಾರಣವಾಗಿ, ತತ್ಪರಾಃ=ಆ ಕ್ರಿಯೆ ಪ್ರಧಾನವಾಗುಳ್ಳ ಅವು, ತತ್=ಅದು ಕಾರಣವಾಗಿ, ಅಯಂ=ಇದು, ಕ್ರಿಯಾಗಮಃ= ಕ್ರಿಯಾಗಮವೆಂದು, ಉಕ್ತಃ=ಹೇಳಲುಪಟ್ಟಿತ್ತು. ||೫||

**ಸೂತ್ರ||** ಬಳಿಕ ಆ ಪೂಜಾ ಕ್ರೀಯನೆ ಪಂಚಸೂತ್ರಂಗಳಿಂದೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||** **ಪ್ರಕಾಶತೇ ಯಥಾ ನಾಗ್ನಿರರಣ್ಯಾಂ ಮಥನಂ ವಿನಾ ।**
**ಕ್ರಿಯಾಂ ವಿನಾ ತಥಾಽಂತಸ್ಥೋ ನ ಪ್ರಕಾಶೋ ಭವೇಚ್ಛಿವಃ ||**

**ಟೀಕು||** ಅರಣ್ಯಾಂ=ಅರಳಿಯ ಮರದಲ್ಲಿಯ, ಅಗ್ನಿಃ=ಅಗ್ನಿಯು, ಮಥನಂ ವಿನಾ=ಮಥನ ಹೊರತಾಗಿ, ಯಥಾ=ಹೇಗೆ, ನ ಪ್ರಕಾಶತೇ=ಪ್ರಕಾಶಿಸುತ್ತಿರದು; ತಥಾ=ಹಾಗೆ, ಕ್ರಿಯಾಂ ವಿನಾ= ಪೂಜಾಕ್ರೀ ಹೊರತಾಗಿ, ಅಂತಸ್ಥಃ=ಲಿಂಗಮಧ್ಯದಲ್ಲಿ ಇರುತ್ತಿರ್ದ್ದ, ಶಿವಃ=ಶಿವನು, ಪ್ರಕಾಶಃ=ಪ್ರಕಾಶಿಸು ತ್ತಿದ್ದಾತನು, ನ ಭವೇತ್=ಆಗನು. ||೬||

**ಗ್ರಂಥ||** **ನ ಯಥಾ ವಿಧಿಲೋಪಃ ಸ್ಯಾದ್ಯಥಾ ದೇವಃ ಪ್ರಸೀದತಿ |**
**ಯಥಾऽऽಗಮಃ ಪ್ರಮಾಣಂ ಸ್ಯಾತ್ತಥಾ ಕರ್ಮ ಸಮಾಚರೇತ್ ||**

**ಟೀಕು||** ವಿಧಿಲೋಪಃ=ನಿಯಮನಾಶವು, ಯಥಾ=ಹೇಗೆ, ನ ಸ್ಯಾತ್=ಆಗದು; ದೇವಃ= ಪರಮೇಶ್ವರನು, ಯಥಾ=ಹೇಗೆ, ಪ್ರಸೀದತಿ=ಪ್ರಸನ್ನನಾಗುತ್ತಿರ್ದ್ದಪನು? ಆಗಮಃ ಪ್ರಮಾಣಂ= ಆಗಮ ಪ್ರಮಾಣವು, ಯಥಾ=ಹೇಗೆ, ಸ್ಯಾತ್=ಅಹುದು? ತಥಾ=ಹಾಗೆ, ಕರ್ಮ=ಪೂಜಾಕ್ರಿಯೆಯನು, ಸಮಾಚರೇತ್=ಆಚರಿಸುವುದು. ||೭||

**ಗ್ರಂಥ||** **ವಿಧಿಃ ಶಿವನಿಯೋಗೋऽಯಂ ತಸ್ಮಾದ್ವಿಹಿತಕರ್ಮಣಿ |**
**ಶಿವಾರಾಧನಬುದ್ಧ್ಯೈವ ನಿರತ ಸ್ಯಾದ್ವಿಚಕ್ಷಣಃ ||**

**ಟೀಕು||** ವಿಹಿತ ಕರ್ಮಣಿ=ವಿಧ್ಯುಕ್ತ ಕರ್ಮದಲ್ಲಿ, ಅಯಂ ವಿಧಿಃ=ಈ ವಿಧಿಯು, ಶಿವನಿಯೋಗಃ= ಶಿವಲಿಂಗದ ಸೇವೆಯೆ ಸ್ವರೂಪವಾಗಿದ್ದ ಅದು. ತಸ್ಮಾತ್=ಅದು ಕಾರಣವಾಗಿ, ವಿಚಕ್ಷಣಃ= ಪ್ರವೀಣನಾದಾತನು, ಶಿವಾರಾಧನಬುದ್ಧ್ಯೈವ=ಶಿವಾರಾಧನ ಬುದ್ಧಿಯಲ್ಲಿಯೆ, ನಿರತಃ=ಆಸಕ್ತನಾಗಿದ್ದಾತನು, ಸ್ಯಾತ್=ಅಹನು. ||೮||

**ಗ್ರಂಥ||** **ಗುರೋರಾದೇಶಮಾಸಾದ್ಯ ಪೂಜಯೇತ್ಪರಮೇಶ್ವರಮ್ |**
**ಪೂಜಿತೇ ಪರಮೇಶಾನೇ ಪೂಜಿತಾಃ ಸರ್ವದೇವತಾಃ ||**

**ಟೀಕು||** ಗುರೋಃ=ಶ್ರೀಗುರುವಿನ, ಆದೇಶಂ=ಉಪದೇಶವನು, ಆಸಾದ್ಯ=ಪಡೆದು, ಪರಮೇಶ್ವರಂ= ಶಿವಲಿಂಗವನು, ಪೂಜಯೇತ್=ಪೂಜಿಸುವುದು. ಪರಮೇಶಾನೇ=ಪರಮೇಶ್ವರನು, ಪೂಜಿತೇ ಸತಿ=ಪೂಜಿಸಲುಪಡಲಿಕೆಯಾಗಿ, ಸರ್ವದೇವತಾಃ=ಸಮಸ್ತದೇವತೆಗಳು, ಪೂಜಿತಾಃ=ಪೂಜಿಸಲುಪಟ್ಟ ಅವರೆ. ||೯||

**ಗ್ರಂಥ||** **ಸದಾ ಶಿವಾರ್ಚನೋಪಾಯಸಾಮಗ್ರೀವ್ಯಗ್ರಮಾನಸಃ |**
**ಶಿವಯೋಗರತೋ ಯೋಗೀ ಮುಚ್ಯತೇ ನಾತ್ರ ಸಂಶಯಃ ||**

**ಟೀಕು||** ಸದಾ=ಆವಾಗವು, ಶಿವಾರ್ಚನೋಪಾಯ=ಶಿವಪೂಜಕರಿಗೆ ಉಪಾಯವಾದ, ಸಾಮಗ್ರೀ ವ್ಯಗ್ರಮಾನಸಃ=ಸಾಧನಸಾಮಗ್ರಿಸಂಪಾದನೆಯಲ್ಲಿ ತತ್ಪರವಾದ ಮನಸ್ಸನುಳ್ಳ, ಶಿವಯೋಗ ರತಃ=ಶಿವಯೋಗದಲ್ಲಿ ಪ್ರೀತಿಯುಳ್ಳ, ಯೋಗೀ=ಯೋಗೀಶ್ವರನು, ಮುಚ್ಯತೇ=ಮಲಮಾಯಾದಿ ಪಾಶಂಗಳಿಂದೆ ಬಿಡಲುಪಡುತ್ತಿರ್ದ್ದಪನು. ಅತ್ರ=ಇಲ್ಲಿ, ಸಂಶಯೋ ನ=ಸಂದೇಹವಿಲ್ಲ. ||೧೦||

**ಸೂತ್ರ||** ಬಳಿಕ "ನ ಕ್ರಿಯಾರಹಿತಂ ಜ್ಞಾನಂ ನ ಜ್ಞಾನರಹಿತಾ ಕ್ರಿಯಾ|
ಅಪಶ್ಯನ್ ಅಂಧಕೋ ದಗ್ಧೋऽಗಚ್ಛನ್ ಪಂಗುಶ್ಚ ದಹ್ಯತೇ"|| ಯೆಂಬ ಶಿವರಹಸ್ಯಾರ್ಥವನು ಸೂತ್ರದ್ವಯದಿಂದೆ ಪ್ರಕಟಿಸುತ್ತಿರ್ದ್ದಪಂ.

**ಗ್ರಂಥ||** **ಅಂಧಪಂಗುವದನ್ಯೋನ್ಯಸಾಪೇಕ್ಷೇ ಜ್ಞಾನಕರ್ಮಣೋಃ |**
**ಫಲೋತ್ಪತ್ತೌ ವಿರಕ್ತಸ್ಯ ತಸ್ಮಾತ್ತ ದ್ದ್ವಯಮಾಚರೇತ್ ||**

**ಟೀಕು||** ಜ್ಞಾನಕರ್ಮಣೋಃ=ಜ್ಞಾನಕ್ರೀಯಿಗಳಿಗೆ, ಅಂಧಪಂಗುವತ್=ಅಂಧಕ ಪೆಳವನೋಪಾದಿಯಲ್ಲಿ, ಅನ್ಯೋನ್ಯಸಾಪೇಕ್ಷೇಸತಿ=ಅನ್ಯೋನ್ಯ ಬಯಕೆಯುಂಟಾಗಲಿಕೆಯಾಗಿ, ತತ್ ದ್ವಯಂ=ಆ ಜ್ಞಾನ ಕ್ರೀಯೆರಡನು, ತಸ್ಮಾತ್=ಅದು ಕಾರಣವಾಗಿ, ಫಲೋತ್ಪತ್ತೌ=ಫಲೋತ್ಪತ್ತಿಯಲ್ಲಿ, ವಿರಕ್ತಸ್ಯ ತು=ವಿರಕ್ತನಾಯಿತ್ತಾದಡೆಯು, ಆಚರೇತ್=ಆಚರಿಸುವುದು. ||೧೧||

**ಗ್ರಂಥ||** **ಜ್ಞಾನೇ ಸಿದ್ಧೇऽಪಿ ವಿದುಷಾಂ ಕರ್ಮಾಪಿ ವಿನಿಯುಜ್ಯತೇ |**
**ಫಲಾಭಿಸಂಧಿರಹಿತಂ ತಸ್ಮಾತ್ಕರ್ಮ ನ ಸಂತ್ಯಜೇತ್ ||**

**ಟೀಕು||** ವಿದುಷಾಂ=ಜ್ಞಾನಿಗಳಿಗೆ, ಜ್ಞಾನೇ ಸಿದ್ಧೇऽಪಿ=ಜ್ಞಾನವು ಸಿದ್ಧವಾಯಿತ್ತಾದಡೆಯು ಕರ್ಮ=ಕ್ರೀಯು, ವಿನಿಯುಜ್ಯತೇ=ಯುಕ್ತವಾಗುತ್ತಿರ್ದ್ದಪುದು. ತಸ್ಮಾತ್=ಅದು ಕಾರಣವಾಗಿ, ಫಲಾಭಿಸಂಧಿರಹಿತಂ=ಫಲಾಪೇಕ್ಷೆಯಿಲ್ಲದೆಯಿರ್ದ್ದ, ಕರ್ಮಾಃಅಪಿ=ನಿಷ್ಕಾಮ ಕರ್ಮಾನುಷ್ಠಾನವನಾಯಿತ್ತಾದೊಡೆ, ನ ಸಂತ್ಯಜೇತ್=ಬಿಡಲಾಗದು.

**ತಾತ್ಪರ್ಯ||** "ಜ್ಞಾನಂ ಪ್ರಧಾನಂ ನ ತು ಕರ್ಮಹೀನಂ
ಕರ್ಮಪ್ರಧಾನಂ ನ ತು ಚಿದ್ವಿಹೀನಮ್ |
ತಸಾದ್ದ್ವಯೋರೇವ ಭವೇತ್ಪ್ರಸಿದ್ಧಿಃ
ನ ಹ್ಯೇಕಪಕ್ಷೋ ವಿಹಗಃ ಪ್ರಯಾತಿ"|| ಯೆಂಬಭಿಯುಕ್ತವಾಕ್ಯವುಂಟಾಗಿ ಜ್ಞಾನಕ್ರೀಯೆರಡು ಬೇಕೆಂಬುದರ್ಥ. ||೧೨||

**ಸೂತ್ರ||** ಬಳಿಕ ಆಚಾರವನು ವಿಶೇಷಿಸಿ ಜ್ಞಾನಕ್ರಿಯಾಚಾರವನು ದೇಹಾವಸಾನಪರಿಯಂತರವಾಚರಿಸುವದೆಂದು ಸೂತ್ರದ್ವಯದಿಂದೆ ಹೇಳಿ ಕ್ರಿಯಾಗಮಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಆಚಾರ ಏವ ಸರ್ವೇಷಾಮಲಂಕಾರಾಯ ಕಲ್ಪ್ಯತೇ |**
**ಆಚಾರಹೀನಃ ಪುರುಷೋ ಲೋಕೇ ಭವತಿ ನಿಂದಿತಃ ||**

**ಟೀಕು||** ಆಚಾರ ಏವ=ನಿಗಮಾಗಮೋಕ್ತ ಸತ್ಕ್ರಿಯಾಚಾರವೆ, ಸರ್ವೇಷಾಂ=ಸಮಸ್ತರಿಗೂ,

ಅಲಂಕಾರಾಯ=ಅಲಂಕಾರಕ್ಕೋಸುಗ, ಕಲ್ಪ್ಯತೇ=ಸಮರ್ಥವಾಗುತ್ತಿರ್ದ್ದಪುದು. ಆಚಾರಹೀನಃ ಪುರುಷಃ=ಆಚಾರಹೀನವಾದ ಪುರುಷನು, ಲೋಕೇ=ಲೋಕದಲ್ಲಿ, ನಿಂದಿತಃ=ನಿಂದಿಸಲುಪಟ್ಟ ಆತನು, ಭವತಿ=ಆಗುತ್ತಿರ್ದ್ದಪನು. ॥೧೩॥

ಗ್ರಂಥ॥ **ಜ್ಞಾನೇನಾಚಾರಯುಕ್ತೇನ ಪ್ರಸೀದತಿ ಮಹೇಶ್ವರಃ ।**
**ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹಪಾತನಮ್ ॥**

**ಟೀಕು॥** ಆಚಾರಯುಕ್ತೇನ=ಸತ್ಕ್ರಿಯಾಚಾರದೊಡನೆ ಕೂಡಿರ್ದ್ದ, ಜ್ಞಾನೇನ=ಜ್ಞಾನದಿಂದೆ, ಮಹೇಶ್ವರಃ=ಪರಮೇಶ್ವರನು, ಪ್ರಸೀದತಿ=ಪ್ರಸನ್ನನಾಗುತ್ತಿರ್ದ್ದಪನು. ತಸ್ಮಾತ್=ಅದುಕಾರಣವಾಗಿ, ಜ್ಞಾನೀ=ಜ್ಞಾನಿಯು, ಆದೇಹಪಾತನಂ=ದೇಹಾವಸಾನಪರಿಯಂತವಾಗಿ, ಆಚಾರವಾನ್=ಸತ್ಕ್ರಿಯಾಚಾರವುಳ್ಳಾತನು, ಭವೇತ್=ಆಗುವದು. ॥೧೪॥

**ಇತಿ ಕ್ರಿಯಾಗಮಸ್ಥಲಮ್**

## ೧೧. ಮಾಹೇಶ್ವರಸ್ಥಲೇ ಭಾವಾಗಮಸ್ಥಲಮ್

**ಸೂತ್ರ॥** ಬಳಿಕ "ಯಂ ಯಥೋಪಾಸತೇ ತದೇವ ಭವತಿ। ಯದ್ಭಾವಂ ತದ್ಭವತಿ।
"ಯಥಾಕಾರೀ ತಥಾಚಾರೀ ತಥಾ ಭವತಿ"॥ ಯೆಂಬ ಬೃಹದಾರಣ್ಯಕ ಶ್ರುತ್ಯರ್ಥವನು, "ಶಿವಭಾವಾನುಸಂಧಾನಾತ್ ಶಿವೋ ಭಾವೇ ಪ್ರಕಾಶತೇ"॥ ಯೆಂಬ ಯೋಗಜಾಗಮಾರ್ಥವನು ಪ್ರಕಟಿಸುತ್ತ ಆ ನಿಷ್ಕಾಮಕರ್ಮಾನುಷ್ಠಾನವುಳ್ಳ ವಿರಕ್ತನ ಭಾವ ಚಿಹ್ನವೆ ಭಾವಾಗಮವೆಂದು ಹೇಳುತ್ತಿರ್ದ್ದಪಂ.

ಗ್ರಂಥ॥ **ಭಾವಚಿಹ್ನಾನಿ ವಿದುಷೋ ಯಾನಿ ಸಂತಿ ವಿರಾಗಿಣಃ ।**
**ತಾನಿ ಭಾವಾಗಮತ್ವೇನ ವರ್ತಂತೇ ಸರ್ವದೇಹಿನಾಮ್ ॥**

**ಟೀಕು॥** ವಿರಾಗಿಣಃ=ಆ ಸತ್ಕ್ರಿಯಾಫಲದಲ್ಲಿ ವಿರಕ್ತನಾಗಿರ್ದ್ದ, ವಿದುಷಃ=ಜ್ಞಾನಿಯ, ಯಾನಿ ಭಾವಚಿಹ್ನಾನಿ=ಆವವು ಕೆಲವು ಭಾವಚಿಹ್ನಂಗಳು, ಸಂತಿ=ಉಂಟು, ತಾನಿ=ಅವು, ಸರ್ವದೇಹಿನಾಂ=ಸಮಸ್ತದೇಹಿಗಳಿಗೆ, ಭಾವಾಗಮತ್ವೇನ=ಭಾವಾಗಮವಹತನದಿಂದೆ, ವರ್ತಂತೇ=ವರ್ತಿಸುತ್ತಿರ್ದ್ದಪವು. ॥೧೫॥

**ಸೂತ್ರ॥** ಬಳಿಕ ಪೂರ್ವೋಕ್ತ ಜ್ಞಾನಾಚಾರದದೆಸೆಯಿಂದೆಯು ಭಾವವೆ ವಿಶೇಷವೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಶಿವೋಽಹಮಿತಿ ಭಾವೋಽಪಿ ಶಿವತಾಪತ್ತಿಕಾರಣಮ್ ।
ನ ಜ್ಞಾನಮಾತ್ರಂ ನಾಚಾರೋ ಭಾವಯುಕ್ತಃ ಶಿವೋ ಭವೇತ್ ॥

**ಟೀಕು॥** ಶಿವೋಽಹಮಿತಿ=ಶಿವನೆ ನಾನೆಂಬ, ಭಾವೋಽಪಿ=ಭಾವವಾಯಿತ್ತಾದೊಡೆ, ಶಿವತಾಪತ್ತಿಕಾರಣಂ=ಶಿವತ್ವವನು ಎಯ್ದುವುದಕ್ಕೆ ಕಾರಣವು; ಜ್ಞಾನ ಮಾತ್ರಂ=ಬರಿಯ ಜ್ಞಾನವೆ ನ=ಶಿವತ್ವವನು ಎಯ್ದುವದಕ್ಕೆ ಕಾರಣವಲ್ಲ; ಆಚಾರಃ=ಬರಿಯ ಸತ್ಕ್ರಿಯಾಚಾರವು, ನ=ಶಿವತ್ವವನು ಎಯ್ದುವದಕ್ಕೆ ಕಾರಣವಲ್ಲ; ಕಿಂ ತು=ಮತ್ತೇನಯಾಯೆಂದಡೆ, ಭಾವಯುಕ್ತಃ=ಭಾವದೊಡನೆ ಕೂಡಿದಾತನೆ, ಶಿವಃ= ಶಿವಸ್ವರೂಪನು, ಭವೇತ್=ಅಹನು. ॥೧೬॥

ಗ್ರಂಥ॥ ಜ್ಞಾನಂ ವಸ್ತುಪರಿಚ್ಛೇದೋ ಧ್ಯಾನಂ ತದ್ಭಾವಕಾರಣಮ್ ।
ತಸ್ಮಾದ್ ಜ್ಞಾತೇ ಮಹಾದೇವೇ ಧ್ಯಾನಯುಕ್ತೋ ಭವೇತ್ಸುಧೀಃ ॥

**ಟೀಕು॥** ವಸ್ತುಪರಿಚ್ಛೇದಃ=ವಸ್ತುಸ್ವರೂಪವೆ, ಜ್ಞಾನಂ=ಜ್ಞಾನವು. ತದ್ಭಾವಕಾರಣಂ=ಆ ಜ್ಞಾನಸ್ವರೂಪಿಗೆ ಕಾರಣವೀಗ, ಧ್ಯಾನಂ=ಧ್ಯಾನವು. ತಸ್ಮಾತ್=ಅದು ಕಾರಣವಾಗಿ, ಮಹಾದೇವೇ=ಪರಮೇಶ್ವರನು, ಜ್ಞಾತೇಸತಿ=ಅರಿಯಲುಪಡಲಿಕೆಯಾಗಿ, ಸುಧೀಃ=ಬುದ್ಧಿಯುಳ್ಳಾತನು, ಧ್ಯಾನಯುಕ್ತಃ=ಭಾವದೊಡನೆ ಕೂಡಲುಪಟ್ಟ ಆತನು, ಭವೇತ್=ಅಹನು. ॥೧೭॥

ಗ್ರಂಥ॥ ಅಂತರ್ಬಹಿಶ್ಚ ಸರ್ವತ್ರ ಪರಿಪೂರ್ಣಂ ಮಹೇಶ್ವರಮ್ ।
ಭಾವಯೇತ್ಪರಮಾನಂದಲಬ್ಧಯೇ ಪಂಡಿತೋತ್ತಮಃ ॥

**ಟೀಕು॥** ಅಂತರ್ಬಹಿಶ್ಚ=ಒಳಗೆ ಹೊರಗೆ, ಚ ಸರ್ವತ್ರ=ಎಲ್ಲಾಕಡೆಯಲ್ಲಿ, ಪರಿಪೂರ್ಣಂ= ವ್ಯಾಪಕನಾಗಿರ್ದ್ದ, ಮಹೇಶ್ವರಂ=ಪರಮೇಶ್ವರನನು, ಪರಮಾನಂದಲಬ್ಧಯೇ=ಪರಮಾನಂದವನು ಪಡೆಯಲೋಸುಗವಾಗಿ, ಪಂಡಿತೋತ್ತಮಃ=ಬಲ್ಲಾತನು, ಭಾವಯೇತ್=ಭಾವಿಸುವುದು. ॥೧೮॥

**ಸೂತ್ರ॥** ಬಳಿಕ ಆ ಕ್ರಿಯಾಪೂಜೆಯು ಭಾವವಿರಹಿತವಾದಡೆ ವ್ಯರ್ಥವೆಂದು ದೃಷ್ಟಾಂತಪೂರ್ವಕವಾಗಿ ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಅರ್ಥಹೀನಾ ಯಥಾ ವಾಣೀ ಪತಿಹೀನಾ ಯಥಾ ಸತೀ ।
ಶ್ರುತಿಹೀನಾ ಯಥಾ ಬುದ್ಧಿರ್ಭಾವಹೀನಾ ತಥಾ ಕ್ರಿಯಾ ॥

**ಟೀಕು॥** ಅರ್ಥಹೀನಾ=ಅರ್ಥವಿಲ್ಲದೆಯಿದ್ದ, ವಾಣೀ=ವಾಕ್ಯವು, ಯಥಾ=ಹೇಗೆ; ಪತಿ ಹೀನಾ=ಪುರುಷನಿಲ್ಲದ, ಸತೀ=ಸ್ತ್ರೀಯು, ಯಥಾ=ಹೇಗೆ, ಶ್ರುತಿಹೀನಾ=ಶಾಸ್ತ್ರವಿಲ್ಲದ, ಬುದ್ಧಿಃ=ಬುದ್ಧಿಯು,

ಯಥಾ=ಹೇಗೆ, ಭಾವಹೀನಾ=ಭಾವವಿಲ್ಲದ, ಕ್ರಿಯಾ=ಕ್ರೀಯು, ತಥಾ=ಹಾಗೆಯೇ ವ್ಯರ್ಥವು.॥೧೯॥

ಗ್ರಂಥ॥ **ಚಕ್ಷುರ್ಹೀನೋ ಯಥಾ ರೂಪಂ ನ ಕಿಂಚಿದ್ವೀಕ್ಷಿತುಂ ಕ್ಷಮಃ ।**
**ಭಾವಹೀನಸ್ತಥಾ ಯೋಗೀ ನ ಶಿವಂ ದ್ರಷ್ಟುಮೀಶ್ವರಃ ॥**

**ಟೀಕು॥** ಚಕ್ಷುರ್ಹೀನಃ=ನಯನವಿಲ್ಲದಾತನು, ಕಿಂಚಿತ್ ರೂಪಂ=ಒಪ್ಪಚ್ಚಿ ರೂಪವನು ವೀಕ್ಷಿತುಂ=ನೋಡಲು, ಯಥಾ=ಹೇಗೆ, ನ ಕ್ಷಮಃ=ಸಮರ್ಥನಲ್ಲ; ತಥಾ=ಹಾಗೆ, ಭಾವಹೀನಃ= ಭಾವವಿಲ್ಲದ, ಯೋಗೀ=ಯೋಗಿಯು, ಶಿವಂ=ಶಿವನನು, ದ್ರಷ್ಟುಂ=ನೋಡಲು, ನೇಶ್ವರಃ=ಸಮರ್ಥ ನಲ್ಲ. ॥೨೦॥

ಗ್ರಂಥ॥ **ಭಾವಶುದ್ಧೇನ ಮನಸಾ ಪೂಜಯೇತ್ಪರಮೇಷ್ಠಿನಮ್ ।**
**ಭಾವಹೀನಾಂ ನ ಗೃಹ್ಣಾತಿ ಪೂಜಾಂ ಸುಮಹತೀಮಪಿ ॥**

**ಟೀಕು॥** ಪರಮೇಷ್ಠಿನಂ=ಪರಮೇಶ್ವರನನು, ಭಾವಶುದ್ಧೇನ=ಭಾವದಿಂದೆ ಶುದ್ಧವಾದ, ಮನಸಾ=ಮನಸ್ಸಿನಿಂದೆ, ಪೂಜಯೇತ್=ಪೂಜಿಸುವುದು. ಭಾವಹೀನಾಂ=ಭಾವವಿಲ್ಲದೆಯಿದ್ದ, ಮಹತೀಂ ಪೂಜಾಮಪಿ=ಮಹಾಪೂಜೆಯುನಾಯಿತ್ತಾದೊಡೆಯು, ಸಃ=ಆ ಪರಮೇಶ್ವರನು, ನ ಗೃಹ್ಣಾತಿ=ಸ್ವೀಕರಿಸುತ್ತಿರನು. ॥೨೧॥

**ಸೂತ್ರ॥** ಬಳಿಕ "ಭ್ರಮದ್ಭ್ರಮರಚಿಂತಾಯಾಂ ಕೀಟೋಽಪಿ ಭ್ರಮರಾಯತೇ।
ಶಿವಚಿಂತಾಸಮಾಕ್ರಾಂತಃ ಶಿವರೂಪೀ ಭವೇದ್ಧ್ರುವಮ್"॥ ಯೆಂಬ ವೀರತಂತ್ರಾರ್ಥವನು ಪ್ರಕಟಿಸುತ್ತಿರ್ದಪಂ.

ಗ್ರಂಥ॥ **ನೈರಂತರ್ಯೇಣ ಸಂಪನ್ನೇ ಭಾವೇ ಧ್ಯಾತುಂ ಶಿವಂ ಪ್ರತಿ**
**ತದ್ಭಾವೋ ಜಾಯತೇ ಯದ್ವತ್ ಕ್ರಿಮೇಃ ಕೀಟಸ್ಯ ಚಿಂತನಾತ್**

**ಟೀಕು॥** ಭಾವೇ=ಭಾವವು, ಶಿವಂ ಪ್ರತಿ=ಶಿವನನು ಕೂರ್ತು, ನೈರಂತರ್ಯೇಣ=ಎಡದೆರಹಿ ಲ್ಲದಿಹುದರಿಂದೆ, ಧ್ಯಾತುಂ=ಧ್ಯಾನವನು ಮಾಡಲು, ಸಂಪನ್ನೇ ಸತಿ=ಸಂಪನ್ನವಾಗಲಾಗಿ, ತದ್ಭಾವಃ= ಆ ಶಿವಭಾವವೆ, ಜಾಯತೇ=ಆಗುತ್ತಿರ್ದಪುದು. ಕೀಟಸ್ಯ ಚಿಂತನಾತ್=ಭ್ರಮರನ ಧ್ಯಾನದದೆಸೆಯಿಂದೆ, ಕ್ರಿಮೇಃ ಯದ್ವತ್=ಕ್ರಿಮಿಗೆ ಹೇಗೆ ಕೀಟತ್ವವಹುದು ಹಾಗೆಯೆ ಶಿವಭಾವನೆಯಿಂದೆ ಶಿವತತ್ತ್ವವಹುದೆಂಬುದರ್ಥ. ॥೨೨॥

**ಸೂತ್ರ॥** ಬಳಿಕ ಭಾವಾಗಮಸ್ಥಲವನು ಮುಗಿಯಿಸುತ್ತಿರ್ದಪಂ.

ಗ್ರಂಥ॥ **ನಿಷ್ಕಲಂಕಂ ನಿರಾಕಾರಂ ಪರಬ್ರಹ್ಮ ಶಿವಾಭಿಧಮ್ ।**
**ನಿರ್ಧ್ಯಾತುಮಸಮರ್ಥೋಽಪಿ ತದ್ವಿಭೂತಿಂ ವಿಭಾವಯೇತ್ ॥**

**ಟೀಕು॥** ನಿಷ್ಕಲಂಕಂ=ಕಳಂಕಿಲ್ಲದೆ, ನಿರಾಕಾರಂ=ನಿರಾಕಾರವಾಗಿದ್ದ, ಶಿವಾಭಿಧಂ=ಪರಮಶಿವನೆಂಬ ಹೆಸರುಳ್ಳ, ಪರಬ್ರಹ್ಮ=ಪರಬ್ರಹ್ಮವನು, ನಿರ್ಧ್ಯಾತುಂ=ಧ್ಯಾನವನು ಮಾಡಲು, ಅಸಮರ್ಥೋಽಪಿ=ಸಮರ್ಥನಲ್ಲದೆಯಿದ್ದಾತನಾಯಿತ್ತಾದೊಡೆ, ತದ್ವಿಭೂತಿಂ=ಆ ಪರಬ್ರಹ್ಮದ ಸಚ್ಚಿದಾನಂದಾತ್ಮಕ ನಿತ್ಯಪರಿಪೂರ್ಣತೆಯಾದೈಶ್ವರ್ಯವನು, ವಿಭಾವಯೇತ್=ವಿಶೇಷವಾಗಿ ಭಾವಿಸುವುದು. ॥೨೩॥

## ಇತಿ ಭಾವಾಗಮಸ್ಥಲಮ್

## ೧೨. ಮಾಹೇಶ್ವರಸ್ಥಲೇ ಜ್ಞಾನಾಗಮಸ್ಥಲಮ್

**ಸೂತ್ರ॥** ಬಳಿಕ "ಜ್ಞಾನೀ ವಿಜ್ಞಾನತತ್ಪರಃ" ಯೆಂಬ ಅಮೃತಬಿಂದೂಪನಿಷದರ್ಥವನು, "ಜ್ಞಾನಮೇತತ್ ಶೈವಸಂಸ್ಥಮ್" ಯೆಂಬ ಪತಿಪರಾಖ್ಯತಂತ್ರಾರ್ಥವನು ಪ್ರಕಟಿಸುತ್ತ ಆ ಭಾವಾಗಮಸಂಪನ್ನನಾದ ಪರಮಯೋಗಿಯ ಜ್ಞಾನಚಿಹ್ನವೆ ಜ್ಞಾನಾಗಮವೆಂದು ಹೇಳುತ್ತಿರ್ದಪಂ.

ಗ್ರಂಥ॥ **ಪರಸ್ಯ ಜ್ಞಾನಚಿಹ್ನಾನಿ ಯಾನಿ ಸಂತಿ ಶರೀರಿಣಾಮ್ ।**
**ತಾನಿ ಜ್ಞಾನಾಗಮತ್ವೇನ ಪ್ರವರ್ತಂತೇ ವಿಮುಕ್ತಯೇ ॥**

**ಟೀಕು॥** ಪರಸ್ಯ=ಆ ಭಾವಯೋಗವುಳ್ಳ ಪರಮಶಿವಯೋಗೀಶ್ವರನ, ಯಾನಿ ಜ್ಞಾನಚಿಹ್ನಾನಿ= ಆವು ಕೆಲವು ಜ್ಞಾನಚಿಹ್ನಂಗಳು, ಸಂತಿ=ಉಂಟು, ತಾನಿ=ಅವು, ಶರೀರಿಣಾಂ=ದೇಹಿಗಳ, ವಿಮುಕ್ತಯೇ=ಮೋಕ್ಷಕ್ಕೋಸುಗವಾಗಿ, ಜ್ಞಾನಾಗಮತ್ವೇನ=ಜ್ಞಾನಾಗಮವವಹತನದಿಂದೆ, ಪ್ರವರ್ತಂತೇ=ಪ್ರವರ್ತಿಸುತ್ತಿರ್ದಪವು. ॥೨೪॥

**ಸೂತ್ರ॥** ಬಳಿಕ "ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ। ಏವಮೇವಾಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ"॥ ಯೆಂಬ ಶ್ರುತ್ಯರ್ಥವನು ಪ್ರಕಟಿಸಿ, "ಜ್ಞಾತ್ವಾ ದೇವಂ ಮೃತ್ಯುಪಾಶಾನ್ ಭಿನತ್ತಿ" ಯೆಂಬ ಪೂರ್ವೋಕ್ತವಾದ ಕೇವಲ ಭಾವಕರ್ಮಂಗಳಿಂದೆ ಫಲವಿಲ್ಲವೆಂದು ಹೇಳಿ ಜ್ಞಾನವನು ಪಂಚಚಸೂತ್ರಂಗಳಿಂದೆ ವಿಶೇಷಿಸುತ್ತಿರ್ದಪಂ.

ಗ್ರಂಥ॥ **ಭಾವೇನ ಕಿಂ ಫಲಂ ಪುಂಸಾಂ ಕರ್ಮಣಾ ವಾ ಕಿಮಿಷ್ಯತೇ ।**
**ಭಾವಕರ್ಮಸಮಾಯುಕ್ತಂ ಜ್ಞಾನಮೇವ ವಿಮುಕ್ತಿದಮ್ ॥**

**ಟೀಕು||** ಪುಂಸಾಂ=ಪುರುಷರಿಗೆ, ಭಾವೇನ=ಬರಿಯ ಭಾವಾಗಮದಿಂದೆ, ಕಿಂ ಫಲಂ= ಏನು ಫಲವು? ಏನೂ ಫಲವಿಲ್ಲವೆಂಬುದರ್ಥ. ಕರ್ಮಣಾ ವಾ=ಬರಿಯ ಕ್ರಿಯಾಗಮದಿಂದಲಾಯಿತ್ತಾದೊಡೊಯು, ಕಿಂ=ಏನು, ಇಷ್ಯತೇ=ಇಚ್ಛೈಸಲುಪಡುತ್ತಿರ್ದ್ದಪುದು? ಏನೂ ನಿಚ್ಛೈಸಲುಪಡಲಿಲ್ಲವೆಂಬುದರ್ಥ. ಅತಃ=ಇದು ಕಾರಣವಾಗಿ, ಭಾವಕರ್ಮಸಮಾಯುಕ್ತಂ=ಭಾವಕರ್ಮಗಳೊಡನೆ ಕೂಡಿರ್ದ್ದ, ಜ್ಞಾನಮೇವ=ಜ್ಞಾನವೇ, ವಿಮುಕ್ತಿದಂ=ಪರಮೋಕ್ಷವನು ಕೊಡುತ್ತಿರ್ದ್ದ ಅದು. ||೨೫||

**ಗ್ರಂಥ||** **ಕೇವಲಂ ಕರ್ಮಮಾತ್ರೇಣ ಜನ್ಮಕೋಟಿಶತೈರಪಿ ।**
**ನಾತ್ಮಾನಾಂ ಜಾಯತೇ ಮುಕ್ತಿಃ ಜ್ಞಾನಂ ಮುಕ್ತೇರ್ಹಿ ಕಾರಣಮ್ ॥**

**ಟೀಕು||** ಕೇವಲಂ ಕರ್ಮಮಾತ್ರೇಣ=ಬರಿಯ ಕರ್ಮಮಾತ್ರದಿಂದವೆ, ಜನ್ಮಕೋಟಿಶತೈರಪಿ= ಶತಕೋಟಿ ಜನ್ಮಂಗಳಿಂದಲಾಯಿತ್ತಾದೊಡೆಯು, ಆತ್ಮಾನಾಂ=ಜೀವರಿಗೆ, ಮುಕ್ತಿಃ=ಮೋಕ್ಷವು, ನ ಜಾಯತೇ=ಹುಟ್ಟುತ್ತಿರದು. ಜ್ಞಾನಂ=ಜ್ಞಾನವು, ಮುಕ್ತೇಃ=ಪರಮುಕ್ತಿಗೆ, ಕಾರಣಂ=ಕಾರಣವು. ಹಿ=ಪ್ರಸಿದ್ಧವು. ||೨೬||

**ಗ್ರಂಥ||** **ಜ್ಞಾನಹೀನಂ ಸದಾ ಕರ್ಮ ಪುಂಸಾಂ ಸಂಸಾರಕಾರಣಮ್ ।**
**ತದೇವ ಜ್ಞಾನಯೋಗೇನ ಸಂಸಾರವಿನಿವರ್ತಕಮ್ ॥**

**ಟೀಕು||** ಜ್ಞಾನಹೀನಂ=ಜ್ಞಾನವಿಲ್ಲದ, ಕರ್ಮ=ಕ್ರೀಯು, ಪುಂಸಾಂ=ಪುರುಷರಿಗೆ, ಸದಾ=ಎಲ್ಲಾ ಕಾಲದಲ್ಲಿಯು, ಸಂಸಾರಕಾರಣಂ=ಸಂಸಾರಕ್ಕೆ ಕಾರಣವು. ತದೇವ=ಆ ಕರ್ಮವೆ, ಜ್ಞಾನಯೋಗೇನ= ಜ್ಞಾನಯೋಗದಿಂದೆ, ಸಂಸಾರವಿನಿವರ್ತಕಂ=ಸಂಸಾರವನು ತೊಲಗಿಸುತ್ತಿರ್ದ್ದ ಅದು. ||೨೭||

**ಗ್ರಂಥ||** **ಫಲಂ ಕ್ರಿಯಾವತಾಂ ಪುಂಸಾಂ ಸ್ವರ್ಗಾದ್ಯಂ ನಶ್ವರಂ ಯತಃ ।**
**ತಸ್ಮಾತ್ ಸ್ಥಾಯಿಫಲಪ್ರಾಪ್ತ್ಯೈ ಜ್ಞಾನಮೇವ ಸಮಭ್ಯಸೇತ್ ॥**

**ಟೀಕು||** ಕ್ರಿಯಾವತಾಂ=ಕ್ರೀಯುಳ್ಳ, ಪುಂಸಾಂ=ಪುರುಷರಿಗೆ, ಸ್ವರ್ಗಾದ್ಯಂ=ಸ್ವರ್ಗಭೋಗ ಮೊದಲಾಗುಳ್ಳ, ಫಲಂ=ಫಲವು, ಯತಃ=ಆವುದಾನೊಂದು ಕಾರಣವಾಗಿ, ನಶ್ವರಂ=ಕೆಡುವ ಶೀಲವುಳ್ಳ ಅದು; ತಸ್ಮಾತ್=ಅದು ಕಾರಣವಾಗಿ, ಸ್ಥಾಯಿಫಲಪ್ರಾಪ್ತ್ಯೈ=ಸ್ಥಿರವಾದ ಮೋಕ್ಷಫಲಪ್ರಾಪ್ತಿಗೋಸುಗ, ಜ್ಞಾನಮೇವ=ಜ್ಞಾನವನೆ, ಸಮಭ್ಯಸೇತ್=ಅಭ್ಯಾಸವನು ಮಾಡುವುದು. ||೨೮||

**ಗ್ರಂಥ||** **ಶಾಸ್ತ್ರಾಭ್ಯಾಸಾದಿ ಯತ್ನೇನ ಸದ್ಗುರೋರುಪದೇಶತಃ ।**
**ಜ್ಞಾನಮೇವ ಸಮಭ್ಯಸ್ಯೇತ್ಕಿಮನ್ಯೇನ ಪ್ರಯೋಜನಮ್ ॥**

**ಟೀಕು॥** ಶಾಸ್ತ್ರಾಭ್ಯಾಸಾದಿಯತ್ನೇನ=ನಿಗಮಾಗಮಶಿರಸ್ಸಿದ್ಧವಾದ ವೀರಶೈವಶಾಸ್ತ್ರಾಭ್ಯಾಸವೆ ಮೊದಲಾಗುಳ್ಳ ಪ್ರಯತ್ನದಿಂದೆ, ಸದ್ಗುರೋಃ=ಸದ್ಗುರುಸ್ವಾಮಿಯ, ಉಪದೇಶತಃ=ಅನುಗ್ರಹದಿಂದೆಯು, ಜ್ಞಾನಮೇವ=ಶಿವಜ್ಞಾನವನೆ, ಸಮಭ್ಯಸ್ಯೇತ್=ಚೆನ್ನಾಗಿ ಅಭ್ಯಾಸವ ಮಾಡುವುದು. ಅನ್ಯೇನ=ಉಳಿದುದರಿಂದೆ, ಕಿಂ ಪ್ರಯೋಜನಂ=ಏನು ಪ್ರಯೋಜನವು? ಏನೂ ಪ್ರಯೋಜನವಿಲ್ಲವೆಂಬುದರ್ಥ. ॥೨೯॥

**ಸೂತ್ರ॥** ಬಳಿಕ ಆ ಶಿವಜ್ಞಾನಸ್ವರೂಪವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಜ್ಞಾನಂ ಪರಶಿವಾದ್ವೈತಪರಿಪಾಕವಿನಿಶ್ಚಯಃ ।**
**ಯೇನ ಸಂಸಾರಸಂಬಂಧವಿನಿವೃತ್ತಿರ್ಭವೇತ್ಸತಾಮ್ ॥**

**ಟೀಕು॥** ಪರಶಿವಾದ್ವೈತ ಪರಿಪಾಕವಿನಿಶ್ಚಯಃ=ಪರಮಶಿವಾದ್ವೈತದಲ್ಲಿಯ ಪರಿಪಕ್ವವಾದ ನಿಶ್ಚಯವೆ, ಜ್ಞಾನಂ=ಜ್ಞಾನವು. ಯೇನ=ಆವುದಾನೊಂದು ಜ್ಞಾನದಿಂದೆ, ಸತಾಂ=ಸತ್ಪುರುಷರಿಗೆ, ಸಂಸಾರಸಂಬಂಧವಿನಿವೃತ್ತಿಃ=ಸಂಸಾರಬಾಧೆಯ ತೊಲಗಿಕೆಯು, ಭವೇತ್=ಅಹುದು. ॥೩೦॥

ಗ್ರಂಥ॥ **ಶಿವಾತ್ಮಕಮಿದಂ ಸರ್ವಂ ಶಿವಾದನ್ಯನ್ನ ವಿದ್ಯತೇ ।**
**ಶಿವೋಽಹಮಿತಿ ಯಾ ಬುದ್ಧಿಸ್ತದೇವ ಜ್ಞಾನಮುತ್ತಮಮ್ ॥**

**ಟೀಕು॥** ಇದಂ ಸರ್ವಂ=ಈ ಸಮಸ್ತಜಗಜ್ಜಾಲವು, ಶಿವಾತ್ಮಕಂ=ಶಿವಸ್ವರೂಪವಾಗಿರ್ದ್ದ ಅದು, ಶಿವಾದನ್ಯಂ=ಶಿವನದೆಸೆಯಿಂದೆ ಭಿನ್ನವಾದ ವಸ್ತುವು, ನ ವಿದ್ಯತೇ=ಉಂಟಾಗುತ್ತಿರದು. ಅತಃ=ಇದು ಕಾರಣವಾಗಿ, ಶಿವೋಽಹಮಿತಿ=ಶಿವನೆ ನಾನೆಂಬ, ಯಾ ಬುದ್ಧಿಃ=ಆವುದಾನೊಂದು ಬುದ್ಧಿಯುಂಟು, ತದೇವ=ಅದೆ, ಉತ್ತಮಂ ಜ್ಞಾನಂ=ಉತ್ತಮವಾದ ಜ್ಞಾನವು. ॥೩೧॥

**ಸೂತ್ರ॥** ಬಳಿಕ ಆ ಜ್ಞಾನಪ್ರಭಾವವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಅಂಧೋ ಯಥಾ ಪುರಃಸ್ಥಾನಿ ವಸ್ತೂನಿ ಚ ನ ಪಶ್ಯತಿ ।**
**ಜ್ಞಾನಹೀನಸ್ತಥಾ ದೇಹೀ ನಾತ್ಮಸ್ಥಂ ವೀಕ್ಷತೇ ಶಿವಮ್ ॥**

**ಟೀಕು॥** ಅಂಧಃ=ಅಂಧಕನು, ಪುರಸ್ಥಾನಿ=ಮುಂದೆಯಿರುತ್ತಿರ್ದ್ದ, ವಸ್ತೂನಿ ಚ=ವಸ್ತುಗಳನು, ಯಥಾ=ಹೇಗೆ, ನಪಶ್ಯತಿ=ಕಾಣುತ್ತಿರನು; ತಥಾ=ಹಾಗೆ, ಜ್ಞಾನಹೀನಃ=ಜ್ಞಾನ ಚಕ್ಷುಸ್ಸು ಇಲ್ಲದೆಯಿದ್ದ, ದೇಹೀ=ಜೀವನು, ಆತ್ಮಸ್ಥಂ=ತನ್ನಲ್ಲಿಯಿರುತ್ತಿರ್ದ್ದ, ಶಿವಂ=ಶಿವನನು, ನ ವೀಕ್ಷತೇ=ಕಾಣುತ್ತಿರನು.

ಗ್ರಂಥ॥ ಶಿವಸ್ಯ ದರ್ಶನಾತ್ಪುಂಸಾಂ ಜನ್ಮರೋಗನಿವರ್ತನಮ್ ।
ಶಿವದರ್ಶನಮಪ್ಯಾಹುಸ್ಸುಲಭಂ ಜ್ಞಾನಚಕ್ಷುಷಾಮ್ ॥

**ಟೀಕು॥** ಶಿವಸ್ಯ ದರ್ಶನಾತ್=ಶಿವನದರ್ಶನದದೆಸೆಯಿಂದೆ, ಪುಂಸಾಂ=ಪುರುಷರ, ಜನ್ಮ ರೋಗನಿವರ್ತನಂ=ಭವರೋಗದ ತೊಲಗಿಕೆಯು, ಭವೇತ್=ಅಹುದು. ಶಿವದರ್ಶನಮಪಿ=ಶಿವ ದರ್ಶನವಾಯಿತ್ತಾದೊಡೆ, ಜ್ಞಾನಚಕ್ಷುಷಾಂ=ಜ್ಞಾನದೃಷ್ಟಿಯುಳ್ಳ ಅವರಿಗೆ, ಸುಲಭಂ=ಸುಲಭನಾಗಿ, ಆಹುಃ=ಹೇಳುತ್ತಿರ್ದ್ದಪರು. ॥೩೩॥

**ಸೂತ್ರ॥** ಬಳಿಕ ಜ್ಞಾನಾಗಮಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ ದೀಪಂ ವಿನಾ ಯಥಾ ಗೇಹೇ ನಾಂಧಕಾರೋ ನಿವರ್ತತೇ ।
ಜ್ಞಾನಂ ವಿನಾ ತಥಾ ಚಿತ್ತೇ ಮೋಹೋಽಪಿ ನ ನಿವರ್ತತೇ ॥

**ಟೀಕು॥** ದೀಪಂ ವಿನಾ=ದೀಪವು ಹೊರತಾಗಿ, ಗೇಹೇ=ಗೃಹದಲ್ಲಿಯ, ಅಂಧಕಾರಃ=ಕತ್ತಲೆಯು, ಯಥಾ=ಹೇಗೆ, ನ ನಿವರ್ತತೇ=ತೊಲಗುತ್ತಿರದು; ತಥಾ=ಹಾಗೆಯೆ, ಜ್ಞಾನಂ ವಿನಾ=ಶಿವಜ್ಞಾನ ಹೊರತಾಗಿ, ಚಿತ್ತೇ=ಹೃದಯದಲ್ಲಿಯ, ಮೋಹೋಽಪಿ=ಅಜ್ಞಾನವಾಯಿತ್ತಾದೊಡೆ, ನ ನಿವರ್ತತೇ=ತೊಲಗುತ್ತಿರದು. ॥೩೪॥

### ಇತಿ ಜ್ಞಾನಾಗಮಸ್ಥಲಮ್

## ೧೩. ಮಾಹೇಶ್ವರಸ್ಥಲೇ ಸಕಾಯಸ್ಥಲಮ್

**ಸೂತ್ರ॥** ಬಳಿಕ "ಶರೀರಮಾದ್ಯಂ ಖಲು ಧರ್ಮಸಾಧನಮ್" ಯೆಂಬ ಶ್ರುತ್ಯರ್ಥವನು ಪ್ರಕಟಿಸುತ್ತ ಆ ಶಿವಜ್ಞಾನಸಂಪನ್ನನಾದ ಪರಮಶಿವಯೋಗೀಶ್ವರನ ಶರೀರಕ್ಕೆ ಆತ್ಮತ್ವವನು ಪ್ರತಿಪಾದಿಸುವುದರಿಂದೆ ಕ್ರಿಯೆ ಭಾವಜ್ಞಾನಕ್ಕೆ ಕಾಯವೆ ಕಾರಣವಾದುದರಿಂದೆ ಈ ಲೋಕ ಸಕಾಯವೆಂದು ಷಟ್‌ಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಪರಸ್ಯ ಯಾ ತನುರ್ಜ್ಞೇಯಾಽದೇಹಕರ್ಮಾಭಿಮಾನಿನಃ ।
ತಯಾ ಸಕಾಯೋ ಲೋಕೋಽಯಂ ತದಾತ್ಮತ್ವನಿರೂಪಣಾತ್ ॥

**ಟೀಕು॥** ಅದೇಹಕರ್ಮಾಭಿಮಾನಿನಃ=ದೇಹಕರ್ಮಾಭಿಮಾನವಿಲ್ಲದೆಯಿರ್ದ್ದ, ಪರಸ್ಯ=ಆ ಜ್ಞಾನಸಂಪನ್ನನಾದ ಪರಮಯೋಗೀಶ್ವರನ, ಯಾ ತನುಃ=ಆವುದಾನೊಂದು ದೇಹವು,

ಜ್ಞೇಯಾ=ಅರಿಯಲು ಯೋಗ್ಯವಾಗಿರ್ದ್ದ ಅದು, ತಯಾ=ಆ ದೇಹದಿಂದೆ, ತದಾತ್ಮತ್ವನಿರೂಪಣಾತ್=ಆ ದೇಹಕ್ಕೆ ಆತ್ಮತ್ವವನು ನಿರೂಪಿಸುವುದರದೆಸೆಯಿಂದೆಯು, ಅಯಂ ಲೋಕಃ=ಈ ಲೋಕವು, ಸಕಾಯಃ=ಕಾಯದೊಡನೆ ಕೂಡಿ ವರ್ತಿಸುತ್ತಿರ್ದ್ದ ಅದು. ||೩೫||

ಗ್ರಂಥ|| ಕಾಯಂ ವಿನಾ ಸಮಸ್ತಾನಾಂ ನ ಕ್ರಿಯಾ ನ ಚ ಭಾವನಾ ।
ನ ಜ್ಞಾನಂ ಯತ್ತತೋ ಯೋಗೀ ಕಾಯವಾನೇವ ಸಂಚರೇತ್ ॥

ಟೀಕು|| ಯತ್=ಆವುದಾನೊಂದು ಕಾರಣವಾಗಿ, ಸಮಸ್ತಾನಾಂ=ಸರ್ವಜನರಿಗೂ, ಕಾಯಂ ವಿನಾ=ದೇಹಹೊರತಾಗಿ, ಕ್ರಿಯಾ ನ=ಕ್ರೀ ಇಲ್ಲ. ಭಾವನಾ ನ=ಭಾವನೆಯು ಇಲ್ಲ. ಜ್ಞಾನಂ ಚ ನ=ಜ್ಞಾನವೂ ಇಲ್ಲ. ಅತಃ=ಅದುಕಾರಣವಾಗಿ, ಯೋಗೀ=ಶಿವಜ್ಞಾನಸಂಪನ್ನನಾದ ಪರಮಯೋಗಿಯು, ಕಾಯವಾನೇವ=ದೇಹವುಳ್ಳಾತನಾಗಿಯೆ, ಸಂಚರೇತ್=ಸಂಚರಿಸುವುದು. ||೩೬||

ಗ್ರಂಥ|| ಶಿವೈಕಜ್ಞಾನಯುಕ್ತಸ್ಯ ಯೋಗಿನೋಽಪಿ ಮಹಾತ್ಮನಃ ।
ಕಾಯಯೋಗೇನ ಸಿದ್ಧ್ಯಂತಿ ಭೋಗಮೋಕ್ಷಾದಯಸ್ಸದಾ ॥

ಟೀಕು|| ಶಿವೈಕಜ್ಞಾನಯುಕ್ತಸ್ಯ=ಶಿವನಲ್ಲಿ ಸಮಾನ ಸಮರಸವಾದ ಐಕ್ಯಜ್ಞಾನದೊಡನೆ ಕೂಡಿರ್ದ್ದ, ಮಹಾತ್ಮನಃ ಯೋಗಿನೋಽಪಿ=ಮಹಾಪುರುಷನಾದ ಯೋಗೀಶ್ವರನಿಗಾಯಿತ್ತಾದಡೆಯು, ಕಾಯಯೋಗೇನ=ಶರೀರಸಂಬಂಧದಿಂದವೆ, ಭೋಗಮೋಕ್ಷಾದಯಃ=ಭೋಗ ಮೋಕ್ಷ ಮೊದಲಾಗುಳ್ಳ ಸರ್ವಸಿದ್ಧಿಗಳು, ಸದಾ=ಎಲ್ಲಾ ಕಾಲದಲ್ಲಿಯು, ಸಿದ್ಧ್ಯಂತಿ=ಸಿದ್ಧಿಸುತ್ತಿರ್ದ್ದಪವು. ||೩೭||

ಗ್ರಂಥ|| ಕಾಷ್ಠಂ ವಿನಾ ಯಥಾ ವಹ್ನಿರ್ಜಾಯತೇ ನ ಪ್ರಕಾಶವಾನ್ ।
ಮೂರ್ತಿಂ ವಿನಾ ತಥಾ ಯೋಗೀ ನಾತ್ಮತತ್ತ್ವಪ್ರಕಾಶವಾನ್ ॥

ಟೀಕು|| ವಹ್ನಿಃ=ಅಗ್ನಿಯು, ಕಾಷ್ಠಂ ವಿನಾ=ಕಾಷ್ಠ ಹೊರತಾಗಿ, ಯಥಾ=ಹೇಗೆ, ಪ್ರಕಾಶವಾನ್=ಪ್ರಕಾಶವುಳ್ಳ ಅದು, ನ ಜಾಯತೇ=ಆಗುತ್ತಿರದು; ತಥಾ=ಹಾಗೆ, ಯೋಗೀ=ಶಿವಯೋಗೀಶ್ವರನು ಮೂರ್ತಿಂ ವಿನಾ=ದೇಹ ಹೊರತಾಗಿ, ಆತ್ಮತತ್ತ್ವಪ್ರಕಾಶವಾನ್=ಆತ್ಮತತ್ತ್ವಪ್ರಕಾಶ ಉಳ್ಳಾತನು, ನ ಜಾಯತೇ=ಆಗುತ್ತಿರನು. ||೩೮||

ಗ್ರಂಥ|| ಮೂರ್ತ್ಯಾತ್ಮನೈವ ದೇವಸ್ಯ ಯಥಾ ಪೂಜ್ಯತ್ವಕಲ್ಪನಾ ।
ತಥಾ ದೇಹಾತ್ಮನೈವಾಸ್ಯ ಪೂಜ್ಯತ್ವಂ ಪರಯೋಗಿನಃ ॥

ಟೀಕು|| ದೇವಸ್ಯ=ನಿಷ್ಕಲನಾದ ಪರಶಿವನಿಗೆ, ಮೂರ್ತ್ಯಾತ್ಮನೈವ=ಸೋಮಧರಾದಿಯಾದ ಮೂರ್ತಿ

ಸ್ವರೂಪಿನಿಂದವೆ, ಯಥಾ=ಹೇಗೆ, ಪೂಜ್ಯತ್ವಕಲ್ಪನಾ=ಪೂಜ್ಯಕಲ್ಪನೆಯು; ತಥಾ=ಹಾಗಯೆ, ಅಸ್ಯ ಪರಯೋಗಿನಃ=ಈ ಪರಮಶಿವಯೋಗೀಶ್ವರನಿಗೆ, ದೇಹಾತ್ಮನೈವ=ದೇಹಸ್ವರೂಪಿನಿಂದವೆ ಪೂಜ್ಯತ್ವಂ=ಪೂಜ್ಯನಹತನವು. ||೩೯||

ಗ್ರಂಥ|| ನಿಷ್ಕಲೋಽಪಿ ಮಹಾದೇವಃ ಪರಿಪೂರ್ಣಃ ಸದಾಶಿವಃ ।
ಜಗತ್ಸೃಷ್ಟ್ಯಾದಿ ಸಂಸಿದ್ಧ್ಯೈ ಮೂರ್ತಿಮಾನೇವ ಭಾಸತೇ ॥

**ಟೀಕು||** ನಿಷ್ಕಲಃ=ನಿಃಕಲನಾಗಿ, ಪರಿಪೂರ್ಣಃ=ವ್ಯಾಪಕನಾಗಿ, ಸದಾಶಿವಃ=ನಿತ್ಯಮಂಗಲನಾದ, ಮಹಾದೇವೋಽಪಿ=ಪರಶಿವನಾಯಿತ್ತಾದೊಡೆಯು, ಜಗತ್ಸೃಷ್ಟ್ಯಾದಿಸಂಸಿದ್ಧ್ಯೈ=ಜಗಜ್ಜಾಲದ ಸೃಷ್ಟಿಸ್ಥಿತಿ ಸಂಹಾರ ತಿರೋಭಾವಾನುಗ್ರಹರೂಪವಾದ ಪಂಚಕೃತ್ಯಸಿದ್ಧಿಗೋಸುಗವಾಗಿ, ಮೂರ್ತಿಮಾನೇವ=ಮೂರ್ತಿಯುಳ್ಳಾತನಾಗಿಯೆ, ಭಾಸತೇ=ಒಪ್ಪುತ್ತಿರ್ದ್ದಪನು. ||೪೦||

ಗ್ರಂಥ|| ಬ್ರಹ್ಮಾದ್ಯಾ ದೇವತಾಸ್ಸರ್ವಾಃ ಮುನಯೋಽಪಿ ಮುಮುಕ್ಷವಃ ।
ಕಾಯವಂತೋ ಹಿ ಕುರ್ವಂತಿ ತಪಃ ಸರ್ವಾರ್ಥಸಾಧಕಮ್ ॥

**ಟೀಕು||** ಬ್ರಹ್ಮಾದ್ಯಾಃ=ಬ್ರಹ್ಮ ವಿಷ್ಣು ಮೊದಲಾಗುಳ್ಳ, ಸರ್ವಾಃ ದೇವತಾಃ=ಸಮಸ್ತದೇವತೆಗಳು, ಮುಮುಕ್ಷವಃ=ಮೋಕ್ಷವ ನಿಚ್ಛೈಸುತ್ತಿರ್ದ್ದ, ಮುನಯಃ ಅಪಿ=ಶುಕ ವಾಮದೇವಾದಿ ಮುನಿಗಳಾಯಿತ್ತಾದೊಡೆಯು, ಕಾಯವಂತಃ ಸಂತಃ=ಕಾಯ ಉಳ್ಳವರಾಗುತವು, ಸರ್ವಾರ್ಥಸಾಧಕಂ=ಭೋಗ ಮೋಕ್ಷಾದಿ ಸಮಸ್ತ ಸಿದ್ಧಿಗಳಿಗೆ ಪುರುಷಾರ್ಥವನು ಸಾಧಿಸುತ್ತಿರ್ದ್ದ, ತಪಃ=ತಪಸ್ಸನು, ಕುರ್ವಂತಿ= ಮಾಡುತ್ತಿರ್ದ್ದಪರು. ಹಿ=ಪ್ರಸಿದ್ಧವು. ||೪೧||

**ಸೂತ್ರ||** ಬಳಿಕ "ವೈರಾಗ್ಯೇಣ ವಪುಸ್ತ್ಯಾಗಃ ನೈವ ಕಾರ್ಯೋ ಮನೀಷಿಭಿಃ"। ಯೆಂಬ ದೇವೀಕಾಲೋತ್ತರ ಸೂತ್ರಾರ್ಥವನು ಪ್ರಕಟಿಸುತ್ತಿರ್ದ್ದ ಕಾಯಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ|| ತಪೋ ಹಿ ಮೂಲಂ ಸರ್ವಾಸಾಂ ಸಿದ್ಧೀನಾಂ ಯಜ್ಜಗತ್ರಯೇ ।
ತಪಸ್ತತ್ಕಾಯಮೂಲಂ ಹಿ ತಸ್ಮಾತ್ಕಾಯಂ ನ ಸಂತ್ಯಜೇತ್ ॥

**ಟೀಕು||** ಯತ್=ಆವುದಾನೊಂದು ಕಾರಣವಾಗಿ, ಜಗತ್ರಯೇ=ಮೂರುಲೋಕದಲ್ಲಿಯು, ಸರ್ವಾಸಾಂ ಸಿದ್ಧೀನಾಂ=ಸಮಸ್ತ ಸಿದ್ಧಿಗಳಿಗೆ, ತಪೋ ಹಿ=ತಪಸ್ಸೇ, ಮೂಲಂ=ಮೂಲಕಾರಣವು; ತತ್ ತಪಃ=ಆ ತಪಸ್ಸು, ಯತ್=ಆವುದಾನೊಂದು ಕಾರಣವಾಗಿ, ಕಾಯಮೂಲಂ ಹಿ=ಮೂಲ ಕಾರಣವಾಗುಳ್ಳ ಅದು. ತಸ್ಮಾತ್=ಅದು ಕಾರಣವಾಗಿ, ಕಾಯಂ=ಕಾಯವನು, ನ ಸಂತ್ಯಜೇತ್= ವೈರಾಗ್ಯದಿಂದೆ ಬಿಡಲಾಗದು. ||೪೨||

**ಇತಿ ಸಕಾಯಸ್ಥಲಮ್**

# ೧೪. ಮಾಹೇಶ್ವರಸ್ಥಲೇ ಅಕಾಯಸ್ಥಲಮ್

**ಸೂತ್ರ||** ಬಳಿಕ"ಅಚ್ಛಾಯಮಶರೀರಮ್" ಯೆಂಬ ಶ್ರುತ್ಯರ್ಥವನು ಪ್ರಕಟಿಸುತ್ತ ಆ ಸಕಾಯನಾದ ಪರಮ ಶಿವಯೋಗಿಯೆ ಔಪಚಾರಿಕವಾದ ದೇಹ ಉಳ್ಳಾತನಾದ ಕಾರಣವಾಗಿ ಅಕಾಯನೆಂದು ಸೂತ್ರಪಂಚಕದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಔಪಚಾರಿಕದೇಹಿತ್ವಾಜ್ಜಗದಾತ್ಮಭಾವನಾತ್ ।**
**ಮಾಯಾಸಂಬಂಧರಾಹಿತ್ಯಾದಕಾಯೋ ಹಿ ಪರಃ ಸ್ಮೃತಃ ॥**

**ಟೀಕು||** ಪರಃ=ಆ ಸಕಾಯನಾದ ಪರಯೋಗಿಯು, ಔಪಚಾರಿಕದೇಹಿತ್ವಾತ್=ಔಪಚಾರಿಕವಾದ ದೇಹವುಳ್ಳಾತನಾದ ಕಾರಣವಾಗಿ, ಜಗದಾತ್ಮಭಾವನಾತ್=ಜಗದಾತ್ಮವನು ಭಾವಿಸುವಾತನಾದ ಕಾರಣವಾಗಿ, ಮಾಯಾಸಂಬಂಧರಾಹಿತ್ಯಾತ್=ಮಾಯಾಸಂಬಂಧವಾದ ಭೋಗರಹಿತವಾದ ಕಾರಣವಾಗಿ, ಅಕಾಯಃ=ಅಕಾಯನೆಂದು, ಸ್ಮೃತಃ=ನೆನೆಯಲುಪಟ್ಟನು. ಹಿ=ಪ್ರಸಿದ್ಧವು. **||೪೩||**

**ಗ್ರಂಥ||** **ಪರಸ್ಯ ದೇಹಯೋಗೇಽಪಿ ನ ದೇಹಾಶ್ರಯವಿಕ್ರಿಯಾ ।**
**ಶಿವಸ್ಯೇವ ಯತಸ್ತಸ್ಮಾದಕಾಯೋಽಯಂ ಪ್ರಕೀರ್ತಿತಃ ॥**

**ಟೀಕು||** ಪರಸ್ಯ=ಪರಯೋಗಿಗೆ, ಶಿವಸ್ಯೇವ=ಶಿವನೋಪಾದಿಯಲ್ಲ, ದೇಹಯೋಗೇ ಸತ್ಯಪಿ= ಶರೀರಸಂಬಂಧವುಂಟಾಗಲಿಕೆಯಾಗಿಯು, ದೇಹಾಶ್ರಯವಿಕ್ರಿಯಾ=ಶರೀರಾಶ್ರಯವಾದ ವಿಕಾರವು ಆವುದಾನೊಂದು ಕಾರಣವಾಗಿ, ನ=ಇಲ್ಲ; ತಸ್ಮಾತ್=ಅದು ಕಾರಣವಾಗಿ, ಅಯಂ=ಈ ಪರಯೋಗಿಯು, ಅಕಾಯಃ=ಅಕಾಯನೆಂದು, ಪ್ರಕೀರ್ತಿತಃ=ಹೇಳಲುಪಟ್ಟನು. **||೪೪||**

**ಗ್ರಂಥ||** **ಪರಲಿಂಗೇ ವಿಲೀನಸ್ಯ ಪರಮಾನಂದಚಿನ್ಮಯೇ ।**
**ಕುತೋ ದೇಹೇನ ಸಂಬಂದೋ ದೇಹಿವದ್ಭಾಸನಂ ಭ್ರಮಃ ॥**

**ಟೀಕು||** ಪರಮಾನಂದಚಿನ್ಮಯೇ=ಪರಮಾನಂದ ಚಿದ್ರೂಪವಾಗಿದ್ದ, ಪರಲಿಂಗೇ=ಪರಲಿಂಗದಲ್ಲಿ, ವಿಲೀನಸ್ಯ=ಅಡಗಿದ್ದ ಪರಯೋಗಿಗೆ, ದೇಹೇನ ಸಂಬಂಧಃ=ಶರೀರದೊಡನೆ ಸಂಬಂಧವು, ಕುತಃ= ಎತ್ತಣದು? ದೇಹಿವತ್ ಭಾಸನಂ=ದೇಹಿಯೋಪಾದಿಯಲ್ಲಿ ಒಪ್ಪುವುದು, ಭ್ರಮಃ=ಭ್ರಾಂತಿಯು.**||೪೫||**

**ಗ್ರಂಥ||** **ದೇಹಾಭಿಮಾನಹೀನಸ್ಯ ಶಿವಭಾವೇ ಸ್ಥಿತಾತ್ಮನಃ ।**
**ಜಗದೇತಚ್ಛರೀರಂ ಸ್ಯಾದ್ದೇಹೇನೈಕೇನ ಕಾ ವ್ಯಥಾ ॥**

**ಟೀಕು||** ದೇಹಾಭಿಮಾನಹೀನಸ್ಯ=ದೇಹಾಭಿಮಾನಯಿಲ್ಲದೆ ಇದ್ದ, ಶಿವಭಾವೇ ಸ್ಥಿತಾತ್ಮನಃ= ಶಿವಭಾವದಲ್ಲಿ ಇರುತ್ತಿರ್ದ್ದ ನಿಜಸ್ವರೂಪವುಳ್ಳ ಆ ಪರಯೋಗಿಗೆ, ಏತತ್ ಜಗತ್=ಈ ಸಮಸ್ತ ಜಗತ್ತು, ಶರೀರಂ=ದೇಹವು, ಸ್ಯಾತ್=ಅಹುದು; ಏಕೇನ ದೇಹೇನ= ಒಂದು ದೇಹದಿಂದೆ, ಕಾ ವ್ಯಥಾ=ಆವ ಬಾಧೆಯು? ಆವ ಬಾಧೆಯು ಇಲ್ಲವೆಂಬುದರ್ಥ. ||೪೭||

**ಗ್ರಂಥ||** **ಶಿವಜ್ಞಾನೈಕನಿಷ್ಠಸ್ಯ ನಾಹಂಕಾರಭವಭ್ರಮಃ ।**
**ನ ಚೇಂದ್ರಿಯಭವಂ ದುಃಖಂ ತ್ಯಕ್ತದೇಹಾಭಿಮಾನಿನಃ ॥**

**ಟೀಕು||** ತ್ಯಕ್ತದೇಹಾಭಿಮಾನಿನಃ=ಬಿಡಲುಪಟ್ಟದೇಹಾಭಿಮಾನವುಳ್ಳ, ಶಿವಜ್ಞಾನೈಕನಿಷ್ಠಸ್ಯ= ಶಿವಜ್ಞಾನವೊಂದರಲ್ಲಿಯೆ ತತ್ಪರನಾದ ಪರಮಯೋಗಿಗೆ, ಅಹಂಕಾರಭವ=ಮತ್ಕರ್ಮಜನ್ಯ ಮೂಲಾಹಂಕಾರವೆಂಬ ಅಹಂಕಾರತ್ರಯದಿಂದೆ ಹುಟ್ಟಿದ, ಭ್ರಮಃ=ಭ್ರಾಂತಿಯು, ನ=ಇಲ್ಲ. ಇಂದ್ರಿಯ ಭವಂ=ದಶೇಂದ್ರಿಯಗಳಿಂದೆ ಹುಟ್ಟಿದ, ದುಃಖಂ ಚ=ದುಃಖವೂ, ನ=ಇಲ್ಲ. ||೪೭||

**ಸೂತ್ರ||** ಬಳಿಕ ಅಕಾಯಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ನ ಮನುಷ್ಯೋ ನ ದೇವೋಽಹಂ ನ ಯಕ್ಷೋ ನೈವ ರಾಕ್ಷಸಃ ।**
**ಶಿವೋಽಹಮಿತಿ ಯೋ ಬುದ್ಧ್ಯಾತ್ತಸ್ಯ ಕಿಂ ದೇಹಕರ್ಮಣಾ ॥**

**ಟೀಕು||** ಅಹಂ=ನಾನು, ನ ಮನುಷ್ಯಃ=ಮನುಷ್ಯನಲ್ಲ; ದೇವೋ ನ=ದೇವತೆಯಲ್ಲ; ನ ಯಕ್ಷಃ=ಯಕ್ಷನಲ್ಲ; ನ ರಾಕ್ಷಸಃ=ರಾಕ್ಷಸನಲ್ಲ; ಕಿಂ ತು=ಮತ್ತೇನಯಾಯೆಂದಡೆ, ಅಹಂ=ನಾನು, ಶಿವ ಏವ=ಶಿವನೆ; ಇತಿ=ಹೀಗೆಂದು, ಯಃ=ಆವಾತನು, ಬುದ್ಧ್ಯಾತ್=ತಿಳಿವನು, ತಸ್ಯ=ಆ ಅಕಾಯನಿಗೆ, ದೇಹಕರ್ಮಣಾ=ಕಾಯ ಕ್ರೀಯಿಂದೆ, ಕಿಂ=ಏನು ಫಲವು? ಏನೂ ಫಲವಿಲ್ಲವೆಂಬುದರ್ಥ. ||೪೮||

**ಇತ್ಯಕಾಯಸ್ಥಲಮ್**

## ೧೫. ಮಾಹೇಶ್ವರಸ್ಥಲೇ ಪರಕಾಯಸ್ಥಲಮ್

**ಸೂತ್ರ||** ಬಳಿಕ "ಸ ಏವೈತತ್ಪರಮಂ ಬ್ರಹ್ಮಧಾಮ।"ಯೆಂಬ ಮುಂಡಕಶ್ರುತ್ಯರ್ಥವನು ಪ್ರಕಟಿಸುತ್ತ ಆ ಅಕಾಯನಾದ ಪರಯೋಗಿಯು ಪ್ರಕೃತಿಮಾಯಾತೀತವಾದ ಪರಬ್ರಹ್ಮವೆ ದೇಹವಾಗುಳ್ಳಾತನಾದ ಕಾರಣ ಪರಕಾಯನೆಂದು ಪಂಚಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ವಶೀಕೃತತ್ವಾತ್ಪ್ರಕೃತೇರ್ಮಾಯಾಮಾರ್ಗಾತಿವರ್ತನಾತ್ ।
ಪರಕಾಯೋಽಯಮಾಖ್ಯಾತಸ್ಸತ್ಯಜ್ಞಾನಸುಖಾತ್ಮಕಃ ॥

**ಟೀಕು॥** ಅಯಂ=ಈ ಅಕಾಯನಾದ ಯೋಗೀಶ್ವರನೆ, ಪ್ರಕೃತೇಃ=ಪ್ರಕೃತಿಯನು, ವಶೀಕೃತತ್ವಾತ್=ವಶೀಕರಣವುಳ್ಳಾತನಪತನದದೆಸೆಯಿಂದೆಯು, ಮಾಯಾಮಾರ್ಗಾತಿವರ್ತನಾತ್= ಮಾಯಾಮಾರ್ಗವನು ಮೀರಿ ವರ್ತಿಸುವುದರದೆಸೆಯಿಂದವು, ಸತ್ಯಜ್ಞಾನಸುಖಾತ್ಮಕಃ="ಸತ್ಯಂ ಜ್ಞಾನಮನಂತಂ ಬ್ರಹ್ಮ"ಯೆಂದು ಶ್ರುತಿಸಿದ್ಧವಾದ ಸಚ್ಚಿದಾನಂದಾತ್ಮಕವಾದ ಬ್ರಹ್ಮವೆ ಸ್ವರೂಪವಾಗುಳ್ಳ, ಪರಕಾಯಃ= ಪರಕಾಯನೆಂದು, ಆಖ್ಯಾತಃ=ಹೇಳಲುಪಟ್ಟನು. ॥೪೯॥

ಗ್ರಂಥ॥ ಪರಬ್ರಹ್ಮವಪುರ್ಯಸ್ಯ ಪ್ರಬೋಧಾನಂದಭಾಸುರಮ್ ।
ಪ್ರಾಕೃತೇನ ಶರೀರೇಣ ಕಿಮೇತೇನಾಸ್ಯ ಜಾಯತೇ ॥

**ಟೀಕು॥** ಪ್ರಬೋಧಾನಂದಭಾಸುರಮ್=ಚಿದಾನಂದಸ್ವರೂಪಿನಿಂದೆ ಪ್ರಕಾಶಿಸುತ್ತಿರ್ದ್ದ, ಪರಬ್ರಹ್ಮ=ಪರಬ್ರಹ್ಮವೆ, ಯಸ್ಯ=ಆವಾತನಿಗೆ, ವಪುಃ=ಕಾಯವು, ಜಾಯತೇ=ಆಗುತ್ತಿರ್ದ್ದಪುದು; ಅಸ್ಯ=ಈ ಪರಕಾಯನಿಗೆ, ಪ್ರಾಕೃತೇನ=ಪ್ರಕೃತಿಯಿಂದೆ ಹುಟ್ಟಿದ, ಏತೇನ ಶರೀರೇಣ=ಈ ದೇಹದಿಂದೆ,ಕಿಂ= ಏನು ಫಲವು? ಏನೂ ಫಲವಿಲ್ಲವೆಂಬುದರ್ಥ. ॥೫೦॥

ಗ್ರಂಥ॥ ಸಮ್ಯಗ್ ಜ್ಞಾನಾಗ್ನಿಸಂದಗ್ಧಜನ್ಮಬೀಜಕಲೇವರಃ ।
ಶಿವತತ್ತ್ವಾವಲಂಬೀ ಯಃ ಪರಕಾಯಃ ಸ ಉಚ್ಯತೇ ॥

**ಟೀಕು॥** ಯಃ=ಆವಾತನು, ಸಮ್ಯಗ್ ಜ್ಞಾನಾಗ್ನಿ=ಲೇಸಾದ ಶಿವಜ್ಞಾನವೆಂಬ ವಹ್ನಿಯಿಂದೆ ,ಸಂದಗ್ಧ=ಲೇಸಾಗಿ ಸುಡಲುಪಟ್ಟ, ಜನ್ಮಬೀಜ=ಭವಾಂತರಕ್ಕೆ ಬೀಜವಾದ, ಕಲೇವರಃ=ಸೂಕ್ಷ್ಮದೇಹವುಳ್ಳಾತನಾಗಿ, ಶಿವತತ್ತ್ವಾವಲಂಬೀ=ಪರಶಿವತತ್ತ್ವವೆ ಸ್ವರೂಪವಾಗುಳ್ಳಾತನು, ಸಃ=ಆತನು, ಪರಕಾಯಃ=ಪರಕಾಯನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ॥೫೧॥

ಗ್ರಂಥ॥ ಇಂದ್ರಿಯಾಣಿ ಮನೋವೃತ್ತಿರ್ವಾಸನಾಃ ಕರ್ಮಸಂಭವಾಃ ।
ಯತ್ರ ಯಾಂತಿ ಲಯಂ ತೇನ ಸಕಾಯೋಽಯಂ ಪರಾತ್ಮನಾ ॥

**ಟೀಕು॥** ಕರ್ಮಸಂಭವಾಃ=ಕರ್ಮಪಾಶದಿಂದೆ ಹುಟ್ಟಿದ, ಮನೋವೃತ್ತಿವಾಸನಾಃ=ಅಂತಃಕರಣಪ್ರವೃತ್ತಿಯ ವಾಸನೆಗಳು, ಇಂದ್ರಿಯಾಣಿ ಚ=ದಶೇಂದ್ರಿಯ ವ್ಯಾಪಾರಗಳು, ಯತ್ರ=ಆವೆಡೆಯಲ್ಲಿ, ಲಯಂ=ಲಯವನು, ಯಾಂತಿ=ಎಯ್ದುತ್ತಿರ್ದ್ದಪವು; ತೇನ ಪರಾತ್ಮನಾ=ಆ ಪರಾತ್ಮನಿಂದೆ, ಅಯಂ=ಈ ಪರಕಾಯನು, ಸಕಾಯಃ=ಕಾಯದೊಡನೆ ಕೂಡಿ ವರ್ತಿಸುತ್ತಿರ್ದ್ದ ಆತನು. ॥೫೨॥

**ಗ್ರಂಥ||** **ಪರಾಹಂತಾಮನುಪ್ರಾಪ್ಯ ಪಶ್ಯೇದ್ವಿಶ್ವಂ ಚಿದಾತ್ಮಕಮ್ ।**
**ಸದೇಹೋಽತಿಭ್ರಮಸ್ತಸ್ಯ ನಿಶ್ಚಿತಾ ಹಿ ಶಿವಾತ್ಮತಾ ॥**

**ಟೀಕು||** ಯಃ=ಆವಾತನು, ಪರಾಹಂತಾಂ=ಪರಬ್ರಹ್ಮ ಪರಶಿವ ಪರಾತ್ಮ ಪರ್ಯಾಯವುಳ್ಳ ಪರವೆ ನಾನುಯೆಂಬ ತನುವನು, ಅನುಪ್ರಾಪ್ಯ=ಬಳಿವಿಡಿದುಯೆಯ್ದಿ, ವಿಶ್ವಂ=ಸಮಸ್ತ ಜಗಜ್ಜಾಲವನು, ಚಿದಾತ್ಮಕಂ=ಅರಿವೆ ಸ್ವರೂಪವಾಗಿದ್ದದನಾಗಿ, ಪಶ್ಯೇತ್=ಕಾಬನು, ತಸ್ಯ=ಆತಂಗೆ, ಸದೇಹಃ=ಕಾಯದೊಡನೆ ಕೂಡಿವರ್ತಿಸುವತನವು, ಅತಿಭ್ರಮಃ=ಅತ್ಯಂತ ಭ್ರಾಂತಿಯು. ಕಿಂತು=ಮತ್ತೇನಯಾಯೆಂದಡೆ, ಶಿವಾತ್ಮತಾ=ಶಿವಸ್ವರೂಪವುಳ್ಳತನವೆ, ನಿಶ್ಚಿತಾ ಹಿ=ನಿಶ್ಚೈಸಲುಪಟ್ಟಿತ್ತು. ||೫೩||

**ಸೂತ್ರ||** ಬಳಿಕ ಆ ಪರಕಾಯನೆ ಜೀವನ್ಮುಕ್ತನೆಂದು ಸೂತ್ರತ್ರಯದಿಂದವೆ ಹೇಳುತ್ತಿರ್ದಪಂ.

**ಗ್ರಂಥ||** **ಸ್ವಸ್ವರೂಪಂ ಚಿದಾಕಾರಂ ಜ್ಯೋತಿಸ್ಸಾಕ್ಷದ್ವಿಚಿಂತಯನ್ ।**
**ದೇಹವಾನಪಿ ನಿರ್ದೇಹಃ ಜೀವನ್ಮುಕ್ತೋ ಹಿ ಸಾಧಕಃ ॥**

**ಟೀಕು||** ಸ್ವಸ್ವರೂಪಂ=ತನ್ನ ನಿಜರೂಪವನು, ಸಾಕ್ಷಾತ್=ಪ್ರತ್ಯಕ್ಷವಾದ, ಜ್ಯೋತಿಃ ಚಿದಾಕಾರಂ=ಜ್ಯೋತಿರ್ಮಯವಾದ ಶಿವಸ್ವರೂಪವುಳ್ಳಾತನಾಗಿ, ವಿಚಿಂತಯನ್=ಧ್ಯಾನಿಸುತ್ತಿರ್ದ್ದ, ಸಾಧಕಃ=ಸಾಧಕನು, ದೇಹವಾನಪಿ=ದೇಹವುಳ್ಳಾತನಾಯಿತ್ತಾದೊಡೆಯು, ನಿರ್ದೇಹಃ=ದೇಹವಿಲ್ಲದೆ ಇದ್ದಾತನಾಗಿ, ಜೀವನ್ಮುಕ್ತಃ=ಜೀವನ್ಮುಕ್ತನು, ಹಿ=ಪ್ರಸಿದ್ಧವು. ||೫೪||

**ಗ್ರಂಥ||** **ದೇಹಸ್ತಿಷ್ಠತು ವಾ ಯಾತು ಯೋಗಿನಃ ಸ್ವಾತ್ಮಬೋಧಿನಃ**
**ಜೀವನ್ಮುಕ್ತಿರ್ಭವೇತ್ಸದ್ಯಶ್ಚಿದಾನಂದ ಪ್ರಕಾಶಿನೀ**

**ಟೀಕು||** ಸ್ವಾತ್ಮಬೋಧಿನಃ=ಸ್ವಸ್ವರೂಪಜ್ಞಾನವುಳ್ಳ, ಯೋಗಿನಃ=ಪರಕಾಯನಾದ ಯೋಗೀಶ್ವರನಿಗೆ, ದೇಹಃ=ದೇಹವು, ತಿಷ್ಠತು=ಇರಲಿ, ವಾ=ಅಹಗಲ್ಲವೆ, ಯಾತು=ಹೋಗಲಿ. ಚಿದಾನಂದ ಪ್ರಕಾಶಿನೀ=ಚಿದಾನಂದವನು ಪ್ರಕಾಶಿಸುತ್ತಿರ್ದ್ದ, ಜೀವನ್ಮುಕ್ತಿಃ=ಜೀವನ್ಮುಕ್ತಿಯು, ಸದ್ಯಃ=ಆ ಕ್ಷಣದಲ್ಲಿಯೆ, ಭವೇತ್=ಅಹುದು. ||೫೫||

**ಗ್ರಂಥ||** **ಆತ್ಮಜ್ಞಾನಾವಸಾನಂ ಹಿ ಸಂಸಾರಪರಿಪೀಡನಮ್ ।**
**ಸೂರ್ಯೋದಯೇಽಪಿ ಕಿಂ ಲೋಕಸ್ತಿಮಿರೇಣೋಪರುದ್ಧ್ಯತೇ ॥**

**ಟೀಕು||** ಸಂಸಾರಪರಿಪೀಡನಂ=ಸಂಸಾರಬಾಧೆಯು, ಆತ್ಮಜ್ಞಾನಾವಸಾನಂ ಹಿ=ಸ್ವಸ್ವರೂಪವೆ ಕಡೆಯಾಗುಳ್ಳ ಅದು. ಲೋಕಃ=ಜನವು, ಸೂರ್ಯೋದಯೇ ಸತ್ಯಪಿ=ಸೂರ್ಯೋದಯವಾಗಲಿಕೆ

ಯಾಗಿಯು, ತಿಮಿರೇಣ=ಅಂಧಕಾರದಿಂದ, ಉಪರುದ್ಧ್ಯತೇ ಕಿಂ=ಮುಸುಕಲುಪಡುತ್ತಿರ್ದ್ದಪುದೇನು? ಮುಸುಕಲುಪಡಲಿಲ್ಲವೆಂಬುದರ್ಥ. ||೫೬||

**ಸೂತ್ರ||** ಬಳಿಕ ಪರಕಾಯಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||**

**ಕಾಲಾಭಿಮಾನನಿರ್ಮುಕ್ತಃ ಕಾಲಾತೀತಪದಾಶ್ರಯಃ ।**
**ಕಥಂ ಯಾತಿ ಪರಿಚ್ಛೇದಂ ಶರೀರೇಷು ಮಹಾಬುಧಃ ॥**

**ಟೀಕು||** ಕಾಲಾಭಿಮಾನನಿರ್ಮುಕ್ತಃ=ಕಾಲಾಭಿಮಾನದಿಂದೆ ಬಿಡಲುಪಟ್ಟ, ಕಾಲಾತೀತ ಪದಾಶ್ರಯಃ=ಕಾಲತತ್ತ್ವವನು ಮೀರಿ ವರ್ತಿಸುತ್ತಿರ್ದ್ದ ಶಿವಪದವೆ ಆಶ್ರಯವಾಗುಳ್ಳ, ಮಹಾಬುಧಃ=ಪರಮಜ್ಞಾನಿಯಾದ ಪರಕಾಯನು, ಶರೀರೇಷು=ದೇಹಗಳಲ್ಲಿ, ಪರಿಚ್ಛೇದಂ=ಹವಣಿ ಸುವತನವನು, ಕಥಂ=ಆವಪ್ರಕಾರದಿಂದೆ, ಯಾತಿ=ಎಯ್ದುತ್ತಿರ್ದ್ದಪನು? ಆವ ಬಗೆಯಿಂದವು ಎಯ್ದಲಿಲ್ಲವೆಂಬುದರ್ಥ. ||೫೭||

**ಇತಿ ಪರಕಾಯಸ್ಥಲಮ್**

## ೧೬. ಮಾಹೇಶ್ವರಸ್ಥಲೇ ಧರ್ಮಾಚಾರಸ್ಥಲಮ್

**ಸೂತ್ರ||** ಬಳಿಕ "ಯದ್ವೇದವಿದ್ಯಾಧಿಗಮಃ ಸ್ವಧರ್ಮಸ್ಯಾನುಚರಣಂ ಸ್ವಾಶ್ರಮೇಷ್ವಿವಾನು ಕರಣಂ ಸ್ವಧರ್ಮ ಏವ, ಸಂವರ್ಧಂತೇ ಸ್ತಂಬಶಾಖೇವೇತರಾಣಿ । ಅನೇನ ಊರ್ಧ್ವಭಾಗ್ ಭವತಿ"|| ಯೆಂಬ ಮೈತ್ರೇಯ ಶ್ರುತ್ಯರ್ಥವನು ಪ್ರಕಟಿಸುತ್ತ ಆ ಪರಕಾಯನಾದ ಯೋಗೀಶ್ವರನಾಚಾರವೆ ಸರ್ವಜನರಿಗೂ ಧರ್ಮಾಚಾರವೆಂದು ಹೇಳುತ್ತಿರ್ದ್ದಪಂ.

**ಗ್ರಂಥ||**

**ತಸ್ಯೈವ ಪರಕಾಯಸ್ಯ ಸಮಾಚಾರೋ ಯ ಇಷ್ಯತೇ ।**
**ಸ ಧರ್ಮಃ ಸರ್ವಲೋಕಾನಾಮುಪಕಾರಾಯ ಕಲ್ಪ್ಯತೇ ॥**

**ಟೀಕು||** ತಸ್ಯೈವ ಪರಕಾಯಸ್ಯ=ಆ ಪರಕಾಯನಾದ ಯೋಗೀಶ್ವರನಿಗೆ, ಯಃ ಸಮಾಚಾರಃ=ಆವು ದಾನೊಂದಾಚಾರವು, ಇಷ್ಯತೇ=ಇಚ್ಛೈಸಲುಪಡುತ್ತಿರ್ದ್ದಪುದು. ಸಃ=ಅದು, ಧರ್ಮಃ=ಧರ್ಮಾ ಚಾರವಾಗಿ, ಸರ್ವಲೋಕಾನಾಂ=ಸಮಸ್ತಜನರುಗಳ, ಉಪಕಾರಾಯ=ಉಪಕಾರಕ್ಕೋಸುಗವಾಗಿ, ಕಲ್ಪ್ಯತೇ=ಕಲ್ಪಿಸಲುಪಡುತ್ತಿರ್ದ್ದಪುದು. ||೫೮||

**ಸೂತ್ರ॥** ಬಳಿಕ ಆ ಧರ್ಮಾಚಾರವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾ ಕ್ಷಮಾ ।**
**ದಾನಂ ಪೂಜಾ ಜಪೋ ಧ್ಯಾನಮಿತಿ ಧರ್ಮಸ್ಯ ಸಂಗ್ರಹಃ ॥**

**ಟೀಕು॥** ಅಹಿಂಸಾ=ಅಹಿಂಸೆಯು, ಸತ್ಯಂ=ಸತ್ಯವು,ಅಸ್ತೇಯಂ=ಕಳವಿಲ್ಲದಿಹತನವು, ಬ್ರಹ್ಮಚರ್ಯಂ= ಬ್ರಹ್ಮಚರ್ಯವು, ದಯಾ=ದಯವು, ಕ್ಷಮಾ=ಸೈರಣೆಯು, ದಾನಂ=ದಾನವು, ಪೂಜಾ= ಶಿವಲಿಂಗ ಪೂಜೆಯು, ಜಪಃ=ಪಂಚಾಕ್ಷರ ಜಪವು, ಧ್ಯಾನಂ=ಶಿವಧ್ಯಾನವು, ಇತಿ=ಈ ಪ್ರಕಾರದಿಂದೆ, ಧರ್ಮಸ್ಯ=ಧರ್ಮದ, ಸಂಗ್ರಹಃ=ಸಂಗ್ರಹವು. ॥೫೯॥

**ಗ್ರಂಥ॥** **ಶಿವೇನ ವಿಹಿತೋ ಯಸ್ಮಾದಾಗಮೈರ್ಧರ್ಮಸಂಗ್ರಹಃ ।**
**ತಸ್ಮಾತ್ತಮಾಚರನ್ವಿದ್ವಾನ್ ತತ್ಪ್ರಸಾದಾಯ ಕಲ್ಪ್ಯತೇ ॥**

**ಟೀಕು॥** ಧರ್ಮಸಂಗ್ರಹಃ=ಅಹಿಂಸಾದಿಧರ್ಮ ಸಂಗ್ರಹವು, ಆಗಮೈಃ=ಕಾಮಿಕಾದಿ ತಂತ್ರಂಗಳಿಂದೆ, ಶಿವೇನ=ಶಿವನಿಂದೆ, ಯಸ್ಮಾತ್=ಆವುದಾನೊಂದು ಕಾರಣವಾಗಿ, ವಿಹಿತಃ=ವಿಧಿಸಲುಪಟ್ಟಿತ್ತು. ತಸ್ಮಾತ್ =ಅದು ಕಾರಣವಾಗಿ, ತಂ=ಆ ಧರ್ಮಸಂಗ್ರಹವನು, ಆಚರನ್=ಆಚರಿಸುತ್ತಿರ್ದ, ವಿದ್ವಾನ್= ಜ್ಞಾನಿಯು, ತತ್ಪ್ರಸಾದಾಯ=ಆ ಶಿವಪ್ರಸಾದಕ್ಕೋಸುಗ, ಕಲ್ಪ್ಯತೇ=ಸಮರ್ಥನಾಗುತ್ತಿರ್ದಪನು. ॥೬೦॥

**ಗ್ರಂಥ॥** **ಅಧರ್ಮಂ ನ ಸ್ಪೃಶೇತ್ಕಿಂಚಿದ್ವಿಹಿತಂ ಧರ್ಮಮಾಚರೇತ್ ।**
**ತಂ ಚ ಕಾಮವಿನಿರ್ಮುಕ್ತಂ ತಮಪಿ ಜ್ಞಾನಪೂರ್ವಕಮ್ ॥**

**ಟೀಕು॥** ಕಿಂಚಿತ್ ಅಧರ್ಮಃ=ಅಹಿಂಸಾದಿಗಳಿಂದನ್ಯವಾದ ಒಪ್ಪಚ್ಚಿ ಅಧರ್ಮವನು, ನ ಸ್ಪೃಶೇತ್=ಮುಟ್ಟಲಾಗದು, ವಿಹಿತಂ ಧರ್ಮಂ=ನಿಗಮಾಗಮಂಗಳಲ್ಲಿ ವಿಧಿಸಲುಪಟ್ಟ ಅಹಿಂಸಾದಿ ಧರ್ಮವನೆ, ಆಚರೇತ್=ಆಚರಿಸುವುದು. ತಂ ಚ=ಆ ಧರ್ಮವನು, ಕಾಮ ವಿನಿರ್ಮುಕ್ತಂ=ಬಯಕೆ ಯಿಂದೆ ಬಿಡಲುಪಟ್ಟವನಾಗಿ, ಆಚರೇತ್=ಆಚರಿಸುವುದು, ತಮಪಿ=ಆ ಬಯಕೆಯಿಂದ ಬಿಡಲುಪಟ್ಟ ಧರ್ಮವನಾಯಿತ್ತಾದೊಡೆಯು, ಜ್ಞಾನಪೂರ್ವಕಂ=ಜ್ಞಾನವೆ ಮೊದಲಾಗುಳ್ಳುದನಾಗಿ, ಆಚರೇತ್= ಆಚರಿಸುವುದು. ॥೬೧॥

**ಸೂತ್ರ॥** ಬಳಿಕ ಆ ಜ್ಞಾನಪೂರ್ವಕವಾದ ಧರ್ಮಾಚಾರವನು
"ಮಾತೃವತ್ಪರದಾರಾಣಿ ಪರದ್ರವ್ಯಾಣಿ ಲೋಷ್ಟವತ್।
ಆತ್ಮವತ್ಸರ್ವಭೂತಾನಿ ಯಃ ಪಶ್ಯತಿ ಸ ಧರ್ಮಿರಾಟ್"॥ ಯೆಂಬ ಶ್ರುತ್ಯರ್ಥ ವನು ಸ್ಮರಿಸುತ್ತ ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಆತ್ಮವತ್ಸರ್ವಭೂತಾನಿ ಸಂಪಶ್ಯೇದ್ಯೋಗವಿತ್ತಮಃ ।**
**ಜಗದೇಕಾತ್ಮತಾಭಾವಾನ್ನಿಗ್ರಹಾದಿವಿರೋಧತಃ ॥**

**ಟೀಕು||** ಯೋಗವಿತ್ತಮಃ=ಯೋಗೀಶ್ವರನು, ಜಗದೇಕಾತ್ಮತಾಭಾವಾತ್=ಜಗತ್ತಿಗೆ ಏಕಾತ್ಮತ್ವವನು ವಿಭಾವಿಸುವಾತನಾದಕಾರಣವಾಗಿ, ನಿಗ್ರಹಾದಿವಿರೋಧತಃ=ನಿಗ್ರಹಾದಿಗಳಿಂದೆ ವಿರೋಧವಾದ ಕಾರಣವಾಗಿ, ಸರ್ವಭೂತಾನಿ=ಸಮಸ್ತಪ್ರಾಣಿಗಳನು, ಆತ್ಮವತ್=ತನ್ನೋಪಾದಿಯಲ್ಲಿಯೆ, ಸಂಪಶ್ಯೇತ್=ಕಾಬುದು. |೬೨||

**ಗ್ರಂಥ||** **ಏಕ ಏವ ಶಿವಃ ಸಾಕ್ಷಾಜ್ಜಗದೇತದಿತಿ ಸ್ಫುಟಮ್ ।**
**ಪಶ್ಯತಃ ಕಿಂ ನ ಜಾಯೇತ ಮಮಕಾರೋ ಹಿ ವಿಭ್ರಮಃ ॥**

**ಟೀಕು||** ಶಿವಃ ಏಕ ಏವ=ಶಿವನೊರ್ವನೆ, ಏತತ್ ಜಗದಿತಿ=ಈ ಜಗತ್ತೆಂದು, ಸ್ಫುಟಂ=ವ್ಯಕ್ತವಾಗಿ, ಸಾಕ್ಷಾತ್=ಪ್ರತ್ಯಕ್ಷೀಕರಿಸಿ, ಪಶ್ಯತಃ=ಕಾಣುತ್ತಿರ್ದ್ದ ಯೋಗೀಶ್ವರನಿಗೆ, ಕಿಂ ನ ಜಾಯೇತ= ಏನಾಗದು? ಸರ್ವವು ಆಗುವುದೆಂಬುದರ್ಥ. ಮಮಕಾರೋ ಹಿ=ಈ ಜಗತ್ತಿನಲ್ಲಿ ಇದು ಎನ್ನದು ಇದು ಎನ್ನದುಯೆಂಬ ಮಮಕಾರವಾಯಿತ್ತಾದಡೆ, ವಿಭ್ರಮಃ=ವಿಶೇಷವಾದ ಭ್ರಾಂತಿಯು. ||೬೩||

**ಸೂತ್ರ||** ಬಳಿಕ ಆ ಧರ್ಮಾಚಾರವನು ವಿರಕ್ತನಾದರೂ ಬಿಡಲಾಗದೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಧರ್ಮ ಏವ ಸಮಸ್ತಾನಾಂ ಯತಃ ಸಂಸಿದ್ಧಿಕಾರಣಮ್ ।**
**ನಿಃಸ್ಪೃಹೋಽಪಿ ಮಹಾಯೋಗೀ ಧರ್ಮಮಾರ್ಗಂ ಚ ನ ತ್ಯಜೇತ್ ॥**

**ಟೀಕು||** ಸಮಸ್ತಾನಾಂ=ಸರ್ವಜನರಿಗು, ಧರ್ಮ ಏವ=ಧರ್ಮಾಚಾರವೆ, ಯತಃ=ಆವುದಾನೊಂದು ಕಾರಣವಾಗಿ, ಸಂಸಿದ್ಧಿಕಾರಣಂ=ಲೇಸಾದ ಭೋಗ ಮೋಕ್ಷಸಿದ್ಧಿಗಳಿಗೆ ಕಾರಣವು; ತತಃ=ಅದು ಕಾರಣವಾಗಿ, ಮಹಾಯೋಗೀ=ಮಹಾಯೋಗೀಶ್ವರನು, ನಿಃಸ್ಪೃಹೋಽಪಿ=ವಿರಕ್ತನಾಯಿತ್ತಾದಡೊಯು, ಧರ್ಮಮಾರ್ಗಂ ಚ=ಧರ್ಮಮಾರ್ಗವನು, ನ ತ್ಯಜೇತ್=ಬಿಡಲಾಗದು. ||೬೪||

**ಗ್ರಂಥ||** **ಜ್ಞಾನಾಮೃತೇನ ತೃಪ್ತೋಽಪಿ ಯೋಗೀ ಧರ್ಮಂ ನ ಸಂತ್ಯಜೇತ್ ।**
**ಆಚಾರಂ ಮಹತಾಂ ದೃಷ್ಟ್ವಾ ಪ್ರವರ್ತಂತೇ ಹಿ ಲೌಕಿಕಾಃ ॥**

**ಟೀಕು||** ಯೋಗೀ=ಯೋಗೀಶ್ವರನು, ಜ್ಞಾನಾಮೃತೇನ=ಶಿವಜ್ಞಾನವೆಂಬ ಅಮೃತರಸದಿಂದೆ, ತೃಪ್ತೋಽಪಿ=ಸಂತುಷ್ಟನಾಗಿದ್ದಾತನಾಯಿತ್ತಾದಡೆಯು, ಧರ್ಮಂ=ಧರ್ಮಾಚಾರವನು, ನ ಸಂತ್ಯಜೇತ್=

ಬಿಡಲಾಗದು. ಯತಃ=ಆವುದಾನೊಂದು ಕಾರಣವಾಗಿ, ಲೌಕಿಕಾಃ=ಲೌಕಿಕರುಗಳು, ಮಹತಾಂ ಆಚಾರಂ=ಮಹಾಪುರುಷರ ಸದಾಚಾರವನು, ದೃಷ್ಟ್ವಾ=ನೋಡಿ, ಪ್ರವರ್ತಂತೇ ಹಿ=ಪ್ರವರ್ತಿಸುತ್ತಿರ್ದ್ದ ಪರಲಾ. ||೬೫||

**ಸೂತ್ರ||** ಬಳಿಕ ಧರ್ಮಾಚಾರಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಸದಾಚಾರಪ್ರಿಯಶ್ಶಂಭುಃ ಸದಾಚಾರೇಣ ಪೂಜ್ಯತೇ ।**
**ಸದಾಚಾರಂ ವಿನಾ ತಸ್ಯ ಪ್ರಸಾದೋ ನೈವ ಜಾಯತೇ ॥**

**ಟೀಕು||** ಶಂಭುಃ=ಪರಮೇಶ್ವರನು, ಸದಾಚಾರ ಪ್ರಿಯಃ ಸನ್=ಸದಾಚಾರವೇ ಪ್ರಿಯವಾಗುಳ್ಳಾತನಾಗಿ, ಸದಾಚಾರೇಣ=ಸದಾಚಾರದಿಂದವೆ, ಪೂಜ್ಯತೇ=ಪೂಜಿಸಲುಪಡುತ್ತಿರ್ದ್ದಪನು. ಸದಾಚಾರಂ ವಿನಾ= ಸದಾಚಾರ ಹೊರತಾಗಿ, ತಸ್ಯ ಪ್ರಸಾದಃ=ಆ ಶಿವನ ಪ್ರಸನ್ನತೆಯು, ನೈವ ಜಾಯತೇ=ಹುಟ್ಟಿತ್ತಿರದು. ||೬೬||

## ಇತಿ ಧರ್ಮಾಚಾರಸ್ಥಲಮ್

# ೧೭. ಮಾಹೇಶ್ವರಸ್ಥಲೇ ಭಾವಾಚಾರಸ್ಥಲಮ್

**ಸೂತ್ರ||** ಬಳಿಕ "ಜ್ಯೋತೀರೂಪಂ ಶಿವಂ ಪೂರ್ಣಂ ವಿಶ್ವತೇಜೋನಿವರ್ತಕಮ್।
ಆಶಯಂ ಭಾಸಯಂತಂ ಚ ಭಾವಯಂಸ್ತನ್ಮಯೋ ಭವೇತ್"॥
ಯೆಂಬ ಕಾಮಿಕಾರ್ಥವನು ಪ್ರಕಟಿಸುತ್ತ ಧರ್ಮಾಚಾರಸಂಪನ್ನನಾದ ಈ ಶಿವಯೋಗೀಶ್ವರನ ಭಾವವೆ ಸರ್ವರಿಗೂ ಭಾವಾಚಾರವೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ಭಾವ ಏವಾಸ್ಯ ಸರ್ವೇಷಾಂ ಭಾವಾಚಾರಃ ಪ್ರಕೀರ್ತಿತಃ ।**
**ಭಾವೋ ಮಾನಸಚೇಷ್ಟಾತ್ಮಾ ಪರಿಪೂರ್ಣಶಿವಾಶ್ರಯಃ ॥**

**ಟೀಕು||** ಅಸ್ಯ=ಈ ಧರ್ಮಾಚಾರಸಂಪನ್ನನಾದ ಯೋಗೀಶ್ವರನ, ಭಾವ ಏವ=ಭಾವವೆ, ಸರ್ವೇಷಾಂ=ಸಮಸ್ತರಿಗೂ, ಭಾವಾಚಾರಃ=ಭಾವಾಚಾರವೆಂದು, ಪ್ರಕೀರ್ತಿತಃ=ಹೇಳಲುಪಟ್ಟಿತ್ತು. ಭಾವಸ್ತು=ಭಾವವಾಯಿತ್ತಾದಡೆ, ಮಾನಸಚೇಷ್ಟಾತ್ಮಾ ಸನ್=ಮನೋವ್ಯಾಪಾರವೆ ಸ್ವರೂಪವಾಗುಳ್ಳದಾಗುತಲು, ಪರಿಪೂರ್ಣಃ ಶಿವಾಶ್ರಯಃ=ಪರಿಪೂರ್ಣವಾದ ಶಿವನೆ ಆಶ್ರಯವಾಗುಳ್ಳ ಅದು.||೬೭||

**ಸೂತ್ರ||** ಬಳಿಕ ಭಾವಯುಕ್ತವಾದ ಕರ್ಮವನು ಸೂತ್ರತ್ರಯದಿಂದೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ॥** **ಭಾವನಾವಿಹಿತಂ ಕರ್ಮ ಪಾವನಾದಪಿ ಪಾವನಮ್ ।**
**ತಸ್ಮಾದ್ಭಾವನಯಾ ಯುಕ್ತಂ ಪರಧರ್ಮಂ ಸಮಾಚರೇತ್ ॥**

**ಟೀಕು॥** ಭಾವನಾವಿಹಿತಂ ಕರ್ಮ=ಕರ್ಮಭಾವನೆಯಿಂದೆ ಮಾಡಲುಪಟ್ಟ ಕರ್ಮವು. ಪಾವನಾದಪಿ=ಪಾವನದದೆಸೆಯಿಂದವು, ಪಾವನಂ=ಪಾವನವಾಗಿದ್ದ ಅದು, ತಸ್ಮಾತ್=ಅದು ಕಾರಣವಾಗಿ, ಭಾವನಯಾಯುಕ್ತಂ=ಭಾವನೆಯೊಡನೆ ಕೂಡಿರ್ದ, ಪರಧರ್ಮಂ=ಪರಧರ್ಮವನು, ಸಮಾಚರೇತ್=ಆಚರಿಸುವುದು. ॥೬೮॥

**ಗ್ರಂಥ॥** **ಭಾವೇನ ಹಿ ಮನಶ್ಶುದ್ಧಿಃ ಭಾವಶುದ್ಧಿಶ್ಚ ಕರ್ಮಣಾ ।**
**ಇತಿ ಸಂಚಿಂತ್ಯ ಮನಸಾ ಯೋಗೀ ಭಾವಂ ನ ಸಂತ್ಯಜೇತ್ ॥**

**ಟೀಕು॥** ಭಾವೇನ ಹಿ=ಭಾವದಿಂದವೇ, ಮನಃಶುದ್ಧಿಃ=ಮನಸ್ಸಿನ ಶುದ್ಧಿಯು; ಕರ್ಮಣಾ=ಕರ್ಮದಿಂದೆ, ಭಾವ ಶುದ್ಧಿಶ್ಚ=ಭಾವ ಶುದ್ಧಿಯು, ಇತಿ=ಹೀಗೆಂದು, ಮನಸಾ=ಚಿತ್ತದಿಂದೆ, ಸಂಚಿಂತ್ಯ=ಚಿಂತಿಸಿ, ಯೋಗೀ=ಯೋಗೀಶ್ವರನು, ಭಾವಂ=ಭಾವವನು, ನ ಸಂತ್ಯಜೇತ್=ಬಿಡಲಾಗದು. ॥೬೯॥

**ಗ್ರಂಥ॥** **ಶಿವಭಾವನಯಾ ಸರ್ವಂ ನಿತ್ಯನೈಮಿತ್ತಿಕಾದಿಕಮ್ ।**
**ಕುರ್ವನ್ನಪಿ ಮಹಾಯೋಗೀ ಗುಣದೋಷೈರ್ನ ಬಧ್ಯತೇ ॥**

**ಟೀಕು॥** ಮಹಾಯೋಗೀ=ಮಹಾಯೋಗೀಶ್ವರನು, ನಿತ್ಯನೈಮಿತ್ತಿಕಾದಿಕಂ=ನಿತ್ಯನೈಮಿತ್ತಿಕ ಕಾಮ್ಯ ಮೊದಲಾಗುಳ್ಳ, ಸರ್ವಂ=ಸಮಸ್ತಕರ್ಮವನು, ಶಿವಭಾವನಯಾಽಪಿ=ಶಿವಭಾವದಿಂದ ವಾಯಿತ್ತಾದೊಡೆ, ಕುರ್ವನ್ ಸನ್=ಮಾಡುತ್ತಿದ್ದಾತನಾಗುತಲು, ಗುಣದೋಷೈಃ=ಆ ಕರ್ಮಜನ್ಯವಾದ ಗುಣದೋಷಂಗಳಿಂದೆ, ನ ಬಧ್ಯತೇ=ಕಟ್ಟಲುಪಡುತ್ತಿರನು. ॥೭೦॥

**ಸೂತ್ರ॥** ಬಳಿಕ ಭಾವಸಿದ್ಧವಾದ ಸಂಧ್ಯಾವಂದನೆ ಹೋಮಾದಿಕರ್ಮಂಗಳನು ಚತುಸ್ಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ಅಂತಃ ಪ್ರಕಾಶಮಾನಸ್ಯ ಸಂವಿತ್ಸೂರ್ಯಸ್ಯ ಸಂತತಮ್ ।**
**ಭಾವೇನ ಯದುಪಸ್ಥಾನಂ ತತ್ಸಂಧ್ಯಾವಂದನಂ ವಿದುಃ ॥**

**ಟೀಕು॥** ಸಂತತಂ=ಆವಾಗವು, ಅಂತಃ ಪ್ರಕಾಶಮಾನಸ್ಯ=ಊರ್ಧ್ವಹೃದಯಾಕಾಶದಲ್ಲಿ ಪ್ರಕಾಶಿಸುತ್ತಿರ್ದ, ಸಂವಿತ್ಸೂರ್ಯಸ್ಯ=ಜ್ಞಾನವೆಂಬ ಸೂರ್ಯನ, ಭಾವೇನ=ಭಾವದಿಂದೆ, ಯತ್

ಉಪಸ್ಥಾನಂ= ಆವುದಾನೊಂದು ಬಳಿವಿಡಿದಿರುವತನವುಂಟು, ತತ್=ಅದನು, ಸಂಧ್ಯಾವಂದನಂ= ಸಂಧ್ಯಾವಂದನೆಯನಾಗಿ, ವಿದುಃ=ಅರಿಯುತ್ತಿರ್ದಪರು. ॥೭೧॥

ಗ್ರಂಥ॥ **ಆತ್ಮಜ್ಯೋತಿಷಿ ಸರ್ವೇಷಾಂ ವಿಷಯಾಣಾಂ ಸಮರ್ಪಣಮ್ ।**
**ಅಂತರ್ಮುಖೇನ ಭಾವೇನ ಹೋಮಕರ್ಮೇತಿ ಗೀಯತೇ ॥**

ಟೀಕು॥ ಆತ್ಮಜ್ಯೋತಿಷಿ=ಪರಮಾತ್ಮನೆಂಬ ಅಗ್ನಿಯಲ್ಲಿ, ಅಂತರ್ಮುಖೇನ ಭಾವೇನ= ಅಂತರ್ಮುಖವಾದ ಭಾವದಿಂದೆ, ಸರ್ವೇಷಾಂ ವಿಷಯಾಣಾಂ=ಸಮಸ್ತವಿಷಯಂಗಳ, ಯತ್ ಸಮರ್ಪಣಂ=ಆವುದಾನೊಂದು ಸಮರ್ಪಣೆಯುಂಟು, ತತ್=ಅದು, ಹೋಮಕರ್ಮೇತಿ=ಹೋಮ ಕರ್ಮವೆಂದು, ಗೀಯತೇ=ಹೇಳಲುಪಡುತ್ತಿರ್ದಪುದು. ॥೭೨॥

ಗ್ರಂಥ॥ **ಭಾವಯೇತ್ಸರ್ವಕರ್ಮಾಣಿ ನಿತ್ಯನೈಮಿತ್ತಿಕಾನಿ ಚ ।**
**ಶಿವಪ್ರೀತಿಕರಾಣ್ಯೇವ ಸಂಗರಾಹಿತ್ಯಸಿದ್ಧಯೇ ॥**

**ಟೀಕು॥** ನಿತ್ಯನೈಮಿತ್ತಿಕಾನಿ ಚ ಸರ್ವಕರ್ಮಾಣಿ=ನಿತ್ಯನೈಮಿತ್ತಿಕಾದಿ ಸರ್ವಕರ್ಮಂಗಳನು, ಶಿವಪ್ರೀತಿಕರಾಣ್ಯೇವ=ಶಿವನಿಗೆ ಪ್ರೀತಿಯನು ಮಾಡುತ್ತಿರ್ದ್ದಾತನಾಗಿಯೆ, ಸಂಗರಾಹಿತ್ಯಸಿದ್ಧಯೇ= ಸಂಸಾರಸಂಗದ ತೊಲಗಿಕೆಯ ಸಿದ್ಧಿಗೋಸುಗವಾಗಿ, ಭಾವಯೇತ್=ಭಾವಿಸುವುದು. ॥೭೩॥

ಗ್ರಂಥ॥ **ಶಿವೇ ನಿವೇಶ್ಯಸ್ಯ ಸಕಲಂ ಕಾರ್ಯಾಕಾರ್ಯಂ ವಿವೇಕತಃ ।**
**ವರ್ತತೇ ಯೋ ಮಹಾಭಾಗಃ ಸ ಸಂಗರಹಿತೋ ಭವೇತ್ ॥**

**ಟೀಕು॥** ಶಿವೇ=ಶಿವನಲ್ಲಿ, ಕಾರ್ಯಾಕಾರ್ಯಂ=ಮಾಡಲು ಯೋಗ್ಯವಾದ ಮಾಡಲು ಯೋಗ್ಯವಲ್ಲದೆಯಿರ್ದ್ದ, ಸಕಲಂ=ಸಮಸ್ತಕರ್ಮವನು, ವಿವೇಕತಃ=ವಿವೇಕದದೆಸೆಯಿಂದೆ, ನಿವೇಶ್ಯಸ್ಯ= ಇರಿಸಿ, ಯಃ ಮಹಾಭಾಗಃ=ಆವನಾನೊಬ್ಬ ಮಹಾಪುರುಷನು, ವರ್ತತೇ=ವರ್ತಿಸುತ್ತಿರ್ದ್ದಪನು, ಸಃ=ಆತನು, ಸಂಗರಹಿತಃ=ಭವಸಂಗದಿಂದೆ ತೊಲಗಲುಪಟ್ಟ ಆತನು, ಭವೇತ್=ಅಹನು. ॥೭೪॥

ಸೂತ್ರ॥ ಬಳಿಕ ಭಾವಾಚಾರಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ **ಆತ್ಮಾನಮಖಿಲಂ ವಸ್ತು ಶಿವಮಾನಂದಚಿನ್ಮಯಮ್ ।**
**ಏಕಭಾವೇನ ಸತತಂ ಸಂಪಶ್ಯನ್ನೇವ ಪಶ್ಯತಿ ॥**

**ಟೀಕು॥** ಆತ್ಮಾನಂ=ತನ್ನನು, ಅಖಿಲಂ ವಸ್ತು=ಸಮಸ್ತವಸ್ತುವನು, ಆನಂದಚಿನ್ಮಯಂ=ಚಿದಾನಂದ

ರೂಪವಾದ, ಶಿವಂ=ಪರಮಶಿವನನು, ಏಕಭಾವೇನ=ಏಕಭಾವದಿಂದ, ಸತತಂ=ಆವಾಗವು. ಸಂಪಶ್ಯನ್ನೇವ=ಕಾಬಾತನೆ. ಪಶ್ಯತಿ=ಕಾಣುತ್ತಿರ್ದ್ದಪನು. ॥೭೫॥

## ಇತಿ ಭಾವಾಚಾರಸ್ಥಲಮ್

# ೧೮. ಮಾಹೇಶ್ವರಸ್ಥಲೇ ಜ್ಞಾನಾಚಾರಸ್ಥಲಮ್

**ಸೂತ್ರ॥** ಬಳಿಕ "ಸತ್ಯಂ ಜ್ಞಾನಮನಂತಂ ಬ್ರಹ್ಮ"ಯೆಂಬ ತೈತ್ತಿರೀಯಶ್ರುತ್ಯರ್ಥವನು ಪ್ರಕಟಿಸುತ್ತ ಆ ಈ ಭಾವಾಚಾರಸಂಪನ್ನನಾದ ಶಿವಯೋಗಿಯ ಜ್ಞಾನಾಚಾರವೆ ಸರ್ವದೇಹಿಗಳಿಗೆಯು ಜ್ಞಾನಾಚಾರವೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** **ಅಸ್ಯ ಜ್ಞಾನಸಮಾಚಾರೋ ಯೋಗಿನಃ ಸರ್ವದೇಹಿನಾಮ್ ।**
**ಜ್ಞಾನಾಚಾರೋ ಯದುಕ್ತೋಽಯಂ ಜ್ಞಾನಾಚಾರಃ ಸ ಕಥ್ಯತೇ ॥**

**ಟೀಕು॥** ಅಸ್ಯ ಯೋಗಿನಃ=ಭಾವಾಚಾರಸಂಪನ್ನನಾದ ಈ ಯೋಗೀಶ್ವರನ, ಜ್ಞಾನ ಸಮಾಚಾರಃ= ಜ್ಞಾನಾಚಾರವೇ, ಸರ್ವದೇಹಿನಾಂ=ಸಮಸ್ತದೇಹಿಗಳಿಗೆ, ಜ್ಞಾನಾಚಾರಃ=ಜ್ಞಾನಾಚಾರವೆಂದು, ಯತ್= ಆವುದಾನೊಂದು ಕಾರಣವಾಗಿ, ಉಕ್ತಃ=ಹೇಳಲುಪಟ್ಟಿತ್ತು, ತತ್=ಅದು ಕಾರಣವಾಗಿ, ಸೋಽಯಂ=ಆ ಇದೆ, ಜ್ಞಾನಾಚಾರಃ=ಜ್ಞಾನಾಚಾರವೆಂದು, ಕಥ್ಯತೇ=ಹೇಳಲುಪಡುತ್ತಿರ್ದ್ದಪುದು. ॥೭೬॥

**ಸೂತ್ರ॥** ಬಳಿಕ ಆ ಜ್ಞಾನಾಚಾರವನೆ ಜ್ಞಾನಲಕ್ಷಣಪೂರ್ವಕವಾಗಿ ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಶಿವಾದ್ವೈತಪರಂ ಜ್ಞಾನಂ ಜ್ಞಾನಮಿತ್ಯುಚ್ಯತೇ ಬುಧೈಃ ।**
**ಸಿದ್ಧೇನ ವಾಽಪ್ಯಸಿದ್ಧೇನ ಫಲಂ ಜ್ಞಾನಾಂತರೇಣ ಕಿಮ್ ॥**

**ಟೀಕು॥** ಶಿವಾದ್ವೈತಪರಂ ಜ್ಞಾನಂ=ಶಿವಾದ್ವೈತವೆ ಪ್ರಧಾನವಾಗುಳ್ಳ ಜ್ಞಾನವು, ಜ್ಞಾನಮಿತಿ= ಜ್ಞಾನವೆಂದು, ಬುಧೈಃ=ವಿದ್ವಾಂಸರಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ಸಿದ್ಧೇನ ವಾ=ಶಾಸ್ತ್ರಸಿದ್ಧ ವಾಯಿತ್ತಾದೊಡೆಯು, ಅಸಿದ್ಧೇನಾಽಪಿ=ಶಾಸ್ತ್ರಸಿದ್ಧವಲ್ಲದೆಯಿದ್ದದಾಯಿತ್ತಾದೊಡೆಯು, ಜ್ಞಾನಾಂತರೇಣ = ಭಿನ್ನಜ್ಞಾನದಿಂದೆ, ಕಿಂ ಫಲಂ=ಏನು ಫಲವು? ಏನೂ ಫಲವಿಲ್ಲವೆಂಬುದರ್ಥ. ॥೭೭॥

**ಗ್ರಂಥ॥** **ನಿರ್ಮಲಂ ಹಿ ಶಿವಜ್ಞಾನಂ ನಿಃಶ್ರೇಯಸಕರಂ ಪರಮ್ ।**
**ರಾಗದ್ವೇಷಾದಿ ಕಲುಷಂ ಭೂಯಃ ಸಂಸೃತಿಕಾರಣಮ್ ॥**

**ಟೀಕು||** ಶಿವಜ್ಞಾನಂ=ಶಿವಜ್ಞಾನವು, ನಿರ್ಮಲಂ ಸನ್=ನಿರ್ಮಲವಾಗಿದ್ದದಾಗುತಲು, ಪರಂ=ಸರ್ವೋತ್ಕರ್ಷವಾದ, ನಿಃಶ್ರೇಯಸಕರಂ=ಮೋಕ್ಷವನು ಮಾಡುತ್ತಿರ್ದ್ದ, ತತ್=ಆ ಜ್ಞಾನವು, ಭೂಯಃ=ಮರಳಿ, ರಾಗದ್ವೇಷಾದಿ ಕಲುಷಂ ಸತ್=ಕಾಮಕ್ರೋಧಲೋಭಾದಿಗಳಿಂದೆ ಕದಡಿದ್ದದಾಗುತಲು, ಸಂಸೃತಿಕಾರಣಂ=ಸಂಸಾರಕ್ಕೆ ಕಾರಣವು. ಹಿ=ಪ್ರಸಿದ್ಧವು. ||೭೮||

**ಗ್ರಂಥ||** **ಪರಿಪೂರ್ಣಂ ಮಹಾಜ್ಞಾನಂ ಪರತತ್ತ್ವಪ್ರಕಾಶಕಮ್ ।**
**ಅವಲಂಬ್ಯ ಪ್ರವೃತ್ತೋ ಯೋ ಜ್ಞಾನಾಚಾರಃ ಸ ಉಚ್ಯತೇ ॥**

**ಟೀಕು||** ಪರತತ್ತ್ವಪ್ರಕಾಶಕಂ=ಪರತತ್ತ್ವವನು ಪ್ರಕಾಶಿಸುತ್ತಿರ್ದ್ದ, ಪರಿಪೂರ್ಣಂ=ವ್ಯಾಪಕವಾದ, ಮಹಾಜ್ಞಾನಂ=ಪರಶಿವ ಜ್ಞಾನವನು, ಅವಲಂಬ್ಯ=ಹಿಡಿದುಕೊಂಡು, ಯಃ=ಆವುದಾನೊಂದು ಆಚಾರವು, ಪ್ರವೃತ್ತಃ=ಪ್ರವರ್ತಿಸುತ್ತಿರ್ದ್ದಪುದು, ಸಃ=ಅದು, ಜ್ಞಾನಾಚಾರಃ=ಜ್ಞಾನಾಚಾರವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೭೯||

**ಸೂತ್ರ||** ಬಳಿಕ ಜ್ಞಾನಾಚಾರವುಳ್ಳಾತನನು ಹೇಳುತ್ತಿರ್ದ್ದಪಂ.

**ಗ್ರಂಥ||** **ನಿರ್ವಿಕಲ್ಪೇ ಪರೇ ಧಾಮ್ನಿ ನಿಷ್ಕಲೇ ಶಿವನಾಮನಿ ।**
**ಜ್ಞಾನೇನ ಯೋಜಯೇತ್ಸರ್ವಂ ಜ್ಞಾನಾಚಾರೀ ಪ್ರಕೀರ್ತಿತಃ ॥**

**ಟೀಕು||** ನಿಷ್ಕಲೇ=ಅಷ್ಟತ್ರಿಂಶತ್ಕಲಾ ರಹಿತವಾಗಿ, ನಿರ್ವಿಕಲ್ಪೇ=ನಿರ್ವಿಕಲ್ಪವಾದ, ಶಿವನಾಮನಿ= ಪರಶಿವನೆಂಬ ಹೆಸರುಳ್ಳ, ಪರೇ ಧಾಮ್ನಿ=ಪರಬ್ರಹ್ಮಾಶ್ರಯದಲ್ಲಿ, ಸರ್ವಂ=ಜಗಜ್ಜಾಲವನು, ಜ್ಞಾನೇನ=ಜ್ಞಾನದಿಂದೆ, ಯಃ=ಆವಾತನು, ಯೋಜಯೇತ್=ಕೂಡುವನು, ಸಃ=ಆತನು, ಜ್ಞಾನಾಚಾರೀ= ಜ್ಞಾನಾಚಾರವುಳ್ಳಾತನೆಂದು, ಪ್ರಕೀರ್ತಿತಃ=ಹೇಳಲುಪಟ್ಟನು. ||೮೦||

**ಸೂತ್ರ||** ಬಳಿಕ ಆ ಜ್ಞಾನಾಚಾರಿಗೆ ಕರ್ಮಕಾರ್ಪಣ್ಯವಿಲ್ಲವೆಂದು, ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಜ್ಞಾನಂ ಮುಕ್ತಿಪ್ರದಂ ಪ್ರಾಪ್ಯ ಗುರುದೃಷ್ಟಿಪ್ರಸಾದತಃ ।**
**ಕಃ ಕುರ್ಯಾತ್ಕರ್ಮಕಾರ್ಪಣ್ಯೇ ವಾಂಛಾಂ ಸಂಸಾರವರ್ಧನೇ ॥**

**ಟೀಕು||** ಮುಕ್ತಿಪ್ರದಂ=ಪರಾಪರಮೋಕ್ಷವನು ಕೊಡುತ್ತಿರ್ದ್ದ, ಜ್ಞಾನಂ=ಶಿವಜ್ಞಾನವನು, ಗುರುದೃಷ್ಟಿಪ್ರಸಾದತಃ=ಶ್ರೀಗುರುವಿನ ಕೃಪಾದೃಷ್ಟಿಯ ಪ್ರಸನ್ನತೆಯದೆಸೆಯಿಂದೆ, ಪ್ರಾಪ್ಯ=ಪಡೆದು, ಸಂಸಾರವರ್ಧನೇ=ಸಂಸಾರವನು ಹೆಚ್ಚಿಸುತ್ತಿರ್ದ್ದ, ಕರ್ಮಕಾರ್ಪಣ್ಯೇ=ಕರ್ಮದ ಕಾರ್ಪಣ್ಯದಲ್ಲಿ

ವಾಂಛಾಂ=ಬಯಕೆಯನು, ಕಃ=ಆವಾತನು, ಕುರ್ಯಾತ್=ಮಾಡುವನು? ಆವಾತನೂ ಮಾಡಲಿಲ್ಲ ವೆಂಬುದರ್ಥ ॥೮೧॥

ಗ್ರಂಥ॥ **ಕರ್ಮಜ್ಞಾನಾಗ್ನಿನಾ ದಗ್ಧಂ ನ ಪ್ರರೋಹೇತ್ಕಥಂಚನ ।**
**ಯದಾಹುಃ ಸಂಸೃತೇರ್ಮೂಲಂ ಪ್ರವಾಹಾನುಗತಂ ಬುಧಾಃ ॥**

**ಟೀಕು॥** ಯತ್=ಆವುದಾನೊಂದು ಕರ್ಮವನು, ಬುಧಾಃ=ವಿದ್ವಾಂಸರು, ಸಂಸೃತೇಃ=ಸಂಸಾರಕ್ಕೆ, ಮೂಲಂ=ಮೂಲಕಾರಣವನಾಗಿ, ಪ್ರವಾಹಾನುಗತಂ=ಜಲಪ್ರವಾಹನ್ಯಾಯದಿಂದೆ ಅನಾದಿಯಾಗಿ ಶರೀರವನು ಬಳಿವಿಡಿದು ಬಂದಿರ್ದ್ದ ಅದನಾಗಿ, ಆಹುಃ=ಹೇಳುತ್ತಿರ್ದ್ದಪರು. ತತ್ಕರ್ಮ=ಆ ಕರ್ಮಪಾಶವು, ಜ್ಞಾನಾಗ್ನಿನಾ=ಶಿವಜ್ಞಾನವೆಂಬ ಅಗ್ನಿಯಿಂದೆ, ದಗ್ಧಂ=ಸುಡಲುಪಟ್ಟುದಾಗಿ, ಕಥಂಚನ=ಆವಪ್ರಕಾರದಿಂದೆಯು, ನ ಪ್ರರೋಹೇತ್=ಮೊಳಕೆಯಾಗದು. ॥೮೨॥

ಗ್ರಂಥ॥ **ಜ್ಞಾನೇನ ಹೀನಃ ಪುರುಷಃ ಕರ್ಮಣಾ ಬದ್ಧ್ಯತೇ ಸದಾ ।**
**ಜ್ಞಾನಿನಃ ಕರ್ಮಸಂಕಲ್ಪಾ ಭವಂತಿ ಕಿಲ ನಿಷ್ಫಲಾಃ ॥**

**ಟೀಕು॥** ಜ್ಞಾನೇನ ಹೀನಃ ಪುರುಷಃ=ಶಿವಜ್ಞಾನವಿಲ್ಲದೆಯಿರ್ದ್ದ ಪುರುಷನು, ಕರ್ಮಣಾ= ಕರ್ಮಪಾಶದಿಂದೆ, ಸದಾ=ಎಲ್ಲಾಕಾಲದಲ್ಲಿಯು, ಬದ್ಧ್ಯತೇ=ಕಟ್ಟಲುಪಡುತ್ತಿರ್ದ್ದಪನು. ಜ್ಞಾನಿನಃ= ಶಿವಜ್ಞಾನಿಗೆ, ಕರ್ಮಸಂಕಲ್ಪಾಃ=ಪುಣ್ಯಪಾಪಾದಿಕರ್ಮಸಂಕಲ್ಪಂಗಳು, ನಿಷ್ಫಲಾಃ=ನಿಷ್ಫಲವಾಗಿರ್ದ್ದ ಅವು, ಭವಂತಿ ಕಿಲ=ಆಗುತ್ತಿರ್ದ್ದಪವು.

**ತಾತ್ಪರ್ಯ॥** "ತಸ್ಯ ಪುತ್ರಾ ದಾಯಮುಪಯಾಂತಿ ಸುಹೃದಃ। ಸಾಧುಕೃತ್ಯಾಂ ದ್ವಿಷಂತಃ। ಪಾಪ ಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ ಏವಂ ವಿದಿ ಪಾಪಕರ್ಮ ನ ಶ್ಲಿಷ್ಯತೇ। ಸ ಉತ್ತಮಃ ಪುರುಷಃ।" ಯೆಂಬ ಛಾಂದೋಗ್ಯ ಶ್ರುತಿಯಿಂದೆ,
"ಅದ್ವೈತಭಕ್ತಿಯುಕ್ತಸ್ಯ ಯೋಗಿನಃ ಸಕಲಾಃ ಕ್ರಿಯಾಃ।
ಸಂತಿ ದಗ್ಧಪಟನ್ಯಾಯಾತ್ಕ್ರಿಯಾಮಾತ್ರಾ ಹಿ ನ ಕ್ರಿಯಾ"॥ ಯೆಂಬ ವೀರಾಗಮ ವಾಕ್ಯದಿಂದೆಯು ಶಿವಜ್ಞಾನಿಗೆ ಕರ್ಮಪಾಶವಿಲ್ಲವೆಂದು ನಿಶ್ಚೈಸುವದು. ॥೮೩॥

**ಸೂತ್ರ॥** ಬಳಿಕ ಜ್ಞಾನಾಚಾರಸ್ಥಲವನು ಸಮಾಪ್ತಿಯಂ ಮಾಡುತ್ತಿರ್ದ್ದಪಂ.

**ವೃತ್ತ॥** **ಶುದ್ಧಾಚಾರೇ ಶುದ್ಧಭಾವೋ ವಿವೇಕೀ ಜ್ಯೋತಿಃ ಪಶ್ಯನ್ ಸರ್ವತಶ್ಶೈವಮೇಕಮ್**
**ಜ್ಞಾನಧ್ವಸ್ತಪ್ರಾಕೃತಾತ್ಮಪ್ರಪಂಚಃ ಜೀವನ್ಮುಕ್ತ ಶ್ಶೋಭತೇ ದಿವ್ಯಯೋಗೀ**

**ಟೀಕು||** ಶುದ್ಧಾಚಾರೇ=ನಿರ್ಮಲವಾದ ಜ್ಞಾನಾಚಾರದಲ್ಲಿ, ಶುದ್ಧಭಾವಃ=ನಿರ್ಮಲವಾದ ಭಾವವುಳ್ಳ, ವಿವೇಕೀ=ವಿವೇಕಿಯಾಗಿ, ಏಕಂ=ಒಂದೆಯಾದ, ಶೈವಂ ಜ್ಯೋತಿಃ=ಶಿವತೇಜಸ್ಸನು, ಸರ್ವತಃ=ಎಲ್ಲಾಕಡೆಯಲ್ಲಿ, ಪಶ್ಯನ್=ಕಾಣುತ್ತಿರ್ದ್ದ, ಜ್ಞಾನಧ್ವಸ್ತಪ್ರಾಕೃತಾತ್ಮಪ್ರಪಂಚಃ=ಶಿವಜ್ಞಾನದಿಂದೆ ಕೆಡಿಸಲುಪಟ್ಟ ಪ್ರಕೃತಿಜನ್ಯವಾದ ದೇಹಪ್ರಪಂಚುಳ್ಳ, ದಿವ್ಯಯೋಗೀ=ದಿವ್ಯಯೋಗೀಶ್ವರನು, ಜೀವನ್ಮುಕ್ತ=ಜೀವನ್ಮುಕ್ತನಾಗಿ, ಚೇಷ್ಟತೇ=ಸಂಚರಿಸುತ್ತಿರ್ದ್ದಪನು. **||೮೪||**

**ತಾತ್ಪರ್ಯ||** ಮಾಹೇಶ್ವರನಂಗತ್ರಯಕ್ಕೆ ಈ ಲಿಂಗತ್ರಯವನು ಕ್ರಮದಿಂದೆ ಸಂಬಂಧಿಸಿಕೊಂಬುದು.

**ಇತಿ ಜ್ಞಾನಾಚಾರಸ್ಥಲಮ್**

**ಇತಿ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಮಾಹೇಶ್ವರಸ್ಥಲಾಶ್ರಿತ ನವಲಿಂಗಪ್ರಸಂಗೋ ನಾಮ ಷೋಡಶಃ ಪರಿಚ್ಛೇದಃ ಸಮಾಪ್ತಃ**

## ಪ್ರಸಾದಿಸ್ಥಲಾಶ್ರಿತ ನವಲಿಂಗಪ್ರಸಂಗಃ
## ಲಿಂಗಸ್ಥಲೇ ನವಮಂ ಪ್ರಸಾದಿಸ್ಥಲಮ್

**ಅಗಸ್ತ್ಯ ಉವಾಚ॥**

**ಸೂತ್ರ॥** ಅನಂತರದಲ್ಲಿ ಅಗಸ್ತ್ಯಮುನಿಯು ಪ್ರಶ್ನೆಯಂ ಮಾಡುತ್ತಿರ್ದ್ದಪಂ.

**ಗ್ರಂಥ॥**

**ಸ್ಥಲಾನಿ ತಾನಿಚೋಕ್ತಾನಿ ಯಾನಿ ಮಾಹೇಶ್ವರಸ್ಥಲೇ ।**
**ವದಸ್ವ ಸ್ಥಲಭೇದಂ ಮೇ ಪ್ರಸಾದಿಸ್ಥಲಸಂಶ್ರಿತಮ್ ॥**

**ಟೀಕು॥** ಮಾಹೇಶ್ವರಸ್ಥಲೇ=ಮಾಹೇಶ್ವರಸ್ಥಲದಲ್ಲಿ, ಯಾನಿ=ಆವವು ಕೆಲವು ಅವಾಂತರಸ್ಥಲಂಗಳುಂಟು, ತಾನಿ=ಆ ಆ, ಸ್ಥಲಾನಿ=ಸ್ಥಲಂಗಳು, ಉಕ್ತಾನಿ=ಹೇಳಲುಪಟ್ಟವು. ಪ್ರಸಾದಿಸ್ಥಲಸಂಶ್ರಿತಂ=ಪ್ರಸಾದಿಸ್ಥಲವನಾಶ್ರಯಿಸಿರ್ದ್ದ, ಸ್ಥಲಭೇದಂ=ಸ್ಥಲಭೇದವನು, ಮೇ=ಎನಗೋಸುಗ, ಭೋ ಗಣೇಂದ್ರ=ಎಲೈ ರೇಣುಕಗಣೇಶ್ವರನೆ! ವದಸ್ವ=ಉಪದೇಶಿಸಿ ಹೇಳು ॥೧॥

**ರೇಣುಕ ಉವಾಚ॥**

**ಸೂತ್ರ॥** ಬಳಿಕ ರೇಣುಕಗಣೇಶ್ವರನು ಉತ್ತರವನು ನಿರೂಪಿಸುತ್ತಿರ್ದ್ದಪಂ.

**ಗ್ರಂಥ॥**

**ಸ್ಥಲಭೇದಾ ನವ ಪ್ರೋಕ್ತಾಃ ಪ್ರಸಾದಿಸ್ಥಲಸಂಶ್ರಿತಾಃ ।**
**ಕಾಯಾನುಗ್ರಹಣಂ ಪೂರ್ವಮಿಂದ್ರಿಯಾನುಗ್ರಹಂ ತತಃ ॥**

**ಪ್ರಾಣಾನುಗ್ರಹಣಂ ಪಶ್ಚಾತ್ತತಃ ಕಾಯಾರ್ಪಿತಂ ಮತಮ್ ।**
**ಕರಣಾರ್ಪಿತಮಾಖ್ಯಾತಂ ತತೋ ಭಾವಾರ್ಪಿತಂ ಮತಮ್ ॥**

**ಶಿಷ್ಯಸ್ಥಲಂ ತತಃ ಪ್ರೋಕ್ತಂ ಶುಶ್ರೂಷಾ ಸ್ಥಲಮೇವ ಚ ।**
**ತತಃ ಸೇವ್ಯಸ್ಥಲಂ ಚೈಷಾಂ ಕ್ರಮಶಃ ಶೃಣು ಲಕ್ಷಣಮ್ ॥**

**ಟೀಕು॥** ಪ್ರಸಾದಿಸ್ಥಲ ಸಂಶ್ರಿತಾಃ=ಪ್ರಸಾದಿಸ್ಥಲವನಾಶ್ರಯಿಸಿರ್ದ್ದ, ಸ್ಥಲಭೇದಾಃ=ಅವಾಂತರ ಸ್ಥಲಂಗಳು, ನವ=ಒಂಭತ್ತು, ಪ್ರೋಕ್ತಾಃ=ಹೇಳಲುಪಟ್ಟವು. ಆವಾವುವೆಂದಡೆ, ಪೂರ್ವಂ=ಮೊದಲು ಕಾಯಾನುಗ್ರಹಣಂ=ಕಾಯಾನುಗ್ರಹಸ್ಥಲವು, ತತಃ=ಬಳಿಕ, ಇಂದ್ರಿಯಾನುಗ್ರಹಂ=ಇಂದ್ರಿಯಾನುಗ್ರಹಸ್ಥಲವು, ಪಶ್ಚಾತ್=ಬಳಿಕ, ಪ್ರಾಣಾನುಗ್ರಹಣಂ=ಪ್ರಾಣಾನುಗ್ರಹಸ್ಥಲವು, ತತಃ=ಬಳಿಕ

ಕಾಯಾರ್ಪಿತಂ=ಕಾಯಾರ್ಪಿತಸ್ಥಲವುಯೆಂದು, ಮತಂ=ಸಂಮತವು. ತತಃ=ಬಳಿಕ ಕರಣಾರ್ಪಿತಂ= ಕರಣಾರ್ಪಿತಸ್ಥಲವೆಂದು, ಆಖ್ಯಾತಂ=ಹೇಳಲುಪಟ್ಟಿತ್ತು. ತತಃ=ಬಳಿಕ ಭಾವಾರ್ಪಿತಂ= ಭಾವಾರ್ಪಿತಸ್ಥಲವುಯೆಂದು, ತತಃ=ಬಳಿಕ, ಶಿಷ್ಯಸ್ಥಲಂ=ಶಿಷ್ಯಸ್ಥಲವು. ಪ್ರೋಕ್ತಂ=ಹೇಳಲುಪಟ್ಟಿತ್ತು. ತತಃ=ಬಳಿಕ, ಶುಶ್ರೂಷಾಸ್ಥಲಮೇವ ಚ=ಶುಶ್ರೂಷಾಸ್ಥಲವು ತತಃ=ಅನಂತರದಲ್ಲಿ ಸೇವ್ಯಸ್ಥಲಂ ಮತಂ=ಸೇವ್ಯಸ್ಥಲವು ಸಂಮತವು. ಏಷಾಂ=ಉದ್ದೇಶಿಸಲುಪಟ್ಟ ಈ ಸ್ಥಲಂಗಳ, ಲಕ್ಷಣಂ=ಲಕ್ಷಣವನು, ಕ್ರಮಶಃ=ಕ್ರಮದಿಂದೆ, ಭೋ ಮುನೇ=ಎಲೈ ಅಗಸ್ತ್ಯಮುನಿಯೆ! ಶೃಣು=ಕೇಳು. ||೪||

## ೧೯. ಪ್ರಸಾದಿಸ್ಥಲೇ ಕಾಯಾನುಗ್ರಹಸ್ಥಲಮ್

**ಸೂತ್ರ||** ಬಳಿಕ "ಶುಚಿಃ ಸಮಗ್ರೀವಶಿರಾಶ್ಶರೀರಃ"ಯೆಂಬ ಕೈವಲ್ಯಶ್ರುತ್ಯರ್ಥವನು ಪ್ರಕಟಿಸುತ್ತ ಆ ಜ್ಞಾನಾಚಾರಸಂಪನ್ನನಾದ ಶಿವಯೋಗಿಯು ತನ್ನ ಶರೀರವನು ತೋರಿಸಿ ಸರ್ವರನು ಅನುಗ್ರಹಿಸುವಾತನಾದ ಕಾರಣವಾಗಿ ಕಾಯಾನುಗ್ರಾಹಕನೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||**

**ಅನುಗೃಹ್ಣಾತಿ ಯಲ್ಲೋಕಾನ್ ಸ್ವಕಾಯಂ ದರ್ಶಯನ್ನಸೌ |**
**ತಸ್ಮಾದೇವ ಸಮಾಖ್ಯಾತಃ ಕಾಯಾನುಗ್ರಹನಾಮಕಃ ||**

**ಟೀಕು||** ಅಸೌ=ಈ ಜ್ಞಾನಾಚಾರ ಸಂಪನ್ನನಾದ ಶಿವಯೋಗಿಯು, ಯತ್=ಆವುದಾನೊಂದು ಕಾರಣವಾಗಿ, ಸ್ವಕಾಯಂ=ತನ್ನ ದೇಹವನು, ದರ್ಶಯನ್‌ಸನ್=ತೋರಿಸುತ್ತಿದ್ದಾತನಾಗುತಲು, ಲೋಕಾನ್=ಸಮಸ್ತ ಜನರುಗಳನು, ಅನುಗೃಹ್ಣಾತಿ=ಅನುಗ್ರಹಿಸುತ್ತಿರ್ದಪನು. ತಸ್ಮಾತ್=ಅದು ಕಾರಣವಾಗಿ, ಏಷಃ=ಈತನು, ಕಾಯಾನುಗ್ರಹನಾಮಕಃ=ಕಾಯಾನುಗ್ರಹನಾಮವುಳ್ಳಾತನೆಂದು, ಸಮಾಖ್ಯಾತಃ=ಹೇಳಲುಪಟ್ಟನು. ||೫||

**ಗ್ರಂಥ||**

**ಯಥಾ ಶಿವೋಽನುಗೃಹ್ಣಾತಿ ಮೂರ್ತಿಮಾವಿಶ್ಯ ದೇಹಿನಃ |**
**ತಥಾ ಯೋಗೀ ಶರೀರಸ್ಥಃ ಸರ್ವಾನುಗ್ರಾಹಕೋ ಭವೇತ್ ||**

**ಟೀಕು||** ಶಿವಃ= ಪರಶಿವನು, ಮೂರ್ತಿಂ=ಚಂದ್ರಧರಾಧಿ ಲೀಲಾವಿಗ್ರಹವನು, ಆವಿಶ್ಯ=ಅಧಿಷ್ಠಿಸಿಕೊಂಡು, ದೇಹಿನಃ=ದೇಹಿಗಳನು, ಯಥಾ=ಹೇಗೆ, ಅನುಗೃಹ್ಣಾತಿ=ಅನುಗ್ರಹಿಸುತ್ತಿರ್ದಪನು ಆ ಪ್ರಕಾರದಿಂದೆ, ಯೋಗೀ= ಶಿವಯೋಗೀಶ್ವರನು, ಶರೀರಸ್ಥಃ ಸನ್=ಶರೀರದಲ್ಲಿಯಿರುತ್ತಿರ್ದಾತನಾಗುತಲು, ಸರ್ವಾನುಗ್ರಾಹಕಃ=ಸಮಸ್ತರನು ಅನುಗ್ರಹಿಸುತ್ತಿರ್ದಾತನು, ಭವೇತ್=ಅಹನು. ||೬||

**ಗ್ರಂಥ||**

**ಶಿವಃ ಶರೀರಯೋಗೇಽಪಿ ಯಥಾ ಸಂಗವಿವರ್ಜಿತಃ |**
**ತಥಾ ಯೋಗೀ ಶರೀರಸ್ಥಃ ನಿಸ್ಸಂಗೋ ವರ್ತತೇ ಸದಾ ||**

**ಟೀಕು||** ಶಿವಃ=ಶಿವನು, ಶರೀರಯೋಗೇಽಪಿ=ಶರೀರಸಂಬಂಧ ಉಂಟಾಗಲಿಕೆಯಾಗಿಯು, ಯಥಾ=ಹೇಗೆ, ಸಂಗವಿವರ್ಜಿತಃ=ವಿಷಯಸಂಗರಹಿತನು, ತಥಾ=ಹಾಗೆಯೇ, ಯೋಗೀ=ಶಿವಯೋಗಿಯು, ಶರೀರಸ್ಥಃ ಅಪಿ=ಶರೀರದಲ್ಲಿ ಇರುತ್ತಿದ್ದಾತನಾಯಿತ್ತಾದೊಡೆಯು, ಸದಾ=ಎಲ್ಲಾ ಕಾಲದಲ್ಲಿಯೂ, ನಿಸ್ಸಂಗಃ=ನಿಸ್ಸಂಗನಾಗಿ, ವರ್ತತೇ=ವರ್ತಿಸುತ್ತಿರ್ದ್ದಪನು. ||೭||

**ಸೂತ್ರ||** ಬಳಿಕ ಈ ಪ್ರಕಾರದಿಂದೆ ಶಿವೋಪಮಾನನಾದ ಶಿವಯೋಗಿಗೆ ಮಾಯಾ ಪ್ರಪಂಚಿಲ್ಲವೆಂದು ಪಂಚಸೂತ್ರಂಗಳಿಂದೆ ದೃಷ್ಟಾಂತಪೂರ್ವಕವಾಗಿ ಹೇಳುತ್ತಿರ್ದ್ದಪಂ.

ಗ್ರಂಥ|| **ಶಿವಭಾವನಯಾ ಯುಕ್ತಃ ಸ್ಥಿರಯಾ ನಿರ್ವಿಕಲ್ಪಯಾ ।**
**ಶಿವೋ ಭವತಿ ನಿರ್ಧೂತಮಾಯಾವೇಶಪರಿಪ್ಲವಃ ॥**

**ಟೀಕು||** ನಿರ್ವಿಕಲ್ಪಯಾ=ನಿರ್ವಿಕಲ್ಪನಾಗಿ, ಸ್ಥಿರಯಾ=ಸ್ಥಿರವಾಗಿರ್ದ್ದ, ಶಿವಭಾವನಯಾ=ಶಿವಭಾವದೊಡನೆ, ಯುಕ್ತಃ=ಕೂಡಿರ್ದ್ದ ಯೋಗೀಶ್ವರನು, ನಿರ್ಧೂತಮಾಯಾವೇಶಪರಿಪ್ಲವಃ ಸನ್=ಕೊಡಹಲುಪಟ್ಟ ಮಾಯಾವೇಶದಿಂದಲಾದ ಬಾಧೆಯುಳ್ಳಾತನಾಗುತಲು, ಶಿವೋ ಭವತಿ=ಶಿವನೆ ಆಗುತ್ತಿರ್ದ್ದಪನು. ||೮||

ಗ್ರಂಥ|| **ಚಿತ್ತವೃತ್ತಿಷು ಲೀನಾಸು ಶಿವೇ ಚಿತ್ಸುಖಸಾಗರೇ ।**
**ಅವಿದ್ಯಾಕಲ್ಪಿತಂ ವಸ್ತು ನಾನ್ಯತ್ಪಶ್ಯತಿ ಸಂಯಮೀ ॥**

**ಟೀಕು||** ಚಿತ್ಸುಖಸಾಗರೇ=ಚಿದಾನಂದಕ್ಕೆ ಸಮುದ್ರಸ್ಥಾನವಾದ, ಶಿವೇ=ಪರಮಶಿವನಲ್ಲಿ, ಚಿತ್ತವೃತ್ತಿಷು=ಮನೋವರ್ತನೆಗಳು, ಲೀನಾಸು ಸತ್ಸು=ಲಯವನೆಯ್ದಲಿಕೆಯಾಗಿ, ಸಂಯಮೀ=ಶಿವಯೋಗಿಯು, ಅವಿದ್ಯಾಕಲ್ಪಿತಂ=ಮಾಯೆಯಿಂದೆ ಕಲ್ಪಿಸಲುಪಟ್ಟ, ಅನ್ಯತ್ ವಸ್ತು=ಮತ್ತೊಂದು ವಸ್ತುವನು, ನ ಪಶ್ಯತಿ=ಕಾಣುತ್ತಿರನು. ||೯||

ಗ್ರಂಥ|| **ನೇದಂ ರಜತಮಿತ್ಯುಕ್ತೇ ಯಥಾ ಶುಕ್ತಿಃ ಪ್ರಕಾಶತೇ ।**
**ನೇದಂ ಜಗದಿತಿ ಜ್ಞಾತೇ ಶಿವತತ್ತ್ವಂ ಪ್ರಕಾಶತೇ ॥**

**ಟೀಕು||** ಇದಂ ರಜತಂ ನೇತಿ=ಇದು ಬೆಳ್ಳಿಯಲ್ಲವೆಂದು, ಉಕ್ತೇ ಸತಿ=ನುಡಿಯಲುಪಡಲಿಕೆಯಾಗಿ, ಯಥಾ=ಹೇಗೆ, ಶುಕ್ತಿಃ=ಚಿಪ್ಪು, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪುದು. ತಥಾ=ಹಾಗೆಯೇ, ಇದಂ ಜಗತ್ ನೇತಿ=ಇದು ಮಾಯಾಕಲ್ಪಿತವಾದ ಜಗತ್ತಲ್ಲವೆಂದು, ಜ್ಞಾತೇ ಸತಿ=ಅರಿಯಲುಪಡಲಿಕೆಯಾಗಿ, ಶಿವತತ್ತ್ವಂ=ಶಿವತತ್ತ್ವವೆ, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪುದು. ||೧೦||

ಗ್ರಂಥ॥ ಯಥಾ ಸ್ವಪ್ನಕೃತಂ ವಸ್ತು ಪ್ರಬೋಧೇನೈವ ಶಾಮ್ಯತಿ ।
ತಥಾ ಶಿವಸ್ಯ ವಿಜ್ಞಾನೇ ಸಂಸಾರಂ ನೈವ ಪಶ್ಯತಿ ॥

**ಟೀಕು॥** ಸ್ವಪ್ನಕೃತಂ=ಸ್ವಪ್ನದಲ್ಲಿ ಮಾಡಲುಪಟ್ಟ, ವಸ್ತು=ವಸ್ತುವು, ಪ್ರಬೋಧೇನೈವ= ಎಚ್ಚರಿರು ವದರಿಂದೆ, ಯಥಾ=ಹೇಗೆ, ಶಾಮ್ಯತಿ=ತಗ್ಗುತ್ತಿರ್ದ್ದಪುದು. ತಥಾ=ಹಾಗೆಯೇ, ಶಿವಸ್ಯ ಪಿಜ್ಞಾನೇ ಸತಿ=ಶಿವಜ್ಞಾನವಾಗಲಿಕೆಯಾಗಿ, ಸಂಸಾರಂ=ಸಂಸಾರವನು, ಏಷಃ=ಈ ಶಿವಯೋಗಿಯು, ನೈವ ಪಶ್ಯತಿ=ಕಾಣುತ್ತಿರನು. ॥೧೧॥

ಗ್ರಂಥ॥ ಅಜ್ಞಾನಮೇವ ಸರ್ವೇಷಾಂ ಸಂಸಾರಭ್ರಮಕಾರಣಮ್ ।
ತನ್ನಿವೃತ್ತೌ ಕಥಂ ಭೂಯಃ ಸಂಸಾರಭ್ರಮದರ್ಶನಮ್ ॥

**ಟೀಕು॥** ಸರ್ವೇಷಾಂ=ಸರ್ವರಿಗೂ, ಅಜ್ಞಾನಮೇವ=ಅಜ್ಞಾನವೆ, ಸಂಸಾರಭ್ರಮಕಾರಣಂ= ಸಂಸಾರಭ್ರಾಂತಿಗೆ ಕಾರಣವು. ತನ್ನಿವೃತ್ತೌ ಸತ್ಯಾಂ=ಆ ಅಜ್ಞಾನದ ತೊಲಗಿಕೆಯಾಗಲಾಗಿ, ಸಂಸಾರಭ್ರಮದರ್ಶನಂ=ಸಂಸಾರ ಭ್ರಾಂತಿಯ ದರ್ಶನವು, ಭೂಯಃ=ಮರಳಿ, ಕಥಂ=ಹೇಗಹುದು? ಹೇಗೆಯು ಆಗದೆಂಬುದರ್ಥ. ॥೧೨॥

**ಸೂತ್ರ॥** ಬಳಿಕ ಕಾಯಾನುಗ್ರಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ ಗಲಿತಾಹಂಕೃತಿಗ್ರಂಥಿಃ ಕ್ರೀಡಾಕಲ್ಪಿತವಿಗ್ರಹಃ ।
ಜೀವನ್ಮುಕ್ತಶ್ಚರೇದ್ಯೋಗೀ ದೇಹಿವನ್ನಿರುಪಾಧಿಕಃ ॥

**ಟೀಕು॥** ಗಲಿತಾಹಂಕೃತಿಗ್ರಂಥಿಃ=ತೊಲಗಲುಪಟ್ಟ ಮೂಲಾಹಂಕಾರದ ಗ್ರಂಥಿಯುಳ್ಳ, ಕ್ರೀಡಾಕಲ್ಪಿತವಿಗ್ರಹಃ=ಕ್ರೀಡಾರ್ಥವಾಗಿ ಕಲ್ಪಿಸಲುಪಟ್ಟ ಶರೀರವುಳ್ಳ, ಜೀವನುಕ್ತಃ=ಜೀವನುಕ್ತನಾಗಿ, ನಿರುಪಾಧಿಕಃ=ಉಪಾಧಿರಹಿತನಾದ, ಯೋಗೀ=ಶಿವಯೋಗಿಯು, ದೇಹಿವತ್=ದೇಹಿ ಯೋಪಾದಿಯಲ್ಲಿ, ಚರೇತ್=ಚರಿಸುವನು. ॥೧೩॥

ಇತಿ ಕಾಯಾನುಗ್ರಹಸ್ಥಲಮ್

## ೨೦. ಪ್ರಸಾದಿಸ್ಥಲೇ ಇಂದ್ರಿಯಾನುಗ್ರಹಸ್ಥಲಮ್

**ಸೂತ್ರ||** ಬಳಿಕ "ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಂ ।
ಹೃದೀಂದ್ರಿಯಾಣಿ ಮನಸಾ ಸಂನಿವೇಶ್ಯ"॥ ಯೆಂಬ ಶ್ವೇತಾಶ್ವತರ ಶ್ರುತ್ಯರ್ಥವನು ಪ್ರಕಟಿಸುತ್ತ ಆ ಕಾಯಾನುಗ್ರಹಸಂಪನ್ನನಾದ ಶಿವಯೋಗಿಯ ಇಂದ್ರಿಯಂಗಳ ವಿವೇಕವೆ ಸರ್ವರಿಗೂ ಇಂದ್ರಿಯಾನುಗ್ರಹವೆಂದು ಹೇಳುತ್ತಿರ್ದಪಂ.

**ಗ್ರಂಥ||** **ದರ್ಶನಾತ್ಪರಕಾಯಸ್ಯ ಕರಣಾನಾಂ ವಿವೇಕತಃ ।**
**ಇಂದ್ರಿಯಾನುಗ್ರಹಃ ಪ್ರೋಕ್ತಃ ಸರ್ವೇಷಾಂ ತತ್ತ್ವವೇದಿಭಿಃ ॥**

**ಟೀಕು||** ಪರಕಾಯಸ್ಯ=ಸರ್ವೋತ್ಕರ್ಷವಾದ ಕಾಯಾನುಗ್ರಹಸಂಪನ್ನನಾದ ಆ ಶಿವಯೋಗಿಯ, ದರ್ಶನಾತ್=ಕಾಬುದರದೆಸೆಯಿಂದಲಾದ, ಕರಣಾನಾಂ ವಿವೇಕತಃ=ಇಂದ್ರಿಯಂಗಳ ವಿವೇಕದದೆಸೆಯಿಂದೆ, ಸರ್ವೇಷಾಂ=ಸಮಸ್ತರಿಗೂ, ಇಂದ್ರಿಯಾನುಗ್ರಹಃ=ಇಂದ್ರಿಯಾನುಗ್ರಹವು, ತತ್ತ್ವವೇದಿಭಿಃ= ತತ್ತ್ವಜ್ಞಾನಿಗಳಿಂದೆ, ಪ್ರೋಕ್ತಃ=ಹೇಳಲುಪಟ್ಟಿತ್ತು. ||೧೪||

**ಸೂತ್ರ||** ಬಳಿಕ ಇಂದ್ರಿಯ ವ್ಯಾಪಾರವನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಇಂದ್ರಿಯಾಣಾಂ ಸಮಸ್ತಾನಾಂ ಸ್ವಾರ್ಥೇಷು ಸತಿ ಸಂಗಮೇ ।**
**ರಾಗೋ ವಾ ಜಾಯತೇ ದ್ವೇಷಸ್ತೌ ಯೋಗೀ ಪರಿವರ್ಜಯೇತ್ ॥**

**ಟೀಕು||** ಸಮಸ್ತಾನಾಂ ಇಂದ್ರಿಯಾಣಾಂ=ಶ್ರೋತ್ರಾದಿ ಸರ್ವೇಂದ್ರಿಯಂಗಳಿಗೆ, ಸ್ವಾರ್ಥೇಷು= ತಮ್ಮ ತಮ್ಮ ವಿಷಯಂಗಳಲ್ಲಿ, ಸಂಗಮೇ ಸತಿ=ಸರ್ವೇಂದ್ರಿಯಂಗಳಿಗೆ ಸಂಪರ್ಕವಾಗಲಿಕೆಯಾಗಿ ರಾಗೋವಾ= ರಾಗವಾಯಿತ್ತಾದೊಡೆಯು, ದ್ವೇಷೋ ವಾ=ದ್ವೇಷವಾಯಿತ್ತಾದೊಡೆಯು, ಜಾಯತೇ=ಹುಟ್ಟುತ್ತಿರ್ದಪುದು; ತತ್=ಆ ರಾಗ ದ್ವೇಷಂಗಳನು, ಯೋಗೀ=ಯೋಗೀಶ್ವರನು, ಪರಿವರ್ಜಯೇತ್=ಬಿಡುವುದು. ||೧೫||

**ಗ್ರಂಥ||** **ಇಂದ್ರಿಯಾಣಾಂ ಬಹಿರ್ವೃತ್ತಿಃ ಪ್ರಪಂಚಸ್ಯ ಪ್ರಕಾಶಿನೀ ।**
**ಅಂತಃ ಶಿವೇ ಸಮಾವೇಶಃ ನಿಷ್ಪ್ರಪಂಚಸ್ಯ ಕಾರಣಮ್ ॥**

**ಟೀಕು||** ಇಂದ್ರಿಯಾಣಾಂ=ಸರ್ವೇಂದ್ರಿಯಂಗಳ, ಬಹಿರ್ವೃತ್ತಿಃ=ಬಹಿರ್ಮುಖವಾದ ವ್ಯಾಪಾರವೆ, ಪ್ರಪಂಚಸ್ಯ=ಜಗತ್ಪ್ರಪಂಚನು, ಪ್ರಕಾಶಿನೀ=ಪ್ರಕಾಶಿಸುತ್ತಿರ್ದ ಅದು, ಅಂತಃ=ಅಂತರ್ಮುಖವಾಗಿ, ಶಿವೇ=ಶಿವನಲ್ಲಿ, ಸಮಾವೇಶಃ=ಇರುವತನವು, ನಿಷ್ಪ್ರಪಂಚಸ್ಯ=ತೊಲಗಲುಪಟ್ಟ ಪ್ರಪಂಚೆಗೆ, ಕಾರಣಂ= ಕಾರಣವಾಗಿದ್ದ ಅದು. ||೧೬||

ಗ್ರಂಥ॥ **ಕ್ಷಣಮಂತಃ ಶಿವಂ ಪಶ್ಯನ್ ಕೇವಲೇನೈವ ಚೇತಸಾ ।**
**ಬಾಹ್ಯಾರ್ಥಾನಾಮನುಭವಂ ಕ್ಷಣಂ ಕುರ್ವನ್ ದೃಗಾದಿಭಿಃ ॥**

**ಸರ್ವೇಂದ್ರಿಯನಿರೂಢೋಽಪಿ ಸರ್ವೇಂದ್ರಿಯವಿಹೀನವಾನ್ ।**
**ಶಿವಾಹಿತಮನಾ ಯೋಗೀ ಶಿವಂ ಪಶ್ಯತಿ ನಾಪರಮ್ ॥**

**ಟೀಕು॥** ಅಂತಃ=ಅಂತರ್ಮುಖವಾಗಿ, ಶಿವಂ=ಶಿವನನು, ಕೇವಲೇನಚೇತಸೈವ=ಬರಿಯ ಚಿತ್ತದಿಂದವೆ, ಕ್ಷಣಂ=ಕ್ಷಣ ಮಾತ್ರವು, ಪಶ್ಯನ್=ನೋಡುತ್ತಿರ್ದ್ದ, ಬಾಹ್ಯಾರ್ಥಾನಾಂ=ಬಾಹ್ಯ ವಿಷಯಂಗಳ, ಅನುಭವಂ=ಅನುಭವವನು, ದೃಗಾದಿಭಿಃ=ನೇತ್ರಾದಿಂದ್ರಿಯಂಗಳಿಂದೆ, ಕ್ಷಣಂ=ಕ್ಷಣ ಮಾತ್ರವು, ಕುರ್ವನ್=ಮಾಡುತ್ತಿರ್ದ್ದ, ಶಿವಾಹಿತಮನಾ ಯೋಗೀ=ಶಿವನಲ್ಲಿಯಿರಿಸಲುಪಟ್ಟ ಮನಸ್ಸುಳ್ಳ ಯೋಗೀಶ್ವರನು, ಸರ್ವೇಂದ್ರಿಯನಿರೂಢೋಽಪಿ=ಸರ್ವೇಂದ್ರಿಯಂಗಳಲ್ಲಿ ಆಸಕ್ತನಾಗಿಯು, ಸರ್ವೇಂದ್ರಿಯ ವಿಹೀನವಾನ್ ಸನ್=ಸರ್ವೇಂದ್ರಿಯಂಗಳಿಂದೆ ವಿರಹಿತನಾಗಿದ್ದಾತನಾಗುತಲು, ಶಿವಂ= ಶಿವನನು, ಪಶ್ಯತಿ=ಕಾಣುತ್ತಿರ್ದ್ದಪನು; ಅಪರಂ=ಮತ್ತೊಂದು ವಸ್ತುವನು, ನ ಪಶ್ಯತಿ= ಕಾಣುತ್ತಿರನು. ॥೧೮॥

ಗ್ರಂಥ॥ **ನ ಜರಾ ಮರಣಂ ನಾಸ್ತಿ ನ ಪಿಪಾಸಾ ನ ಚ ಕ್ಷುಧಾ ।**
**ಶಿವಾಹಿತೇಂದ್ರಿಯಸ್ಯಾಸ್ಯ ನಿರ್ಮಾನಸ್ಯ ಮಹಾತ್ಮನಃ ॥**

**ಟೀಕು॥** ಶಿವಾಹಿತೇಂದ್ರಿಯಸ್ಯ=ಶಿವನಲ್ಲಿ ಇರಿಸಲುಪಟ್ಟ ಇಂದ್ರಿಯ ವ್ಯಾಪಾರವುಳ್ಳ, ನಿರ್ಮಾನಸ್ಯ=ನಿರಭಿಮಾನಿಯಾಗಿ, ಮಹಾತ್ಮನಃ=ಮಹಾಪುರುಷನಾಗಿರ್ದ್ದ, ಅಸ್ಯ=ಈ ಯೋಗೀಶ್ವರನಿಗೆ, ಜರಾ=ಮುಪ್ಪು, ನ=ಇಲ್ಲ; ಮರಣಂ=ಮರಣವು, ನ=ಇಲ್ಲ; ಕ್ಷುಧಾ=ಹಸಿವು, ನ=ಇಲ್ಲ; ಪಿಪಾಸಾ ಚ=ಬಾಯಾರಿಕೆಯು, ನ=ಇಲ್ಲ.

**ತಾತ್ಪರ್ಯ॥** ಶರೀರಧರ್ಮವಾದ ಜರಾಮರಣಂಗಳು, ಪ್ರಾಣಧರ್ಮವಹ ಹಸಿವು ತೃಷೆಗಳು, ಇಂದ್ರಿಯಾನುಗ್ರಹಸಂಪನ್ನನಿಗೆ ಇಲ್ಲವೆಂಬುದರ್ಥ. ॥೧೯॥

**ಸೂತ್ರ॥** ಬಳಿಕ "ಸರ್ವೇಷು ಗಾತ್ರೇಷು ಶಿರಃ ಪ್ರಧಾನಂ ।
ಸರ್ವೇಂದ್ರಿಯಾಣಾಂ ನಯನಂ ಪ್ರಧಾನಮ್" ॥
"ಇಂದ್ರಿಯಾಣಾಂ ಮನೋ ನಾಥೋ
ಮನೋನಾಥಸ್ತು ಮಾರುತಃ"॥ ಯೆಂಬ ಪುರಾಣವಾಕ್ಯಾರ್ಥವನು ಪ್ರಕಟಿಸುತ್ತ ಸರ್ವೇಂದ್ರಿಯ ವ್ಯಾಪಾರಕ್ಕೆ ಕಾರಣವಾದ ಮನೋದೃಷ್ಟಮರುತ್ತುಗಳ ನಿಗ್ರಹವನು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಮನೋ ಯತ್ರ ಪ್ರವರ್ತೇತ ತತ್ರ ಸರ್ವೇಂದ್ರಿಯ ಸ್ಥಿತಿಃ |**
**ಶಿವೇ ಮನಸಿ ಸಲ್ಲೀನೇ ಕ್ವ ಚೇಂದ್ರಿಯವಿಚಾರಣಾ ||**

**ಟೀಕು||** ಮನಃ=ಮನಸ್ಸು, ಯತ್ರ=ಆವೆಡೆಯಲ್ಲಿ, ಪ್ರವರ್ತೇತ=ಪ್ರವರ್ತಿಸುವುದು; ತತ್ರ=ಅಲ್ಲಿ ಸರ್ವೇಂದ್ರಿಯ ಸ್ಥಿತಿಃ=ಸರ್ವೇಂದ್ರಿಯಂಗಳ ಪ್ರವರ್ತನವು; ಮನಸಿ=ಮನಸ್ಸು, ಶಿವೇ=ಶಿವನಲ್ಲಿ, ಸಲ್ಲೀನೇ ಸತಿ=ಅಡಗಲಿಕೆಯಾಗಿ, ಇಂದ್ರಿಯವಿಚಾರಣಾ=ಇಂದ್ರಿಯಂಗಳ ವಿಚಾರವು, ಕ್ವ ಚ=ಎತ್ತಣದು? ||೨೦||

**ಗ್ರಂಥ||** **ಯದ್ಯತ್ಪಶ್ಯನ್ ದೃಶಾ ಯೋಗೀ ಮನಸಾ ಚಿಂತಯತ್ಯಪಿ |**
**ತತ್ತತ್ಸರ್ವಂ ಶಿವಾಕಾರಂ ಸಂವಿದ್ರೂಪಂ ಪ್ರಕಾಶತೇ ||**

**ಟೀಕು||** ಯೋಗೀ=ಶಿವಯೋಗಿಯು, ದೃಶಾ=ದೃಷ್ಟಿಯಿಂದೆ, ಯತ್ ಯತ್=ಆವಾವುದನು, ಪಶ್ಯನ್= ನೋಡುತ್ತ ಮನಸಾ ಅಪಿ=ಚಿತ್ತದಿಂದಲಾಯಿತ್ತಾದೊಡೆ, ಚಿಂತಯತಿ=ಧ್ಯಾನಿಸುತ್ತಿರ್ದಪನು; ತತ್ ತತ್ ಸರ್ವಂ=ಆಯಾ ಸಮಸ್ತವು, ಸಂವಿದ್ರೂಪಂ=ಅರಿವೆ ಸ್ವರೂಪವಾಗುಳ್ಳ, ಶಿವಾಕಾರಂ=ಶಿವ ಸ್ವರೂಪನಾಗಿ, ಪ್ರಕಾಶತೇ=ಪ್ರಕಾಶಿಸುತ್ತಿರ್ದಪುದು. ||೨೧||

**ಗ್ರಂಥ||** **ಕರಣೈಃ ಸಹಿತಂ ಪ್ರಾಣಂ ಮನಸ್ಯಾಧಾಯ ಸಂಯಮೀ |**
**ಯೋಜಯೇತ್ತಚ್ಛಿವಂ ಸಾಕ್ಷಾದ್ಯತ್ರ ನಾಸ್ತಿ ಜಗದ್ಭ್ರಮಃ ||**

**ಟೀಕು||** ಕರಣೈಃ=ನೇತ್ರಾದಿಂದ್ರಿಯಂಗಳೊಡನೆ, ಸಹಿತಂ=ಕೂಡಿರ್ದ, ಪ್ರಾಣಂ=ಪ್ರಾಣ ವಾಯುವನು, ಮನಸಿ=ಮನಸ್ಸಿನಲ್ಲಿ, ಆಧಾಯ=ಇರಿಸಿ, ಯಃ ಸಂಯಮೀ=ಆವ ಯೋಗೀಶ್ವರನು, ಯೋಜಯೇತ್=ಕೂಡುವನು; ಸಃ=ಆತನು, ಯತ್ರ=ಆವುದಾನೊಂದು ಬ್ರಹ್ಮದಲ್ಲಿ, ಜಗದ್ಭ್ರಮಃ= ಜಗದ್ಭ್ರಾಂತಿಯು, ನಾಸ್ತಿ=ಇಲ್ಲ. ಸಾಕ್ಷಾತ್=ಪ್ರತ್ಯಕ್ಷವಾದ, ತಚ್ಛಿವಃ=ಆ ಶಿವನು, ಭವೇತ್=ಅಹನು. ||೨೨||

**ಸೂತ್ರ||** ಬಳಿಕ ಇಂದ್ರಿಯಾನುಗ್ರಹಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ||** **ಸರ್ವೇಂದ್ರಿಯಪ್ರವೃತ್ತ್ಯಾ ಚ ಬಹಿರಂತಃ ಶಿವಂ ಯಜನ್ |**
**ಸ್ವಚ್ಛಂದಚಾರೀ ಸರ್ವತ್ರ ಸುಖೀ ಭವತಿ ಸಂಯಮೀ ||**

**ಟೀಕು||** ಸಂಯಮೀ=ಶಿವಯೋಗೀಶ್ವರನು, ಸರ್ವೇಂದ್ರಿಯಪ್ರವೃತ್ತ್ಯಾ ಚ=ಸರ್ವೇಂದ್ರಿಯಂಗಳ ಪ್ರವರ್ತನೆಯಿಂದವೆ, ಬಹಿರಂತಃ=ಹೊರಗೆವೊಳಗೆ, ಶಿವಂ=ಇಷ್ಟಪ್ರಾಣಾತ್ಮಕವಾದ ಶಿವಲಿಂಗವನು,

ಯಜನ್ ಸನ್=ಪೂಜಿಸುತ್ತಿರ್ದ್ದಾತನಾಗುತವು, ಸರ್ವತ್ರ=ಎಲ್ಲಾ ಎಡೆಯಲ್ಲಿಯು, ಸ್ವಚ್ಛಂದಚಾರೀ=ಸ್ವೇಚ್ಛಾಚಾರವುಳ್ಳಾತನಾಗಿ, ಸುಖೀ ಭವತಿ=ಸುಖಿಯಾಗುತ್ತಿರ್ದ್ದಪನು. ॥೨೩॥

ಇತಿ ಇಂದ್ರಿಯಾನುಗ್ರಹಸ್ಥಲಮ್

## ೨೧. ಪ್ರಸಾದಿಸ್ಥಲೇ ಪ್ರಾಣಾನುಗ್ರಹಸ್ಥಲಮ್

**ಸೂತ್ರ॥** ಬಳಿಕ "ಪ್ರಾಣಾನ್ ಪ್ರಪೀಡ್ಯೇಹ ಸಂಯುಕ್ತಚೇಷ್ಟಃ।
ಕ್ಷೀಣೇ ಪ್ರಾಣೇ ನಾಸಿಕಯೋಚ್ಛ್ವಸೀತ"॥ ಯೆಂಬ ಶ್ವೇತಾಶ್ವತರ ಶ್ರುತ್ಯರ್ಥವನು ಪ್ರಕಟಿಸುತ್ತ ಆ ಇಂದ್ರಿಯಾನುಗ್ರಹಸಂಪನ್ನನಾದ ಯೋಗೀಶ್ವರನ ತಾತ್ಪರ್ಯವಾಗಿ ನೋಡುವುದೆ ಸರ್ವರಿಗೂ ಪ್ರಾಣಾನುಗ್ರಹವೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** **ಶಿವಸ್ಯ ಪರಕಾಯಸ್ಯ ಯತ್ತಾತ್ಪರ್ಯಾವಲೋಕನಮ್ ।**
**ತತ್ಪ್ರಾಣಾನುಗ್ರಹಃ ಪ್ರೋಕ್ತಃ ಸರ್ವೇಷಾಂ ತತ್ತ್ವದರ್ಶಿಭಿಃ ॥**

**ಟೀಕು॥** ಶಿವಸ್ಯ=ಪರಶಿವನಸ್ವರೂಪನಾಗಿ, ಪರಕಾಯಸ್ಯ=ಪರಬ್ರಹ್ಮವೆ ಕಾಯವಾಗುಳ್ಳಾತನಾಗಿ ಇಂದ್ರಿಯಾನುಗ್ರಹಸಂಪನ್ನನಾದ ಆ ಶಿವಯೋಗಿಯು, ಯತ್=ಆವುದಾನೊಂದು ತಾತ್ಪರ್ಯಾವಲೋಕನಂ=ತಾತ್ಪರ್ಯವಾದ ದರ್ಶನವುಂಟು, ತತ್= ಅದು, ಸರ್ವೇಷಾಂ= ಸಮಸ್ತರಿಗೂ, ಪ್ರಾಣಾನುಗ್ರಹಃ=ಪ್ರಾಣಾನುಗ್ರಹವೆಂದು, ತತ್ತ್ವದರ್ಶಿಭಿಃ=ತತ್ತ್ವಜ್ಞಾನಿಗಳಿಂದೆ, ಪ್ರೋಕ್ತಃ= ಹೇಳಲುಪಟ್ಟಿತ್ತು. ॥೨೪॥

**ಸೂತ್ರ॥** ಬಳಿಕ ಕೇವಲ ಕುಂಭಕದಿಂದಲಾದ ಪ್ರಾಣಲಯವನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಶಿವೇ ಪ್ರಾಣೋ ವಿಲೀನೋಽಪಿ ಯೋಗಿನೋ ಯೋಗಮಾರ್ಗತಃ ।**
**ಸ್ವಶಕ್ತಿವಾಸನಾಯೋಗಾದ್ಧಾರಯಂತ್ಯೇವ ವಿಗ್ರಹಮ್ ॥**

**ಟೀಕು॥** ಯೋಗಿನಃ=ಶಿವಯೋಗೀಶ್ವರನಿಗೆ, ಯೋಗಮಾರ್ಗತಃ=ಕೇವಲ ಕುಂಭಕರೂಪವಾದ ಯೋಗಮಾರ್ಗದದೆಸೆಯಿಂದೆ, ಪ್ರಾಣಃ=ಪ್ರಾಣವು, ಶಿವೇ=ಶಿವನಲ್ಲಿ, ವಿಲೀನೋಽಪಿ= ಅಡಗಿದ್ದ ದಾಯಿತ್ತಾದೊಡೆಯು ಸ್ವಶಕ್ತಿವಾಸನಾಯೋಗಾತ್=ನಿಜಶಕ್ತಿಯ ವಾಸನಾಯೋಗದದೆಸೆಯಿಂದವೆ, ವಿಗ್ರಹಂ=ದೇಹವನು, ಧಾರಯಂತ್ಯೇವ=ಧರಿಸುತ್ತಿರ್ದ್ದಪುದೆ. ॥೨೫॥

**ಗ್ರಂಥ||** **ಪ್ರಾಣೋ ಯಸ್ಯ ಲಯಂ ಯಾತಿ ಶಿವೇ ಪರಮಕಾರಣೇ ।**
**ಕುತಸ್ತಸ್ಯೇಂದ್ರಿಯಸ್ಫೂರ್ತಿಃ ಕುತಃ ಸಂಸಾರದರ್ಶನಮ್ ॥**

**ಟೀಕು||** ಯಸ್ಯ=ಆವ ಯೋಗೀಶ್ವರನಿಗೆ, ಪ್ರಾಣಃ=ಪ್ರಾಣವಾಯುವು, ಪರಮಕಾರಣೇ ಶಿವೇ=ಪರಮಕಾರಣವಾದ ಶಿವನಲ್ಲಿ, ಲಯಂ=ಲಯವನು, ಯಾತಿ=ಎಯ್ದುತ್ತಿರ್ದಪುದು. ತಸ್ಯ=ಆ ಶಿವಯೋಗೀಶ್ವರನಿಗೆ, ಇಂದ್ರಿಯಸ್ಫೂರ್ತಿಃ=ಇಂದ್ರಿಯವ್ಯಾಪಾರವು, ಕುತಃ=ಎತ್ತಣದು? ಸಂಸಾರದರ್ಶನಂ=ಸಂಸಾರವ ಕಾಬತನವು, ಕುತಃ=ಎತ್ತಣದು? ||೨೬||

**ಗ್ರಂಥ||** **ಕರಣೇಷು ನಿವೃತ್ತೇಷು ಸ್ವಾರ್ಥಸಂಗಾತ್ಪ್ರಯತ್ನತಃ ।**
**ತೈಃ ಸಮಂ ಪ್ರಾಣಮಾರೋಪ್ಯ ಸ್ವಾಂತೇ ಶಾಂತಮತಿಃ ಸ್ವಯಮ್ ॥**

**ಟೀಕು||** ಕರಣೇಷು=ಇಂದ್ರಿಯಂಗಳು, ಸ್ವಾರ್ಥಸಂಗಾತ್=ತನ್ನ ವಿಷಯ ಪ್ರಯೋಜನಂಗಳ ಸಂಗವಿಲ್ಲವಾದ ಕಾರಣವಾಗಿ, ಪ್ರಯತ್ನತಃ=ಪ್ರಯತ್ನದದೆಸೆಯಿಂದೆ, ಸ್ವಯಂ=ತಾನೇ, ನಿವೃತ್ತೇಷು ಸತ್ಸು=ಅಂತರ್ಮುಖವಾಗಿ ತಿರುಗಲಿಕೆಯಾಗಿ, ಸ್ವಾಂತೇ=ಹೃದಯದಲ್ಲಿ, ತೈಃ=ಆ ಇಂದ್ರಿಯಂಗಳೊಡನೆ, ಸಮಂ=ಕೂಡಿ, ಪ್ರಾಣಂ=ಪ್ರಾಣವನು, ಆರೋಪ್ಯ=ಆರೋಪಿಸಿ, ಶಾಂತಮತಿಃ=ರಾಗದ್ವೇಷರಹಿತನಾದ ಬುದ್ಧಿಯುಳ್ಳ ಆತನು, ಭವೇತ್=ಅಹನು ? ||೨೭||

**ಗ್ರಂಥ||** **ಶಾಂತತ್ವಾತ್ಪ್ರಾಣವೃತ್ತೀನಾಂ ಮನಃ ಶಾಮ್ಯತಿ ವೃತ್ತಿಭಿಃ ।**
**ತಚ್ಛಾಂತೌ ಯೋಗಿನಾಂ ಕಿಂಚಿಚ್ಛಿವಾದನ್ಯನ್ನ ದೃಶ್ಯತೇ ॥**

**ಟೀಕು||** ಪ್ರಾಣವೃತ್ತೀನಾಂ=ರೇಚಕಪೂರಕವಾದ ಪ್ರಾಣಪ್ರವೃತ್ತಿಗಳಿಗೆ, ಶಾಂತತ್ವಾತ್=ಕೇವಲ ಕುಂಭಕದಿಂದೆ ಶಾಂತಿಯಾದ ಕಾರಣವಾಗಿ, ಮನಃ=ಮನಸ್ಸು, ವೃತ್ತಿಭಿಃ=ಸಂಕಲ್ಪ ವಿಕಲ್ಪರೂಪವಾದ ತನ್ನ ವರ್ತನಂಗಳೊಡನೆ ಕೂಡಿ, ಶಾಮ್ಯತಿ=ತಗ್ಗುತ್ತಿರ್ದಪುದು. ತಚ್ಛಾಂತೌ ಸತ್ಯಾಂ=ಆ ಮನಸಿನ ಶಾಂತಿಯಾಗಲಿಕೆಯಾಗಿ, ಯೋಗಿನಾಂ=ಯೋಗೀಶ್ವರರಿಗೆ, ಶಿವಾದನ್ಯತ್=ಶಿವನದೆಸೆಯಿಂದೆ ಭಿನ್ನವಾಗಿರ್ದ್ದ, ಕಿಂಚಿತ್=ಒಂದು ವಸ್ತುವು, ನ ದೃಶ್ಯತೇ=ಕಾಣಲುಪಡುತ್ತಿರದು. ||೨೮||

**ಸೂತ್ರ||** ಬಳಿಕ ಶಿವನೆ ಪ್ರಾಣಕ್ಕೆ ಆಧಾರವಾಗಿ ತೋರುತ್ತಿರ್ದಪನೆಂದು ಸೂತ್ರದ್ವಯದಿಂದೆ ತೋರಿಸುತ್ತಿರ್ದಪಂ.

**ಗ್ರಂಥ||** **ಪ್ರಾಣ ಏವ ಮನುಷ್ಯಾಣಾಂ ದೇಹಧಾರಣಕಾರಣಮ್ ।**
**ತದಾಧಾರಃ ಶಿವಃ ಪ್ರೋಕ್ತಃ ಸರ್ವಕಾರಣಕಾರಣಮ್ ॥**

**ನಿರಾಧಾರಃ ಶಿವಸ್ಸಾಕ್ಷಾತ್ಪ್ರಾಣಸ್ತೇನ ಪ್ರತಿಷ್ಠಿತಃ ।**
**ತದಾಧಾರಃ ತನುರ್ಜ್ಞೇಯಾ ಜೀವೋ ಯೇನೈವ ಚೇಷ್ಟತೇ ॥**

**ಟೀಕು॥** ಮನುಷ್ಯಾಣಾಂ=ಮನುಷ್ಯರಿಗೆ, ಪ್ರಾಣ ಏವ=ಪ್ರಾಣವಾಯುವೆ, ದೇಹಧಾರಣ ಕಾರಣಂ=ದೇಹವನು ಧರಿಸುವುದಕ್ಕೆ ಕಾರಣವಾಗಿರ್ದ್ದ ಅದು; ತದಾಧಾರಃ ಶಿವಃ=ಆ ಪ್ರಾಣಕ್ಕೆ ಆಧಾರವಾದ ಶಿವನು, ಸರ್ವಕಾರಣಕಾರಣಂ=ಸಮಸ್ತ ಕಾರಣಕೇ ಕಾರಣವಾಗಿ, ಪ್ರೋಕ್ತಃ= ಹೇಳಲುಪಟ್ಟನು. ಶಿವಃ=ಶಿವನು, ನಿರಾಧಾರಃ=ಆಧಾರವಿಲ್ಲದೆಯಿರ್ದ್ದ ಆತನು, ತೇನ= ಆ ಶಿವನಿಂದೆ, ಪ್ರಾಣಃ=ಪ್ರಾಣವಾಯುವು, ಸಾಕ್ಷಾತ್=ಪ್ರತ್ಯಕ್ಷವಾಗಿ, ಪ್ರತಿಷ್ಠಿತಃ=ಪ್ರತಿಷ್ಠಿಸಲುಪಟ್ಟ ಅದು, ಯೇನೈವ=ಆವುದಾನೊಂದು ಪ್ರಾಣವಾಯುವಿನಿಂದೆ, ಜೀವಃ=ಜೀವಾತ್ಮನು, ಚೇಷ್ಟತೇ= ವ್ಯಾಪಾರಿಸುತ್ತಿರ್ದ್ದನು. ತದಾಧಾರಃ=ಆ ಪ್ರಾಣನೇ ಆಧಾರವಾಗುಳ್ಳದಾಗಿ, ತನುಃ=ದೇಹವು, ಜ್ಞೇಯಾ=ಅರಿಯಲು ಯೋಗ್ಯವು. ॥೩೦॥

**ಸೂತ್ರ॥** ಬಳಿಕ ಜೀವಾತ್ಮನಿಗೆ ಆಶ್ರಯವಾದ ಪ್ರಾಣಲಯವುಳ್ಳ ಯೋಗೀಶ್ವರನು ಚರಿಸುತ್ತಿರನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಸ ಚಾಭ್ಯಾಸವಶಾದ್ಭೂಯಃ ಸರ್ವತತ್ತ್ವಾತಿವರ್ತಿನಿ ।**
**ನಿಷ್ಕಲಂಕೇ ನಿರಾಕಾರೇ ನಿರಸ್ತಾಶೇಷವಿಪ್ಲವೇ ॥**

**ಚಿದ್ವಿಲಾಸಪರಿಸ್ಫೂರ್ತಿಪರಿಪೂರ್ಣಸುಖಾದ್ವಯೇ ।**
**ಶಿವೇ ವಿಲೀನಃ ಸರ್ವಾತ್ಮಾ ಯೋಗೀ ಚಲತಿ ನ ಕ್ವಚಿತ್ ॥**

**ಟೀಕು॥** ಸ ಚ=ಆ ಜೀವಾತ್ಮಾಶ್ರಯವಾದ ಪ್ರಾಣವಾಯುವು, ಭೂಯಃ=ಮರಳಿ, ಅಭ್ಯಾಸ ವಶಾತ್=ಅಭ್ಯಾಸವಶದದೆಸೆಯಿಂದೆ, ಸರ್ವತತ್ತ್ವಾತಿವರ್ತಿನಿ=ಪೃಥಿವ್ಯಾದಿ ಶಿವತತ್ತ್ವಾಂತವಾದ ಸಮಸ್ತ ತತ್ತ್ವಂಗಳನು ಮೀರಿ ವರ್ತಿಸುತ್ತಿರ್ದ್ದ, ನಿಷ್ಕಲಂಕೇ=ಕಲಶ್ಮರಹಿತವಾಗಿರ್ದ್ದ, ನಿರಾಕಾರೇ ನಿರಾಕಾರವಾಗಿರ್ದ್ದ, ನಿರಸ್ತಾಶೇಷವಿಪ್ಲವೇ=ತೊಲಗಿಸಲುಪಟ್ಟ ಸಮಸ್ತ ಬಾಧೆಯುಳ್ಳ, ಚಿದ್ವಿಲಾಸ ಪರಿಸ್ಫೂರ್ತಿಃ=ಅರಿವಿನ ವಿಲಾಸದ ಬಾಹುಲ್ಯತೆಯಿಂದೆ, ಪರಿಪೂರ್ಣಸುಖಾದ್ವಯೇ=ಪರಿಪೂರ್ಣ ವಾದ ಸುಖಸ್ವರೂಪಿನಿಂದೆ ಎರಡಿಲ್ಲದೆಯಿರ್ದ್ದ, ಶಿವೇ=ಪರಮಶಿವನಲ್ಲಿ, ವಿಲೀನಃ ಸರ್ವಾತ್ಮಾ ಸನ್=ಅಡಗಲುಪಟ್ಟ ಸರ್ವ ವ್ಯಾಪಾರವುಳ್ಳದಾಗಲಿಕೆಯಾಗಿ, ಯೋಗೀ=ಶಿವಯೋಗೀಶ್ವರನು, ಕ್ವಚಿತ್= ಒಂದೆಡೆಯಲ್ಲಿಯು, ನ ಚಲತಿ=ಚಲಿಸುತ್ತಿರನು. ॥೩೨॥

**ಸೂತ್ರ॥** ಬಳಿಕ ಪ್ರಾಣಾನುಗ್ರಹಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ **ಪ್ರಧ್ವಸ್ತವಾಸನಾಸಂಗಾತ್ಪ್ರಾಣವೃತ್ತಿಪರಿಕ್ಷಯಾತ್ ।**
**ಶಿವೈಕಭೂತಸರ್ವಾತ್ಮಾ ಸ್ಥಾಣುವದ್ಭಾತಿ ಸಂಯಮೀ ॥**

**ಟೀಕು॥** ಸಂಯಮೀ=ಶಿವಯೋಗೀಶ್ವರನು, ಪ್ರಧ್ವಸ್ತವಾಸನಾಸಂಗಾತ್=ಕೆಡಿಸಲುಪಟ್ಟ ವಿಷಯವಾಸನೆಯ ಸಂಪರ್ಕವುಳ್ಳಾತನಾದಕಾರಣವಾಗಿ, ಪ್ರಾಣವೃತ್ತಿಪರಿಕ್ಷಯಾತ್=ಪ್ರಾಕೃತ ವೈಕೃತರೂಪವಾದ ಪ್ರಾಣವೃತ್ತಿಯ ನಾಶವುಳ್ಳಾತನಾದ ಕಾರಣವಾಗಿಯು, ಶಿವೈಕಭೂತಸರ್ವಾತ್ಮಾ ಸನ್=ಶಿವಲಿಂಗದಲ್ಲಿ ಏಕರಸಮಯವಾದ ಸರ್ವೇಂದ್ರಿಯ ವ್ಯಾಪಾರವುಳ್ಳಾತನಾಗುತಲು, ಸ್ಥಾಣುವತ್=ಕೊರಡಿನೋಪಾದಿಯಲ್ಲಿ ನಿಶ್ಚಲವಾಗಿ, ಭಾತಿ=ಒಪ್ಪುತ್ತಿರ್ದ್ದಪನು. ॥೩೩॥

**ಇತಿ ಪ್ರಾಣಾನುಗ್ರಹಸ್ಥಲಮ್**

## ೨೨. ಪ್ರಸಾದಿಸ್ಥಲೇ ಕಾಯಾರ್ಪಿತಸ್ಥಲಮ್

**ಸೂತ್ರ॥** ಬಳಿಕ "ಯದಾ ಶಿವಾಯ ಸ್ವಾತ್ಮಾನಂ ದತ್ತವಾನ್ ದೇಶಿಕಾತ್ಮನೇ।
ತದಾ ಶೈವೋ ಭವೇದ್ದೇವಿ ನ ತತೋಽಸ್ತಿ ಪುನರ್ಭವಃ"॥ ಯೆಂಬ ಯೋಗಜಾಗಮಾರ್ಥವನು ಪ್ರಕಟಿಸುತ್ತ ಆ ಪ್ರಾಣಾನುಗ್ರಹಸಂಪನ್ನನಿಂದೆ ಮಾಡಲುಯೋಗ್ಯವಾದ ಕಾಯಾರ್ಪಿತವನು ಹೇಳುತ್ತಿರ್ದ್ದಪಂ.

ಗ್ರಂಥ॥ **ಶಿವಸ್ಯ ಪರರೂಪಸ್ಯ ಸರ್ವಾನುಗ್ರಾಹಿಣೋಽರ್ಚನೇ ।**
**ತ್ಯಾಗೋ ದೇಹಾಭಿಮಾನಸ್ಯ ಕಾಯಾರ್ಪಿತಮುದಾಹೃತಮ್ ॥**

**ಟೀಕು॥** ಸರ್ವಾನುಗ್ರಾಹಿಣಃ=ಸರ್ವಾನುಗ್ರಾಹಕನಾಗಿ, ಪರರೂಪಸ್ಯ=ಪರಬ್ರಹ್ಮರೂಪವಾಗಿ ಪ್ರಾಣಾನುಗ್ರಹಸಂಪನ್ನನಾದ ಆ ಪರಯೋಗಿಗೆ, ಶಿವಸ್ಯ ಅರ್ಚನೇ ವಿಷಯೇ=ಶಿವಲಿಂಗದ ಪೂಜೆಯ ವಿಷಯವಾಗಿ, ದೇಹಾಭಿಮಾನಸ್ಯ ತ್ಯಾಗಃ=ದೇಹಾಭಿಮಾನದ ಬಿಡುಗಡೆಯೆ, ಕಾಯಾರ್ಪಿತಂ= ಕಾಯಾರ್ಪಿತವೆಂದು, ಉದಾಹೃತಂ=ಹೇಳಲುಪಟ್ಟಿತ್ತು. ॥೩೪॥

**ಸೂತ್ರ॥** ಬಳಿಕ ಆ ಕಾಯಾರ್ಪಿತ ಸ್ವರೂಪವನು ಸೂತ್ರತ್ರಯದಿಂದೆ ವಿಶೇಷಿಸುತ್ತಿರ್ದ್ದಪಂ.

ಗ್ರಂಥ॥ **ಯದಾ ಯೋಗೀ ನಿಜಂ ದೇಹಂ ಶಿವಾಯ ವಿನಿವೇದಯೇತ್ ।**
**ತದಾ ಭವತಿ ತದ್ರೂಪಂ ಶಿವರೂಪಂ ನ ಸಂಶಯಃ ॥**

**ಟೀಕು॥** ಯೋಗೀ=ಶಿವಯೋಗಿಯು, ಯದಾ=ಆವಕಾಲದಲ್ಲಿ, ನಿಜಂ ದೇಹಂ=ತನ್ನ ದೇಹವನು,

ಶಿವಾಯ=ಶಿವನಿಗೋಸುಗ, ವಿನಿವೇದಯೇತ್=ಸಮರ್ಪಿಸುವನು; ತದಾ=ಆ ಕಾಲದಲ್ಲಿ. ತದ್ರೂಪಂ=ಆ ಶಿವಯೋಗಿಯ ಸ್ವರೂಪವು, ಶಿವರೂಪಂ=ಶಿವಸ್ವರೂಪವುಳ್ಳ ಅದು, ಭವತಿ=ಆಗುತ್ತಿರ್ದಪುದು. ನ ಸಂಶಯಃ=ಸಂದೇಹವಿಲ್ಲ. ||೩೫||

**ಗ್ರಂಥ||** **ಇಂದ್ರಿಯಪ್ರೀತಿಹೇತೂನಿ ವಿಷಯಾಸಂಗಜಾನಿ ಚ ।**
**ಸುಖಾನಿ ಸುಖಚಿದ್ರೂಪೇ ಶಿವಯೋಗೀ ನಿವೇದಯೇತ್ ॥**

**ಟೀಕು||** ಶಿವಯೋಗೀ=ಶಿವಯೋಗೀಶ್ವರನು, ಇಂದ್ರಿಯಪ್ರೀತಿಹೇತೂನಿ=ಶ್ರೋತ್ರಾದಿ ದಶೇಂದ್ರಿಯಂಗಳ ಪ್ರೀತಿಯೆ ಕಾರಣವಾಗುಳ್ಳ, ವಿಷಯಾಸಂಗಜಾನಿ ಚ=ಶಬ್ದಾದಿವಿಷಯ ಸಂಬಂಧದಿಂದೆ ಹುಟ್ಟಿರ್ದ್ದ, ಸುಖಾನಿ=ಸುಖಂಗಳನು, ಸುಖಚಿದ್ರೂಪೇ=ಚಿದಾನಂದಸ್ವರೂಪ ವಾಗಿರ್ದ್ದ, ಶಿವೇ=ಶಿವನಲ್ಲಿ. ನಿವೇದಯೇತ್=ಸಮರ್ಪಿಸುವುದು. ||೩೬||

**ಗ್ರಂಥ||** **ದರ್ಶನಾತ್ಸ್ಪರ್ಶನಾದ್ಭುಕ್ತೇಃ ಶ್ರವಣಾದ್ಘ್ರಾಣನಾದಪಿ ।**
**ವಿಷಯೇಭ್ಯೋ ಯದುತ್ಪನ್ನಂ ಶಿವೇ ತತ್ಸುಖಮರ್ಪಯೇತ್ ॥**

**ಟೀಕು||** ದರ್ಶನಾತ್=ಕಾಬುದರದೆಸೆಯಿಂದೆ, ಸ್ಪರ್ಶನಾತ್=ಸೋಂಕುವುದರದೆಸೆಯಿಂದೆ, ಭುಕ್ತೇಃ=ಆಸ್ವಾದಿಸುವುದರದೆಸೆಯಿಂದೆ, ಶ್ರವಣಾತ್=ಕೇಳುವುದರದೆಸೆಯಿಂದೆ, ಘ್ರಾಣಾತ್=ವಾಸನಿ ಸುವುದರದೆಸೆಯಿಂದೆ, ವಿಷಯೇಭ್ಯೋಽಪಿ=ಉಳಿದ ವಿಷಯಂಗಳದೆಸೆಯಿಂದವಾಯಿತ್ತಾ ದೊಡೆಯು, ಯತ್ ಸುಖಂ=ಆವುದಾನೊಂದು ಸುಖವು, ಉತ್ಪನ್ನಂ=ಹುಟ್ಟಿತ್ತು, ತತ್=ಆ ಸುಖವನು, ಶಿವೇ=ಶಿವಲಿಂಗದಲ್ಲಿ, ಅರ್ಪಯೇತ್=ಅರ್ಪಿಸುವುದು. ||೩೭||

**ಸೂತ್ರ||** ಬಳಿಕ ಕಾಯಾರ್ಪಿತಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ದೇಹದ್ವಾರೇಣ ಯದ್ಯತ್ಸ್ಯಾತ್ಸುಖಂ ಪ್ರಾಸಂಗಮಾತ್ಮನಃ ।**
**ತತ್ತನ್ನಿವೇದಯನ್ ಶಂಭೋಃ ಯೋಗೀ ಭವತಿ ನಿರ್ಮಲಃ ॥**

**ಟೀಕು||** ದೇಹದ್ವಾರೇಣ=ಶರೀರಸಂಬಂಧವಾದ ದಶೇಂದ್ರಿಯಂಗಳ ದ್ವಾರದಿಂದೆ, ಯತ್ ಯತ್ ಸುಖಂ=ಆವಾವ ಸುಖವು, ಆತ್ಮನಃ=ತನಗೆ, ಪ್ರಾಸಂಗಂ=ಸಂಬಂಧವಾಗಿದ್ದದು, ಸ್ಯಾತ್=ಅಹುದು, ತತ್ ತತ್ ಸುಖಂ=ಆಯಾ ಸುಖವನು, ಶಂಭೋಃ=ಶಿವಲಿಂಗಕ್ಕೆ, ನಿವೇದಯನ್=ಸಮರ್ಪಿಸುತ್ತಿರ್ದ್ದ, ಯೋಗೀ=ಶಿವಯೋಗಿಯು, ನಿರ್ಮಲಃ=ಮಲರಹಿತನಾಗಿ, ಚರತಿ=ಚರಿಸುತ್ತಿರ್ದ್ದಪನು.

**ತಾತ್ಪರ್ಯ||** ಕಾಯಕ್ಕೆ ಬಂದ ಸುಖವನು ಶಿವಲಿಂಗದಲ್ಲಿ ಸಮರ್ಪಿಸಿದುದೇ ಕಾಯಾರ್ಪಿತವೆಂಬುದರ್ಥ.

**ಇತಿ ಕಾಯಾರ್ಪಿತಸ್ಥಲಮ್**

## ೨೩ ಪ್ರಸಾದಿಸ್ಥಲೇ ಕರಣಾರ್ಪಿತಸ್ಥಲಮ್

**ಸೂತ್ರ||** ಬಳಿಕ "ಯಸ್ತು ವಿಜ್ಞಾನವಾನ್ಭವತಿ ಯುಕ್ತೇನ ಮನಸಾ ಸದಾ|
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ ಸಾರಥೇಃ"|| ಯೆಂಬ ಕಠವಲ್ಲೀ ಶ್ರುತ್ಯರ್ಥವನು ಪ್ರಕಟಿಸುತ್ತ ಆ ಕಾಯಾರ್ಪಿತಸಂಪನ್ನನಿಗೆ ಕರಣಾರ್ಪಿತವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಆಸಂಜನಂ ಸಮಸ್ತಾನಾಂ ಕರಣಾನಾಂ ಪರಾತ್ಪರೇ |**
**ಶಿವೇ ಯತ್ತದಿದಂ ಪ್ರೋಕ್ತಂ ಕರಣಾರ್ಪಿತಮಾಗಮೇ ||**

**ಟೀಕು||** ಪರಾತ್ಪರೇ=ಪರಕ್ಕೆ ಪರವಾಗಿರ್ದ್ದ, ಶಿವೇ=ಶಿವಲಿಂಗದಲ್ಲಿಸಮಸ್ತಾನಾಂ ಕರಣಾನಾಂ= ಸಮಸ್ತವಾದ ಅಂತಃಕರಣ ಬಹಿಃಕರಣಂಗಳ, ಯತ್ ಆಸಂಜನಂ=ಆವುದಾನೊಂದು ಸಂಬಂಧಿಸುವ ತನವುಂಟು, ತದಿದಂ=ಆ ಇದೆ, ಕರಣಾರ್ಪಿತಂ=ಕರಣಾರ್ಪಿತವೆಂದು, ಆಗಮೇ=ವೀರಶೈವಸಿದ್ಧಾಂತದಲ್ಲಿ, ಪ್ರೋಕ್ತಂ=ಹೇಳಲುಪಟ್ಟಿತ್ತು. ||೩೯||

**ಸೂತ್ರ||** ಬಳಿಕ ಕರಣಾರ್ಪಕನನು ಹೇಳುತ್ತಿರ್ದ್ದಪಂ.

**ಗ್ರಂಥ||** **ಯದ್ಯತ್ಕರಣಮಾಲಂಬ್ಯ ಭುಂಙ್ಕ್ತೇ ವಿಷಯಜಂ ಸುಖಮ್ |**
**ತತ್ತಚ್ಛಿವೇ ಸಮರ್ಪ್ಯೈಷ ಕರಣಾರ್ಪಕ ಉಚ್ಯತೇ ||**

**ಟೀಕು||** ಯತ್ಕರಣಂ=ಆವುದಾನೊಂದು ಕರಣವನು, ಆಲಂಬ್ಯ=ಹಿಡಿದುಕೊಂಡು, ವಿಷಯಜಂ= ವಿಷಯದಿಂದೆ ಹುಟ್ಟಿರ್ದ್ದ, ಯತ್ ಸುಖಂ=ಆವುದಾನೊಂದು ಸುಖವನು, ಭುಂಙ್ಕ್ತೇ= ಭೋಗಿಸುತ್ತಿರ್ದ್ದಪನು, ತತ್ತತ್=ಆ ಕರಣಸಂಬಂಧವಾದ ಆ ವಿಷಯ ಸುಖವನು, ಶಿವೇ=ಶಿವ ಲಿಂಗದಲ್ಲಿ, ಸಮರ್ಪ್ಯ=ಸಮರ್ಪಿಸಿ, ಏಷಃ=ಈ ಕಾಯಾರ್ಪಿತಸಂಪನ್ನನೆ, ಕರಣಾರ್ಪಕಃ=ಕರಣಾ ರ್ಪಕನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ||೪೦||

**ಸೂತ್ರ||** ಬಳಿಕ ಕರಣಾರ್ಪಿತ ಪ್ರಕಾರವನು ಪಂಚಸೂತ್ರಂಗಳಿಂದೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||** **ಅಹಂಕಾರಮದೋದ್ರಿಕ್ತಮಂತಃಕರಣವಾರಣಮ್ |**
**ಬಧ್ನೀಯಾದ್ಯಃ ಶಿವಾಲಾನೇ ಸ ಧೀರಃ ಸರ್ವಸಿದ್ಧಿಮಾನ್ ||**

**ಟೀಕು||** ಅಹಂಕಾರಮದೋದ್ರಿಕ್ತಂ=ಅಹಂಕಾರಮಮಕಾರವೆಂಬ ಮೇಲುಮದ ಕೀಳುಮದಂಗಳಿಂದೆ ಕೊಬ್ಬಿರ್ದ್ದ, ಅಂತಃಕರಣವಾರಣಂ=ಮನಬುದ್ಧಿಚಿತ್ತರೂಪವಾದ ಅಂತಃಕರಣವೆಂಬ ಗಜವನು,

ಯಃ=ಆವಾತನು, ಶಿವಾಲಾನೇ=ಶಿವಲಿಂಗವೆಂಬ ಕಟ್ಟುಗಂಭದಲ್ಲಿ, ಬಧ್ನೀಯಾತ್=ಕಟ್ಟುವನು. ಸಃ=ಆತನು, ಸರ್ವಸಿದ್ಧಿಮಾನ್=ಸಮಸ್ತ ಸಿದ್ಧಿಗಳುಳ್ಳ, ಧೀರಃ=ಧೀರನು. ॥೪೧॥

ಗ್ರಂಥ॥ ಇಂದ್ರಿಯಾಣಾಂ ಸಮಸ್ತಾನಾಂ ಮನಃ ಪ್ರಥಮಮುಚ್ಯತೇ ।
ವಶೀಕೃತೇ ಶಿವೇ ತಸ್ಮಿನ್ಕಿಮನ್ಯೈಸ್ತದ್ವಶಾನುಗೈಃ ॥

ಟೀಕು॥ ಸಮಸ್ತಾನಾಂ ಇಂದ್ರಿಯಾಣಾಂ=ಸರ್ವೇಂದ್ರಿಯಂಗಳಿಗೆ, ಮನಃ=ಮನಸ್ಸೇ, ಪ್ರಥಮಂ= ಕಾರಣವಾಗಿದ್ದುದಾಗಿ, ಉಚ್ಯತೇ="ಇಂದ್ರಿಯಾಣಾಂ ಮನೋನಾಥಃ" ಯೆಂಬ ಶ್ರುತಿಯಿಂದೆ ಹೇಳಲು ಪಡುತ್ತಿರ್ದ್ದಪುದು. ತಸ್ಮಿನ್=ಆ ಮನಸ್ಸು, ಶಿವೇ=ಶಿವನಲ್ಲಿ, ವಶೀಕೃತೇ ಸತಿ=ವಶೀಕರಿಸಲು-ಪಡಲಿಕೆಯಾಗಿ, ತದ್ವಶಾನುಗೈಃ=ಆ ಮನಸ್ಸಿನ ವಶವನು ಎಯ್ದಿರ್ದ್ದ, ಅನ್ಯೈಃ=ಉಳಿದ ಶ್ರೋತ್ರಾದಿಂದ್ರಿಯಂಗಳಿಂದೆ, ಕಿಂ=ಏನು ಪ್ರಯೋಜನ? ಏನೂ ಪ್ರಯೋಜನವಿಲ್ಲವೆಂಬುದರ್ಥ. ॥೪೨॥

ಗ್ರಂಥ॥ ಇಂದ್ರಿಯಾಣಾಂ ವಶೀಕಾರೋ ನಿವೃತ್ತಿರಿತಿ ಗೀಯತೇ ।
ಲಕ್ಷೀಕೃತೇ ಶಿವೇ ತೇಷಾಂ ಕುತಃ ಸಂಸಾರಗಾಹನಮ್ ॥

ಟೀಕು॥ ಇಂದ್ರಿಯಾಣಾಂ ವಶೀಕಾರಃ=ಇಂದ್ರಿಯಂಗಳ ವಶೀಕೃತಿಯು, ನಿವೃತ್ತಿರಿತಿ=ನಿವೃತ್ತಿಯೆಂದು, ಗೀಯತೇ=ಹೇಳಲುಪಡುತ್ತಿರ್ದ್ದಪುದು. ತೇಷಾಂ=ಆ ಇಂದ್ರಿಯಂಗಳಿಗೆ, ಶಿವೇ=ಶಿವಲಿಂಗವು, ಲಕ್ಷೀಕೃತೇ ಸತಿ=ಕುರುಹುವಿಡಿಯಲುಪಡಪಲಿಕೆಯಾಗಿ, ಸಂಸಾರಗಾಹನಂ=ಸಂಸಾರಸಾಗರದಲ್ಲಿ ಮುಳುಗುವ ತನವು, ಕುತಃ=ಎತ್ತಣದು? ॥೪೩॥

ಗ್ರಂಥ॥ ಸಂಸಾರವಿಷಕಾಂತಾರಸಮುಚ್ಛೇದಕುಠಾರಿಕಾ ।
ಉಪಶಾಂತಿರ್ಭವೇತ್ಪುಂಸಾಮಿಂದ್ರಿಯಾಣಾಂ ವಶೀಕೃತೌ ॥

ಟೀಕು॥ ಪುಂಸಾಂ=ಪುರುಷರಿಗೆ, ಇಂದ್ರಿಯಾಣಾಂ=ಇಂದ್ರಿಯಂಗಳ, ವಶೀಕೃತೌ=ವಶೀಕರಣ-ದಲ್ಲಿಯ, ಉಪಶಾಂತಿಃ=ಉಪಶಾಂತಿಯೇ, ಸಂಸಾರವಿಷಕಾಂತಾರ ಸಮುಚ್ಛೇದ ಕುಠಾರಿಕಾ= ಸಂಸಾರವೆಂಬ ವಿಷರೂಪವಾಗಿರ್ದ್ದ ಘೋರಾರಣ್ಯವನು ತರಿವುದಕ್ಕೆ ಕೊಡಲಿಯಾಗಿರ್ದ್ದ ಅದು. ಭವೇತ್=ಅಹುದು. ॥೪೪॥

ಗ್ರಂಥ॥ ಇಂದ್ರಿಯೈರೇವ ಜಾಯಂತೇ ಪಾಪಾನಿ ಸುಕೃತಾನಿ ಚ ।
ತೇಷಾಂ ಸಮರ್ಪಣಾದೀಶೇ ಕುತಃ ಕರ್ಮನಿಬಂಧನಮ್ ॥

ಟೀಕು॥ ಇಂದ್ರಿಯೈರೇವ=ಸರ್ವೇಂದ್ರಿಯಂಗಳಿಂದವೆ, ಪಾಪಾನಿ ಸುಕೃತಾನಿ ಚ=ಪಾಪ-ಪುಣ್ಯಂಗಳು, ಜಾಯಂತೇ=ಹುಟ್ಟುತ್ತಿರ್ದ್ದಪವು. ತೇಷಾಂ=ಆ ಇಂದ್ರಿಯಂಗಳೇ, ಈಶೇ=ಶಿವಲಿಂಗವಲ್ಲಿ ,

ಸಮರ್ಪಣಾತ್=ಸಮರ್ಪಿಸುವುದರದೆಸೆಯಿಂದ, ಕರ್ಮನಿಬಂಧನಂ=ಪುಣ್ಯಪಾಪರೂಪವಾದ ಕರ್ಮಪಾಶಬಂಧವು, ಕುತಃ=ಎತ್ತಣದು? ||೪೫||

**ಸೂತ್ರ||** ಬಳಿಕ ಆ ಕರಣಾರ್ಪಿತವನು ಯಜ್ಞರೂಪವಾಗಿದ್ದುದನಾಗಿ ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಚಿತ್ತಜನ್ಯಂ ಸಮಾದಾಯ ಜಗಜ್ಜಾಲಂ ಮಹಾಹವಿಃ ।**
**ಚಿದ್ವಹ್ನೌ ಜುಹ್ವತಾಮಂತಃ ಕುತಸ್ಸಂಸಾರವಿಪ್ಲವಃ ॥**

**ಟೀಕು||** ಚಿತ್ತಜನ್ಯಂ=ಮನಸ್ಸಿನಿಂದೆ ಹುಟ್ಟಿರ್ದ, ಜಗಜ್ಜಾಲಂ=ಜಗಜ್ಜಾಲ ರೂಪವಾಗಿರ್ದ, ಮಹಾಹವಿಃ=ಮಹಾಹವಿಸ್ಸನು, ಸಮಾದಾಯ=ತೆಗೆದುಕೊಂಡು, ಅಂತಃ=ಹೃದಯಕಮಲದಲ್ಲಿಯ, ಚಿದ್ವಹ್ನೌ=ಜ್ಞಾನಾಗ್ನಿಯಲ್ಲಿ, ಜುಹ್ವತಾಮ್=ಬೇಳುತ್ತಿರ್ದ ಯೋಗೀಶ್ವರರಿಗೆ, ಸಂಸಾರವಿಪ್ಲವಃ=ಭವ ಬಾಧೆಯು, ಕುತಃ=ಎತ್ತಣದು. ||೪೬||

**ಗ್ರಂಥ||** **ಪ್ರಕಾಶಮಾನೇ ಚಿದ್ವಹ್ನೌ ಬಹಿರಂತರ್ಜಗನ್ಮಯೇ ।**
**ಸಮರ್ಪ್ಯ ವಿಷಯಾನ್ಸರ್ವಾನ್ಮುಕ್ತವಜ್ಜಾಯತೇ ಜನಃ ॥**

**ಟೀಕು||** ಜಗನ್ಮಯೇ=ಜಗಜ್ಜಾಲದಲ್ಲಿ ತನ್ಮಯವಾದ, ಚಿದ್ವಹ್ನೌ=ಶಿವಜ್ಞಾನಾಗ್ನಿಯಲ್ಲಿ ಬಹಿ ರಂತಃ=ಹೊರಗೆ ಒಳಗೆ, ಪ್ರಕಾಶಮಾನೇ ಸತಿ=ಪ್ರಕಾಶಿಸಲುಪಡಲಿಕೆಯಾಗಿ, ಸರ್ವಾನ್ ವಿಷಯಾನ್= ಸಮಸ್ತ ವಿಷಯಂಗಳೆಂಬ ಹವಿಸ್ಸುಗಳನು, ಸಮರ್ಪ್ಯ=ಸಮರ್ಪಿಸಿ, ಜನಃ=ಯೋಗಿಜನವು, ಮುಕ್ತವತ್=ಮುಕ್ತರೋಪಾದಿಯಲ್ಲಿ, ಜಾಯತೇ=ಆಗುತ್ತಿರ್ದಪುದು. ||೪೭||

**ಗ್ರಂಥ||** **ಆತ್ಮಜ್ಯೋತಿಷಿ ಚಿದ್ರೂಪೇ ಪ್ರಾಣವಾಯುನಿಬೋಧಿತೇ ।**
**ಜುಹ್ವನ್ ಸಮಸ್ತವಿಷಯಾನ್ ತನ್ಮಯೋ ಭವತಿ ಧ್ರುವಮ್ ॥**

**ಟೀಕು||** ಪ್ರಾಣವಾಯುನಿಬೋಧಿತೇ=ಪ್ರಣವರೂಪವಾದ ಪ್ರಾಣವಾಯುವಿನಿಂದೆ ಪ್ರಕಾಶಿಸಲು ಪಟ್ಟ, ಚಿದ್ರೂಪೇ=ಜ್ಞಾನವೇ ಸ್ವರೂಪವಾಗುಳ್ಳ, ಆತ್ಮಜ್ಯೋತಿಷಿ=ಪರಮಾತ್ಮನೆಂಬ ಅಗ್ನಿಯಲ್ಲಿ, ಸಮಸ್ತವಿಷಯಾನ್=ಕರಣಜನ್ಯವಾದ ಸಮಸ್ತ ವಿಷಯವೆಂಬ ಹವಿಸ್ಸುಗಳನು, ಜುಹ್ವನ್= ಬೇಳುತ್ತಿರ್ದ ಯೋಗೀಶ್ವರನು, ತನ್ಮಯಃ=ಆ ಚಿನ್ಮಯವಾದ ಪರಮಾತ್ಮಾಗ್ನಿಯೇ ಸ್ವರೂಪವಾಗುಳ್ಳಾತನು, ಧ್ರುವಂ=ನಿಶ್ಚಯವಾಗಿ , ಭವತಿ=ಆಗುತ್ತಿರ್ದಪನು. ||೪೮||

**ಸೂತ್ರ||** ಬಳಿಕ ಕರಣಾರ್ಪಿತಸ್ಥಲವನು ಮುಗಿಯಿಸುತ್ತಿರ್ದಪಂ.

ಗ್ರಂಥ॥ **ಇಂದ್ರಿಯಾಣಿ ಸಮಸ್ತಾನಿ ಶರೀರಂ ಭೋಗಸಾಧನಮ್ ।**
**ಶಿವಪೂಜಾಂಗಭಾವೇನ ಭಾವಯನ್ಮುಕ್ತಿಮಾಪ್ನುಯಾತ್ ॥**

**ಟೀಕು॥** ಸಮಸ್ತಾನಿ ಇಂದ್ರಿಯಾಣಿ=ಶ್ರೋತ್ರಾದಿ ಸರ್ವೇಂದ್ರಿಯಂಗಳನು, ಭೋಗಸಾಧನಂ= ಭೋಗಕ್ಕೆ ಸಾಧನವಾದ, ಶರೀರಂ=ದೇಹವನು, ಶಿವಪೂಜಾಂಗಭಾವೇನ=ಶಿವಲಿಂಗಪೂಜೆಗೆ ಅಂಗವಹತನದಿಂದೆ, ಭಾವಯನ್=ಭಾವಿಸುತ್ತಿರ್ದ್ದ ಆತನು, ಮುಕ್ತಿಂ=ಮೋಕ್ಷವನು, ಆಪ್ನುಯಾತ್= ಎಯ್ದುವನು. ॥೪೯॥

ಇತಿ ಕರಣಾರ್ಪಿತಸ್ಥಲಮ್

## ೨೪. ಪ್ರಸಾದಿಸ್ಥಲೇ ಭಾವಾರ್ಪಿತಸ್ಥಲಮ್

**ಸೂತ್ರ॥** ಬಳಿಕ "ತಸ್ಮಾತ್ಪ್ರಪಂಚಸಂಬಂಧಭಾವಂ ಹಿತ್ವಾ ಶಿವಾತ್ಮಕಮ್।
ಭಾವಮಾಶ್ರಿತ್ಯ ಯತ್ನೇನ ಕುರ್ಯಾದ್ವ್ಯಾಪೃತಿಮೀಶ್ವರೇ"॥ ಯೆಂಬ ಯೋಗಜಾಗಮಾರ್ಥವನು ಪ್ರಕಟಿಸಿ ಆ ಕರಣಾರ್ಪಿತಸಂಪನ್ನನಾದ ಶಿವಯೋಗೀಶ್ವರನಿಂದೆ ಮಾಡಲು ಯೋಗ್ಯವಾದ ಭಾವಾರ್ಪಿತವನು ಹೇಳುತ್ತಿರ್ದ್ದಪಂ.

ಗ್ರಂಥ॥ **ಶಿವೇ ನಿಶ್ಚಲಭಾವೇನ ಭಾವಾನಾಂ ಯತ್ಸಮರ್ಪಣಮ್ ।**
**ಭಾವಾರ್ಪಿತಮಿದಂ ಪ್ರೋಕ್ತಂ ಶಿವಸದ್ಭಾವವೇದಿಭಿಃ ॥**

**ಟೀಕು॥** ಶಿವೇ ವಿಷಯೇ=ಶಿವಲಿಂಗವಿಷಯವಾಗಿ, ನಿಶ್ಚಲಭಾವೇನ=ನಿಶ್ಚಲವಾದ ಭಾವದಿಂದೆ, ಭಾವಾನಾಂ=ಭಾವಂಗಳ, ಯತ್ ಸಮರ್ಪಣಂ=ಆವುದಾನೊಂದು ಸಮರ್ಪಿತವುಂಟು, ಇದಂ=ಇದು, ಭಾವಾರ್ಪಿತಂ=ಭಾವಾರ್ಪಿತವೆಂದು, ಶಿವಸದ್ಭಾವವೇದಿಭಿಃ=ಶಿವಲಿಂಗದ ಸದ್ಭಾವವನು ಬಲ್ಲವರುಗಳಿಂದೆ , ಪ್ರೋಕ್ತಂ=ಹೇಳಲುಪಟ್ಟಿತ್ತು. ॥೫೦॥

**ಸೂತ್ರ॥** ಬಳಿಕ ಆ ಭಾವಾರ್ಪಿತ ಶಬ್ದಾರ್ಥವನು ಪ್ರಕಟಿಸುತ್ತಿರ್ದ್ದಪಂ.

ಗ್ರಂಥ॥ **ಚಿತ್ತಸ್ಥಸಕಲಾರ್ಥಾನಾಂ ಮನನಂ ಯತ್ತು ಮಾನಸೇ ।**
**ತದರ್ಪಣಂ ಶಿವೇ ಸಾಕ್ಷಾನ್ಮಾನಸೋ ಭಾವ ಉಚ್ಯತೇ ॥**

**ಟೀಕು॥** ಮಾನಸೇ=ಮನೋವಿಕಾರವಾದ ಭಾವದಲ್ಲಿ, ಚಿತ್ತಸ್ಥಸಕಲಾರ್ಥಾನಾಂ=ಚಿತ್ತದಲ್ಲಿ ಇರುತ್ತಿರ್ದ್ದ ಸಮಸ್ತ ಪದಾರ್ಥಂಗಳ, ಯತ್ತು ಮನನಂ=ಆವುದಾನೊಂದು ಅನುಭವರೂಪವಾದ ನೆನಹುಂಟು,

ತತ್ತು=ಅದಾಯಿತ್ತಾದೊಡೆ, ಸಾಕ್ಷಾತ್=ಪ್ರತ್ಯಕ್ಷವಾದ, ಶಿವೇ=ಶಿವಲಿಂಗದಲ್ಲಿಯ, ಅರ್ಪಣಂ= ಅರ್ಪಿತವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೫೧||

**ಸೂತ್ರ||** ಬಳಿಕ ಆ ಭಾವಸ್ವರೂಪವನು ಪಂಚಸೂತ್ರಂಗಳಿಂದೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||** **ಭಾವ ಏವ ಹಿ ಜಂತೂನಾಂ ಕಾರಣಂ ಬಂಧಮೋಕ್ಷಯೋಃ ।**
**ಭಾವಶುದ್ಧೌ ಭವೇನ್ಮುಕ್ತಿ ರ್ವಿಪರೀತೇತು ಸಂಸೃತಿಃ ॥**

**ಟೀಕು||** ಭಾವ ಏವ=ಭಾವವೊಂದೇ, ಜಂತೂನಾಂ=ಪ್ರಾಣಿಗಳ, ಬಂಧಮೋಕ್ಷಯೋಃ= ಬಂಧಮೋಕ್ಷಂಗಳಿಗೆ, ಕಾರಣಂ=ಕಾರಣವು; ಹಿ=ಪ್ರಸಿದ್ಧವು. ಭಾವಶುದ್ಧೌ ಸತ್ಯಾಮ್=ಭಾವಶುದ್ಧಿ ಯಾಗಲಿಕೆಯಾಗಿ, ಮುಕ್ತಿಃ=ಮೋಕ್ಷವು, ಭವೇತ್=ಅಹುದು. ವಿಪರೀತೇತಿ=ಭಾವಶುದ್ಧಿಯಿಲ್ಲ ದಿರಲಿಕೆಯಾಗಿ, ಸಂಸೃತಿಃ=ಸಂಸಾರಬಂಧವು, ಭವೇತ್=ಅಹುದು. ||೫೨||

**ಗ್ರಂಥ||** **ಭಾವಸ್ಯ ಶುದ್ದಿರಾಖ್ಯಾತಾ ಶಿವೋಽಹಮಿತಿ ಯೋಜನಾ ।**
**ವಿಪರೀತಸಮಾಯೋಗೇ ಕುತೋ ದುಃಖನಿವರ್ತನಮ್ ॥**

**ಟೀಕು ||** ಶಿವೋಽಹಮಿತಿ=ಶಿವನೆ ನಾನೆಂಬ, ಯೋಜನಾ=ಸ್ವಸ್ವರೂಪಾನುಭವಯೋಗವೆ, ಭಾವಸ್ಯ ಶುದ್ಧಿಃ=ಭಾವಶುದ್ಧಿಯೆಂದು, ಆಖ್ಯಾತಾ ಹೇಳಲುಪಟ್ಟಿತ್ತು. ವಿಪರೀತ ಸಮಾಯೋಗೇ ಸತಿ=ಶಿವನು ನಾನಲ್ಲವೆಂಬ ವಿಪರೀತಯೋಗವಾಗಲಿಕೆಯಾಗಿ, ದುಖಃನಿವರ್ತನಂ=ಸಂಸಾರ ದುಃಖದ ತೊಲಗಿಕೆಯು, ಕುತಃ=ಎತ್ತಣದು ? ||೫೩||

**ಸೂತ್ರ ||** ಬಳಿಕ ''ಭೋಕ್ತಾ ಭೋಗ್ಯಂ ಪ್ರೇರಿತಾರಂ ಚ ಮತ್ವಾ ।
ಸರ್ವಂ ಪ್ರೋಕ್ತಂ ತ್ರಿವಿಧಂ ಬ್ರಹ್ಮಮೇತತ್"|| ಯೆಂಬ ಶ್ರೇತಾಶ್ವತರ ಶ್ರುತ್ಯರ್ಥವನು ಹೇಳುತ್ತಿರ್ದ್ದಪಂ.

**ಗ್ರಂಥ||** **ಭೋಕ್ತಾ ಭೋಗ್ಯಂ ಭೋಜಯಿತಾ ಸರ್ವಮೇತಚ್ಚರಾಚರಮ್ ।**
**ಭಾವಯನ್ ಶಿವರೂಪೇಣ ಶಿವೋ ಭವತಿ ವಸ್ತುತಃ ॥**

**ಟೀಕು ||** ಭೋಕ್ತಾ=ಭೋಕ್ತೃವಾದಾತ್ಮನನು , ಭೋಗ್ಯಂ=ಭೋಗಿಸಲು ಯೋಗ್ಯವಾದ ಅವ್ಯಕ್ತ ತತ್ತ್ವವನು, ಭೋಜಯಿತಾ=ಭೋಗದಾತೃವಾದ ಶಿವನನು , ಚರಾಚರಂ=ಜಂಗಮ ಸ್ಥಾವರ ರೂಪವಾದ, ಏತತ್ಸರ್ವಂ=ಈ ಸಮಸ್ತ ಜಗಜ್ಜಾಲವನು, ಶಿವರೂಪೇಣ=ಶಿವಸ್ವರೂಪಿನಿಂದವೆ, ಭಾವಯನ್= ಭಾವಿಸುತ್ತಿರ್ದ್ದ ಶಿವಯೋಗಿಯು, ವಸ್ತುತಃ=ಯಥಾರ್ಥವಾಗಿ, ಶಿವೋ ಭವತಿ=ಶಿವಸ್ವರೂಪ ನಾಗುತ್ತಿರ್ದ್ದಪನು. ||೫೪||

**ಸೂತ್ರ ॥** ಬಳಿಕ ಪಕ್ಷಾಂತರದಿಂದ ಭಾವನೆಯನು ಹೇಳುತ್ತಿರ್ದಪಂ.

**ಗ್ರಂಥ ॥** **ಮಿಥ್ಯೇತಿ ಭಾವಯನ್ವಿಶ್ವಂ ವಿಶ್ವಾತೀತಂ ಶಿವಂ ಸ್ಮರನ್ ।**
**ಸತ್ತಾನಂದಚಿದಾಕಾರಂ ಕಥಂ ಬದ್ಧುಮಿಹಾರ್ಹತಿ ॥**

**ಟೀಕು ॥** ವಿಶ್ವಂ=ಸಮಸ್ತ ಜಗಜ್ಜಾಲವನು , ಮಿಥ್ಯೇತಿ=ಮಿಥ್ಯೆಯೆಂದು, ಭಾವಯನ್=ಭಾವಿಸುತ್ತಿರ್ದ್ದ, ವಿಶ್ವಾತೀತಂ ವೈ=ನಾಮರೂಪಾತ್ಮಕವಾದ ವಿಶ್ವವನು ಮೀರಿ ವರ್ತಿಸುತ್ತಿರ್ದ್ದ, ಸತ್ತಾನಂದ ಚಿದಾಕಾರಂ= ಸಚ್ಚಿದಾನಂದಾತ್ಮಕವಾದ ಶಿವನನು, ಸ್ಮರನ್=ಭಾವಿಸುತ್ತಿರ್ದ್ದ, ಶಿವಯೋಗಿಯು, ಇಹ=ಇಲ್ಲಿ, ಬದ್ಧುಂ= ಮಲಮಾಯಾದಿ ಪಾಶಂಗಳಿಂದೆ ಕಟ್ಟಲು, ಕಥಂ ಅರ್ಹತಿ=ಆವಪ್ರಕಾರದಿಂದೆ ಯೋಗ್ಯನಾಗುತ್ತಿದ್ದಾನು? ಆವ ಬಗೆಯಿಂದಲೂ ಪಾಶಬಂಧಕ್ಕೆ ಯೋಗ್ಯನಲ್ಲವೆಂಬುದರ್ಥ. ॥೫೫॥

**ಗ್ರಂಥ॥** **ಸರ್ವಂ ಕರ್ಮಾರ್ಚನಂ ಶಂಭೋರ್ವಚನಂ ತಸ್ಯ ಕೀರ್ತನಮ್ ।**
**ಇತಿ ಭಾವಯತೋ ನಿತ್ಯಂ ಕಥಂ ಸ್ಯಾತ್ಕರ್ಮಬಂಧನಮ್ ॥**

**ಟೀಕು॥** ಸರ್ವಂ ಕರ್ಮ=ಸಮಸ್ತ ಕ್ರೀಡಾ ಕರ್ಮವು, ಶಂಭೋರರ್ಚನಂ=ಶಿವಲಿಂಗ ಪೂಜೆ, ಸರ್ವಂ ವಚನಂ=ಸಮಸ್ತ ವಾಕ್ಯವು, ತಸ್ಯ=ಆ ಪರಮೇಶ್ವರನ, ಕೀರ್ತನಂ=ಕೊಂಡಾಟವು; ಇತಿ=ಈ ಪ್ರಕಾರದಿಂದೆ, ನಿತ್ಯಂ=ಆವಾಗವು, ಭಾವಯತಃ=ಭಾವಿಸುತ್ತಿರ್ದ್ದ ಯೋಗೀಶ್ವರನಿಗೆ,ಕರ್ಮಬಂಧನಂ= ಕರ್ಮಪಾಶಬಂಧವು, ಕಥಂ ಸ್ಯಾತ್=ಹೇಗಹುದು? ಹೇಗೆಯೂ ಆಗದೆಂಬುದರ್ಥ. ॥೫೬॥

**ಸೂತ್ರ॥** ಬಳಿಕ ಭಾವಾರ್ಪಿತಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ॥** **ಸರ್ವೇಂದ್ರಿಯಗತಂ ಸೌಖ್ಯಂ ದುಃಖಂ ವಾ ಕರ್ಮಸಂಭವಮ್ ।**
**ಶಿವಾರ್ಥಂ ಭಾವಯನ್ಯೋಗೀ ಜೀವನ್ಮುಕ್ತೋ ಭವಿಷ್ಯತಿ ॥**

**ಟೀಕು॥** ಸರ್ವೇಂದ್ರಿಯಗತಂ ಸೌಖ್ಯಂ=ಶ್ರೋತ್ರಾದಿ ಸರ್ವೇಂದ್ರಿಯಂಗಳನು ಎಯ್ದಿರ್ದ್ದ ಸುಖವನು, ಕರ್ಮಸಂಭವಂ ದುಃಖಂ ವಾ=ಪಾಪಕರ್ಮದಿಂದೆ ಹುಟ್ಟಿದ ದುಃಖವನಾಯಿತ್ತಾದೊಡೆಯು ಶಿವಾರ್ಥಂ=ಶಿವಲಿಂಗಾರ್ಪಿತವಾದ ಪದಾರ್ಥವನಾಗಿಯೆ, ಭಾವಯನ್=ಭಾವಿಸುತ್ತಿರ್ದ್ದ, ಯೋಗೀ=ಶಿವಯೋಗಿಯು, ಜೀವನ್ಮುಕ್ತಃ=ಜೀವನ್ಮುಕ್ತನು, ಭವಿಷ್ಯತಿ=ಆಗುವನು. ॥೫೭॥

**ಇತಿ ಭಾವಾರ್ಪಿತಸ್ಥಲಮ್**

## ೨೫. ಪ್ರಸಾದಿಸ್ಥಲೇ ಶಿಷ್ಯಸ್ಥಲಮ್

**ಸೂತ್ರ॥** ಬಳಿಕ "ಯಥಾ ಸಿದ್ಧರಸಸ್ಪರ್ಶಾತ್ತಾಮ್ರಂ ಭವತಿ ಕಾಂಚನಮ್ ।
ಗುರೂಪದಿಷ್ಟಶ್ರವಣಾಚ್ಛಿಷ್ಯಸ್ತತ್ತ್ವಮಯಸ್ತಥಾ"॥ ಯೆಂಬ ಯೋಗ ಜಾಗಮಾರ್ಥವನು ಪ್ರಕಟಿಸುತ್ತ ಆ ಭಾವಾರ್ಪಿತ ಸಂಪನ್ನನಾದ ಶಿವಯೋಗಿಯಿಂದೆ ಶಿಕ್ಷಿಸಲುಯೋಗ್ಯನಾದ ಶಿಷ್ಯನ ಲಕ್ಷಣವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ಶಾಸನೀಯೋ ಭವೇದ್ಯಸ್ತು ಪರಕಾಯೇನ ಸರ್ವದಾ ।**
**ತತ್ಪ್ರಸಾದಾತ್ತು ಮೋಕ್ಷಾರ್ಥೀ ಸ ಶಿಷ್ಯ ಇತಿ ಕೀರ್ತಿತಃ ॥**

**ಟೀಕು॥** ಪರಕಾಯೇನ=ಪರಬ್ರಹ್ಮವೆ ಶರೀರವಾಗುಳ್ಳ ಆ ಭಾವಾರ್ಪಿತ ಸಂಪನ್ನನಾದ ಶಿವಯೋಗಿಯಿಂದೆ, ಯಃ=ಆವಾತನು, ಸರ್ವದಾ=ಎಲ್ಲಾಕಾಲದಲ್ಲಿಯು, ಶಾಸನೀಯಃ=ಶಿಕ್ಷೆಯನು ಮಾಡಿ ರಕ್ಷಿಸಲು ಯೋಗ್ಯವಾಗಿದ್ದಾತನು, ಭವೇತ್=ಅಹನು. ತತ್ಪ್ರಸಾದಾತ್ತು=ಆ ಭಾವಾರ್ಪಿತ ಸಂಪನ್ನನ ಪ್ರಸಾದದದೆಸೆಯಿಂದವಾಯಿತ್ತಾದೊಡೆ, ಯಃ=ಆವಾತನು, ಮೋಕ್ಷಾರ್ಥೀ=ಪರಾಪರಮೋಕ್ಷವನು ಬಯಸುತ್ತಿರ್ದ್ದಾತನು, ಸಃ=ಆತನು, ಶಿಷ್ಯಃ ಇತಿ=ಶಿಷ್ಯನೆಂದು, ಕೀರ್ತಿತಃ=ಹೇಳಲುಪಟ್ಟನು. ॥**೫೮**॥

**ಗ್ರಂಥ॥** **ಭಾವೋ ಯಸ್ಯ ಸ್ಥಿರೋ ನಿತ್ಯಂ ಮನೋವಾಕ್ಕಾಯಕರ್ಮಭಿಃ ।**
**ಗುರೌ ನಿಜೇ ಗುಣೋದಾರೇ ಸ ಶಿಷ್ಯ ಇತಿ ಗೀಯತೇ ॥**

**ಟೀಕು॥** ಯಸ್ಯ=ಆವಾತನ, ಭಾವಃ=ಭಾವವು, ಗುಣೋದಾರೇ=ಜ್ಞಾನವೈರಾಗ್ಯಾದಿ ಗುಣಂಗಳಿಂದೆ ಉನ್ನತವಾಗಿರ್ದ್ದ, ನಿಜೇ ಗುರೌ=ನಿಜಗುರುವಿನಲ್ಲಿ, ಮನೋವಾಕ್ಕಾಯಕರ್ಮಭಿಃ=ಧ್ಯಾನಸ್ತೋತ್ರ ಪೂಜಾರೂಪವಾದ ಮನವಚನಕಾಯಂಗಳಿಂದೆ, ನಿತ್ಯಂ=ಆವಾಗವು, ಸ್ಥಿರಃ=ದೃಢವಾಗಿರ್ದ್ದ ಅದು, ಭವೇತ್=ಅಹುದು. ಸಃ=ಆತನು, ಶಿಷ್ಯ ಇತಿ=ಶಿಷ್ಯನೆಂದು ಗೀಯತೇ=ಹೇಳಲುಪಡುತ್ತಿರ್ದ್ದಪನು.॥**೫೯**॥

**ಗ್ರಂಥ॥** **ಶಾಂತೋ ದಾಂತಸ್ತಪಶ್ಶೀಲಃ ಸತ್ಯವಾಕ್ಸಮದರ್ಶನಃ ।**
**ಗುರೌ ಶಿವೇ ಸಮಾನಸ್ಥಃ ಸ ಶಿಷ್ಯಾಣಾಮಿಹೋತ್ತಮಃ ॥**

**ಟೀಕು॥** ಯಃ=ಆವಾತನು, ಶಾಂತಃ=ಅಂತಃಕರಣ ನಿಗ್ರಹವುಳ್ಳಾತನಾಗಿ, ದಾಂತಃ=ಬಹಿಷ್ಕರಣ ನಿಗ್ರಹವುಳ್ಳಾತನಾಗಿ, ತಪಶ್ಶೀಲಃ=ಯಮನಿಯಮಾದ್ಯಷ್ಟಾಂಗಯೋಗರೂಪವಾದ ತಪೋವರ್ತನೆ ಯುಳ್ಳಾತನಾಗಿ, ಸತ್ಯವಾಕ್=ಸತ್ಯವಾಕ್ಯವುಳ್ಳಾತನಾಗಿ,ಸಮದರ್ಶನಃ=ಲೋಷ್ಟಸುವರ್ಣಾದಿಗಳನು

ಸಮಾನವಾಗಿ ಕಾಣುತ್ತಿರ್ದಾತನಾಗಿ, ಗುರೌ=ಶ್ರೀಗುರುವಿನಲ್ಲಿಯು, ಶಿವೇ=ಶಿವಲಿಂಗದಲ್ಲಿಯು, ಸಮಾನಸ್ಥಃ=ಸಮಾನಬುದ್ಧಿಯಿಂದಿರುತ್ತಿರ್ದ್ದಪನು, ಸಃ=ಆತನು, ಇಹ=ಇಲ್ಲಿ, ಶಿಷ್ಯಾಣಾಂ=ಶಿಷ್ಯರುಗಳಿಗೆ, ಉತ್ತಮಃ=ಶ್ರೇಷ್ಠವಾಗಿದ್ದಾತನು. ॥೬೦॥

**ಸೂತ್ರ॥** ಬಳಿಕ ಶಿಷ್ಯಾಚಾರವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಗುರುಮೇವ ಶಿವಂ ಪಶ್ಯೇತ್ ಶಿವಮೇವ ಗುರುಂ ತಥಾ ।**
**ನೈತಯೋರಂತರಂ ಕಿಂಚಿದ್ವಿಜಾನೀಯಾದ್ವಿಚಕ್ಷಣಃ ॥**

**ಟೀಕು॥** ವಿಚಕ್ಷಣಃ=ಪ್ರವೀಣನಾದ ಶಿಷ್ಯನು, ಗುರುಮೇವ=ಶ್ರೀಗುರುವನೆ, ಶಿವಂ=ಶಿವನನಾಗಿ ಪಶ್ಯೇತ್=ಕಾಬುದು. ಶಿವಮೇವ=ಶಿವನನೆ, ಗುರುಂ=ಶ್ರೀಗುರುವನಾಗಿ, ತಥಾ=ಹಾಗೆಯೇ ಪಶ್ಯೇತ್=ಕಾಬುದು. ಏತಯೋಃ=ಈ ಶ್ರೀ ಗುರುಶಿವರಿಗೆ, ಕಿಂಚಿದಂತರಂ=ಒಪ್ಪಚ್ಚಿ ಭೇದವನು, ನ ವಿಜಾನೀಯಾತ್=ತಿಳಿಯಲಾಗದು. ॥೬೧॥

**ಗ್ರಂಥ॥** **ಶಿವಾಚಾರೇ ಶಿವಧ್ಯಾನೇ ಶಿವಜ್ಞಾನೇ ಚ ನಿರ್ಮಲೇ ।**
**ಗುರೋರಾದೇಶಮಾತ್ರೇಣ ಪರಾಂ ನಿಷ್ಠಾಮವಾಪ್ನುಯಾತ್ ॥**

**ಟೀಕು॥** ವಿಚಕ್ಷಣಃ=ಪ್ರವೀಣನಾದ ಶಿಷ್ಯನು, ಶಿವಾಚಾರೇ=ಶಿವಾಚಾರದಲ್ಲಿ, ಶಿವಧ್ಯಾನೇ=ಶಿವಧ್ಯಾನದಲ್ಲಿ, ನಿರ್ಮಲೇ ಶಿವಜ್ಞಾನೇ ಚ=ನಿರ್ಮಲವಾದ ಶಿವಜ್ಞಾನದಲ್ಲಿಯು, ಗುರೋರಾದೇಶಮಾತ್ರೇಣ=ಶ್ರೀಗುರುವಿನ ಉಪದೇಶಮಾತ್ರದಿಂದವೆ, ಪರಾಂ ನಿಷ್ಠಾಂ=ಮಹಾ ವಿಶ್ವಾಸವನು, ಆಪ್ನುಯಾತ್=ಮಾಡುವುದು. ॥೬೨॥

**ಸೂತ್ರ॥** ಬಳಿಕ ಶ್ರೀ ಗುರುವಿನ ಕೃಪಾಕಟಾಕ್ಷ ಮಹತ್ವವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಬ್ರಹ್ಮಾಂಡಬುದ್ಬುದೋದ್ಭೂತಂ ಮಾಯಾಸಿಂಧುಂ ಮಹತ್ತರಮ್ ।**
**ಗುರೋಃ ಕಬಲಯತ್ಯಾಶು ಕಟಾಕ್ಷಬಡಬಾನಲಃ ॥**

**ಟೀಕು॥** ಬ್ರಹ್ಮಾಂಡಬುದ್ಬುದೋದ್ಭೂತಂ=ಅನೇಕ ಕೋಟಿ ಬ್ರಹ್ಮಾಂಡಂಗಳ ಉತ್ಪತ್ತಿಯುಳ್ಳ, ಮಹತ್ತರಂ=ಅತ್ಯಂತ ದೊಡ್ಡಿತ್ತಾದ, ಮಾಯಾಸಿಂಧುಂ=ಮಾಯೆಯೆಂಬ ಸಮುದ್ರವನು, ಗುರೋಃ=ಶ್ರೀ ಗುರುವಿನ, ಕಟಾಕ್ಷಬಡಬಾನಲಃ=ಕಡೆಗಣ್ಣನೋಟವೆಂಬ ಬಡಬಾಗ್ನಿಯು, ಆಶು=ಬೇಗ, ಕಬಲಯತಿ= ಗ್ರಾಸವನುಕೊಳುತ್ತಿರ್ದ್ದಪುದು. ॥೬೩॥

**ಗ್ರಂಥ||** **ಗುರೋಃ ಕಟಾಕ್ಷವೇಧೇನ ಶಿವೋ ಭವತಿ ಮಾನವಃ ।
ರಸವೇಧಾದ್ಯಥಾ ಲೋಹೋ ಹೇಮತಾಂ ಪ್ರತಿಪದ್ಯತೇ ॥**

**ಟೀಕು||** ಗುರೋಃ=ಶ್ರೀಗುರುವಿನ, ಕಟಾಕ್ಷವೇಧೇನ=ಕಡೆಗಣ್ಣನೋಟದ ವೇಧೆಯಿಂದೆ, ಮಾನವಃ=ಮನುಷ್ಯನು, ಶಿವೋ ಭವತಿ=ಶಿವಸ್ವರೂಪನಾಗುತ್ತಿರ್ದ್ದಪನು. ಲೋಹಃ=ಲೋಹವು, ರಸವೇಧಾತ್=ಸಿದ್ಧರಸದವೇಧೆಯದೆಸೆಯಿಂದೆ, ಹೇಮತಾಂ=ಸುವರ್ಣವಹತನವನು , ಯಥಾ=ಹೇಗೆ, ಪ್ರತಿಪದ್ಯತೇ=ಎಯ್ದುತ್ತಿರ್ದ್ದಪುದು. ಹಾಗೆಯೇ ಶ್ರೀಗುರುವಿನ ಕಟಾಕ್ಷವೇಧೆಯಿಂದೆ ಶಿಷ್ಯನು ಶಿವಸ್ವರೂಪನಾಗುತ್ತಿರ್ದ್ದಪನೆಂಬುದರ್ಥ. ||೬೪||

**ಸೂತ್ರ||** ಬಳಿಕ ಈ ಪ್ರಕಾರವಾದ ಗುರುಮಹತ್ವವ ಬಲ್ಲಾತನು ಗುರುವಿನಾಜ್ಞೆಯನು ಮೀರಬಾರದೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ನ ಲಂಘಯೇದ್ಗುರೋರಾಜ್ಞಾಂ ಜ್ಞಾನಮೇವ ಪ್ರಕಾಶಯನ್ ।
ಶಿವಾಸಕ್ತೇನ ಮನಸಾ ಸರ್ವಸಿದ್ಧಿಮವಾಪ್ನುಯಾತ್ ॥**

**ಟೀಕು||** ವಿಚಕ್ಷಣಃ=ಪ್ರವೀಣನಾದ ಶಿಷ್ಯನು, ಗುರೋರಾಜ್ಞಾಂ=ಶ್ರೀಗುರುವಿನಾಜ್ಞೆಯನು, ನ ಲಂಘಯೇತ್=ಮೀರಲಾಗದು. ಶಿವಾಸಕ್ತೇನ ಮನಸಾ=ಶಿವಧ್ಯಾನದಲ್ಲಿ ಆಸಕ್ತವಾದ ಮನಸ್ಸಿನಿಂದೆ, ಜ್ಞಾನಮೇವ=ಶಿವಜ್ಞಾನವನೆ, ಪ್ರಕಾಶಯನ್ ಸನ್=ಪ್ರಕಾಶಿಸುತ್ತಿರ್ದ್ದಾತನಾಗುತಲು, ಸರ್ವಸಿದ್ಧಿಂ= ಸಮಸ್ತಸಿದ್ಧಿಯನು, ಅವಾಪ್ನುಯಾತ್=ಎಯ್ದುವನು. ||೬೫||

**ಸೂತ್ರ||** ಬಳಿಕ ಗುರೂಪದೇಶರಹಸ್ಯವನು ಸೂಚಿಸುತ್ತಿರ್ದ್ದಪಂ.

**ಗ್ರಂಥ||** **ಶಿವಾದನ್ಯಜ್ಜಗನ್ಮಿಥ್ಯಾ ಶಿವಃ ಸಂವಿತ್ಸ್ವರೂಪಕಃ ।
ಶಿವಸ್ತ್ವಮಿತಿ ನಿರ್ದಿಷ್ಟೋ ಗುರುಣಾ ಮುಕ್ತ ಏವ ಸಃ ॥**

**ಟೀಕು||** ಶಿವಾದನ್ಯತ್=ಶಿವನದೆಸೆಯಿಂದೆ ಭಿನ್ನವಾದ, ಜಗತ್=ಜಗತ್ತು, ಮಿಥ್ಯಾ=ಮಿಥ್ಯೆಯು. ಶಿವಃ=ಶಿವನು, ಸಂವಿತ್ಸ್ವರೂಪಕಃ=ಅರಿವೆ ಸ್ವರೂಪವಾಗುಳ್ಳಾತನು. ಶಿವಸ್ತ್ವಮಿತಿ="ಏತದಾತ್ಮ್ಯ-ಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ" ಯೆಂಬ ಛಾಂದೋಗ್ಯ ಶ್ರುತಿ-ಯುಂಟಾಗಿ ಆ ಶಿವನೇ ನೀನೆಂದು, ಯಃ=ಆವ ಶಿಷ್ಯನು, ಗುರುಣಾ=ಗುರುವಿನಿಂದೆ, ನಿರ್ದಿಷ್ಟಃ= ಉಪದೇಶಿಸಲುಪಟ್ಟನು, ಸಃ=ಆತನು, ಮುಕ್ತ ಏವ=ಜೀವನ್ಮುಕ್ತನೆ. ||೬೬||

**ಸೂತ್ರ||** ಬಳಿಕ ಶಿಷ್ಯಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ **ಗುರೋರ್ಲಬ್ಧ್ವಾ ಮಹಾಜ್ಞಾನಂ ಸಂಸಾರಾಮಯಭೇಷಜಮ್**
**ಮೋದತೇ ಯಃ ಸುಖೀ ಶಾಂತಃ ಸ ಜೀವನ್ಮುಕ್ತ ಏವ ಹಿ**

**ಟೀಕು॥** ಯಃ=ಆವ ಶಿಷ್ಯನು, ಸಂಸಾರಾಮಯಭೇಷಜಂ=ಭವರೋಗಕ್ಕೆ ಔಷಧವಾಗಿರ್ದ್ದ, ಮಹಾಜ್ಞಾನಂ=ಮಹಾಜ್ಞಾನವನು, ಗುರೋಃ=ಶ್ರೀಗುರುವಿನದೆಸೆಯಿಂದೆ, ಲಬ್ಧ್ವಾ=ಪಡೆದು, ಸುಖೀ=ಶಿವಸುಖಿಯಾಗಿ, ಮೋದತೇ=ಸಂತೋಷಿಸುತ್ತಿರ್ದ್ದಪನು; ಸಃ=ಆತನು, ಶಾಂತಃ=ರಾಗದ್ವೇಷ ರಹಿತನಾಗಿರ್ದ್ದ, ಜೀವನ್ಮುಕ್ತಃ ಏವ=ಜೀವನ್ಮುಕ್ತನೆ. ಹಿ=ಪ್ರಸಿದ್ಧವು. ॥೬೭॥

**ಇತಿ ಶಿಷ್ಯಸ್ಥಲಮ್**

## ೨೬. ಪ್ರಸಾದಿಸ್ಥಲೇ ಶುಶ್ರೂಷುಸ್ಥಲಮ್

**ಸೂತ್ರ॥** ಬಳಿಕ "ತಸ್ಮಾದುಪಶ್ರಿತಾತ್ಸಮ್ಯಕ್ಸಹಜಂ ಪ್ರಾಪ್ಯ ಸದ್ಗುರೋಃ ।
ಅನಾಯಾಸೇನ ಸತತಮಾತ್ಮಾಭ್ಯಾಸರತೋ ಭವೇತ್"॥ ಯೆಂಬ ಯೋಗಜಾಗಮಾರ್ಥವನು ಪ್ರಕಟಿಸುತ್ತ ಆ ಶಿಷ್ಯನೆ ಗುರುಸೇವೆಯಲ್ಲಿ ತತ್ಪರನಾಗಿ ಉಪದೇಶ ರಹಸ್ಯವನು ಕೇಳಲಿಚ್ಛೆಯುಳ್ಳಾತನಾಗಲಾಗಿ ಶುಶ್ರೂಷುವೆನಿಸಿಕೊಂಬನೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಬೋಧ್ಯಮಾನಃ ಸ ಗುರುಣಾ ಪರಕಾಯೇನ ಸರ್ವದಾ ।**
**ತಚ್ಛುಶ್ರೂಷಾರತಃ ಶಿಷ್ಯಃ ಶುಶ್ರೂಷುರಿತಿ ಕೀರ್ತ್ಯತೇ ॥**

**ಟೀಕು॥** ಪರಕಾಯೇನ=ಪರಬ್ರಹ್ಮವೇ ಶರೀರವಾಗುಳ್ಳ, ಗುರುಣಾ=ಶ್ರೀಗುರುವಿನಿಂದೆ, ಸರ್ವದಾ=ಎಲ್ಲಾಕಾಲದಲ್ಲಿಯು, ಬೋಧ್ಯಮಾನಃ=ಬೋಧಿಸಲುಪಡುತ್ತಿರ್ದ್ದ, ಸ ಶಿಷ್ಯಃ=ಆ ಶಿಷ್ಯನು, ತಚ್ಛುಶ್ರೂಷಾರತಃ=ಆ ಗುರು ಶುಶ್ರೂಷೆಯಲ್ಲಿ ಪ್ರೀತಿಯುಳ್ಳಾತನಾಗಿ, ಶುಶ್ರೂಷುರಿತಿ=ಶುಶ್ರೂಷುವೆಂದು, ಕೀರ್ತ್ಯತೇ=ಹೇಳಲುಪಡುತ್ತಿರ್ದ್ದಪನು. ॥೬೮॥

ಗ್ರಂಥ॥ **ಕಿಂ ಸತ್ಯಂ ಕಿಂ ನು ವಾಽಸತ್ಯಂ ಕ ಆತ್ಮಾ ಕಃ ಪರಶ್ಶಿವಃ ।**
**ಇತಿ ಶ್ರವಣಸಂಸಕ್ತೋ ಗುರೋಃ ಶಿಷ್ಯೋ ವಿಶಿಷ್ಯತೇ ॥**

**ಟೀಕು॥** ಸತ್ಯಂ ಕಿಂ=ಸತ್ಯವೇನು? ಅಸತ್ಯಂ ಕಿಂ ನು ವಾ=ಅಸತ್ಯವೇನು? ಆತ್ಮಾ ಕಃ=ಆತ್ಮನಾರು? ಪರಃ ಶಿವಃ ಕಃ=ಪರಮಶಿವನಾರು? ಇತಿ=ಹೀಗೆಂದು, ಗುರೋಃ=ಶ್ರೀಗುರುವಿನದೆಸೆಯಿಂದೆ, ಶ್ರವಣಸಂಸಕ್ತಃ=ಕೇಳುವಲ್ಲಿ ತತ್ಪರನಾಗಿದ್ದಾತನೆ, ಶಿಷ್ಯಃ=ಶುಶ್ರೂಷುವಾದ ಶಿಷ್ಯನೆಂದು, ವಿಶಿಷ್ಯತೇ=ವಿಶೇಷಿಸಲುಪಡುತ್ತಿರ್ದ್ದಪನು. ॥೬೯॥

**ಗ್ರಂಥ||** **ಶ್ರುತ್ವಾ ಶ್ರುತ್ವಾ ಗುರೋರ್ವಾಕ್ಯಂ ಶಿವಸಾಕ್ಷಾತ್ಕ್ರಿಯಾವಹಮ್ ।**
**ಉಪಶಾಮ್ಯತಿ ಯಃ ಸ್ವಾಂತೇ ಸ ಮುಕ್ತಿಪದಮಾಪ್ನುಯಾತ್ ॥**

**ಟೀಕು||** ಯಃ=ಆವನಾನೊಬ್ಬ ಶುಶ್ರೂಷುವಾದ ಶಿಷ್ಯನು, ಶಿವಸಾಕ್ಷಾತ್ಕ್ರಿಯಾವಹಂ=ಪರಮಶಿವನನು ಸಾಕ್ಷಾತ್ಕರಿಸುತ್ತಿರ್ದ್ದ, ವಾಕ್ಯಂ=ಶ್ರುತಿಸಮ್ಮತವಾದ ಉಪದೇಶ ವಾಕ್ಯವನು, ಗುರೋಃ=ಶ್ರೀ ಗುರುವಿನ ದೆಸೆಯಿಂದೆ, ಶ್ರುತ್ವಾ ಶ್ರುತ್ವಾ=ಕೇಳಿ ಕೇಳಿ, ಸ್ವಾಂತೇ=ಹೃದಯಕಮಲದಲ್ಲಿ, ಉಪಶಾಮ್ಯತಿ=ಶಾಂತಿಯನೆಯ್ದುತ್ತಿರ್ದ್ದಪನು. ಸಃ=ಆತನು, ಮುಕ್ತಿಪದಂ=ಮೋಕ್ಷಪದವನು, ಆಪ್ನುಯಾತ್=ಎಯ್ದು-ವನು. ||೭೦||

**ಸೂತ್ರ||** ಬಳಿಕ ಆ ಶ್ರೀ ಗುರೂಪದೇಶವಾಕ್ಯವನು ದೃಷ್ಟಾಂತಪೂರ್ವಕವಾಗಿ ಸೂತ್ರದ್ವಯದಿಂದೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||** **ನ ಬುದ್ಧ್ಯತಿ ಗುರೋರ್ವಾಕ್ಯಂ ವಿನಾ ಶಿಷ್ಯಸ್ಯ ಮಾನಸಮ್ ।**
**ತೇಜೋ ವಿನಾ ಸಹಸ್ರಾಂಶೋಃ ಕಥಂ ಸ್ಫುರತಿ ಪಂಕಜಮ್ ॥**

**ಟೀಕು||** ಗುರೋಃ=ಶ್ರೀಗುರುವಿನ, ವಾಕ್ಯಂ ವಿನಾ=ಉಪದೇಶವಾಕ್ಯ ಹೊರತಾಗಿ, ಶಿಷ್ಯಸ್ಯ=ಶುಶ್ರೂಷುವಾದ ಶಿಷ್ಯನ, ಮಾನಸಂ=ಹೃದಯಕಮಲವು, ನ ಬುದ್ಧ್ಯತಿ=ವಿಕಸನವಾಗುತ್ತಿರದು. ಸಹಸ್ರಾಂಶೋಃ=ಸೂರ್ಯನ, ತೇಜೋ ವಿನಾ=ತೇಜಸ್ಸು ಹೊರತಾಗಿ, ಪಂಕಜಂ=ಕಮಲವು, ಕಥಂ ಸ್ಫುರತಿ=ಆವ ಪ್ರಕಾರದಿಂದೆ ವಿಕಸನವಾದೀತು? ಆವ ಬಗೆಯಿಂದವು ವಿಕಸನವಾಗದೆಂಬುದರ್ಥ.||೭೧||

**ಗ್ರಂಥ||** **ಸೂರ್ಯಸ್ಯೋದಯಮಾತ್ರೇಣ ಸೂರ್ಯಕಾಂತಃ ಪ್ರಕಾಶತೇ ।**
**ಗುರೋರಾಲೋಕಮಾತ್ರೇಣ ಶಿಷ್ಯೋ ಬೋಧೇನ ಭಾಸತೇ ॥**

**ಟೀಕು||** ಸೂರ್ಯಸ್ಯೋದಯಮಾತ್ರೇಣ=ಸೂರ್ಯೋದಯಮಾತ್ರದಿಂದವೆ, ಸೂರ್ಯಕಾಂತಃ=ಸೂರ್ಯಕಾಂತಸ್ಫಟಿಕವು, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪುದು. ಗುರೋರಾಲೋಕಮಾತ್ರೇಣ=ಶ್ರೀ ಗುರುವಿನದರ್ಶನಮಾತ್ರದಿಂದವೆ, ಶಿಷ್ಯಃ=ಶಿಷ್ಯನು, ಬೋಧೇನ=ಶಿವಜ್ಞಾನಬೋಧೆಯಿಂದೆ, ಭಾಸತೇ=ಪ್ರಕಾಶಿಸುತ್ತಿರ್ದ್ದಪನು. ||೭೨||

**ಸೂತ್ರ||** ಬಳಿಕ "ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ।
ಶ್ರೋತ್ರಿಯಂ ಬ್ರಹ್ಮನಿಷ್ಠಮ್"|| ಯೆಂಬ ಮುಂಡಕಶ್ರುತ್ಯರ್ಥವನು ಪ್ರಕಟಿ-ಸುತ್ತ ಶಿಷ್ಯನ ಪ್ರಸನ್ನವಾಕ್ಯವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಅದ್ವೈತಪರಮಾನಂದಪ್ರಬೋಧೈಕಪ್ರಕಾಶಕಮ್ ।**
**ಉಪಾಯಂ ಶೃಣುಯಾಚ್ಛಿಷ್ಯಃ ಸದ್ಗುರುಂ ಪ್ರಾಪ್ಯ ಸಾಂಜಲಿಃ ॥**

**ಟೀಕು॥** ಶಿಷ್ಯಃ=ಶಿಷ್ಯನು, ಸದ್ಗುರುಂ=ಸದ್ಗುರುಸ್ವಾಮಿಯನು, ಪ್ರಾಪ್ಯ=ಎಯ್ದಿ, ಸಾಂಜಲಿಃ ಸನ್=ನಮಸ್ಕಾರಮುದ್ರೆಯೊಡನೆ ಕೂಡಿ ವರ್ತಿಸುತ್ತಿರ್ದಾತನಾಗುತಲು, ಅದ್ವೈತಪರಮಾನಂದ ಪ್ರಬೋಧೈಕ ಪ್ರಕಾಶಕಂ=ಅದ್ವೈತವಾದ ಪರಮಾನಂದ ಬೋಧೆಯೊಡನೆ ಪ್ರಕಾಶಿಸುತ್ತಿರ್ದ, ಉಪಾಯಂ=ಉಪದೇಶ ರಹಸ್ಯೋಪಾಯವನು, ಶೃಣುಯಾತ್=ಪ್ರಶ್ನೆಯನು ಮಾಡಿ ಕೇಳುವುದು. ॥೭೩॥

ಗ್ರಂಥ॥ **ಕಿಂ ತತ್ತ್ವಂ ಪರಮಂ ಜ್ಞೇಯಂ ಕೇನ ಸರ್ವೇ ಪ್ರತಿಷ್ಠಿತಾಃ ।**
**ಕಸ್ಯ ಸಾಕ್ಷಾತ್ಕ್ರಿಯಾಮುಕ್ತಿಃ ಕಥಯೇತಿ ಸಮಾಸತಃ ॥**

**ಟೀಕು॥** ಭೋ ಗುರೋ=ಎಲೈ ಶ್ರೀ ಗುರುವೆ! ಜ್ಞೇಯಂ=ಅರಿಯಲು ಯೋಗ್ಯವಾದ, ಪರಮಂ ತತ್ತ್ವಂ ಕಿಂ=ಪರತತ್ತ್ವವಾವುದು? ಕೇನ=ಆವ ವಸ್ತುವಿನಿಂದೆ, ಸರ್ವೇ=ಚರಾಚರಾತ್ಮಕವಾದ ಸಮಸ್ತ ಲೋಕಂಗಳು, ಪ್ರತಿಷ್ಠಿತಾಃ=ಪ್ರತಿಷ್ಠಿಸಲುಪಟ್ಟವು. ಕಸ್ಯ=ಆವಾತನ, ಸಾಕ್ಷಾತ್ಕ್ರಿಯಾಮುಕ್ತಿಃ= ಸಾಕ್ಷಾತ್ಕಾರದಿಂದೆ ಪರಮೋಕ್ಷವು, ಭವೇತ್=ಅಹುದು. ಇತಿ=ಇಷ್ಟನು, ಸಮಾಸತಃ=ಸಂಕ್ಷೇಪಿಸಿ, ಕಥಯ=ಉಪದೇಶಿಸಿ ಹೇಳು. ॥೭೪॥

**ಸೂತ್ರ॥** ಬಳಿಕ "ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್
ಪ್ರಶಾಂತಚಿತ್ತಾಯ ಶಮಾನ್ವಿತಾಯ।
ಯೇನಾಕ್ಷರಂ ಪುರುಷಂ ವೇದ ಸತ್ಯಂ
ಪ್ರೋವಾಚ ತಾಂ ತತ್ತ್ವತೋ ಬ್ರಹ್ಮವಿದ್ಯಾಮ್"॥ ಯೆಂಬ ಮುಂಡಕ ಶ್ರುತ್ಯರ್ಥವನು ಪ್ರಕಟಿಸುತ್ತ ಆ ಪ್ರಶ್ನೋತ್ತರವನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಇತಿ ಪ್ರಶ್ನೀಕೃತೇ ಪೂರ್ವಂ ಶಿಷ್ಯೇಣ ನಿಯತಾತ್ಮನಾ ।**
**ಬ್ರೂಯಾತ್ತತ್ತ್ವಂ ಗುರುಸ್ತಸ್ಮೈ ಯೇನ ಸ್ಯಾತ್ಸಂಸೃತೇರ್ಲಯಃ ॥**

**ಟೀಕು॥** ಇತಿ=ಈ ಪ್ರಕಾರದಿಂದೆ, ಪೂರ್ವಂ=ಮೊದಲು, ನಿಯತಾತ್ಮನಾ ಶಿಷ್ಯೇಣ=ಏಕಾಗ್ರ ಚಿತ್ತವುಳ್ಳ ಶಿಷ್ಯನಿಂದೆ, ಪ್ರಶ್ನೀಕೃತೇ ಸತಿ="ಕಿಂ ತತ್ವಪರಮಂ" ಯೆಂದು ಪ್ರಶ್ನೆಯ ಮಾಡಲುಪಡಲಿಕೆಯಾಗಿ, ಗುರುಃ=ಶ್ರೀಗುರುನಾಥನು, ತಸ್ಮೈ=ಆ ಶಿಷ್ಯನಿಗೋಸುಗ, ಯೇನ=ಆವುದಾನೊಂದು ತತ್ತ್ವದಿಂದೆ, ಸಂಸೃತೇಃ=ಸಂಸಾರದ, ಲಯಃ=ಲಯವು, ಸ್ಯಾತ್=ಅಹುದು , ತತ್ತ್ವಂ=ಆ ತತ್ತ್ವವನು, ಬ್ರೂಯಾತ್= ಉಪದೇಶಿಸಿ ಹೇಳುವುದು. ॥೭೫॥

**ಗ್ರಂಥ॥** **ಶಿವ ಏವ ಪರಂ ತತ್ತ್ವಂ ಚಿದಾನಂದಸದಾಕೃತಿಃ ।**
**ಸ ಯಥಾರ್ಥಸ್ತದನ್ಯಸ್ಯ ಜಗತೋ ನಾಸ್ತಿ ನಿತ್ಯತಾ ॥**

**ಟೀಕು॥** ಚಿದಾನಂದಸದಾಕೃತಿಃ=ಸಚ್ಚಿದಾನಂದವೆ ಸ್ವರೂಪವಾಗುಳ್ಳ, ಶಿವ ಏವ=ಶಿವನೆ, ಪರಂ ತತ್ತ್ವಂ=ಪರತತ್ತ್ವವು. ಸಃ=ಆ ಶಿವನೆ, ಯಥಾರ್ಥಃ=ಯಥಾರ್ಥವಾಗಿದ್ದಾತನು; ತದನ್ಯಸ್ಯ= ಆ ಶಿವನದೆಸೆಯಿಂದೆ ಭಿನ್ನವಾದ, ಜಗತಃ=ಜಗತ್ತಿಗೆ, ನಿತ್ಯತಾ=ನಿತ್ಯತ್ವವು, ನಾಸ್ತಿ=ಇಲ್ಲ. ॥೭೬॥

**ಗ್ರಂಥ॥** **ಅಯಥಾರ್ಥಪ್ರಪಂಚೋಽಯಂ ಪ್ರತಿತಿಷ್ಠತಿ ಶಂಕರೇ ।**
**ಸದಾತ್ಮನಿ ಯಥಾ ಶುಕ್ತೌ ರಜತತ್ವಂ ವ್ಯವಸ್ಥಿತಮ್ ॥**

**ಟೀಕು॥** ಅಯಥಾರ್ಥ=ಯಥಾರ್ಥವಲ್ಲದೆಯಿರ್ದ್ದ, ಅಯಂ=ಪ್ರಪಂಚಃ=ಈ ಜಗತ್ಪ್ರಪಂಚವು, ಶಂಕರೇ=ಪರಮೇಶ್ವರನಲ್ಲಿ ಪ್ರತಿತಿಷ್ಠತಿ=ಇರುತ್ತಿರ್ದ್ದಪುದು. ಸದಾತ್ಮನಿ=ಸದ್ರೂಪವಾಗಿರ್ದ್ದ, ಶುಕ್ತೌ= ಚಿಪ್ಪಿನಲ್ಲಿ, ರಜತತ್ವಂ=ರಜತತ್ವವು, ಯಥಾ=ಹೇಗೆ, ವ್ಯವಸ್ಥಿತಂ=ಇರುತ್ತಿರ್ದ್ದಪುದು. ಹಾಗೆಯೇ, ಸದ್ರೂಪವಾದ ಶಿವನಲ್ಲಿ ಜಗತ್ಪ್ರಪಂಚು ತೋರುತ್ತಿರ್ದ್ದಪುದೆಂಬುದರ್ಥ. ॥೭೭॥

**ಗ್ರಂಥ॥** **ಶಿವೋಽಹಮಿತಿ ಭಾವೇನ ಶಿವೇ ಸಾಕ್ಷಾತ್ಕೃತೇ ಸ್ಥಿರಮ್ ।**
**ಮುಕ್ತೋ ಭವತಿ ಸಂಸಾರಾನ್ಮೋಹಗ್ರಂಥೇರ್ವಿಭೇದತಃ ॥**

**ಟೀಕು॥** ಶಿವೋಽಹಮಿತಿ ಭಾವೇನ=ಶಿವನೆಂಬ ಭಾವದಿಂದೆ, ಶಿವೇ=ಶಿವನು, ಸ್ಥಿರಂ=ದೃಢವಾಗಿ, ಸಾಕ್ಷಾತ್ಕೃತೇಸತಿ=ಸಾಕ್ಷಾತ್ಕರಿಸಲುಪಡಲಿಕೆಯಾಗಿ, ವಿಭೇದತಃ=ವಿಶೇಷವಾದ ಭೇದವುಳ್ಳ, ಸಂಸಾರಾನ್ಮೋಹಗ್ರಂಥೇ=ಸಂಸಾರರೂಪವಾದ ಮೋಹಗ್ರಂಥಿಯದೆಸೆಯಿಂದೆ, ಮುಕ್ತಃ=ಬಿಡಲು ಪಟ್ಟಾತನು, ಭವತಿ=ಆಗುತ್ತಿರ್ದ್ದಪನು. ॥೭೮॥

**ಗ್ರಂಥ॥** **ಶಿವಂ ಭಾವಯ ಚಾತ್ಮಾನಂ ಶಿವಾದನ್ಯನ್ನ ಚಿಂತಯ ।**
**ಏವಂ ಸ್ಥಿರೇ ಶಿವಾದ್ವೈತೇ ಜೀವನ್ಮುಕ್ತೋ ಭವಿಷ್ಯಸಿ ॥**

**ಟೀಕು॥** ಭೋ ಶಿಷ್ಯ=ಎಲೈ ಶಿಷ್ಯನೇ!, ತ್ವಂ=ನೀನು, ಆತ್ಮಾನಂ=ನಿನ್ನನು, ಶಿವಂ=ಶಿವನನಾಗಿ, ಭಾವಯ=ಭಾವಿಸು. ಶಿವಾದನ್ಯತ್=ಶಿವನದೆಸೆಯಿಂದೆ ಅನ್ಯವಾದ ಜಗಜ್ಜಾಲವನು, ನ ಚಿಂತಯ= ಧ್ಯಾನಿಸಬೇಡ. ಏವಂ=ಈ ಪ್ರಕಾರದಿಂದೆ, ಶಿವಾದ್ವೈತೇ=ಶಿವಾದ್ವೈತವು, ಸ್ಥಿರೇ ಸತಿ=ದೃಢವಾಗಲಿಕೆಯಾಗಿ, ಜೀವನ್ಮುಕ್ತಃ=ಜೀವನ್ಮುಕ್ತನು, ಭವಿಷ್ಯಸಿ=ಆಗುತ್ತೀಯೆ. ॥೭೯॥

**ಸೂತ್ರ॥** ಬಳಿಕ ಶುಶ್ರೂಷುಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಏವಂ ಪ್ರಬೋಧಿತಃ ಶಿಷ್ಯೋ ಗುರುಣಾ ಗುಣಶಾಲಿನಾ ।**
**ಶಿವಮೇವ ಜಗತ್ಪಶ್ಯನ್ ಜೀವನ್ಮುಕ್ತೋಽಭಿಜಾಯತೇ ॥**

**ಟೀಕು||** ಏವಂ=ಈ ಪ್ರಕಾರದಿಂದೆ, ಗುಣಶಾಲಿನಾ=ಜ್ಞಾನವೈರಾಗ್ಯಾದಿಗುಣಂಗಳಿಂದೆ ಒಪ್ಪುತ್ತಿರ್ದ್ದ, ಗುರುಣಾ=ಶ್ರೀಗುರುವಿನಿಂದೆ, ಪ್ರಬೋಧಿತಃ=ಮಿಗಿಲಾಗಿ ಬೋಧಿಸಲುಪಟ್ಟ, ಶಿಷ್ಯಃ=ಶಿಷ್ಯನು, ಜಗತ್=ಜಗಜ್ಜಾಲವನು, ಶಿವಮೇವ=ಶಿವನನಾಗಿಯೆ, ಪಶ್ಯನ್=ಕಾಣುತ್ತಿರ್ದ್ದಾತನಾಗುತಲು, ಜೀವನ್ಮುಕ್ತಃ=ಜೀವನ್ಮುಕ್ತನು, ಅಭಿಜಾಯತೇ=ಆಗುತ್ತಿರ್ದ್ದಪನು. ||೮೦||

**ಇತಿ ಶುಶ್ರೂಷುಸ್ಥಲಮ್**

## ೨೭. ಪ್ರಸಾದಿಸ್ಥಲೇ ಸೇವ್ಯಸ್ಥಲಮ್

**ಸೂತ್ರ||** ಬಳಿಕ "ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ||" ಯೆಂಬ ಮುಂಡಕಶ್ರುತ್ಯರ್ಥವನು ಪ್ರಕಟಿಸುತ್ತ

"ದೃಷ್ಟಿಃ ಸ್ಥಿರಾ ಯಸ್ಯ ವಿನೈವ ದೃಶ್ಯಂ
ವಾಯುಃ ಸ್ಥಿರೋ ಯಸ್ಯ ವಿನಾ ಪ್ರಯತ್ನಮ್।
ಚಿತ್ತಂ ಸ್ಥಿರಂ ಯಸ್ಯ ವಿನಾಽವಲಂಬಂ
ಸ ಏವ ಯೋಗೀ ಸ ಗುರುಃ ಸ ಸೇವ್ಯಃ"|| ಯೆಂಬ ನಾದಬಿಂದೂಪನಿಷದರ್ಥವನು ಪ್ರಕಟಿಸುತ್ತ ಗುರೂಪದೇಶಸಿದ್ಧನಾದ ಆ ಶುಶ್ರೂವೇ ಸೇವ್ಯನೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ಗುರುವಾಕ್ಯಾಮೃತಾಸ್ವಾದಾತ್ಪ್ರಾಪ್ತಬೋಧಮಹಾಫಲಃ ।**
**ಶುಶ್ರೂಷುರೇವ ಸರ್ವೇಷಾಂ ಸೇವ್ಯತ್ವಾತ್ಸೇವ್ಯ ಉಚ್ಯತೇ ॥**

**ಟೀಕು||** ಗುರುವಾಕ್ಯಾಮೃತಾಸ್ವಾದಾ=ಗುರೂಪದೇಶವೆಂಬ ವಾಕ್ಯದ ಅಮೃತಸ್ವೀಕಾರದಿಂದೆ, ಪ್ರಾಪ್ತಬೋಧಮಹಾಫಲಃ=ಪಡೆಯಲುಪಟ್ಟ ಶಿವಜ್ಞಾನವೆಂಬ ಮಹಾಫಲವುಳ್ಳ , ಶುಶ್ರೂಷುರೇವ=ಆ ಶುಶ್ರೂಷುವೆ, ಸರ್ವೇಷಾಂ=ಸಮಸ್ತ ಜನರಿಂದೆ, ಸೇವ್ಯತ್ವಾತ್=ಸೇವಿಸಲುಯೋಗ್ಯನಾದ ಕಾರಣವಾಗಿ, ಸೇವ್ಯಃ=ಸೇವ್ಯನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ||೮೧||

**ಸೂತ್ರ||** ಬಳಿಕ ಆ ಸೇವ್ಯನೆ ಗುರುವಿನೋಪಾದಿಯಲ್ಲಿ ಪೂಜ್ಯನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಗುರೂಪದಿಷ್ಟೇ ವಿಜ್ಞಾನೇ ಚೇತಸಿ ಸ್ಥಿರತಾಂ ಗತೇ ।**
**ಸಾಕ್ಷಾತ್ಕೃತಶಿವಃ ಶಿಷ್ಯೋ ಗುರುವತ್ಪೂಜ್ಯತೇ ಸದಾ ॥**

**ಟೀಕು||** ಗುರೂಪದಿಷ್ಟೇ=ಶ್ರೀಗುರುವಿನಿಂದೆ ಉಪದೇಶಿಸಲುಪಟ್ಟ, ವಿಜ್ಞಾನೇ=ವಿಶಿಷ್ಟವಾದ ಜ್ಞಾನವು, ಚೇತಸಿ=ಹೃದಯದಲ್ಲಿ, ಸ್ಥಿರತಾಂ=ಸ್ಥಿರತ್ವವನು, ಗತೇಸತಿ=ಎಯ್ದಲಿಕೆಯಾಗಿ, ಸಾಕ್ಷಾತ್ಕೃತ ಶಿವಃ=ಸಾಕ್ಷಾತ್ಕರಿಸಲುಪಟ್ಟ ಶಿವಸ್ವರೂಪವುಳ್ಳ,ಶಿಷ್ಯಃ=ಶಿಷ್ಯನು, ಗುರುವತ್=ಗುರುವಿನೋಪಾದಿಯಲ್ಲಿ, ಸದಾ=ಎಲ್ಲಾಕಾಲದಲ್ಲಿಯು, ಪೂಜ್ಯತೇ=ಪೂಜ್ಯನಾಗುತ್ತಿರ್ದಪನು. ||೮೨||

**ಗ್ರಂಥ||** **ಜ್ಞಾನಾದಾಧಿಕ್ಯಸಂಪತ್ತಿಃ ಗುರೋರ್ಯಸ್ಮಾದುಪಸ್ಥಿತಾ ।**
**ತಸ್ಮಾತ್‌ಜ್ಞಾನಾಗಮಾಚ್ಛಿಷ್ಯೋ ಗುರುವತ್ಪೂಜ್ಯತಾಂ ವ್ರಜೇತ್ ॥**

**ಟೀಕು||** ಗುರೋಃ=ಶ್ರೀ ಗುರುವಿನ, ಯಸ್ಮಾತ್ ಜ್ಞಾನಾತ್=ಆವುದಾನೊಂದು ಜ್ಞಾನದದೆಸೆಯಿಂದೆ, ಆಧಿಕ್ಯಸಂಪತ್ತಿಃ=ಅಧಿಕ ಸಂಪತ್ತಿಯು, ಉಪಸ್ಥಿತಾ=ಬಂದಿರ್ದ್ದ ಅದು. ತಸ್ಮಾತ್ ಜ್ಞಾನಾಗಮಾತ್=ಆ ಜ್ಞಾನದ ಬರವಿನದೆಸೆಯಿಂದೆ, ಶಿಷ್ಯಃ=ಶಿಷ್ಯನು, ಗುರುವತ್=ಗುರುವಿನೋಪಾದಿಯಲ್ಲಿ, ಪೂಜ್ಯತಾಂ=ಪೂಜ್ಯನಹತನವನು, ವ್ರಜೇತ್=ಎಯ್ದುವನು. ||೮೩||

**ಸೂತ್ರ||** ಬಳಿಕ ಆ ಶಿವಜ್ಞಾನಸಂಪನ್ನನಾದ ಶಿಷ್ಯನೆ ಶಿವನೋಪಾದಿಯಲ್ಲಿ ಪೂಜ್ಯನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಶಿವೋಽಹಮಿತಿ ಭಾವಸ್ಯ ನೈರಂತರ್ಯಾದ್ವಿಶೇಷತಃ ।**
**ಶಿವಭಾವೇ ಸಮುತ್ಪನ್ನೇ ಶಿವವತ್ಪೂಜ್ಯ ಏವ ಸಃ ॥**

**ಟೀಕು||** ಶಿವೋಽಹಮಿತಿ ಭಾವಸ್ಯ=ಶಿವನೆ ನಾನೆಂಬ ಭಾವಕ್ಕೆ, ಶಿವಭಾವೇ=ಶಿವತ್ವವು, ನೈರಂತರ್ಯಾದ್ ವಿಶೇಷತಃ=ಎಡದೆರಹಿಲ್ಲದೆಯಿರ್ದ್ದ ವಿಶೇಷದದೆಸೆಯಿಂದೆ, ಸಮುತ್ಪನ್ನೇ ಸತಿ=ಹುಟ್ಟಲಿಕೆಯಾಗಿ, ಸಃ=ಆ ಶುಶ್ರೂಷುವಾದ ಶಿಷ್ಯನೇ, ಶಿವವತ್=ಶಿವನೋಪಾದಿಯಲ್ಲಿ, ಪೂಜ್ಯ ಏವ=ಪೂಜ್ಯನೇ. ||೮೪||

**ಗ್ರಂಥ||** **ವಿಷಯಾಸಕ್ತಚಿತ್ತೋಽಪಿ ವಿಷಯಾಸಂಗವರ್ಜಿತಃ ।**
**ಶಿವಭಾವಯುತೋ ಯೋಗೀ ಸೇವ್ಯಃ ಶಿವ ಇವಾಪರಃ ॥**

**ಟೀಕು||** ಶಿವಭಾವಯುತಃ=ಶಿವಭಾವದೊಡನೆ ಕೂಡಿರ್ದ್ದ, ಯೋಗೀ=ಶಿವಯೋಗಿಯು, ವಿಷಯಾಸಕ್ತಚಿತ್ತೋಽಪಿ=ವಿಷಯಂಗಳಲ್ಲಿ ಲಂಪಟವುಳ್ಳ ಚಿತ್ತವುಳ್ಳಾತನಾಯಿತ್ತಾದೊಡೆಯು,

ವಿಷಯಾಸಂಗವರ್ಜಿತಃ ಸನ್=ವಿಷಯಂಗಳ ಎಲ್ಲಾ ಕಡೆ ಸಂಪರ್ಕದಿಂದ ಬಿಡಲುಪಟ್ಟಾತನಾಗುತಲು, ಅಪರಃ ಶಿವ ಇವ="ಯೋಗೀ ಭೋಗೀ ವಿಷಭುಗಮೃತಃ" ಯೆಂದು ಅನಾಮಯಸ್ತವದಲ್ಲಿ ಹೇಳಲು ಪಟ್ಟ ಲಕ್ಷಣವುಳ್ಳ ಎರಡನೆಯ ಶಿವನೋಪಾದಿಯಲ್ಲಿ, ಸೇವ್ಯಃ=ಸೇವ್ಯನಾಗಿದ್ದ ಆತನು ॥೮೫॥

**ಸೂತ್ರ॥** ಬಳಿಕ ಸೇವ್ಯಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ವೃತ್ತ॥** **ಮುಕ್ತಃ ಸಂಶಯಪಾಶತಃ ಸ್ಥಿರಮನಾ ಬೋಧೇ ಚ ಮುಕ್ತಿಪ್ರದೇ**
**ಮೋಹಂ ದೇಹಭೃತಾಂ ದೃಶಾ ವಿಘಟಯನ್ ಮೂಲಂ ಮಹಾಸಂಸೃತೇಃ ।**
**ಸತ್ತಾಽನಂದಚಿದಾತ್ಮಕೇ ನಿರುಪಮೇ ಶೈವೇ ಪರಸ್ಮಿನ್ ಪದೇ**
**ಲೀನಾತ್ಮಾ ಕ್ಷಯಿತಪ್ರಪಂಚವಿಭವೋ ಯೋಗೀ ಜನೈಃ ಸೇವ್ಯತೇ ॥**

**ಟೀಕು॥** ಸಂಶಯಪಾಶತಃ=ಸಂದೇಹವೆಂಬ ಪಾಶದದೆಸೆಯಿಂದೆ, ಮುಕ್ತಃ=ಬಿಡಲುಪಟ್ಟ, ಮುಕ್ತಿಪ್ರದೇ=ಪರಾಪರಮೋಕ್ಷವನು ಕೊಡುತ್ತಿರ್ದ್ದ, ಬೋಧೇ ಚ=ಶಿವಜ್ಞಾನ ಬೋಧೆಯಲ್ಲಿಯು, ಸ್ಥಿರಮನಾಃ=ಸ್ಥಿರವಾದ ಚಿತ್ತವುಳ್ಳ, ಮಹಾಸಂಸೃತೇಃ=ಮಹಾಸಂಸಾರಕ್ಕೆ, ಮೂಲಂ=ಮೂಲಕಾರಣ ವಾಗಿರ್ದ್ದ, ದೇಹಭೃತಾಂ ಮೋಹಂ=ದೇಹಿಗಳ ಅಜ್ಞಾನವನು, ದೃಶಾ=ಕೃಪಾದೃಷ್ಟಿಯಿಂದೆ, ವಿಘಟಯನ್=ತೊಲಗಿಸುತ್ತಿರ್ದ್ದ, ಸತ್ತಾಽನಂದಚಿದಾತ್ಮಕೇ=ಸಚ್ಚಿದಾನಂದವೆ ಸ್ವರೂಪವಾಗುಳ್ಳ, ನಿರುಪಮೇ=ಉಪಮಾತೀತವಾಗಿರ್ದ್ದ, ಶೈವೇ ಪದೇ=ಪರಮಶಿವಪದದಲ್ಲಿ, ಲೀನಾತ್ಮಾ=ಅಡಗಿದ ಶಿವಸ್ವರೂಪವನುಳ್ಳ, ಯೋಗೀ=ಶಿವಯೋಗೀಶ್ವರನು, ಕ್ಷಯಿತ ಪ್ರಪಂಚ ವಿಭವಃ ಸನ್=ನಾಶವ ಮಾಡಲುಪಟ್ಟ ಜಗತ್ಪ್ರಪಂಚಿನ ವೈಭವವುಳ್ಳಾತನಾಗುತಲು, ಜನೈಃ=ಜನರುಗಳಿಂದೆ, ಸೇವ್ಯತೇ=ಸೇವಿಸಲುಪಡುತ್ತಿರ್ದ್ದಪನು. ॥೮೬॥

**ತಾತ್ಪರ್ಯ॥** ಪ್ರಸಾದಿಯ ಅಂಗತ್ರಯಕ್ಕೆ ಈ ಲಿಂಗತ್ರಯವನು ಕ್ರಮದಿಂದೆ ಸಂಬಂಧಿಸಿಕೊಂಬುದು.

**ಇತಿ ಸೇವ್ಯಸ್ಥಲಮ್**

**ಇತಿ ಶ್ರೀ ವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ**
**ಪ್ರಸಾದಿಸ್ಥಲಾಶ್ರಿತನವಲಿಂಗಸ್ಥಲಪ್ರಸಂಗೋ ನಾಮ ಸಪ್ತದಶಃ ಪರಿಚ್ಛೇದಃ ಸಮಾಪ್ತಃ**

## ಪ್ರಾಣಲಿಂಗಿಸ್ಥಲವಿಷಯನವವಿಧಲಿಂಗಪ್ರಸಂಗಃ
## ದಶಮಂ ಪ್ರಾಣಲಿಂಗಿಸ್ಥಲಮ್

**ಅಗಸ್ತ್ಯ ಉವಾಚ॥**

**ಸೂತ್ರ॥** ಬಳಿಕ ಅಗಸ್ತ್ಯಮುನಿಯು ಪ್ರಶ್ನೆಯನು ಮಾಡಿ ನುಡಿವುತ್ತಿರ್ದ್ದಪಂ.

**ಗ್ರಂಥ॥** **ಪ್ರಸಾದಿಸ್ಥಲಸಂಬಂಧಾಃ ಸ್ಥಲಭೇದಾಃ ಪ್ರಕೀರ್ತಿತಾಃ ।**
**ಪ್ರಾಣಲಿಂಗಿಸ್ಥಲಾರೂಢಾನ್ ಸ್ಥಲಭೇದಾನ್ ವದಸ್ವ ಮೇ ॥**

**ಟೀಕು॥** ಭೋ ಗಣೇಂದ್ರ=ಎಲೈ ರೇಣುಕಗಣೇಶ್ವರನೆ! ಪ್ರಸಾದಿಸ್ಥಲಸಂಬಂಧಾಃ=ಪ್ರಸಾದಿಸ್ಥಲದ ಸಂಬಂಧವಾಗಿರ್ದ್ದ, ಸ್ಥಲಭೇದಾಃ=ಸ್ಥಲಭೇದಂಗಳು, ಪ್ರಕೀರ್ತಿತಾಃ=ಹೇಳಲುಪಟ್ಟವು. ಪ್ರಾಣ ಲಿಂಗಿಸ್ಥಲಾರೂಢಾನ್=ಪ್ರಾಣಲಿಂಗಿಸ್ಥಲವನು ಎಯ್ದಿರ್ದ್ದ, ಸ್ಥಲಭೇದಾನ್=ಅವಾಂತರಸ್ಥಲಭೇದಂ ಗಳನು, ಮೇ=ಎನಗೋಸುಗ, ವದಸ್ವ=ಉಪದೇಶಿಸಿ ಹೇಳು. ॥೧॥

**ರೇಣುಕ ಉವಾಚ॥**

**ಸೂತ್ರ॥** ಬಳಿಕ ರೇಣುಕಗಣೇಶ್ವರನು ಪ್ರಶ್ನೋತ್ತರವನು ಸೂತ್ರತ್ರಯದಿಂದೆ ನಿರೂಪಿಸುತ್ತಿರ್ದ್ದಪಂ.

**ಗ್ರಂಥ॥** **ಸ್ಥಲಾನಾಂ ನವಕಂ ಪ್ರೋಕ್ತಂ ಪ್ರಾಣಲಿಂಗಿಸ್ಥಲಾಶ್ರಿತಮ್ ।**
**ಆದಾವಾತ್ಮಸ್ಥಲಂ ಪ್ರೋಕ್ತಂ ಅಂತರಾತ್ಮಸ್ಥಲಂ ತತಃ ॥**

**ಪರಮಾತ್ಮಸ್ಥಲಂ ಪಶ್ಚಾನ್ನಿರ್ದೇಹಾಗಮಸಂಜ್ಞಕಮ್ ।**
**ನಿರ್ಭಾವಾಗಮಸಂಜ್ಞಂ ಚ ತತೋ ನಷ್ಟಾಗಮಸ್ಥಲಮ್ ॥**

**ಆದಿಪ್ರಸಾದನಾಮಾಥ ತತೋಽಪ್ಯಂತ್ಯಪ್ರಸಾದಕಮ್ ।**
**ಸೇವ್ಯಪ್ರಸಾದಕಂ ಚಾಥ ಶೃಣು ತೇಷಾಂ ಚ ಲಕ್ಷಣಮ್ ॥**

**ಟೀಕು॥** ಪ್ರಾಣಲಿಂಗಿಸ್ಥಲಾಶ್ರಿತಂ=ಪ್ರಾಣಲಿಂಗಿಸ್ಥಲವನು ಆಶ್ರಯಸಿರ್ದ್ದ, ಸ್ಥಲಾನಾಂ ನವಕಂ= ಒಂಭತ್ತು ಸ್ಥಲಗಳು, ಪ್ರೋಕ್ತಂ=ಹೇಳಲುಪಟ್ಟಿತ್ತು. ಆದೌ=ಮೊದಲಲ್ಲಿ, ಆತ್ಮಸ್ಥಲಂ=ಆತ್ಮಸ್ಥಲವು, ಪ್ರೋಕ್ತಂ=ಹೇಳಲುಪಟ್ಟಿತ್ತು. ತತಃ=ಬಳಿಕ, ಅಂತರಾತ್ಮಸ್ಥಲಂ=ಅಂತರಾತ್ಮಸ್ಥಲವು, ಪಶ್ಚಾತ್=ಬಳಿಕ, ಪರಮಾತ್ಮಸ್ಥಲಂ=ಪರಮಾತ್ಮಸ್ಥಲವು, ತತಃ=ಬಳಿಕ, ನಿರ್ದೇಹಾಗಮಸಂಜ್ಞಕಂ=ನಿರ್ದೇಹಾಗಮನೆಂಬ

ಹೆಸರುಳ್ಳ ಸ್ಥಲವು, ತತಃ=ಬಳಿಕ, ನಿರ್ಭಾವಾಗಮಸಂಜ್ಞಂ ಚ=ನಿರ್ಭಾವಾಗಮವೆಂಬ ಹೆಸರುಳ್ಳ ಸ್ಥಲವು , ತತಃ=ಬಳಿಕ, ನಷ್ಟಾಗಮಸ್ಥಲಂ=ನಷ್ಟಾಗಮಸ್ಥಲವು, ಅಥ=ಅನಂತರದಲ್ಲಿ, ಆದಿಪ್ರಸಾದ ನಾಮ=ಆದಿಪ್ರಸಾದವೆಂಬ ಹೆಸರುಳ್ಳ ಸ್ಥಲವು, ತತಃ=ಬಳಿಕ, ಅಂತ್ಯಪ್ರಸಾದಕಂ ಚ=ಅಂತ್ಯಪ್ರಸಾದಿ ಸ್ಥಲವು, ಅಥ=ಅನಂತರದಲ್ಲಿ, ಸೇವ್ಯಪ್ರಸಾದಕಂ=ಸೇವ್ಯಪ್ರಸಾದಸ್ಥಲವು, ಭೋ ಅಗಸ್ತ್ಯ=ಎಲೈ ಅಗಸ್ತ್ಯ ಮುನಿಯೆ! ತೇಷಾಂ ಚ=ಆ ಅವಾಂತರ ಸ್ಥಲಂಗಳ, ಲಕ್ಷಣಂ= ಲಕ್ಷಣವನು, ಶೃಣು=ಕ್ರಮದಿಂದೆ ಕೇಳು. ||೪||

## ೨೮. ಪ್ರಾಣಲಿಂಗಿಸ್ಥಲೇ ಆತ್ಮಸ್ಥಲಮ್

**ಸೂತ್ರ||** ಬಳಿಕ "ಏಷ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕಃ ।
ಅವಿಜಿಘತ್ಸೋಽಪಿಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ"|| ಯೆಂಬ ಛಾಂದೋಗ್ಯ ಶ್ರುತ್ಯರ್ಥವನು ಪ್ರಕಟಿಸುತ್ತ ಆ ಈ ಸೇವ್ಯನೇ ಆತ್ಮನೆಂದು ಹೇಳಲುಪಡುತ್ತಿರ್ದ್ದಪಂ.

**ಗ್ರಂಥ||** **ಜೀವಭಾವಂ ಪರಿತ್ಯಜ್ಯ ಯದಾ ತತ್ತ್ವಂ ವಿಭಾವ್ಯತೇ ।**
**ಗುರೋಶ್ಚ ಬೋಧಯೋಗೇನ ತದಾತ್ಮಾಯಂ ಪ್ರಕೀರ್ತಿತಃ ॥**

**ಟೀಕು||** ಅಯಂ=ಈ ಸೇವ್ಯನೆ, ಗುರೋಶ್ಚ=ಶ್ರೀಗುರುವಿನ, ಬೋಧಯೋಗೇನ=ಶಿವಜ್ಞಾನ ಬೋಧೆಯ ಸಂಬಂಧದಿಂದೆ, ಜೀವಭಾವಂ=ಜೀವಸ್ವರೂಪವನು, ಪರಿತ್ಯಜ್ಯ=ಬಿಟ್ಟು, ತತ್ತ್ವಂ=ಪರತತ್ತ್ವವನು, ಯದಾ=ಆವಕಾಲದಲ್ಲಿ, ವಿಭಾವ್ಯತೇ=ಭಾವಿಸುತ್ತಿರ್ದ್ದಪನು, ತದಾ=ಆ ಕಾಲದಲ್ಲಿ, ಆತ್ಮಾ=ಆತ್ಮನೆಂದು, ಪ್ರಕೀರ್ತಿತಃ=ಹೇಳಲುಪಟ್ಟನು. ||೫||

**ಸೂತ್ರ||** ಬಳಿಕ "ವಾಲಾಗ್ರಶತಭಾಗೇನ ಶತಧಾ ಕಲ್ಪಿತೇನ ತು ।
ಭಾಗೋ ಆತ್ಮಾ ಸ ವಿಜ್ಞೇಯಃ ಸ ಚಾನಂತ್ಯಾಯ ಕಲ್ಪತೇ"|| ಯೆಂಬ ಶ್ವೇತಾಶ್ವತರಶ್ರುತ್ಯರ್ಥವನು ಪ್ರಕಟಿಸುತ್ತ ಆ ಆತ್ಮಸ್ವರೂಪವನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ವಾಲಾಗ್ರಶತಭಾಗೇನ ಸದೃಶೋ ಹೃದಯಸ್ಥಿತಃ ।**
**ಅಶ್ನನ್ಕರ್ಮಫಲಂ ಸರ್ವಮಾತ್ಮಾ ಸ್ಫುರತಿ ದೀಪವತ್ ॥**

**ಟೀಕು||** ವಾಲಾಗ್ರಶತಭಾಗೇನ=ಬಾಲದ ಜವಿಯ[1] ತುದಿಯ ನೂರುಭಾಗೆಯೊಡನೆ,

---

* ವಾಲಾಗ್ರ ಶತಭಾಗೇನ= ಬಾಲದ ಜವಿಯ ತುದಿಯ ನೂರುಭಾಗೆಯೊಡನೆ - ಇಲ್ಲಿ 'ವಾಲಾಗ್ರ' ಎಂಬುದಕ್ಕೆ 'ಬಾಲದ ಜವಿಯ' ಎಂದಿರುವ ಅರ್ಥವು ಸರಿಯಲ್ಲ. ವಾಲಾಗ್ರ- ಎಂದರೆ ತಲೆಯಕೂದಲ ತುದಿಯೆಂದರ್ಥ. "ಚಿಕುರಃ ಕುಂತಲೋ ವಾಲಃ ಕಚಃ ಕೇಶಃ ಶಿರೋರುಹಃ"-ಇತ್ಯಮರಃ.

ಸದೃಶಃ=ಸಮಾನವಾಗಿ , ಸ್ಥಿತಃ=ಇರುತ್ತಿರ್ದ್ದ, ಸರ್ವಂ ಕರ್ಮಫಲಂ=ಸ್ವಾರ್ಜಿತವಾದ ಸಮಸ್ತಕರ್ಮ ಫಲವನು , ಅಶ್ನನ್=ಭೋಗಿಸುತ್ತಿರ್ದ್ದ, ಆತ್ಮಾ=ಆತ್ಮನು, ಹೃದಯೇ=ಹೃದಯಕಮಲದಲ್ಲಿ, ದೀಪವತ್= ದೀಪಶಿಖಿಯೋಪಾದಿಯಲ್ಲಿ, ಸ್ಫುರತಿ=ಪ್ರಕಾಶಿಸುತ್ತಿರ್ದ್ದಪನು. ||೬||

ಗ್ರಂಥ|| **ಆತ್ಮಾಪಿ ಸರ್ವಭೂತಾನಾಮಂತಃಕರಣಮಾಶ್ರಿತಃ ।**
**ಅಣುಭೂತೋ ಮಲಾಸಂಗಾದಾದಿಕರ್ಮನಿಯಂತ್ರಿತಃ ॥**

**ಟೀಕು||** ಮಲಾಸಂಗಾತ್=ಆಣವಮಲದಿಂದೆ ಎಲ್ಲಾಕಡೆಯಲ್ಲಿ ಮುಸುಕುವದರದೆಸೆಯಿಂದೆ, ಅಣುಭೂತಃ=ಪರಮಾಣುವಿನೋಪಾದಿಯಲ್ಲಿ ಪರಮಸೂಕ್ಷ್ಮವಾಗಿ, ಆದಿಕರ್ಮನಿಯಂತ್ರಿತಃ= ಆದಿಯಾದ ಕರ್ಮಪಾಶದಿಂದೆ ಕಟ್ಟಲುಪಟ್ಟ, ಆತ್ಮಾಪಿ=ಆತ್ಮನಾಯಿತ್ತಾದೊಡೆ, ಸರ್ವಭೂತಾನಾಂ=ಸಮಸ್ತ ಪ್ರಾಣಿಗಳ, ಅಂತಃಕರಣಂ=ಮೂಲಾಹಂಕಾರರೂಪವಾದ ಅಂತಃಕರಣ ವನು, ಆಶ್ರಿತಃ=ಆಶ್ರಯಿಸಿರ್ದ್ದ ಆತನು. ||೭||

ಗ್ರಂಥ|| **ಜಪಾಯೋಗಾದ್ಯಥಾ ರಾಗಃ ಸ್ಫಟಿಕಸ್ಯ ಮಣೇರ್ಭವೇತ್ ।**
**ತಥಾಽಹಂಕಾರಸಂಬಂಧಾದಾತ್ಮನೋ ದೇಹಮಾನಿತಾ ॥**

**ಟೀಕು||** ಸ್ಫಟಿಕಸ್ಯ ಮಣೇಃ=ಸ್ಫಟಿಕರತ್ನಕ್ಕೆ, ಜಪಾಯೋಗಾತ್=ಜಪಾಕುಸುಮದಸಂಬಂಧದ ದೆಸೆಯಿಂದೆ, ಯಥಾ=ಹೇಗೆ, ರಾಗಃ=ಕೆಂಪು , ಭವೇತ್=ಅಹುದು, ತಥಾ=ಹಾಗೆಯೇ, ಆತ್ಮನಃ=ಶುದ್ಧ ಸ್ಫಟಿಕದೋಪಾದಿಯಲ್ಲಿ ನಿರ್ಮಲಿನನಾದ ಆತ್ಮನಿಗೆ, ಅಹಂಕಾರಸಂಬಂಧಾತ್=ಮೂಲಾಹಂಕಾರದ ಸಂಬಂಧದದೆಸೆಯಿಂದೆ, ದೇಹಮಾನಿತಾ=ದೇಹಾಭಿಮಾನವುಳ್ಳತನವು, ಭವೇತ್=ಅಹುದು. ||೮||

ಗ್ರಂಥ|| **ಅಶರೀರೋಽಪಿ ಸರ್ವತ್ರ ವ್ಯಾಪಕೋಽಪಿ ನಿರಂಜನಃ ।**
**ಆತ್ಮಾ ಮಾಯಾಶರೀರಸ್ಥೋ ಪರಿಭ್ರಮತಿ ಸಂಸೃತೌ ॥**

**ಟೀಕು||** ನಿರಂಜನಃ=ಮಲರಹಿತನಾದ, ಆತ್ಮಾ=ಆತ್ಮನು, ಸರ್ವತ್ರ=ಎಲ್ಲಾಕಡೆಯಲ್ಲಿ, ವ್ಯಾಪಕೋಽಪಿ=ವ್ಯಾಪಕನಾಯಿತ್ತಾದೊಡೆಯು, ಅಶರೀರೋಽಪಿ=ದೇಹರಹಿತನಾಯಿತ್ತಾದೊಡೆಯು, ಮಾಯಾಶರೀರಸ್ಥಃ ಸನ್=ಕಲಾದಿ ಪೃಥಿವ್ಯಂತವಾದ ತ್ರಿಂಶತ್ತತ್ತ್ವಾತ್ಮಕವಾದ ಅಧೋಮಾಯಯಾ ಶರೀರದಲ್ಲಿ ಇರುತ್ತಿರ್ದ್ದಾತನಾಗುತಲು, ಸಂಸೃತೌ=ಸಂಸಾರದಲ್ಲಿ, ಪರಿಭ್ರಮತಿ=ತಿರುಗುತ್ತಿರ್ದ್ದಪನು.

**ತಾತ್ಪರ್ಯ||** ಶಕ್ತಿ ಸದಾಶಿವೇಶ್ವರ ವಿದ್ಯಾರೂಪವಾಗಿ ಅಪರಮುಕ್ತಿಕ್ಷೇತ್ರವಾದ ಶುದ್ಧಮಾಯಾ ಶರೀರಸ್ಥನಾದಾತ್ಮನಿಗೆ ಸಂಸಾರವಿಲ್ಲವೆಂಬುದರ್ಥ. ||೯||

**ಗ್ರಂಥ||** **ಆತ್ಮಸ್ವರೂಪವಿಜ್ಞಾನಂ ದೇಹೇಂದ್ರಿಯವಿಭಾಗತಃ ।**
**ಅಖಂಡಬ್ರಹ್ಮರೂಪೇಣ ತದಾತ್ಮಪ್ರಾಪ್ತಿರುಚ್ಯತೇ ॥**

**ಟೀಕು||** ದೇಹೇಂದ್ರಿಯವಿಭಾಗತಃ=ಅವಸ್ಥಾತ್ರಯಯುಕ್ತವಾದ ಶರೀರತ್ರಯದ ಚಿತ್ಕ್ರಿಯಾಶಕ್ತಿ ರೂಪವಾದ ಜ್ಞಾನೇಂದ್ರಿಯ ಕರ್ಮೇಂದ್ರಿಯಂಗಳ ಇಚ್ಛಾಶಕ್ತಿಯರೂಪವಾದ ಅಂತಃಕರಣಗಳ ವಿಭಾಗೆಯದೆಸೆಯಿಂದೆಯು, ಅಖಂಡಬ್ರಹ್ಮರೂಪೇಣ=ಪರಿಪೂರ್ಣವಾದ ಪರಬ್ರಹ್ಮಸ್ವರೂಪಿನಿಂದೆ, ಆತ್ಮಸ್ವರೂಪವಿಜ್ಞಾನಂ=ಆತ್ಮಸ್ವರೂಪವಿಜ್ಞಾನವು, ಯದಾ=ಆವಕಾಲದಲ್ಲಿ, ಭವೇತ್=ಅಹುದು; ತದಾ=ಆ ಕಾಲದಲ್ಲಿ, ಆತ್ಮಪ್ರಾಪ್ತಿಃ=ಆತ್ಮಸ್ವರೂಪವನು ಎಯ್ದುವತನವು, ಉಚ್ಯತೇ=ಹೇಳಲು ಪಡುತ್ತಿರ್ದಪುದು.

**ತಾತ್ಪರ್ಯ||** "ಆತ್ಮಲಾಭಾನ್ನ ಪರಂ ವಿದ್ಯತೇ", "ನೇತಿ ನೇತ್ಯಾತ್ಮಾ ಸಂಗೃಹ್ಯಃ", "ಅಯಮಾತ್ಮಾ ಬ್ರಹ್ಮ" ಯೆಂಬ ಶ್ರುತಿಗಳಿಂದವು "ನಾತ್ಮನಃ ಪರಾದೇವತಾ" ಯೆಂಬ ಶಿವಾಗಮದಿಂದಲು, ದೇಶಿಕೋಪದೇಶಸ್ವಾನುಭವಂಗಳಿಂದೆಯು ದೇಹೇಂದ್ರಿಯಾದಿಗಳನು, ನೇತಿಗಳೆದ ಆತ್ಮಸ್ವರೂಪವನು ತಿಳಿವುದೆಂಬುದರ್ಥ. ||೧೦||

**ಸೂತ್ರ||** ಬಳಿಕ ಆ ಆತ್ಮನು ದೇಹಿಯಾದ ಕಾರಣವನು ಹೇಳುತ್ತಿರ್ದಪಂ.

**ಗ್ರಂಥ||** **ನ ಚಾಸ್ತಿ ದೇಹಸಂಬಂಧೋ ನಿರ್ದೇಹಸ್ಯ ಸ್ವಭಾವತಃ ।**
**ಅಜ್ಞಾನಕರ್ಮಯೋಗೇನ ದೇಹೀ ಭವತಿ ಭುಕ್ತಯೇ ॥**

**ಟೀಕು||** ನಿರ್ದೇಹಸ್ಯ=ಶರೀರರಹಿತನಾದ ಆತ್ಮನಿಗೆ, ದೇಹಸಂಬಂಧಃ=ದೇಹಸಂಬಂಧವು, ಸ್ವಭಾವತಃ=ಸ್ವಭಾವದದೆಸೆಯಿಂದೆ. ನಾಸ್ತಿ=ಇಲ್ಲ. ತಥಾಪಿ ಚ=ಹಾಗಾಯಿತ್ತಾದೊಡೆಯು, ಸಃ=ಆ ಆತ್ಮನು, ಅಜ್ಞಾನಕರ್ಮಯೋಗೇನ=ಅನಾದಿಯಾದ ಮಲಕರ್ಮಪಾಶಸಂಬಂಧದಿಂದೆ , ಭುಕ್ತಯೇ= ಭೋಗಕ್ಕೋಸುಗ, ದೇಹೀ ಭವತಿ=ದೇಹವುಳ್ಳಾತನಾಗುತ್ತಿರ್ದಪನು. ||೧೧||

**ಸೂತ್ರ||** ಬಳಿಕ ಉಪಾಧಿಯಾದ ದೇಹಕ್ಕಲ್ಲದೆ ಆ ಆತ್ಮನಿಗೆ ನಾಮಧೇಯವಿಲ್ಲವೆಂದು ಹೇಳುತ್ತಿರ್ದಪಂ.

**ಗ್ರಂಥ||** **ನಾಸೌ ದೇವೋ ನ ಗಂಧರ್ವೋ ನ ಯಕ್ಷೋ ನೈವ ರಾಕ್ಷಸಃ ।**
**ನ ಮನುಷ್ಯೋ ನ ತಿರ್ಯಕ್ ಚ ನ ಚ ಸ್ಥಾವರವಿಗ್ರಹಃ ।**
**ತತ್ತಚ್ಛರೀರಯೋಗೇನ ತತ್ತನ್ನಾಮ್ನಾ ವಿರಾಜತೇ ॥**

**ಟೀಕು||** ಅಸೌ=ಈ ಆತ್ಮನು, ನ ದೇವಃ=ದೇವನಲ್ಲ; ನ ಗಂಧರ್ವಃ=ಗಂಧರ್ವನಲ್ಲ; ನ ಚ ಯಕ್ಷಃ=ಯಕ್ಷನಲ್ಲ; ನ ರಾಕ್ಷಸಃ=ರಾಕ್ಷಸನಲ್ಲ; ನ ಮನುಷ್ಯಃ=ಮನುಷ್ಯನಲ್ಲ; ನ ತಿರ್ಯಕ್=ತಿರ್ಯಗ್ಜಾತಿಯಲ್ಲ; ನ ಸ್ಥಾವರವಿಗ್ರಹಃ=ತರುಗುಲ್ಮಾದಿಸ್ಥಾವರ ಶರೀರವುಳ್ಳಾತನು ಅಲ್ಲ; ಕಿಂ ಚ=ಮತ್ತೇನಯಾಯೆಂದೊಡೆ, ತತ್ತಚ್ಛರೀರಯೋಗೇನ = ಆಯಾ ಶರೀರಸಂಬಂಧದಿಂದೆ ತತ್ತನ್ನಾಮ್ನಾ=ಆಯಾ ಶರೀರನಾಮಧೇಯದಿಂದವೆ. ವಿರಾಜತೇ=ಒಪ್ಪುತ್ತಿರ್ದಪನು. ||೧೨||

**ಸೂತ್ರ||** ಬಳಿಕ "ಸ್ವಸ್ವಕೃತ ದುಷ್ಕರ್ಮಣಾ ಪರಮೇಶ್ವರಪ್ರೇರಣಯಾ ।
ಬದ್ಧಾಃ ಸಂಸಾರಿಣೋ ಜೀವಾಃ"|| ಯೆಂಬ ವೃದ್ಧ ಜಾಬಾಲ ಶ್ರುತ್ಯರ್ಥವನು,
"ದೇವಾಃ ಷೋಡಶ ನವ ಲಕ್ಷಾಣಿ ಮಾನುಷಾಃ
ದಶಭಿರ್ದಶಭಿಸ್ತದ್ವತ್ ಜಲಜಾಃ ವಿಹಗಾ ಮೃಗಾಃ
ಸರೀಸೃಸ್ತುಲಕ್ಷಾಣಿ ಏಕಾದಶ ಚರೇತರಾಃ।
ಅಷ್ಟೌ ಚ ದಶಲಕ್ಷಾಣಿ ಸಪ್ತಜನ್ಮಾನ್ಯಮೂನಿ ವೈ"|| ಯೆಂಬ ಸ್ಕಾಂದಪುರಾಣಾರ್ಥವನು ಪ್ರಕಟಿಸುತ್ತ ದೃಗ್ಯುಗೈಕಾವಲೋಕನದೋಪಾದಿಯಲ್ಲಿ ದ್ವೈತಾದ್ವೈತಕ್ಕೆ ಸಮಾನವಾದ ಆ ಆತ್ಮನೆ ಜೀವೋಪಾಧಿಯಿಂದೆ ಜೀವಾತ್ಮನಾದನೆಂದು ಪಂಚಸೂತ್ರಂಗಳಿಂದೆ ಪ್ರತಿಪಾದಿಸುತ್ತಿರ್ದಪಂ.

**ಗ್ರಂಥ||** **ನಾನಾಕರ್ಮವಿಪಾಕಾಶ್ಚ ನಾನಾಯೋನಿಸಮಾಶ್ರಿತಾಃ ।**
**ನಾನಾಯೋಗಸಮಾಪನ್ನಾ ನಾನಾಬುದ್ಧಿವಿಚೇಷ್ಟಿತಾಃ ||**

**ನಾನಾಮಾರ್ಗಸಮಾರೂಢಾ ನಾನಾಸಂಕಲ್ಪಕಾರಿಣಃ ।**
**ಅಸ್ವತಂತ್ರಾಶ್ಚ ಕಿಂಚಿದ್‌ಜ್ಞಾಃ ಕಿಂಚಿತ್ಕರ್ತೃತ್ವಹೇತವಃ ||**

**ಲೀಲಾಭಾಜನತಾಂ ಪ್ರಾಪ್ತಾಃ ಶಿವಸ್ಯ ಪರಮಾತ್ಮನಃ ।**

**ಟೀಕು||** ನಾನಾಕರ್ಮವಿಪಾಕಾಶ್ಚ=ಹಲವು ಪ್ರಕಾರವಾದ ಕರ್ಮಂಗಳ ಪರಿಪಾಕದದೆಸೆಯಿಂದೆ, ನಾನಾಯೋನಿಸಮಾಶ್ರಿತಾಃ=ಹಲವು ಪ್ರಕಾರವಾದ ಯೋನಿಗಳನು ಆಶ್ರಯಿಸಿರ್ದ, ನಾನಾಯೋಗಸಮಾಪನ್ನಾಃ=ಬಹುವಿಧವಾದ ಯೋಗಂಗಳನು ಎಯ್ದಿ, ನಾನಾಬುದ್ಧಿವಿಚೇಷ್ಟಿತಾಃ=ಹಲವು ಪ್ರಕಾರವಾದ ಬುದ್ಧಿಗಳಿಂದೆ ವ್ಯಾಪರಿಸಿ, ನಾನಾಮಾರ್ಗಸಮಾರೂಢಾಃ=ಬಹುವಿಧವಾದ ಷಡ್ದರ್ಶನಾದಿ ಮಾರ್ಗಂಗಳನುಯೇರಿ, ನಾನಾಸಂಕಲ್ಪಕಾರಿಣಃ=ಅನೇಕಸಂಕಲ್ಪಂಗಳನು ಮಾಡುತ್ತಿರ್ದ, ಕಿಂಚಿದ್‌ಜ್ಞಾಃ=ಕಿಂಜಿದ್‌ಜ್ಞರಾಗಿ, ಕಿಂಚಿತ್ಕರ್ತೃತ್ವಹೇತವಃ=ಕಿಂಚಿತ್ ಕರ್ತೃತ್ವಕ್ಕೆ ಕಾರಣವಾಗಿರ್ದ, ಅಸ್ವತಂತ್ರಾಃಶ್ಚ=ಸ್ವತಂತ್ರರಲ್ಲದೆಯಿರ್ದ ಜೀವಾತ್ಮರು, ಪರಮಾತ್ಮನಃ=ಪರಬ್ರಹ್ಮಸ್ವರೂಪವಾದ, ಶಿವಸ್ಯ=ಪರಮಶಿವನ, ಲೀಲಾಭಾಜನತಾಂ=ಲೀಲೆಗೆ ಆಶ್ರಯವಹತನವನು, ಪ್ರಾಪ್ತಾಃ=ಎಯ್ದಿರ್ದ ಅವರುಗಳು. ||೧೫||

ಗ್ರಂಥ॥ **ಚೋದಿತಾಃ ಪರಮೇಶೇನ ಸ್ವಸ್ವಕರ್ಮಾನುರೂಪತಃ ।**
**ಸ್ವರ್ಗಂ ವಾ ನರಕಂ ವಾಽಪಿ ಪ್ರಾಣಿನೋ ಯಾಂತಿ ಕರ್ಮಿಣಃ ॥**

**ಟೀಕು॥** ಕರ್ಮಿಣಃ=ಕರ್ಮಿಗಳಾದ, ಪ್ರಾಣಿನಃ=ಜೀವಾತ್ಮರು, ಸ್ವಸ್ವಕರ್ಮಾನುರೂಪತಃ=ತಮ್ಮ ತಮ್ಮ ಕರ್ಮಕ್ಕೆ ಅನುಕೂಲವಾಗಿ, ಪರಮೇಶೇನ=ಪರಮೇಶ್ವರನಿಂದೆ, ಚೋದಿತಾಃ ಸಂತಃ= ಪ್ರೇರಿಸಲುಪಟ್ಟವರಾಗುತಲು, ಸ್ವರ್ಗಂ ವಾ=ಸ್ವರ್ಗವನಾಯಿತ್ತಾದೊಡೆಯು, ನರಕಂ ವಾಽಪಿ= ನರಕವನಾಯಿತ್ತಾದೊಡೆಯು, ಯಾಂತಿ=ಎಯ್ದುತ್ತಿರ್ದಪರು. ॥೧೬॥

ಗ್ರಂಥ॥ **ಪುನಃ ಕರ್ಮಾವಶೇಷೇಣ ಜಾಯಂತೇ ಗರ್ಭಕೋಟರಾತ್ ।**
**ಜಾತಾ ಮೃತಾಃ ಪುನರ್ಜಾತಾಃ ಪುನರ್ಮರಣಭಾಜಿನಃ ।**
**ಭ್ರಮಂತಿ ಘೋರಸಂಸಾರೇ ವಿಶ್ರಾಂತಿಕಥಯಾ ವಿನಾ ॥**

**ಟೀಕು॥** ಪುನಃ=ಮರಳಿ, ಕರ್ಮಾವಶೇಷೇಣ=ಕರ್ಮದ ಉಳುಮೆಯಿಂದೆ, ಗರ್ಭಕೋಟರಾತ್=ಗರ್ಭಕೋಟರದದೆಸೆಯಿಂದೆ, ಜಾಯಂತೇ=ಹುಟ್ಟುತ್ತಿರ್ದಪರು . ಜಾತಾಃ=ಹುಟ್ಟಿ, ಮೃತಾಃ= ಸತ್ತು, ಪುನರ್ಜಾತಾಃ=ಮರಳಿಹುಟ್ಟಿ, ಪುನರ್ಮರಣಭಾಜಿನಃ=ಮರಳಿ ಮರಣವನು ಭಜಿಸುತ್ತಿರ್ದ ಜೀವಾತ್ಮರು, ವಿಶ್ರಾಂತಿಕಥಯಾ ವಿನಾ=ಸ್ವಸ್ವರೂಪಜ್ಞಾನರೂಪವಾದ ವಿಶ್ರಾಂತಿಯ ಪ್ರಸಂಗ ಹೊರತಾಗಿ, ಘೋರಸಂಸಾರೇ=ಭಯಂಕರವಾದ ಸಂಸಾರಚಕ್ರದಲ್ಲಿ, ಭ್ರಮಂತಿ=ತಿರುಗುತ್ತಿರ್ದಪರು.

**ತಾತ್ಪರ್ಯ॥** ಪಿಂಡಸ್ಥಲದಲ್ಲಿ ಪ್ರತಿಪಾದಿಸಲುಪಟ್ಟ ಈ ಜೀವಭಾವವನು ಬಿಟ್ಟು ಕೇವಲಾತ್ಮಸ್ವರೂಪನೆ ಸೇವ್ಯನೆಂಬುದರ್ಥ. ॥೧೭॥

**ಸೂತ್ರ॥** ಬಳಿಕ ಆ ಈ ಅರ್ಥವನೆ ವಿಶೇಷಿಸಿ ಮುಂದೆ ಹೇಳುವ ಅಂತರಾತ್ಮಸ್ಥಲ ಪರಮಾತ್ಮ ಸ್ಥಲಂಗಳ ಕೂರ್ತು ಜೀವಾತ್ಮಸ್ಥಲವೆಂಬ ಸಂಜ್ಞೆಯುಳ್ಳ ಈ ಆತ್ಮಸ್ಥಲವನು ಮುಗಿಯಿಸುತ್ತಿರ್ದಪಂ.

ಗ್ರಂಥ॥ **ಜೀವತ್ವಂ ದುಃಖಸರ್ವಸ್ವಂ ತದಿದಂ ಮಲಕಲ್ಪಿತಮ್ ।**
**ನಿರಸ್ಯತೇ ಗುರೋರ್ಬೋಧಾತ್ ಜ್ಞಾನಶಕ್ತಿಃ ಪ್ರಕಾಶತೇ ॥**

**ಟೀಕು॥** ಮಲಕಲ್ಪಿತಂ=ಅಜ್ಞಾನದಿಂದೆ ಕಲ್ಪಿಸಲುಪಟ್ಟ, ದುಃಖಸರ್ವಸ್ವಂ=ಸಂಸಾರ ದುಃಖಕ್ಕೆ ಸರ್ವಸ್ವವಾಗಿರ್ದ, ತದಿದಂ ಜೀವತ್ವಂ=ಆ ಈ ಜೀವಭಾವವು, ಗುರೋಃ=ಶ್ರೀಗುರುಪಿನ, ಬೋಧಾತ್=ಶಿವಜ್ಞಾನಬೋಧೆಯದೆಸೆಯಿಂದೆ, ನಿರಸ್ಯತೇ=ತೊಲಗಿಸಲುಪಡುತ್ತಿರ್ದಪುದು ಜ್ಞಾನಶಕ್ತಿಃ=ಸ್ವಸ್ವರೂಪಜ್ಞಾನ ಸಾಮರ್ಥ್ಯವು , ಪ್ರಕಾಶತೇ=ಪ್ರಕಾಶಿಸಲುಪಡುತ್ತಿರ್ದಪುದು. ॥೧೮॥

**ಇತ್ಯಾತ್ಮಸ್ಥಲಮ್**

## ೨೯. ಪ್ರಾಣಲಿಂಗಿಸ್ಥಲೇ ಅಂತರಾತ್ಮಸ್ಥಲಮ್

**ಸೂತ್ರ||** ಬಳಿಕ "ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುಃ
ನ ಲಿಪ್ಯತೇ ಚಾಕ್ಷುಷೈರ್ಬಾಹ್ಯದೋಷೈಃ ।
ಏಕಸ್ತಥಾ ಸರ್ವಭೂತಾಂತರಾತ್ಮಾ
ನ ಲಿಪ್ಯತೇ ಲೋಕದುಃಖೇನ ಬಾಹ್ಯಃ"|| ಯೆಂಬ ಕಠವಲ್ಲೀಶ್ರುತ್ಯರ್ಥವನು ಪ್ರಕಟಿಸುತ್ತ ಜೀವಭಾವವನು ನಿರಾಕರಿಸಿದ ಆ ಆತ್ಮನಿಗೆ ಅಂತರಾತ್ಮತ್ವವಹುದೆಂದು ಹೇಳುತ್ತಿರ್ದಪಂ.

**ಗ್ರಂಥ||** **ಯದಾ ನಿರಸ್ತಂ ಜೀವತ್ವಂ ಭವೇದ್ಗುರ್ವನುಬೋಧತಃ ।**
**ತದಾಂತರಾತ್ಮಭಾವೋಽಪಿ ನಿರಸ್ತಸ್ಯ ಭವೇದ್ಧ್ರುವಮ್ ॥**

**ಟೀಕು||** ಗುರ್ವನುಬೋಧತಃ=ಗುರೂಪದೇಶದದೆಸೆಯಿಂದೆ, ಜೀವತ್ವಂ=ಜೀವಭಾವವು, ಯದಾ=ಆವಕಾಲದಲ್ಲಿ, ನಿರಸ್ತಂ=ತೊಲಗಿಸಲುಪಟ್ಟ ಅದು, ಭವೇತ್=ಅಹುದು. ತದಾ=ಆ ಕಾಲದಲ್ಲಿ, ನಿರಸ್ತಸ್ಯ=ನಿರಾಕರಿಸಲುಪಟ್ಟ ಜೀವತ್ವವುಳ್ಳ ಆ ಆತ್ಮನಿಗೆ, ಅಂತರಾತ್ಮಭಾವಃ ಅಪಿ=ಅಂತರಾತ್ಮಭಾವವು, ಭವೇತ್=ಅಹುದು. ಧ್ರುವಂ=ನಿಶ್ಚಯವು. ||೧೯||

**ಸೂತ್ರ||** ಬಳಿಕ ಆ ಅಂತರಾತ್ಮಸ್ವರೂಪವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ದೇಹಸ್ಥಿತೋಽಪ್ಯಯಂ ಜೀವಃ ದೇಹಸಂಗವಿವರ್ಜಿತಃ ।**
**ಬೋಧಾತ್ಪರಾತ್ಮಭಾವಿತ್ವಾದಂತರಾತ್ಮೇತಿ ಕೀರ್ತ್ಯತೇ ॥**

**ಟೀಕು||** ಅಯಂ ಜೀವಃ=ಈ ಜೀವಾತ್ಮನು, ದೇಹಸ್ಥಿತೋಽಪಿ=ದೇಹದಲ್ಲಿಯಿರುತ್ತಿರ್ದಾತನಾಯಿತ್ತಾದೊಡೆಯು, ದೇಹಸಂಗವಿವರ್ಜಿತಃ=ದೇಹದ ಸಂಗದಿಂದೆ ಬಿಡಲುಪಟ್ಟಾತನಾಗಿ, ಬೋಧಾತ್ ಪರಾತ್ಮಭಾವಿತ್ವಾತ್=ಸ್ವಸ್ವರೂಪವಾದ ಪರಮಾತ್ಮಭಾವವುಳ್ಳಾತನಾದ ಕಾರಣವಾಗಿ ಅಂತರಾತ್ಮೇತಿ= ಅಂತರಾತ್ಮನೆಂದು, ಕೀರ್ತ್ಯತೇ=ಹೇಳಲುಪಡುತ್ತಿರ್ದಪನು. ||೨೦||

**ಗ್ರಂಥ||** **ಆತ್ಮಾಂತರಾಲವರ್ತಿತ್ವಾಜ್ಜೀವಾತ್ಮಪರಮಾತ್ಮನೋಃ ।**
**ಯೋಗಾದುಭಯಧರ್ಮಾಣಾಮಂತರಾತ್ಮೇತಿ ಕೀರ್ತಿತಃ ॥**

**ಟೀಕು||** ಅಯಮಾತ್ಮಾ=ಈ ಆತ್ಮನು, ಜೀವಾತ್ಮಪರಮಾತ್ಮನೋಃ=ಜೀವಾತ್ಮಪರಮಾತ್ಮರ,

ಅಂತರಾಲವರ್ತಿತ್ವಾತ್=ಮಧ್ಯದಲ್ಲಿ ವರ್ತಿಸುವಾತನಾದ ಕಾರಣವಾಗಿಯು, ಉಭಯಧರ್ಮಾಣಾಂ= ಜೀವಪರಮರಿಬ್ಬರ ಧರ್ಮಂಗಳ, ಯೋಗಾತ್=ಸಂಬಂಧದದೆಸೆಯಿಂದೆ, ಅಂತರಾತ್ಮೇತಿ=ಅಂತರಾತ್ಮ ನೆಂದು, ಕೀರ್ತಿತಃ=ಹೇಳಲುಪಟ್ಟಿತ್ತು. ॥೨೧॥

ಗ್ರಂಥ॥ **ಅಹಂಕಾರಸ್ಯ ಸಂಬಂಧಾನ್ಮನುಷ್ಯತ್ವಾದಿವಿಭ್ರಮಃ ।**
**ನ ಸ್ವಭಾವ ಇತಿ ಜ್ಞಾನಾದಂತರಾತ್ಮೇತಿ ಕಥ್ಯತೇ ॥**

**ಟೀಕು॥** ಅಹಂಕಾರಸ್ಯ ಸಂಬಂಧಾತ್=ಮೂಲಾಹಂಕಾರದ ಸಂಬಂಧದದೆಸೆಯಿಂದೆ, ಮನುಷ್ಯತ್ವಾದಿ ವಿಭ್ರಮಃ=ಮನುಷ್ಯತ್ವ ಮೊದಲಾಗುಳ್ಳ ಜಾತಿಭ್ರಾಂತಿಯು, ಭವೇತ್=ಅಹುದು. ನ ಸ್ವಭಾವ ಇತಿ= ಜೀವತ್ವವು ಸ್ವಭಾವವಲ್ಲವೆಂದು, ಜ್ಞಾನಾತ್=ತಿಳಿವುದರದೆಸೆಯಿಂದೆ, ಅಂತರಾತ್ಮೇತಿ= ಅಂತರಾತ್ಮನೆಂದು, ಕಥ್ಯತೇ=ಹೇಳಲುಪಡುತ್ತಿರ್ದ್ದಪನು. ॥೨೨॥

**ಸೂತ್ರ॥** ಬಳಿಕ ಆ ಅಂತರಾತ್ಮನು ದೇಹದದೆಸೆಯಿಂದೆ ಭಿನ್ನನೆಂದು ದೃಷ್ಟಾಂತಪೂರ್ವಕವಾಗಿ ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಯಥಾ ಪದ್ಮಪಲಾಶಸ್ಯ ನ ಸಂಗೋ ವಾರಿಣಾ ಭವೇತ್ ।**
**ತಥಾ ದೇಹಜುಷೋऽಪ್ಯಸ್ಯ ನ ಶರೀರೇಣ ಸಂಗತಿಃ ॥**

**ಟೀಕು॥** ಪದ್ಮಪಲಾಶಸ್ಯ=ತಾವರೆಯೆಲೆಗೆ, ವಾರಿಣಾ=ಉದಕದೊಡನೆ, ಸಂಗಃ=ಸಂಪರ್ಕವು, ಯಥಾ=ಹೇಗೆ, ನ ಭವೇತ್=ಆಗದು. ತಥಾ=ಹಾಗೆಯೇ, ದೇಹಜುಷಃ=ದೇಹವನು ಸೇವಿಸುತ್ತಿರ್ದ್ದ, ಅಸ್ಯಾಪಿ=ಈ ಅಂತರಾತ್ಮನಿಗಾಯಿತ್ತಾದೊಡೆ, ಶರೀರೇಣ=ದೇಹದೊಡನೆ, ನ ಸಂಗತಿಃ=ಕೂಡವಿಲ್ಲಾ. ॥೨೩॥

ಗ್ರಂಥ॥ **ನೀಡಸ್ಥಿತೋ ಯಥಾ ಪಕ್ಷೀ ನೀಡಾದ್ಭಿನ್ನಃ ಪ್ರದೃಶ್ಯತೇ ।**
**ದೇಹಸ್ಥಿತಸ್ತಥಾऽऽತ್ಮಾಯಂ ದೇಹಾದನ್ಯಃ ಪ್ರಕಾಶ್ಯತೇ ॥**

**ಟೀಕು॥** ನೀಡಸ್ಥಿತಃ=ಗೂಡಿನೊಳಗಿರುತ್ತಿರ್ದ್ದ, ಪಕ್ಷೀ=ಪಕ್ಷಿಯು, ಯಥಾ=ಹೇಗೆ, ನೀಡಾತ್ ಭಿನ್ನಃ=ಗೂಡಿನದೆಸೆಯಿಂದೆ ಭಿನ್ನವಾಗಿ, ಪ್ರದೃಶ್ಯತೇ=ಕಾಣಲುಪಡುತ್ತಿರ್ದ್ದಪುದು. ತಥಾ=ಹಾಗೆಯೆ ಅಯಮಾತ್ಮಾ=ಈ ಅಂತರಾತ್ಮನು, ದೇಹಸ್ಥಿತೋऽಪಿ=ದೇಹದಲ್ಲಿಯಿರುತ್ತಿರ್ದ್ದಾತನಾಯಿತ್ತಾದೊಡೆಯು, ದೇಹಾದನ್ಯಃ=ದೇಹದದೆಸೆಯಿಂದೆ ಭಿನ್ನವಾಗಿ, ಪ್ರಕಾಶ್ಯತೇ=ಪ್ರಕಾಶಿಸುತ್ತಿರ್ದ್ದಪನು. ॥೨೪॥

ಗ್ರಂಥ॥ **ಆಚ್ಛಾದ್ಯತೇ ಯಥಾ ಚಂದ್ರೋ ಮೇಘೈರಾಸಂಗವರ್ಜಿತೈಃ ।
ತಥಾऽऽತ್ಮಾ ದೇಹಸಂಘಾತೈರಸಂಗಪರಿವೇಷ್ಟಿತಃ ॥**

**ಟೀಕು॥** ಚಂದ್ರಃ=ಚಂದ್ರನು, ಆಸಂಗವರ್ಜಿತೈಃ=ಎಲ್ಲಾಕಡೆಯಲ್ಲಿ ಸಂಪರ್ಕದಿಂದಬಿಡಲುಪಟ್ಟ, ಮೇಘೈಃ=ಮೇಘಂಗಳಿಂದೆ, ಯಥಾ=ಹೇಗೆ, ಆಚ್ಛಾದ್ಯತೇ=ಮುಸುಕಲುಪಡುತ್ತಿರ್ದ್ದಪನು. ತಥಾ=ಹಾಗೆಯೇ, ಆತ್ಮಾ=ಅಂತರಾತ್ಮನು, ದೇಹಸಂಘಾತೈಃ=ಶರೀರಸಮೂಹಂಗಳಿಂದೆ, ಅಸಂಗಃ=ಸಂಗವಿಲ್ಲದೆ, ಪರಿವೇಷ್ಟಿತಃ=ಬಳಸಲುಪಟ್ಟ ಆತನು. ॥೨೫॥

**ಸೂತ್ರ॥** ಬಳಿಕ ಆ ಅಂತರಾತ್ಮನಿಗೆ ಶಿವದರ್ಶನವನು ಹೇಳುತ್ತಿರ್ದ್ದಪಂ.

ಗ್ರಂಥ॥ **ನಿರ್ಮಮೋ ನಿರಹಂಕಾರೀ ನಿರಸ್ತೋಪಾಧಿವಿಪ್ಲವಃ ।
ದೇಹಸ್ಥೋಽಪಿ ಸದಾ ಹ್ಯಾತ್ಮಾ ಶಿವಂ ಪಶ್ಯತಿ ಯೋಗತಃ ॥**

**ಟೀಕು॥** ನಿರ್ಮಮಃ=ತೊಲಗಲುಪಟ್ಟ ಮಮಾರ್ಥವುಳ್ಳ, ನಿರಹಂಕಾರೀ=ತೊಲಗಲುಪಟ್ಟ ಅಹಂಕಾರವುಳ್ಳ, ನಿರಸ್ತೋಪಾಧಿ ವಿಪ್ಲವಃ=ನಿರಾಕರಿಸಲುಪಟ್ಟ ದೇಹಾದ್ಯುಪಾಧಿಯ ಬಾಧೆಯುಳ್ಳ, ಆತ್ಮಾ=ಅಂತರಾತ್ಮನು, ದೇಹಸ್ಥೋಽಪಿ=ದೇಹದಲ್ಲಿಯಿರುತ್ತಿರ್ದ್ದಾತನಾಯಿತ್ತಾದೊಡೆಯು, ಶಿವಂ=ಶಿವನನು, ಸದಾ=ಎಲ್ಲಾಕಾಲದಲ್ಲಿಯು, ಯೋಗತಃ=ಯೋಗಮಾರ್ಗದದೆಸೆಯಿಂದೆ, ಪಶ್ಯತಿ=ಕಾಣುತ್ತಿರ್ದ್ದಪನು. ಹಿ=ಪ್ರಸಿದ್ಧವು. ॥೨೬॥

**ಸೂತ್ರ॥** ಪಿಂಡಜ್ಞಾನಸ್ಥಲೋಕ್ತಾರ್ಥವನು ಸೂಚಿಸುತ್ತ ಶಿವಪ್ರಸಾದದಿಂದಲಾದ ಆತ್ಮಪ್ರಕಾಶವನು ಹೇಳುತ್ತಿರ್ದ್ದಪಂ.

ಗ್ರಂಥ॥ **ಭೋಕ್ತೃಭೋಜ್ಯಪರಿತ್ಯಾಗಾತ್ಪ್ರೇರಕಸ್ಯ ಪ್ರಸಾದತಃ ।
ಭೋಕ್ತೃತಾಭಾವಗಲಿತಃ ಸ್ಫುರತ್ಯಾತ್ಮಾ ಸ್ವಭಾವತಃ ॥**

**ಟೀಕು॥** ಆತ್ಮಾ=ಅಂತರಾತ್ಮನು, ಭೋಕ್ತೃಃ=ಭೋಕ್ತೃವಾದ ಜೀವಾತ್ಮನಿಂದೆ, ಭೋಜ್ಯ ಪರಿತ್ಯಾಗಾತ್= ಭೋಗಿಸಲು ಯೋಗ್ಯವಾದ ವಿಷಯಂಗಳ ಪರಿತ್ಯಾಗದದೆಸೆಯಿಂದೆ, ಪ್ರೇರಕಸ್ಯ=ಪ್ರೇರಕನಾದ ಶಿವನ, ಪ್ರಸಾದತಃ= ಪ್ರಸನ್ನತೆಯದೆಸೆಯಿಂದವು, ಭೋಕ್ತೃತಾಭಾವಗಲಿತಃ ಸನ್=ಭೋಕ್ತೃತ್ವಭಾವದಿಂದೆ ತೊಲಗಲುಪಟ್ಟಾತನಾಗುತಲು, ಸ್ವಭಾವತಃ=ಸ್ವಸ್ವರೂಪಿನಿಂದೆ, ಸ್ಫುರತಿ=ಪ್ರಕಾಶಿಸುತ್ತಿರ್ದ್ದಪನು. ॥೨೭॥

**ಸೂತ್ರ॥** ಬಳಿಕ ಅಂತರಾತ್ಮಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ ಸರ್ವೇಷಾಂ ಪ್ರೇರಕತ್ವೇನ ಶಂಭುರಂತಃ ಸ್ಥಿತಃ ಸದಾ ।
ತತ್ಪರಜ್ಞಾನಯೋಗೇನ ಯೋಗೀ ನಂದತಿ ಮುಕ್ತವತ್ ॥

**ಟೀಕು॥** ಶಂಭುಃ=ಪರಮೇಶ್ವರನು, ಸದಾ=ಎಲ್ಲಾ ಕಾಲದಲ್ಲಿಯೂ, ಪ್ರೇರಕತ್ವೇನ=ಪ್ರೇರಕನ ಹತನದಿಂದೆ , ಸರ್ವೇಷಾಂ=ಸರ್ವಾತ್ಮರ , ಅಂತಃಸ್ಥಿತಃ=ಹೃದಯಕುಹರದಲ್ಲಿಯಿರುತ್ತಿರ್ದ್ದಾತನು, ತತ್ಪರಜ್ಞಾನಯೋಗೇನ=ಆ ಶಿವನೆ ಪರವಾಗುಳ್ಳ ಜ್ಞಾನಯೋಗದಿಂದೆ, ಯೋಗೀ=ಅಂತರಾತ್ಮ ಸ್ವರೂಪನಾದ ಶಿವಯೋಗಿಯು, ಮುಕ್ತವತ್=ಮುಕ್ತನೋಪಾದಿಯಲ್ಲಿ, ನಂದತಿ=ಸಂತೋಷಿ ಸುತ್ತಿರ್ದ್ದಪಂ. ॥೨೮॥

ಇತ್ಯಂತರಾತ್ಮಸ್ಥಲಮ್

## ೩೦. ಪ್ರಾಣಲಿಂಗಿಸ್ಥಲೇ ಪರಮಾತ್ಮಸ್ಥಲಮ್

**ಸೂತ್ರ॥** ಬಳಿಕ "ಏವಂ ವಿದಿತ್ವಾ ಪರಮಾತ್ಮರೂಪಂ ಗುಹಾಶಯಂ ನಿಷ್ಕಲಮದ್ವಿತೀಯಮ್।
ಸಮಸ್ತಸಾಕ್ಷಿಂ ಸದಸದ್ವಿಹೀನಂ ಪ್ರಯಾತಿ ಶುದ್ಧಂ ಪರಮಾತ್ಮರೂಪಮ್॥"
ಯೆಂಬ ಕೈವಲ್ಯಶ್ರುತ್ಯರ್ಥವನು ಪ್ರಕಟಿಸುತ್ತ ಆ ಈ ಅಂತರಾತ್ಮನೆ ನಿರ್ಮಲತ್ವದಿಂದೆ ಪರಮಾತ್ಮನೆಂದು ಹೇಳುತ್ತಿರ್ದ್ದಪಂ.

ಗ್ರಂಥ॥ ನಿರ್ಧೂತೇ ತತ್ವಬೋಧೇನ ಮಲೇ ಸಂಸಾರಕಾರಣೇ ।
ಸಾಮರಸ್ಯಾತ್ಪರಾತ್ಮಸ್ಥಾತ್ಪರಮಾತ್ಮಾಯಮುಚ್ಯತೇ ॥

**ಟೀಕು॥** ಅಯಂ=ಈ ಅಂತರಾತ್ಮನು, ಸಂಸಾರಕಾರಣೇ=ಸಂಸಾರಕ್ಕೆ ಕಾರಣವಾದ, ಮಲೇ= ಅಜ್ಞಾನವು, ತತ್ವಬೋಧೇನ=ಆ ಶಿವಜ್ಞಾನದಿಂದೆ, ನಿರ್ಧೂತೇಸತಿ=ಕೊಡಹಲುಪಡಲಿಕೆಯಾಗಿ, ಪರಾತ್ಮಸ್ಥಾತ್=ಪರಮಾತ್ಮನಲ್ಲಿಯಿರುತ್ತಿರ್ದ್ದ, ಸಾಮರಸ್ಯಾತ್=ಸಮರಸತ್ವದದೆಸೆಯಿಂದೆ, ಪರಮಾತ್ಮಾ=ಪರಮಾತ್ಮನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ॥೨೯॥

**ಸೂತ್ರ॥** ಬಳಿಕ ಪರಮಶಿವನೆ ಪರಮಾತ್ಮನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಸರ್ವೇಷಾಮಾತ್ಮಭೇದಾನಾಮುತ್ಕೃಷ್ಟತ್ವಾತ್ಸ್ವತೇಜಸಾ ।
ಪರಮಾತ್ಮಾ ಶಿವಃ ಪ್ರೋಕ್ತಃ ಸರ್ವಗೋಽಪಿ ಪ್ರಕಾಶವಾನ್ ॥

**ಟೀಕು॥** ಸ್ವತೇಜಸಾ=ನಿಜತೇಜಸ್ಸಿನಿಂದೆ, ಸರ್ವಗಃಪ್ರಕಾಶವಾನ್=ಸರ್ವವ್ಯಾಪಕವಾದ ಪ್ರಕಾಶವುಳ್ಳ,

ಶಿವೋಽಪಿ=ಪರಮಶಿವನಾಯಿತ್ತಾದೊಡೆ, ಸರ್ವೇಷಾಮಾತ್ಮಭೇದಾನಾಂ=ಆ ಸಮಸ್ತವಾದ ಆತ್ಮಭೇದಂಗಳಿಗೆ, ಉತ್ಕೃಷ್ಟತ್ವಾತ್=ಉತ್ಕರ್ಷವಾದಕಾರಣವಾಗಿ. ಪರಮಾತ್ಮಾ=ಪರಮಾತ್ಮನೆಂದು, ಪ್ರೋಕ್ತಃ=ಹೇಳಲುಪಟ್ಟನು. ||೩೦||

ಗ್ರಂಥ|| ಬ್ರಹ್ಮಾಂಡಬುದ್ಬುದಸ್ತೋಮಾ ಯಸ್ಯ ಮಾಯಾಮಹೋದಧೌ ।
ಉನ್ಮಜ್ಜಂತಿ ನಿಮಜ್ಜಂತಿ ಪರಮಾತ್ಮಾ ಸ ಉಚ್ಯತೇ ॥

**ಟೀಕು||** ಯಸ್ಯ=ಆವನಾನೊಬ್ಬ ಪರಮೇಶ್ವರನ, ಮಾಯಾಮಹೋದಧೌ=ಮಾಯೆಯೆಂಬ ಮಹಾಸಮುದ್ರದಲ್ಲಿ, ಬ್ರಹ್ಮಾಂಡಬುದ್ಬುದಸ್ತೋಮಾಃ=ಬ್ರಹ್ಮಾಂಡಗಳೆಂಬ ಬೊಬ್ಬುಳಿಕೆಗಳ ಸಮೂಹಂಗಳು, ಉನ್ಮಜ್ಜಂತಿ ನಿಮಜ್ಜಂತಿ=ಮುಳುಗುತ್ತ ಏಳುತ್ತಿರ್ದ್ದಪವು. ಸಃ=ಆತನೆ, ಪರಮಾತ್ಮಾ=ಪರಮಾತ್ಮನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ||೩೧||

**ಸೂತ್ರ||** ಬಳಿಕ ಆ ಪರಮಾತ್ಮಸ್ವರೂಪವನು ಸೂತ್ರತ್ರಯದಿಂದೆ ದೃಷ್ಟಾಂತಪೂರ್ವಕವಾಗಿ ಹೇಳುತ್ತಿರ್ದ್ದಪಂ.

ಗ್ರಂಥ|| ಯಸ್ಮಿನ್ ಜ್ಯೋತಿರ್ಗಣಾಃ ಸರ್ವೇ ಸ್ಫುಲಿಂಗಾ ಇವ ಪಾವಕಾತ್ ।
ಉತ್ಪತ್ಯ ವಿಲಯಂ ಯಾಂತಿ ತದ್ರೂಪಂ ಪರಮಾತ್ಮನಃ ॥

**ಟೀಕು||** ಯಸ್ಮಿನ್=ಆವ ವಸ್ತುವಿನಲ್ಲಿ, ಸರ್ವೇಜ್ಯೋತಿರ್ಗಣಾಃ=ಸಮಸ್ತವಾದ ಜ್ಯೋತಿರ್ಗಣಂಗಳು, ಪಾವಕಾತ್ ಜಾತಾಃ=ಅಗ್ನಿಯದೆಸೆಯಿಂದೆ ಹುಟ್ಟಿದ, ಸ್ಫುಲಿಂಗಾ ಇವ=ಕಿಡಿಗಳೋಪಾದಿಯಲ್ಲಿ, ಉತ್ಪತ್ಯ ವಿಲಯಂ=ಹುಟ್ಟಿ ಲಯವನು, ಯಾಂತಿ=ಎಯ್ದುತ್ತಿರ್ದ್ದಪವು. ತದ್ರೂಪಂ=ಆ ಸ್ವರೂಪವೆ, ಪರಮಾತ್ಮನಃ=ಪರಮಾತ್ಮನಿಗೆ, ಭವೇತ್=ಅಹುದು. ||೩೨||

ಗ್ರಂಥ|| ಯಸ್ಮಿನ್ ಸಮಸ್ತ ತತ್ತ್ವಾನಿ ಕಲ್ಲೋಲಾ ಇವ ವಾರಿಧೌ ।
ಸಂಭೂಯ ಲಯಮಾಯಾಂತಿ ತದ್ರೂಪಂ ಪರಮಾತ್ಮನಃ ॥

**ಟೀಕು||** ಯಸ್ಮಿನ್=ಆವ ವಸ್ತುವನಿಲ್ಲಿ, ಸಮಸ್ತ ತತ್ತ್ವಾನಿ=ಪೃಥಿವ್ಯಾದಿ ಸಮಸ್ತತತ್ತ್ವಂಗಳು, ವಾರಿಧೌ=ಸಮುದ್ರದಲ್ಲಿಯ, ಕಲ್ಲೋಲಾ ಇವ=ಹೆದ್ದೆರೆಗಳೋಪಾದಿಯಲ್ಲಿ, ಸಂಭೂಯ=ಹುಟ್ಟಿ, ಲಯಂ=ನಾಶವನು, ಆಯಾಂತಿ=ಎಯ್ದುತ್ತಿರ್ದ್ದಪವು. ತದ್ರೂಪಂ=ಆ ಸ್ವರೂಪವೆ, ಪರಮಾತ್ಮನಃ= ಪರಮಾತ್ಮನಿಗೆ, ಭವೇತ್=ಅಹುದು. ||೩೩||

ಗ್ರಂಥ|| ನಿರಸ್ತಮಲಸಂಬಂಧಂ ನಿಃಶೇಷಜಗದಾತ್ಮಕಮ್ ।
ಸರ್ವತತ್ತ್ವೋಪರಿ ಪ್ರೋಕ್ತಂ ಸ್ವರೂಪಂ ಪರಮಾತ್ಮನಃ ॥

**ಟೀಕು॥** ನಿರಸ್ತಮಲಸಂಬಂಧಂ=ತೊಲಗಿಸಲುಪಟ್ಟ ಮಲಪಾಶದ ಸಂಬಂಧವುಳ್ಳ, ನಿಃಶೇಷಜಗದಾತ್ಮಕಂ=ನಾಮರೂಪಾತ್ಮಕವಾದ ಸಮಸ್ತಜಗತ್ತಿಗೆ ಚೈತನ್ಯರೂಪವಾದ, ಪರಮಾತ್ಮನಃ ಸ್ವರೂಪಂ=ಪರಮಾತ್ಮಸ್ವರೂಪವು, ಸರ್ವತತ್ತ್ವೋಪರಿ=ಪೃಥಿವ್ಯಾದಿ ಶಿವತತ್ತ್ವಾಂತವಾದ ಸಮಸ್ತ ತತ್ತ್ವಂಗಳ ಊರ್ಧ್ವಭಾಗದಲ್ಲಿ, ಪ್ರೋಕ್ತಂ=ಹೇಳಲುಪಟ್ಟಿತ್ತು. ॥೩೪॥

**ಸೂತ್ರ॥** ಬಳಿಕ ಆ ಪರಮಾತ್ಮಪ್ರಕಾಶವನು ದೃಷ್ಟಾಂತಪೂರ್ವಕವಾಗಿ ಹೇಳುತ್ತಿರ್ದಪಂ.

**ಗ್ರಂಥ॥**
**ಯಥಾ ವ್ಯಾಪ್ಯ ಜಗತ್ಸರ್ವಂ ಸ್ವಭಾಸಾ ಭಾತಿ ಭಾಸ್ಕರಃ ।**
**ತಥಾ ಸ್ವಶಕ್ತಿಭಿರ್ವ್ಯಾಪ್ಯ ಪರಮಾತ್ಮಾ ಪ್ರಕಾಶತೇ ॥**

**ಟೀಕು॥** ಭಾಸ್ಕರಃ=ಸೂರ್ಯನು, ಸ್ವಭಾಸಾ=ತನ್ನ ಕಾಂತಿಯಿಂದೆ, ಸರ್ವಂ ಜಗತ್=ಸಮಸ್ತಜಗತ್ತನು ವ್ಯಾಪ್ಯ=ವ್ಯಾಪಿಸಿಕೊಂಡು, ಯಥಾ=ಹೇಗೆ, ಭಾತಿ=ಪ್ರಕಾಶಿಸುತ್ತಿರ್ದಪನು. ತಥಾ=ಹಾಗೆಯೇ, ಪರಮಾತ್ಮಾ=ಪರಮಾತ್ಮನು, ಸ್ವಶಕ್ತಿಭಿಃ=ಅಷ್ಟತ್ರಿಂಶತ್ಕಲಾರೂಪವಾದ ತನ್ನ ಪರಾಶಕ್ತ್ಯಾದಿ ಪಂಚ ಶಕ್ತಿಗಳಿಂದೆ, ಸರ್ವಂ ಜಗತ್=ಸಮಸ್ತ ಜಗತ್ತನು, ವ್ಯಾಪ್ಯ=ವ್ಯಾಪಿಸಿಕೊಂಡು, ಪ್ರಕಾಶತೇ=ಪ್ರಕಾಶಿಸುತ್ತಿರ್ದಪನು.

**ತಾತ್ಪರ್ಯ॥** "ತಸ್ಯ ಭಾಸಾ ಸರ್ವಮಿದಂ ವಿಭಾತಿ" ಎಂಬ ಶ್ರುತಿಯಿಂದವು ದೇಶಿಕೋಪದೇಶ ಸ್ವಾನುಭವಂಗಳಿಂದೆಯು ತಿಳಿವುದು. ॥೩೫॥

**ಸೂತ್ರ॥** ಬಳಿಕ ಆ ಪರಮಾತ್ಮನೆ ಸಂಸಾರಹೇಯಸಂಪನ್ನರಾದ ಜೀವಾತ್ಮರ್ಗೆ ಸ್ವಯಂಜ್ಯೋತಿ ಪ್ರಕಾಶನೆಂದು ಹೇಳಿ ಪರಮಾತ್ಮಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ॥**
**ವಿಶ್ವತೋ ಭಾಸಮಾನೋಽಪಿ ವಿಶ್ವಮಾಯಾವಿಲಕ್ಷಣಃ ।**
**ಪರಮಾತ್ಮಾ ಸ್ವಯಂಜ್ಯೋತೀರೂಪೋ ಜೀವಾತ್ಮನಾಂ ಭವೇತ್ ॥**

**ಟೀಕು॥** ಪರಮಾತ್ಮಾ=ಪರಮಾತ್ಮನು, ವಿಶ್ವತೋ ಭಾಸಮಾನೋಽಪಿ=ಎಲ್ಲಾ ಕಡೆಯಲ್ಲಿ ಪ್ರಕಾಶಿಸುತ್ತಿರ್ದಾತನಾಯಿತ್ತಾದೊಡೆಯು, ವಿಶ್ವಮಾಯಾವಿಲಕ್ಷಣಃ ಸನ್=ನಾಮರೂಪಾತ್ಮಕವಾದ ಸಮಸ್ತ ಮಾಯಾಪ್ರಪಂಚಿನದೆಸೆಯಿಂದೆ ವಿಲಕ್ಷಣವಾದ ಸಚ್ಚಿದಾನಂದ ನಿತ್ಯಪರಿಪೂರ್ಣತ್ವವೆ ಸ್ವರೂಪವಾಗುಳ್ಳಾತನಾಗುತಲು, ಜೀವಾತ್ಮನಾಂ=ಸಂಸಾರಹೇಯಸಂಪನ್ನರಾದ ಜೀವಾತ್ಮರ್ಗೆ, ಸ್ವಯಂ ಜ್ಯೋತೀರೂಪೋ=ಸ್ವಯಂಜ್ಯೋತಿರೂಪವುಳ್ಳಾತನು, ಭವೇತ್=ಅಹನು. ॥೩೬॥

**ಇತಿ ಪರಮಾತ್ಮಸ್ಥಲಮ್**

## ೩೧. ಪ್ರಾಣಲಿಂಗಿಸ್ಥಲೇ ನಿರ್ದೇಹಾಗಮಸ್ಥಲಮ್

**ಸೂತ್ರ||** ಬಳಿಕ "ಆಶ್ರಯೋ ದ್ವಂದ್ವಮಿತ್ಯುಕ್ತಂ ದ್ವಂದ್ವತ್ಯಾಗಾತ್ಪರೋ ದಮಃ|
ಜೀವನ್ಮುಕ್ತಃ ಸದಾ ಯೋಗೀ ದೇಹತ್ಯಾಗಾದ್ವಿಮುಚ್ಯತೇ"|| ಯೆಂಬ ದೇವೀಕಾಲೋತ್ತರಾರ್ಥವನು ಪ್ರಕಟಿಸುತ್ತ ದೇಹಧರ್ಮವನು ನಿರಾಕರಿಸಿ ಆ ಪರಮಾತ್ಮಸ್ವರೂಪ ಭಾವನೆಯುಳ್ಳ ಶಿವಯೋಗಿಗೆ ನಿರ್ದೇಹಾಗಮವು ಹೇಳಲ್ಪಡುತ್ತಿರ್ದ್ದಪುದು.

**ಗ್ರಂಥ||** **ದೇಹಿನೋಽಪಿ ಪರಾತ್ಮತ್ವಭಾವಿನೋ ನಿರಹಂಕೃತೇಃ |**
**ನಿರಸ್ತದೇಹಧರ್ಮಸ್ಯ ನಿರ್ದೇಹಾಗಮ ಉಚ್ಯತೇ ||**

**ಟೀಕು||** ಪರಾತ್ಮತ್ವಭಾವಿನಃ=ಪರಮಾತ್ಮತ್ವವನು ಭಾವಿಸುತ್ತಿರ್ದ್ದ, ನಿರಹಂಕೃತೇಃ=ತೊಲಗಲುಪಟ್ಟ ಅಹಂಕಾರವುಳ್ಳ, ನಿರಸ್ತದೇಹಧರ್ಮಸ್ಯ=ನಿರಾಕರಿಸಲುಪಟ್ಟ ದೇಹಧರ್ಮವುಳ್ಳ , ದೇಹಿನೋಽಪಿ=ದೇಹವುಳ್ಳ ಶಿವಯೋಗಿಗಾಯಿತ್ತಾದೊಡೆಯು, ನಿರ್ದೇಹಾಗಮಃ=ನಿರ್ದೇಹಾಗಮವು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೩೭||

**ಸೂತ್ರ||** ಬಳಿಕ ಆ ಪರಮಾತ್ಮರೂಪನಾದ ಶಿವಯೋಗಿಗೆ ದೇಹಸಂಬಂಧವಿಲ್ಲವೆಂದು ಷಟ್ಸೂತ್ರಂಗಳಿಂದೆ, ಹೇಳುತ್ತಿರ್ದ್ದಪಂ.

**ಗ್ರಂಥ||** **ಗಲಿತೇ ಮಮತಾಽಹಂತೇ ಸಂಸಾರಭ್ರಮಕಾರಣೇ |**
**ಪರಾಹಂತಾಂ ಪ್ರವಿಷ್ಟಸ್ಯ ಕುತೋ ದೇಹಃ ಕುತೋ ರತಿಃ ||**

**ಟೀಕು||** ಸಂಸಾರಭ್ರಮಕಾರಣೇ=ಸಂಸಾರಭ್ರಾಂತಿಗೆ ಕಾರಣವಾದ, ಮಮತಾಽಹಂತೇ=ಮಮತ್ವಾಹಂಕಾರಗಳು, ಗಲಿತೇ=ತೊಲಗಿಕೆಯಾಗಿ, ಪರಾಹಂತಾಂ=ಪರಮಾತ್ಮನೆ ನಾನೆಂಬತನವನು, ಪ್ರವಿಷ್ಟಸ್ಯ=ಎಯ್ದಿರ್ದ್ದ ಶಿವಯೋಗಿಗೆ, ದೇಹಃ ಕುತಃ=ದೇಹವೆತ್ತಣದು? ರತಿಃ=ದೇಹಸಂಬಂಧವಾದ ಪ್ರೀತಿಯು, ಕುತಃ=ಎತ್ತಣದು? ||೩೮||

**ಗ್ರಂಥ||** **ಕೇವಲೇ ನಿಷ್ಪ್ರಪಂಚೌಘೇ ಗಂಭೀರೇ ಚಿನ್ಮಹೋದಧೌ |**
**ನಿಮಗ್ನಮಾನಸೋ ಯೋಗೀ ಕಥಂ ದೇಹಂ ವಿಚಿಂತಯೇತ್ ||**

**ಟೀಕು||** ನಿಷ್ಪ್ರಪಂಚೌಘೇ=ತೊಲಗಲುಪಟ್ಟ ಪ್ರಪಂಚುಗಳ ಸಮೂಹವುಳ್ಳ, ಗಂಭೀರೇ=ಕಡೆಗಾಣಬಾರದೆಯಿರ್ದ್ದ, ಕೇವಲೇ ಚಿನ್ಮಹೋದಧೌ=ಬರಿಯ ಅರಿವೆಂಬ ಮಹಾಸಮುದ್ರದಲ್ಲಿ, ನಿಮಗ್ನ ಮಾನಸಃ=ಮುಳುಗಿದ ಚಿತ್ತವುಳ್ಳ, ಯೋಗೀ=ಶಿವಯೋಗಿಯು, ದೇಹಂ=ದೇಹವನು,

ಕಥಂ=ಆವಪ್ರಕಾರದಿಂದೆ, ವಿಚಿಂತಯೇತ್=ಚಿಂತಿಸುವನು? ಆವ ಪ್ರಕಾರದಿಂದಲೂ ಚಿಂತಿಸಲಿಲ್ಲವೆಂಬುದರ್ಥ. ||೩೯||

ಗ್ರಂಥ|| ಅಪರಿಚ್ಛೇದ್ಯಮಾತ್ಮಾನಂ ಚಿದಂಬರಮಿತಿ ಸ್ಮರನ್ ।
ದೇಹಯೋಗೇಽಪಿ ದೇಹಸ್ಥೈರ್ವಿಕಾರ್ಯೈರ್ನ ವಿಲಿಪ್ಯತೇ ||

**ಟೀಕು||** ಆತ್ಮಾನಂ=ತನ್ನನು, ಅಪರಿಚ್ಛೇದ್ಯಂ=ಹವಣಿಸಬಾರದೆಯಿರ್ದ್ದ, ಚಿದಂಬರಮಿತಿ= ಚಿದಾಕಾಶವೆಂದು, ಸ್ಮರನ್=ಧ್ಯಾನಿಸುತ್ತಿರ್ದ್ದ ಶಿವಯೋಗಿಯು, ದೇಹಯೋಗೇ ಸತ್ಯಪಿ=ದೇಹಸಂಬಂಧ ವುಂಟಾಗಲಿಕೆಯಾಗಿಯು, ದೇಹಸ್ಥೈರ್ವಿಕಾರ್ಯೈಃ=ದೇಹದಲ್ಲಿರುತ್ತಿರ್ದ್ದ ಇಂದ್ರಿಯವಿಕಾರಂಗಳಿಂದೆ, ನ ವಿಲಿಪ್ಯತೇ=ಲೇಪಿಸಲುಪಡುತ್ತಿರನು. ||೪೦||

ಗ್ರಂಥ|| ಅಖಂಡಸಂವಿದಾಕಾರಮದ್ವಿತೀಯಂ ಸುಖಾತ್ಮಕಮ್ ।
ಪರಮಾಕಾಶಮಾತ್ಮಾನಂ ಮನ್ವಾನಃ ಕುತ್ರ ಮುಹ್ಯತಿ ||

**ಟೀಕು||** ಆತ್ಮಾನಂ=ತನ್ನನು, ಅದ್ವಿತೀಯಂ=ಎರಡಿಲ್ಲದೆ, ಸುಖಾತ್ಮಕಂ=ಸುಖವೆಸ್ವರೂಪವಾಗಿರ್ದ್ದ, ಅಖಂಡಸಂವಿದಾಕಾರಂ=ಪರಿಪೂರ್ಣಜ್ಞಾನವೆ ಸ್ವರೂಪವಾಗುಳ್ಳ, ಪರಮಾಕಾಶಂ= ಮಹದಾಕಾಶವನಾಗಿ, ಮನ್ವಾನಃ="ಆಕಾಶಶರೀರಂ ಬ್ರಹ್ಮ ಸತ್ಯಾತ್ಮಪ್ರಾಣಾರಾಮಂ ಮನ ಆನಂದಮ್ ಶಾಂತಿಸಮೃದ್ಧಮಮೃತಮ್।" ಯೆಂಬ ತೈತ್ತಿರೀಯ ಶ್ರುತಿ ಗುರೂಕ್ತಿಸ್ವಾನುಭೂತಿಗಳಿಂದೆ ತಿಳಿವುತ್ತಿರ್ದ್ದ ಶಿವಯೋಗಿಯು, ಕುತ್ರ=ಆವ ದೇಹದಲ್ಲಿ, ಮುಹ್ಯತಿ=ಮೋಹಿಸುತ್ತಿರ್ದ್ದಪನು? ಆವ ದೇಹದಲ್ಲಿಯು ಮೋಹಿಸುತ್ತಿರನೆಂಬುದರ್ಥ. ||೪೧||

ಗ್ರಂಥ|| ಉಪಾಧಿವಿಹಿತಾ ಭೇದಾ ದೃಶ್ಯಂತೇ ಚೈಕವಸ್ತುನಿ ।
ಇತಿ ಯಸ್ಯ ಮತಿಸ್ಸೋಽಯಂ ಕಥಂ ದೇಹಮಿತೋ ಭವೇತ್ ||

**ಟೀಕು||** ಉಪಾಧಿವಿಹಿತಾಃ=ಉಪಾಧಿಯಿಂದೆ ವಿಧಿಸಲುಪಟ್ಟ, ಭೇದಾಃ=ದೇಹಭೇದಂಗಳು, ಏಕವಸ್ತುನಿ=ಒಂದೇ ವಸ್ತುವಾದ ಚಿದಾಕಾಶದಲ್ಲಿ, ದೃಶ್ಯಂತೇ=ಕಾಣಲುಪಡುತ್ತಿರ್ದ್ದಪರು. ಇತಿ= ಹೀಗೆಂದು, ಯಸ್ಯ=ಆವ ಶಿವಯೋಗಿಗೆ, ಮತಿಃ=ಬುದ್ಧಿಯು, ಭವೇತ್=ಅಹುದು; ಸೋಽಯಂ=ಆ ಈ ಶಿವಯೋಗಿಯು, ದೇಹಮಿತಃ=ದೇಹೋಪಾಧಿಯಿಂದೆ ಪ್ರಮಾಣಿಸಲುಪಟ್ಟ ಆತನು, ಕಥಂ ಭವೇತ್=ಹೇಗಹನು? ಹೇಗೆಯೂ ಆಗನೆಂಬುದರ್ಥ. ||೪೨||

ಗ್ರಂಥ|| ಭೇದಬುದ್ಧಿಸ್ಸಮಸ್ತಾನಾಂ ಪರಿಚ್ಛೇದೋ ಹಿ ಕಾರಣಮ್ ।
ಅಭೇದಬುದ್ಧೌ ಜಾತಾಯಾಂ ಪರಿಚ್ಛೇದಸ್ಯ ಕಾ ಕಥಾ ||

ಟೀಕು|| ಸರ್ವೇಷಾಂ=ಸರ್ವರಿಗೂ, ಭೇದಬುದ್ಧಿಃ=ದ್ವೈತಬುದ್ಧಿಯು, ಪರಿಚ್ಛೇದಸ್ಯ=ಪ್ರಮಾಣಿಗೆ, ಕಾರಣಂ=ಕಾರಣವು. ಅಭೇದಬುದ್ಧೌಜಾತಾಯಾಂ ಸತ್ಯಾಂ=ಶಿವಾದ್ವೈತಬುದ್ದಿಯಾಗಲಾಗಿ, ಪರಿಚ್ಛೇದಸ್ಯ=ಪ್ರಮಾಣದ, ಕಥಾ=ಪ್ರಸಂಗವು, ಕಾ=ಎತ್ತಣದು? ||೪೩||

ಸೂತ್ರ|| ಬಳಿಕ ಆ ಶಿವಾದ್ವೈತವನು ಪ್ರಕಟಿಸಿ ನಿರ್ದೇಹಾಗಮಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ|| **ಶಿವೋಽಹಮಿತಿ ಯಸ್ಯಾಽಸ್ತಿ ಭಾವನಾ ಸರ್ವಗಾಮಿನೀ ।**
**ತಸ್ಯ ದೇಹೇನ ಸಂಬಂಧಃ ಕಥಂ ಸ್ಯಾದಮಿತಾತ್ಮನಃ ॥**

ಟೀಕು|| ಶಿವೋಽಹಮಿತಿ=ಪರಮಾತ್ಮರೂಪನಾದ ಶಿವನೆ ನಾನೆಂಬ, ಸರ್ವಗಾಮಿನೀ=ಸರ್ವ ವ್ಯಾಪಿನಿಯಾದ, ಭಾವನಾ=ಭಾವನೆಯು, ಯಸ್ಯ=ಆವ ಶಿವಯೋಗಿಗೆ, ಅಸ್ತಿ=ಉಂಟು. ಅಮಿತಾತ್ಮನಃ= ಪ್ರಮಾಣಾತೀತವಾದ ಸ್ವರೂಪವುಳ್ಳ, ತಸ್ಯ=ಆತನಿಗೆ, ದೇಹೇನ ಸಂಬಂಧಃ=ದೇಹದೊಡನೆ ಸಂಬಂಧವು, ಕಥಂ ಸ್ಯಾತ್=ಹೇಗಹುದು? ಹೇಗೆಯೂ ಆಗದೆಂಬುದರ್ಥ. ||೪೪||

**ಇತಿ ನಿರ್ದೇಹಾಗಮಸ್ಥಲಮ್**

## ೩.೨. ಪ್ರಾಣಲಿಂಗಿಸ್ಥಲೇ ನಿರ್ಭಾವಾಗಮಸ್ಥಲಮ್

ಸೂತ್ರ|| ಬಳಿಕ "ನೈವೋರ್ಧ್ವಂ ಧಾರಯೇಚ್ಚಿತ್ತಂ ನ ಮಧ್ಯಂ ನಾಪ್ಯಧಃ ಕ್ವಚಿತ್।
ಅಂತರ್ಭಾವವಿನಿರ್ಮುಕ್ತಂ ಸದಾ ಕುರ್ಯಾನ್ನಿರಾಶ್ರಯಮ್"|| ಯೆಂಬ ದೇವೀಕಾಲೋತ್ತರಾರ್ಥವನು, ಪ್ರಕಟಿಸುತ್ತ ಆ ನಿರ್ದೇಹಾಗಮಸಂಪನ್ನನಾದ ಶಿವಯೋಗಿಗೆ ನಿರ್ಭಾವಾಗಮವು ಹೇಳಲುಪಡುತ್ತಿರ್ದ್ದಪುದು.

ಗ್ರಂಥ|| **ವ್ಯತಿರೇಕಾತ್ಸ್ವರೂಪಸ್ಯ ಭಾವಾಂತರನಿರಾಕೃತೇಃ ।**
**ಭಾವೋ ವಿಕಾರನಿರ್ಮುಕ್ತೋ ನಿರ್ಭಾವಾಗಮ ಉಚ್ಯತೇ ॥**

ಟೀಕು|| ಸ್ವರೂಪಸ್ಯ=ಅನಿರ್ದೇಹವಾದ ಸ್ವಸ್ವರೂಪಿಗೆ, ವ್ಯತಿರೇಕಾತ್=ವ್ಯತಿರೇಕವಾಗಿರ್ದ್ದ, ಭಾವಾಂತರನಿರಾಕೃತೇಃ=ಅನ್ಯಭಾವಂಗಳನು ನಿರಾಕರಿಸುವುದರದೆಸೆಯಿಂದೆ, ವಿಕಾರನಿರ್ಮುಕ್ತಃ= ಇಂದ್ರಿಯಂಗಳ ವಿಕಾರದಿಂದೆ ಬಿಡಲುಪಟ್ಟ, ಭಾವಃ=ಭಾವವು, ನಿರ್ಭಾವಾಗಮಃ= ನಿರ್ಭಾವಾಗಮವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೪೫||

ಸೂತ್ರ|| ಬಳಿಕ ಆ ನಿರ್ಭಾವಲಕ್ಷಣವನು ಪಂಚಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಅಹಂ ಬ್ರಹ್ಮೇತಿ ಭಾವಸ್ಯ ವಸ್ತುದ್ವಯಸಮಾಶ್ರಯಃ ।
ಏಕೀಭೂತಸ್ಯ ಚಿದ್ವ್ಯೋಮ್ನಿ ತದಭಾವೋ ವಿನಿಶ್ಚಿತಃ ॥

ಟೀಕು॥ ಭಾವಸ್ಯ=ದ್ವೈತಭಾವಕ್ಕೆ, ಅಹಂ=ನಾನು, ಬ್ರಹ್ಮೇತಿ=ಬ್ರಹ್ಮವೆಯೆಂಬ, ವಸ್ತುದ್ವಯಸಮಾಶ್ರಯಃ= ವಸ್ತುದ್ವಯವನು ಆಶ್ರಯಿಸುವತನವು, ಭವೇತ್=ಅಹುದು. ಚಿದ್ವ್ಯೋಮ್ನಿ= ಚಿದಾಕಾಶದಲ್ಲಿ, ಏಕೀಭೂತಸ್ಯ=ಏಕರಸಮಯವಾದ ಆ ಭಾವಕ್ಕೆ, ತದಭಾವಃ=ನಾನು ಬ್ರಹ್ಮವು ಎಂಬ ವಸ್ತುದ್ವಯವಿಲ್ಲದಿಹತನವು, ವಿನಿಶ್ಚಿತಃ=ವಿಶೇಷವಾಗಿ ನಿಶ್ಚೈಸಲುಪಟ್ಟಿತ್ತು. ॥೪೬॥

ಗ್ರಂಥ॥ ಏಕಭಾವನಿರೂಢಸ್ಯ ನಿಷ್ಕಲಂಕೇ ಚಿದಂಬರೇ ।
ಕ್ವ ಜಾತಿವಾಸನಾಯೋಗಃ ಕ್ವ ದೇಹಿತ್ವಂ ಪರಿಭ್ರಮಃ ॥

ಟೀಕು॥ ನಿಷ್ಕಲಂಕೇ=ಕಳಂಕು ಇಲ್ಲದೆ ಇರ್ದ್ದ, ಚಿದಂಬರೇ=ಚಿದಾಕಾಶದಲ್ಲಿ, ಏಕಭಾವನಿರೂಢಸ್ಯ=ಏಕಭಾವವನೇರಿದ್ದ ಶಿವಯೋಗಿಗೆ, ಜಾತಿವಾಸನಾಯೋಗಃ=ವರ್ಣಾಶ್ರಮಂಗಳ ವಾಸನಾಯೋಗವು, ಕ್ವ=ಎತ್ತಣದು? ದೇಹಿತ್ವಂ=ದೇಹವುಳ್ಳತನವು, ಕ್ವ=ಎತ್ತಣದು? ಪರಿಭ್ರಮಃ= ಸಂಸಾರಚಕ್ರದಲ್ಲಿ ತಿರುಗುವತನವು, ಕ್ವ=ಎತ್ತಣದು? ॥೪೭॥

ಗ್ರಂಥ॥ ಶೂನ್ಯೇ ಚಿದಂಬರೇ ಸ್ಥಾನೇ ದೂರೇ ವಾಙ್ಮನಸಾಧ್ವನಃ ।
ವಿಲೀನಾತ್ಮಾ ಮಹಾಯೋಗೀ ಕೇನ ಕಿಂ ವಾಽಪಿ ಭಾವಯೇತ್ ॥

ಟೀಕು॥ ವಾಙ್ಮನಸಾಧ್ವನಃ ದೂರೇ="ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ!" ಯೆಂಬದು ಶ್ರುತಿ ಉಂಟಾದ ಕಾರಣವಾಗಿ ವಾಙ್ಮನಸ್ಸುಗಳ ಮಾರ್ಗಕ್ಕೆ ದೂರವಾಗಿರ್ದ್ದ, ಶೂನ್ಯೇ ಚಿದಂಬರೇ=ಬಯಲಾಗಿರ್ದ್ದ ಚಿದಾಕಾಶದಲ್ಲಿ, ವಿಲೀನಾತ್ಮಾ=ವಿಶೇಷವಾಗಿ ಲಯಿಸಿದ್ದ ಸ್ವಭಾವವುಳ್ಳ, ಮಹಾಯೋಗೀ=ಮಹಾಶಿವಯೋಗಿಯು, ಕೇನ=ಆವ ಭಾವದಿಂದೆ, ಕಿಂ ವಾಽಪಿ=ಆವ ವಸ್ತುವನಾಯಿತ್ತಾದೊಡೆ, ಭಾವಯೇತ್=ಭಾವಿಸುವನು? ಭಾವ ನಷ್ಟವಾದ ಬಳಿಕ ಆವುದನು ಭಾವಿಸಲಿಲ್ಲವೆಂಬುದರ್ಥ. ॥೪೮॥

ಗ್ರಂಥ॥ ಕುತೋ ಭಾವಃ ಕುತಶ್ಚಿತ್ತಂ ಕುತಃ ಸಂಕಲ್ಪವಾಸನಾ ।
ನಿಸ್ತರಂಗೇ ಚಿದಂಬೋಧೌ ವಿಲೀನಸ್ಯ ಮಹಾತ್ಮನಃ ॥

ಟೀಕು॥ ನಿಸ್ತರಂಗೇ=ತೆರೆಯಿಲ್ಲದೆಯಿರ್ದ್ದ, ಚಿದಂಬೋಧೌ=ಚಿತ್ಸಮುದ್ರದಲ್ಲಿ, ವಿಲೀನಸ್ಯ=ಅಡಗಿದ್ದ ಮಹಾತ್ಮನಃ=ಮಹಾಪುರುಷನಿಗೆ, ಭಾವಃ ಕುತಃ=ಭಾವವೆತ್ತಣದು? ಚಿತ್ತಂ ಕುತಃ=ಚಿತ್ತವೆತ್ತಣದು ಸಂಕಲ್ಪವಾಸನಾವಿಧಿಃ=ನಿಷೇಧಾದಿ ಸಂಕಲ್ಪವಾಸನೆಯು , ಕುತಃ=ಎತ್ತಣದು? ॥೪೯॥

ಗ್ರಂಥ॥ **ಅವಿಶುದ್ಧೇ ವಿಶುದ್ಧೇ ವಾ ಸ್ಥಲೇ ದೀಪ್ತಿರ್ಯಥಾ ರವೇಃ ।**
**ಪತತ್ಯೇವಂ ಸದಾಽದ್ವೈತೀ ಸರ್ವತ್ರ ಸಮವೃತ್ತಿಮಾನ್ ॥**

**ಟೀಕು॥** ರವೇಃ=ಸೂರ್ಯನ, ದೀಪ್ತಿಃ=ಪ್ರಕಾಶವು, ವಿಶುದ್ಧೇ ಸ್ಥಲೇ ವಾ=ನಿರ್ಮಲವಾದ ಸ್ಥಲದಲ್ಲಿಯಾಯಿತ್ತಾದಡೆಯು, ಅಶುದ್ಧೇ ಸ್ಥಲೇ ವಾ=ನಿರ್ಮಲವಲ್ಲದಸ್ಥಲದಲ್ಲಿಯಾಯಿತ್ತಾದಡೆಯು, ಯಥಾ=ಹೇಗೆ, ಪತತಿ=ಬೀಳುತ್ತಿರ್ದ್ದಪುದು. ಏವಂ=ಈ ಪ್ರಕಾರದಿಂದೆ, ಅದ್ವೈತೀ=ಶಿವಾದ್ವೈತಿಯು, ಸದಾ=ಎಲ್ಲಾ ಕಾಲದಲ್ಲಿಯೂ, ಸರ್ವತ್ರ=ಎಲ್ಲಾ ಎಡೆಯಲ್ಲಿಯು, ಸಮವೃತ್ತಿಮಾನ್=ಸಮಾನವಾದ ವರ್ತನೆಯುಳ್ಳ ಆತನು. ॥೫೦॥

**ಸೂತ್ರ॥** ಬಳಿಕ ನಿರ್ಭಾವಾಗಮಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ **ನ ಬಿಭೇತಿ ಜರಾಮೃತ್ಯೋರ್ನ ಕ್ಷುಧಾಯಾ ವಶಂ ವ್ರಜೇತ್ ।**
**ಪರಿಪೂರ್ಣನಿಜಾನಂದ ಸಮಾಸ್ವಾದಾನ್ಮಹಾಸುಖೀ ॥**

**ಟೀಕು॥** ಪರಿಪೂರ್ಣನಿಜಾನಂದ ಸಮಾಸ್ವಾದಾತ್=ಪರಿಪೂರ್ಣವಾದ ನಿಜಾನಂದಸ್ವಾದದ ದೆಸೆಯಿಂದೆ, ಮಹಾಸುಖೀ=ಮಹಾಸುಖಿಯಾದ ಶಿವಯೋಗಿಯು, ಕ್ಷುಧಾಯಾಃ=ಹಸಿವುತೃಷೆಗಳ, ವಶಂ=ಅಧೀನವನು, ನ ವ್ರಜೇತ್=ಎಯ್ದನು. ಜರಾಮೃತ್ಯೋಃ=ಜರಾಮರಣಂಗಳದೆಸೆಯಿಂದೆಯು ನ ಬಿಭೇತಿ=ಬೆದರುತ್ತಿರನು. ॥೫೧॥

**ಇತಿ ನಿರ್ಭಾವಾಗಮಸ್ಥಲಮ್**

## ೩೩. ಪ್ರಾಣಲಿಂಗಿಸ್ಥಲೇ ನಷ್ಟಾಗಮಸ್ಥಲಮ್

**ಸೂತ್ರ||** ಬಳಿಕ "ತಸ್ಮಾನ್ನೂನಂ ಸಕಲಾದಪಿ ದಹ್ಯೋಗ್ನಿಶ್ಚಿದಾಭ್ಯಾತ್ಮಯೋಗಾದ್ಯ ಯೋರ್ನಾಶಸ್ತದನುಮನಸಸ್ತದ್ವಿನಾಶಶ್ಚಮೋಕ್ಷಃ"|| (?) ಯೆಂಬ ಯೋಗಜಾ... ಮಾರ್ಥವನು ಪ್ರಕಟಿಸುತ್ತ ಆ ನಿರ್ಭಾವಸಂಪನ್ನನಾದ ಶಿವಯೋಗಿಗೆ, ಬಾಹ್ಯಜ್ಞಾನಶೂನ್ಯವಾದ ನಷ್ಟಾಗಮವು ಹೇಳಲುಪಡುತ್ತಿರ್ದ್ದಪುದು.

**ಗ್ರಂಥ||**
**ಭೇದಶೂನ್ಯೇ ಮಹಾಬೋಧೇ ಜ್ಞಾತ್ರಾದಿತ್ರಯಹೀನತಃ ।**
**ಜ್ಞಾನಸ್ಯ ನಷ್ಟಭಾವೇನ ನಷ್ಟಾಗಮ ಇಹೋಚ್ಯತೇ ॥**

**ಟೀಕು||** ಭೇದಶೂನ್ಯೇ=ದ್ವೈತರಹಿತವಾದ, ಮಹಾಬೋಧೇ=ಮಹಾಶಿವಜ್ಞಾನದಲ್ಲಿ ಜ್ಞಾತ್ರಾದಿತ್ರಯಹೀನತಃ=ಜ್ಞಾತೃವೇ ಮೊದಲಾಗುಳ್ಳ ಜ್ಞಾನರೂಪವಾದ ತ್ರಿಪುಟಿಗಳಿಲ್ಲದಿಹುದರ ದೆಸೆಯಿಂದೆ, ಇಹವಿಷಯೇ=ಈ ನಿರ್ಭಾವಸಂಪನ್ನವಾದ ಶಿವಯೋಗಿಯ ವಿಷಯವಾಗಿ, ಜ್ಞಾನಸ್ಯ= ಬಾಹ್ಯಜ್ಞಾನದಲ್ಲಿ, ನಷ್ಟಭಾವೇನ=ನಷ್ಟತೆಯಿಂದೆ, ನಷ್ಟಾಗಮಃ=ನಷ್ಟಾಗಮವೆಂದು, ಉಚ್ಯತೇ= ಹೇಳಲುಪಡುತ್ತಿರ್ದ್ದಪದು.

**ತಾತ್ಪರ್ಯ||** "ಜ್ಞಾತೃ ಜ್ಞಾನಜ್ಞೇಯವಿಹೀನೋಽಪಿ ಸದಾಜ್ಞಃ" ಯೆಂದು ಶ್ರುತಿಯುಂಟಾಗಿ ತ್ರಿಪುಟಿಯ ನಷ್ಟವ ಮಾಡಿ ಉಳಿದ ಜ್ಞಾನವೆ ನಷ್ಟಾಗಮವೆಂಬುದರ್ಥ. ||೫೨||

**ಸೂತ್ರ||** ಬಳಿಕ ಆ ಶಿವಯೋಗಿಗೆ ತೋರುವ ತ್ರಿಪುಟಿಗಳನು ಸೂತ್ರತ್ರಯದಿಂದೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||**
**ಅದ್ವೈತವಾಸನಾವಿಷ್ಟಚೇತಸಾಂ ಪರಯೋಗಿನಾಮ್ ।**
**ಪಶ್ಯತಾಮಂತರಾತ್ಮಾನಂ ಜ್ಞಾತೃತ್ವಂ ಕಥಮನ್ಯಥಾ ॥**

**ಟೀಕು||** ಅದ್ವೈತವಾಸನಾವಿಷ್ಟಚೇತಸಾಂ=ಶಿವಾದ್ವೈತವಾಸನೆಯಲ್ಲಿ ಮುಸುಕಲುಪಟ್ಟ ಚಿತ್ತವುಳ್ಳ, ಅಂತಃ=ಹೃದಯಲ್ಲಿ, ಆತ್ಮಾನಂ=ಸ್ವಸ್ವರೂಪವನು, ಪಶ್ಯತಾಂ=ಅಪರೋಕ್ಷವಾಗಿ ಕಾಣುತ್ತಿರ್ದ್ದ, ಪರಯೋಗಿನಾಂ=ಮಹಾಯೋಗಿಗಳಿಗೆ, ಅನ್ಯಥಾ ಜ್ಞಾತೃತ್ವಂ=ಇದರದೆಸೆಯಿಂದೆ ಭಿನ್ನವಾದ ಜ್ಞಾತೃತ್ವವು, ಕಥಂ=ಹೇಗಹುದು? ಹೇಗೆಯೂ ಆಗದೆಂಬುದರ್ಥ. ||೫೩||

**ಗ್ರಂಥ||**
**ಅಕರ್ತಾಽಹಮವೇತ್ತಾಽಹಮದೇಹೋಽಹಂ ನಿರಂಜನಃ ।**
**ಇತಿ ಚಿಂತಯತಃ ಸಾಕ್ಷಾತ್ಸಂವಿದೇವ ಪ್ರಕಾಶತೇ ॥**

**ಟೀಕು||** ಅಹಂ=ನಾನು, ಅಕರ್ತಾ=ಕರ್ಮಕರ್ತೃವಲ್ಲ; ಅಹಂ=ನಾನು, ಅವೇತ್ತಾ=ಪ್ರಪಂಚುವನರಿವಾತನಲ್ಲ; ಕಿಂತು=ಮತ್ತೇನಯಾಯೆಂದಡೆ, ಅಹಂ=ನಾನು, ಅದೇಹಃ=ದೇಹರಹಿತನಾಗಿ, ನಿರಂಜನಃ=ನಿರ್ಮಲನಾಗಿದ್ದಾತನು. ಇತಿ=ಹೀಗೆಂದು, ಚಿಂತಯತಃ=ಧ್ಯಾನಿಸುತ್ತಿರ್ದ್ದ ಶಿವಯೋಗಿಗೆ, ಸಂವಿದೇವ=ಶಿವಜ್ಞಾನವೇ, ಸಾಕ್ಷಾತ್=ಪ್ರತ್ಯಕ್ಷವಾಗಿ, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪುದು. ||೫೪||

**ಗ್ರಂಥ||**

**ನಿರಸ್ತಭೇದಜಲ್ಪಸ್ಯ ನಿರೀಹಸ್ಯ ಪ್ರಶಾಮ್ಯತಃ ।**
**ಸ್ವೇ ಮಹಿಮ್ನಿ ವಿಲೀನಸ್ಯ ಕಿಮನ್ಯದ್ ಜ್ಞೇಯಮುಚ್ಯತೇ ॥**

**ಟೀಕು||** ನಿರಸ್ತಭೇದಜಲ್ಪಸ್ಯ="ದ್ವಿತೀಯಾದ್ಭಯಮೇವ ಪಶ್ಯಂತಿ" ಯೆಂಬ ಬೃಹದಾರಣ್ಯಕ ಶ್ರುತಿಯಿಂದೆ ನಿರಾಕರಿಸಲುಪಟ್ಟ ದ್ವೈತವಾಕ್ಯವುಳ್ಳ, ಪ್ರಶಾಮ್ಯತಃ=ರಾಗದ್ವೇಷರಹಿತನಾಗಿ, ಸ್ವೇ ಮಹಿಮ್ನಿ=ತನ್ನ ಸಂಬಂಧವಾದ ಸ್ವಸ್ವರೂಪಮಹಿಮೆಯಲ್ಲಿ, ವಿಲೀನಸ್ಯ=ಅಡಗಿ, ನಿರೀಹಸ್ಯ=ವಿರಕ್ತನಾದ ಶಿವಯೋಗಿಯಿಂದೆ, ಜ್ಞೇಯಂ=ಅರಿಯಲು ಯೋಗ್ಯವಾದ ವಸ್ತು, ಅನ್ಯತ್=ಮತ್ತೊಂದು, ಉಚ್ಯತೇ ಕಿಂ=ಹೇಳಲುಪಡುತ್ತಿರ್ದ್ದಪುದೆಯೇನು? ಹೇಳಲುಪಡಲಿಲ್ಲವೆಂಬುದರ್ಥ. ||೫೫||

**ಸೂತ್ರ||** ಬಳಿಕ ಆ ಸೂತ್ರತ್ರಯಾರ್ಥವನೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||**

**ಏಕೀಭೂತೇ ನಿಜಾಕಾರೇ ಸಂವಿದಾ ನಿಷ್ಪ್ರಪಂಚಯಾ ।**
**ಕೇನ ಕಿಂ ವೇದನೀಯಂ ಸ್ಯಾದ್ವೇತ್ತಾ ಕಃ ಪರಿಭಾಷ್ಯತೇ ॥**

**ಟೀಕು||** ನಿಜಾಕಾರೇ=ಸ್ವಸ್ವರೂಪವು, ನಿಷ್ಪ್ರಪಂಚಯಾ=ತೊಲಗಲುಪಟ್ಟ ಪ್ರಪಂಚುಳ್ಳ, ಸಂವಿದಾ=ಶಿವಜ್ಞಾನದೊಡನೆ, ಏಕೀಭೂತೇ ಸತಿ=ಸಮರಸವಾಗಲಾಗಿ, ಕೇನ=ಆವುದರಿಂದೆ, ಕಿಂ=ಆವ ವಸ್ತುವು, ವೇದನೀಯಂ=ಜ್ಞೇಯವು, ಸ್ಯಾತ್=ಅಹುದು? ತದ್ವೇತ್ತಾ=ಆ ಜ್ಞಾನ ಜ್ಞೇಯವನರಿವ ಜ್ಞಾತೃವು, ಕಃ=ಆರೆಂದು, ಪರಿಭಾಷ್ಯತೇ=ಹೇಳಲುಪಡುತ್ತಿರ್ದ್ದಪನು?

**ತಾತ್ಪರ್ಯ||** "ನಾತಃ ಪರಂ ವೇದಿತವ್ಯಂ ಹಿ ಕಿಂಚಿತ್" ಯೆಂಬ ಶ್ರುತಿಯಿಂದವು, "ವೇದಿತವ್ಯಂ ನ ಕಿಂಚನ" ಯೆಂಬ ಶಿವಾಗಮದಿಂದವು ಶಿವಯೋಗಿಗೆ ತ್ರಿಪುಟಿಯಿಲ್ಲವೆಂಬುದರ್ಥ. ||೫೬||

**ಸೂತ್ರ||** ಬಳಿಕ ನಷ್ಟಾಗಮಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||**

**ಮಹಾಸತ್ತಾ ಮಹಾಸಂವಿದ್ವಿಶ್ವರೂಪಾ ಪ್ರಕಾಶತೇ ।**
**ತದ್ವಿನಾ ನಾಸ್ತಿ ವಸ್ತ್ವೇಕಂ ಭೇದಬುದ್ಧಿಂ ವಿಮುಂಚತಃ ॥**

**ಟೀಕು||** ಮಹಾಸತ್ತಾ=ಮಹಾಸದ್ರೂಪವಾದ, ಮಹಾಸಂವಿತ್=ಬ್ರಹ್ಮಚೈತನ್ಯವು, ವಿಶ್ವರೂಪಾ ಸತೀ=ವಿಶ್ವವನು ಅರಿವ ಆನಂದವೆ ಸ್ವರೂಪವಾಗುತಲು, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪುದು. ತದ್ಭಿನ್ನಾ=ಆ ಚಿತ್ಪ್ರಕಾಶಹೊರತಾಗಿ, ವಸ್ತು ಏಕಂ=ಮತ್ತೊಂದು ವಸ್ತುವು, ಭೇದಬುದ್ಧಿಂ ವಿಮುಂಚತಃ= ದ್ವೈತಬುದ್ಧಿಯನು ಬಿಡುತ್ತಿರ್ದ್ದ ಶಿವಯೋಗಿಗೆ, ನಾಸ್ತಿ=ಇಲ್ಲ. ||೫೭||

ಇತಿ ನಷ್ಟಾಗಮಸ್ಥಲಮ್

## ೩೪. ಪ್ರಾಣಲಿಂಗೀಸ್ಥಲೇ ಆದಿಪ್ರಸಾದಿಸ್ಥಲಮ್

**ಸೂತ್ರ||** ಬಳಿಕ "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ। ಯೋ ವೈ ವೇದಾಂಶ್ಚ । ಪ್ರಹಿಣೋತಿ ತಸ್ಮೈ॥ ತಂ ಹ ದೇವಮಾತ್ಮಬುದ್ಧಿಪ್ರಕಾಶಂ। ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ॥" ಯೆಂಬ ಶ್ವೇತಾಶ್ವತರಶ್ರುತ್ಯರ್ಥವನು ಪ್ರಕಟಿಸುತ್ತ ಆ ಈ ನಷ್ಟಾಗಮ ಸಂಪನ್ನನಾದ ಶಿವಯೋಗಿಯೆ ಸರ್ವರಿಗಾದಿಯಾದ ಶಿವನಪ್ರಸಾದ ಉಳ್ಳಾತನಾದ ಕಾರಣವಾಗಿ ಆದಿಪ್ರಸಾದಿಯೆಂದು ಹೇಳಲುಪಡುತ್ತಿರ್ದ್ದಪಂ.

**ಗ್ರಂಥ||** **ಸರ್ವಾಧಿಷ್ಠಾತೃಕಶ್ಶಂಭುರಾದಿಸ್ತಸ್ಯ ಪ್ರಸಾದತಃ ।**
**ಆದಿಪ್ರಸಾದೀತ್ಯುಕ್ತೋಽಯಂ ನಿರ್ವಿಕಾರಪದೇ ಸ್ಥಿತಃ ॥**

**ಟೀಕು||** ಸರ್ವಾಧಿಷ್ಠಾತೃಕಃ=ತನ್ನ ಅಷ್ಟತನುಗಳಿಂದೆ ಸರ್ವವನು ಅಧಿಷ್ಠಿಸಿಕೊಂಡು ಸರ್ವಾಂತ ರ್ಯಾಮಿಯಾಗಿರ್ದ್ದ, ಶಂಭುಃ=ಪರಮೇಶ್ವರನೆ, ಆದಿಃ=ಸೃಷ್ಟ್ಯಾದಿ ಪಂಚಕೃತ್ಯಕ್ಕೆ ಮೂಲ ಕಾರಣವಾಗಿರ್ದ್ದ ಆತನು, ತಸ್ಯ ಪ್ರಸಾದತಃ=ಆದಿಯಾದ ಪರಮೇಶ್ವರನ ಪ್ರಸಾದದುದೆಸೆಯಿಂದೆ, ನಿರ್ವಿಕಾರಪದೇ=ನಿರ್ವಿ ಕಾರಸ್ಥಾನವಾದ ನಷ್ಟಾಗಮಸ್ಥಲದಲ್ಲಿ, ಸ್ಥಿತಃ=ಇರುತ್ತಿರ್ದ್ದ, ಅಯಂ=ಈ ಶಿವಯೋಗಿಯು, ಆದಿಪ್ರಸಾ ದೀತಿ=ಆದಿಪ್ರಸಾದ ಉಳ್ಳಾತನೆಂದು, ಉಕ್ತಃ=ಹೇಳಲುಪಟ್ಟನು. ||೫೮||

**ಸೂತ್ರ||** ಬಳಿಕ ಆದಿಯಾದ ಶಿವಪ್ರಸಾದ ಮಹತ್ವವನು ಚತುಸ್ಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಅನೇಕಜನ್ಮಶುದ್ಧಸ್ಯ ನಿರಹಂಕಾರಭಾವಿನಃ ।**
**ಅಪ್ರಪಂಚಸ್ಯಾದಿದೇವಃ ಪ್ರಸೀದತಿ ವಿಮುಕ್ತಯೇ ॥**

**ಟೀಕು||** ಅನೇಕಜನ್ಮಶುದ್ಧಸ್ಯ=ಅನೇಕ ಜನ್ಮಂಗಳಿಂದಲು ಶುದ್ಧಾತ್ಮನಾಗಿರ್ದ್ದ, ನಿರಹಂಕಾರ ಭಾವಿನಃ=ತೊಲಗಲುಪಟ್ಟ ಮೂಲಾಹಂಕಾರಭಾವವುಳ್ಳ, ಅಪ್ರಪಂಚಸ್ಯ=ತ್ರಿಪುಟಿರೂಪವಾದ ಜಗತ್ಪ್ರಪಂಚಿಲ್ಲದೆಯಿದ್ದ ಶಿವಯೋಗಿಗೆ, ಆದಿದೇವಃ=ಸಮಸ್ತಕ್ಕೆ ಆದಿಯಾದ ಶಿವನು,

ವಿಮುಕ್ತಯೇ=ಪರಮೋಕ್ಷಕ್ಕೋಸುಗ, ಪ್ರಸೀದತಿ=ಪ್ರಸನ್ನನಾಗುತ್ತಿರ್ದ್ದಪನು. ||೫೯||

**ಗ್ರಂಥ||** **ಶಿವಪ್ರಸಾದ ಸಂಪತ್ತ್ಯಾ ಶಿವಭಾವಮುಪೇಯುಷಿ ।**
**ಶಿವಾದನ್ಯಜ್ಜಗಜ್ಜಾಲಂ ದೃಶ್ಯತೇ ನ ಚ ದೃಶ್ಯತೇ ॥**

**ಟೀಕು||** ಶಿವಪ್ರಸಾದ ಸಂಪತ್ತ್ಯಾ=ಶಿವಪ್ರಸಾದದ ಸಂಪತ್ತಿಯಿಂದೆ, ಶಿವಭಾವಂ=ಶಿವಸ್ವರೂಪವನು, ಉಪೇಯುಷಿ ವಿಷಯೇ=ಎಯ್ದುತ್ತಿರ್ದ್ದವರ ವಿಷಯವಾಗಿ, ಶಿವಾದನ್ಯತ್=ಶಿವನದೆಸೆಯಿಂದೆ ಅನ್ಯವಾಗಿರ್ದ್ದ, ಜಗಜ್ಜಾಲಂ=ಜಗತ್ಸಮೂಹವು, ದೃಶ್ಯತೇ ನದೃಷ್ಯತೇ ಚ=ಕಾಣಲುಪಟ್ಟದಾಗಿಯು ಕಾಣಲುಪಡದೆಯಿದ್ದ ಅದು. ||೬೦||

**ಗ್ರಂಥ||** **ಶಂಭೋಃ ಶಿವಪ್ರಸಾದೇನ ಸಂಸಾರಚ್ಛೇದಕಾರಿಣಾ ।**
**ಮೋಹಗ್ರಂಥಿಂ ವಿನಿರ್ಭಿದ್ಯ ಮುಕ್ತಿಂ ಯಾಂತಿ ವಿವೇಕಿನಃ ॥**

**ಟೀಕು||** ವಿವೇಕಿನಃ=ವಿವೇಕಿಗಳು, ಸಂಸಾರಚ್ಛೇದಕಾರಿಣಾ=ಸಂಸಾರನಾಶವನು ಮಾಡುತ್ತಿರ್ದ್ದ, ಶಂಭೋಃ= ಪರಶಿವನ, ಶಿವಪ್ರಸಾದೇನೈವ=ಶಿವಪ್ರಸಾದದಿಂದವೆ, ಮೋಹಗ್ರಂಥಿಂ=ಅಜ್ಞಾನಗ್ರಂಥಿಯನು, ವಿನಿರ್ಭಿದ್ಯ=ಒಡೆದು, ಮುಕ್ತಿಂ=ಪರಮೋಕ್ಷವನು, ಯಾಂತಿ=ಎಯ್ದುತ್ತಿರ್ದ್ದಪರು. ||೬೧||

**ಗ್ರಂಥ||** **ವಿನಾಪ್ರಸಾದಮೀಶಸ್ಯ ಸಂಸಾರೋ ನ ನಿವರ್ತತೇ ।**
**ವಿನಾ ಸೂರ್ಯೋದಯಂ ಲೋಕೇ ಕುತಃ ಸ್ಯಾತ್ತಮಸೋ ಲಯಮ್ ॥**

**ಟೀಕು||** ಈಶಸ್ಯ=ಪರಮೇಶ್ವರನ, ಪ್ರಸಾದಂ ವಿನಾ=ಪ್ರಸಾದ ಹೊರತಾಗಿ, ಸಂಸಾರಃ=ಭವರೋಗವು, ನ ನಿವರ್ತತೇ=ತೊಲಗುತ್ತಿರದು. ಲೋಕೇ=ಲೋಕದಲ್ಲಿ, ಸೂರ್ಯೋದಯಂ ವಿನಾ= ಸೂರ್ಯೋದಯ ಹೊರತಾಗಿ, ತಮಸಃ=ಅಂಧಕಾರದ, ಲಯಂ=ನಾಶವು, ಕುತಃ ಸ್ಯಾತ್=ಎಲ್ಲಿ ಅಹುದು? ಎಲ್ಲಿಯೂ ಆಗದೆಂಬುದರ್ಥ. ||೬೨||

**ಸೂತ್ರ||** ಬಳಿಕ ಸರ್ವಾತ್ಮರಲ್ಲಿ ಸಮಾನವಾದ ಕೃಪಾಪ್ರಸಾದವನು ಸೂಚಿಸಿ ಆದಿಪ್ರಸಾದಿಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಸರ್ವಾನುಗ್ರಾಹಕಃ ಶಂಭುಃ ಕೇವಲಂ ಕೃಪಯಾ ಪ್ರಭುಃ ।**
**ಮೋಚಯೇತ್ಸಕಲಾನ್ ಜಂತೂನ್ನ ಕಿಂಚಿದಿಹ ಕಾರಣಮ್ ॥**

**ಟೀಕು॥** ಪ್ರಭುಃ=ಸ್ವತಂತ್ರಶೀಲನಾದ, ಸರ್ವಾನುಗ್ರಾಹಕಃ=ಸರ್ವರನು ಅನುಗ್ರಹಿಸುತ್ತಿರ್ದ್ದ, ಶಂಭುಃ=ಪರಮೇಶ್ವರನು, ಕೇವಲಂ ಕೃಪಯಾ=ಬರಿಯ ಕೃಪಾಪ್ರಸಾದದಿಂದವೆ, ಸಕಲಾನ್ ಜಂತೂನ್= ಸಮಸ್ತ ಪ್ರಾಣಿಗಳನು, ಮೋಚಯೇತ್=ಶಕ್ತಿಪಾತಾನುಸಾರವಾಗಿ ಪಾಶಮುಕ್ತರನು ಮಾಡುವನು. ಇಹ ವಿಷಯೇ=ಈ ಪಾಶವಿಮೋಚನ ವಿಷಯವಾಗಿ, ಶಂಭೋಃ=ಶಿವನಿಗೆ, ಕಿಂಚಿತ್ಕಾರಣಂ= ಒಪ್ಪಚ್ಚಿಕಾರಣವು, ನ=ಇಲ್ಲ. ಶಿವನಿಗೆ ಸರ್ವಾನುಗ್ರಾಹಕತ್ವವು ಸ್ವಭಾವ ಸಿದ್ಧವೆಂಬುದರ್ಥ. ॥೬೩॥

ಇತಿ ಆದಿಪ್ರಸಾದಿಸ್ಥಲಮ್

## ೩೫. ಪ್ರಾಣಲಿಂಗಿಸ್ಥಲೇ ಅಂತ್ಯಪ್ರಸಾದಿಸ್ಥಲಮ್

**ಸೂತ್ರ॥** ಬಳಿಕ "ಅಣೋರಣೀಯಾನ್ಮಹತೋ ಮಹೀಯಾನ್
ಆತ್ಮಾಸ್ಯ ಜಂತೋರ್ನಿಹಿತೋ ಗುಹಾಯಾಮ್ ।
ತಮಕ್ರತುಃ ಪಶ್ಯತಿ ವೀತಶೋಕೋ
ಧಾತುಃ ಪ್ರಸಾದಾನ್ಮಹಿಮಾನಮಾತ್ಮನಃ"॥ ಯೆಂಬ ಕಠವಲ್ಲೀಶ್ರುತ್ಯರ್ಥವನು ಸೂಚಿಸುತ್ತ ಆ ಆದಿಪ್ರಸಾದಸಂಪನ್ನನಾದ ಶಿವಯೋಗಿಯೇ ಸರ್ವವ್ಯಯಕ್ಕಾಶ್ರಯವಾಗಿ ಅಂತ್ಯವಾದ ಶಿವನ ಅನುಭವಪ್ರಸಾದ ಉಳ್ಳಾತನಾದ ಕಾರಣವಾಗಿ ಅಂತ್ಯಪ್ರಸಾದಿಯೆಂದು ಹೇಳಲು ಪಡುತ್ತಿರ್ದ್ದಪಂ.

**ಗ್ರಂಥ॥** **ಲಯಃ ಸರ್ವಪದಾರ್ಥಾನಾಮಂತ್ಯ ಇತ್ಯುಚ್ಯತೇ ಬುಧೈಃ ।**
**ಪ್ರಸಾದೋಽನುಭವಸ್ತಸ್ಯ ತದ್ವಾನಂತ್ಯಪ್ರಸಾದವಾನ್ ॥**

**ಟೀಕು॥** ಸರ್ವಪದಾರ್ಥಾನಾಂ=ಜಗಜ್ಜಾಲರೂಪವಾದ ಸಮಸ್ತಪದಾರ್ಥಂಗಳ, ಲಯಃ= ಲಯಕ್ಕಾಶ್ರಯವಾದ ಶಿವನೆ, ಅಂತ್ಯ ಇತಿ=ಸರ್ವಕ್ಕೆಯು ಅಂತ್ಯವೆಂದು, ಬುಧೈಃ=ವಿದ್ವಾಂಸರಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ತಸ್ಯ=ಸರ್ವಕ್ಕೆ ಅಂತ್ಯವಾದ ಆ ಶಿವನ, ಅನುಭವಃ=ಸಾಕ್ಷಾತ್ಕಾರ ರೂಪವಾದ ಅನುಭವವೆ, ಪ್ರಸಾದಃ=ಪ್ರಸಾದವು. ತದ್ವಾನ್=ಆ ಪ್ರಸಾದವುಳ್ಳ ಈ ಆದಿ ಪ್ರಸಾದಿಯೆ, ಅಂತ್ಯಪ್ರಸಾದವಾನ್=ಅಂತ್ಯಪ್ರಸಾದಿಯೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ॥೬೪॥

**ಸೂತ್ರ॥** ಬಳಿಕ ಸರ್ವಪದಾರ್ಥಂಗಳ ಲಯಪ್ರಕಾರವನು, ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪನು.

**ಗ್ರಂಥ॥** **ದೇವತಿರ್ಯಙ್ಮನುಷ್ಯಾದಿವ್ಯವಹಾರವಿಕಲ್ಪನಾ ।**
**ಮಾಯಾಕೃತಾ ಪರೇ ತತ್ತ್ವೇ ತಲ್ಲಯೇ ತತ್ಕ್ಷಯೋ ಭವೇತ್ ॥**

**ಟೀಕು||** ದೇವತಿರ್ಯಜ್ಮನುಷ್ಯಾದಿವ್ಯವಹಾರವಿಕಲ್ಪಾ ದೇವತೆಗಳು ತಿರ್ಯಕ್‌ಜಾತಿ ಮನುಷ್ಯರೇ ಮೊದಲಾಗುಳ್ಳವರುಗಳ ವ್ಯವಹಾರವಿಕಲ್ಪವು, ಮಾಯಾಕೃತಾ=ಮಾಯೆಯಿಂದೆ ಮಾಡಲುಪಟ್ಟ ಅದು, ಪರೇ ತತ್ತ್ವೇ=ಸರ್ವೋತ್ಕರ್ಷವಾದ ಶಿವತತ್ತ್ವದಲ್ಲಿ, ತಲ್ಲಯೇ ಸತಿ=ಆ ಮಾಯೆಗೆ ಲಯವಾಗಲಾಗಿ, ತತ್ಕ್ಷಯಃ=ಆ ಮಾಯಾಕಾರ್ಯವಾದ ಸಮಸ್ತ ಪದಾರ್ಥಂಗಳ ನಾಶವು, ಭವೇತ್= ಅಹುದು. ||೬೫||

**ಗ್ರಂಥ||** **ಸಾಕ್ಷಾತ್ಕೃತೇ ಪರೇ ತತ್ತ್ವೇ ಸಚ್ಚಿದಾನಂದಲಕ್ಷಣೇ ।**
**ಕ್ವ ಪದಾರ್ಥಪರಿಜ್ಞಾನಂ ಕುತೋ ಜ್ಞಾತೃತ್ವಸಂಭವಃ ॥**

**ಟೀಕು||** ಸಚ್ಚಿದಾನಂದಲಕ್ಷಣೇ=ಸಚ್ಚಿದಾನಂಗಳೇ ಕುರುಹಾಗುಳ್ಳ, ಪರೇ ತತ್ತ್ವೇ=ಪರಶಿವ ತತ್ತ್ವವು, ಸಾಕ್ಷಾತ್ಕೃತೇ ಸತಿ=ಅಪರೋಕ್ಷದಿಂದೆ ಸಾಕ್ಷಾತ್ಕರಿಸಲುಪಡಲಿಕೆಯಾಗಿ, ಪದಾರ್ಥಪರಿಜ್ಞಾನಂ= ಮಾಯಾಕಲ್ಪಿತವಾಗಿ ಜ್ಞೇಯರೂಪವಾದ ಪದಾರ್ಥಂಗಳ ಜ್ಞಾನವು, ಕ್ವ=ಎತ್ತಣದು? ಜ್ಞಾತೃತ್ವಸಂಭವಃ=ಜ್ಞಾನಜ್ಞೇಯಂಗಳಿಂದನ್ಯವಾದ ಜ್ಞಾತೃತ್ವದ ಉತ್ಪತ್ತಿಯು, ಕುತಃ=ಎತ್ತಣದು? ||೬೬||

**ಸೂತ್ರ||** ಬಳಿಕ ತ್ರಿಪುಟಿರಹಿತನಾದ ಜೀವನ್ಮುಕ್ತನಿಗೆ ಜಗತ್ಪ್ರಪಂಚು ತೋರದೆಂದು ದೃಷ್ಟಾಂತ ಪೂರ್ವಕವಾಗಿ ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಪದಾರ್ಥಾಃ ಸ್ವಪ್ನ ಸಂದೃಷ್ಟಾ ಯಥಾ ಬೋಧೇ ಲಯಂ ಗತಾಃ ।**
**ತಥಾ ಸಂಸಾರಜಾಃ ಭಾವಾ ಲೀಯಂತೇ ಬ್ರಹ್ಮಬೋಧತಃ ॥**

**ಟೀಕು||** ಸ್ವಪ್ನಸಂದೃಷ್ಟಾಃ=ಸ್ವಪ್ನದಲ್ಲಿ ಲೇಸಾಗಿ ಕಾಣಲುಪಟ್ಟ, ಪದಾರ್ಥಾಃ=ಸಮಸ್ತ ಪದಾರ್ಥಂಗಳು, ಬೋಧೇಸತಿ=ಎಚ್ಚರಿರಲಿಕೆಯಾಗಿ, ಯಥಾ=ಹೇಗೆ, ಲಯಂ ಗತಾಃ=ಲಯವನು ಎಯ್ದಿರ್ದ್ದ ಅವು, ತಥಾ=ಹಾಗೆಯೇ, ಸಂಸಾರಜಾಃ ಭಾವಾಃ=ಸಂಸಾರದಲ್ಲಿ ಹುಟ್ಟಿದ ವ್ಯಾಪಾರಂಗಳು, ಬ್ರಹ್ಮಬೋಧತಃ= ಬ್ರಹ್ಮಜ್ಞಾನದದೆಸೆಯಿಂದೆ, ಲೀಯಂತೇ=ಕೆಡುತ್ತಿರ್ದಪವು. ||೬೭||

**ಗ್ರಂಥ||** **ಸುಷುಪ್ತಸ್ಯ ಯಥಾ ವಸ್ತು ನ ಕಿಂಚಿದಪಿ ಭಾಸತೇ ।**
**ತಥಾ ಮುಕ್ತಸ್ಯ ಜೀವಸ್ಯ ನ ಕಿಂಚಿದ್ವಸ್ತು ದೃಶ್ಯತೇ ॥**

**ಟೀಕು||** ಸುಷುಪ್ತಸ್ಯ=ಸುಷುಪ್ತಿಯುಳ್ಳ ಆತನಿಗೆ, ಕಿಂಚಿದಪಿ ವಸ್ತು=ಒಂದು ವಸ್ತುವು, ಯಥಾ=ಹೇಗೆ, ನ ಭಾಸತೇ=ಒಪ್ಪುತ್ತಿರದು. ತಥಾ=ಹಾಗೆಯೇ, ಜೀವಸ್ಯ ಮುಕ್ತಸ್ಯ=ಜೀವನ್ಮುಕ್ತನಿಗೆ, ಕಿಂಚಿದ್ವಸ್ತು=ಒಂದು ಪದಾರ್ಥವು, ನ ದೃಶ್ಯತೇ=ಕಾಣಲುಪಡುತ್ತಿರದು. ||೬೮||

**ಸೂತ್ರ||** ಬಳಿಕ ಜೀವನ್ಮುಕ್ತನ ಸ್ವರೂಪವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಯಥಾಽಽಕಾಶಮವಿಚ್ಛಿನ್ನಂ ನಿರ್ವಿಕಾರಂ ಸ್ವರೂಪತಃ ।**
**ತಥಾ ಮುಕ್ತಸ್ಯ ಜೀವಸ್ಯ ಸ್ವರೂಪಮವಶಿಷ್ಯತೇ ॥**

**ಟೀಕು||** ಆಕಾಶಂ=ಆಕಾಶವು, ಸ್ವರೂಪತಃ=ಸ್ವರೂಪಿನದೆಸೆಯಿಂದೆ, ಯಥಾ=ಹೇಗೆ, ಅವಿಚ್ಛಿನ್ನಂ=ಅಖಂಡಿತವಾಗಿ, ನಿರ್ವಿಕಾರಂ=ವಿಕಾರರಹಿತವಾಗಿದ್ದ ಅದು. ತಥಾ=ಹಾಗೆಯೇ, ಜೀವಸ್ಯ ಮುಕ್ತಸ್ಯ=ಜೀವನ್ಮುಕ್ತನ, ಸ್ವರೂಪಂ=ಸ್ವರೂಪವು, ಅವಶಿಷ್ಯತೇ=ಅಖಂಡಿತವಾಗಿ ನಿರ್ವಿಕಾರವಾಗಿ ಪ್ರಕಾಶಿಸುತ್ತಿರ್ದಪುದು. ||೬೯||

**ಗ್ರಂಥ||** **ನ ಕಿಂಚಿದಪಿ ಮುಕ್ತಸ್ಯ ದೃಶ್ಯಂ ಕರ್ತವ್ಯಮೇವ ವಾ ।**
**ಸುಖಸ್ಫೂರ್ತಿಸ್ವರೂಪೇಣ ನಿಶ್ಚಲಾ ಸ್ಥಿತಿರುಚ್ಯತೇ ॥**

**ಟೀಕು||** ಮುಕ್ತಸ್ಯ=ಜೀವನ್ಮುಕ್ತನಿಗೆ, ದೃಶ್ಯಂ=ಜ್ಞಾನೇಂದ್ರಿಯವ್ಯಾಪಾರದಿಂದೆ ನೋಡಲು ಯೋಗ್ಯವಾಗಿದ್ದ ಅದು, ಕರ್ತವ್ಯಮೇವ ವಾ=ಕರ್ಮೇಂದ್ರಿಯವ್ಯಾಪಾರದಿಂದೆ ಮಾಡಲುಯೋಗ್ಯ ವಾಗಿದ್ದುದಾಯಿತ್ತಾದೊಡೆಯು, ಕಿಂಚಿದಪಿ=ಒಪ್ಪಚ್ಚೆಯು, ನಾಸ್ತಿ=ಇಲ್ಲ. ಕಿಂತು=ಮತ್ತೇನಯಾ ಯೆಂದಡೆ, ಸುಖಸ್ಫೂರ್ತಿಃ ಸ್ವರೂಪೇಣ=ಪರಿಪೂರ್ಣವಾದ ಸುಖಸ್ವರೂಪಿನಿಂದೆ, ನಿಶ್ಚಲಾಃ ಸ್ಥಿತಿಃ=ನಿಶ್ಚಲವಾದ ಸ್ಥಿತಿಯು, ಉಚ್ಯತೇ=ಹೇಳಲುಪಡುತ್ತಿರ್ದಪುದು. ||೭೦||

**ಸೂತ್ರ||** ಬಳಿಕ ಅಂತ್ಯಪ್ರಸಾದಿಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ||** **ಶಿವಾದ್ವೈತಪರಿಜ್ಞಾನಶಿಥಿಲಾಶೇಷವಸ್ತುನಃ ।**
**ಕೇವಲಂ ಸಂವಿದುಲ್ಲಾಸದರ್ಶಿನಃ ಕೇನ ಕಿಂ ಭವೇತ್ ॥**

**ಟೀಕು||** ಶಿವಾದ್ವೈತಪರಿಜ್ಞಾನಶಿಥಿಲಾಶೇಷವಸ್ತುನಃ=ಶಿವಾದ್ವೈತ ಜ್ಞಾನದಿಂದೆ ಸಡಿಲಿದ ಸಮಸ್ತ ಪದಾರ್ಥಂಗಳುಳ್ಳ, ಕೇವಲಂ=ಬರಿಯ, ಸಂವಿದುಲ್ಲಾಸ ದರ್ಶಿನಃ=ಅರಿವಿನ ಉಲ್ಲಾಸವನು ನೋಡುತ್ತಿರ್ದ ಅಂತ್ಯಪ್ರಸಾದಿಗೆ, ಕೇನ=ಆವಾತನಿಂದೆ, ಕಿಂ=ಏನು ಪ್ರಯೋಜನವು, ಭವೇತ್=ಅಹುದು? ಆರಿಂದಲು ಏನು ಪ್ರಯೋಜನವಿಲ್ಲವೆಂಬುದರ್ಥ.

**ತಾತ್ಪರ್ಯ||** ಉಪಕ್ರಮೋಪಸಂಹಾರರೂಪವಾದ ಮೀಮಾಂಸನ್ಯಾಯದಿಂದೆ, ಈ ಆದ್ಯಂತಪ್ರಸಾದಲಕ್ಷಣವನು ತಿಳಿವುದು. ||೭೧||

**ಇತಿ ಅಂತ್ಯಪ್ರಸಾದಿಸ್ಥಲಮ್**

## ೩೬. ಪ್ರಾಣಲಿಂಗಿಸ್ಥಲೇ ಸೇವ್ಯಪ್ರಸಾದಿಸ್ಥಲಮ್

**ಸೂತ್ರ॥** ಬಳಿಕ "ಅಂತಶ್ಶರೀರ ಏವಾಯಂ ಬಾಹ್ಯ ಏವ ನ ಸಂಸ್ಥಿತಃ।
ಮಹಾನಂದಪ್ರಸಾದೋಽಯಂ ಸರ್ವತ್ರೈವಾವಭಾಸತೇ"॥ ಯೆಂಬ ಸರ್ವಜ್ಞಾನೋತ್ತರಾರ್ಥವನು ಪ್ರಕಟಿಸುತ್ತ ಸೇವ್ಯರಾದ ಶಿವ ಗುರುಗಳ ಪ್ರಸಾದಸಂಪನ್ನನಾದ ಈ ಅಂತ್ಯ ಪ್ರಸಾದಿಯೆ ಸೇವ್ಯಪ್ರಸಾದಿಯೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ॥** **ಸೇವ್ಯೋ ಗುರುಃ ಸಮಸ್ತಾನಾಂ ಶಿವ ಏವ ನ ಸಂಶಯಃ ।**
**ಪ್ರಸಾದೋಽಸ್ಯ ಪರಾನಂದಪ್ರಕಾಶಃ ಪರಿಕೀರ್ತ್ಯತೇ ॥**

**ಟೀಕು॥** ಸಮಸ್ತಾನಾಂ=ಸರ್ವರಿಗೂ, ಸೇವ್ಯೋ ಗುರುಃ=ಸೇವ್ಯನಾದ ಶ್ರೀಗುರುವು, ಶಿವ ಏವ=ಶಿವನೆ, ನ ಸಂಶಯಃ=ಸಂದೇಹವಿಲ್ಲ. ಅಸ್ಯ ಪ್ರಸಾದಃ=ಈ ಶ್ರೀ ಗುರುರೂಪವಾಗಿರ್ದ ಶಿವನ ಪ್ರಸಾದವೆ, ಪರಾನಂದ ಪ್ರಕಾಶಃ=ಪರಾನಂದಪ್ರಕಾಶವೆಂದು, ಪರಿಕೀರ್ತ್ಯತೇ=ಹೇಳಲುಪಡುತ್ತಿರ್ದಪುದು. ॥೭೨॥

**ಗ್ರಂಥ॥** **ಸೇವ್ಯೋ ಗುರುಃ ಸ್ಮೃತೋ ಹ್ಯಸ್ಯ ಪ್ರಸಾದೋಽನುಭವೋ ಮತಃ ।**
**ತದೇಕಾವೇಶರೂಪೇಣ ತದ್ವಾನ್ ಸೇವ್ಯಪ್ರಸಾದವಾನ್ ॥**

**ಟೀಕು॥** ಗುರುಃ=ಶಿವಸ್ವರೂಪನಾದ ಶ್ರೀಗುರುವೇ, ಸೇವ್ಯಃ=ಸೇವ್ಯನೆಂದು, ಸ್ಮೃತಃ= ನೆನೆಯಲುಪಟ್ಟನು. ಅಸ್ಯ=ಈ ಶಿವರೂಪನಾದ ಶ್ರೀ ಗುರುವಿನ, ಅನುಭವಃ=ಉಪದೇಶಾನುಭವವೆ, ಪ್ರಸಾದಃ=ಪ್ರಸಾದವೆಂದು, ಮತಃ=ಸಂಮತವು. ತದೇಕಾವೇಶರೂಪೇಣ=ಆ ಪ್ರಸಾದದಲ್ಲಿಯ ಏಕದೇಶಸ್ಥರೂಪಿನಿಂದೆ, ತದ್ವಾನ್=ಆ ಪ್ರಸಾದವುಳ್ಳ ಆ ಅಂತ್ಯಪ್ರಸಾದಿಯೆ, ಸೇವ್ಯಪ್ರಸಾದವಾನ್= ಸೇವ್ಯಪ್ರಸಾದಿಯೆಂದು, ಹಿ=ಪ್ರಸಿದ್ಧವು. ॥೭೩॥

**ಗ್ರಂಥ॥** **ಗುರುರೇವ ಪರಂ ತತ್ತ್ವಂ ಪರತತ್ತ್ವಂ ಗುರುಃ ಸ್ಮೃತಃ ।**
**ತದೇಕತ್ವಾನುಭಾವೇನ ನ ಕಿಂಚಿದವಶಿಷ್ಯತೇ ॥**

**ಟೀಕು॥** ಗುರುರೇವ=ಶ್ರೀಗುರುವೆ, ಪರಂ ತತ್ತ್ವಂ=ಪರಶಿವತತ್ತ್ವವು. ಪರಂತತ್ತ್ವಂ=ಪರಶಿವತತ್ತ್ವವೆ, ಗುರುಃ=ಶ್ರೀ ಗುರುವೆಂದು, ಸ್ಮೃತಃ=ನೆನೆಯಲುಪಟ್ಟಿತ್ತು. ತದೇಕತ್ವಾನುಭಾವೇನ=ಆ ಶ್ರೀಗುರುಶಿವರೆ ಐಕ್ಯರೂಪವಾದ ಬುದ್ಧಿ ನಿಶ್ಚಯದಿಂದೆ, ಕಿಂಚಿತ್=ಒಪ್ಪಚ್ಚಿಯು, ನಾವಶಿಷ್ಯತೇ=ಉಳುಮೆಯಾಗುತ್ತಿರದು. ॥೭೪॥

**ಸೂತ್ರ||** ಬಳಿಕ ಪರಮಾನಂದಿಯಾದ ಸೇವ್ಯಪ್ರಸಾದಿಗೆ ಆವೆಡೆಯಲ್ಲಿಯು ಪ್ರೀತಿಯಿಲ್ಲವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಅಪರಿಚ್ಛೇದ್ಯಮಾತ್ಮಸ್ಥಮವಾಙ್ಮನಸಗೋಚರಮ್ ।**
**ಆನಂದಂ ಪಶ್ಯತಾಂ ಪುಂಸಾಂ ರತಿರನ್ಯತ್ರ ಕಾ ಭವೇತ್ ॥**

**ಟೀಕು||** ಅಪರಿಚ್ಛೇದ್ಯಂ=ಖಂಡಿತವಿಲ್ಲದೆ, ಅವಾಙ್ಮನಸಗೋಚರಂ=ವಾಙ್ಮನಕ್ಕೆ ವಿಷಯವಲ್ಲದೆಯಿರ್ದ್ದ, ಆತ್ಮಸ್ಥಮಾನಂದಂ=ಸ್ವಸ್ವರೂಪವಾಗಿರುತ್ತಿರ್ದ್ದ ಪರಮಾನಂದವನು, ಪಶ್ಯತಾಂ ಪುಂಸಾಂ=ಅಪರೋಕ್ಷವಾಗಿ ಕಾಣುತ್ತಿರ್ದ್ದ ಪುರುಷರಿಗೆ, ಅನ್ಯತ್ರ=ನಿಜಾನಂದದಿಂದನ್ಯವಾದ ವಿಷಯದಲ್ಲಿ, ರತಿಃ=ಬಯಕೆಯು, ಕಾ ಭವೇತ್=ಆವುದಹುದು? ಆವ ಬಯಕೆಯೂ ಇಲ್ಲವೆಂಬುದರ್ಥ. **||೭೫||**

**ಗ್ರಂಥ||** **ಜ್ಞಾನಾಮೃತೇನ ತೃಪ್ತಸ್ಯ ಕಿಮನ್ಯೈರ್ಭೋಜ್ಯವಸ್ತುಭಿಃ ।**
**ಜ್ಞಾನಾದೇವ ಪರಾನಂದಂ ಪ್ರಕಾಶಯತಿ ಸಚ್ಛಿವಃ ॥**

**ಟೀಕು||** ಜ್ಞಾನಾಮೃತೇನ=ಅರಿವೆಂಬ ಅಮೃತದಿಂದೆ, ತೃಪ್ತಸ್ಯ=ಸಂತುಷ್ಟನಾದ ಶಿವಯೋಗಿಗೆ, ಅನ್ಯೈಃ=ಚಿತ್ಪೀಯೂಷದಿಂದೆ ಭಿನ್ನವಾದ, ಭೋಜ್ಯವಸ್ತುಭಿಃ=ಭೋಗಿಸಲುಯೋಗ್ಯವಾದ ಪದಾರ್ಥಂಗಳಿಂದೆ, ಕಿಂ=ಏನು ಪ್ರಯೋಜನವು? ಏನೂ ಪ್ರಯೋಜನವಿಲ್ಲವೆಂಬುದರ್ಥ, ಸಚ್ಛಿವಃ="ಸತ್ಯಂ ಜ್ಞಾನಮನಂತಂ ಬ್ರಹ್ಮ" ಯೆಂದು ಶ್ರುತಿಯುಂಟಾಗಿ ನಿತ್ಯಪರಿಪೂರ್ಣತ್ವದಿಂದ ಸದೃಶವಾದ ಶಿವನು, ಜ್ಞಾನಾದೇವ="ವಿಜ್ಞಾನಮಾನಂದಂ ಬ್ರಹ್ಮ"ಯೆಂದು ಶ್ರುತಿಯುಂಟಾಗಿ, ನಿತ್ಯಪರಿಪೂರ್ಣವಾದ ತನ್ನರಿವಿನದೆಸೆಯಿಂದವೆ, ಪರಾನಂದಂ="ಆನಂದೋ ಹ್ಯಾತ್ಮಾ, 'ಅಯಮಾತ್ಮಾಬ್ರಹ್ಮತತ್ಪರಂ', ಬ್ರಹ್ಮತತ್ಪರಂ ಬ್ರಹ್ಮಸ ಏಕಃ ಸ ಏಕಃ ಸ ಏಕೋ ರುದ್ರಃ ಸ ಈಶಾನಃ ಸ ಭಗವಾನ್ ಸ ಮಹೇಶ್ವರಃ ಸ ಮಹಾದೇವಃ" ಯೆಂದು ಶ್ರುತಿಯುಂಟಾಗಿ ನಿತ್ಯಪರಿಪೂರ್ಣಸ್ವರೂಪವಾದ ತನ್ನ ಪರಮಾನಂದವನು, ಪ್ರಕಾಶಯತಿ=ಪ್ರಕಾಶಿಸುತ್ತಿರ್ದ್ದಪನು.

**ತಾತ್ಪರ್ಯ||** ಅಗ್ನಿಗೆ ಪ್ರಕಾಶೋಷ್ಣಂಗಳು ಹೇಗೆ ಗುಣಧರ್ಮಗಳು, ಹಾಗೆಯೇ "ಲಿಂಗಂ ಶಿವಾತ್ಮಕಂ ಬ್ರಹ್ಮ" ಯೆಂಬಾಚಾರ್ಯ ವಾಕ್ಯವುಂಟಾಗಿ ವೇದಾಗಮ ಷಡುಸ್ಥಲಂಗಳಲ್ಲಿ ಪ್ರತಿಪಾದ್ಯಮಾನವಾದ ಪರಬ್ರಹ್ಮಪರಶಿವ ಮಹಾಲಿಂಗ ಪರ್ಯಾಯನಾಮವುಳ್ಳ ಮಹಾಚಿದಗ್ನಿಗೆ ನಿತ್ಯಪರಿಪೂರ್ಣವಾದ ಸದ್ರೂಪಾನಂದರೂಪುಗಳನು, ಗುಣಧರ್ಮಂಗಳನಾಗಿ ಉಪದೇಶದಿಂದೆ ತಿಳಿವುದು. ಅದೇನು ಕಾರಣವೆಂದಡೆ ಜಡವಾದ ಮಾಯಾತತ್ತ್ವ ನಿತ್ಯತ್ವ ಪರಿಪೂರ್ಣವಿಲ್ಲದ ಆ ಸತ್ತು, ಆ ಚಿತ್ತು, ಆನಂದವೆ ಸ್ವರೂಪವಾಗಿರ್ದ್ದ ಅದು ಚೈತನ್ಯವಾದ ಶಿವತತ್ತ್ವವೆ ನಿತ್ಯಪರಿಪೂರ್ಣವಾದ ಸಚ್ಚಿದಾನಂದವೆ ಸ್ವರೂಪವಾಗಿರ್ದ್ದ ಅದು ಆ ಉಭಯಸ್ವರೂಪವುಳ್ಳ ಜಡಾಜಡ ಸಂಯುಕ್ತನಾದ ಚಿದಾಭಾಸನೆ ವೇದಾಗಮ ಷಡುಸ್ಥಲಂಗಳಲ್ಲಿ ಪ್ರತಿಪಾದ್ಯಮಾನವಾದ ಉಪಾಧಿವಶದಿಂದಲಾದ

ಪರ್ಯಾಯನಾಮವುಳ್ಳಾತನು. ಈ ಜಡಾಜಡಯೋಗವನು ಪಾರಂಪರ್ಯೋಪದೇಶ ಸ್ವಾನುಭವಂಗಳಿಂದೆ ತಿಳಿದು ಬೆಚ್ಚಿದುದೆ ಪರಮೋಕ್ಷವು. ಈ ರಹಸ್ಯವನು ಈ ವೀರಶೈವಶಾಸ್ತ್ರದ ಉಪಕ್ರಮೋಪಸಂಹಾರಂಗಳಲ್ಲಿ ಸಂಬಂಧಿಸಿಕೊಂಬುದು. ಗ್ರಂಥವಿಸ್ತಾರವಾದೀತೆಂದು ಸಂಮತಿಯ ಬರೆದುದಿಲ್ಲ. ||೭೬||

**ಸೂತ್ರ||** ಬಳಿಕ ಆ ಅರ್ಥವನೆ ವಿಶೇಷಿಸುತ್ತಿರ್ದಪಂ.

**ಗ್ರಂಥ||** **ಮುಕ್ತಿರೇವ ಪರಾ ತೃಪ್ತಿಃ ಸಚ್ಚಿದಾನಂದಲಕ್ಷಣಾ ।**
**ನಿತ್ಯತೃಪ್ತಸ್ಯ ಮುಕ್ತಸ್ಯ ಕಿಮನ್ಯೈರ್ಭೋಗಸಾಧನೈಃ ॥**

**ಟೀಕು||** ಸಚ್ಚಿದಾನಂದ ಲಕ್ಷಣಾ=ನಿತ್ಯಪರಿಪೂರ್ಣವಾದ ಸಚ್ಚಿದಾನಂದವೆ ಕುರುಹಾಗುಳ್ಳ, ಮುಕ್ತಿರೇವ=ಪರಮುಕ್ತಿಯೆ, ಪರಾ ತೃಪ್ತಿಃ=ಪರಮತೃಪ್ತಿಯು, ಭವೇತ್=ಅಹುದು. ನಿತ್ಯತೃಪ್ತಸ್ಯ ಮುಕ್ತಸ್ಯ=ಸರ್ವಜ್ಞತ್ವ ಅನಾದಿಬೋಧತ್ವ ಸ್ವತಂತ್ರತ್ವ ಅಲುಪ್ತಶಕ್ತಿತ್ವ ಅನಂತ ಶಕ್ತಿತ್ವಂಗಳಿಂದೆ ಉಪಲಕ್ಷಿತವಾದ ನಿತ್ಯತೃಪ್ತಿಯುಳ್ಳ ಪರಮುಕ್ತಿಗೆ, ಅನ್ಯೈಃ ಭೋಗಸಾಧನೈಃ=ಉಳಿದ ಬೈಂದವಮಾಯಾ ಮಯವಾದ ಭೋಗಸಾಧನಂಗಳಿಂದೆ, ಕಿಂ=ಏನು ಪ್ರಯೋಜನವು. ಏನೂ ಪ್ರಯೋಜನವಿಲ್ಲ ವೆಂಬುದರ್ಥ. ||೭೭||

**ಸೂತ್ರ||** ಬಳಿಕ ಆ ಪರಮುಕ್ತನಿಗೆ ಒಳಹೊರಗೆ ಆವ ಕರ್ಮವುಯಿಲ್ಲವೆಂದು ಹೇಳುತ್ತಿರ್ದಪಂ.

**ಗ್ರಂಥ||** **ನ ಬಾಹ್ಯಕರ್ಮ ತಸ್ಯಾಸ್ತಿ ನ ಚಾಂತರ್ನೈವ ಕುತ್ರಚಿತ್ ।**
**ಶಿವೈಕ್ಯಜ್ಞಾನರೂಢಸ್ಯ ದೇಹಭ್ರಾಂತಿಂ ವಿಮುಂಚತಃ ॥**

**ಟೀಕು||** ಶಿವೈಕ್ಯಜ್ಞಾನರೂಢಸ್ಯ=ಸ್ವರೂಪಹಾನಿಸ್ವರೂಪವೃದ್ಧಿಯಿಲ್ಲದೆ ಸಮಾನ ಸಮರಸವಾಗಿ ಸಜಾತೀಯವಾದ ಶಿವೈಕ್ಯಜ್ಞಾನವನುಯೇರಿ, ದೇಹಭ್ರಾಂತಿಂ=ಶರೀರಭ್ರಾಂತಿಯನು ವಿಮುಂಚತಃ=ಬಿಡುತ್ತಿರ್ದ, ತಸ್ಯ=ಆ ಸೇವ್ಯಪ್ರಸಾದಿಗೆ, ಬಾಹ್ಯಕರ್ಮ=ಬಹಿರಂಗದಲ್ಲಿ ಪೂಜಾದಿ ಕರ್ಮವು, ನ=ಇಲ್ಲ. ಅಂತಶ್ಚ=ಅಂತರಗಂದಲ್ಲಿಯು, ಕರ್ಮ=ಧ್ಯಾನಾದಿ ಕರ್ಮವು, ನ=ಇಲ್ಲ. ಕುತ್ರಚಿತ್=ಮತ್ತಾವೆಡೆಯಲ್ಲಿಯು ಕರ್ಮಬಿಂದು ತಿರೋಭಾವ ಮಲಮಾಯೆಗಳಿಂದೆ ಉಪಲಕ್ಷಿತವಾದ ಕರ್ಮಪಾಶವು, ನಾಸ್ತ್ಯೇವ=ಇಲ್ಲವೆ. ||೭೮||

**ಸೂತ್ರ||** ಬಳಿಕ "ಯೋ ಮಂತ್ರಮೂರ್ತಿವಶಗಃ ಸತು ಮಂತ್ರಯೋಗೋ ।
ಯೋ ಪ್ರಭಂಜನ ನಿರೂಢತರೋ ಹರೋ ಯಃ ॥

ಯಃ ಸ್ವಾಂತ ಚಂಚಲಹರಃ ಸ ತು ರಾಜಯೋಗೋ

ಯಶ್ಚಿತ್ತವೃತ್ತಿವಿಲಯಃ ಸ ಲಯಃ ಪ್ರತಿಷ್ಠಃ"॥ ಯೆಂಬ ಯೋಗಾರ್ಣವ ಸೂತ್ರಾರ್ಥವನು ಸೂಚಿಸುತ್ತ ಸೇವ್ಯಪ್ರಸಾದಿಸ್ಥಲವನು ಸಮಾಪ್ತಿಯಂ ಮಾಡುತ್ತಿರ್ದಪಂ.

**ವೃತ್ತ॥** **ನ ಕರ್ಮಬಂಧೇ ನ ತಪೋವಿಶೇಷೇ ನ ಮಂತ್ರಯೋಗಾಭ್ಯಸನೇ ತಥೈವ ।**
**ಧ್ಯಾನೇ ನ ಬೋಧೇ ಚ ತಥಾಽಽತ್ಮತತ್ತ್ವೇ ಮನಃಪ್ರವೃತ್ತಿಃ ಪರಯೋಗಭಾಜಾಮ್ ॥**

**ಟೀಕು॥** ಪರಯೋಗಭಾಜಾಂ=ಸರ್ವೋತ್ಕರ್ಷವಾದ ಪರಶಿವಯೋಗವನು ಭಜಿಸುತ್ತಿರ್ದ ಸೇವ್ಯಪ್ರಸಾದಿಗಳ, ಮನಃಪ್ರವೃತ್ತಿಃ=ಚಿತ್ತವೃತ್ತಿಯು, ಮಂತ್ರಯೋಗಾಭ್ಯಸನೇ=ಅಜಪಗಾಯತ್ರಿರೂಪವಾದ 'ಸೋಽಹಮ್'ಯೆಂಬ ಮಂತ್ರಯೋಗಾಭ್ಯಾಸದಲ್ಲಿ, ನ=ಇಲ್ಲ; ತಥೈವ=ಹಾಗೆಯೆ, ಕರ್ಮಬಂಧೇ=ಷಟ್ಕರ್ಮಬಂಧತ್ರಯರೂಪವಾದ ಹಠಯೋಗದಲ್ಲಿಯು, ನ=ಇಲ್ಲ; ತಪೋವಿಶೇಷೇ=ಯೋಗಂಗಳಿಗೆ ವಿಶಿಷ್ಟವಾದ ರಾಜಯೋಗದಲ್ಲಿಯು, ನ=ಇಲ್ಲ; ಧ್ಯಾನೇ=ಅನಾಹತ ಬ್ರಹ್ಮಧ್ಯಾನರೂಪವಾದ ಲಯಯೋಗದಲ್ಲಿಯು, ನ=ಇಲ್ಲ; ಕಿಂ ಚ=ಮತ್ತೇನಯಾಯೆಂದಡೆ, ತಥಾತ್ಮತತ್ತ್ವೇ=ಯೋಗಚತುಷ್ಟಯಂಗಳಿಗೆ ಚೈತನ್ಯಸ್ವರೂಪವಾಗಿರ್ದ, ಬೋಧೇ ಚ=ಸ್ವಸ್ವರೂಪಜ್ಞಾನದಲ್ಲಿಯೆ, ಮನಃಪ್ರವೃತ್ತಿಃ=ಮನೋವರ್ತನೆಯು,ಸ್ಯಾತ್=ಅಹುದು.

**ತಾತ್ಪರ್ಯ॥** ದೇಶಿಕೋಪದೇಶದಿಂದೆ ಅಪರದೇಹವಾದ ಪಾಣಿಪಾದ ಗುದ ಗುಹ್ಯಂಗಳಿಂ ಮೊದಲು ಶುದ್ಧವಂ ಮಾಡಿ ಕಟ್ಟಿ, ಬಳಿಕ ಪರೇ ಪಶ್ಯಂತಿ ಮಧ್ಯಮೇ ವೈಖರಿಗಳೇ ಚೈತನ್ಯವಾಗುಳ್ಳ ರುದ್ರ ವಿಷ್ಣು ಬ್ರಹ್ಮೇಂದ್ರರೆ ಆದಿ ದೇವವಾಗುಳ್ಳ, ಲಯ ರಾಜ ಹಠ ಮಂತ್ರಯೋಗಂಗಳನು ಕ್ರಮದಿಂದೆ ಪೂರ್ವಕಾಯದ ಕರ್ಣಾಕ್ಷಿನಾಸಾರಸನೆಗಳಲ್ಲಿ ಸಂಬಂಧಿಸಿ, ಬಳಿಕ ಪೂರ್ವಾಪರ ಕಾಯಕ್ಕೆ ಕೀಲಾಗಿ ಬಿಂದು ಮಾಯಾ ಕಾರ್ಯವಾದ ವಾಕ್ಚಕ್ಷುಗಳನು ನಿಶ್ಚಲವಮಾಡಿ ಸರ್ವಯೋಗ ಜ್ಞಾನ ಜನನಕ್ಷೇತ್ರವಾದ ಅವಿಮುಕ್ತಿಕ್ಷೇತ್ರದಲ್ಲಿ ಪರಬ್ರಹ್ಮ ಪರಶಿವ ಪರಲಿಂಗ ಪರ್ಯಾಯನಾಮದಿಂದೆ ಸೇವ್ಯವಾದ ಸ್ವಸ್ವರೂಪವನು ಸೇವಿಸುವಾತನು ಸೇವ್ಯಪ್ರಸಾದಿಯೆಂಬುದರ್ಥ. ಈ ಲಿಂಗತ್ರಯವನು ಪ್ರಾಣಲಿಂಗಿಯ ಅಂಗತ್ರಯಕ್ಕೆ ಕ್ರಮದಿಂದೆ ಸಂಬಂಧಿಸಿಕೊಂಬುದು. ॥೭೯॥

**ಇತಿ ಸೇವ್ಯಪ್ರಸಾದಿಸ್ಥಲಮ್**

**ಇತಿ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿ ಟೀಕಾಯಾಂಪ್ರಾಣಲಿಂಗಿ-ಸ್ಥಲವಿಷಯನವವಿಧಲಿಂಗಸ್ಥಲಪ್ರಸಂಗೋ ನಾಮ ಅಷ್ಟಾದಶಃ ಪರಿಚ್ಛೇದಃ ಸಮಾಪ್ತಃ**

## ಶರಣಸ್ಥಲವಿಷಯದ್ವಾದಶವಿಧಲಿಂಗಪ್ರಸಂಗಃ
## ಏಕಾದಶಂ ಶರಣಸ್ಥಲಮ್

**ಅಗಸ್ತ್ಯ ಉವಾಚ॥**

**ಸೂತ್ರ॥** ಬಳಿಕ ಅನಂತರದಲ್ಲಿ ಅಗಸ್ತ್ಯಮುನಿ ಪ್ರಶ್ನೆಯಂ ಮಾಡಿ ನುಡಿದನು.

**ಗ್ರಂಥ॥** **ಸ್ಥಲಭೇದಾಃ ಸಮಾಖ್ಯಾತಾಃ ಪ್ರಾಣಲಿಂಗಿಸ್ಥಲಾಶ್ರಯಾಃ ।**
**ಕಥಯ ಸ್ಥಲಭೇದಂ ಮೇ ಶರಣಸ್ಥಲಸಂಶ್ರಿತಮ್ ॥**

**ಟೀಕು॥** ಭೋ ಗಣೇಂದ್ರ=ಎಲೆ ರೇಣುಕಗಣೇಶ್ವರನೆ!, ಪ್ರಾಣಲಿಂಗಿಸ್ಥಲಾಶ್ರಯಾಃ=ಪ್ರಾಣಲಿಂಗಿಸ್ಥಲವೇ ಆಶ್ರಯವಾಗುಳ್ಳ, ಸ್ಥಲಭೇದಾಃ=ಸ್ಥಲಭೇದಂಗಳು, ಸಮಾಖ್ಯಾತಾಃ=ಹೇಳಲುಪಟ್ಟವು. ಶರಣಸ್ಥಲಸಂಶ್ರಿತಂ=ಶರಣಸ್ಥಲವನಾಶ್ರಯಿಸಿರ್ದ್ದ, ಸ್ಥಲಭೇದಂ=ಸ್ಥಲಭೇದವನು, ಮೇ=ಎನಗೋಸುಗ, ಕಥಯ=ಉಪದೇಶಿಸಿ ಹೇಳು. ॥೧॥

**ರೇಣುಕ ಉವಾಚ॥**

**ಸೂತ್ರ॥** ಬಳಿಕ ರೇಣುಕಗಣೇಶ್ವರನು ಪ್ರಶ್ನೋತ್ತರವನು ಹೇಳುತ್ತಿರ್ದ್ದಪಂ.

**ಗ್ರಂಥ॥** **ಶರಣಸ್ಥಲಮಾಶ್ರಿತ್ಯ ಸ್ಥಲದ್ವಾದಶಕಂ ಮಯಾ ।**
**ಉಚ್ಯತೇ ನಾಮ ಸರ್ವೇಷಾಂ ಸ್ಥಲಾನಾಂ ಶೃಣು ತಾಪಸ ॥**

**ಟೀಕು॥** ಭೋ ತಾಪಸ=ಎಲೈ ತಪಸ್ವಿಯಾದ ಅಗಸ್ತ್ಯಮುನಿಯೆ, ಶರಣಸ್ಥಲಂ=ಶರಣಸ್ಥಲವನು, ಆಶ್ರಿತ್ಯ=ಆಶ್ರಯಿಸಿದ, ದ್ವಾದಶಕಂ ಸ್ಥಲಂ=ಹನ್ನೆರಡು ಅವಾಂತರಸ್ಥಲವು, ಮಯಾ=ಎನ್ನಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ಸರ್ವೇಷಾಂ ಸ್ಥಲಾನಾಂ=ಆ ಸಮಸ್ತ ಅವಾಂತರಸ್ಥಲಂಗಳ, ನಾಮ=ನಾಮಧೇಯವನು, ಶೃಣು=ಕೇಳು. ॥೨॥

**ಸೂತ್ರ॥** ಬಳಿಕ ಆ ಸ್ಥಲೋದ್ದೇಶವನು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ದೀಕ್ಷಾಪಾದೋದಕಂ ಪೂರ್ವಂ ಶಿಕ್ಷಾಪಾದೋದಕಂ ತತಃ ।**
**ಜ್ಞಾನಪಾದೋದಕಂ ಚಾಥ ಕ್ರಿಯಾನಿಷ್ಪತ್ತಿಕಂ ತತಃ ॥**

**ಭಾವನಿಷ್ಪತ್ತಿಕಂ ಚಾಥ ಜ್ಞಾನನಿಷ್ಪತ್ತಿಕಂ ತತಃ ।**

**ಪಿಂಡಾಕಾಶಸ್ಥಲಂ ಚಾಥ ಬಿಂದ್ವಾಕಾಶಸ್ಥಲಂ ತತಃ |**
**ಮಹಾಕಾಶಸ್ಥಲಂ ಚಾಥ ಕ್ರಿಯಾಯಾಶ್ಚ ಪ್ರಕಾಶನಮ್ ||**

**ಭಾವಪ್ರಕಾಶನಂ ಪಶ್ಚಾತ್ತತೋ ಜ್ಞಾನಪ್ರಕಾಶನಮ್ |**
**ಸ್ವರೂಪಂ ಪೃಥಗೇತೇಷಾಂ ಕಥಯಾಮಿ ಯಥಾಕ್ರಮಮ್ ||**

**ಟೀಕು||** ಪೂರ್ವಂ=ಮೊದಲು ದೀಕ್ಷಾಪಾದೋದಕಂ=ದೀಕ್ಷಾಪಾದೋದಕಸ್ಥಲವು, ತತಃ=ಬಳಿಕ ಶಿಕ್ಷಾಪಾದೋದಕಂ=ಶಿಕ್ಷಾಪಾದೋದಕಸ್ಥಲವು, ಅಥಃ=ಅನಂತರದಲ್ಲಿ, ಜ್ಞಾನಪಾದೋದಕಂ=ಜ್ಞಾನಪಾದೋದಕಸ್ಥಲವು, ತತಃ=ಬಳಿಕ, ಕ್ರಿಯಾನಿಷ್ಪತ್ತಿಕಂ ಚ=ಕ್ರಿಯಾನಿಷ್ಪತ್ತಿಸ್ಥಲವು; ಅಥ=ಅನಂತರದಲ್ಲಿ, ಭಾವನಿಷ್ಪತ್ತಿಕಂ=ಭಾವನಿಷ್ಪತ್ತಿಸ್ಥಲವು; ತತಃ=ಬಳಿಕ, ಜ್ಞಾನನಿಷ್ಪತ್ತಿಕಂ ಚ=ಜ್ಞಾನನಿಷ್ಪತ್ತಿ ಸ್ಥಲವು, ಅಥ=ಅನಂತರದಲ್ಲಿ, ಪಿಂಡಾಕಾಶಸ್ಥಲಂ=ಪಿಂಡಾಕಾಶಸ್ಥಲವು, ತತಃ=ಬಳಿಕ, ಬಿಂದ್ವಾಕಾಶಸ್ಥಲಂ ಚ=ಬಿಂದ್ವಾಕಾಶಸ್ಥಲವು, ಅಥ=ಅನಂತರದಲ್ಲಿ, ಮಹಾಕಾಶಸ್ಥಲಂ=ಮಹಾಕಾಶಸ್ಥಲವು;ತತಃ=ಬಳಿಕ, ಕ್ರಿಯಾಯಾಶ್ಚಪ್ರಕಾಶನಂ=ಕ್ರಿಯಾಪ್ರಕಾಶನಸ್ಥಲವು, ಪಶ್ಚಾತ್=ಬಳಿಕ, ಭಾವಪ್ರಕಾಶನಂ=ಭಾವಪ್ರಕಾಶನಸ್ಥಲವು; ತತಃ=ಬಳಿಕ, ಜ್ಞಾನಪ್ರಕಾಶನಂ=ಜ್ಞಾನಪ್ರಕಾಶನಸ್ಥಲವು;ಏತೇಷಾಂ=ಉದ್ದೇಶಿಸಲುಪಟ್ಟ ಈ ಸ್ಥಲಂಗಳ, ಸ್ವರೂಪಂ=ಸ್ವರೂಪಲಕ್ಷಣವನು, ಪೃಥಕ್=ಬೇರೆ ಬೇರೆ, ಯಥಾಕ್ರಮಂ=ಕ್ರಮವನು ಮೀರದೆ, ಕಥಯಾಮಿ=ಹೇಳುತ್ತಿದ್ದೇನೆ. ಭೋ ತಾಪಸ=ಎಲೈ ಅಗಸ್ತ್ಯ ಮುನಿಯೆ! ಶೃಣು=ಕೇಳು. ||೬||

## ೩೭. ಶರಣಸ್ಥಲೇ ದೀಕ್ಷಾಪಾದೋದಕಸ್ಥಲಮ್

**ಸೂತ್ರ||** ಬಳಿಕ "ಆಚಾರ್ಯಃ ಪೂರ್ವರೂಪಮ್|
ಅಂತೇವಾಸ್ಯುತ್ತರರೂಪಮ್|
ವಿದ್ಯಾ ಸಂಧಿಃ||" ಯೆಂಬ ತೈತ್ತಿರೀಯ ಶ್ರುತ್ಯರ್ಥವನು,
"ಅಸಾತ್ತ್ರವಿತತಾದ್ವಂಧಾತ್ಪರಸಂಸ್ಥಾನಿರೋಧಕಾತ್|
ದೀಕ್ಷೈನಂ ಮೋಚಯೇತ್ಪೂರ್ವಂ ಶೈವಂ ಧಾಮ ನಯತ್ಯಪಿ"|| ಯೆಂಬ ಸ್ವಾಯಂಭುವಾಗಮಾರ್ಥವನು ಪ್ರಕಟಿಸುತ್ತ ಆ ಸೇವ್ಯಪ್ರಸಾದಿಗೆ ಸುಲಭವಾದ ದೀಕ್ಷಾಪಾದೋದಕ ಲಕ್ಷಣವನು ಹೇಳುತ್ತಿರ್ದಪಂ.

**ಗ್ರಂಥ||** **ದೀಕ್ಷಯಾಽಪಗತದ್ವೈತಂ ಯದ್ ಜ್ಞಾನಂ ಗುರುಶಿಷ್ಯಯೋಃ |**
**ಆನಂದಸ್ಯೈಕ್ಯಮೇತೇನ ದೀಕ್ಷಾಪಾದೋದಕಂ ಸ್ಮೃತಮ್ ||**

**ಟೀಕು||** ಗುರುಶಿಷ್ಯಯೋಃ=ಸೇವ್ಯರಾದ ಗುರುಶಿಷ್ಯರ, ಆನಂದಸ್ಯೈಕ್ಯಂ=ನಿಜಾನಂದದೊಳಗೆ ಐಕ್ಯವಾಗಿರ್ದ, ದೀಕ್ಷಯಾಽಪಗತದ್ವೈತಂ=ಜ್ಞಾನದಾಹಮಲಕ್ಷಯರೂಪವಾದ ಚಿತ್ಕ್ರಿಯಾದೀಕ್ಷೆಯಿಂದೆ

ತೊಲಗಲುಪಟ್ಟ ದ್ವೈತವುಳ್ಳ, ಯತ್‌ಜ್ಞಾನಂ=ಆವುದಾನೊಂದು ಜ್ಞಾನವುಂಟು, ಏತೇನ=ಆ ಜ್ಞಾನದಿಂದವೆ, ದೀಕ್ಷಾಪಾದೋದಕಂ=ಸೇವ್ಯಪ್ರಸಾದಿಗೆ ಸುಲಭವಾದ ದೀಕ್ಷಾಪಾದೋದಕವು. ಸ್ಮೃತಂ=ನೆನೆಯಲುಪಟ್ಟಿತ್ತು. ||೭||

**ಸೂತ್ರ||** ಬಳಿಕ ದೀಕ್ಷೆಯಿಂದಲಾದ ನಿತ್ಯಪರಿಪೂರ್ಣಜ್ಞಾನಾನಂದಗಳೈಕ್ಯವೆ ದೀಕ್ಷಾ ಪಾದೋದಕ ವೆಂದು ಪಕ್ಷಾಂತರದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಪರಮಾನಂದ ಏವೋಕ್ತಃ ಪಾದಶಬ್ದೇನ ನಿರ್ಮಲಃ ।**
**ಜ್ಞಾನಂ ಚೋದಕಶಬ್ದೇನ ತಯೋರೈಕ್ಯಂ ತು ದೀಕ್ಷಯಾ ॥**

**ಟೀಕು||** ಪಾದಶಬ್ದೇನ=ಪಾದಶಬ್ದದಿಂದೆ, ನಿರ್ಮಲಃ=ಮಲರಹಿತವಾದ, ಪರಮಾನಂದ ಏವ=ಸರ್ವೋತ್ಕರ್ಷವಾದ ಬ್ರಹ್ಮಾನಂದವೆ, ಉಕ್ತಃ=ಹೇಳಲುಪಟ್ಟಿತ್ತು. ಉದಕಶಬ್ದೇನ=ಉದಕ ಶಬ್ದದಿಂದೆ, ಜ್ಞಾನಂ ಚ=ಬ್ರಹ್ಮಜ್ಞಾನವು, ಉಕ್ತಂ=ಹೇಳಲುಪಟ್ಟಿತ್ತು. ದೀಕ್ಷಯಾ='ದೃಶೋರಂತರಂ ದೃಗ್ಯುಗಂ ಕರ್ಣಯುಗ್ಮಂ ಅಸಕೃತೇಶ್ಚಮಂತಸ್ಯ ಪೂರ್ವಂ ತಥಾಸ್ಯದಲಾನ್ಯಷ್ಟಯಸ್ಯ। ಸ್ಫುರತ್ಕರ್ಣಿಕಂ। ಯತ್ತದೇಹಸ್ಯಂ ಹೃದಯಾಬ್ಜಂ ವದಂತಿ।" ಯೆಂದು ಶಿವಾಲೋಕಪ್ರಸಿದ್ಧವಾದ ಹೃತ್ಕಮಲ ಮಧ್ಯಸ್ಥವಾದ ದೀಕ್ಷಯಿಂದೆ, "ತಯೋರೈಕ್ಯಂ ತು ವಿಜ್ಞಾನಮಾನಂದಂ ಬ್ರಹ್ಮ"ಯೆಂದು ಬೃಹದಾರಣ್ಯಕ ಶ್ರುತಿಸಿದ್ಧ ವಾಗಿ, ಧರ್ಮಧರ್ಮಿಗಳಾದ ಆ ಆನಂದ ಜ್ಞಾನಂಗಳ ಐಕ್ಯವಾಯಿತ್ತಾದೊಡೆ ದೀಕ್ಷಾಪಾದೋದಕ ವೆಂದು, ಸ್ಮೃತಂ=ನೆನೆಯಲುಪಟ್ಟಿತ್ತು. ||೮||

**ಸೂತ್ರ||** ಬಳಿಕ "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ಆನಂದಂ ಬ್ರಹ್ಮಣೋ ವಿದ್ವಾನ್ ಬಿಭೇತಿ ಕುತಶ್ಚನ" ಯೆಂಬ [ತೈತ್ತಿರೀಯೋಪನಿಷದರ್ಥವನು] ಪ್ರಕಟಿಸುತ್ತ ಆ ಜ್ಞಾನಾನಂದಂಗಳನು ಸೂತ್ರದ್ವಯದಿಂದೆ ವಿಶೇಷಿಸುತ್ತಿರ್ದಪಂ.

**ಗ್ರಂಥ||** **ಪರಸಂವಿತ್ಪ್ರಕಾಶಾತ್ಮಾ ಪರಮಾನಂದಭಾವನಾಮ್ ।**
**ಅಧಿಗಮ್ಯ ಮಹಾಯೋಗೀ ನ ಭೇದಂ ಕ್ವಾಪಿ ಪಶ್ಯತಿ ॥**

**ಟೀಕು||** ಮಹಾಯೋಗೀ=ಆ ದೀಕ್ಷಾಪಾದೋದಕಸಂಪನ್ನನಾದ ಮಹಾಯೋಗಿಯು ಪರಸಂವಿತ್ಪ್ರಕಾಶಾತ್ಮಾ ಸನ್=ಪರಬ್ರಹ್ಮಜ್ಞಾನಪ್ರಕಾಶವೆ ಸ್ವರೂಪವುಳ್ಳಾತನಾಗುತಲು, ಪರಮಾನಂದ ಭಾವನಾಂ=ಪರಮಾನಂದಭಾವನೆಯನು, ಅಧಿಗಮ್ಯ=ಎಯ್ದಿ, ಭೇದಂ=ನಿತ್ಯಪರಿಪೂರ್ಣವಾದ ಜ್ಞಾನಾನಂದಂಗಳ ಭೇದವನು, ಕ್ವಾಪಿ=ಒಂದೆಡೆಯಲ್ಲಿಯಾಯಿತ್ತಾದೊಡೆಯು, ನ ಪಶ್ಯತಿ= ಕಾಣುತ್ತಿರನು. ||೯||

ಗ್ರಂಥ॥ **ದೇಶಕಾಲಾದ್ಯವಚ್ಛೇದವಿಹೀನಂ ನಿತ್ಯನಿರ್ಮಲಮ್ ।**
**ಆನಂದಂ ಪ್ರಾಪ್ಯ ಬೋಧೇನ ನಾನ್ಯತ್ಕಾಂಕ್ಷತಿ ಸಂಯಮೀ ॥**

**ಟೀಕು॥** ಸಂಯಮೀ=ಶಿವಯೋಗಿಯು, ದೇಶಕಾಲಾದ್ಯವಚ್ಛೇದವಿಹೀನಂ=ದೇಶಕಾಲ ಮೊದಲಾಗುಳ್ಳ ವಸ್ತುಗಳಲ್ಲಿ ಹರಿಹಂಚಿಲ್ಲದೆ ಇರ್ದ್ದ, ನಿತ್ಯನಿರ್ಮಲಂ=ನಿತ್ಯವಾಗಿ ನಿರ್ಮಲವಾಗಿರ್ದ್ದ, ಆನಂದಂ= ಬ್ರಹ್ಮಾನಂದವನು, ಬೋಧೇನ=ಬ್ರಹ್ಮಜ್ಞಾನಸ್ವರೂಪಿನಿಂದವೆ, ಪ್ರಾಪ್ಯ=ಪಡೆದು, ಅನ್ಯತ್= ಮತ್ತೊಂದು ವಸ್ತುವನು, ನ ಕಾಂಕ್ಷತಿ=ಬಯಸುತ್ತಿರನು. ॥೧೦॥

**ಸೂತ್ರ॥** ಬಳಿಕ ದೀಕ್ಷಾಪಾದೋದಕಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ **ಜ್ಞಾನಾಮೃತಮಪಿ ಸ್ವಚ್ಛಂ ಗುರುಕಾರುಣ್ಯಸಂಭವಮ್ ।**
**ಆಸ್ವಾದ್ಯ ರಮತೇ ಯೋಗೀ ಸಂಸಾರಾಮಯವರ್ಜಿತಃ ॥**

**ಟೀಕು॥** ಗುರುಕಾರುಣ್ಯಸಂಭವಂ=ಗುರುಕೃಪೆಯಿಂದೆ ಹುಟ್ಟಿರ್ದ್ದ, ಸ್ವಚ್ಛಂ=ಅತ್ಯಂತ ನಿರ್ಮಲವಾಗಿರ್ದ್ದ, ಜ್ಞಾನಾಮೃತಮಪಿ=ಬ್ರಹ್ಮಜ್ಞಾನಾಮೃತವನಾಯಿತ್ತಾದೊಡೆ, ಆಸ್ವಾದ್ಯ=ಆಸ್ವಾದಿಸಿ, ಯೋಗೀ=ದೀಕ್ಷಾ ಪಾದೋದಕಸಂಪನ್ನನಾದ ಶಿವಯೋಗಿಯು, ಸಂಸಾರಾಮಯವರ್ಜಿತಃ=ಭವರೋಗದಿಂದೆ ಬಿಡಲುಪಟ್ಟಾತನಾಗುತಲು, ರಮತೇ=ಸ್ವರೂಪಿನಲ್ಲಿ ಕ್ರೀಡಿಸುತ್ತಿರ್ದ್ದಪನು. ॥೧೧॥

**ಇತಿ ದೀಕ್ಷಾಪಾದೋದಕಸ್ಥಲಮ್**

## ೩೮. ಶರಣಸ್ಥಲೇ ಶಿಕ್ಷಾಪಾದೋದಕಸ್ಥಲಮ್

**ಸೂತ್ರ॥** ಬಳಿಕ "ಮಾಯಾಮಯಮಿದಂ ದ್ವೈತಂ ಅದ್ವೈತಂ ಪರಮಾರ್ಥತಃ।
ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್"॥
ಉಪದೇಶಾದಯಂ ವಾದಃ ಜ್ಞಾತೇ ದ್ವೈತಂ ನ ವಿದ್ಯತೇ।" ಯೆಂಬ ಮುಂಡಕ ಶ್ರುತ್ಯರ್ಥವನು ಪ್ರಕಟಿಸುತ್ತ ಆ ದೀಕ್ಷಾಪಾದೋದಕಸಂಪನ್ನನಾದ ಶಿವಯೋಗಿಗೆ ಶಿಕ್ಷಾಪಾದೋದಕವನು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಗುರುಶಿಷ್ಯಮಯಂ ಜ್ಞಾನಂ ಶಿಕ್ಷಾ ಯೋಗಿನಮೀರ್ಯತೇ ।**
**ತಯೋಃ ಸಮರಸತ್ವಂ ಹಿ ಶಿಕ್ಷಾಪಾದೋದಕಂ ಸ್ಮೃತಮ್ ॥**

**ಟೀಕು॥** ಯಾ ಶಿಕ್ಷಾ=ಆವುದಾನೊಂದು ಶಿಕ್ಷೆಯು, ಗುರುಶಿಷ್ಯಮಯಂ ಜ್ಞಾನಂ=ಮೊದಲೋಪಾದಿಯಲ್ಲಿ ಪಾದೋದಕಶಬ್ದವಾಚ್ಯರಾದ ಗುರುಶಿಷ್ಯರಲ್ಲಿ ತನ್ಮಯವಾದ ಜ್ಞಾನವನು,

ಯೋಗಿನಂ=ಆ ದೀಕ್ಷಾಪಾದೋದಕಸಂಪನ್ನನಾದ ಶಿವಯೋಗಿಯನು ಕೂರ್ತು, ಈರ್ಯತೇ = ಪ್ರೇರಿಸುತ್ತಿರ್ದಪುದು. ತಯೋಃ=ಆ ಶಿಕ್ಷಾಜ್ಞಾನಂಗಳ, ಸಮರಸತ್ವಂ ಹಿ=ಸಮರಸತ್ವವಾಯಿತ್ತಾದೊಡೆ, ಶಿಕ್ಷಾಪಾದೋದಕಂ=ಶಿಕ್ಷಾಪಾದೋದಕವೆಂದು, ಸ್ಮೃತಂ=ನೆನೆಯಲುಪಟ್ಟಿತ್ತು. ||೧೨||

**ಗ್ರಂಥ||** **ಮಥಿತಾಚ್ಛಾಸ್ತ್ರಜಲಧೇರ್ಯುಕ್ತಿಮಂಥಾನವೈಭವಾತ್ ।**
**ಗುರುಣಾ ಲಭ್ಯತೇ ಬೋಧಸುಧಾ ಸುಮನಸಾಂ ಗಣೈಃ ॥**

**ಟೀಕು||** ಯುಕ್ತಿಮಂಥಾನವೈಭವಾತ್=ಯುಕ್ತಿಯೆಂಬ ಕಡೆಗೋಲ ವೈಭವದದೆಸೆಯಿಂದೆ, ಮಥಿತಾತ್=ಕಡೆಯಲುಪಟ್ಟ, ಶಾಸ್ತ್ರಜಲಧೇಃ=ನಿಗಮಾಗಮಾತ್ಮಕವಾದ ವೀರಶೈವಶಾಸ್ತ್ರವೆಂಬ ಸಮುದ್ರದದೆಸೆಯಿಂದೆ, ಗುರುಣಾ=ಶಿಕ್ಷಾಚಾರ್ಯನಿಂದೆ, ಬೋಧಃ=ಶಿವಾದ್ವೈತ ಜ್ಞಾನವು, ಲಭ್ಯತೇ= ಪಡೆಯಲುಪಡುತ್ತಿರ್ದಪುದು. ಸುಮನಸಾಂ ಗಣೈಃ=ದೀಕ್ಷಾಪಾದೋದಕಸ್ವೀಕಾರದಿಂದೆ ಲೇಸಾದ ಮನಸ್ಸುಳ್ಳ ಶಿವಯೋಗಿಗಳ ಸಮೂಹಂಗಳಿಂದೆ, ಸುಧಾ=ಜ್ಞಾನಾಮೃತವು, ಲಭ್ಯತೇ=ಪಡೆಯಲು ಪಡುತ್ತಿರ್ದಪುದು.

**ತಾತ್ಪರ್ಯ||** ಶಬ್ದಶ್ಲೇಷೆಯಿಂದೆ ಸುರಗುರುವಿಗೆ ಸಮುದ್ರಮಥನವಿಚಾರವಾಯಿತ್ತು. ಸುರರಿಗೆ ಸುಧೆಯಾಯಿತ್ತೆಂಬುದರ್ಥ. ||೧೩||

**ಸೂತ್ರ||** ಬಳಿಕ ಆ ಶಿವಯೋಗಿಗೆ ಧರ್ಮಿಧರ್ಮಂಗಳಾದ ಚಿದಾನಂದಂಗಳಲ್ಲಿಯ ತತ್ಪರತ್ವವನು ಸೂತ್ರತ್ರಯದಿಂದೆ ವಿಶೇಷಿಸುತ್ತಿರ್ದಪಂ.

**ಗ್ರಂಥ||** **ಜ್ಞಾನಚಂದ್ರಸಮುದ್ಭೂತಾಂ ಪರಮಾನಂದಚಂದ್ರಿಕಾಮ್ ।**
**ಪಶ್ಯಂತಿ ಪರಮಾಕಾಶೇ ಮುಕ್ತಿರಾತ್ರೌ ಮಹಾಧಿಯಃ ॥**

**ಟೀಕು||** ಮಹಾಧಿಯಃ=ಮಹಾಬುದ್ಧಿಯುಳ್ಳ ಶಿವಯೋಗಿಗಳು, ಮುಕ್ತಿರಾತ್ರೌ=ಪರಮುಕ್ತಿಯೆಂಬ ಕತ್ತಲೆಯುಳ್ಳ, ಪರಮಾಕಾಶೇ=ಪರಬ್ರಹ್ಮದ ಸದ್ರೂಪುಳ್ಳ ಹೃದಯಾಕಾಶದಲ್ಲಿ, ಜ್ಞಾನಚಂದ್ರಸಮುದ್ಭೂತಾಂ=ಚಿಚ್ಚಂದ್ರನದೆಸೆಯಿಂದೆ ಹುಟ್ಟಿರ್ದ, ಪರಮಾನಂದ ಚಂದ್ರಿಕಾಂ=ಪರಮಾನಂದವೆಂಬ ಬೆಳ್ದಿಂಗಳನು, ಪಶ್ಯಂತಿ=ಸ್ವಸ್ವರೂಪಪ್ರಕಾಶವನಾಗಿಯೆ ಕಾಣುತ್ತಿರ್ದಪರು. ||೧೪||

**ಗ್ರಂಥ||** **ದೃಷ್ಟೇ ತಸ್ಮಿನ್ಪರಾನಂದೇ ದೇಶಕಾಲಾದಿವರ್ಜಿತೇ ।**
**ದ್ರಷ್ಟವ್ಯಂ ವಿದ್ಯತೇ ನಾನ್ಯಚ್ಛ್ರೋತವ್ಯಂ ಜ್ಞೇಯಮೇವ ವಾ ॥**

**ಟೀಕು||** ದೇಶಕಾಲಾದಿ ವರ್ಜಿತೇ=ದೇಶಕಾಲಾದಿಗಳಿಂದೆ ಖಂಡಿತವಲ್ಲದಯಿರ್ದ್ದ, ತಸ್ಮಿನ್ ಪರಾನಂದೇ=ಆ ಪರಮಾನಂದವು, ದೃಷ್ಟೇ ಸತಿ=ಕಾಣಲುಪಡಲಿಕೆಯಾಗಿ, ಅನ್ಯತ್‌ದ್ರಷ್ಟವ್ಯಂ= ಮತ್ತೊಂದು ನೋಡುಲು ಯೋಗ್ಯವಾಗಿದ್ದ ಅದು, ನ=ಇಲ್ಲ; ಶ್ರೋತವ್ಯಂ=ಕೇಳಲು ಯೋಗ್ಯವಾಗಿದ್ದುದು ನ=ಇಲ್ಲ; ಜ್ಞೇಯಮೇವ ವಾ=ತಿಳಿವಂಥದೂ, ನ ವಿದ್ಯತೇ=ಉಂಟಾಗುತ್ತಿರದು. ||೧೫||

**ಗ್ರಂಥ||** **ಆತ್ಮಾನಂದೇನ ತೃಪ್ತಸ್ಯ ಕಾ ಸ್ಪೃಹಾ ವಿಷಯೇ ಸುಖೇ ।**
**ಗಂಗಾಜಲೇನ ತೃಪ್ತಸ್ಯ ಕೂಪತೋಯೇ ಕುತೋ ರತಿಃ ॥**

**ಟೀಕು||** ಆತ್ಮಾನಂದೇನ=ನಿಜಾನಂದದಿಂದೆ, ತೃಪ್ತಸ್ಯ=ಸಂತುಷ್ಟನಾದಾತನಿಗೆ, ವಿಷಯೇಸುಖೇ= ವಿಷಯಸಂಬಂಧವಾದ ಸುಖದಲ್ಲಿ, ಕಾ ಸ್ಪೃಹಾ=ಆವ ಇಚ್ಛೆಯು? ಆವ ಇಚ್ಛೆಯು ಇಲ್ಲವೆಂಬುದರ್ಥ. ತಥಾ ಹಿ=ಅಹಗಹುದಲಾ! ಗಂಗಾಜಲೇನ=ಗಂಗೋದಕದಿಂದೆ, ತೃಪ್ತಸ್ಯ=ಸಂತುಷ್ಟನಾದಾತನಿಗೆ, ಕೂಪತೋಯೇ=ಬಾವಿಯ ನೀರಿನಲ್ಲಿಯ, ರತಿಃ=ಬಯಕೆಯು, ಕುತಃ=ಎತ್ತಣದು? ||೧೬||

**ಸೂತ್ರ||** ಬಳಿಕ ಆ ನಿಜಾನಂದವೆಂಬ ಸಮುದ್ರಕ್ಕೆ ಕಡೆಯಿಲ್ಲವೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ಯಸ್ಮಿನ್ನಪ್ರಾಪ್ತಕಲ್ಲೋಲೇ ಸುಖಸಿಂಧೌ ನಿಮಜ್ಜತಿ ।**
**ಸಾಮರಸ್ಯಾನ್ಮಹಾಯೋಗೀ ತಸ್ಯ ಸೀಮಾ ಕುತೋ ಭವೇತ್ ॥**

**ಟೀಕು||** ಅಪ್ರಾಪ್ತ ಕಲ್ಲೋಲೇ=ತೊಲಗಲುಪಟ್ಟ ರಾಗದ್ವೇಷಾದಿ ಹೆದ್ದೊರೆಗಳುಳ್ಳ, ಯಸ್ಮಿನ್ ಸುಖಸಿಂಧೌ=ಆವುದಾನೊಂದು ನಿಜಾನಂದವೆಂಬ ಸಮುದ್ರದಲ್ಲಿ, ಮಹಾಯೋಗೀ=ಮಹಾ ಯೋಗೀಶ್ವರನು, ಸಾಮರಸ್ಯಾತ್=ಸಮರಸತ್ವದಿಂದೆ, ನಿಮಜ್ಜತಿ=ಮುಳುಗುತ್ತಿರ್ದ್ದಪನು;ತಸ್ಯ=ಆ ನಿಜಾನಂದವೆಂಬ ಸಮುದ್ರದ, ಸೀಮಾ=ಗಡಿಯು, ಕುತೋ ಭವೇತ್=ಎಲ್ಲಿಹುದು? ಎಲ್ಲಿಯು ಇಲ್ಲವೆಂಬುದರ್ಥ. ||೧೭||

**ಸೂತ್ರ||** ಬಳಿಕ ಶಿಕ್ಷಾಪಾದೋದಕಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಗುರುಪ್ರಸಾದಚಂದ್ರೇಣ ನಿಷ್ಕಲಂಕೇನ ಚಾರುಣಾ ।**
**ಯನ್ಮನಃಕುಮುದಂ ನಿತ್ಯಂ ಬೋಧಿತಂ ತಸ್ಯ ಕೋ ಭ್ರಮಃ ॥**

**ಟೀಕು||** ಚಾರುಣಾ=ಮನೋಹರವಾಗಿರ್ದ್ದ, ನಿಷ್ಕಲಂಕೇನ=ಕಲಂಕುರಹಿತವಾಗಿರ್ದ್ದ. ಗುರುಪ್ರಸಾದಚಂದ್ರೇಣ=ಶಿಕ್ಷಾಚಾರ್ಯನ ಪ್ರಸನ್ನತೆಯೆಂಬ ಚಂದ್ರನಿಂದೆ, ಯನ್ಮನಃಕುಮುದಂ=

ಆವನಾನೊಬ್ಬ ಶಿವಯೋಗಿಯ ಚಿತ್ತವೆಂಬನೆಯ್ದಿಲು, ನಿತ್ಯಂಬೋಧಿತಂ=ನಿತ್ಯವಿಕಸನವಾಗಿ ಮಾಡಲುಪಟ್ಟಿತ್ತು. ತಸ್ಯ=ಆತನಿಗೆ, ಕೋ ಭ್ರಮಃ=ಆವ ಭ್ರಾಂತಿಯು? ಆವ ಭ್ರಾಂತಿಯು ಇಲ್ಲವೆಂಬುದರ್ಥ. ||೧೮||

### ಇತಿ ಶಿಕ್ಷಾಪಾದೋದಕಸ್ಥಲಮ್

## ೩೯. ಶರಣಸ್ಥಲೇ ಜ್ಞಾನಪಾದೋದಕಸ್ಥಲಮ್

**ಸೂತ್ರ||** ಬಳಿಕ "ನಾಧ್ಯಕ್ಷಂ ನಾಪಿ ತಲ್ಲೈಂಗಂ ನ ಶಾಬ್ದಮಪಿ ಶಾಂಕರಮ್|
ಜ್ಞಾನಮಾಭಾತಿ ವಿಮಲಂ ಸರ್ವಥಾ ಸರ್ವವಸ್ತುಷು"|| ಯೆಂಬ ಮೃಗೇಂದ್ರ ವಚನಾರ್ಥವನು ಪ್ರಕಟಿಸುತ್ತ ಆ ಶಿಕ್ಷಾಪಾದೋದಕಸಂಪನ್ನನಿಗೆ ಸುಲಭವಾದ ಜ್ಞಾನಪಾದೋದಕವನು ಹೇಳುತ್ತಿರ್ದಪಂ.

**ಗ್ರಂಥ||** **ತದೈಕ್ಯಸಂಪದಾನಂದಜ್ಞಾನಂ ಜ್ಞಾನಗುರುರ್ಮತಃ |**
**ತತ್ಸಾಮರಸ್ಯಂ ಶಿಷ್ಯಸ್ಯ ಜ್ಞಾನಪಾದೋದಕಂ ವಿದುಃ ||**

**ಟೀಕು||** ಆನಂದಜ್ಞಾನಂ="ವಿಜ್ಞಾನಮಾನಂದಂ ಬ್ರಹ್ಮ" ಯೆಂದು ಶ್ರುತಿಸಿದ್ಧವಾಗಿ ಪಾದೋದಕ ಶಬ್ದವಾಚ್ಯವಾದ ಆನಂದಜ್ಞಾನವೆ, ಜ್ಞಾನಗುರುಃ=ಜ್ಞಾನಗುರುವೆಂದು, ಮತಃ=ಸಂಮತವು. ತದೈಕ್ಯಸಂಪದಾ=ಅವರ ಐಕ್ಯಸಂಪತ್ತಿಯಿಂದಲಾದ, ತತ್ಸಾಮರಸ್ಯಂ=ಅವರ ಸಮರಸತ್ವವನೆ, ಶಿಷ್ಯಸ್ಯ=ಶಿಕ್ಷಿಸಲು ಯೋಗ್ಯವಾಗಿ ಆ ಶಿಕ್ಷಾಪಾದೋದಕ ಸಂಪನ್ನನಾದ ಶಿವಯೋಗಿಗೆ, ಜ್ಞಾನಪಾದೋದಕಂ=ಜ್ಞಾನಪಾದೋದಕವನಾಗಿ, ವಿದುಃ=ಅರಿವುತ್ತಿರ್ದಪರು.

**ತಾತ್ಪರ್ಯ||** ಮೊದಲ ಗ್ರಂಥಾಭಿಪ್ರಾಯದಿಂದೆ ಇಲ್ಲಿ ಬರಿಯ ಜ್ಞಾನವೆ ಜ್ಞಾನಪಾದೋದಕ ಶಬ್ದಾರ್ಥವೆಂದು ತಿಳಿವುದು. ||೧೯||

**ಸೂತ್ರ||** ಬಳಿಕ ಪರಮಾನಂದ ಕಲೆಯುಳ್ಳ ಆ ಜ್ಞಾನಚಂದ್ರಪ್ರಕಾಶವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಅವಿದ್ಯಾರಾಹುನಿರ್ಮುಕ್ತೋ ಜ್ಞಾನಚಂದ್ರಃ ಸುನಿರ್ಮಲಃ |**
**ಪ್ರಕಾಶತೇ ಪರಾಕಾಶೇ ಪರಾನಂದಮಹಾದ್ಯುತಿಃ ||**

**ಟೀಕು||** ಅವಿದ್ಯಾರಾಹುನಿರ್ಮುಕ್ತಃ=ಅಜ್ಞಾನವೆಂಬ ರಾಹುವಿನಿಂದೆ ಬಿಡಲುಪಟ್ಟ, ಸುನಿರ್ಮಲಃ=

ಅತ್ಯಂತ ನಿರ್ಮಲವಾಗಿರ್ದ್ದ, ಜ್ಞಾನಚಂದ್ರಃ=ಶಿವಾದ್ವೈತಜ್ಞಾನವೆಂಬ ಚಂದ್ರನು, ಪರಾನಂದಮಹಾದ್ಯುತಿಃ ಸನ್=ಪರಮಾನಂದರೂಪವಾದ ಮಹಾಕಲೆಗಳ ಪ್ರಕಾಶವುಳ್ಳದಾಗುತಲು, ಪರಾಕಾಶೇ=ಸರ್ವೋತ್ಕೃಷ್ಟವಾದ ಹೃದಯಾಕಾಶದಲ್ಲಿ, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪುದು. ॥೨೦॥

ಗ್ರಂಥ॥ **ಅಜ್ಞಾನಮೇಘನಿರ್ಮುಕ್ತಃ ಪೂರ್ಣಜ್ಞಾನಸುಧಾಕರಃ ।**
**ಆನಂದಜಲಧೇರ್ವೃದ್ಧಿಮನುಪಶ್ಯನ್ವಿಭಾಸತೇ ॥**

**ಟೀಕು॥** ಅಜ್ಞಾನಮೇಘನಿರ್ಮುಕ್ತಃ=ಅಜ್ಞಾನವೆಂಬ ಮೇಘದಿಂದೆ ಬಿಡಲುಪಟ್ಟ, ಪೂರ್ಣಜ್ಞಾನಸುಧಾಕರಃ=ಪರಿಪೂರ್ಣಜ್ಞಾನವೆಂಬ ಚಂದ್ರನು, ಆನಂದಜಲಧೇಃ=ನಿಜಸುಖವೆಂಬ ಸಮುದ್ರದ, ವೃದ್ಧಿಂ=ಹೆಚ್ಚಿಗೆಯನು, ಅನುಪಶ್ಯನ್=ಬಳಿವಿಡಿದು ಕಾಣುತ್ತಿರ್ದ್ದದಾಗುತಲು, ವಿಭಾಸತೇ=ಪ್ರಕಾಶಿಸುತ್ತಿರ್ದ್ದಪುದು. ॥೨೧॥

ಗ್ರಂಥ॥ **ಜ್ಞಾನಚಂದ್ರೋದಯೇ ಜಾತೇ ಧ್ವಸ್ತಮೋಹತಮೋಭರಾಃ ।**
**ಪಶ್ಯಂತಿ ಪರಮಾಂ ಕಾಷ್ಠಾಂ ಯೋಗಿನಃ ಸುಖರೂಪಿಣೀಮ್ ॥**

**ಟೀಕು॥** ಜ್ಞಾನಚಂದ್ರೋದಯೇ=ಜ್ಞಾನಚಂದ್ರನುದಯವು, ಜಾತೇ ಸತಿ=ಆಗಲಿಕೆಯಾಗಿ, ಧ್ವಸ್ತಮೋಹತಮೋಭರಾಃ=ಕೆಡಿಸಲುಪಟ್ಟ ಅಜ್ಞಾನವೆಂಬ ಅಂಧಕಾರದ ಭರವುಳ್ಳ, ಯೋಗಿನಃ=ಯೋಗೀಶ್ವರರುಗಳು, ಪರಮಾಂ ಸುಖರೂಪಿಣೀಂ=ಪರಮ ಸುಖವೆ ಸ್ವರೂಪವಾಗುಳ್ಳ, ಕಾಷ್ಠಾಂ=ಸ್ವಸ್ವರೂಪಸ್ಥಿತಿಯನು, ಪಶ್ಯಂತಿ=ಕಾಣುತ್ತಿರ್ದ್ದಪರು. ॥೨೨॥

**ಸೂತ್ರ॥** ಬಳಿಕ ಜ್ಞಾನಸೂರ್ಯೋದಯವಾಗಿಯು ಶಿವಯೋಗಿ ಪ್ರಪಂಚಕಾಣನೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ

ಗ್ರಂಥ॥ **ಮಾಯಾರಜನ್ಯಾ ವಿರಮೇ ಬೋಧಸೂರ್ಯೇ ಪ್ರಕಾಶಿತೇ ।**
**ನಿರಸ್ತಸರ್ವವ್ಯಾಪಾರಃ ಚಿತ್ರಂ ಸ್ವಪಿತಿ ಸಂಯಮೀ ॥**

**ಟೀಕು॥** ಮಾಯಾರಜನ್ಯಾ=ಅಜ್ಞಾನವೆಂಬ ರಾತ್ರೆಯು, ವಿರಮೇ ಸತಿ=ತೊಲಗಿಕೆಯಾಗಲಾಗಿ ಬೋಧಸೂರ್ಯೇ=ಜ್ಞಾನಸೂರ್ಯನು, ಪ್ರಕಾಶಿತೇ ಸತಿ=ಪ್ರಕಾಶಿಸಲುಪಡಲಿಕೆಯಾಗಿ, ಸಂಯಮೀ=ಶಿವಯೋಗಿಯು, ನಿರಸ್ತಸರ್ವವ್ಯಾಪಾರಃ ಸನ್=ತೊಲಗಿಸಲುಪಟ್ಟ ಸಮಸ್ತವ್ಯಾಪಾರವುಳ್ಳಾತನಾಗುತಲು, ಸ್ವಪಿತಿ=ಶಿವಯೋಗನಿದ್ರೆಯನು ಮಾಡುತ್ತಿರ್ದ್ದಪನು. ಚಿತ್ರಂ=ಆಶ್ಚರ್ಯವು. ಚಿತ್ಸೂರ್ಯವು ಉದಯವಾಗಲಾಗಿ ಶಿವಯೋಗಿಗೆ ಜಗತ್ಪ್ರಪಂಚಿಲ್ಲವೆಂಬುದರ್ಥ. ॥೨೩॥

ಗ್ರಂಥ॥ ಅನಾದ್ಯವಿದ್ಯಾವಿಚ್ಛಿತ್ತಿವೇಲಾಯಾಂ ಪರಯೋಗಿನಃ ।
ಪ್ರಕಾಶತೇ ಪರಾನಂದಃ ಪ್ರಪಂಚೇನ ವಿನಾಕೃತಃ ॥

ಟೀಕು॥ ಅನಾದ್ಯವಿದ್ಯಾವಿಚ್ಛಿತ್ತಿವೇಲಾಯಾಂ=ಅನಾದಿಯಾದ ಅಜ್ಞಾನದ ತೊಲಗಿಕೆಯ ಕಾಲದಲ್ಲಿ, ಪ್ರಪಂಚೇನ ವಿನಾಕೃತಃ=ಜಗತ್ಪ್ರಪಂಚು ಹೊರತಾಗಿ ಮಾಡಲುಪಟ್ಟ, ಪರಾನಂದಃ=ಚಿತ್ಸೂರ್ಯನ ನಿಜವಾದ ಪರಮಾನಂದ ಪ್ರಕಾಶವು, ಪರಯೋಗಿನಃ=ಮಹಾಯೋಗಿಗೆ, ಪ್ರಕಾಶತೇ=ಪ್ರಕಾಶಿಸುತ್ತಿರ್ದಪುದು. ॥೨೪॥

ಗ್ರಂಥ॥ ನಿತ್ಯಾನಂದೇ ನಿಜಾಕಾರೇ ವಿಮಲೇ ಪರತೇಜಸಿ ।
ವಿಲೀನಚೇತಸಾಂ ಪುಂಸಾಂ ಕುತೋ ವಿಶ್ವವಿಕಲ್ಪನಾ ॥

ಟೀಕು॥ ನಿತ್ಯಾನಂದೇ=ನಿತ್ಯಾನಂದರೂಪವಾಗಿ, ವಿಮಲೇ ನಿಜಾಕಾರೇ=ನಿರ್ಮಲವಾದ ಸ್ವಸ್ವರೂಪವುಳ್ಳ, ಪರತೇಜಸಿ=ಪರಮಸೂರ್ಯಪ್ರಕಾಶದಲ್ಲಿ, ವಿಲೀನ ಚೇತಸಾಂ=ಅಡಗಿದ ಚಿತ್ತವುಳ್ಳ, ಪುಂಸಾಂ=ಪುರುಷರುಗಳಿಗೆ, ವಿಶ್ವವಿಕಲ್ಪನಾ=ಜಗಜ್ಜಾಲರೂಪವಾದ ಸಮಸ್ತ ಪ್ರಪಂಚವು, ಕುತಃ= ಎತ್ತಣದು? ॥೨೫॥

ಸೂತ್ರ॥ ಬಳಿಕ ಜ್ಞಾನಪಾದೋದಕಸಂಪನ್ನವಾದ ಶಿವಯೋಗಿಯ ಪೂರ್ಣಾನಂದಕ್ಕೆ ಬ್ರಹ್ಮಾದಿಗಳಾನಂದವು ಸರಿಯಿಲ್ಲವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ ಕುತೋ ಬ್ರಹ್ಮಾ ಕುತೋ ವಿಷ್ಣುಃ ಕುತೋ ರುದ್ರಃ ಕುತೋ ರವಿಃ ।
ಸಾಕ್ಷಾತ್ಕೃತಪರಾನಂದಜ್ಯೋತಿಷಃ ಸಾಮ್ಯಕಲ್ಪನಾ ॥

ಟೀಕು॥ ಸಾಕ್ಷಾತ್ಕೃತಪರಾನಂದಜ್ಯೋತಿಷಃ=ಅಪರೋಕ್ಷವಾಗಿ ಪ್ರತ್ಯಕ್ಷೀಕರಿಸಲುಪಟ್ಟ ಪರಮಾನಂದ ಪ್ರಕಾಶವುಳ್ಳ ಶಿವಯೋಗಿಗೆ, ಸಾಮ್ಯಕಲ್ಪನಾ=ಸಮಾನತೆಯನು ಕಲ್ಪಿಸುವಲ್ಲಿ, ಕುತೋ ಬ್ರಹ್ಮಾ=ಬ್ರಹ್ಮನೆಲ್ಲಿಯವ? ಕುತೋ ವಿಷ್ಣುಃ=ವಿಷ್ಣುವೆಲ್ಲಿಯವ? ಕುತೋ ರುದ್ರಃ=ರುದ್ರನೆಲ್ಲಿಯವ? ಕುತೋ ರವಿಃ=ಸೂರ್ಯನೆಲ್ಲಿಯವ? ॥೨೬॥

ಗ್ರಂಥ॥ ಅಪರೋಕ್ಷಪರಾನಂದವಿಲಾಸಸ್ಯ ಮಹಾತ್ಮನಃ ।
ಬ್ರಹ್ಮವಿಷ್ಣ್ವಾದಯೋ ದೇವಾ ವಿಶೇಷಾಃ ಸುಖಬಿಂದವಃ ॥

ಟೀಕು॥ ಅಪರೋಕ್ಷಪರಾನಂದವಿಲಾಸಸ್ಯ=ಅಪರೋಕ್ಷವಾದ ಪರಮಾನಂದದ ವಿಲಾಸವುಳ್ಳ, ಮಹಾತ್ಮನಃ=ಜ್ಞಾನಪಾದೋದಕ ಸಂಪನ್ನನಾದ ಮಹಾಪುರುಷನಿಗೆ, ಬ್ರಹ್ಮವಿಷ್ಣ್ವಾದಯಃ=

ಬ್ರಹ್ಮವಿಷ್ಣುಮೊದಲಾಗುಳ್ಳ, ದೇವಾಃ=ದೇವತೆಗಳು, ವಿಶೇಷಾಃ ಸುಖಬಿಂದವಃ=ವಿಶೇಷವಾದ ಸುಖದ ಹನಿಗಳೆ ||೨೭||

**ಸೂತ್ರ||** ಬಳಿಕ ಆ ಜ್ಞಾನಾನಂದವನೆ ವಿಶೇಷಿಸಿ ಜ್ಞಾನಪಾದೋದಕಸ್ಥಲವನು ಮುಗಿಯಿಸುತ್ತಿರ್ದಪಂ.

ಗ್ರಂಥ|| **ಯನ್ಮಾತ್ರಾಸಹಿತಂ ಲೋಕೇ ವಾಂಛಂತಿ ವಿಷಯಂ ನರಾಃ |**
**ತದಪ್ರಮೇಯಮಾನಂದಂ ಪರಮಂ ಕೋ ನ ವಾಂಛತಿ ||**

**ಟೀಕು||** ನರಾಃ=ಮನುಷ್ಯರು, ಲೋಕೇ=ಲೋಕದಲ್ಲಿ, ಯನ್ಮಾತ್ರಾಸಹಿತಂ=ಆವುದಾನೊಂದು ಚಿದಾನಂದದ ಲೇಶದೊಡನೆ ಕೂಡಿರ್ದ ವಿಷಯಜ್ಞಾನಸುಖವನು, ವಾಂಛಂತಿ=ಬಯಸುತ್ತಿರ್ದಪರು. ತದಪ್ರಮೇಯಂ=ಆ ವಿಷಯಜ್ಞಾನ ಸುಖಕ್ಕೆ ಅಪ್ರಮಾಣವಾಗಿರ್ದ, ಪರಮಂ ಆನಂದಂ=ಮಹಾ ಚಿದಾನಂದವನು, ಕೋ ನ ವಾಂಛತಿ=ಆವಾತ ಬಯಸುತ್ತಿರನು? ಸರ್ವರೂ ಬಯಸುವರೆಂಬುದರ್ಥ. ||೨೮||

**ಇತಿ ಜ್ಞಾನಪಾದೋದಕಸ್ಥಲಮ್**

## ೪೦. ಶರಣಸ್ಥಲೇ ಕ್ರಿಯಾನಿಷ್ಪತ್ತಿಸ್ಥಲಮ್

**ಸೂತ್ರ||** ಬಳಿಕ " ಅದ್ವೈತಭಕ್ತಿಯುಕ್ತಸ್ಯ ಯೋಗಿನಃ ಸಕಲಾ ಕ್ರಿಯಾ|
ಆಸ್ತೇ ದಗ್ಧಪಟನ್ಯಾಯಾತ್ಕ್ರಿಯಾಮಾತ್ರಂ ಹಿ ನ ಕ್ರಿಯಾ"|| ಯೆಂಬ ವೀರ ತಂತ್ರಾರ್ಥವನು ಪ್ರಕಟಿಸುತ್ತ ಆ ಈ ಜ್ಞಾನಪಾದೋದಕಸಂಪನ್ನನೆ ರಜ್ಜುಸರ್ಪನ್ಯಾಯದೋಪಾದಿಯಲ್ಲಿ ಕಲ್ಪಿತವಾದ ಕ್ರಿಯಾನಿಷ್ಪತ್ತಿಯುಳ್ಳಾತನೆಂದು ಹೇಳುತ್ತಿರ್ದಪಂ.

ಗ್ರಂಥ|| **ಪರಕಾಯೇ ಕ್ರಿಯಾಪತ್ತಿಃ ಕಲ್ಪಿತೈವ ಪ್ರಕಾಶತೇ |**
**ರಜ್ಜೌ ಭುಜಂಗವದ್ಯಸ್ಮಾತ್ಕ್ರಿಯಾನಿಷ್ಪತ್ತಿಮಾನಯಮ್ ||**

**ಟೀಕು||** ಪರಕಾಯೇ=ಪರಮಚಿದಾನಂದವೆ ಶರೀರವಾಗುಳ್ಳ ಆ ಜ್ಞಾನಪಾದೋದಕ ಸಂಪನ್ನನಾದ ಶಿವಯೋಗಿಯಲ್ಲಿ, ಕ್ರಿಯಾಪತ್ತಿಃ=ಕ್ರಿಯಾನಿಷ್ಪತ್ತಿಯು, ರಜ್ಜೌ=ರಜ್ಜುವಿನಲ್ಲಿಯ ಭುಜಂಗವತ್= ಸರ್ಪದೋಪಾದಿಯಲ್ಲಿ, ಯಸ್ಮಾತ್=ಆವುದಾನೊಂದು ಕಾರಣವಾಗಿ, ಕಲ್ಪಿತೈವ=ಕಲ್ಪಿಸಲುಪಟ್ಟುದಾಗಿಯೆ, ಪ್ರಕಾಶತೇ=ಪ್ರಕಾಶಿಸುತ್ತಿರ್ದಪುದು. ತಸ್ಮಾತ್=ಅದು ಕಾರಣವಾಗಿ, ಅಯಂ=ಈ ಜ್ಞಾನಪಾದೋದಕ ಸಂಪನ್ನನಾದ ಶಿವಯೋಗಿಯು, ಕ್ರಿಯಾನಿಷ್ಪತ್ತಿಮಾನ್=ಕ್ರಿಯಾನಿಷ್ಪತ್ತಿಯುಳ್ಳಾತನು. ||೨೯||

**ಸೂತ್ರ॥** ಬಳಿಕ ಜ್ಞಾನಿಗೆ ಕರ್ಮಫಲವಿಲ್ಲವೆಂದು ದೃಷ್ಟಾಂತಪೂರ್ವಕವಾಗಿ ಷಟ್ ಸೂತ್ರಂಗಳಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಜ್ಞಾನಿನೋ ಯಾನಿ ಕರ್ಮಾಣಿ ತಾನಿ ನೋ ಜನ್ಮಹೇತವಃ ।**
**ಅಗ್ನಿದಗ್ಧಾನಿ ಬೀಜಾನಿ ಯಥಾ ನಾಂಕುರಕಾರಣಮ್ ॥**

**ಟೀಕು॥** ಜ್ಞಾನಿನಃ=ಶಿವಾದ್ವೈತಜ್ಞಾನಿಗೆ, ಯಾನಿ ಕರ್ಮಾಣಿ=ಆವ ಕೆಲವು ಕರ್ಮಂಗಳುಂಟು ತಾನಿ=ಅವು, ನೋ ಜನ್ಮಹೇತವಃ=ಜನ್ಮಕ್ಕೆ ಕಾರಣಂಗಳಲ್ಲ. ಅಗ್ನಿದಗ್ಧಾನಿ ಬೀಜಾನಿ=ಬೆಂಕಿಯಿಂದ ಬೆಂದ ಬೀಜಂಗಳು, ಯಥಾ=ಹೇಗೆ, ಅಂಕುರಕಾರಣಂ ನ=ಮೊಳಕೆಗೆ ಕಾರಣವಲ್ಲ; ಹಾಗೆಯೇ ಜ್ಞಾನಾಗ್ನಿಯಿಂದೆ ಬೆಂದ ಕರ್ಮಬೀಜಂಗಳು ಜನ್ಮಕ್ಕೆ ಕಾರಣವಲ್ಲವೆಂಬುದರ್ಥ. ॥೩೦॥

ಗ್ರಂಥ॥ **ಕರ್ಮಣಾ ಕಿಂ ಕೃತೇನಾಪಿ ಜ್ಞಾನಿನೋ ನಿರಹಂಕೃತೇಃ ।**
**ವಿಕ್ರಿಯಾ ಪ್ರತಿಬಿಂಬಸ್ಯ ಕಿಂ ಕರೋತಿ ಹಿಮದ್ಯುತೇಃ ॥**

**ಟೀಕು॥** ನಿರಹಂಕೃತೇಃ=ತೊಲಗಲುಪಟ್ಟ ಮೂಲಾಹಂಕಾರವುಳ್ಳ, ಜ್ಞಾನಿನಃ=ಶಿವಾದ್ವೈತ ಜ್ಞಾನಿಗೆ, ಕೃತೇನಾಪಿ ಕರ್ಮಣಾ=ಮಾಡಲುಪಟ್ಟ ಕರ್ಮದಿಂದಲಾಯಿತ್ತಾದೊಡೆಯು, ಕಿಂ=ಏನು ಫಲವು? ಏನೂ ಫಲವಿಲ್ಲವೆಂಬುದರ್ಥ. ಹಿಮದ್ಯುತೇಃ=ಚಂದ್ರನಿಗೆ, ಪ್ರತಿಬಿಂಬಸ್ಯವಿಕ್ರಿಯಾ=ಪ್ರತಿಬಿಂಬದಲ್ಲಿ ಇರುತ್ತಿರ್ದ ವಿಕಾರವು, ಕಿಂ ಕರೋತಿ=ಏನನ್ನು ಮಾಡುವುದು? ಏನನ್ನೂ ಮಾಡುತ್ತಿರದೆಂಬುದರ್ಥ. ॥೩೧॥

ಗ್ರಂಥ॥ **ಚಂದ್ರಸ್ಯ ಮೇಘಸಂಬಂಧಾದ್ಯಥಾ ಗಮನಕಲ್ಪನಾ ।**
**ತಥಾ ದೇಹಸ್ಯ ಸಂಬಂಧಾದಾರೋಪ್ಯಾ ಸ್ಯಾತ್ಕ್ರಿಯಾಽಽತ್ಮನಃ ॥**

**ಟೀಕು॥** ಚಂದ್ರಸ್ಯ=ಚಂದ್ರನಿಗೆ, ಮೇಘಸಂಬಂಧಾತ್=ಮೇಘದ ಸಂಬಂಧದದೆಸೆಯಿಂದೆ, ಯಥಾ=ಹೇಗೆ, ಗಮನಕಲ್ಪನಾ=ಗಮನಕಲ್ಪನೆಯು, ತಥಾ=ಹಾಗೆಯೇ, ಆತ್ಮನಃ=ಚಿದ್ರೂಪನಾದಾತ್ಮನಿಗೆ, ದೇಹಸ್ಯ=ದೇಹದ, ಸಂಬಂಧಾತ್=ಸಂಬಂಧದದೆಸೆಯಿಂದೆ, ಕ್ರಿಯಾ=ಕ್ರಿಯೆಯು, ಆರೋಪ್ಯಾ=ಆರೋಪಿಸಲು ಯೋಗ್ಯವಾಗಿರ್ದ ಅದು, ಸ್ಯಾತ್=ಅಹುದು. ॥೩೨॥

ಗ್ರಂಥ॥ **ಜ್ಞಾನೀ ಕರ್ಮನಿರೂಢೋಽಪಿ ಲಿಪ್ಯತೇ ನ ಕ್ರಿಯಾಫಲೈಃ ।**
**ಘೃತಾದಿನಾ ಯಥಾ ಜಿಹ್ವಾ ಭೋಕ್ತ್ರೀ ಚಾಪಿ ನ ಲಿಪ್ಯತೇ ॥**

**ಟೀಕು॥** ಜ್ಞಾನೀ=ಶಿವಜ್ಞಾನಿಯು, ಕರ್ಮನಿರೂಢೋಽಪಿ=ಕ್ರಿಯೆಯಲ್ಲಿ ತತ್ಪರನಾಯಿತ್ತಾದೊಡೆಯು,

ಕ್ರಿಯಾಫಲೈಃ=ಕರ್ಮಫಲಂಗಳಿಂದೆ, ನ ಲಿಪ್ಯತೇ=ಲೇಪಿಸಲುಪಡುತ್ತಿರನು. ಜಿಹ್ವಾ=ಜಿಹ್ವೆಯು, ಭೋಕ್ತ್ರೀ ಚಾಪಿ=ಭೋಗಿಸುತ್ತಿದ್ದಾತನಾಯಿತ್ತಾದೊಡೆಯು, ಘೃತಾದಿನಾ=ಘೃತಮೊದಲಾದ ವಸ್ತುವಿನಿಂದೆ. ಯಥಾ=ಹೇಗೆ, ನ ಲಿಪ್ಯತೇ=ಲೇಪಿಸಲುಪಡುತ್ತಿರದು. ಹಾಗೆಯೇ ಶಿವಜ್ಞಾನಿಗೆ ಕರ್ಮಲೇಪವಿಲ್ಲ ವೆಂಬುದರ್ಥ. ||೩೩||

ಗ್ರಂಥ|| ನಿರಸ್ತೋಪಾಧಿಸಂಬಂಧೇ ಜೀವೇ ಯಾ ಯಾ ಕ್ರಿಯಾಸ್ಥಿತಿಃ ।
ಸಾ ಸಾ ಪ್ರತೀತಿಮಾತ್ರೇಣ ನಿಷ್ಫಲಾ ತತ್ರ ಲೀಯತೇ ।

**ಟೀಕು||** ನಿರಸ್ತೋಪಾಧಿಸಂಬಂಧೇ=ತೊಲಗಿಸಲುಪಟ್ಟ ಮೂಲಾಹಂಕಾರಾದ್ಯುಪಾಧಿ ಸಂಬಂಧ ವುಳ್ಳ, ಜೀವೇ=ಚಿದ್ರೂಪವಾದಾತ್ಮನಲ್ಲಿ, ಯಾ ಯಾ ಕ್ರಿಯಾಸ್ಥಿತಿಃ=ಆವಾವಕ್ರಿಯಾಸ್ಥಿತಿಯುಂಟು, ಸಾ ಸಾ=ಆ ಆ ಕ್ರಿಯೆಯು, ಪ್ರತೀತಿ ಮಾತ್ರೇಣ=ದಗ್ಧರಜ್ಜುನ್ಯಾಯದೋಪಾದಿಯಲ್ಲಿ ತೋರಿಕೆಯಿಂದವೆ, ಸ್ಥಿತ್ವಾ=ಇದ್ದು, ನಿಷ್ಫಲಾ=ನಿಷ್ಫಲವಾಗಿ, ತತ್ರ=ಆ ಆತ್ಮನಲ್ಲಿಯೇ, ಲೀಯತೇ=ಲಯಿಸುತ್ತಿರ್ದ್ದಪುದು.||೩೪||

ಗ್ರಂಥ|| ಗಚ್ಛನ್ತಿಷ್ಠನ್ ಸ್ವಪನ್ ವಾಽಪಿ ನ ನಿಷ್ಕರ್ಮಾಸ್ತಿ ಕಶ್ಚನ ।
ಸ್ವಭಾವೋ ದೇಹಿನಾಂ ಕರ್ಮ ಜ್ಞಾನಿನಾಂ ತತ್ತು ನಿಷ್ಫಲಮ್ ॥

**ಟೀಕು||** ಗಚ್ಛನ್=ಹೋಗುತ್ತಿದ್ದಾತನಾಯಿತ್ತಾದೊಡೆಯು, ತಿಷ್ಠನ್=ಇರುತ್ತಿದ್ದಾತನಾಯಿತ್ತಾದೊಡೆಯು, ಸ್ವಪನ್ ವಾಽಪಿ=ಮಲಗಿದ್ದಾತನಾಯಿತ್ತಾದೊಡೆಯು, ಕಶ್ಚನ=ಒಬ್ಬನು, ನಿಷ್ಕರ್ಮಾನಾಸ್ತಿ=ಕರ್ಮರಹಿತನು ಇಲ್ಲ; ಅತಃ=ಇದು ಕಾರಣವಾಗಿ, ದೇಹಿನಾಂ=ದೇಹಿಗಳಿಗೆ, ಕರ್ಮ=ಕರ್ಮವು, ಸ್ವಭಾವಃ=ಸ್ವಭಾವಸಿದ್ಧವಾಗಿರ್ದ್ದ ಅದು; ತತ್ತು=ಆ ಕರ್ಮವಾಯಿತ್ತಾದೊಡೆ, ಜ್ಞಾನಿನಾಂ=ಶಿವಜ್ಞಾನಿಗಳಿಗೆ, ನಿಷ್ಫಲಂ=ನಿಷ್ಫಲವು. ||೩೫||

**ಸೂತ್ರ||** ಬಳಿಕ ಜ್ಞಾನಿಗೆ ಕರ್ಮಕಾರ್ಪಣ್ಯವಿಲ್ಲವೆಂದು ಹೇಳಿ ಕ್ರಿಯಾನಿಷ್ಪತ್ತಿಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ|| ಪರಿಪೂರ್ಣಮಹಾನಂದಭಾವಿನಃ ಶುದ್ಧ ಚೇತಸಃ ।
ನ ಭವೇತ್ಕರ್ಮಕಾರ್ಪಣ್ಯಂ ನಾನಾಭೋಗಫಲಪ್ರದಮ್ ॥

**ಟೀಕು||** ಶುದ್ಧಚೇತಸಃ=ನಿರ್ಮಲಚಿತ್ತವುಳ್ಳ, ಪರಿಪೂರ್ಣಮಹಾನಂದಭಾವಿನಃ=ನಿತ್ಯಪರಿ ಪೂರ್ಣವಾದ ಮಹಾ ನಿಜಾನಂದಾನುಭವವುಳ್ಳ ಶಿವಯೋಗಿಗೆ, ನಾನಾಭೋಗಫಲಪ್ರದಂ=ನಾನಾ ಪ್ರಕಾರವಾದ ಭೋಗಫಲವನು ಕೊಡುತ್ತಿರ್ದ್ದ, ಕರ್ಮಕಾರ್ಪಣ್ಯಂ=ಪುಣ್ಯ ಪಾಪರೂಪವಾದ ಕರ್ಮಕಾರ್ಪಣ್ಯವು, ನ ಭವೇತ್=ಆಗದು. ||೩೬||

**ಇತಿ ಕ್ರಿಯಾನಿಷ್ಪತ್ತಿಸ್ಥಲಮ್**

## ೪೧. ಶರಣಸ್ಥಲೇ ಭಾವನಿಷ್ಪತ್ತಿಸ್ಥಲಮ್

**ಸೂತ್ರ||** ಬಳಿಕ "ಚಿರೇಣ ಸಾಧ್ಯಮಾನಸ್ಯ ಭಾವುಕೈರ್ವಿಗತಶ್ರಮೈಃ|
ಸ್ಥಿರಭಾವೋ ಹಿ ಭಾವಸ್ಯ ಭಾವನಿಷ್ಪತ್ತಿರುಚ್ಯತೇ"|| ಯೆಂಬ ಕಿರಣತಂತ್ರಾರ್ಥವನು ಪ್ರಕಟಿಸುತ್ತ ಆ ಕ್ರಿಯಾನಿಷ್ಪತ್ತಿಯುಳ್ಳ ಶಿವಯೋಗಿಯೆ ಶುಕ್ತಿರಜತನ್ಯಾಯದೋಪಾದಿಯಲ್ಲಿ ಕಲ್ಪಿತವಾದ ಭಾವನಿಷ್ಪತ್ತಿಯುಳ್ಳಾತನೆಂದು ಹೇಳುತ್ತಿರ್ದ್ದಪಂ.

**ಗ್ರಂಥ||** **ಭಾವಃ ಪ್ರತೀಯಮಾನೋಽಪಿ ಪರಕಾಯೇ ತು ಕಲ್ಪಿತಃ |**
**ಶುಕ್ತೌ ರಜತವದ್ಯಸ್ಮಾದ್ಭಾವನಿಷ್ಪತ್ತಿಮಾನಯಮ್ ||**

**ಟೀಕು||** ಪರಕಾಯೇ ತು=ಕ್ರಿಯಾನಿಷ್ಪತ್ತಿಸಂಪನ್ನನಾದ ಪರಕಾಯನಲ್ಲಿಯಾಯಿತ್ತಾದೊಡೆ, ಪ್ರತೀಯಮಾನಃ=ತೋರುತ್ತಿರ್ದ್ದ, ಭಾವೋಽಪಿ=ಭಾವವಾಯಿತ್ತಾದೊಡೆ, ಯಸ್ಮಾತ್=ಆವುದಾನೊಂದು ಕಾರಣವಾಗಿ, ಶುಕ್ತೌ=ಚಿಪ್ಪಿನಲ್ಲಿ, ರಜತವತ್=ಬೆಳ್ಳಿಯೋಪಾದಿಯಲ್ಲಿ, ಕಲ್ಪಿತಃ=ಕಲ್ಪಿಸಲುಪಟ್ಟ ಅದು. ತಸ್ಮಾತ್=ಅದು ಕಾರಣವಾಗಿ, ಅಯಂ=ಈ ಕ್ರಿಯಾನಿಷ್ಪತ್ತಿಸಂಪನ್ನನಾದ ಶಿವಯೋಗಿಯು, ಭಾವನಿಷ್ಪತ್ತಿಮಾನ್=ಭಾವನಿಷ್ಪತ್ತಿಯುಳ್ಳ ಆತನು. ||೩೭||

**ಸೂತ್ರ||** ಬಳಿಕ ಜ್ಞಾನಯೋಗಿಗೆ ಭಾವಸಂಬಂಧವಿಲ್ಲದಿದ್ದರು ಸಚ್ಚಿದಾನಂದರೂಪವಾದ ಶಿವನಲ್ಲಿ ಭಾವವನಿರಿಸಬೇಕೆಂದು ಪಂಚಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಭಾವೇನ ನಾಸ್ತಿ ಸಂಬಂಧಃ ಕೇವಲಜ್ಞಾನಯೋಗಿನಃ |**
**ತಥಾಪಿ ಭಾವಂ ಕುರ್ವೀತ ಶಿವೇ ಸಂಸಾರಮೋಚಕೇ ||**

**ಟೀಕು||** ಕೇವಲಜ್ಞಾನಯೋಗಿನಃ=ಬರಿಯ ಜ್ಞಾನಯೋಗ ಉಳ್ಳಾತನಿಗೆ, ಭಾವೇನ ಸಂಬಂಧಃ=ಭಾವದೊಡನೆ ಸಂಬಂಧವು, ನಾಸ್ತಿ=ಇಲ್ಲ. ತಥಾಪಿ=ಅಹಗಾಯಿತ್ತಾದೊಡೆಯು, ಸಂಸಾರಮೋಚಕೇ=ಭವಪಾಶವನು ಬಿಡಿಸುವ, ಶಿವೇ=ಪರಶಿವನಲ್ಲಿ, ಭಾವಂ=ಸ್ಥಿರಭಾವವನು, ಕುರ್ವೀತ=ಮಾಡುವನು. ||೩೮||

**ಗ್ರಂಥ||** **ಪರಿಪೂರ್ಣಪ್ರಬೋಧೇಽಪಿ ಭಾವಂ ಶಂಭೌ ನ ವರ್ಜಯೇತ್ |**
**ಭಾವೋ ಹಿ ನಿಹಿತಸ್ತಸ್ಮಿನ್ಭವಸಾಗರತಾರಕಃ ||**

**ಟೀಕು||** ಪರಿಪೂರ್ಣಪ್ರಬೋಧೇ=ಪರಿಪೂರ್ಣವಾದ ಚಿದಾನಂದವುಳ್ಳ, ಶಂಭೌ ವಿಷಯೇ=ಶಿವವಿಷಯವಾಗಿ, ಭಾವಂ=ಭಾವವನು, ನ ವರ್ಜಯೇತ್=ಬಿಡಲಾಗದು. ತಸ್ಮಿನ್=ಆ ಪರಶಿವನಲ್ಲಿ,

ನಿಹಿತಃ=ಇರಿಸಲುಪಟ್ಟ, ಭಾವೋಽಪಿ=ಭಾವವಾಯಿತ್ತಾದೊಡೆ, ಭವಸಾಗರತಾರಕಃ=ಸಂಸಾರ ಸಮುದ್ರವನು ದಾಂಟಿಸುತ್ತಿರ್ದ್ದ ಅದು, ಹಿ=ಪ್ರಸಿದ್ಧವು. ||೩೯||

ಗ್ರಂಥ|| **ನಿವರ್ತ್ಯ ಜನ್ಮಜಂ ದುಃಖಂ ಭಾವಃ ಶೈವೋ ನಿವರ್ತತೇ ।**
**ಯಥಾ ಕಾಷ್ಠಾದಿಕಂ ದಗ್ಧ್ವಾ ಸ್ವಯಂ ಶಾಮ್ಯತಿ ಪಾವಕಃ ॥**

**ಟೀಕು||** ಶೈವೋಭಾವಃ=ಶಿವಸಂಬಂಧವಾದ ಭಾವವು, ಜನ್ಮಜಂ ದುಃಖಂ=ಸಂಸಾರದಿಂದೆ ಹುಟ್ಟಿದ ದುಃಖವನು, ನಿವರ್ತ್ಯ=ತೊಲಗಿಸಿ, ಸ್ವಯಂ=ತಾನು, ನಿವರ್ತತೇ=ನಿವೃತ್ತಿಯಾಗುತ್ತಿರ್ದ್ದಪುದು. ಪಾವಕಃ=ಅಗ್ನಿಯು, ಕಾಷ್ಠಾದಿಕಂ=ಕಾಷ್ಠ ಮೊದಲಾದ ಸಮಸ್ತವನು, ದಗ್ಧ್ವಾ=ಸುಟ್ಟು, ಸ್ವಯಂ=ತಾನು, ಯಥಾ=ಹೇಗೆ, ಶಾಮ್ಯತಿ=ಕೆಡುತ್ತಿರ್ದ್ದಪುದು. ಹಾಗೆಯೇ ಶಿವಭಾವವು ಭವರೋಗವನು ಕೆಡಿಸಿ ತಾನು ಕೆಡುತ್ತಿರ್ದ್ದಪುದೆಂಬುದರ್ಥ. ||೪೦||

ಗ್ರಂಥ|| **ಪ್ರಕಾಶಿತೇ ಶಿವಾನಂದೇ ತದ್ಭಾವೈಃ ಕಿಂ ಪ್ರಯೋಜನಮ್ ।**
**ಸಿದ್ಧೌ ಸಾಧ್ಯೇ ಚಿರೇಣಾಪಿ ಸಾಧನೈಃ ಕಿಂ ಪ್ರಯೋಜನಮ್ ॥**

**ಟೀಕು||** ಶಿವಾನಂದೇ=ಶಿವಸುಖವು, ಪ್ರಕಾಶಿತೇ ಸತಿ=ಪ್ರಕಾಶಿಸಲುಪಡಲಿಕೆಯಾಗಿ, ತದ್ಭಾವೈಃ=ಆ ಶಿವಭಾವಂಗಳಿಂದೆ, ಕಿಂ ಪ್ರಯೋಜನಂ=ಏನು ಪ್ರಯೋಜನವು? ಏನೂ ಪ್ರಯೋಜನವಿಲ್ಲವೆಂಬುದರ್ಥ. ಸಿದ್ಧೇ=ಸಿದ್ಧವಸ್ತುವು, ಚಿರೇಣಾಪಿ=ಬಹುಕಾಲದಿಂದಲಾಯಿತ್ತಾದೊಡೆಯು, ಸಾಧ್ಯೇ ಸತಿ=ಸಾಧ್ಯವಾಗಲಿಕೆಯಾಗಿ, ಸಾಧನೈಃ=ಸಾಧನಂಗಳಿಂದೆ, ಕಿಂ ಪ್ರಯೋಜನಂ=ಏನು ಪ್ರಯೋಜನವು? ಏನೂ ಪ್ರಯೋಜನವಿಲ್ಲವೆಂಬುದರ್ಥ. ||೪೧||

ಗ್ರಂಥ|| **ಏಕೀಕೃತೇ ಶಿವೇ ಭಾವೇ ಜ್ಞಾನೇನ ಸಹ ಸಂಯಮೀ ।**
**ವಿಸ್ಮಿತಾತ್ಮಸಮಾವೇಶಃ ಶಿವಭಾವೇ ವಿಭಾಸತೇ ॥**

**ಟೀಕು||** ಭಾವೇ=ಭಾವವು, ಜ್ಞಾನೇನ ಸಹ=ಪರೋಕ್ಷಜ್ಞಾನದೊಡನೆ ಕೂಡಿ, ಶಿವೇ=ಅಪರೋಕ್ಷ ಜ್ಞಾನರೂಪನಾದ ಪರಶಿವನಲ್ಲಿ, ಏಕೀಕೃತೇ ಸತಿ=ಏಕೀಕರಿಸಲುಪಡಲಿಕೆಯಾಗಿ, ಸಂಯಮೀ=ಭಾವನಿಷ್ಪತ್ತಿಯುಳ್ಳ ಶಿವಯೋಗಿಯು, ವಿಸ್ಮಿತಾತ್ಮಸಮಾವೇಶಃ ಸನ್=ಆಶ್ಚರ್ಯವ ಮಾಡಲುಪಟ್ಟ ಸ್ವಸ್ವರೂಪಾವೇಶವುಳ್ಳಾತನಾಗುತಲು, ಶಿವಭಾವೇ=ಶಿವಸ್ವರೂಪಿನಲ್ಲಿಯೆ, ವಿಭಾಸತೇ=ಪ್ರಕಾಶಿಸುತ್ತಿರ್ದ್ದಪನು. ||೪೨||

**ಸೂತ್ರ||** ಬಳಿಕ ಭಾವ ಜ್ಞಾನಂಗಳಿಗೆ ಅಭೇದವನು ಹೇಳಿ ಭಾವನಿಷ್ಪತ್ತಿಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ನ ಭಾವೇನ ವಿನಾ ಜ್ಞಾನಂ ನ ಭಾವೋ ಜ್ಞಾನಮಂತರಾ ।**
**ಮೋಕ್ಷಾಯ ಕಾರಣಂ ಪ್ರೋಕ್ತಂ ತಸ್ಮಾದುಭಯಮಾಶ್ರಯೇತ್ ॥**

**ಟೀಕು||** ಭಾವೇನ ವಿನಾ=ಭಾವ ಹೊರತಾಗಿ, ಜ್ಞಾನಂ=ಜ್ಞಾನವು, ನ=ಇಲ್ಲ. ಜ್ಞಾನಮಂತರಾ= ಜ್ಞಾನಹೊರತಾಗಿ, ಭಾವೋ ನ=ಭಾವವಿಲ್ಲ. ತಸ್ಮಾತ್=ಅದು ಕಾರಣವಾಗಿ, ಕಾರಣಂ ಪ್ರೋಕ್ತಂ=ಅನ್ಯೋನ್ಯ ಕಾರಣವಾಗಿ ಹೇಳಲುಪಟ್ಟ, ತದುಭಯಂ=ಆ ಜ್ಞಾನಭಾವವೆರಡನು, ಮೋಕ್ಷಾಯ=ಮೋಕ್ಷಕ್ಕೋಸುಗ, ಆಶ್ರಯೇತ್=ಆಶ್ರಯಿಸುವುದು. ||೪೩||

**ಇತಿ ಭಾವನಿಷ್ಪತ್ತಿಸ್ಥಲಮ್**

## ೪೨. ಶರಣಸ್ಥಲೇ ಜ್ಞಾನನಿಷ್ಪತ್ತಿಸ್ಥಲಮ್

**ಸೂತ್ರ||** ಬಳಿಕ "ಯಥಾ ಮನಃ ಪರೇ ತತ್ತ್ವೇ ಲಬ್ಧಲಕ್ಷ್ಯಂ ವಿಲೀಯತೇ।
ತಥಾ ಹ್ಯಶೇಷವಿಜ್ಞಾನಂ ವಿನಾಶಮುಪಗಚ್ಛತಿ"|| ಯೆಂಬ ನಿಃಶ್ವಾಸಕಾರಿಕಾ ಸೂತ್ರಾರ್ಥವನು ಪ್ರಕಟಿಸುತ್ತ ಆ ಈ ಭಾವನಿಷ್ಪತ್ತಿಸಂಪನ್ನನೆ ಸ್ವಪ್ನದೋಪಾದಿಯಲ್ಲಿ ಮಿಥ್ಯೆಯಾದ ಜ್ಞಾನನಿಷ್ಪತ್ತಿಯುಳ್ಳಾತನೆಂದು ಹೇಳುತ್ತಿರ್ದಪಂ.

**ಗ್ರಂಥ||** **ಜ್ಞಾನಸ್ಯ ವ್ಯವಹಾರೇಽಪಿ ಜ್ಞೇಯಾಭಾವಾತ್ಸ್ವಭಾವತಃ ।**
**ಸ್ವಪ್ನವದ್ ಜ್ಞಾನನಿಷ್ಪತ್ತ್ಯಾ ಜ್ಞಾನನಿಷ್ಪನ್ನ ಇತ್ಯಸೌ ॥**

**ಟೀಕು||** ವ್ಯವಹಾರೇ=ಜಗದ್ವ್ಯವಹಾರದಲ್ಲಿಯ, ಜ್ಞಾನಸ್ಯ=ಜ್ಞಾನಕ್ಕೆ, ಸ್ವಭಾವತಃ=ಸ್ವಭಾವದ ದೆಸೆಯಿಂದೆ, ಜ್ಞೇಯಾಭಾವಾತ್=ಜ್ಞೇಯವಿಲ್ಲವಾದಕಾರಣವಾಗಿ, ಅಸೌ=ಈ ಭಾವನಿಷ್ಪತ್ತಿ ಸಂಪನ್ನನಾದ ಶಿವಯೋಗಿಯು, ಸ್ವಪ್ನವತ್ ಜ್ಞಾನನಿಷ್ಪತ್ತ್ಯಾಪಿ=ಸ್ವಪ್ನದೋಪಾದಿಯಲ್ಲಿ ಮಿಥ್ಯೆಯಾದ ಜ್ಞಾನನಿಷ್ಪತ್ತಿಯಿಂದವಾಯಿತ್ತಾದೊಡೆ, ಜ್ಞಾನನಿಷ್ಪನ್ನ ಇತಿ=ಜ್ಞಾನನಿಷ್ಪತ್ತಿಯುಳ್ಳಾತನೆಂದು, ಪ್ರೋಕ್ತಃ=ಹೇಳಲುಪಟ್ಟನು. ||೪೪||

**ಸೂತ್ರ||** ಬಳಿಕ ಆ ಜ್ಞಾನನಿಷ್ಪತ್ತಿಸಂಪನ್ನನಿಗೆ, ಜ್ಞೇಯವಸ್ತುವಿಲ್ಲವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಸ್ವಪ್ನಜಾತಂ ಯಥಾ ಜ್ಞಾನಂ ಸಹ ಸ್ವಾರ್ಥೈರ್ನಿವರ್ತತೇ ।**
**ತಥಾಽಽತ್ಮನಿ ಪ್ರಕಾಶೇ ತು ಜ್ಞಾನೇ ಜ್ಞೇಯಂ ನಿವರ್ತತೇ ॥**

**ಟೀಕು||** ಸ್ವಪ್ನಜಾತಂ=ಸ್ವಪ್ನದಲ್ಲಿ ಹುಟ್ಟಿರ್ದ್ದ, ಜ್ಞಾನಂ=ವಿಷಯಜ್ಞಾನವು, ಸ್ವಾರ್ಥೈಃ ಸಹ=ತನ್ನ ಪ್ರಯೋಜನಂಗಳೊಡನೆ ಕೂಡಿ, ಯಥಾ=ಹೇಗೆ, ನಿವರ್ತತೇ=ತಿರುಗುತ್ತಿರ್ದ್ದಪುದು, ತಥಾ=ಹಾಗೆಯೇ, ಆತ್ಮನಿ=ಸ್ವಸ್ವರೂಪಜ್ಞಾನವು, ಪ್ರಕಾಶೇ ಸತಿ=ಪ್ರಕಾಶಿಸಲಿಕೆಯಾಗಿ, ಜ್ಞಾನಂ ಜ್ಞೇಯಂ ತು=ಜ್ಞಾನದಿಂದೆ ಅರಿಯಲು ಯೋಗ್ಯವಾದ ವಿಷಯವಾಯಿತ್ತಾದೊಡೆ, ನಿವರ್ತತೇ=ನಿವರ್ತಿಯಾಗುತ್ತಿರ್ದ್ದಪುದು. ||೪೫||

**ಗ್ರಂಥ||** **ಪರಿಪೂರ್ಣೇ ಮಹಾನಂದೇ ಪರಮಾಕಾಶಲಕ್ಷಣೇ ||**
**ಶಿವೇ ವಿಲೀನಚಿತ್ತಸ್ಯ ಕುತೋ ಜ್ಞೇಯಾಂತರೇ ಕಥಾ ||**

**ಟೀಕು||** ಪರಿಪೂರ್ಣೇ=ಪರಿಪೂರ್ಣನಾದ, ಮಹಾನಂದೇ=ಮಹಾನಂದಸ್ವರೂಪನಾದ, ಪರಮಾಕಾಶಲಕ್ಷಣೇ=ಮಹಾಚಿದಾಕಾಶವೆ ಲಕ್ಷಣವಾಗುಳ್ಳ, ಶಿವೇ=ಸದ್ರೂಪವಾದ ಪರಮಶಿವನಲ್ಲಿ, ವಿಲೀನ ಚಿತ್ತಸ್ಯ=ಅಡಗಿದ ಚಿತ್ತವುಳ್ಳ ಶಿವಯೋಗಿಗೆ, ಜ್ಞೇಯಾಂತರೇ=ಜ್ಞೇಯವಾದ ಅನ್ಯವಸ್ತುವಿನಲ್ಲಿಯ, ಕಥಾ ಕುತಃ=ಪ್ರಸಂಗವೆತ್ತಣದು? ||೪೬||

**ಸೂತ್ರ||** ಬಳಿಕ ಜ್ಞಾನನಿಷ್ಪತ್ತಿಸಂಪನ್ನನ ನಿಜವಾದ ಜ್ಞಾನಸ್ವರೂಪವನು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ಅಖಂಡಾನಂದಸಂವಿತ್ತಿಸ್ವರೂಪಂ ಬ್ರಹ್ಮ ಕೇವಲಮ್ |**
**ಮಿಥ್ಯಾ ತದನ್ಯದಿತ್ಯೇಷಾಂ ಸ್ಥಿತಿರ್ಜ್ಞಾನಮಿಹೋಚ್ಯತೇ ||**

**ಟೀಕು||** ಬ್ರಹ್ಮ=ಪರಬ್ರಹ್ಮವು, ಕೇವಲಂ=ಬರಿಯ, ಅಖಂಡಾನಂದಸಂವಿತ್ತಿಸ್ವರೂಪಂ= ಪೂರ್ಣಾನಂದ ಜ್ಞಾನವೆ ಸ್ವರೂಪವಾಗುಳ್ಳ ಅದು. ತದನ್ಯತ್=ಆ ಬ್ರಹ್ಮದದೆಸೆಯಿಂದೆ ಭಿನ್ನವಾದ ಜಗಜ್ಜಾಲವು, ಮಿಥ್ಯಾ=ಮಿಥ್ಯೆ ಎಂದು, ಏಷಾಂ ಸ್ಥಿತಿಃ=ಈ ಸ್ಥಿತಿಯು, ಜ್ಞಾನಂ=ಜ್ಞಾನವೆಂದು, ಇಹ=ಇಲ್ಲಿ ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೪೭||

**ಗ್ರಂಥ||** **ಸತ್ತಾತ್ಮನಾಽನುವೃತ್ತಂ ಯದ್ಘಟಾದಿಷು ಪರಂ ಹಿ ತತ್ |**
**ವ್ಯಾವರ್ತಮಾನಾ ಮಿಥ್ಯೇತಿ ಸ್ಥಿತಿರ್ಜ್ಞಾನಮಿಹೋಚ್ಯತೇ ||**

**ಟೀಕು||** ಸತ್ತಾ=ಸದ್ರೂಪವಾಗಿರ್ದ್ದ, ಆತ್ಮನಾ="ಅಯಮಾತ್ಮಾ ಬ್ರಹ್ಮ"ಯೆಂದು ಶ್ರುತಿಸಿದ್ಧವಾದ ಪರಬ್ರಹ್ಮದಿಂದೆ, ಪರಂ=ಅನ್ಯವಾದ, ಘಟಾದಿಷು=ಘಟಾದಿಗಳಲ್ಲಿ, ಅನುವೃತ್ತಂ=ಬಳಿವಿಡಿದು ವರ್ತಿಸುತ್ತಿರ್ದ್ದ, ಯತ್=ಆವುದಾನೊಂದು ನಾಮರೂಪವುಂಟು; ತತ್=ಅದು, ಮಿಥ್ಯೇತಿ=ಮಿಥ್ಯೆ ಎಂದು, ವ್ಯಾವರ್ತಮಾನಾಸ್ಥಿತಿಃ=ತೊಲಗಿಸಲುಪಡುತ್ತಿರ್ದ್ದ ಸ್ಥಿತಿಯೆ, ಜ್ಞಾನಂ=ಜ್ಞಾನವೆಂದು, ಇಹ=ಇಲ್ಲಿ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ಹಿ=ಪ್ರಸಿದ್ಧವು. ||೪೮||

ಗ್ರಂಥ॥ ಅಕಾರಣಮಕಾರ್ಯಂ ಯದಶೇಷೋಪಾಧಿವರ್ಜಿತಮ್ ।
ತದ್ಬ್ರಹ್ಮ ತದಹಂ ಚೇತಿ ನಿಷ್ಠಾಜ್ಞಾನಮುದೀರ್ಯತೇ ॥

ಟೀಕು॥ ಯತ್=ಆವುದಾನೊಂದು ವಸ್ತುವು, ಅಕಾರ್ಯಮಕಾರಣಂ="ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ। ನ ತತ್ಸಮಶ್ಚಾಭ್ಯಧಿಕಶ್ಚದೃಶ್ಯತೇ॥" ಯೆಂದು ಶ್ವೇತಾಶ್ವತರಶ್ರುತಿಯುಂಟಾಗಿ, ಕಾರ್ಯಕಾರಣವಿಲ್ಲದೆ, ಅಶೇಷೋಪಾಧಿವರ್ಜಿತಂ=ಸಮಸ್ತ ಉಪಾಧಿಗಳಿಂದೆ ಬಿಡಲುಪಟ್ಟ ಅದು. ತತ್=ಆ ವಸ್ತುವೆ, ಬ್ರಹ್ಮ=ಪರಬ್ರಹ್ಮವು. ತದಹಂ=ಆ ಬ್ರಹ್ಮವೆ ನಾನು; ಇತಿ ನಿಷ್ಠಾ ಚ=ಹೀಗೆಂಬ ನಿಷ್ಠೆಯೆ, ಜ್ಞಾನಂ=ಜ್ಞಾನವೆಂದು, ಉದೀರ್ಯತೇ=ಹೇಳಲುಪಡುತ್ತಿರ್ದ್ದಪುದು. ॥೪೯॥

ಸೂತ್ರ॥ ಬಳಿಕ ಆ ಚಿದ್ಬ್ರಹ್ಮದ್ರಲ್ಲಿ ಸಮರಸವಾಗಿ ಜ್ಞಾನನಿಷ್ಪತ್ತಿಯುಳ್ಳ ಶಿವಯೋಗಿಗೆ ಬೇರೆ ತ್ರಿಪುಟಿಯ ವ್ಯವಹಾರವಿಲ್ಲವೆಂದು ಹೇಳಿ ಜ್ಞಾನನಿಷ್ಪತ್ತಿಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ ಜ್ಞಾತಾಽಪ್ಯಹಂ ಜ್ಞೇಯಮಿದಮಿತಿ ವ್ಯವಹೃತಿಃ ಕುತಃ ।
ಅಭೇದಬ್ರಹ್ಮಸಾರಸ್ಯೇ ನಿರಸ್ತಾಖಿಲವಸ್ತುನಿ ॥

ಟೀಕು॥ ನಿರಸ್ತಾಖಿಲವಸ್ತುನಿ=ತೊಲಗಿಸಲುಪಟ್ಟ ನಾಮರೂಪಾತ್ಮಕವಾದ ಸಮಸ್ತ ವಸ್ತುಗಳುಳ್ಳ, ಅಭೇದಬ್ರಹ್ಮಸಾರಸ್ಯೇ ಸತಿ="ಏಕಮೇವಾಽದ್ವಿತೀಯಂ ಬ್ರಹ್ಮ"ಯೆಂದು ಶ್ರುತಿಸಿದ್ಧವಾದ ಅದ್ವೈತ ಬ್ರಹ್ಮದೊಡನೆ ಸಮರಸವಾಗಲಾಗಿ, ಅಹಂಜ್ಞಾತಾ=ನಾನು ಬಲ್ಲೆನು; ಇದಮಪಿ=ಇದಾಯಿತ್ತಾದಡೆ, ಜ್ಞೇಯಂ=ಅರಿಯಲು ಯೋಗ್ಯವು; ಇತಿ ವ್ಯವಹೃತಿಃ=ಹೀಗೆಂಬ ವ್ಯವಹಾರಜ್ಞಾನವು, ಕುತಃ=ಎತ್ತಣದು?
॥೫೦॥

## ಇತಿ ಜ್ಞಾನನಿಷ್ಪತ್ತಿಸ್ಥಲಮ್

## ೪೩. ಶರಣಸ್ಥಲೇ ಪಿಂಡಾಕಾಶಸ್ಥಲಮ್

ಸೂತ್ರ॥ ಬಳಿಕ "ಏಕ ಏವ ಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ।
ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್"॥ ಯೆಂದು ಅಮೃತ ಬಿಂದೂಪನಿಷದರ್ಥವನು ಪ್ರಕಟಿಸುತ್ತ ಜ್ಞಾನಿಷ್ಪತ್ತಿಸಂಪನ್ನನಿಗೆ ಸುಲಭವಾದ ಪಿಂಡಾಕಾಶಸ್ಥಲವನು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಯಥಾ ಪಿಂಡಸ್ಥ ಆಕಾಶಸ್ತಥಾಽಽತ್ಮಾ ಪೂರ್ಣ ಉಚ್ಯತೇ ।
ಏತದರ್ಥವಿವೇಕೋ ಯಃ ಪಿಂಡಾಕಾಶಸ್ಥಲಂ ವಿದುಃ ॥

**ಟೀಕು॥** ಪೂರ್ಣ=ಪರಿಪೂರ್ಣವಾದ, ಆಕಾಶಃ=ಆಕಾಶವು, ಯಥಾ=ಹೇಗೆ, ಪಿಂಡಸ್ಥಃ=ಪಿಂಡದಲ್ಲಿ ಇರುತ್ತಿರ್ದ್ದ ಅದು, ತಥಾ=ಹಾಗೆಯೇ, ಆತ್ಮಾಪಿಂಡಸ್ಥಿತಃ=ಆತ್ಮಪಿಂಡಸ್ಥಿತವಾದಾತ್ಮನು, ಪೂರ್ಣಃ=ಪರಿಪೂರ್ಣನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ಅಸ್ಯ=ಈ ಜ್ಞಾನನಿಷ್ಪತ್ತಿ ಸಂಪನ್ನನ, ಯಃ ಏತದರ್ಥ ವಿವೇಕಃ=ಆವುದಾನೊಂದು ಈ ಅರ್ಥದ ವಿವೇಕವುಂಟು, ತತ್=ಅದನು, ಪಿಂಡಾಕಾಶಸ್ಥಲಂ=ಪಿಂಡಾಕಾಶಸ್ಥಲವನಾಗಿ, ವಿದುಃ=ಅರಿವುತ್ತಿರ್ದ್ದಪರು. ॥೩೧॥

**ಗ್ರಂಥ॥** **ಘಟೋಪಾಧಿರ್ಯಥಾಽಽಕಾಶಃ ಪರಿಪೂರ್ಣಃ ಸ್ವರೂಪತಃ ।**
**ತಥಾ ಪಿಂಡಸ್ಥಿತೋ ಹ್ಯಾತ್ಮಾ ಪರಿಪೂರ್ಣಃ ಪ್ರಕಾಶತೇ ॥**

**ಟೀಕು॥** ಘಟೋಪಾಧಿಃ=ಘಟೋಪಾಧಿಯುಳ್ಳ, ಆಕಾಶಃ=ಆಕಾಶವು, ಸ್ವರೂಪತಃ= ಸ್ವರೂಪದ ದೆಸೆಯಿಂದೆ, ಯಥಾ=ಹೇಗೆ, ಪರಿಪೂರ್ಣಃ=ಪರಿಪೂರ್ಣವಾಗಿದ್ದದು, ತಥಾ=ಹಾಗೆಯೆ, ಪಿಂಡಸ್ಥಿತಃ=ಪಿಂಡದಲ್ಲಿಯಿರುತ್ತಿರ್ದ್ದ, ಆತ್ಮಾ=ಆತ್ಮನು, ಸ್ವರೂಪತಃ=ಸಚ್ಚಿದಾನಂದಸ್ವರೂಪದ ದೆಸೆಯಿಂದೆ, ಪರಿಪೂರ್ಣಃ=ನಿತ್ಯಪರಿಪೂರ್ಣನಾಗಿ, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪನು. ॥೩೨॥

**ಗ್ರಂಥ॥** **ಅಂತಃಸ್ಥಿತಂ ಪರಾಕಾಶಂ ಶಿವಮದ್ವೈತ ಲಕ್ಷಣಮ್ ।**
**ಭಾವಯೇದ್ಯಃ ಸುಮನಸಾ ಪಿಂಡಾಕಾಶಃ ಸ ಉಚ್ಯತೇ ॥**

**ಟೀಕು॥** ಅಂತಃಸ್ಥಿತಂ=ಹೃದಯಾಕಾಶಮಧ್ಯದಲ್ಲಿಯಿರುತ್ತಿರ್ದ್ದ, ಪರಾಕಾಶಂ=ಮಹಾ ಚಿದಾಕಾಶ ಸ್ವರೂಪನಾದ, ಅದ್ವೈತಲಕ್ಷಣಂ="ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ" ಯೆಂಬ ಶ್ರುತಿಯಿಂದೆ ಅದ್ವೈತವೆ ಕುರುಹಾಗುಳ್ಳ, ಶಿವಂ="ಈಶಾನಃ ಶಿವ ಏಕೋ ಧ್ಯೇಯಃ ಶಿವಂಕರಃ। ಸರ್ವಮನ್ಯತ್ಪರಿತ್ಯಜ್ಯ ಸಮಾಪ್ತಾಥರ್ವಶಿಖಾ।"ಯೆಂಬ ಅಥರ್ವಶಿಖಾಪ್ರಸಿದ್ಧನಾದ ಪರಮಶಿವನನು, ಯಃ=ಜ್ಞಾನನಿಷ್ಪತ್ತಿಸಂಪನ್ನನಾದ ಆವನಾನೊಬ್ಬ ಶಿವಯೋಗಿಯು, ಸುಮನಸಾ=ನಿರಾಲಂಬವಾಗಿ ಲೇಸಾದ ಮನಸ್ಸಿನಿಂದೆ, ಭಾವಯೇತ್=ಭಾವಿಸುವನು. ಸಃ=ಆತನೆ, ಪಿಂಡಾಕಾಶಃ=ಪಿಂಡಾಕಾಶ ಸ್ವರೂಪನೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ॥೩೩॥

**ಸೂತ್ರ॥** ಬಳಿಕ "ದೇಹೋ ಶಿವಾಲಯಸ್ಸಾಕ್ಷಾತ್ತತ್ರಾಸ್ತೇ ಪರಮಶ್ಶಿವಃ।
ಇತಿ ನಿಶ್ಚಯಸದ್ಭಾವಃ ಪಿಂಡಜ್ಞೋ ಲಿಂಗಮುಚ್ಯತೇ॥" ಯೆಂಬ ವಾತುಲೋತ್ತರಾರ್ಥವನೆ ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಶಿವಾಗಾರಮಿದಂ ಪ್ರೋಕ್ತಂ ಶರೀರಂ ಬೋಧದೀಪಿತಮ್ ।**
**ಷಟ್ತ್ರಿಂಶತ್ತತ್ತ್ವಘಟಿತಂ ಸುಮನಃ ಪದ್ಮಪೀಠಕಮ್ ॥**

**ಟೀಕು||** ಷಟ್ತ್ರಿಂಶತತ್ತ್ವಘಟಿತಂ=ಪೃಥಿವ್ಯಾದಿಶಿವತತ್ತ್ವಾಂತವಾದ ಷಟ್ತ್ರಿಂಶತ್ತತ್ತ್ವಂಗಳಿಂದೆ ಘಟಿಸಲುಪಟ್ಟ, ಸುಮನಃಪದ್ಮಪೀಠಕಂ=ಹೃದಯಕಮಲವೆಂಬ ಪೀಠದೊಡನೆ ಕೂಡಿ ವರ್ತಿಸುತ್ತಿರ್ದ್ದ, ಬೋಧದೀಪಿತಂ=ಜ್ಞಾನದೀಪದಿಂದೆ ಪ್ರಕಾಶಿಸಲುಪಟ್ಟ, ಇದಂ ಶರೀರಂ=ಈ ಪಿಂಡವೆ, ಶಿವಾಗಾರಂ=ಶಿವಾಲಯವೆಂದು, ಪ್ರೋಕ್ತಂ=ಹೇಳಲುಪಟ್ಟಿತ್ತು. ||೫೪||

ಗ್ರಂಥ|| ಪರಾಕಾಶಸ್ವರೂಪೇಣ ಪ್ರಕಾಶಃ ಪರಮೇಶ್ವರಃ ।
ಹೃದಾಕಾಶಗುಹಾಲೀನೋ ದೃಶ್ಯತೇಽಂತಃ ಶರೀರಿಣಾಮ್ ॥

**ಟೀಕು||** ಪರಾಕಾಶಸ್ವರೂಪೇಣ=ದೊಡ್ಡಿತ್ತಾದ ಚಿದಾಕಾಶಸ್ವರೂಪಿನಿಂದೆ, ಪ್ರಕಾಶಃ= ಪ್ರಕಾಶಿಸುತ್ತಿರ್ದ್ದ, ಪರಮೇಶ್ವರಃ=ಪರಮಶಿವನು, ಶರೀರಿಣಾಂ=ದೇಹಿಗಳ, ಅಂತಃ=ಒಳಗೆ, ಹೃದಾಕಾಶಗುಹಾಲೀನಃ ಸನ್=ಹೃದಯಾಕಾಶದ ಗುಹೆಯಲ್ಲಿ ಅಡಗಿದ್ದಾತನಾಗುತಲು, ದೃಶ್ಯತೇ=ಉಪದೇಶಿಸಿದ್ದುದರಿಂದೆ ಕಾಣಲುಪಡುತ್ತಿರ್ದ್ದಪನು. ||೫೫||

**ಸೂತ್ರ||** ಬಳಿಕ ಆ ಅರ್ಥವನೆ ಪಕ್ಷಾಂತರವಾಗಿ ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| ಏತಚ್ಛಿವಪುರಂ ಪ್ರೋಕ್ತಂ ಸಪ್ತಧಾತುಸಮಾವೃತಮ್ ।
ಅತ್ರ ಹೃತ್ಪಂಕಜಂ ವೇಶ್ಮ ಸೂಕ್ಷ್ಮಾಂಬರಮನೋಹರಮ್ ॥

**ಟೀಕು||** ಸಪ್ತಧಾತುಸಮಾವೃತಂ=ಸಪ್ತಧಾತುಗಳಿಂದೆ ಬಳಸಲುಪಟ್ಟ, ಏತತ್=ಈ ಶರೀರವೆ, ಶಿವಪುರಂ=ಶಿವನಪಟ್ಟಣವೆಂದು, ಪ್ರೋಕ್ತಂ=ಹೇಳಲುಪಟ್ಟಿತ್ತು. ಅತ್ರ=ಈ ಪಿಂಡವೆಂಬ ಪಟ್ಟಣದಲ್ಲಿ, ಸೂಕ್ಷ್ಮಾಂಬರಮನೋಹರಂ=ಸೂಕ್ಷ್ಮವಾದಂತರಾಕಾಶದಿಂದೆ ಮನೋಹರವಾಗಿರ್ದ್ದ, ಹೃತ್ಪಂಕಜಂ= ಹೃದಯಕಮಲವೆ, ವೇಶ್ಮ=ಅಂತಃಪುರವು. ||೫೬||

ಗ್ರಂಥ|| ತತ್ರ ಸನ್ನಿಹಿತಂ ಸಾಕ್ಷಾತ್ ಸಚ್ಚಿದಾನಂದಲಕ್ಷಣಮ್ ।
ನಿತ್ಯಸಿದ್ಧಃ ಪ್ರಕಾಶಾತ್ಮಾ ಜಲಸ್ಥಾಕಾಶವಚ್ಛಿವಃ ॥

**ಟೀಕು||** ತತ್ರ=ಅಲ್ಲಿ, ನಿತ್ಯಸಿದ್ಧಃ=ನಿತ್ಯಪರಿಪೂರ್ಣತ್ವದಿಂದೆ ಸಿದ್ಧನಾಗಿ, ಸಚ್ಚಿದಾನಂದಲಕ್ಷಣಂ= ಸಚ್ಚಿದಾನಂದವೆ ಕುರುಹಾಗುಳ್ಳ, ಶಿವಃ=ಪರಮಶಿವನು, ಜಲಸ್ಥಾಕಾಶವತ್=ಜಲದಲ್ಲಿ ಇರುತ್ತಿರ್ದ್ದ ಆಕಾಶದೋಪಾದಿಯಲ್ಲಿ, ಸಾಕ್ಷಾತ್=ಪ್ರತ್ಯಕ್ಷವಾಗಿ, ಪ್ರಕಾಶಾತ್ಮಾ=ಪ್ರಕಾಶವೆ ಸ್ವರೂಪವಾಗುಳ್ಳಾತನಾಗಿ, ಸನ್ನಿಹಿತಂ=ಇರುತ್ತಿರ್ದ್ದ ಆತನು. ||೫೭||

ಸೂತ್ರ॥ ಬಳಿಕ ಆ ಅರ್ಥವನೆ ವಿಶೇಷಿಸಿ ಪಿಂಡಾಕಾಶಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ **ಅಂತರಾಕಾಶಬಿಂಬಸ್ಥಮಶೇಷೋಪಾಧಿವರ್ಜಿತಮ್ ।**
**ಘಟಾಕಾಶ ಇವ ಚ್ಛಿನ್ನಂ ಭಾವಯೇಚ್ಚಿನ್ಮಯಂ ಶಿವಮ್ ॥**

**ಟೀಕು॥** ಅಂತರಾಕಾಶಬಿಂಬಸ್ಥಂ=ಜಲಮಧ್ಯದಲ್ಲಿಯ ಆಕಾಶಬಿಂಬದಲ್ಲಿಯಿರುತ್ತಿರ್ದ್ದ, ಅಶೇಷೋಪಾಧಿವರ್ಜಿತಂ=ಸಮಸ್ತ ಉಪಾಧಿಗಳಿಂದೆ ಬಿಡಲುಪಟ್ಟ, ಘಟಾಕಾಶ ಇವ ಛಿನ್ನಂ=ಘಟಾಕಾಶದೋಪಾದಿಯಲ್ಲಿ ಖಂಡಿತವಾಗಿರ್ದ್ದ, ಚಿನ್ಮಯಂ ಶಿವಂ=ಚಿದ್ರೂಪನಾದ ಶಿವನನು, ಭಾವಯೇತ್=ಭಾವಿಸುವುದು. ॥೫೮॥

**ಇತಿ ಪಿಂಡಾಕಾಶಸ್ಥಲಮ್**

## ೪೪. ಶರಣಸ್ಥಲೇ ಬಿಂದ್ವಾಕಾಶಸ್ಥಲಮ್

**ಸೂತ್ರ॥** ಬಳಿಕ "ಸದಾಶಿವಾದಿತತ್ತ್ವಾನಾಂ ಕಾರಣಂ ವ್ಯಾಪಕಃ ಪರಃ।
ಬಿಂದುರೂಪಶ್ಶಿವೋ ಧ್ಯೇಯಃ ಬಿಂದ್ವಾಕಾಶ ಇತೀರ್ಯತೇ"॥ ಯೆಂಬ ಕಿರಣತಂತ್ರಾರ್ಥವನು ಪ್ರಕಟಿಸುತ್ತ ಆ ಪಿಂಡಾಕಾಶಸಂಪನ್ನನಿಗೆ ಸುಲಭವಾದ ಬಿಂದ್ವಾಕಾಶಸ್ಥಲವನು ಹೇಳುತ್ತಿರ್ದ್ದಪಂ.

ಗ್ರಂಥ॥ **ಯಥಾಽಽಕಾಶೋ ವಿಭುರ್ಜ್ಞೇಯಸ್ಸರ್ವಪ್ರಾಣ್ಯುಪರಿ ಸ್ಥಿತಃ ।**
**ತಥಾಽಽತ್ಮೇತ್ಯುಪಮಾನಾರ್ಥಂ ಬಿಂದ್ವಾಕಾಶಸ್ಥಲಂ ವಿದುಃ ॥**

**ಟೀಕು॥** ಸರ್ವಪ್ರಾಣ್ಯುಪರಿಸ್ಥಿತಃ=ಸಮಸ್ತಪ್ರಾಣಿಗಳ ಮೇಲೆ ಇರುತ್ತಿರ್ದ್ದ, ಆಕಾಶಃ=ಆಕಾಶವು, ಯಥಾ=ಹೇಗೆ, ವಿಭುಃ=ವ್ಯಾಪಕವಾಗಿದ್ದುದಾಗಿ, ಜ್ಞೇಯಃ=ಅರಿಯಲು ಯೋಗ್ಯವು; ತಥಾ=ಹಾಗೆಯೆ, ಅಸ್ಯ=ಈ ಪಿಂಡಾಕಾಶಸ್ಥಲ ಸಂಪನ್ನನಾದ ಶಿವಯೋಗಿಯ, ಆತ್ಮಾ=ಆತ್ಮನು, ವಿಭುಃ=ಸರ್ವಪ್ರಾಣಿಗಳ ಮೇಲೆಯಿರ್ದ್ದ ಆಕಾಶದೋಪಾದಿಯಲ್ಲಿ ವ್ಯಾಪಕವಾಗಿದ್ದಾತನಾಗಿ, ಜ್ಞೇಯಃ=ಅರಿಯಲು ಯೋಗ್ಯನು. ಇತ್ಯುಪಮಾನಾರ್ಥಂ=ಹೀಗೆಂಬ ಉಪಮಾನಾರ್ಥವನೆ, ಬಿಂದ್ವಾಕಾಶಸ್ಥಲಂ=ಬಿಂದ್ವಾಕಾಶಸ್ಥಲವನಾಗಿಯೆ, ವಿದುಃ=ಅರಿವುತ್ತಿರ್ದ್ದಪರು. ॥೫೯॥

**ಸೂತ್ರ॥** ಬಳಿಕ "ವಾಯುರ್ಯಥೈಕೋ ಭುವನಂ ಪ್ರವಿಷ್ಟಃ
ರೂಪಂ ರೂಪಂ ಪ್ರತಿರೂಪೋ ಬಭೂವ।
ಏಕಸ್ತಥಾ ಸರ್ವಭೂತಾಂತರಾತ್ಮಾ
ರೂಪಂ ರೂಪಂ ಪ್ರತಿರೂಪೋ ಬಹಿಶ್ಚ"॥ ಯೆಂಬ ಕಠವಲ್ಲೀ ಶ್ರುತ್ಯರ್ಥ

ವನು ದೃಷ್ಟಾಂತಪೂರ್ವಕವಾಗಿ ಚತುಸ್ಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ **ಯಥೈಕೋ ವಾಯುರಾಖ್ಯಾತಃ ಸರ್ವಪ್ರಾಣಿಗತೋ ವಿಭುಃ ।**
**ತಥಾಽತ್ಮಾ ವ್ಯಾಪಕಃ ಸಾಕ್ಷಾತ್ಸರ್ವಪ್ರಾಣಿಗತಃ ಸ್ವಯಮ್ ॥**

**ಟೀಕು॥** ಸರ್ವಪ್ರಾಣಿಗತಃ=ಸಮಸ್ತಪ್ರಾಣಿಗಳಿಗೆ ಪ್ರಾಣರೂಪವಾಗಿ ಎಯ್ದಿರ್ದ್ದ, ಏಕಃ ವಾಯುಃ= ಒಂದು ವಾಯುವೆ, ಯಥಾ=ಹೇಗೆ, ವಿಭುಃ=ವ್ಯಾಪಕವಾಗಿದ್ದುದಾಗಿ, ಆಖ್ಯಾತಃ=ಹೇಳಲುಪುಟ್ಟಿತ್ತು. ತಥಾ=ಹಾಗೆಯೆ, ವ್ಯಾಪಕಃಆತ್ಮಾ=ಆತ್ಮವ್ಯಾಪಕನಾಗಿರ್ದ್ದ ಆತನು, ಸ್ವಯಂ=ತಾನೆ, ಸಾಕ್ಷಾತ್= ಪ್ರತ್ಯಕ್ಷವಾಗಿ, ಸರ್ವಪ್ರಾಣಿಗತಃ=ಸಮಸ್ತಪ್ರಾಣಿಗಳ ಪ್ರಾಣವನು ಎಯ್ದಿರ್ದ್ದ ಆತನು. ॥೬೦॥

ಗ್ರಂಥ॥ **ಯಥಾ ವಹ್ನಿರಮೇಯಾತ್ಮಾ ಸರ್ವತ್ರೈಕೋಽಪಿ ಭಾಸತೇ ।**
**ತಥಾ ಶಂಭುಸ್ಸಮಸ್ತಾತ್ಮಾ ಪರಿಚ್ಛೇದವಿವರ್ಜಿತಃ ॥**

**ಟೀಕು॥** ಅಮೇಯಾತ್ಮಾ=ಪ್ರಮಾಣಿಸಬಾರದ ಸ್ವರೂಪವುಳ್ಳ, ಏಕಃ ವಹ್ನಿರಪಿ=ಒಂದು ಅಗ್ನಿಯಾಯಿತ್ತಾದೊಡೆ, ಯಥಾ=ಹೇಗೆ, ಸರ್ವತ್ರ=ಎಲ್ಲಾಕಡೆಯಲ್ಲಿಯು, ಭಾಸತೇ=ಪ್ರಕಾಶಿಸುತ್ತಿರ್ದ್ದ ಪುದು. ತಥಾ=ಹಾಗೆಯೆ, ಸಮಸ್ತಾತ್ಮಾ=ಸರ್ವಕ್ಕೆ ಚೈತನ್ಯಾತ್ಮಕನಾದ, ಶಂಭುಃ=ಚಿದ್ವಹ್ನಿರೂಪನಾದ ಪರಮೇಶ್ವರನು, ಪರಿಚ್ಛೇದವಿವರ್ಜಿತಃ=ಖಂಡಿತದಿಂದೆ ಬಿಡಲುಪಟ್ಟ ಆತನು.

ತಾತ್ಪರ್ಯ॥ ಹೇಗೆ ಅಗ್ನಿ ಒಂದೇ ಆಸಾರವೈದ್ಯುತಪಾರ್ಥಿವಬಾಡಬಕಾಲಾಗ್ನಿರೂಪಿನಿಂದೆ ವಿಶ್ವ ವ್ಯಾಪಕವು ಹಾಗೆಯೆ ಚಿದಗ್ನಿರೂಪನಾದ ಶಿವನೊಬ್ಬನೆ ದೇವದಾನವಮಾನವತಿರ್ಯಕ್ ಸ್ಥಾವರ ರೂಢರಾದ ಸರ್ವಾತ್ಮರ‍್ರಲ್ಲಿ ವ್ಯಾಪಕನೆಂದರ್ಥ. ॥೬೧॥

ಗ್ರಂಥ॥ **ಸರ್ವೇಷಾಂ ದೇಹಿನಾಮಂತಶ್ಚಿತ್ತತೋಯಂ ಪ್ರಕಾಶತೇ ।**
**ತಸ್ಮಿನ್ ಪ್ರತಿಫಲತ್ಯಾತ್ಮಾ ಶಿವೋ ದರ್ಪಣವದ್ವಿಭುಃ ॥**

**ಟೀಕು॥** ಸರ್ವೇಷಾಮ್ ದೇಹಿನಾಂ=ಸಮಸ್ತದೇಹಿಗಳ, ಅಂತಃ=ಒಳಗೆ, ಚಿತ್ತ ತೋಯಂ= "ಚಿತ್ತಂ ತು ಚೇತೋ ಹೃದಯಂ ಸಲಿಲಂ ಕಮಲಂ ಜಲಮ್" ಯೆಂದು ಅಭಿಧಾನಕೋಶಪ್ರಸಿದ್ಧವಾದ ಹೃದಯ ಕಮಲವು, ದರ್ಪಣವತ್=ಮುಕುರದೋಪಾದಿಯಲ್ಲಿ, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪುದು. ತಸ್ಮಿನ್=ಕನ್ನಡಿಯೋಪಾದಿಯ ಆ ಹೃದಯಕಮಲದಲ್ಲಿ, ವಿಭುಃ=ವಿಶ್ವವ್ಯಾಪಕನಾದ, ಶಿವಃ=ಶಿವನು, ಆತ್ಮಾ=ಆತ್ಮನೆನಿಸಿಕೊಂಡು, ಪ್ರತಿಫಲತಿ=ಪ್ರತಿಬಿಂಬಿಸುತ್ತಿರ್ದ್ದಪನು. ವೇದೋಪನಿಷದ್ ಗಾಯತ್ರಿ ಪ್ರಸಿದ್ಧವಾದ ಈ ರಹಸ್ಯವನು ಉಪದೇಶದಿಂದೆ ತಿಳಿವುದು. ॥೬೨॥

ಗ್ರಂಥ॥ **ಏಕೋ ವಶೀಕೃತಃ ಸಂವಿತ್ಪ್ರಕಾಶಾತ್ಮಾ ಪರಾತ್ಪರಃ ।**
**ಸರ್ವಪ್ರಾಣಿಗತೋ ಭಾತಿ ತಥಾಪಿ ವಿಭುರುಚ್ಯತೇ ॥**

**ಟೀಕು॥** ಸಂವಿತ್ಪ್ರಕಾಶಾತ್ಮಾ=ಅರಿವಿನ ಪ್ರಕಾಶವು ಸ್ವರೂಪವಾಗುಳ್ಳ, ಪರಾತ್ಪರಃ=ಪರಕ್ಕೆ ಪರವಾಗಿದ್ದ, ಏಕಃ="ಏಕೋ ದೇವಃ ಸರ್ವಭೂತೇಷು ಗೂಢಃ। ಸರ್ವವ್ಯಾಪೀ ಸರ್ವಭೂತಾಂತರಾತ್ಮಾ॥" ಯೆಂದು ಶ್ರುತಿಪ್ರಸಿದ್ಧವಾದ ಶಿವನೊರ್ವನೆ, ಸರ್ವಪ್ರಾಣಿಗತಃ=ಸಮಸ್ತಪ್ರಾಣಿಗಳನು ಎಯ್ದಿ, ವಶೀಕೃತಃ=ವಶವಾಗಿ ಮಾಡಲುಪಟ್ಟಾತನಾಗಿ, ಭಾತಿ=ಒಪ್ಪುತ್ತಿರ್ದ್ದಪನು. ತಥಾಪಿ=ಅಹಗಾಯಿತ್ತಾದೊಡೆಯು, ವಿಭುಃ=ವ್ಯಾಪಕನಾಗಿ, ಉಚ್ಯತೇ=ಹೇಳಲುಪಡುತ್ತಿರ್ದ್ದಪನು.

**ತಾತ್ಪರ್ಯ॥** "ತಸ್ಮಾದ್ವಾ ಆತ್ಮನ ಆಕಾಶಃ ಸಂಭೂತಃ। ಆಕಾಶಾದ್ವಾಯುಃ। ವಾಯೋರಗ್ನಿಃ। ಅಗ್ನೇರಾಪಃ। ಅದ್ಭ್ಯಃ ಪೃಥಿವೀತಿ"॥ ಯೆಂಬ ಶ್ರುತಿಯಿಂದಲು,
"ಪಂಚಭೂತಾತ್ಮಕೋ ದೇಹಃ ಶಿವಸ್ತತ್ರೈವ ತಿಷ್ಠತಿ।
ಶಿವಾದವನಿಪರ್ಯಂತಂ ಲೋಕೋಽಯಂ ಶಂಕರಾತ್ಮಕಃ"॥ ಯೆಂಬ ಶಿವಾಗಮದಿಂದಲು ಪೂರ್ವೋಕ್ತ ಪಂಚಸೂತ್ರಂಗಳ ದೃಷ್ಟಾಂತಾರ್ಥವನು ನಿಶ್ಚಯಿಸುವುದು. ॥೬೩॥

**ಸೂತ್ರ॥** ಬಳಿಕ ಬಿಂದ್ವಾಕಾಶಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ **ಏಕ ಏವ ಯಥಾ ಸೂರ್ಯಸ್ತೇಜಸಾ ಭಾತಿ ಸರ್ವಗಃ ।**
**ತಥಾಽಽತ್ಮಾ ಶಕ್ತಿಭೇದೇನ ಶಿವಃ ಸರ್ವಗತೋಽ ಭವೇತ್ ॥**

**ಟೀಕು॥** ಸೂರ್ಯಃ ಏಕ ಏವ=ಸೂರ್ಯನೊಬ್ಬನೆ, ತೇಜಸಾ=ವೃಷ್ಟಿಹಿಮೋಷ್ಣಕಿರಣಂಗಳ ತೇಜಸ್ಸಿನಿಂದೆ, ಸರ್ವಗಃ=ಸರ್ವವ್ಯಾಪಕನಾಗಿ, ಯಥಾ=ಹೇಗೆ, ಭಾತಿ=ಪ್ರಕಾಶಿಸುತ್ತಿರ್ದ್ದಪನು; ತಥಾ= ಹಾಗೆಯೆ, ಶಿವಃ=ಶಿವಸ್ವರೂಪನಾದ, ಆತ್ಮಾ=ಆತ್ಮನು, ಶಕ್ತಿಭೇದೇನ=ಅಂತಃಕರಣ ಬಹಿಷ್ಕರಣರೂಪವಾದ ಇಚ್ಛಾಜ್ಞಾನಕ್ರಿಯಾಶಕ್ತಿಗಳ ಭೇದದಿಂದೆ, ಸರ್ವಗತಃ=ಸರ್ವವ್ಯಾಪಕನು ಭವೇತ್=ಅಹನು. ॥೬೪॥

## ಇತಿ ಬಿಂದ್ವಾಕಾಶಸ್ಥಲಮ್

## ೪೫. ಶರಣಸ್ಥಲೇ ಮಹಾಕಾಶಸ್ಥಲಮ್

**ಸೂತ್ರ||** ಬಳಿಕ "ವ್ಯೋಮಾಕಾರಂ ಮಹಾಸೂಕ್ಷ್ಮಂ ವ್ಯಾಪಕಂ ಯೋ ನ ಭಾವಯೇತ್।
ಸಂಸಾರೀ ಸ ಭವೇಲ್ಲೋಕೇ ಬೀಜಕೋಶಕ್ರಿಮಿರ್ಯಥಾ"|| ಯೆಂಬ ದೇವೀಕಾಲೋತ್ತರ ಸೂತ್ರಾರ್ಥವನು ಪ್ರಕಟಿಸುತ್ತ ಆ ಬಿಂದ್ವಾಕಾಶಸ್ಥಲಸಂಪನ್ನನಿಗೆ ಸುಲಭವಾದ ಮಹಾಕಾಶಸ್ಥಲವನು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಪಿಂಡಾಂಡಸ್ಥಂ ಯಥಾ ವ್ಯೋಮ ನ ಭಿನ್ನಂ ತದ್ವದಾತ್ಮನಃ ।**
**ಅಭಿನ್ನಃ ಪರಮಾತ್ಮೇತಿ ಮಹಾಕಾಶಸ್ಥಲಂ ವಿದುಃ ॥**

**ಟೀಕು||** ಪಿಂಡಾಂಡಸ್ಥಂ=ಅಂಡಪಿಂಡಗಳಲ್ಲಿ ಇರುತ್ತಿರ್ದ್ದ, ವ್ಯೋಮ=ಆಕಾಶವು, ಯಥಾ=ಹೇಗೆ, ನ ಭಿನ್ನಂ=ಭಿನ್ನವಲ್ಲ; ತದ್ವತ್=ಆ ಪ್ರಕಾರದಿಂದವೆ, ಅಸ್ಯ=ಈ ಬಿಂದ್ವಾಕಾಶಸಂಪನ್ನನಾದ ಶಿವಯೋಗಿಯು, ಆತ್ಮನಃ=ಚೈತನ್ಯದದೆಸೆಯಿಂದವೆ, ಪರಮಾತ್ಮಾ=ಪರಚೈತನ್ಯವು, ಅಭಿನ್ನಃ=ಭಿನ್ನವಲ್ಲ; ಇತಿ=ಈ ಪ್ರಕಾರವಾದ ಚೈತನ್ಯದ ಭೇದವನೆ, ಮಹಾಕಾಶಸ್ಥಲಂ=ಮಹಾಕಾಶಸ್ಥಲವನಾಗಿ, ವಿದುಃ= ಅರಿವುತ್ತಿರ್ದ್ದಪರು. **||೬೫||**

**ಗ್ರಂಥ||** **ಯಥಾ ನ ಭಿನ್ನಮಾಕಾಶಂ ಘಟೇಷು ಚ ಮಠೇಷು ಚ ।**
**ತಥಾಽಂಡೇಷು ಚ ಪಿಂಡೇಷು ಸ್ಥಿತೋ ಹ್ಯಾತ್ಮಾ ನ ಭಿದ್ಯತಃ ॥**

**ಟೀಕು||** ಆಕಾಶಂ=ಆಕಾಶವು, ಘಟೇಷು ಚ=ಕುಂಭಗಳಲ್ಲಿಯು, ಮಠೇಷು ಚ=ಮಠಗಳಲ್ಲಿಯು ಯಥಾ=ಹೇಗೆ, ನ ಭಿನ್ನಂ=ಭಿನ್ನವಲ್ಲವು, ತಥಾ=ಹಾಗೆ ಅಂಡೇಷು=ಬ್ರಹ್ಮಾಂಡಂಗಳಲ್ಲಿಯು, ಪಿಂಡೇಷು, ಚ=ಪಿಂಡಂಗಳಲ್ಲಿಯು, ಸ್ಥಿತಃ=ಇರುತ್ತಿರ್ದ್ದ, ಆತ್ಮಾ=ಆತ್ಮನು, ನ ಭಿದ್ಯತಃ=ಭಿನ್ನವಾಗುತ್ತಿರನು ಹಿ=ಪ್ರಸಿದ್ಧವು. **||೬೬||**

**ಸೂತ್ರ||** ಬಳಿಕ ಮಹಾಲಿಂಗವೆ ಮಹಾಕಾಶವೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಅನಿರ್ದೇಶ್ಯಮನೌಪಮ್ಯಮವಾಙ್ಮನಸಗೋಚರಮ್ ।**
**ಸರ್ವತೋಮುಖಸಂಪನ್ನಂ ಸತ್ತಾನಂದಂ ಚಿದಾತ್ಮಕಮ್ ॥**

**ಕಾಲಾತೀತಂ ಕಲಾತೀತಂ ಕ್ರಮಯೋಗಾದಿವರ್ಜಿತಮ್ ।**
**ಸ್ವಾನುಭೂತಿಪ್ರಮಾಣಸ್ಥಂ ಜ್ಯೋತಿಷಾಮುದಯಸ್ಥಲಮ್ ॥**

**ಶಿವಾಖ್ಯಂ ಪರಮಂ ಬ್ರಹ್ಮ ಪರಮಾಽಽಕಾಶಲಕ್ಷಣಮ್ ।**
**ಲಿಂಗಮಿತ್ಯುಚ್ಯತೇ ಸದ್ಭಿರ್ಯದ್ವಿನಾ ನ ಜಗತ್ಸ್ಥಿತಿಃ ॥**

**ಟೀಕು||** ಅನಿರ್ದೇಶ್ಯಂ=ನಿರ್ದೇಶಿಸಬಾರದೆ, ಅನೌಪಮ್ಯಂ=ಉಪಮಿಸಬಾರದೆ, ಅವಾಙ್ಮನಸ ಗೋಚರಂ=ವಾಙ್ಮನಕ್ಕೆ ಗೋಚರವಲ್ಲದೆ, ಸರ್ವತೋಮುಖಸಂಪನ್ನಂ=ಎಲ್ಲಾ ಕಡೆಯಲ್ಲಿ ಮುಖಸಂಪನ್ನತೆಯುಳ್ಳ, ಸತ್ತಾನಂದಂಚಿದಾತ್ಮಕಂ=ಸಚ್ಚಿದಾನಂದವೆ ಸ್ವರೂಪವಾಗುಳ್ಳ, ಕಾಲಾತೀತಂ= ಕಾಲತತ್ತ್ವವನು ಮೀರಿವರ್ತಿಸುತ್ತಿರ್ದ್ದ, ಕಲಾತೀತಂ=ಕಲಾತತ್ತ್ವವನು ಮೀರಿವರ್ತಿಸುತ್ತಿರ್ದ್ದ, ಕ್ರಮಯೋಗಾದಿ ವರ್ಜಿತಂ=ಕ್ರಮಯೋಗಾದಿಗಳಿಂದೆ ಬಿಡಲುಪಟ್ಟ, ಸ್ವಾನುಭೂತಿ ಪ್ರಮಾಣಸ್ಥಂ= ಸ್ವಸ್ವರೂಪಾನುಭವ ಪ್ರಮಾಣಿನಲ್ಲಿ ಇರುತ್ತಿರ್ದ್ದ, ಜ್ಯೋತಿಷಾಂ=ಪ್ರಕಾಶಂಗಳ, ಉದಯಸ್ಥಲಂ= ಉದಯಕ್ಕೆ ಸ್ಥಲವಾಗಿರ್ದ್ದ, ಪರಮಾಽಽಕಾಶಲಕ್ಷಣಂ=ಮಹಾಕಾಶ ಚಿಹ್ನವೆ, ಪರಮಂ ಬ್ರಹ್ಮ=ಪರಬ್ರಹ್ಮ ವೆಂದು ಪ್ರಸಿದ್ಧವಾಗಿ, ಶಿವಾಖ್ಯಂ=ಪರಮಶಿವನೆಂಬ ಹೆಸರುಳ್ಳ, ಲಿಂಗಂ=ಮಹಾಲಿಂಗವೆಂದು, ಸದ್ಭಿಃ=ಸತ್ಪುರುಷರಿಂದೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ಯದ್ವಿನಾ=ಆವುದಾನೊಂದು ಮಹಾಕಾಶ ಹೊರತಾಗಿ, ಜಗತ್ ಸ್ಥಿತಿಃ=ಜಗದ್ವರ್ತನೆಯು, ನ=ಇಲ್ಲ. ಆ ಮಹಾಕಾಶವೆ ಮಹಾಲಿಂಗವೆಂಬುದರ್ಥ. ||೬೯||

**ಸೂತ್ರ||** ಬಳಿಕ ಆ ಅರ್ಥವನೆ ಸೂತ್ರದ್ವಯದಿಂದೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ||** **ಪರಮಾಕಾಶಮವ್ಯಕ್ತಂ ಪ್ರಬೋಧಾನಂದಲಕ್ಷಣಮ್ ।**
**ಲಿಂಗಜ್ಯೋತಿರ್ಮಯಂ ಪ್ರಾಹುರ್ಲೀಯಂತೇ ಯತ್ರ ಯೋಗಿನಃ ॥**

**ಟೀಕು||** ಯತ್ರ=ಆವುದಾನೊಂದು ಮಹಾಕಾಶದಲ್ಲಿ, ಯೋಗಿನಃ=ಶಿವಯೋಗೀಶ್ವರರು, ಲೀಯಂತೇ=ಲಯಿಸುತ್ತಿರ್ದ್ದಪರು, ತಂ ಪರಮಾಕಾಶಂ=ಆ ಮಹಾಕಾಶವನು, ಅವ್ಯಕ್ತಂ=ವ್ಯಕ್ತವಲ್ಲದೆ, ಪ್ರಬೋಧಾನಂದಲಕ್ಷಣಂ=ಚಿದಾನಂದವೆ ಸ್ವರೂಪವಾಗುಳ್ಳ, ಜ್ಯೋತಿರ್ಮಯಂ=ಜ್ಯೋತಿರ್ಮಯ ವಾಗಿರ್ದ್ದ, ಲಿಂಗಂ=ಮಹಾಲಿಂಗವನಾಗಿ, ಪ್ರಾಹುಃ=ಹೇಳುತ್ತಿರ್ದ್ದಪರು. ||೭೦||

**ಗ್ರಂಥ||** **ಸಂವಿದೇವ ಪರಾಕಾಷ್ಠಾ ಪರಮಾನಂದರೂಪಿಣೀ ।**
**ತಾಮಾಹುಃ ಪರಮಾಕಾಶಂ ಮುನಯೋ ಮುಕ್ತಸಂಶಯಾಃ ॥**

**ಟೀಕು||** ಮುಕ್ತಸಂಶಯಾಃ=ಬಿಡಲುಪಟ್ಟ ಸಂಶಯವುಳ್ಳ, ಮುನಯಃ=ವಸಿಷ್ಠಾದಿ ಮುನಿಗಳು, ಯಂ ಪರಮಾಕಾಶಂ=ಆವುದಾನೊಂದು ಮಹಾಕಾಶವನು, ತಾಮಾಹುಃ=ಹೇಳುತ್ತಿರ್ದ್ದಪರು. ಸಾ ದಿವೌ=ಆ ಮಹಾಕಾಶವೇ, ಪರಮಾನಂದರೂಪಿಣೀ=ಪರಮಾನಂದವೆ ಸ್ವರೂಪವಾಗುಳ್ಳ, ಪರಾಕಾಷ್ಠಾ= ಸರ್ವೋತ್ಕರ್ಷರೂಪವಾದ, ಪರಾ ಸಂವಿದೇವ=ಪರಮಚಿತ್ತೇ. ||೭೧||

**ಸೂತ್ರ||** ಬಳಿಕ ಆ ಮಹಾಕಾಶದಲ್ಲಿ ಜಗಜ್ಜಾಲಕ್ಕೆ ಅಭೇದವನು ದೃಷ್ಟಾಂತಪೂರ್ವಕವಾಗಿ ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ತರಂಗಾದಿ ಯಥಾ ಸಿಂಧೋಃ ಸ್ವರೂಪಾನ್ನಾತಿರಿಚ್ಯತೇ ।**
**ತಥಾ ಶಿವಾತ್ಪರಾಕಾಶಾದ್ವಿಶ್ವಮೇತನ್ನ ಭಿದ್ಯತೇ ॥**

**ಟೀಕು||** ಸಿಂಧೋಃ=ಸಮುದ್ರದ, ತರಂಗಾದಿ=ತೆರೆನೊರೆಬೊಬ್ಬುಳಿಕೆಗಳೆ ಮೊದಲಾಗುಳ್ಳ ಜಲವಿಕಾರವು, ಸ್ವರೂಪಾತ್=ಸಮುದ್ರದ ಸ್ವರೂಪಿನದೆಸೆಯಿಂದೆ, ಯಥಾ=ಹೇಗೆ, ನಾತಿರಿಚ್ಯತೇ= ಭಿನ್ನವಾಗಿ ತೋರುತ್ತಿರದು, ತಥಾ=ಹಾಗೆಯೆ, ಪರಾಕಾಶಾತ್ ಶಿವಾತ್=ಮಹಾಚಿದಾಕಾಶಸ್ವರೂಪ ನಾದ ಪರಮಶಿವನದೆಸೆಯಿಂದೆ, ಏತತ್=ಈ, ವಿಶ್ವಂ=ಸಮಸ್ತ ಜಗಜ್ಜಾಲವು, ನ ಭಿದ್ಯತೇ=ಭಿನ್ನ ವಾಗುತ್ತಿರದು. ||೭೨||

**ಗ್ರಂಥ||** **ಯಥಾ ಪುಷ್ಪಪಲಾಶಾದಿ ವೃಕ್ಷರೂಪಾನ್ನ ಭಿದ್ಯತೇ ।**
**ತಥಾ ಶಿವಾತ್ಪರಾಕಾಶಾಜ್ಜಗತೋ ನಾಸ್ತಿ ಭಿನ್ನತಾ ॥**

**ಟೀಕು||** ಪುಷ್ಪಪಲಾಶಾದಿ=ಪುಷ್ಪಪತ್ರಫಲಾದಿಯು, ವೃಕ್ಷರೂಪಾತ್=ವೃಕ್ಷದಸ್ವರೂಪಿನದೆಸೆಯಿಂದೆ, ಯಥಾ=ಹೇಗೆ, ನ ಭಿದ್ಯತೇ=ಭಿನ್ನವಾಗುತ್ತಿರದು, ತಥಾ=ಹಾಗೆಯೆ, ಪರಾಕಾಶಾತ್ ಶಿವಾತ್= ಮಹಾಕಾಶರೂಪನಾದ ಶಿವನದೆಸೆಯಿಂದೆ, ಜಗತಃ=ಭುವನಕ್ಕೆ, ಭಿನ್ನತಾ=ಭಿನ್ನತ್ವವು, ನಾಸ್ತಿ=ಇಲ್ಲ. ||೭೩||

**ಗ್ರಂಥ||** **ಯಥಾ ಜ್ಯೋತೀಂಷಿ ಭಾಸಂತೇ ಭೂತಾಕಾಶೇ ಪೃಥಕ್ ಪೃಥಕ್ ।**
**ತಥಾ ಭಾಂತಿ ಪರಾಕಾಶೇ ಬ್ರಹ್ಮಾಂಡಾನಿ ವಿಶೇಷತಃ ॥**

**ಟೀಕು||** ಭೂತಾಕಾಶೇ=ಭೂತಾಕಾಶದಲ್ಲಿ, ಜ್ಯೋತೀಂಷಿ=ನಕ್ಷತ್ರಂಗಳು, ಪೃಥಕ್ ಪೃಥಕ್= ಬೇರೆ ಬೇರೆ, ಯಥಾ=ಹೇಗೆ, ಭಾಸಂತೇ=ಪ್ರಕಾಶಿಸುತ್ತಿರ್ದ್ದಪವು. ತಥಾ=ಹಾಗೆಯೇ, ಪರಾಕಾಶೇ= ಮಹಾಚಿದಾಕಾಶದಲ್ಲಿ, ಬ್ರಹ್ಮಾಂಡಾನಿ=ಬ್ರಹ್ಮಾಂಡಂಗಳು, ವಿಶೇಷತಃ=ವಿಶೇಷವಾಗಿ, ಭಾಂತಿ= ಪ್ರಕಾಶಿಸುತ್ತಿರ್ದ್ದಪವು. ||೭೪||

**ಸೂತ್ರ||** ಬಳಿಕ ಆ ಅರ್ಥವನೆ ವಿಶೇಷಿಸಿ ಮಹಾಕಾಶಸ್ಥಲವನು ಮುಗಿಯಿಸುತ್ತಿರ್ದ್ದಪನು.

**ಗ್ರಂಥ||** **ನಿರಸ್ತೋಪಾಧಿಸಂಬಂಧಂ ನಿರ್ಮಲಂ ಸಂವಿದಾತ್ಮಕಮ್ ।**
**ಪರಾಕಾಶಂ ಜಗಚ್ಚಿತ್ರವಿಲಾಸಾಲಂಬಭಿತ್ತಿಕಮ್ ॥**

**ಟೀಕು||** ನಿರಸ್ತೋಪಾಧಿಸಂಬಂಧಂ=ನಿರಸ್ತೋಪಾಧಿ ಸಂಬಂಧವುಳ್ಳ, ನಿರ್ಮಲಂ=ನಿರ್ಮಲ ವಾಗಿರ್ದ್ದ, ಸಂವಿದಾತ್ಮಕಂ-ಅರಿವೆ ಸ್ವರೂಪವಾಗಿರ್ದ್ದ, ಪರಾಕಾಶಂ=ಮಹಾಕಾಶವು,

ಜಗಚ್ಚಿತ್ರವಿಲಾಸಾಲಂಬಭಿತ್ತಿಕಂ=ಜಗಜ್ಜಾಲವೆಂಬ ಚಿತ್ರವಿಲಾಸಕ್ಕೆ ಅವಲಂಬಭಿತ್ತಿಯಾಗಿರ್ದ್ದ ಅದು.

**ತಾತ್ಪರ್ಯ॥** ಈ ಲಿಂಗತ್ರಯವನು ಶರಣಸತಿ ಲಿಂಗಪತಿಯೆಂದು ಪ್ರಸಿದ್ಧವಾದ ಶರಣನ ಅಂಗತ್ರಯಕ್ಕೆ ಕ್ರಮದಿಂದ ಸಂಬಂಧಿಸಿಕೊಂಬುದು. ॥೭೫॥

**ಇತಿ ಮಹಾಕಾಶಸ್ಥಲಮ್**

## ೪೬. ಶರಣಸ್ಥಲೇ ಕ್ರಿಯಾಪ್ರಕಾಶಸ್ಥಲಮ್

**ಸೂತ್ರ॥** ಬಳಿಕ "ಕ್ರಿಯಾವಂತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ।" ಯೆಂಬ ಮುಂಡಕ ಶ್ರುತ್ಯರ್ಥವನು,
"ಮೋಕ್ಷಪ್ರದಂ ಚೈಹಿಕಸೌಖ್ಯದಂ ಚ
ಸರ್ವೋತ್ತರಂ ಶಾಂಕರಕರ್ಮ ಸತ್ಯಮ್"॥ ಯೆಂಬ ಯೋಗಜಾಗಮಾರ್ಥವನು ಪ್ರಕಟಿಸುತ್ತ ಮಹಾಕಾಶಸ್ವರೂಪನಾದ ಶಿವಯೋಗಿಯೆ ತತ್ಸ್ವರೂಪಾನುಸಂಧಾನರೂಪವಾದ ಕ್ರಿಯಾಪ್ರಕಾಶವುಳ್ಳಾತನೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥**
**ಶಿವಸ್ಯ ಪರಿಪೂರ್ಣಸ್ಯ ಚಿದಾಕಾಶಸ್ವರೂಪಿಣಃ ॥**
**ಆತ್ಮತ್ವೇನಾನುಸಂಧಾನಾತ್ಕ್ರಿಯಾದ್ಯೋತನವಾನ್ ಯಮೀ ॥**

**ಟೀಕು॥** ಅಯಂ ಯಮೀ=ಈ ಮಹಾಕಾಶಸ್ವರೂಪನಾದ ಶಿವಯೋಗಿಯು, ಪರಿಪೂರ್ಣಸ್ಯ=ಪರಿಪೂರ್ಣವಾದ, ಚಿದಾಕಾಶ ಸ್ವರೂಪಿಣಃ=ಮಹಾಚಿದಾಕಾಶವೆ ಸ್ವರೂಪವಾಗುಳ್ಳ, ಶಿವಸ್ಯ=ಪರಮಶಿವನ, ಆತ್ಮತ್ವೇನ=ನಿಜಸ್ವರೂಪಿನಿಂದೆ, ಅನುಸಂಧಾನಾತ್=ಅನುಸಂಧಾನರೂಪವಾದ ಕ್ರಿಯೆಯುಳ್ಳಾತನಾದ ಕಾರಣವಾಗಿ, ಕ್ರಿಯಾದ್ಯೋತನವಾನ್=ಕ್ರಿಯಾಪ್ರಕಾಶವುಳ್ಳಾತನು, ಭವೇತ್=ಅಹನು. ॥೭೬॥

**ಸೂತ್ರ॥** ಬಳಿಕ "ಪರಾಸ್ಯ ಶಕ್ತಿಃ ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ" ಯೆಂಬ ಶ್ವೇತಾಶ್ವತರಾರ್ಥವನು, "ಜ್ಞಾನಕ್ರಿಯಾತ್ಮಿಕಾ ಸಾಽಪಿ ಸತ್ಯಾನಿತ್ಯೋದಿತಪ್ರಭಾ ಅನನ್ಯಾ। ಸ್ಯಾಚ್ಛಿವಾತ್ಸೈವ ವಸ್ತುತೋ ಮೂರ್ತಿರೈಶ್ವರೀ॥" ಯೆಂಬ ಪೌಷ್ಕರಾರ್ಥವನು ಸೂಚಿಸುತ್ತ ಆ ಅನುಸಂಧಾನ ಕ್ರಿಯೆಯನೆ ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥**
**ನಿಷ್ಕಲಂಕಚಿದಾನಂದಗಗನೋಪಮರೂಪಿಣಃ ।**
**ಶಿವಸ್ಯ ಪರಿಪೂರ್ಣಸ್ಯ ವೃತ್ತಿಶ್ಚೈತನ್ಯರೂಪಿಣೀ ॥**

**ಟೀಕು॥** ನಿಷ್ಕಲಂಕ ಚಿದಾನಂದ ಗಗನೋಪಮರೂಪಿಣಃ=ನಿಷ್ಕಳಂಕವಾದ ಚಿದಾನಂದಾಕಾಶೋಪಮೆಯಿ ಸ್ವರೂಪವಾಗುಳ್ಳ, ಪೂರ್ಣಸ್ಯ ಶಿವಸ್ಯ=ಪರಿಪೂರ್ಣನಾದ ಪರಮಶಿವನ, ವೃತ್ತಿಃ=ಕ್ರಿಯಾವರ್ತನೆಯು, ಚೈತನ್ಯರೂಪಿಣೀ=ಆ ಶಿವನೋಪಾದಿಯಲ್ಲಿ ಚೈತನ್ಯವೆ ಸ್ವರೂಪವಾಗುಳ್ಳ ಅದು. ॥೭೭॥

**ಗ್ರಂಥ॥** **ನಿಷ್ಕಲಂಕೇ ನಿರಾಕಾರೇ ನಿತ್ಯೇ ಪರಮತೇಜಸಿ ।**
**ವಿಲೀನಚಿತ್ತವೃತ್ತಸ್ಯ ತಥಾ ಶಕ್ತಿಃ ಕ್ರಿಯೋಚ್ಯತೇ ॥**

**ಟೀಕು॥** ನಿಷ್ಕಲಂಕೇ=ಕಲಂಕುರಹಿತವಾಗಿರ್ದ್ದ, ನಿರಾಕಾರೇ=ನಿರಾಕಾರವಾಗಿರ್ದ್ದ, ನಿತ್ಯೇ=ಕೇಡಿಲ್ಲದೆಯಿರ್ದ್ದ, ಪರಮತೇಜಸಿ=ಪರಮತೇಜಸ್ಸಿನಲ್ಲಿ, ವಿಲೀನ ಚಿತ್ತವೃತ್ತಸ್ಯ=ಅಡಗಿದ ಚಿತ್ತವೃತ್ತಿಯುಳ್ಳ ಶಿವಯೋಗಿಯ, ಕ್ರಿಯಾಶಕ್ತಿಃ=ಅನುಸಂಧಾನರೂಪವಾದ ಕ್ರಿಯಾಶಕ್ತಿಯು, ತಥಾ=ಆ ಪರಮಶಿವ ತೇಜೋರೂಪವಾಗಿಯೆ, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ॥೭೮॥

**ಗ್ರಂಥ॥** **ಸರ್ವಜ್ಞಃ ಸರ್ವಕರ್ತಾ ಚ ಸರ್ವಗಃ ಪರಮೇಶ್ವರಃ ॥**
**ತದೈಕ್ಯಚಿಂತಯಾ ಯೋಗೀ ತಾದೃಶಾತ್ಮಾ ಪ್ರಕಾಶತೇ ॥**

**ಟೀಕು॥** ಪರಮೇಶ್ವರಃ=ಪರಮಶಿವನು, ಸರ್ವಜ್ಞಃ=ಸರ್ವಜ್ಞನಾಗಿ, ಸರ್ವಕರ್ತಾ ಚ=ಸರ್ವಕರ್ತೃವಾಗಿ, ಸರ್ವಗಃ=ಸರ್ವವ್ಯಾಪಕನಾಗಿದ್ದಾತನು; ಯೋಗೀ=ಶಿವಯೋಗಿಯು, ತದೈಕ್ಯಚಿಂತಯಾ= "ಸರ್ವಜ್ಞಃ ಪಂಚಕೃತ್ಯಸಂಪನ್ನಃ ಸರ್ವೇಶ್ವರ ಈಶ್ವರಃ" ಯೆಂದು ವೃದ್ಧಜಾಬಾಲಶ್ರುತಿ ಸಿದ್ಧವಾದ ಆ ಪರಮಶಿವನಲ್ಲಿ ಸಮಾನಸಮರಸರೂಪವಾದ ಐಕ್ಯಧ್ಯಾನದಿಂದೆ, ತಾದೃಶಾತ್ಮಾ=ಆ ಪ್ರಕಾರವಾದ ಸ್ವರೂಪವುಳ್ಳಾತನಾಗಿಯೆ, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪನು. ॥೭೯॥

**ಸೂತ್ರ॥** ಬಳಿಕ "ಶಿವಾರ್ಕ ಶಕ್ತಿಂ ದೀಧಿತ್ಯಾ ಸಮರ್ಥೀಕೃತ್ಯ ಚೇದೃಶಾ।
ಶಿವಂ ಶಕ್ತ್ಯಾದಿಭಿಃ ಸಾರ್ಧಂ ಪಶ್ಯಂತ್ಯಾತ್ಮಗ್ರತೋ ವ್ರತೀ"॥ ಯೆಂಬ ಶಿವಾಗಮಾರ್ಥವನೆ ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಸರ್ವೇಂದ್ರಿಯಾಣಾಂ ವ್ಯಾಪಾರೇ ವಿದ್ಯಮಾನೇಽಪಿ ಸಂಯಮೀ ।**
**ಪ್ರತ್ಯುಙ್ಮುಖೇನ ಮನಸಾ ಶಿವಂ ಪಶ್ಯನ್ ಪ್ರಮೋದತೇ ॥**

**ಟೀಕು॥** ಸಂಯಮೀ=ಶಿವಯೋಗಿಯು, ಸರ್ವೇಂದ್ರಿಯಾಣಾಂ=ಸಮಸ್ತೇಂದ್ರಿಯಂಗಳ, ವ್ಯಾಪಾರೇ=ವ್ಯಾಪಾರವು, ವಿದ್ಯಮಾನೇ ಸತ್ಯಪಿ=ಉಂಟಾಗಲಿಕೆಯಾಗಿಯು, ಪ್ರತ್ಯಙ್ಮುಖೇನ ಮನಸಾ=ಪಶ್ಚಿಮಚಕ್ರಾಭಿಮುಖವಾದ ಮನಸ್ಸಿನಿಂದೆ, ಶಿವಂ=ಶಿವನನು, ಪಶ್ಯನ್ ಸನ್=ಅಪರೋಕ್ಷವಾಗಿ ನೋಡುತ್ತಿರ್ದ್ದಾತನಾಗುತಲು, ಪ್ರಮೋದತೇ=ಸಂತೋಷಿಸುತ್ತಿರ್ದ್ದಪನು. ॥೮೦॥

**ಗ್ರಂಥ||** **ಕೂಟಸ್ಥಮಚಲಂ ಪ್ರಾಜ್ಞಂ ಗುಣಾತೀತಂ ಗುಣೋತ್ತರಮ್ ।**
**ಶಿವತತ್ತ್ವಂ ಸ್ವರೂಪೇಣ ಪಶ್ಯನ್ಯೋಗೀ ಪ್ರಮೋದತೇ ॥**

**ಟೀಕು||** ಗುಣೋತ್ತರಂ=ಜ್ಞಾನವೈರಾಗ್ಯಾದಿ ಗುಣಂಗಳಿಂದೆ ಶ್ರೇಷ್ಠನಾಗಿರ್ದ್ದ, ಪ್ರಾಜ್ಞಂ= ಪ್ರಾಜ್ಞನಾಗಿರ್ದ್ದ, ಕೂಟಸ್ಥಂ=ತುರ್ಯಸಾಕ್ಷಿಕಪ್ರತ್ಯಗಾತ್ಮಾದಿ ಸಂಜ್ಞೆಯುಳ್ಳ ಕೂಟಸ್ಥನನು, ಗುಣಾತೀತಂ= ಗುಣತ್ರಯಾತೀತವಾದ, ಅಚಲಂ ಶಿವತತ್ತ್ವಂ=ನಿಶ್ಚಲವಾದ ಪರಶಿವತತ್ತ್ವವನಾಗಿಯೆ, ಪಶ್ಯನ್= ನೋಡುತ್ತಿರ್ದ್ದ, ಯೋಗೀ=ಶಿವಯೋಗಿಯು, ಸ್ವರೂಪೇಣ=ಸ್ವರೂಪಿನಿಂದವೆ, ಪ್ರಮೋದತೇ= ಸಂತೋಷಿಸುತ್ತಿರ್ದ್ದಪನು. **||೮೧||**

**ಸೂತ್ರ||** ಬಳಿಕ ಚಿತ್ಕ್ರಿಯಾರೂಪವಾದ ಸ್ವಸ್ವರೂಪ ಸಂಪನ್ನನಿಗೆ ಆಕಾಶದಲ್ಲಿ ತೋರುವ ಗಂಧರ್ವ ನಗರಿಯೋಪಾದಿಯಲ್ಲಿ ಸರ್ವಕ್ರಿಯೆಯು ಮಿಥ್ಯೆಯಾಗಿ ತೋರುವುದೆಂದು ಪಕ್ಷಾಂತರದಿಂದೆ ಹೇಳಿ ಕ್ರಿಯಾಪ್ರಕಾಶಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಪರಾತ್ಮನಿ ಕ್ರಿಯಾ ಸರ್ವಾ ಗಂಧರ್ವನಗರೀವ ಖೇ ।**
**ಪ್ರಕಾಶತ ಇತಿ ಪ್ರೋಕ್ತಂ ಕ್ರಿಯಾಯಾಸ್ತು ಪ್ರಕಾಶನಮ್ ॥**

**ಟೀಕು||** ಸರ್ವಾಕ್ರಿಯಾ=ಸಮಸ್ತಕ್ರಿಯೆಯು, ಪರಾತ್ಮನಿ ವಿಷಯೇ=ಪರಶಿವರೂಪನಾದ ಶಿವಯೋಗಿಯ ವಿಷಯವಾಗಿ, ಖೇ=ಆಕಾಶದಲ್ಲಿಯ, ಗಂಧರ್ವನಗರೀವ=ಗಂಧರ್ವನಗರಿಯೋ ಪಾದಿಯಲ್ಲಿ, ಪ್ರಕಾಶತ ಇತಿ=ಪ್ರಕಾಶಿಸುತ್ತಿರ್ದ್ದಪುದಾದಕಾರಣವಾಗಿ, ಕ್ರಿಯಾಯಾಃಪ್ರಕಾಶನಂ ತು=ಕ್ರಿಯಾಪ್ರಕಾಶನಸ್ಥಲವೆಂದು, ಪ್ರೋಕ್ತಂ=ಹೇಳಲುಪಟ್ಟಿತ್ತು. **||೮೨||**

**ಇತಿ ಕ್ರಿಯಾಪ್ರಕಾಶನಸ್ಥಲಮ್**

## ೪೭. ಶರಣಸ್ಥಲೇ ಭಾವಪ್ರಕಾಶಸ್ಥಲಮ್

**ಸೂತ್ರ||** ಬಳಿಕ "ಸ್ವದಯಾಪೂರ್ಣಭಾವಸ್ಯ ಸ್ವೇನೈವ ಜ್ಞಾಪಿತಸ್ಯ ಚ।
ತಸ್ಯೈವ ಭಾಸತೇ ಭಾವೇ ಸೋಽಯಮಾದಿಮಹೇಶ್ವರಃ"|| ಯೆಂಬ ಯೋಗಜಾಗಮಾರ್ಥವನು ಪ್ರಕಟಿಸುತ್ತ ಆ ಕ್ರಿಯಾಪ್ರಕಾಶಸಂಪನ್ನನಾದ ಶಿವಯೋಗಿಗೆ ಸುಲಭವಾದ ಭಾವಪ್ರಕಾಶವನು ಹೇಳುತ್ತಿರ್ದ್ದಪಂ.

**ಗ್ರಂಥ||** **ತರಂಗಾದ್ಯಾ ಯಥಾ ಸಿಂಧೌ ನ ಭಿದ್ಯಂತೇ ತಥಾಽಽತ್ಮನಿ**
**ಭಾವಬುದ್ಧ್ಯಾದಯಃ ಸರ್ವೇ ಯತ್ತದ್ ಭಾವಪ್ರಕಾಶನಮ್**

**ಟೀಕು||** ತರಂಗಾದ್ಯಾಃ=ತೆರೆ ನೊರೆ ಮೊದಲಾದವು, ಸಿಂಧೌ=ಸಮುದ್ರದಲ್ಲಿ, ಯಥಾ=ಹೇಗೆ, ನ ಭಿದ್ಯಂತೇ=ಭಿನ್ನವಾಗುತ್ತಿರವು, ತಥಾ=ಹಾಗೆಯೆ, ಸರ್ವೇ=ಸಮಸ್ತವಾದ, ಬುದ್ಧ್ಯಾದಯೋ ಭಾವಾಃ=ಬುದ್ಧಿಮೊದಲಾಗುಳ್ಳ ಭಾವಂಗಳು, ಆತ್ಮನಿ=ಕ್ರಿಯಾಪ್ರಕಾಶಸಂಪನ್ನನಾದ ಶಿವಯೋಗಿಯ ಚೈತನ್ಯದಲ್ಲಿ, ನ ಭಿದ್ಯತೇ ಇತಿ ಯತ್=ಭಿನ್ನವಾಗುತ್ತಿರವೆಂಬುದಾವುದಾನೊಂದುಂಟು, ತತ್=ಅದು, ಭಾವಪ್ರಕಾಶನಂ=ಭಾವಪ್ರಕಾಶವು, ಭವೇತ್=ಅಹುದು. ||೮೩||

**ಸೂತ್ರ ||** ಬಳಿಕ ಆ ಭಾವನೆಯನು ಪಂಚಸೂತ್ರಂಗಳಿಂದೆ ವಿಶೇಷಿಸುತ್ತಿರ್ದಪಂ

ಗ್ರಂಥ ||

**ಶಿವ ಏವ ಜಗತ್ಸರ್ವಂ ಶಿವ ಏವಾಹಮಿತ್ಯಪಿ ।**
**ಭಾವಯನ್ಪರಮೋ ಯೋಗೀ ಭವದೋಷೈರ್ನ ಬಾಧ್ಯತೇ ॥**

**ಟೀಕು||** ಸರ್ವಂ ಜಗತ್=ಸಮಸ್ತ ಜಗತ್ತು, ಶಿವ ಏವ=ಶಿವನೇ. ಅತಃ=ಅದು ಕಾರಣವಾಗಿ, ಅಹಮಪಿ=ನಾನಾಯಿತ್ತಾದೊಡೆಯು, ಶಿವ ಏವ=ಶಿವನೇ, ಇತಿ=ಹೀಗೆಂದು, ಭಾವಯನ್=ಭಾವಿಸುತ್ತಿರ್ದ, ಪರಮೋ ಯೋಗೀ=ಮಹಾಯೋಗಿಯು, ಭವದೋಷೈಃ=ಭವದೋಷಂಗಳಿಂದೆ, ನ ಬಾಧ್ಯತೇ=ಬಾಧಿಸಲುಪಡುತ್ತಿರನು. ||೮೪||

ಗ್ರಂಥ||

**ಶಿವಭಾವೇ ಸ್ಥಿರೇ ಜಾತೇ ನಿರ್ಲೇಪಸ್ಯ ಮಹಾತ್ಮನಃ ।**
**ಯೇ ಯೇ ಭಾವಾಃ ಸಮುತ್ಪನ್ನಾಃ ತೇ ತೇ ಶಿವಮಯಾಃ ಸ್ಮೃತಾಃ ॥**

**ಟೀಕು||** ನಿರ್ಲೇಪಸ್ಯ=ವಿಷಯಂಗಳಲ್ಲಿ ಲೇಪಕನಲ್ಲದೆ ಇರ್ದ, ಮಹಾತ್ಮನಃ=ಮಹಾಪುರುಷನಿಗೆ, ಶಿವಭಾವೇ=ಶಿವನೆ ನಾನೆಂಬ ಭಾವವು, ಸ್ಥಿರೇ ಜಾತೇ ಸತಿ=ಸ್ಥಿರವಾಗಲಿಕೆಯಾಗಿ, ಯೇ ಯೇ ಭಾವಾಃ=ಆವಾವ ಭಾವಂಗಳು, ಸಮುತ್ಪನ್ನಾಃ=ಹುಟ್ಟುವವು, ತೇ ತೇ ಭಾವಾಃ=ಆ ಆ ಭಾವಂಗಳು, ಶಿವಮಯಾಃ=ಶಿವಸ್ವರೂಪನಾಗಿ ಪ್ರಕಾಶಿಸುತ್ತಿರ್ದವಾಗಿಯೆ, ಸ್ಮೃತಾಃ=ಸಂಮತವು. ||೮೫||

ಗ್ರಂಥ||

**ಅದ್ವಿತೀಯಶಿವಾಕಾರಭಾವನಾಧ್ವಸ್ತಕರ್ಮಣಾ ।**
**ನ ಕಿಂಚಿದ್ಭಾವ್ಯತೇ ಸಾಕ್ಷಾಚ್ಛಿವಾದನ್ಯನ್ಮಹಾತ್ಮನಾ ॥**

**ಟೀಕು||** ಅದ್ವಿತೀಯ ಶಿವಾಕಾರಭಾವನಾಧ್ವಸ್ತಕರ್ಮಣಾ=ಎರಡಿಲ್ಲದೆಯಿರ್ದಶಿವಸ್ವರೂಪಿನ ಭಾವದಿಂದೆ ಕೆಡಿಸಲುಪಟ್ಟ ಕರ್ಮಪಾಶವುಳ್ಳ, ಮಹಾತ್ಮನಾ=ಮಹಾಪುರುಷನಿಂದೆ, ಸಾಕ್ಷಾತ್ ಶಿವಾತ್=ಅಪರೋಕ್ಷವಾಗಿ ಸಾಕ್ಷಾತ್ಕಾರವಾದ ಶಿವನದೆಸೆಯಿಂದೆ, ಅನ್ಯತ್=ಭಿನ್ನವಾದ ಮತ್ತೊಂದು ವಸ್ತುವು, ನ ಭಾವ್ಯತೇ=ಭಾವಿಸಲುಪಡುತ್ತಿರದು. ||೮೬||

**ಗ್ರಂಥ||** **ಗಲಿತಾಜ್ಞಾನಬಂಧಸ್ಯ ಕೇವಲಾತ್ಮಾನುಭಾವಿನಃ**
**ಯತ್ರ ಯತ್ರೇಂದ್ರಿಯಾಶಕ್ತಿಃ ತತ್ರ ತತ್ರ ಶಿವಾತ್ಮತಾ**

**ಟೀಕು||** ಗಲಿತಾಜ್ಞಾನಬಂಧಸ್ಯ=ತೊಲಗಿಸಲುಪಟ್ಟ ಮಲಪಾಶದ ಬಂಧವುಳ್ಳ, ಕೇವಲಾತ್ಮಾನು ಭಾವಿನಃ=ಬರಿಯ ಸ್ವಸ್ವರೂಪಾನುಭವವುಳ್ಳ ಶಿವಯೋಗಿಗೆ, ಯತ್ರ ಯತ್ರ=ಆವಾವೆಡೆಯಲ್ಲಿ, ಇಂದ್ರಿಯಾಶಕ್ತಿಃ=ಭಾವರೂಪವಾದ ಇಂದ್ರಿಯಾಶಕ್ತಿಯುಂಟು, ತತ್ರ ತತ್ರ=ಆಯಾಯೆಡೆಯಲ್ಲಿಯು, ಶಿವಾತ್ಮತಾ=ಭಾವಮಯವಾದ ಶಿವಸ್ವರೂಪವುಳ್ಳತನವು. ||೮೭||

**ಗ್ರಂಥ||** **ರಾಗದ್ವೇಷಾದಯೋ ಭಾವಾಃ ಸಂಸಾರಕ್ಲೇಷಕಾರಣಮ್ ।**
**ತೇಷಾಮುಪರಮೋ ಯತ್ರ ತತ್ರ ಭಾವಃ ಶಿವಾತ್ಮಕಃ ॥**

**ಟೀಕು||** ರಾಗದ್ವೇಷಾದಯಃ=ರಾಗದ್ವೇಷಾದಿಗಳುಳ್ಳ, ಭಾವಾಃ=ಭಾವಂಗಳು, ಸಂಸಾರಕ್ಲೇಷ ಕಾರಣಂ=ಸಂಸಾರದುಃಖಕ್ಕೆ ಕಾರಣವು. ತೇಷಾಂ=ಆ ಭಾವಂಗಳ, ಉಪರಮಃ=ಶಾಂತಿಯು, ಯತ್ರ=ಆವ ಶಿವಯೋಗಿಯಲ್ಲಿ, ಅಸ್ತಿ=ಉಂಟು ತತ್ರ=ಅಲ್ಲಿ, ಭಾವಃ=ಭಾವವು, ಶಿವಾತ್ಮಕಃ=ಶಿವ ಸ್ವರೂಪವಾಗಿರ್ದ್ದ ಅದು. ||೮೮||

**ಸೂತ್ರ||** ಬಳಿಕ ಭಾವಪ್ರಕಾಶಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಯಥಾ ಸೂರ್ಯಸಮಾಕ್ರಾಂತೌ ನ ಶಕ್ನೋತಿ ತಮಃ ಸದಾ ।**
**ತಥಾ ಪ್ರಕಾಶಮಾತ್ಮಾನಂ ನಾವಿದ್ಯಾಽಽಕ್ರಮತಿ ಸ್ವಯಮ್ ॥**

**ಟೀಕು||** ತಮಃ=ಅಂಧಕಾರವು, ಸೂರ್ಯಸಮಾಕ್ರಾಂತೌ=ಸೂರ್ಯನನು ಮುಸುಕುವಲ್ಲಿ ಯಥಾ=ಹೇಗೆ, ನ ಶಕ್ನೋತಿ=ಸಮರ್ಥವಾಗುತ್ತಿರದು, ತಥಾ=ಹಾಗೆಯೇ, ಸದಾ ಪ್ರಕಾಶಂ=ಭಾವದಲ್ಲಿ ಎಲ್ಲಾಕಾಲದಲ್ಲಿಯು ಪ್ರಕಾಶಿಸುತ್ತಿರ್ದ್ದ, ಆತ್ಮಾನಂ=ಸ್ವಸ್ವರೂಪವಾದ ಚೈತನ್ಯವನು, ಅವಿದ್ಯಾ=ತಮೋ ರೂಪವಾದ ಮಲಶಕ್ತಿಯು, ಸ್ವಯಂ=ತಾನು, ನ ಆಕ್ರಮತಿ=ಮುಸುಕುತ್ತಿರದು. ||೮೯||

**ಇತಿ ಭಾವಪ್ರಕಾಶಸ್ಥಲಮ್**

## ೪೮. ಶರಣಸ್ಥಲೇ ಜ್ಞಾನಪ್ರಕಾಶಸ್ಥಲಮ್

**ಸೂತ್ರ||** ಬಳಿಕ "ಗವಾಮನೇಕವರ್ಣಾನಾಂ ಕ್ಷೀರಸ್ಯಾಪ್ಯೇಕವರ್ಣತಾ|
ಕ್ಷೀರವತ್ಪಶ್ಯತೇ ಜ್ಞಾನಂ ಲಿಂಗಿನಸ್ತು ಗವಾಂ ಯಥಾ"|| ಯೆಂಬ ಅಮೃತ ಬಿಂದೂಪನಿಷದರ್ಥವನು,
"ಶಿವಾದಿಸ್ಮರಣಂ ಜ್ಞಾನಂ ಜ್ಞಾನಾತ್ಸತ್ತಾ ಪ್ರಕಾಶತೇ|
ಸತ್ತಯಾಽಽನಂದಸಂಪ್ರಾಪ್ತಿಃ ಆನಂದಾಚ್ಚೈವ ಸಿದ್ಧಿದಃ"|| ಯೆಂಬ ಯೋಗ ಜಾಗಮಾರ್ಥವನು ಪ್ರಕಟಿಸುತ್ತ ಆ ಭಾವಪ್ರಕಾಶಸಂಪನ್ನನಿಗೆ ಸುಲಭವಾದ ಜ್ಞಾನಪ್ರಕಾಶವನು ಹೇಳುತ್ತಿರ್ದಪಂ.

**ಗ್ರಂಥ||** **ಮುಖ್ಯಾರ್ಥೇಽಸಂಭವೇ ಜಾತೇ ಲಕ್ಷಣಾಯೋಗಸಂಶ್ರಯಾತ್ |**
**ತದ್ ಜ್ಞಾನಯೋಜನಂ ಯತ್ತದುಕ್ತಜ್ಞಾನಪ್ರಕಾಶನಮ್ ||**

**ಟೀಕು||** ಮುಖ್ಯಾರ್ಥೇ=ಅಂಗಲಿಂಗಂಗಳಲ್ಲಿಯ ಮುಖ್ಯಾರ್ಥವು, ಅಸಂಭವೇ ಜಾತೇ ಸತಿ= ಘಟಿಸದೆ ಇರಲಿಕೆಯಾಗಿ, ಲಕ್ಷಣಾಯೋಗಸಂಶ್ರಯಾತ್=ಕಾರ್ಯಕಾರಣಾಧಿಷ್ಠಾತೃಗಳಾದ ಜೀವೇಶ್ವರ ಸಂಜ್ಞೆಯುಳ್ಳ ಅಂಗಲಿಂಗಂಗಳ ಲಕ್ಷಣಾಯೋಗವನಾಶ್ರೈಸುವುದರದೆಸೆಯಿಂದೆ, ತದ್‌ಜ್ಞಾನಯೋಜನಂ ಯತ್=ಆ ಅಂಗಲಿಂಗಂಗಳಲ್ಲಿಯ ಜ್ಞಾನದ್ವಯವನು ಸಮಾನಸಮರಸವಾಗಿ ಕೂಡುವುದಾವುದಾ ನೊಂದುಂಟು, ತತ್=ಅದು, ತಸ್ಯ=ಆ ಭಾವಪ್ರಕಾಶಸಂಪನ್ನನಾದ ಶಿವಯೋಗಿಗೆ, ಜ್ಞಾನಪ್ರಕಾಶನಂ= ಜ್ಞಾನಪ್ರಕಾಶನವೆಂದು, ಉಕ್ತಂ=ಹೇಳಲುಪಟ್ಟಿತ್ತು.

**ತಾತ್ಪರ್ಯ||** ಘಟಾವಚ್ಛಿನ್ನಾಕಾಶಮಹಾಕಾಶದೋಪಾಧಿಯ ಕೂಟಸ್ಥಪರಚೈತನ್ಯದ ನಿತ್ಯಯೋಗವೆ ಲಕ್ಷಣಾರ್ಥ. ಘಟಜಲಛಿನ್ನಾಕಾಶಮೇಘಜಲಾವಚ್ಛಿನ್ನಾಕಾಶದೋಪಾಧಿಯ ಅಂಗಲಿಂಗಂಗಳ ಉಪಾಧಿಯೇ ಮುಖ್ಯಾರ್ಥ. ಆ ಚೈತನ್ಯಜ್ಞಾನ ಸಮರಸತ್ವವೇ ಜ್ಞಾನಪ್ರಕಾಶವೆಂಬುದರ್ಥ. ||೯೦||

**ಸೂತ್ರ||** ಬಳಿಕ ಆ ಅರ್ಥವನೆ ಸೂತ್ರತ್ರಯದಿಂದೆ ವಿಶೇಷಿಸುತ್ತಿರ್ದಪಂ.

**ಗ್ರಂಥ||** **ಮುಕ್ತಸ್ಯ ಜ್ಞಾನಸಂಬಂಧೋ ಜ್ಞೇಯಾಭಾವಃ ಸ್ವಭಾವತಃ |**
**ಉಪಾಧಿಸಹಿತಂ ಜ್ಞಾನಂ ನ ಭೇದಮತಿವರ್ತತೇ ||**

**ಟೀಕು||** ಮುಕ್ತಸ್ಯ=ಪರಮುಕ್ತನಿಗೆ, ಜ್ಞಾನಸಂಬಂಧಃ=ಲಕ್ಷಣಾರ್ಥವಾದ ಜ್ಞಾನಸಂಬಂಧವು, ಸ್ವಭಾವತಃ=ಸ್ವಭಾವದದೆಸೆಯಿಂದವೆ, ಜ್ಞೇಯಾಭಾವಃ=ಆತ್ಮಾಶ್ರಯ ಇತರೇತರಾಶ್ರಯ ಚಕ್ರಿಕಾಶ್ರಯ ದೋಷವಿಲ್ಲದಿಹುದರಿಂದೆ ಜ್ಞೇಯವಿಲ್ಲದೆ ಇರ್ದ ಅದು, ಉಪಾಧಿ ಸಹಿತಂ ಜ್ಞಾನಂ=ಆ ಪರಮುಕ್ತನಿಗೆ ಮುಖ್ಯಾರ್ಥವಾದ ಲಿಂಗಾಂಗೋಪಾಧಿಯೊಡನೆ ಕೂಡಿದ ಜ್ಞಾನವು, ಭೇದಂ=ಭೇದವನು,

ನಾತಿವರ್ತತೇ=ಮೀರಿ ವರ್ತಿಸುತ್ತಿರದು. ಉಪಾಧಿನಾಶವೆ ಜ್ಞಾನಸಮರಸವೆಂಬುದರ್ಥ. ॥೯೧॥

ಗ್ರಂಥ॥ **ಜ್ಞಾನಮಿತ್ಯುಚ್ಯತೇ ಸದ್ಭಿಃ ಪರಿಚ್ಛೇದೋಽಪಿ ವಸ್ತುತಃ ।**
**ಪರಾತ್ಮನ್ಯಪರಿಚ್ಛೇದೇ ಕುತೋ ಜ್ಞಾನಸ್ಯ ಸಂಭವಃ ॥**

**ಟೀಕು॥** ವಸ್ತುತಃ=ಲಿಂಗಾಂಗರೂಪವಾದ ವಸ್ತುವಿನ, ಪರಿಚ್ಛೇದಃ=ಖಂಡಿತವೆ, ಜ್ಞಾನಮಿತಿ=ದ್ವೈತಜ್ಞಾನವೆಂದು, ಸದ್ಭಿಃ=ಸತ್ಪುರುಷರಿಂದೆ, ಉಚ್ಯತೇ=ಹೇಳಲುಪಡುತ್ತಿರ್ದಪುದು. ಅಪರಿಚ್ಛೇದೇ=ಅಖಂಡಿತವಾದ, ಪರಾತ್ಮನಿ=ನಿರುಪಾಧಿಕವಾದ ಮಹಾಚೈತನ್ಯದಲ್ಲಿ ದ್ವೈತಪ್ರಸಿದ್ಧವಾದ, ಜ್ಞಾನಸ್ಯ=ಜ್ಞಾನದ, ಸಂಭವಃ=ಉತ್ಪತ್ತಿಯು, ಕುತಃ=ಎತ್ತಣದು? ॥೯೨॥

ಗ್ರಂಥ॥ **ಜ್ಞಾನಸ್ಯಾವಿಷಯೇ ತತ್ತ್ವೇ ಶಿವಾಖ್ಯೇ ಚಿತ್ಸುಖಾತ್ಮನಿ ।**
**ಆತ್ಮೈಕತ್ವಾನುಸಂಧಾನಂ ಜ್ಞಾನಮಿತ್ಯುಚ್ಯತೇ ಬುಧೈಃ ॥**

**ಟೀಕು॥** ಜ್ಞಾನಸ್ಯ=ಭೇದಜ್ಞಾನಕ್ಕೆ ಅವಿಷಯೇ=ಅವಿಷಯವಾಗಿದ್ದ, ಚಿತ್ಸು ಖಾತ್ಮನಿ=ಸಂವಿದಾನಂದ ಸ್ವರೂಪವಾಗಿದ್ದಂಥ, ಶಿವಾಖ್ಯೇ=ಶಿವನೆಂಬ ಹೆಸರನುಳ್ಳ, ತತ್ತ್ವೇ=ವಸ್ತುವಿನಲ್ಲಿ, ಆತ್ಮೈಕತ್ವಾನು ಸಂಧಾನಂ=ತನ್ನ ಸ್ವರೂಪದೊಡನೆ ಅಭೇದಾನುಸಂಧಾನವೇ, ಜ್ಞಾನಂ ಇತಿ=ಜ್ಞಾನವೆಂದು, ಬುಧೈಃ=ಬಲ್ಲವರುಗಳಿಂದೆ, ಉಚ್ಯತೇ=ಹೇಳಲುಪಡುತ್ತಿಹುದು.

**ಸೂತ್ರ॥** ಬಳಿಕ ಆ ಶಿವಜ್ಞಾನವೆ ಬ್ರಹ್ಮಜ್ಞಾನವೆಂದು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

ಗ್ರಂಥ॥ **ಅಪರಿಚ್ಛಿನ್ನಮಾನಂದಂ ಸತ್ತಾಕಾರಂ ಜಗನ್ಮಯಮ್ ।**
**ಬ್ರಹ್ಮೇತಿಲಕ್ಷಣಂ ಜ್ಞಾನಂ ಬ್ರಹ್ಮಜ್ಞಾನಮಿಹೋಚ್ಯತೇ ॥**

*ಟೀಕು॥* ಅಪರಿಚ್ಛಿನ್ನಂ ಆನಂದಂ=ಅಖಂಡಿತವಾದ ಆನಂದವು, ಸತ್ತಾಕಾರಂ=ಸದಾನಂದಂಗಳೆ ಸ್ವರೂಪವಾಗುಳ್ಳ, ಬ್ರಹ್ಮ=ಪರಬ್ರಹ್ಮವು, ಜಗನ್ಮಯಂ=ಜಗಜ್ಜಾಲದಲ್ಲಿ ತನ್ಮಯವಾಗಿದ್ದ ಅದು, ಇತಿ ಲಕ್ಷಣಂ ಜ್ಞಾನಂ=ಈ ಪ್ರಕಾರವಾದ ಲಕ್ಷಣಜ್ಞಾನವೆ, ಬ್ರಹ್ಮಜ್ಞಾನಂ=ಬ್ರಹ್ಮಜ್ಞಾನವೆಂದು, ಇಹ= ಇಲ್ಲಿ, ಉಚ್ಯತೇ=ಹೇಳಲುಪಡುತ್ತಿರ್ದಪುದು. ॥೯೪॥

ಗ್ರಂಥ॥ **ಬ್ರಹ್ಮಜ್ಞಾನೇ ಸಮುತ್ಪನ್ನೇ ವಿಶ್ವೋಪಾಧಿವಿವರ್ಜಿತೇ ।**
**ಸರ್ವಂ ಸಂವಿನ್ಮಯಂ ಭಾತಿ ತದನ್ಯನ್ನೈವ ದೃಶ್ಯತೇ ॥**

**ಟೀಕು॥** ವಿಶ್ವೋಪಾಧಿವಿವರ್ಜಿತೇ=ನಾಮರೂಪಾತ್ಮಕವಾದ ಸಮಸ್ತವು ಉಪಾಧಿಗಳಿಂದೆ ಬಿಡಲುಪಟ್ಟ, ಬ್ರಹ್ಮಜ್ಞಾನೇ=ಸಚ್ಚಿದಾನಂದರೂಪವಾದ ಬ್ರಹ್ಮಜ್ಞಾನವು, ಸಮುತ್ಪನ್ನೇ

ಸತಿ=ಹುಟ್ಟಲಿಕೆಯಾಗಿ, ಸರ್ವಂ=ಸಮಸ್ತವು, ಸಂವಿನ್ಮಯಂ=ಚಿದ್ರೂಪವಾಗಿಯೆ, ಭಾತಿ=ಪ್ರಕಾಶಿಸುತ್ತಿರ್ದಪುದು. ತದನ್ಯತ್=ಆ ಬ್ರಹ್ಮದದೆಸೆಯಿಂದೆ ಅನ್ಯವಾಗಿದ್ದ ಅದು, ನೈವ ದೃಶ್ಯತೇ=ಕಾಣಲುಪಡುತ್ತಿರದು. ||೯೫||

**ಗ್ರಂಥ||** **ತಸ್ಮಾದದ್ವೈತವಿಜ್ಞಾನಮಪವರ್ಗಸ್ಯ ಕಾರಣಮ್ ||**
**ಭಾವಯನ್ ಸತತಂ ಯೋಗೀ ಸಂಸಾರೇಣ ನ ಲಿಪ್ಯತೇ ||**

**ಟೀಕು||** ತಸ್ಮಾತ್=ಅದು ಕಾರಣವಾಗಿ, ಅಪವರ್ಗಸ್ಯ=ಪರಾಪರಮೋಕ್ಷಕ್ಕೆ, ಕಾರಣಂ=ಕಾರಣವಾಗಿರ್ದ, ಅದ್ವೈತವಿಜ್ಞಾನಂ=ಶಿವಾದ್ವೈತಜ್ಞಾನವನು, ಸತತಂ=ಆವಾಗವು, ಭಾವಯನ್=ಭಾವಿಸುತ್ತಿರ್ದ, ಯೋಗೀ=ಶಿವಯೋಗಿಯು, ಸಂಸಾರೇಣ=ಸಂಸಾರದಿಂದೆ, ನ ಲಿಪ್ಯತೇ=ಲೇಪಿಸಲು ಪಡುತ್ತಿರನು. ||೯೬||

**ಸೂತ್ರ||** ಬಳಿಕ ಜ್ಞಾನಪ್ರಕಾಶಸ್ಥಲವನು ಮುಗಿಯುಸುತ್ತಿರ್ದಪನು.

**ವೃತ್ತಮ್||** **ನಿತ್ಯೇ ನಿರ್ಮಲಸತ್ತ್ವಯೋಗಿಷು ಪರೇ ನಿರ್ವಾಸನೇ ನಿಷ್ಕಲೇ**
**ಸರ್ವಾತೀತಪದೇ ಚರಾಚರಮಯೇ ಸತ್ತಾತ್ಮನಿ ಜ್ಯೋತಿಷಿ |**
**ಸಂವಿದ್ವ್ಯೋಮ್ನಿ ಶಿವೇ ವಿಲೀನಹೃದಯಸ್ತದ್ಭೇದವೈಮುಖ್ಯತಃ**
**ಸಾಕ್ಷಾತ್ಸರ್ವಗತೋ ವಿಭಾತಿ ವಿಗಲದ್ವಿಶ್ವಃ ಸ್ವಯಂ ಸಂಯಮೀ ||**

**ಟೀಕು||** ನಿತ್ಯೇ=ನಿತ್ಯವಾಗಿ, ನಿರ್ಮಲ ಸತ್ವಯೋಗಿಷು ಪರೇ=ನಿರ್ಮಲವಾದ ಸತ್ವಗುಣಯೋಗವುಳ್ಳವರಲ್ಲಿ ಪ್ರಧಾನವಾಗಿರ್ದ, ನಿರ್ವಾಸನೇ=ವಾಸನಾರಹಿತವಾಗಿ, ನಿಷ್ಕಲೇ=ನಿಷ್ಕಳನಾಗಿರ್ದ, ಸರ್ವಾತೀತಪದೇ=ಸರ್ವವನೂ ಮೀರಿವರ್ತಿಸುತ್ತಿರ್ದ, ಸತ್ತಾತ್ಮನಿ=ಸದ್ರೂಪವಾಗಿಯು, ಜ್ಯೋತಿಷಿ=ಪ್ರಕಾಶಿಸುತ್ತಿರ್ದ, ಸಂವಿದ್ವ್ಯೋಮ್ನಿಶಿವೇ=ಚಿದಾಕಾಶರೂಪವಾದ ಪರಮಶಿವನಲ್ಲಿ, ವಿಲೀನಹೃದಯಃ= ಅಡಗಿದಚಿತ್ತವುಳ್ಳ, ತದ್ಭೇದವೈಮುಖ್ಯತಃ=ಚಿದಾಕಾಶರೂಪನಾದ ಆ ಶಿವನ ದೆಸೆಯಿಂದೆ ಭಿನ್ನವಹತನದಲ್ಲಿ ಅಡ್ಡಲಾದ ಮುಖವುಳ್ಳಾತನಾದ ಕಾರಣವಾಗಿ, ಸರ್ವಗತಃ=ಸರ್ವವ್ಯಾಪಕನಾಗಿರ್ದ, ಸಂಯಮೀ=ಶಿವಯೋಗಿಯು, ವಿಗಲದ್ವಿಶ್ವಃ ಸನ್=ತೊಲಗಲುಪಟ್ಟ ನಾಮರೂಪಾತ್ಮಕವಾದ ವಿಶ್ವಪ್ರಪಂಚುಳ್ಳಾತನಾಗುತಲು, ಸ್ವಯಂ=ತನಗೆ ತಾನೆ, ಸಾಕ್ಷಾತ್=ಪ್ರತ್ಯಕ್ಷವಾಗಿ, ವಿಭಾತಿ=ವಿಶೇಷವಾಗಿ ಪ್ರಕಾಶಿಸುತ್ತಿರ್ದಪನು.

**ತಾತ್ಪರ್ಯ||** ಪ್ರತ್ಯೇಕ ಲಿಂಗತ್ರಯರೂಪವಾದ ಈ ಲಿಂಗತ್ರಯವನು ಲಿಂಗಪತಿ ಶರಣಸತಿ ಎಂದು ಪ್ರಸಿದ್ಧವಾದ ಶರಣನ ಅಂಗತ್ರಯಕ್ಕೆ ಕ್ರಮದಿಂದೆ ಸಂಬಂಧಿಸಿಕೊಂಬುದು. ||೯೭||

**ಇತಿ ಜ್ಞಾನಪ್ರಕಾಶಸ್ಥಲಮ್**

**ಇತಿ ಶ್ರೀವೀರಶೈವಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಶರಣಸ್ಥಲ ವಿಷಯ ದ್ವಾದಶವಿಧಲಿಂಗಸ್ಥಲಪ್ರಸಂಗೋ ನಾಮೈಕೋನವಿಂಶಃ ಪರಿಚ್ಛೇದಃ ಸಮಾಪ್ತಃ**

## ಶಿವೈಕ್ಯಸ್ಥಲವಿಷಯನವವಿಧಲಿಂಗಪ್ರಸಂಗಃ
## ದ್ವಾದಶಂ ಐಕ್ಯಸ್ಥಲಮ್

**ಅಗಸ್ತ್ಯ ಉವಾಚ॥**

**ಸೂತ್ರ॥** ಬಳಿಕ ಅಗಸ್ತ್ಯಮುನಿ ಪ್ರಶ್ನೆಯಂ ಮಾಡಿ ನುಡಿವುತ್ತಿರ್ದ್ದಪಂ.

**ಗ್ರಂಥ॥**
**ಸ್ಥಲಭೇದಾ ಸ್ತ್ವಯಾ ಪ್ರೋಕ್ತಾಃ ಶರಣಸ್ಥಲಸಂಶ್ರಿತಾಃ ।**
**ಐಕ್ಯಸ್ಥಲಗತಾನ್ ಬ್ರೂಹಿ ಸ್ಥಲಭೇದಾನ್ ಗಣೇಂದ್ರ ಮೇ ॥**

**ಟೀಕು॥** ಭೋ ಗಣೇಂದ್ರ=ಎಲೆ ರೇಣುಕಗಣೇಶ್ವರನೆ!, ಶರಣಸ್ಥಲಸಂಶ್ರಿತಾಃ=ಶರಣಸ್ಥಲವನಾಶ್ರಯಿಸಿರ್ದ್ದ, ಸ್ಥಲಭೇದಾಃ=ಅವಾಂತರಸ್ಥಲಂಗಳು, ತ್ವಯಾ=ನಿನ್ನಿಂದೆ, ಪ್ರೋಕ್ತಾಃ=ಹೇಳಲುಪಟ್ಟವು. ಐಕ್ಯಸ್ಥಲಗತಾನ್=ಐಕ್ಯಸ್ಥಲವನು ಎಯ್ದಿರ್ದ್ದ, ಸ್ಥಲಭೇದಾನ್=ಅವಾಂತರಸ್ಥಲಭೇದಂಗಳನು, ಮೇ=ಎನಗೋಸುಗ, ಬ್ರೂಹಿ=ಉಪದೇಶಿಸಿ ಹೇಳು. ॥೧॥

**ರೇಣುಕ ಉವಾಚ॥**

**ಸೂತ್ರ॥** ಬಳಿಕ ರೇಣುಕಗಣೇಶ್ವರನು ಪ್ರಶ್ನೋತ್ತರವನು ಹೇಳುತ್ತಿರ್ದ್ದಪಂ.

**ಗ್ರಂಥ॥**
**ಸ್ಥಲಾನಾಂ ನವಕಂ ಚೈಕ್ಯಸ್ಥಲೇಽಸ್ಮಿನ್ ಪರಿಕೀರ್ತ್ಯತೇ ।**

**ಟೀಕು॥** ಅಸ್ಮಿನ್ ಐಕ್ಯಸ್ಥಲೇ ಚ=ಈ ಐಕ್ಯಸ್ಥಲದಲ್ಲಿ, ಸ್ಥಲಾನಾಂ ನವಕಂ=ಒಂಭತ್ತು ಅವಾಂತರಸ್ಥಲಂಗಳು, ಪರಿಕೀರ್ತ್ಯತೇ=ಹೇಳಲುಪಡುತ್ತಿರ್ದ್ದಪುದು. ॥೨॥

**ಸೂತ್ರ॥** ಬಳಿಕ ಆ ಸ್ಥಲೋದ್ದೇಶವನು ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥**
**ತತ್ಸ್ವೀಕೃತಪ್ರಸಾದಾಖ್ಯಸ್ಥಲಮಾದೌ ಪ್ರಕೀರ್ತಿತಮ್ ।**
**ಶಿಷ್ಟೋದನಸ್ಥಲಂ ಚಾಥ ಚರಾಚರಲಯಸ್ಥಲಮ್ ॥**

**ಭಾಂಡಸ್ಥಲಂ ತತಃ ಪ್ರೋಕ್ತಂ ಭಾಜನಸ್ಥಲಮುತ್ತಮಮ್ ।**
**ಅಂಗಾಲೇಪಸ್ಥಲಂ ಪಶ್ಚಾತ್ ಸ್ವಪರಾಜ್ಞಸ್ಥಲಂ ತತಃ ॥**

**ಭಾವಾಭಾವವಿನಾಶಂ ಚ ಜ್ಞಾನಶೂನ್ಯಸ್ಥಲಂ ತತಃ ।**
**ತದೇಷಾಂ ಕ್ರಮಶೋ ವಕ್ಷ್ಯೇ ಶೃಣು ತಾಪಸ ಲಕ್ಷಣಮ್ ॥**

**ಟೀಕು॥** ಆದೌ=ಐಕ್ಯಸ್ಥಲದ ಮೊದಲಲ್ಲಿ, ಸ್ವೀಕೃತಪ್ರಸಾದಾಖ್ಯಸ್ಥಲಂ=ಕೊಂಡದುಪ್ರಸಾದವೆಂದು ಪ್ರಸಿದ್ಧವಾದಸ್ಥಲವು, ಪ್ರಕೀರ್ತಿತಂ=ಹೇಳಲುಪಟ್ಟಿತ್ತು. ಅಥ=ಅನಂತರದಲ್ಲಿ ಶಿಷ್ಟೋದನಸ್ಥಲಂಚ= ನಿಂದದು ಓಗರವೆಂಬ ಸ್ಥಲವು, ತತಃ=ಬಳಿಕ, ಚರಾಚರಲಯಸ್ಥಲಂ=ಚರಾಚರಲಯಸ್ಥಲವು, ತತಃ=ಬಳಿಕ, ಭಾಂಡಸ್ಥಲಂ=ಭಾಂಡಸ್ಥಲವು, ತತಃ=ಬಳಿಕ, ಉತ್ತಮಂ=ಶ್ರೇಷ್ಠವಾದ ಭಾಜನಸ್ಥಲಂ=ಭಾಜನಸ್ಥಲವು, ಪ್ರೋಕ್ತಂ=ಹೇಳಲುಪಟ್ಟಿತ್ತು. ಪಶ್ಚಾತ್=ಬಳಿಕ, ಅಂಗಾಲೇಪಸ್ಥಲಂ= ಅಂಗಾಲೇಪಸ್ಥಲವು, ತತಃ=ಬಳಿಕ, ಸ್ವಪರಾಜ್ಞಸ್ಥಲಂ=ಸ್ವಪರವರಿಯದಸ್ಥಲವು, ತತಃ=ಬಳಿಕ, ಭಾವಾಭಾವವಿನಾಶಂ ಚ=ಭಾವಾಭಾವಲಯಸ್ಥಲವು, ತತಃ=ಬಳಿಕ, ಜ್ಞಾನಶೂನ್ಯಸ್ಥಲಂ ಚ=ಜ್ಞಾನಶೂನ್ಯಸ್ಥಲವು, ತದೇಷಾಂ=ಆ ಈ ಅವಾಂತರ ಸ್ಥಲಂಗಳ, ಲಕ್ಷಣಂ=ಲಕ್ಷಣವನು, ಕ್ರಮಶಃ=ಕ್ರಮವಾಗಿ ವಕ್ಷ್ಯೇ=ಹೇಳಿಹೆನು. ಭೋ ತಾಪಸ=ಎಲೆ ತಪಸ್ವಿಯಾದ ಅಗಸ್ತ್ಯಮುನಿಯೆ! ಶೃಣು=ಕೇಳು. ॥೫॥

## ೪೯. ಐಕ್ಯಸ್ಥಲೇ ಸ್ವೀಕೃತಪ್ರಸಾದಿಸ್ಥಲಮ್

**ಸೂತ್ರ॥** ಬಳಿಕ "ಜ್ಞಾನಪ್ರಸಾದೇನ ವಿಶುದ್ಧಸತ್ವ ಸ್ತತಸ್ತು ತಂ ಪಶ್ಯತೇ
ನಿಷ್ಕಲಂ ಧ್ಯಾಯಮಾನಃ" ಯೆಂಬ ಮುಂಡಕಶ್ರುತ್ಯರ್ಥವನು,
"ಜ್ಞಾನೋತ್ಪತ್ತಿ ನಿಮಿತ್ತಂ ತು। ಕ್ರಿಯಾಚರ್ಯಾ ಪ್ರಕೀರ್ತಿತಾ
ಯೋಗಂ ಸಾಲಂಬನಂ ತ್ಯಕ್ತ್ವಾ ನಿಷ್ಪ್ರಪಂಚಂ ವಿಚಿಂತಯೇತ್"॥ ಯೆಂಬ ದೇವೀಕಾಲೋತ್ತರಾರ್ಥವನು ಪ್ರಕಟಿಸುತ್ತ ಆ ಜ್ಞಾನಪ್ರಕಾಶಸಂಪನ್ನನಾದ ಶಿವಯೋಗಿಯೆ ಜ್ಞಾನಪ್ರಕಾಶವ ಸ್ವೀಕರಿಸುವದರಿಂದೆ ಸ್ವೀಕೃತಪ್ರಸಾದಿಯೆಂದು ಹೇಳುತ್ತಿರ್ದಪಂ.

**ಗ್ರಂಥ॥** **ಮುಖ್ಯಾರ್ಥೋ ಲಕ್ಷಣಾರ್ಥಶ್ಚ ಯತ್ರ ನಾಸ್ತಿ ಚಿದಾತ್ಮನಿ ।**
**ವಿಶೃಂಖಲತಯಾ ತಸ್ಯ ಪ್ರಸಾದಃ ಸ್ವೀಕೃತೋ ಭವೇತ್ ॥**

**ಟೀಕು॥** ಚಿದಾತ್ಮನಿ=ಕೇವಲ ಚಿದ್ರೂಪನಾಗಿದ್ದ, ಯತ್ರ=ಆವನಾನೊರ್ವಜ್ಞಾನಪ್ರಕಾಶಸಂಪನ್ನನಲ್ಲಿ, ಮುಖ್ಯಾರ್ಥಃ=ಜೀವೇಶ್ವರವಿಯೋಗರೂಪವಾದ ಮುಖ್ಯಾರ್ಥವು, ನಾಸ್ತಿ=ಇಲ್ಲ. ಲಕ್ಷಣಾರ್ಥಶ್ಚ= ನಿರುಪಾಧಿಕರಾದ ಜೀವಾತ್ಮರ ನಿತ್ಯವಿಯೋಗರೂಪವಾದ ಲಕ್ಷಣಾರ್ಥವು, ನಾಸ್ತಿ=ಇಲ್ಲ. ತಸ್ಯ=ಆ ಶಿವಯೋಗಿಗೆ, ವಿಶೃಂಖಲತಯಾ=ತಡೆಹಿಲ್ಲದಿಹುದರಿಂದೆ, ಪ್ರಸಾದಃ=ಪೂರ್ಣಜ್ಞಾನ ಪ್ರಸಾದವು, ಸ್ವೀಕೃತಃ=ಸ್ವೀಕರಿಸಲುಪಟ್ಟ ಅದು, ಭವೇತ್=ಅಹುದು. ॥೬॥

**ಸೂತ್ರ॥** ಬಳಿಕ ಆ ಅರ್ಥವನೆ ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಮಾತೃಮೇಯಪ್ರಮಾಣಾದಿವ್ಯವಹಾರೇ ವಿಹಾರಿಣೀಮ್ ।**
**ಸಂವಿತ್ಸಾಕ್ಷಾತ್ಕೃತಿಂ ಲಬ್ಧ್ವಾ ಯೋಗೀ ಸ್ವಾತ್ಮನಿ ತಿಷ್ಠತಿ ॥**

**ಟೀಕು॥** ಮಾತೃಮೇಯಪ್ರಮಾಣಾದಿವ್ಯವಹಾರೇ ವಿಹಾರಿಣೀಂ=ಪ್ರಮಾತೃಪ್ರಮೇಯ ಪ್ರಮಾಣಾತ್ಮಕವಾದ ತ್ರಿಪುಟಿಗಳ ಪ್ರಥಮ ವ್ಯವಹಾರದಲ್ಲಿ ಕ್ರೀಡಿಸುತ್ತಿರ್ದ್ದ, ಸಂವಿತ್ಸಾಕ್ಷಾತ್ಕೃತಿಂ= ಪರಿಪೂರ್ಣವಾದ ಚಿತ್ತಿನ ಸಾಕ್ಷಾತ್ಕಾರವನು, ಲಬ್ಧ್ವಾ=ಅಪರೋಕ್ಷವಾಗಿ ಪಡೆದು ಯೋಗೀ=ಜ್ಞಾನಪ್ರಕಾಶಸಂಪನ್ನನಾದ ಶಿವಯೋಗಿಯು, ಸ್ವಾತ್ಮನಿ=ಸ್ವೀಕೃತಪ್ರಸಾದವುಳ್ಳ ಸ್ವಸ್ವರೂಪಿ ನಲ್ಲಿಯೇ, ತಿಷ್ಠತಿ=ಇರುತ್ತಿರ್ದ್ದಪನು. ॥೭॥

**ಗ್ರಂಥ॥** **ಅದ್ವೈತಬೋಧನಿರ್ಧೂತಭೇದಾವೇಶಸ್ಯ ಯೋಗಿನಃ ।**
**ಸಾಕ್ಷಾತ್ಕೃತಮಹಾಸಂವಿತ್ಪ್ರಕಾಶಸ್ಯ ಕ್ವ ಬಂಧನಮ್ ॥**

**ಟೀಕು॥** ಅದ್ವೈತಬೋಧನಿರ್ಧೂತಭೇದಾವೇಶಸ್ಯ=ಶಿವಾದ್ವೈತಜ್ಞಾನದಿಂದೆ ಕೊಡಹಲುಪಟ್ಟ ಅಂಗಲಿಂಗರೂಪವಾದ ಜೀವೇಶ್ವರರ ಭೇದಾವೇಶವುಳ್ಳ, ಸಾಕ್ಷಾತ್ಕೃತಮಹಾಸಂವಿತ್ಪ್ರಕಾಶಸ್ಯ= ಅಪರೋಕ್ಷವಾಗಿ ಪ್ರತ್ಯಕ್ಷೀಕರಿಸಲುಪಟ್ಟ ಮಹಾಜ್ಞಾನಪ್ರಕಾಶವುಳ್ಳ, ಯೋಗಿನಃ=ಶಿವಯೋಗಿಗೆ, ಬಂಧನಂ=ಪಾಶಪಂಚಕ ಬಂಧಕದಿಂದಲಾದ ಬಂಧನವು, ಕ್ವ=ಎತ್ತಣದು? ॥೮॥

**ಸೂತ್ರ॥** ಬಳಿಕ ಆ ಪೂರ್ಣಜ್ಞಾನಿಗೆ ಜಗತ್ಪ್ರಪಂಚು ತೋರದೆಂದು ದೃಷ್ಟಾಂತಪೂರ್ವಕವಾಗಿ ಸೂತ್ರತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಚಿದಾತ್ಮನಿ ಶಿವೇ ನ್ಯಸ್ತಂ ಜಗದೇತಚ್ಚರಾಚರಮ್ ।**
**ಜ್ಞಾಯತೇ ತನ್ಮಯಂ ಸರ್ವಮಗ್ನೌ ಕಾಷ್ಠಾದಿಕಂ ಯಥಾ ॥**

**ಟೀಕು॥** ಚಿದಾತ್ಮನಿ ಶಿವೇ=ಪೂರ್ಣ ಸಂವಿತ್ತೇ ಸ್ವರೂಪವಾಗುಳ್ಳ ಶಿವನಲ್ಲಿ, ನ್ಯಸ್ತಂ=ಇರಿಸಲು ಪಟ್ಟ, ಚರಾಚರಂ=ಜಂಗಮಸ್ಥಾವರರೂಪವಾದ, ಏತತ್ಸರ್ವಂ ಜಗತ್=ಈ ಸಮಸ್ತಜಗತ್ತು, ಅಗ್ನೌ=ಅಗ್ನಿಯಲ್ಲಿ, ನ್ಯಸ್ತಂ=ಇರಿಸಲುಪಟ್ಟ, ಸರ್ವಂ=ಸಮಸ್ತವಾದ, ಕಾಷ್ಠಾದಿಕಂ ಯಥಾ=ಕಾಷ್ಠ ಮೊದಲಾದ ವಸ್ತುವಿನೋಪಾದಿಯಲ್ಲಿ, ತನ್ಮಯಂ=ಆ ಮಹಾಚಿತ್ತೇಸ್ವರೂಪವಾಗುಳ್ಳದಾಗಿ, ಜ್ಞಾಯತೇ=ಅರಿಯಲುಪಡುತ್ತಿರ್ದ್ದಪುದು. ॥೯॥

ಗ್ರಂಥ॥ ನ ಭಾತಿ ಪೃಥ್ವೀ ನ ಜಲಂ ನ ತೇಜೋ ನೈವ ಮಾರುತಃ ।
ನಾಕಾಶೋ ನ ಪರಂ ತತ್ವಂ ಶಿವೇ ದೃಷ್ಟೇ ಚಿದಾತ್ಮನಿ ॥

**ಟೀಕು॥** ಚಿದಾತ್ಮನಿ=ಚಿದ್ರೂಪನಾದ, ಶಿವೇ=ಪರಮಶಿವನು, ದೃಷ್ಟೇಸತಿ=ಅಪರೋಕ್ಷವಾಗಿ ಕಾಣಲು ಪಡಲಿಕೆಯಾಗಿ, ಪೃಥ್ವೀ=ಪೃಥ್ವೀತತ್ತ್ವವು, ನ ಭಾತಿ=ಒಪ್ಪುತ್ತಿರದು. ಜಲಂ=ಅಪ್ಪು ತತ್ತ್ವವು, ನ ಭಾತಿ=ಒಪ್ಪುತ್ತಿರದು. ತೇಜಃ=ಅಗ್ನಿ ತತ್ತ್ವವು, ನ ಭಾತಿ=ಒಪ್ಪುತ್ತಿರದು. ಮಾರುತಃ=ವಾಯುತತ್ತ್ವವು, ನ ಭಾತಿ=ಒಪ್ಪುತ್ತಿರದು. ಆಕಾಶಃ=ಆಕಾಶತತ್ತ್ವವು, ನ ಭಾತಿ=ಒಪ್ಪುತ್ತಿರದು. ಪರಂ ತತ್ತ್ವಂ=ಉಳಿದ ಸಮಸ್ತ ತತ್ತ್ವವು, ನ ಭಾತ್ಯೇವ=ಒಪ್ಪುತ್ತಿರದೇ? ಸರ್ವವು ಶಿವತತ್ತ್ವಮಯವಾಗಿಯೆ ಕಾಣಿಸುವು ದೆಂಬುದರ್ಥ. ॥೧೦॥

ಗ್ರಂಥ॥ ಜ್ಯೋತಿರ್ಲಿಂಗೇ ಚಿದಾಕಾರೇ ಜ್ವಲತ್ಯಂತರ್ನಿರಂತರಮ್ ।
ವಿಲೀನಂ ನಿಖಿಲಂ ತತ್ತ್ವಂ ಪಶ್ಯನ್ ಯೋಗೀ ನ ಲಿಪ್ಯತೇ ॥

**ಟೀಕು॥** ಚಿದಾಕಾರೇ=ಚಿದ್ರೂಪವಾಗಿರ್ದ್ದ, ಜ್ಯೋತಿರ್ಲಿಂಗೇ=ಮಹಾಲಿಂಗದಲ್ಲಿ, ಅಂತಃ=ಅಷ್ಟದಳ ಕಮಲಮಧ್ಯದಲ್ಲಿ, ನಿರಂತರಂ=ಎಡದೆರಹಿಲ್ಲದೆ, ಜ್ವಲತಿಸತಿ=ಪ್ರಕಾಶಿಸುತ್ತಿರಲಿಕೆಯಾಗಿ, ಯೋಗೀ=ಶಿವ ಯೋಗಿಯು, ನಿಖಿಲಂ ತತ್ತ್ವಂ=ಪೃಥಿವ್ಯಾದಿ ಶಿವತತ್ತ್ವಾಂತವಾದ ಸಮಸ್ತ ತತ್ತ್ವವನು, ವಿಲೀನಂ= ಮಹಾಲಿಂಗದಲ್ಲಿ ಲಯಿಸಿದ್ದನಾಗಿಯೆ, ಪಶ್ಯನ್=ಕಾಣುತ್ತಿರ್ದ್ದಾತನಾಗುತಲು, ನ ಲಿಪ್ಯತೇ= ತನುಕರಣಭುವನ ಭೋಗಾತ್ಮಕವಾದ ಷಟ್ತ್ರಿಂಶತ್ತತ್ತ್ವಂಗಳಿಂದೆ ಲೇಪಿಸಲುಪಡುತ್ತಿರನು. ॥೧೧॥

**ಸೂತ್ರ॥** ಬಳಿಕ ಆ ಅರ್ಥವನೆ ಹೋಮರೂಪಿನಿಂದೆ ವಿಶೇಷಿಸುತ್ತಿರ್ದ್ದಪಂ.

ಗ್ರಂಥ॥ ಅಂತರ್ಮುಖೇನ ಮನಸಾ ಸ್ವಾತ್ಮಜ್ಯೋತಿಷಿ ಚಿನ್ಮಯೇ ।
ಸರ್ವಾನಪ್ಯರ್ಥವಿಷಯಾನ್ ಜುಹ್ವನ್ಯೋಗೀ ಪ್ರಮೋದತೇ ॥

**ಟೀಕು॥** ಯೋಗೀ=ಶಿವಯೋಗಿಯು, ಚಿನ್ಮಯೇ=ಚಿದ್ರೂಪವಾಗಿರ್ದ್ದ, ಸ್ವಾತ್ಮಜ್ಯೋತಿಷಿ= ಸ್ವಸ್ವರೂಪವಹ್ನಿಪ್ರಕಾಶದಲ್ಲಿ, ಅಂತರ್ಮುಖೇನ ಮನಸಾ=ಪಶ್ಚಿಮಾಭಿಮುಖವಾದ ಮನಸ್ಸಿನಿಂದೆ, ಸರ್ವಾನ್ ಅರ್ಥ ವಿಷಯಾನಪಿ=ಸಮಸ್ತವಾದ ಪದಾರ್ಥಂಗಳನಾಯಿತ್ತಾದೊಡೆ, ಜುಹ್ವನ್ ಸನ್=ಬೇಳುತ್ತಿರ್ದ್ದಾತನಾಗುತಲು, ಪ್ರಮೋದತೇ=ಸಂತೋಷಿಸುತ್ತಿರ್ದ್ದಪನು. ॥೧೨॥

**ಸೂತ್ರ॥** ಬಳಿಕ ಸ್ವೀಕೃತಪ್ರಸಾದಿಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ ಸಚ್ಚಿದಾನಂದಜಲಧೌ ಶಿವೇ ಸ್ವಾತ್ಮನಿ ನಿರ್ಮಲಃ ।
ಸಮರ್ಪ್ಯ ಸಕಲಾನ್ ಭುಂಕ್ತೇ ವಿಷಯಾನ್ ತತ್ಪ್ರಸಾದತಃ ॥

**ಟೀಕು॥** ನಿರ್ಮಲಃ=ಮಲರಹಿತನಾದ ಶಿವಯೋಗಿಯು, ಸಚ್ಚಿದಾನಂದ ಜಲಧೌ=ಸಚ್ಚಿದಾನಂದ ಸ್ವರೂಪಿಗೆ ಸಮುದ್ರವಾಗಿರ್ದ್ದ, ಸ್ವಾತ್ಮನಿ=ಸ್ವಸ್ವರೂಪವಾಗಿರ್ದ್ದ, ಶಿವೇ=ಶಿವನಲ್ಲಿ, ಸಕಲಾನ್ ವಿಷಯಾನ್=ಸಮಸ್ತ ವಿಷಯಂಗಳನು, ಸಮರ್ಪ್ಯ=ಸಮರ್ಪಿಸಿ, ತತ್ಪ್ರಸಾದತಃ=ಆ ಸ್ವೀಕೃತಪ್ರಸಾದ ದೆಸೆಯಿಂದವೆ, ಭುಂಕ್ತೇ=ಭೋಗಿಸುತ್ತಿರ್ದ್ದಪನು.

**ತಾತ್ಪರ್ಯ॥** ಸಚ್ಚಿದಾನಂದಾಂಶಗಳಾದ ರೂಪು ರುಚಿ ಚಿತ್ತೃಪ್ತಿರೂಪವಾದ ಪ್ರಸಾದ ಸ್ವೀಕಾರವನು ಸಜಾತೀಯವಾದ ಚೈತನ್ಯಯೋಗ ಜಡಾಜಡಯೋಗದಿಂದೆ ನಿಶ್ಚೈಸುವುದು. ॥೧೩॥

ಇತಿ ಸ್ವೀಕೃತಪ್ರಸಾದಿಸ್ಥಲಮ್

## ೫೦. ಐಕ್ಯಸ್ಥಲೇ ಶಿಷ್ಟೋದನಸ್ಥಲಮ್

**ಸೂತ್ರ॥** ಬಳಿಕ "ಮಾಯಾಂ ತು ಪ್ರಕೃತಿಂ ವಿದ್ಯಾತ್।" ಯೆಂಬ ಶ್ವೇತಾಶ್ವತರಶ್ರುತ್ಯರ್ಥವನು, "ಗ್ರಂಥಿಜನ್ಯಕಲಾಕಾಲವಿದ್ಯಾರಾಗನೃಮಾತರಃ।
ಗುಣಾದಿಗರ್ವಚಿತ್ತಾಕ್ಷಮಾತ್ರಾಭೂತಾನ್ಯನುಕ್ರಮಾತ್"॥ ಯೆಂಬ ಮೃಗೇಂದ್ರಾರ್ಥವನು ಪ್ರಕಟಿಸುತ್ತ ಆ ಚಿತ್ಪ್ರಸಾದವನು ಸ್ವೀಕರಿಸಿದ ಶಿವಯೋಗಿಗೆ ಮಾಯಾತತ್ತ್ವವೇ ಶಿಷ್ಟೋದನವೆಂದು ಸೂತ್ರಚತುಷ್ಟಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ॥ ಪ್ರಕಾಶತೇ ಯಾ ಸರ್ವೇಷಾಂ ಮಾಯಾ ಸೈವೋದನಾಕೃತಿಃ ।
ಲೀಯತೇ ತತ್ರ ಚಿಲ್ಲಿಂಗೇ ಶಿಷ್ಟಂ ತತ್ ಪರಿಕೀರ್ತಿತಮ್ ॥

**ಟೀಕು॥** ಯಾ ಮಾಯಾ=ಮಿಶ್ರಾರ್ದ್ಧ್ವಶುದ್ಧಾಧ್ವದವರಿಗೆ ತನುಕರಣಭುವನಭೋಗರೂಪ ವಾದುದಾವುದಾನೊಂದು ಅಧೋಮಾಯೆಯುಂಟು, ಸೈವ=ಅದೆ, ಸರ್ವೇಷಾಂ=ಸರ್ವರಿಗು, ಪ್ರಕಾಶತೇ ಲೀಯತೇ=ತೋರುತ್ತ ಅಡಗುತ್ತಿರ್ದ್ದಪುದು. ತತ್=ಕಲಾತ್ರಿಂಶತ್ತತ್ತ್ವಾತ್ಮಕವಾದ ಆ ಮಾಯಾತತ್ತ್ವವೆ, ಚಿಲ್ಲಿಂಗೇ=ಬರಿಯರಿವೆ ಕುರುಹಾಗುಳ್ಳ, ತತ್ರವಿಷಯೇ=ಆ ಸ್ವೀಕೃತಪ್ರಸಾದಿಯ ವಿಷಯವಾಗಿ, ಶಿಷ್ಟಂ ಓದನಾಕೃತಿಃ=ಉಳಿದ ಅನ್ನಾಕಾರವುಳ್ಳದಾಗಿ, ಪರಿಕೀರ್ತಿತಂ=ಹೇಳಲುಪಟ್ಟಿತ್ತು. ॥೧೪॥

ಗ್ರಂಥ॥ ಜಗದಂಗೇ ಪರಿಗ್ರಸ್ತೇ ಮಾಯಾಪಾಶವಿಜೃಂಭಿತೇ ।
ಸ್ವಾತ್ಮಜ್ಯೋತಿಷಿ ಬೋಧೇನ ತದೇಕಮವಶಿಷ್ಯತೇ ॥

**ಟೀಕು||** ಮಾಯಾಪಾಶವಿಜೃಂಭಿತೇ=ಕಲಾದಿಕ್ಷಿತ್ಯಂತತ್ರಿಂಶತ್ತತ್ತ್ವಾತ್ಮಕವಾದ ಮಾಯಾಪಾಶದಿಂದೆ ಕಟ್ಟಲುಪಟ್ಟ, ಜಗದಂಗೇ=ಜಗಜ್ಜಾಲವೆ ಶರೀರವಾಗುಳ್ಳ, ಸ್ವಾತ್ಮಜ್ಯೋತಿಷಿ=ಸ್ವಸ್ವರೂಪಜ್ಞಾನವು, ಬೋಧೇನ=ಸ್ವಸ್ವರೂಪ ಜ್ಞಾನದಿಂದೆ, ಪರಿಗ್ರಸ್ತೇ ಸತಿ=ಮುಸುಕಲುಪಡಲಿಕೆಯಾಗಿ, ತದೇಕಂ=ಆ ಮಾಯಾತತ್ತ್ವವೊಂದೇ, ಅವಶಿಷ್ಯತೇ=ಉಳುಮೆಯಾಗುತ್ತಿರ್ದಪುದು. ||೧೫||

**ಗ್ರಂಥ||** **ಅಖಂಡಸಚ್ಚಿದಾನಂದಪರಬ್ರಹ್ಮಸ್ವರೂಪಿಣಃ ।**
**ಜೀವನ್ಮುಕ್ತಸ್ಯ ಧೀರಸ್ಯ ಮಾಯಾ ಕೈಂಕರ್ಯವಾದಿನೀ ॥**

**ಟೀಕು||** ಅಖಂಡಸಚ್ಚಿದಾನಂದಪರಬ್ರಹ್ಮಸ್ವರೂಪಿಣಃ=ಪರಿಪೂರ್ಣಚಿದಾನಂದಾತ್ಮಕವಾದ ಪರಬ್ರಹ್ಮವೆ ಸ್ವರೂಪವಾಗುಳ್ಳ, ಧೀರಸ್ಯಜೀವನ್ಮುಕ್ತಸ್ಯ=ಧೀರನಾದ ಜೀವನ್ಮುಕ್ತನಿಗೆ, ಮಾಯಾ= ಮಾಯೆಯು, ಕೈಂಕರ್ಯವಾದಿನೀ=ಕಿಂಕರತ್ವವನು ನುಡಿವುತ್ತಿರ್ದ ಅವಳು. ||೧೬||

**ಗ್ರಂಥ||** **ವಿಶ್ವಸಂಮೋಹಿನೀ ಮಾಯಾ ಬಹುಶಕ್ತಿರ್ನಿರಂಕುಶಾ ।**
**ಶಿವೈಕತ್ವಮುಪೇತಸ್ಯ ನ ಪುರಃ ಸ್ಥಾತುಮೀಹತೇ ॥**

**ಟೀಕು||** ಬಹುಶಕ್ತಿರ್ನಿರಂಕುಶಾ=ಅನೇಕ ಶಕ್ತಿಗಳಿಂದೆ ತಡಹಿಲ್ಲದೆ, ವಿಶ್ವಸಂಮೋಹಿನೀ= ಸಮಸ್ತಜಗಜ್ಜಾಲವನು ಮೋಹಿಸುತ್ತಿರ್ದ, ಮಾಯಾ=ಮಾಯೆಯು, ಶಿವೈಕತ್ವಂ=ಶಿವನಲ್ಲಿ ಸಮಾನ ಸಮರಸರೂಪವಾದ ಐಕ್ಯವನು, ಉಪೇತಸ್ಯ=ಎಯ್ದಿರ್ದ ಶಿವಯೋಗಿಯ, ಪುರಃ=ಮುಂದೆ, ಸ್ಥಾತುಂ=ಮೋಹಕವಾಗಿರಲು, ನೇಹತೇ=ಸಮರ್ಥವಾಗುತ್ತಿರದು. ||೧೭||

**ಸೂತ್ರ||** ಬಳಿಕ ಆ ಶಿವೈಕ್ಯನಿಗೆ ವಿಷಯಂಗಳ ನಾಶವ ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಜ್ಯೋತಿರ್ಲಿಂಗೇ ಚಿದಾಕಾರೇ ನಿಮಗ್ನೇನ ಮಹಾತ್ಮನಾ ।**
**ಭುಜ್ಯಮಾನಾ ಯಥಾಯೋಗಂ ನಶ್ಯಂತಿ ವಿಷಯಾಃ ಸ್ವತಃ ॥**

**ಟೀಕು||** ಚಿದಾಕಾರೇ=ಚಿದ್ರೂಪವಾಗಿರ್ದ, ಜ್ಯೋತಿರ್ಲಿಂಗೇ=ಮಹಾಲಿಂಗದಲ್ಲಿ, ನಿಮಗ್ನೇನ= ಮುಳುಗಿರ್ದ, ಮಹಾತ್ಮನಾ=ಮಹಾಪುರುಷರಿಂದೆ, ಯಥಾಯೋಗಂ=ಕ್ರಮವನು ಮೀರದೆ, ಭುಜ್ಯಮಾನಾಃ=ಭೋಗಿಸಲುಪಡುತ್ತಿರ್ದ, ವಿಷಯಾಃ=ಶಬ್ದಾದಿ ವಿಷಯಂಗಳು, ಸ್ವತಃ=ತಮ್ಮ ದೆಸೆಯಿಂದವೆ, ನಶ್ಯಂತಿ=ಕೆಡುತ್ತಿರ್ದಪವು. ||೧೮||

**ಗ್ರಂಥ||** **ಶಬ್ದಾದಯೋಽಪಿ ವಿಷಯಾ ಭುಜ್ಯಮಾನಾಸ್ತದಿಂದ್ರಿಯೈಃ ।**
**ಆತ್ಮನ್ಯೇವ ವಿಲೀಯಂತೇ ಸರಿತಃ ಸಾಗರೇ ಯಥಾ ॥**

**ಟೀಕು||** ತದಿಂದ್ರಿಯೈಃ=ಆ ಮಾಯಾಶ್ರೋತ್ರಾದಿಂದ್ರಿಯಂಗಳಿಂದೆ, ಭುಜ್ಯಮಾನಾಃ=ಭೋಗಿಸಲುಪಡುತ್ತಿರ್ದ್ದ, ಶಬ್ದಾದಯೋಽಪಿ ವಿಷಯಾಃ=ಶಬ್ದ ಮೊದಲಾಗುಳ್ಳ ವಿಷಯಂಗಳಾಯಿತ್ತಾದೊಡೆ, ಸಾಗರೇ=ಸಮುದ್ರದಲ್ಲಿಯ, ಸರಿತೋ ಯಥಾ=ನದಿಗಳೋಪಾದಿಯಲ್ಲಿ, ಆತ್ಮನ್ಯೇವ=ತಮ್ಮ ಸ್ವರೂಪಿನಿಂದವೆ, ವಿಲೀಯಂತೇ=ಅಡಗುತ್ತಿರ್ದ್ದಪವು.

**ತಾತ್ಪರ್ಯ||** ಕೊಂಕೊಂಡುದುಪ್ರಸಾದವೆಂಬುದು ತೈಲದೋಪಾದಿಯಲ್ಲಿ ಸಾರವಾದ ಚಿತ್ತು. ನಿಂದುದುಓಗರವೆಂಬುದು ಪಿಣ್ಯಾಕದೋಪಾದಿಯಲ್ಲಿ ನಿಸ್ಸಾರವಾದ ಮಾಯೆಯೆ. ಪಿಣ್ಯಾಕದೋಪಾದಿಯಲ್ಲಿ ಮಾಯಾತತ್ತ್ವಭೋಗವೆ ಅತಿನಿಸ್ಸಾರವಾಗಿ ಕೆಡುವುದೆಂಬುದರ್ಥ. ||೧೯||

**ಸೂತ್ರ||** ಬಳಿಕ ಶಿಷ್ಟೋದನಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ಅರ್ಥಜಾತಮಶೇಷಂ ತು ಗ್ರಸನ್ಯೋಗೀ ಪ್ರಶಾಮ್ಯತಿ ।**
**ಸ್ವಾತ್ಮನ್ಯೈವ ಸ್ಥಿತೋ ಭಾನು ಸ್ತೇಜೋಜಾಲಮಶೇಷತಃ ॥**

**ಟೀಕು||** ಯೋಗೀ=ಶಿವಯೋಗಿಯು, ಅಶೇಷಂ=ಸಮಸ್ತವಾಗಿರ್ದ್ದ, ಅರ್ಥಜಾತಂ ತು=ಪದಾರ್ಥಂಗಳ ಸಮೂಹವನಾಯಿತ್ತಾದೊಡೆ, ಸ್ವಾತ್ಮನಾ=ಸ್ವಸ್ವರೂಪಿನಿಂದೆ, ಗ್ರಸನ್ ಸನ್=ಸ್ವೀಕರಿಸುತ್ತಿರ್ದ್ದ ಆತನಾಗುತಲು; ತೇಜೋಜಾಲಂ=ಕಿರಣಸಮೂಹವನು, ಅಶೇಷತಃ= ಉರಿಯದ ಹಾಗೆ, ಗ್ರಸನ್=ಗ್ರಹಿಸುತ್ತ, ಸ್ಥಿತಃ ಭಾನುರಿವ=ಅಸ್ತಂಗತವಾಗುತ್ತಿರ್ದ್ದ ಸೂರ್ಯನೋಪಾದಿಯಲ್ಲಿ, ಪ್ರಶಾಮ್ಯತಿ=ಶಾಂತನಾಗುತ್ತಿರ್ದ್ದಪನು. ||೨೦||

**ಇತಿ ಶಿಷ್ಟೋದನಸ್ಥಲಮ್**

## ೫೧. ಐಕ್ಯಸ್ಥಲೇ ಚರಾಚರವಿನಾಶಸ್ಥಲಮ್

**ಸೂತ್ರ||** ಬಳಿಕ "ಸೋಽವಿದ್ಯಾಗ್ರಂಥಿಂ ವಿಕಿರತೀಹ ಸೋಮ್ಯ!" ಯೆಂಬ ಛಾಂದೋಗ್ಯ ಶ್ರುತ್ಯರ್ಥವನು,
"ವಿಷಸಂಬಂಧಿನೀ ಶಕ್ತಿರ್ಯಥಾ ಮಂತ್ರೈರ್ನಿರುಧ್ಯತೇ।
ಯಥಾ ನ ತದಿತಿ ಕ್ಷೀಣಂ ಏವ ಪುಂಸೋ ಮಲಕ್ಷಯಃ"|| ಯೆಂಬ ಕಿರಣಾಗಮಾರ್ಥವನು ಪ್ರಕಟಿಸುತ್ತ ಕೇವಲ ಚಿತ್ಪ್ರಸಾದವನೆ ಸ್ವೀಕರಿಸಿ ಮಾಯೆ ಶಿಷ್ಟೋದನವಾಗುಳ್ಳ ಈ ಶಿವಯೋಗಿಯು ಚರಾಚರದಲ್ಲಿ ಪ್ರತ್ಯೇಕವಾಗಿ ಪರಿಪಕ್ವಾನುಸಾರವಾಗಿ ವ್ಯಾಪಕವಾದ ಮಲಶಕ್ತಿಯನು ಪರಿಪಕ್ವಾನುಸಾರವಾಗಿ ವಿನಾಶವ ಮಾಡುವದರಿಂದ ಚರಾಚರವಿನಾಶಕನೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** **ಲಿಂಗೈಕ್ಯೇ ತು ಸಮಾಪನ್ನೇ ಚರಣಾಚರಣೇ ಗತೇ**
**ನಿರ್ದೇಹೀ ಸ ಭವೇದ್ಯೋಗೀ ಚರಾಚರವಿನಾಶಕಃ**

**ಟೀಕು॥** ಚರಣಾಚರಣೇ ಗತೇ=ಜಂಗಮಸ್ಥಾವರಂಗಳನು ಎಯ್ದಿರ್ದ್ದ, ಲಿಂಗೈಕ್ಯೇ ತು=ಮಹಾಲಿಂಗದಲ್ಲಿಯ ಏಕತ್ವವಾಯಿತ್ತಾದೊಡೆ, ಸಮಾಪನ್ನೇ ಸತಿ=ಬರಲಿಕೆಯಾಗಿ, ಸ ಯೋಗೀ=ಆ ಶಿಷ್ಟೋದನ ಸಂಪನ್ನನಾದ ಶಿವಯೋಗಿಯು, ನಿರ್ದೇಹೀ=ನಿರ್ದೇಹಿಯಾಗಿ, ಚರಾಚರವಿನಾಶಕಃ= ಜಂಗಮಸ್ಥಾವರಂಗಳ ಮಲಶಕ್ತಿಯನು ವಿನಾಶವ ಮಾಡುತ್ತಿರ್ದ್ದ ಆತನು, ಭವೇತ್= ಅಹನು.॥೨೧॥

**ಸೂತ್ರ॥** ಬಳಿಕ ಆ ಶಿವಯೋಗಿಯು ಚರಾಚರವ್ಯಾಪಕವಾದ ಮಲಶಕ್ತಿಯ ವಿನಾಶತೆಯಿಂದೆ ಮಾಯಾಪ್ರಪಂಚನರಿಯನೆಂದು ಷಟ್‌ಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ॥** **ಅನಾದ್ಯವಿದ್ಯಾಮೂಲಾ ಹಿ ಪ್ರತೀತಿರ್ಜಗತಾಮಿಯಮ್**
**ಸ್ವಾತ್ಮೈಕಬೋಧಾತ್ತನ್ನಾಶೇ ಕುತೋ ವಿಶ್ವಪ್ರಕಾಶನಮ್**

**ಟೀಕು॥** ಜಗತಾಂ=ಭುವನಂಗಳ, ಇಯಂ ಪ್ರತೀತಿಃ=ಈ ಮಾಯಾಮಯವಾದ ಜ್ಞಾನವು, ಅನಾದ್ಯವಿದ್ಯಾಮೂಲಾ ಹಿ=ಅನಾದಿಯಾದ ಮಲವೆ ಮೂಲಕಾರಣವಾಗುಳ್ಳ ಅದಲಾ. ಸ್ವಾತ್ಮೈಕ ಬೋಧಾತ್=ಸ್ವಸ್ವರೂಪವೆ ಮುಖ್ಯವಾದ ಜ್ಞಾನದದೆಸೆಯಿಂದೆ, ತನ್ನಾಶೇ ಸತಿ=ಆ ಮಲಶಕ್ತಿಯು ಕೆಡಲಿಕೆಯಾಗಿ, ವಿಶ್ವಪ್ರಕಾಶನಂ=ವಿಶ್ವರೂಪವಾದ ಮಾಯಾಪ್ರಪಂಚಿನ ಪ್ರಕಾಶವು, ಕುತಃ=ಎತ್ತಣದು? ॥೨೨॥

**ಗ್ರಂಥ॥** **ಯಥಾ ಮೇಘಾಃ ಸಮುದ್ಭೂತಾಃ ವಿಲೀಯಂತೇ ನಭಸ್ತಲೇ**
**ತಥಾಽಽತ್ಮನಿ ವಿಲೀಯಂತೇ ವಿಷಯಾಃ ಸ್ವಾನುಭಾವಿನಃ**

**ಟೀಕು॥** ನಭಸ್ಥಲೇ=ಆಕಾಶದಲ್ಲಿ, ಮೇಘಾಃ=ಮೇಘಂಗಳು, ಸಮುದ್ಭೂತಾಃ=ಹುಟ್ಟಿ, ಯಥಾ=ಹೇಗೆ, ವಿಲೀಯಂತೇ=ಅಡಗುತ್ತಿರ್ದ್ದಪವು. ತಥಾ=ಹಾಗೆಯೆ, ಸ್ವಾನುಭಾವಿನಃ=ಸ್ವಸ್ವರೂಪಾನುಭವಿಯಾದ ಶಿವಯೋಗಿಯ, ಆತ್ಮನಿ=ಚೈತನ್ಯದಲ್ಲಿ, ವಿಷಯಾಃ=ಶಬ್ದಾದಿ ವಿಷಯಂಗಳು, ಸಮುದ್ಭೂತಾಃ=ಹುಟ್ಟಿ, ವಿಲೀಯಂತೇ=ಅಡಗುತ್ತಿರ್ದ್ದಪವು. ॥೨೩॥

**ಗ್ರಂಥ॥** **ಸ್ವಪ್ನೇ ದೃಷ್ಟಂ ಯಥಾ ವಸ್ತು ಪ್ರಬೋಧೇ ಲಯಮಶ್ನುತೇ**
**ತಥಾ ಸಾಂಸಾರಿಕಂ ಸರ್ವಮಾತ್ಮಜ್ಞಾನೇ ವಿನಶ್ಯತಿ**

**ಟೀಕು||** ಸ್ವಪ್ನೇ=ಸ್ವಪ್ನದಲ್ಲಿ, ದೃಷ್ಟಂ=ಕಾಣಲುಪಟ್ಟ, ವಸ್ತು=ಪದಾರ್ಥವು, ಪ್ರಬೋಧೇ ಸತಿ=ಎಚ್ಚರಲಿಕೆಯಾಗಿ, ಯಥಾ=ಹೇಗೆ, ಲಯಂ=ನಾಶವನು, ಅಶ್ನುತೇ=ಎಯ್ದುತ್ತಿರ್ದಪುದು. ತಥಾ=ಹಾಗೆಯೇ, ಸಾಂಸಾರಿಕಂ=ಸಂಸಾರದಲ್ಲಿ ಹುಟ್ಟಿರ್ದ, ಸರ್ವಂ=ಸಮಸ್ತ ವಸ್ತುವು, ಆತ್ಮಜ್ಞಾನೇ ಸತಿ=ಸ್ವಸ್ವರೂಪ ಜ್ಞಾನವಾಗಲಿಕೆಯಾಗಿ, ವಿನಶ್ಯತಿ=ಕೆಡುತ್ತಿರ್ದಪುದು. ||೨೪||

**ಗ್ರಂಥ||** **ಜಾಗ್ರತ್ಸ್ವಪ್ನಸುಷುಪ್ತಿಭ್ಯಃ ಪರಾಽವಸ್ಥಾಮುಪೇಯುಷಃ |**
**ಕಿಂ ವಾ ಪ್ರಮಾಣಂ ಕಿಂ ಜ್ಞೇಯಂ ಕಿಂ ವಾ ಜ್ಞಾನಸ್ಯ ಸಾಧನಮ್ ||**

**ಟೀಕು||** ಜಾಗ್ರತ್ ಸ್ವಪ್ನಸುಷುಪ್ತಿಭ್ಯಃ=ತನುತ್ರಯಾಶ್ರಿತವಾದ ಜಾಗ್ರತ್ಸ್ವಪ್ನಸುಷುಪ್ತಿ ರೂಪವಾದ ಅವಸ್ಥೆಗಳ ದೆಸೆಯಿಂದೆ, ಪರಾಽವಸ್ಥಾಂ=ಜ್ಞಾನಖೇಚರಿಮುದ್ರೆಯಿಂದೆ ಸುಲಭವಾಗಿ ಸರ್ವೋತ್ಕರ್ಷವಾದ ತುರ್ಯಾವಸ್ಥೆಯನು, ಉಪೇಯುಷಃ=ಎಯ್ದಿರ್ದ ಶಿವಯೋಗಿಗೆ, ಕಿಂ ವಾ ಪ್ರಮಾಣಂ=ಪ್ರಮಾಣವೇನು? ಕಿಂ ಜ್ಞೇಯಂ=ಜ್ಞೇಯವೇನು? ಕಿಂ ವಾ ಜ್ಞಾನಸ್ಯ ಸಾಧನಂ=ಜ್ಞಾನಕ್ಕೆ ಸಾಧನವೇನು? ಈ ತ್ರಿಪುಟಿಗಳೇನೂ ಇಲ್ಲವೆಂಬುದರ್ಥ. ||೨೫||

**ಗ್ರಂಥ||** **ತುರ್ಯಾತೀತಪದಂ ಯತ್ತದ್ದೂರಂ ವಾಙ್ಮನಸಾದ್ವನಃ |**
**ಅನುಪ್ರವಿಶ್ಯ ತದ್ಯೋಗೀ ನ ಭೂಯೋ ವಿಶ್ವಮೀಕ್ಷತೇ ||**

**ಟೀಕು||** ಯತ್=ಆವುದಾನೊಂದು, ತುರ್ಯಾತೀತಪದಂ=ಮೌನಾಂತ ಮುದ್ರೆಯಿಂದೆ ಸುಲಭವಾದ ತುರ್ಯಾತೀತಸ್ಥಾನವುಂಟು, ವಾಙ್ಮನಸಾದ್ವನಃ ದೂರಂ=ಸ್ತೋತ್ರಧ್ಯಾನಂಗಳಿಗೆ ದೂರವಾಗಿದ್ದ ಅದು. ತತ್=ಆ ತುರ್ಯಾತೀತದೊಡನೆ, ಅನುಪ್ರವಿಷ್ಯ=ಪ್ರವೇಶಿಸಲುಪಟ್ಟ, ಯೋಗೀ=ಯೋಗವುಳ್ಳ ಶಿವಯೋಗಿಯು, ಭೂಯಃ=ಮರಳಿ, ವಿಶ್ವಂ=ಮಾಯಾರೂಪವಾದ ವಿಶ್ವವನು, ನೇಕ್ಷತೇ=ನೋಡುತ್ತಿರನು. ||೨೬||

**ಗ್ರಂಥ||** **ನಾನ್ಯತ್ಪಶ್ಯತಿ ಯೋಗೀಂದ್ರೋ ನಾನ್ಯಜ್ಜಾನಾತಿ ಕಿಂಚನ |**
**ನಾನ್ಯಚ್ಛೃಣೋತಿ ಸಂದೃಷ್ಟೇ ಚಿದಾನಂದಮಯೇ ಶಿವೇ ||**

**ಟೀಕು||** ಚಿದಾನಂದಮಯೇ=ಚಿದಾನಂದವೇ ಸ್ವರೂಪವಾಗುಳ್ಳ, ಶಿವೇ=ಪರಮಶಿವನಲ್ಲಿ, ಸಂದೃಷ್ಟೇ ಸತಿ=ಅಪರೋಕ್ಷವಾಗಿ ಕಾಣಲುಪಡಲಿಕೆಯಾಗಿ, ಯೋಗೀಂದ್ರಃ=ಸಹಜಾವಸ್ಥನಾದ ಶಿವ ಯೋಗೀಶ್ವರನು, ಅನ್ಯತ್=ತನ್ನದೆಸೆಯಿಂದನ್ಯವಾದ ಅಧೋಮಾಯಾರೂಪವನು, ನ ಪಶ್ಯತಿ=ಕಾಣುತ್ತಿರನು. ಅನ್ಯತ್=ತನ್ನದೆಸೆಯಿಂದನ್ಯವಾದ ಶುದ್ಧಮಾಯಾಜನ್ಯವಾದ ಶಬ್ದಜಾಲವನು, ನ ಶೃಣೋತಿ=ಕೇಳುತ್ತಿರನು. ಅನ್ಯತ್ಕಿಂಚನ=ತನ್ನಿಂದನ್ಯವಾದ ಒಂದು ವಸ್ತುವನು, ನ ಜಾನಾತಿ=ಅರಿವುತ್ತಿರನು.

**ತಾತ್ಪರ್ಯ॥** ಮಲಶಕ್ತಿಕ್ಷಯದಿಂದೆ ಸ್ವಸ್ವರೂಪಾಭಿವ್ಯಕ್ತಿಯೆ ಪರಿಪೂರ್ಣವಾಗಿ ತೋರಿತೆಂಬು ದರ್ಥ. ॥೨೭॥

**ಸೂತ್ರ॥** ಬಳಿಕ ಚರಾಚರವಿನಾಶಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ॥** **ಅಸದೇವ ಜಗತ್ಸರ್ವಂ ಸದಿವ ಪ್ರತಿಭಾಸತೇ ।**
**ಜ್ಞಾತೇ ಶಿವೇ ತದಜ್ಞಾನಂ ಸ್ವರೂಪಮುಪಪದ್ಯತೇ ॥**

**ಟೀಕು॥** ಅಸತ್=ಮಿಥ್ಯೆಯಾಗಿರ್ದ್ದ, ಸರ್ವಂ ಜಗತ್=ಸಮಸ್ತ ಜಗತ್ತು, ಸದಿವ=ಸತ್ತಿನೋಪಾದಿಯಲ್ಲಿ, ಪ್ರತಿಭಾಸತೇ=ಒಪ್ಪುತ್ತಿರ್ದ್ದಪುದು. ತಥಾ ಜ್ಞಾನೇ=ಸತ್ಯಜ್ಞಾನರೂಪವಾದ, ಶಿವೇ=ಪರಮಶಿವನಲ್ಲಿ, ಜ್ಞಾತೇ ಸತಿ=ಅಪರೋಕ್ಷವಾಗಿ ಅರಿಯಲುಪಡಲಿಕೆಯಾಗಿ, ಸ್ವರೂಪಮೇವ= ಸ್ವಸ್ವರೂಪವೆ, ಉಪಪದ್ಯತೇ=ಯುಕ್ತವಾಗುತ್ತಿರ್ದ್ದಪುದು. ॥೨೮॥

**ಇತಿ ಚರಾಚರವಿನಾಶಸ್ಥಲಮ್**

## ೫೨. ಐಕ್ಯಸ್ಥಲೇ ಭಾಂಡಸ್ಥಲಮ್

**ಸೂತ್ರ॥** ಬಳಿಕ "ಊರ್ಧ್ವಮೂಲೋಽವಾಕ್ಶಾಖ ಏಷೋಽಶ್ವತ್ಥಃ ಸನಾತನಃ।
ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತಮುಚ್ಯತೇ।
ತಸ್ಮಿಂಲ್ಲೋಕಾಃ ಶ್ರಿತಾಃ ಸರ್ವೇ ತದು ನಾತ್ಯೇತಿ ಕಶ್ಚನ"॥ಯೆಂಬ ಕಠವಲ್ಲೀ ಶ್ರುತ್ಯರ್ಥವನು;
ಯಥಾ ಕುಂಡಲಿನೀಶಕ್ತಿಃ ಮಾಯಾಶಕ್ತ್ಯನುಸಾರಿಣೀ।
ನಾದಬಿಂದ್ವಾದಿಕಂ ಕಾರ್ಯಂ ತಸ್ಯಾ ಇತಿ ಜಗತ್‌ಸ್ಥಿತಿಃ"॥ ಯೆಂಬ ವಿಶ್ವಸಾರೋತ್ತರಾರ್ಥವನು ಪ್ರಕಟಿಸುತ್ತ ಚರಾಚರದಲ್ಲಿ ಪೂರ್ಣವಾದ ಮಲಶಕ್ತಿವಿನಾಶಕನಾದ ಆ ಶಿವಯೋಗಿಯ ವಿಚಾರರೂಪವಾದ ಪರಬಿಂದುವೆ ಭಾಂಡಸ್ಥಲವೆಂದು ಹೇಳುತ್ತಿರ್ದ್ದಪಂ.

**ಗ್ರಂಥ॥** **ಬ್ರಹ್ಮಾಂಡಶತಕೋಟೀನಾಂ ಸರ್ಗಸ್ಥಿತಿಲಯಾನ್ ಪ್ರತಿ ।**
**ಸ್ಥಾನಭೂತೋ ವಿಮರ್ಶೋ ಯಸ್ತದ್ಭಾಂಡಸ್ಥಲಮುಚ್ಯತೇ ॥**

**ಟೀಕು॥** ಬ್ರಹ್ಮಾಂಡಶತಕೋಟಿನಾಂ=ಶತಕೋಟಿ ಬ್ರಹ್ಮಾಂಡಂಗಳ, ಸರ್ಗಸ್ಥಿತಿಲಯಾನ್ = ಪ್ರತಿಸೃಷ್ಟಿಸ್ಥಿತಿಸಂಹಾರಂಗಳನು ಕೂರ್ತು, ಸ್ಥಾನಭೂತಃ=ಆಶ್ರಯವಾಗಿರ್ದ್ದ, ಅಸ್ಯ=ಚರಾಚರ ಮಲಶಕ್ತಿವಿನಾಶಕನಾದ ಈ ಶಿವಯೋಗಿಯ, ಯಃ ವಿಮರ್ಶಃ=ಆವುದಾನೊಂದು ಶಬ್ದಬ್ರಹ್ಮಸ್ವರೂಪ

ಹಾದ ವಿಚಾರವುಂಟು. ತತ್=ಆ ವಿಮರ್ಶರೂಪವೆ, ಭಾಂಡಸ್ಥಲಂ=ಭಾಂಡಸ್ಥಲವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು. ||೨೯||

**ಸೂತ್ರ||** ಬಳಿಕ ಆ ವಿಮರ್ಶಸ್ವರೂಪವನು ಹೇಳುತ್ತಿರ್ದ್ದಪಂ.

ಗ್ರಂಥ|| **ವಿಮರ್ಶಾಖ್ಯಾ ಪರಾಶಕ್ತಿರ್ವಿಶ್ವೋದ್ಭಾಸನಕಾರಿಣೀ ।**
**ಸಾಕ್ಷಿಣೀ ಸರ್ವತತ್ತ್ವಾನಾಂ ಸಮಿಂಧೇ ಸರ್ವತೋಮುಖೀ ॥**

**ಟೀಕು||** ವಿಮರ್ಶಾಖ್ಯಾ=ಪರೇ ಪಶ್ಯಂತಿ ಮಧ್ಯಮೇ ವೈಖರಿ ವರ್ಣ ಪದ ಮಂತ್ರ ಭುವನ ತತ್ತ್ವ ಕಲೆಗಳಿಂದೆ ವಿಚಾರರೂಪವಾದ ಕಾರಣವಾಗಿ ವಿಮರ್ಶೆಯೆಂಬ ಹೆಸರುಳ್ಳ, ಪರಾಶಕ್ತಿಃ=ಶುದ್ಧಮಾಯೆಯು, ವಿಶ್ವೋದ್ಭಾಸನಕಾರಿಣೀ=ತನ್ನ ಕಾರ್ಯಂಗಳಿಂದೆ ವಿಶ್ವವನು ಪ್ರಕಾಶಿಸುತ್ತಿರ್ದ್ದ, ಸರ್ವತತ್ತ್ವಾನಾಂ=ಸಮಸ್ತ ತತ್ತ್ವಂಗಳಿಗೆ, ಸಾಕ್ಷಿಣೀ ಸತಿ=ಸಾಕ್ಷಿಕೆಯಾಗಿರ್ದ್ದವಳಾಗುತಲು, ಸರ್ವತೋಮುಖೀ=ಎಲ್ಲಾ ಕಡೆಯಲ್ಲಿ ಮುಖವುಳ್ಳವಳಾಗಿ, ಸಮಿಂಧೇ=ಶುದ್ಧಾಧ್ವರಿಗೆ ಪರಶಕ್ತಿ ಸದಾಶಿವೇಶ್ವರ ವಿದ್ಯಾತತ್ತ್ವರೂಪವಾದ ತನುಕರಣಭುವನಭೋಗರೂಪವಾಗಿ ಪ್ರಕಾಶಿಸುತ್ತಿರ್ದ್ದಪಳು. ||೩೦||

**ಸೂತ್ರ||** ಬಳಿಕ ಆ ವಿಮರ್ಶಕಲೆಯನು ವಿಶೇಷಿಸುತ್ತಿರ್ದ್ದಪಂ.

ಗ್ರಂಥ|| **ವಿಶ್ವಂ ಯತ್ರ ಲಯಂ ಯಾತಿ ವಿಭಾತ್ಯಾತ್ಮಾ ಚಿದಾಕೃತಿಃ ।**
**ಸದಾನಂದಮಯಃ ಸಾಕ್ಷಾತ್ ಸಾ ವಿಮರ್ಶಮಯೀ ಕಲಾ ॥**

**ಟೀಕು||** ಯತ್ರ=ಆವುದಾನೊಂದೆಡೆಯಲ್ಲಿ, ವಿಶ್ವಂ=ಸಮಸ್ತವು, ಲಯಂ=ಲಯವನು, ಯಾತಿ=ಎಯ್ದುತ್ತಿರ್ದ್ದಪುದು; ಯತ್ರ=ಆವೆಡೆಯಲ್ಲಿ, ಚಿದಾಕೃತಿಃ=ಅರಿವೆ ಆಕೃತಿಯಾಗಿ, ಸದಾನಂದಮಯಃ=ಸತ್ತು ಆನಂದಂಗಳೆ ಸ್ವರೂಪವಾಗುಳ್ಳ, ಆತ್ಮಾ=ಆತ್ಮನು, ಸಾಕ್ಷಾತ್=ಪ್ರತ್ಯಕ್ಷವಾಗಿ, ವಿಭಾತಿ=ಪ್ರಕಾಶಿಸುತ್ತಿರ್ದ್ದಪನು. ಸಾ=ಆ ಎಡೆಯೆ, ವಿಮರ್ಶಮಯೀ ಕಲಾ=ವಿಮರ್ಶಮಯವಾದ ಕಲೆಯು. ||೩೧||

**ಸೂತ್ರ||** ಬಳಿಕ ಪಿಂಡಸ್ಥಲಾರ್ಥವನು ಸೂಚಿಸುತ್ತ ತತ್ತ್ವಪದಂಗಳಲ್ಲಿ ಪ್ರಸಿದ್ಧವಾಗಿ ಲಿಂಗಾಂಗ ವಾಚಕವಾದ ಶಿವಜೀವರಿಗೆ ಆ ವಿಮರ್ಶವೆ ಆಶ್ರಯವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| **ಪರಾಹಂತಾಸಮಾವೇಶಪರಿಪೂರ್ಣವಿಮರ್ಶವಾನ್ ।**
**ಸರ್ವಜ್ಞಃ ಸರ್ವಗಃ ಸಾಕ್ಷೀ ಸರ್ವಕರ್ತಾ ಮಹೇಶ್ವರಃ ॥**

**ಟೀಕು||** ಮಹೇಶ್ವರಃ=ಪರಮೇಶ್ವರನು, ಪರಾಹಂತಾಸಮಾವೇಶಪರಿಪೂರ್ಣವಿಮರ್ಶವಾನ್‌ಸನ್=ಶಿವಜೀವರನಾವೇಶಿಸುತ್ತಿರ್ದ್ದ ಪರಿಪೂರ್ಣವಾದ ವಿಮರ್ಶವುಳ್ಳಾತನಾಗುತಲು, ಸರ್ವಜ್ಞಃ=ಸರ್ವಜ್ಞನಾಗಿ, ಸರ್ವಕರ್ತಾ=ಸರ್ವಕರ್ತೃವಾಗಿ, ಸರ್ವಗಃ=ಸರ್ವವ್ಯಾಪಕನಾಗಿ, ಸಾಕ್ಷೀ=ಕರ್ಮಸಾಕ್ಷಿಯೋಪಾದಿಯಲ್ಲಿ ಸಾಕ್ಷೀಕರ್ತೃವು, ಭವೇತ್=ಅಹನು. ||೩೨||

**ಗ್ರಂಥ||** **ವಿಶ್ವಾಧಾರಮಹಾಸಂವಿತ್ಪ್ರಕಾಶಪರಿಪೂರಿತಮ್ ।**
**ಪರಾಹಂತಾಮಯಂ ಪ್ರಾಹುರ್ವಿಮರ್ಶಂ ಪರಮಾತ್ಮನಃ ॥**

**ಟೀಕು||** ಪರಮಾತ್ಮನಃ=ಪರಾಪರಚೈತನ್ಯದ, ಮಹಾಸಂವಿತ್ಪಕಾಶಪರಿಪೂರಿತಂ=ಮಹಾಚಿತ್ಪ್ರಕಾಶದಿಂದೆ ತುಂಬಲುಪಟ್ಟ, ವಿಶ್ವಾಧಾರಂ=ವಿಶ್ವರೂಪವಾದ ಅಧೋಮಾಯೆಗೆ ಆಧಾರವಾಗಿರ್ದ್ದ, ವಿಮರ್ಶಂ=ಶುದ್ಧಮಾಯೆಯನು, ಪರಾಹಂತಾಮಯಂ=ಪ್ರೇರಕಪ್ರೇರ್ಯರಾದ ಶಿವಜೀವರೆ ಮುಖ್ಯವಾಗುಳ್ಳದಾಗಿ, ಪ್ರಾಹುಃ=ಹೇಳುತ್ತಿರ್ದ್ದಪರು.

**ತಾತ್ಪರ್ಯ||** "ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ" ಯೆಂಬ ಛಾಂದೋಗ್ಯಶ್ರುತಿಯುಂಟಾಗಿ, ಘೃತಕೀಟನ್ಯಾಯದಿಂದೆ ಏಕದೇಶವಿಕಾರಿಯಾಗಿ,
"ವಾಗೀಶ್ವರೀ ಪರಾ ವಿದ್ಯಾ ಕುಟಿಲಾ ಕುಂಡಲೀ ಪರಾ।
ಶುದ್ಧಮಾಯಾಪರೋ ಬಿಂದುಃ ಶಬ್ದಬ್ರಹ್ಮೇತಿ ಕಥ್ಯತೇ"|| ಯೆಂದು ಪೌಷ್ಕರಸಿದ್ಧವಾದ ಪರ್ಯಾಯ ನಾಮವುಳ್ಳ ಷಡಧ್ವಜನನಿಯಾದ ವಿಮರ್ಶವನು ದೇಶಿಕೋಪದೇಶದಿಂದೆ ವಿಚಾರಿಸಿಕೊಂಬುದು. ||೩೩||

**ಸೂತ್ರ||** ಬಳಿಕ ಭಾಂಡಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ||** **ವಿಮರ್ಶಭಾಂಡವಿನ್ಯಸ್ತವಿಶ್ವತತ್ತ್ವವಿಜೃಂಭಣಃ ।**
**ಅನನ್ಯಮುಖಸಂಪ್ರೇಕ್ಷೀ ಮುಕ್ತಃ ಸ್ವಾತ್ಮನಿ ತಿಷ್ಠತಿ ॥**

**ಟೀಕು||** ಮುಕ್ತಃ=ಮಾಯಾಪಾಶಮಲಪಾಶಂಗಳಿಂದೆ ಬಿಡಲುಪಟ್ಟ ಶಿವಯೋಗಿಯು, ವಿಮರ್ಶಭಾಂಡವಿನ್ಯಸ್ತವಿಶ್ವತತ್ತ್ವವಿಜೃಂಭಿಣಃ ಸನ್=ವಿಮರ್ಶವೆಂಬ ಭಾಂಡದಲ್ಲಿ ಇರಿಸಲುಪಟ್ಟ ಶಕ್ತ್ಯಾದಿಪೃಥಿವ್ಯಾಂತವಾದ ಸಮಸ್ತ ತತ್ತ್ವಂಗಳ ಬೊಬ್ಬುಳಿಕೆಯುಳ್ಳಾತನಾಗುತಲು, ಅನನ್ಯಮುಖ ಸಂಪ್ರೇಕ್ಷೀ=ತನ್ನಕಡೆ ಮುಖವಾಗಿ ನೋಡುತ್ತ, ಸ್ವಾತ್ಮನಿ=ಸ್ವಸ್ವರೂಪಿನಲ್ಲಿ ತಿಷ್ಠತಿ=ಇರುತ್ತಿರ್ದ್ದಪನು. ||೩೪||

**ಇತಿ ಭಾಂಡಸ್ಥಲಮ್**

## ೫೩. ಐಕ್ಯಸ್ಥಲೇ ಭಾಜನಸ್ಥಲಮ್

**ಸೂತ್ರ||** ಬಳಿಕ "ಪರಾಽಸ್ಯ ಶಕ್ತಿರ್ವಿಪುಲಾ ವಿಕರ್ತಾ ಸ್ವಾಭಾವಿಕೀ ರುದ್ರಸಮಾನಧರ್ಮಿಣೀ।
ಜ್ಞಾನಕ್ರಿಯೇಚ್ಛಾದಿಸಹಸ್ರರೂಪಾ ತನ್ಮೇ ಮನಃ ಶಿವಸಂಕಲ್ಪಮಸ್ತು"॥ ಎಂಬ ಶಿವಸಂಕಲ್ಪೋಪನಿಷದರ್ಥವನು,

"ಯಾ ಸಾ ಮಾಹೇಶ್ವರೀ ಶಕ್ತಿಃ ಸರ್ವಾನುಗ್ರಾಹಿಕಾ ಶಿವಾ।
ಧರ್ಮಾನುವರ್ತನಾದೇವ ಪಾಶ ಇತ್ಯುಪಚರ್ಯತೇ"॥ ಯೆಂಬ ಮೃಗೇಂದ್ರಾಗಮಾರ್ಥವನು ಪ್ರಕಟಿಸುತ್ತ ಆ ಭಾಂಡಸ್ಥಲಸಂಪನ್ನನಾದ ಶಿವಯೋಗಿಗೆ ವಿಮರ್ಶಕ್ಕಾಶ್ರಯವಾದ ತಿರೋಭಾವಶಕ್ತಿಯೆ ಭಾಜನವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಸಮಸ್ತಜಗದಂಡಾನಾಂ ಸರ್ಗಸ್ಥಿತ್ಯಂತಕಾರಣಮ್ ।**
**ವಿಮರ್ಶೋ ಭಾಸತೇ ಯತ್ರ ತದ್ಭಾಜನಮಿಹೋಚ್ಯತೇ ॥**

**ಟೀಕು||** ಸಮಸ್ತಜಗದಂಡಾನಾಂ=ಸಮಸ್ತಭುವನಾಂಡಂಗಳ, ಸರ್ಗಸ್ಥಿತ್ಯಂತಕಾರಣಂ=ಸೃಷ್ಟಿ ಸ್ಥಿತಿಸಂಹಾರಂಗಳಿಗೆ ಕಾರಣವಾಗಿರ್ದ್ದ, ವಿಮರ್ಶಃ=ಪರಬಿಂದುವು, ಯತ್ರ=ಆವುದಾನೊಂದು ತಿರೋಧಾನರೂಪವಾದ ಶಿವಸಮೇತ ಶಕ್ತಿಯಲ್ಲಿ, ಭಾಸತೇ=ಪ್ರಕಾಶಿಸುತ್ತಿರ್ದ್ದಪುದು. ತತ್=ಆ ಶಕ್ತಿಸ್ವರೂಪವೆ, ಇಹ ವಿಷಯೇ=ಈ ಭಾಂಡಸ್ಥಲಸಂಪನ್ನನಾದ ಶಿವಯೋಗಿಯ ವಿಷಯವಾಗಿ, ಭಾಜನಂ=ಭಾಜನವೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು.

**ತಾತ್ಪರ್ಯ||** ಪಂಚಕಂಚುಕಯುಕ್ತವಾದ ಚೈತನ್ಯಕ್ಕೆ ಪುರುಷ ತತ್ತ್ವವೆಂಬ ಹೆಸರಿನೋಪಾದಿಯಲ್ಲಿ ಪಾಶತ್ರಯಾನುಸಾರಿಯಾದ ಶಿವಶಕ್ತಿಗೆ ತಿರೋಭಾವಪಾಶವೆಂಬುದು ಉಪಚಾರದರ್ಥ. ||೩೫||

**ಗ್ರಂಥ||** **ವಿಮರ್ಶಾಖ್ಯಾ ಪರಾಶಕ್ತಿಃ ವಿಶ್ವವೈಚಿತ್ರ್ಯಕಾರಿಣೀ ।**
**ಯಸ್ಮಿನ್ ಪ್ರತಿಷ್ಠಿತಾ ಬ್ರಹ್ಮ ತದಿದಂ ವಿಶ್ವಭಾಜನಮ್ ॥**

**ಟೀಕು||** ವಿಶ್ವವೈಚಿತ್ರ್ಯಕಾರಿಣೀ=ಸಮಸ್ತ ವಿಚಿತ್ರತೆಗೆ ಕಾರಣವಾಗಿರ್ದ್ದ, ವಿಮರ್ಶಾಖ್ಯಾ= ವಿಮರ್ಶೆಯೆಂಬ ಹೆಸರುಳ್ಳ, ಪರಾಶಕ್ತಿಃ=ಕುಂಡಲಿನೀಶಕ್ತಿಯು, ಯಸ್ಮಿನ್=ಆವುದಾನೊಂದು ತಿರೋಭಾವಶಕ್ತಿಯ ದೃಕ್ ಕ್ರಿಯಾರೂಪಿನಲ್ಲಿ, ಪ್ರತಿಷ್ಠಿತಾ=ಪ್ರತಿಷ್ಠಿಸಲುಪಟ್ಟಿತ್ತು; ಬ್ರಹ್ಮ=ಪರಬ್ರಹ್ಮಸ್ವರೂಪವಾಗಿರ್ದ್ದ, ತದಿದಂ= ವಹ್ನ್ಯುಷ್ಣತೆಯೋಪಾದಿಯಲ್ಲಿ ಶುಕ್ಲಪಟನ್ಯಾಯದೋಪಾದಿಯಲ್ಲಿ ಸಮವೇತವಾದ ತಿರೋಭಾವಶಕ್ತಿಯ ಆ ಈ ದೃಕ್ ಕ್ರಿಯಾಸ್ವರೂಪವೆ, ವಿಶ್ವಭಾಜನಂ=ವಿಶ್ವಭಾಜನವಾಗಿರ್ದ್ದ ಅದು. ||೩೬||

**ಸೂತ್ರ||** ಬಳಿಕ ಆ ತಿರೋಭಾವ ವಿಮರ್ಶೆಗಳ ಕಿಂಚಿಸ್ವತ್ರತೆಯನು ಸೂತ್ರದ್ವಯದಿಂದ ಹೇಳುತ್ತಿರ್ದಪಂ.

**ಗ್ರಂಥ||** **ಅಂತಃಕರಣರೂಪೇಣ ಜಗದಂಕುರರೂಪತಃ ।**
**ಯಸ್ಮಿನ್ ವಿಭಾತಿ ಚಿಚ್ಛಕ್ತಿರ್ಬ್ರಹ್ಮಭೂತಃ ಸ ಉಚ್ಯತೇ ॥**

**ಟೀಕು||** ಚಿಚ್ಛಕ್ತಿಃ=ತಿರೋಭಾವರೂಪವಾದ ಸಮವೇತ ಶಕ್ತಿಯು, ಜಗದಂಕುರರೂಪತಃ=ಜಗತ್ತಿನ ಮೊಳಕೆಗೆ ಕಾರಣರೂಪವಾದ, ಅಂತಃಕರಣರೂಪೇಣ=ಮೂಲಾಹಂಕಾರದ ಸ್ವರೂಪಿನಿಂದೆ, ಯಸ್ಮಿನ್=ಆವುದಾನೊಂದು ಪರಬಿಂದುವಿನಲ್ಲಿ, ವಿಭಾತಿ=ವಿಶೇಷವಾಗಿ ಪ್ರಕಾಶಿಸುತ್ತಿರ್ದಪುದು, ಸಃ=ಆ ವಿಮರ್ಶನ ಸಂಜ್ಞೆಯುಳ್ಳ ಪರಬಿಂದುವು, ಬ್ರಹ್ಮಭೂತಃ=ಪರಬ್ರಹ್ಮವೆಂಬ ಸಂಜ್ಞೆಯುಳ್ಳ ಪರಶಿವನೆಂದು, ಉಚ್ಯತೇ=ಹೇಳಲುಪಡುತ್ತಿರ್ದಪುದು. ಆ ಚಿಚ್ಛಕ್ತಿಯುಳ್ಳ ಬಿಂದುವೆ ಮಹಾಲಿಂಗ ವೆಂಬುದರ್ಥ. ||೩೭||

**ಗ್ರಂಥ||** **ಯಥಾ ಚಂದ್ರೇ ಸ್ಥಿರಾ ಜ್ಯೋತ್ಸ್ನಾ ವಿಶ್ವವಸ್ತುಪ್ರಕಾಶಿನೀ ।**
**ತಥಾ ಶಕ್ತಿರ್ವಿಮರ್ಶಾತ್ಮಾ ಪ್ರಕಾರೇ ಬ್ರಹ್ಮಣಿ ಸ್ಥಿತಾ ॥**

**ಟೀಕು||** ಚಂದ್ರೇ ಸ್ಥಿರಾ=ಚಂದ್ರನ ಸ್ಥಿರವಾದ, ಜ್ಯೋತ್ಸ್ನಾ=ಬೆಳುದಿಂಗಳು, ವಿಶ್ವವಸ್ತು=ಸಮಸ್ತ ವಸ್ತುವನು, ಪ್ರಕಾರೇ=ಏಕದೇಶದಲ್ಲಿ, ಯಥಾ=ಹೇಗೆ, ಪ್ರಕಾಶಿನೀ=ಪ್ರಕಾಶಿಸುತ್ತಿರ್ದ ಅದು; ತಥಾ=ಹಾಗೆಯೇ, ಬ್ರಹ್ಮಣಿ=ದೃಕ್ಕ್ರಿಯಾತ್ಮಕನಾದ ಶಿವನಲ್ಲಿ, ಸ್ಥಿರಾ=ಸ್ಥಿರವಾಗಿರುತ್ತಿರ್ದ, ವಿಮರ್ಶಾತ್ಮಾ ಶಕ್ತಿಃ=ವಿಮರ್ಶರೂಪವಾದ ಪರಶಕ್ತಿಯು, ವಿಶ್ವವಸ್ತು=ಸಮಸ್ತವಸ್ತುವನು, ಪ್ರಕಾರೇ=ಏಕದೇಶದಲ್ಲಿ ಪ್ರಕಾಶಿನೀ=ಪ್ರಕಾಶಿಸುತ್ತಿರ್ದ ಅದು.

**ತಾತ್ಪರ್ಯ||** ವಿಷಯವಲ್ಲದೆ ಮರೆಯಾದುದರಿಂದೆ ತಿರೋಭಾವವೆಂದು ಪ್ರಸಿದ್ಧವಾದ ದೃಕ್ ಕ್ರಿಯಾತ್ಮಕವಾದ ಶಿವಶಕ್ತಿಗೆ ಪರಬ್ರಹ್ಮಪರಶಿವ ಪರಲಿಂಗಾದಿ ನಾಮಂಗಳು ಮುಖ್ಯಾರ್ಥ. ಉಳಿದ ವಿಮರ್ಶಾದಿಗಳಿಗೆ ಗೌಣಾರ್ಥವೆಂಬುದರ್ಥ. ||೩೮||

**ಸೂತ್ರ||** ಬಳಿಕ ಮುಖ್ಯವಾದ ಬ್ರಹ್ಮವು 'ಅಹಮ್'ಪದವಾಚ್ಯವಾದ ಶಿವಶಕ್ತ್ಯಾತ್ಮಕವೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಅಕಾರಃ ಶಿವ ಆಖ್ಯಾತೋ ಹಂಕಾರಃ ಶಕ್ತಿರುಚ್ಯತೇ ।**
**ಶಿವಶಕ್ತಿಮಯಂ ಬ್ರಹ್ಮ ಸ್ಥಿತಮೇಕಮಹಂಪದೇ ॥**

**ಟೀಕು॥** ಅಕಾರಃ='ಅ'ಕಾರವು, ಶಿವಃ=ಶಿವನೆಂದು, ಆಖ್ಯಾತಃ=ಹೇಳಲುಪಟ್ಟಿತ್ತು. ಹಕಾರಃ='ಹ'ಯೆಂಬ ಅಕ್ಷರವು, ಶಕ್ತಿಃ=ಧರ್ಮ ಕ್ರಿಯಾತ್ಮಕವಾದ ಶಕ್ತಿಯೆಂದು, ಉಚ್ಯತೇ=ಹೇಳಲುಪಡುತ್ತಿರ್ದ್ದಪುದು ಶಿವಶಕ್ತಿಮಯಂ=ಶಿವಶಕ್ತಿಯ ರೂಪವಾದ, ಬ್ರಹ್ಮೈಕಂ=ಬ್ರಹ್ಮವೊಂದೇ ಅಹಂಪದೇ=ಅಹಂ ಎಂಬ ಪದದಲ್ಲಿ, ಸ್ಥಿತಂ=ಇರುತ್ತಿರ್ದ್ದ ಅದು. ||೩೯||

**ಗ್ರಂಥ॥** **ಅಹಂತಾಂ ಪರಮಾಂ ಪ್ರಾಪ್ಯ ಶಿವಶಕ್ತಿಮಯೀಂ ಸ್ಥಿರಾಮ್ ।**
**ಬ್ರಹ್ಮಭೂಯಂ ಗತೋ ಯೋಗೀ ವಿಶ್ವಾತ್ಮಾ ಪ್ರತಿಭಾಸತೇ ॥**

**ಟೀಕು॥** ಪರಮಾಂ=ಸರ್ವೋತ್ಕರ್ಷವಾದ, ಶಿವಶಕ್ತಿಮಯೀಂ=ಶಿವಶಕ್ತಿಸ್ವರೂಪವಾದ, ಅಹಂತಾಂ=ಅಹಂ ಎಂಬ ಪದವನು, ಸ್ಥಿರಾಂ=ಸ್ಥಿರವಾಗಿ ಪ್ರಾಪ್ಯ=ಪಡೆದು, ಬ್ರಹ್ಮಭೂಯಂ ಗತಃ=ಪರಬ್ರಹ್ಮಸ್ವರೂಪವನು ಎಯ್ದಿರ್ದ್ದ, ಯೋಗೀ=ಶಿವಯೋಗಿಯು, ವಿಶ್ವಾತ್ಮಾ=ವಿಶ್ವರೂಪನಾಗಿ, ಪ್ರತಿಭಾಸತೇ=ಪ್ರಕಾಶಿಸುತ್ತಿರ್ದ್ದಪನು.

**ತಾತ್ಪರ್ಯ॥** ಅಕಾರಾದಿ ಹಕಾರಕಡೆಯಾದ ವರ್ಣಾಧ್ವವೆ ವಿಮರ್ಶೆ. ಆ ಅಹಂ ಪದದಲ್ಲಿ ನಾನು ಎಂದು ಮರೆಯಾದ ಚಿತ್ತೇ ತಿರೋಭಾವ ಶಕ್ತಿ. ಅವರ ರಹಸ್ಯವನು "ಅಹಮಿತಿ ಪ್ರಥಮೋ ಧ್ಯಾಸಃ" ಯೆಂಬ ವ್ಯಾಸಸೂತ್ರ, "ಆಖ್ಯಾನ ಪರಮೋ ಬಂಧುಃ ಆಭ್ಯೋ ಮುಕ್ತಿಸ್ತು ನಾಪರಾ"॥ಯೆಂಬ ಪೌಷ್ಕರಸೂತ್ರ, ದೇಶಿಕೋಪದೇಶ ಸ್ವಾನುಭವಂಗಳಿಂದೆ ತಿಳಿವುದು. ||೪೦||

**ಸೂತ್ರ॥** ಭಾಜನಸ್ಥಲವನು ಮುಗಿಯಿಸುತ್ತಿರ್ದ್ದಪಂ.

**ಗ್ರಂಥ॥** **ವೃಕ್ಷಸ್ಥಂ ಪತ್ರಪುಷ್ಪಾದಿ ವಟಬೀಜಸ್ಥಿತಂ ಯಥಾ ।**
**ತಥಾ ಹೃದಯಬೀಜಸ್ಥಂ ವಿಶ್ವಮೇತತ್ಪರಾತ್ಮನಃ ॥**

**ಟೀಕು॥** ವೃಕ್ಷಸ್ಥಂ=ಆಲದಮರದಲ್ಲಿ ಇರುತ್ತಿರ್ದ್ದ, ಪತ್ರಪುಷ್ಪಾದಿ=ಪತ್ರಪುಷ್ಪಮೊದಲಾದ ವಸ್ತುವು, ಯಥಾ=ಹೇಗೆ, ವಟಬೀಜಸ್ಥಿತಂ=ಆಲದ ಬೀಜದಲ್ಲಿಯಿರುತ್ತಿರ್ದ್ದಪುದು, ತಥಾ=ಹಾಗೆಯೆ, ಏತತ್ ವಿಶ್ವಂ=ಈ ಸಮಸ್ತವು, ಪರಾತ್ಮನಃ=ಪರಮಾತ್ಮರೂಪವಾದ ಭಾಜನಸ್ಥಲಸಂಪನ್ನನಾದ ಶಿವಯೋಗಿಯ, ಹೃದಯಬೀಜಸ್ಥಂ=ಹೃದಯಬೀಜದಲ್ಲಿ ಇರುತ್ತಿರ್ದ್ದ ಅದು. ||೪೧||

**ಇತಿ ಭಾಜನಸ್ಥಲಮ್**

## ೫೪.ಐಕ್ಯಸ್ಥಲೇ ಅಂಗಾಲೇಪನಸ್ಥಲಮ್

**ಸೂತ್ರ||** ಬಳಿಕ "ತಸ್ಯ ಪುತ್ರಾದಯಮುಪಯಂತಿ ಸುಹೃದಃ ಸಾದುಃಕೃತ್ಯಾಂ ದ್ವಿಷಂತಃ|,
"ಯಥಾ ಪುಷ್ಕರಪಲಾಶೇ ಆಪೋ ನ ಶ್ಲಿಷ್ಯಂತೇ ಏವಮೇವ|
ಪಾಪಕರ್ಮ ನ ಶ್ಲಿಷ್ಯತೇ"|| ಯೆಂಬ ಛಾಂದೋಗ್ಯ ಶ್ರುತ್ಯರ್ಥವನು;

"ಏವಂಭೂತಸ್ಯ ಕರ್ಮಾಣಿ ಕ್ರಿಯಮಾಣಾನಿ ಯೋಗಿನಃ
ಪ್ರಯಾಂತಿ ನೈವ ಲಿಪ್ಯಂತೇ ಪುಣ್ಯಾಪುಣ್ಯಾನಿ ಸಂಕ್ಷಯಮ್" ಯೆಂಬ ಯೋಗಜಾಗಮಾರ್ಥವನು ಪ್ರಕಟಿಸುತ್ತ ತಿರೋಭಾವದ ದೃಕ್ ಕ್ರಿಯೆ ಭಾಜನವಾಗುಳ್ಳ ಆ ಶಿವಯೋಗಿಯ ಕರ್ಮಾಂಗದಲ್ಲಿ ಲೇಪಕನಲ್ಲವಾದಕಾರಣವಾಗಿ ಅಂಗಾಲೇಪನವೆಂದು ಸೂತ್ರ ತ್ರಯದಿಂದೆ ಹೇಳುತ್ತಿರ್ದ್ದಪಂ.

**ಗ್ರಂಥ||** **ದಿಕ್ಕಾಲಾದ್ಯನವಚ್ಛಿನ್ನಂ ಚಿದಾನಂದಮಯಂ ಮಹತ್ |**
**ಯಸ್ಯ ರೂಪಮಿದಂ ಖ್ಯಾತಂ ಸೋಽಂಗಾಲೇಪ ಇಹೋಚ್ಯತೇ ||**

**ಟೀಕು||** ದಿಕ್ಕಾಲಾದ್ಯನವಚ್ಛಿನ್ನಂ=ದಶದಿಕ್ಕು ಕಾಲತ್ರಯ ಮೊದಲಾಗುಳ್ಳವರಲ್ಲಿ ಹರಿಹಂಚಿಲ್ಲದೆ ಇರ್ದ್ದ, ಚಿದಾನಂದಮಯಂ=ಚಿದಾನಂದಂಗಳೇ ಸ್ವರೂಪವಾಗುಳ್ಳ, ಮಹತ್=ದೊಡ್ಡಿತ್ತಾದ, ಇದಂ=ಪ್ರಾದುರ್ಭಾವವಾದ ದೃಕ್ ಕ್ರಿಯಾರೂಪವೇ, ಯಸ್ಯ=ತಿರೋಭಾವಸಂಪನ್ನನಾದ ಆವನಾನೊಬ್ಬ ಶಿವಯೋಗಿಗೆ, ರೂಪಂ=ಸ್ವರೂಪವೆಂದು, ಖ್ಯಾತಂ=ಹೇಳಲುಪಟ್ಟಿತ್ತು. ಸಃ=ಆ ಭಾಜನಸ್ಥಲಸಂಪನ್ನನಾದ ಶಿವಯೋಗಿಯು, ಅಂಗಾಲೇಪಃ=ಕರ್ಮಾಂಗದಲ್ಲಿ ಲೇಪಕನಲ್ಲವಾದ ಕಾರಣವಾಗಿ ಅಂಗಾಲೇಪನೆಂದು, ಇಹ=ಇಲ್ಲಿ, ಉಚ್ಯತೇ=ಹೇಳಲುಪಡುತ್ತಿರ್ದ್ದಪನು. ||೪೨||

**ಗ್ರಂಥ||** **ಸಮಸ್ತಜಗದಾತ್ಮಾಪಿ ಸಂವಿದ್ರೂಪೋ ಮಹಾಮತಿಃ |**
**ಲಿಪ್ಯತೇ ನೈವ ಸಂಸಾರೈರ್ಯಥಾ ಧೂಮಾದಿಭಿರ್ನಭಃ ||**

**ಟೀಕು||** ಸಮಸ್ತ ಜಗದಾತ್ಮಾ=ಸಮಸ್ತಜಗತ್ತಿಗೆ ಚೈತನ್ಯವಾಗಿ, ಸಂವಿದ್ರೂಪಃ=ಅರಿವೆ ಸ್ವರೂಪವಾಗುಳ್ಳ, ಮಹಾಮತಿರಪಿ=ಮಹಾಬುದ್ಧಿಯುಳ್ಳ ಶಿವಯೋಗಿಯಾಯಿತ್ತಾದೊಡೆ, ಧೂಮಾದಿಭಿಃ= ಧೂಮಮೇಘಾದಿಗಳಿಂದೆ, ನಭೋ ಯಥಾ=ಆಕಾಶದೋಪಾದಿಯಲ್ಲಿ, ಸಂಸಾರೈಃ=ಸಂಸಾರಸಿದ್ಧವಾದ ಕರ್ಮಂಗಳಿಂದೆ, ನೈವಲಿಪ್ಯತೇ=ಲೇಪಿಸಲುಪಡುತ್ತಿರನೆ? ಲೇಪಿಸಲುಪಡುವುದಿಲ್ಲ. ||೪೩||

**ಗ್ರಂಥ||** **ನ ವಿಧಿರ್ನ ನಿಷೇಧಶ್ಚ ನ ವಿಕಲ್ಪೋ ನ ವಾಸನಾ |**
**ಕೇವಲಂ ಚಿತ್ಸ್ವರೂಪಸ್ಯ ಗಲಿತಾಪ್ರಾಕೃತಾತ್ಮನಃ ||**

**ಟೀಕು||** ಗಲಿತಾಪ್ರಾಕೃತಾತ್ಮನಃ=ತೊಲಗಲುಪಟ್ಟ ಪ್ರಾಕೃತಕರ್ಮಪ್ರಯತ್ನವುಳ್ಳ, ಕೇವಲಂ ಚಿತ್ಸ್ವರೂಪಸ್ಯ=ಬರಿಯ ಅರಿವೆ ಸ್ವರೂಪವಾಗುಳ್ಳ ಶಿವಯೋಗಿಗೆ, ನ ವಿಧಿಃ=ವಿಧ್ಯುಕ್ತಕರ್ಮವು ಇಲ್ಲ. ನ ನಿಷೇಧಶ್ಚ=ನಿಷೇಧಕರ್ಮವು ಇಲ್ಲ; ನ ವಿಕಲ್ಪಃ=ಉಂಟು ಇಲ್ಲವೆಂಬ ವಿಕಲ್ಪವು ಇಲ್ಲ. ನ ವಾಸನಾ=ವಾಸನೆಯು ಇಲ್ಲ. ||೪೪||

**ಸೂತ್ರ||** ಬಳಿಕ ವಾಸನಾರಹಿತನಾದ ಶಿವಯೋಗಿಗೆ ಅಭೇದಜ್ಞಾನವನು ದೃಷ್ಟಾಂತಪೂರ್ವಕವಾಗಿ ಸೂತ್ರದ್ವಯದಿಂದೆ ವಿಶೇಷಿಸುತ್ತಿರ್ದಪಂ.

**ಗ್ರಂಥ||** **ಘಟಾದಿಷು ಪೃಥಗ್ಭೂತಂ ಯಥಾಽಕಾಶಂ ನ ಭಿದ್ಯತೇ ।**
**ತಥೋಽಪಾಧಿಗತಂ ಬ್ರಹ್ಮ ನಾನಾರೂಪಂ ನ ಭಿದ್ಯತೇ ॥**

**ಟೀಕು||** ಘಟಾದಿಷು=ಘಟಮಠಾದಿಗಳಲ್ಲಿ, ಪೃಥಗ್ಭೂತಂ=ಭಿನ್ನವಾಗಿರ್ದ, ಆಕಾಶಂ=ಆಕಾಶವು, ಯಥಾ=ಹೇಗೆ, ನ ಭಿದ್ಯತೇ=ಭಿನ್ನವಾಗುತ್ತಿರದು, ತಥಾ=ಹಾಗೆಯೆ, ಉಪಾಧಿಗತಂ= ದೇವದಾಸವಾದ್ಯುಪಾಧಿಯನು ಎಯ್ದಿರ್ದ, ಬ್ರಹ್ಮ=ಪರಬ್ರಹ್ಮವು, ನಾನಾರೂಪಂ=ನಾನಾರೂಪವಾಗಿದ್ದದಾಯಿತ್ತಾದೊಡೆಯು, ನ ಭಿದ್ಯತೇ=ಭಿನ್ನವಾಗುತ್ತಿರದು. ||೪೫||

**ಗ್ರಂಥ||** **ಅನಶ್ವರಮನಿರ್ದೇಶ್ಯಂ ಯಥಾ ವ್ಯೋಮ ಪ್ರಕಾಶತೇ ।**
**ತಥಾ ಬ್ರಹ್ಮಾಪಿ ಚೈತನ್ಯಮತ್ರ ವೈಶೇಷಿಕೀ ಕಲಾ ॥**

**ಟೀಕು||** ವ್ಯೋಮ=ಆಕಾಶವು, ಅನಶ್ವರಂ=ಕೇಡಿಲ್ಲದೆ, ಅನಿರ್ದೇಶ್ಯಂ=ಉಪಮಿಸಬಾರದೆ, ಯಥಾ=ಹೇಗೆ, ಪ್ರಕಾಶತೇ=ಪ್ರಕಾಶಿಸುತ್ತಿರ್ದಪುದು, ತಥಾ=ಹಾಗೆಯೆ, ಬ್ರಹ್ಮಾಪಿ=ಪರಬ್ರಹ್ಮವಾಯಿತ್ತಾದೊಡೆ, ಪ್ರಕಾಶತೇ=ಕೇಡಿಲ್ಲದೆ ನಿರ್ದೇಶಿಸಲು ಯೋಗ್ಯವಲ್ಲದೆ ಪ್ರಕಾಶಿಸುತ್ತಿರ್ದಪುದು. ಅತ್ರ=ಈ ಬ್ರಹ್ಮದಲ್ಲಿ, ಚೈತನ್ಯಂ=ಚೈತನ್ಯಮಾತ್ರವೆ, ವೈಶೇಷಿಕೀ ಕಲಾ=ವಿಶೇಷ ಕಲೆಯು. ಇದರಿಂದೆ ಚಿದಾಕಾಶವೆ ಬ್ರಹ್ಮವೆಂಬುದರ್ಥ. ||೪೬||

**ಸೂತ್ರ||** ಬಳಿಕ ಚಿದಾಕಾಶಸ್ವರೂಪನಾದ ಶಿವಯೋಗಿಯು ಪರಿಪೂರ್ಣನೆಂದು ಹೇಳಿ ಅಂಗಾಲೇಪಸ್ಥಲವನು ಮುಗಿಯಿಸುತ್ತಿರ್ದಪಂ.

**ಗ್ರಂಥ||** **ನ ದೇವತ್ವಂ ನ ಮಾನುಷ್ಯಂ ನ ತಿರ್ಯಕ್ತ್ವಂ ನ ಚಾನ್ಯಥಾ ।**
**ಸರ್ವಾಕಾರತ್ವಮಾಖ್ಯಾತಂ ಜೀವನ್ಮುಕ್ತಸ್ಯ ಯೋಗಿನಃ ॥**

**ಟೀಕು||** ಜೀವನ್ಮುಕ್ತಸ್ಯ ಯೋಗಿನಃ=ಕರ್ಮಪಾಶವಿಲ್ಲದೆ ಇಹುದರಿಂದೆ ಜೀವನ್ಮುಕ್ತನಾದ ಶಿವಯೋಗಿಗೆ, ದೇವತ್ವಂ=ಪುಣ್ಯಕರ್ಮಸಿದ್ಧವಾದ ದೇವತ್ವವು, ನ=ಇಲ್ಲ. ನತಿರ್ಯಕ್ತ್ಯಂ=ಪಶುಪಕ್ಷಿಭಾವವೂ ಇಲ್ಲ, ಚ ಅನ್ಯಥಾ ನ=ಯಾವ ಮತ್ತೊಂದು ಭಾವವೂ ಇಲ್ಲ, ನ ಮಾನುಷ್ಯಂ=ಪುಣ್ಯ ಪಾಪಮಿಶ್ರತೆಯಿಂದಲಾದ

ಮನುಷ್ಯತ್ವವು, ನ=ಇಲ್ಲ. ಕಿಂತು=ಮತ್ತೇನಯಾಯೆಂದಡೆ, ಸರ್ವಾಕಾರಂ=ಸರ್ವರಲ್ಲಿ ಪರಿಪೂರ್ಣವಾದ ಚಿದಾಕಾರ ರೂಪತ್ವವು. ಆಖ್ಯಾತಂ=ಹೇಳಲುಪಟ್ಟಿತ್ತು.

**ತಾತ್ಪರ್ಯ॥** ನಿತ್ಯಪರಿಪೂರ್ಣವಾದ ಚಿತ್ಪ್ರಸಾದವನು ಸ್ವೀಕರಿಸಿದ ಶಿವಯೋಗಿಗೆ ಸಿದ್ಧಾಂತ ಪ್ರಸಿದ್ಧವಾದ ಮಾಯಾಮಲಬಿಂದುತಿರೋಭಾವಕರ್ಮರೂಪವಾದ ಪ್ರಪಂಚಪಾಶಂಗಳಿಲ್ಲವೆಂಬುದರ್ಥ. ॥೪೭॥

### ಇತಿ ಅಂಗಾಲೇಪನಸ್ಥಲಮ್

## ೫೫. ಐಕ್ಯಸ್ಥಲೇ ಸ್ವಪರಾಜ್ಞಸ್ಥಲಮ್

**ಸೂತ್ರ॥** ಬಳಿಕ "ಯಥಾ ಪ್ರಿಯಯಾ ಸಂಪರಿಷ್ವಕ್ತಃ ನ ಬಾಹ್ಯಂ
ಕಿಂಚನ ವೇದ ನಾಂತರಂ, ಏವಮೇವಾಯಂ ಪುರುಷಃ
ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ
ಕಿಂಚನ ವೇದ ನಾಂತರಮ್, ತದ್ವಾ ಅಸ್ಯೈ ತದಾಪ್ತ
ಕಾಮಮಾತ್ಮಕಾಮಮಕಾಮಂ ರೂಪಂ ಶೋಕಾಂತರಮ್"॥ ಯೆಂಬ ಬೃಹದಾರಣ್ಯಕ ಶ್ರುತ್ಯರ್ಥವನು ಪ್ರಕಟಿಸುತ್ತ
"ಸ್ವಯಂ ಸ್ವಸ್ಯ ಪರೋ ನೈವ ನ ಪರಃ ಸ್ವಸ್ಯ ವಿದ್ಯತೇ।
ಇತಿ ಧಾರ್ಯೇಽಪಿ ಸಂಲೀನೇ ತಸ್ಮಿನ್ ಜ್ಞೇಯಂ ನ ತಸ್ಯ ಹಿ"॥ ಯೆಂಬ ಸರ್ವಜ್ಞಾನೋತ್ತರತಂತ್ರಾರ್ಥವನು ಪ್ರಕಟಿಸುತ್ತ ಆ ಅಂಗಾಲೇಪನಾದ ಶಿವಯೋಗಿಯು ಮೊದಲಲ್ಲಿ ಇರ್ದ ಸ್ಥಲಂಗಳಲ್ಲಿ ಪ್ರತಿಪಾದಿಸಿದ ಪಾಶಪಂಚಕವಿಲ್ಲದಿಹುದರಿಂದೆ ಸ್ವಯಪರವನರಿಯನೆಂದು ಹೇಳುತ್ತಿರ್ದಪಂ.

**ಗ್ರಂಥ॥** **ಅಪ್ರಮೇಯೇ ಚಿದಾಕಾರೇ ಬ್ರಹ್ಮಣ್ಯದ್ವೈತವೈಭವೇ ।**
**ವಿಲೀನಃ ಕಿಂ ನು ಜಾನಾತಿ ಸ್ವಾತ್ಮಾನಂ ಪರಮೇವ ವಾ ॥**

**ಟೀಕು॥** ಅಪ್ರಮೇಯೇ=ಹವಣಿಸಬಾರದ, ಚಿದಾಕಾರೇ=ಅರಿವೆ ಸ್ವರೂಪವಾಗುಳ್ಳ, ಅದ್ವೈತ ವೈಭವೇ=ಅದ್ವೈತ ವೈಭವವುಳ್ಳ, ಬ್ರಹ್ಮಣಿ=ಪರಬ್ರಹ್ಮದಲ್ಲಿ, ವಿಲೀನಃ=ಸಮಾನ ಸಮರಸವಾಗಿ ಬೆರಸಿದ ಅಂಗಾಲೇಪನು, ಸ್ವಾತ್ಮಾನಂ=ತನ್ನನು, ಪರಂ ಏವ ವಾ=ಅನ್ಯವನು, ಜಾನಾತಿ ಕಿಂನು=ಬಲ್ಲನೆ ಏನು? ಅರಿಯನೆಂಬುದರ್ಥ. ॥೪೮॥

**ಗ್ರಂಥ॥** **ಯತ್ರ ನಾಸ್ತಿ ಭಿದಾಯೋಗಾದಹಂ ತ್ವಮಿತಿ ವಿಭ್ರಮಃ ।**
**ನ ಸಂಯೋಗೋ ವಿಯೋಗಶ್ಚ ನ ಜ್ಞೇಯಜ್ಞಾತೃಕಲ್ಪನಾ ॥**

**ಟೀಕು||** ಯತ್ರ=ಆವುದಾನೊಂದು ಐಕ್ಯಸ್ಥಲದಲ್ಲಿ, ಭಿದಾ=ಭಿನ್ನಭಾವದೊಡೆತನದ, ಯೋಗಾತ್=ಕೂಟದತ್ತಣಿಂದೆ, ಅಹಂ ತ್ವಮಿತಿ=ನಾನು ನೀನೆಂಬ, ವಿಭ್ರಮಃ=ಭ್ರಾಂತಿಯು, ನಾಸ್ತಿ= ಇಲ್ಲ. ಸಂಯೋಗಃ=ಎರಡೆಂಬ ಭೇದವನುಂಟುಮಾಡುವ ಸಂಯೋಗವು, ನ=ಇಲ್ಲ. ವಿಯೋಗಶ್ಚ=ಅವಿರಳ ಬ್ರಹ್ಮವಪ್ಪುದರಿಂ ತೊಲಗಿಕೆಯು, ನ=ಇಲ್ಲ. ಜ್ಞೇಯ ಜ್ಞಾತೃಕಲ್ಪನಾ=ಜ್ಞೇಯವೇ ಶಿವನು ಜ್ಞಾತೃವೇ ನಾನೆಂಬ ಭೇದಕಲ್ಪನೆಯು, ನ=ಇಲ್ಲ. ನಿಜನಿವಾಸಿಯಾದ ಮಹಾಲಿಂಗೈಕ್ಯಂಗೆ ಭೇದಭಾವನೆ ತಲೆದೋರದೆಂಬುದರ್ಥ. ||೪೯||

**ಗ್ರಂಥ||** **ನ ಬಂಧೋ ನ ಚ ಮುಕ್ತಿಶ್ಚ ನ ದೇವಾದ್ಯಭಿಮಾನಿತಾ ।**
**ನ ಸುಖಂ ನೈವ ದುಃಖಂ ಚ ನಾಜ್ಞಾನಂ ಜ್ಞಾನಮೇವ ವಾ ॥**

**ಟೀಕು||** ಬಂಧಃ=ದೇಹಾದಿ ಬಂಧವು, ನ=ಇಲ್ಲ. ಮುಕ್ತಿಃ=ಇನ್ನು ಬೇರೆ ಮುಕ್ತಿ ಎಂಬುದು, ನ=ಇಲ್ಲ. ದೇವಾದ್ಯಭಿಮಾನಿತಾ='ಶಿವೋಽಹಂ'ಯೆಂಬುದಾದಿಯಾದ ದೇವತಾಭಿಮಾನವು, ನ=ಇಲ್ಲ. ಸುಖಂ=ಪುಣ್ಯಕರ್ಮಫಲವಾದ ಸುಖವು, ನ=ಇಲ್ಲ. ದುಃಖಂ ಚ=ಪಾಪದ ಫಲವಪ್ಪ ದುಃಖವು, ನ=ಇಲ್ಲ. ಅಜ್ಞಾನಂ=ಮರವೆಯು, ನ=ಇಲ್ಲ. ಜ್ಞಾನಮೇವ ವಾ=ಅರಿವೇನೆಂಬುದು, ನ=ಇಲ್ಲ. ಭ್ರಾಂತಿಯನಳಿದು ಬ್ರಹ್ಮವಾದಾತಂಗೆ ಈ ಸಂಕಲ್ಪವಿಲ್ಲವೆಂಬುದರ್ಥ. ||೫೦||

**ಗ್ರಂಥ||** **ನೋತ್ಕೃಷ್ಟತ್ವಂ ನ ಹೀನತ್ವಂ ನೋಪರಿಷ್ಟಾನ್ನ ಚಾಪ್ಯಧಃ ।**
**ನ ಪಶ್ಚಾನ್ನೈವ ಪುರತೋ ನ ದೂರೇ ಕಿಂಚಿದಂತರೇ ॥**

**ಟೀಕು||** ಉತ್ಕೃಷ್ಟತ್ವಂ ಚ=ತಾನೇ ವಿಶಿಷ್ಟನೆಂಬುದು, ನ=ಇಲ್ಲ. ಹೀನತ್ವಂ=ತಾನೆ ಹೀನನೆಂಬುದು, ನ=ಇಲ್ಲ. ಉಪರಿಷ್ಟಾತ್=ಮೇಲಿನವನೆಂಬುದು, ನ=ಇಲ್ಲ. ಅಧಃಚಾಪಿ=ಕೆಳಗಿರ್ದ್ದವನೆಂಬುದಾಯಿತ್ತಾದಡೆಯು, ನ=ಇಲ್ಲ. ಪಶ್ಚಾತ್ ಪುರತಃ=ಹಿಂದೆ ಮುಂದೆ ಇರ್ದ್ದವನೆಂಬುದು, ನ=ಇಲ್ಲವೇ. ದೂರೇ=ದೂರದಲ್ಲಿರ್ದ್ದವನೆಂಬುದು, ನ=ಇಲ್ಲ. ಕಿಂಚಿದಂತರೇ=ಅಲ್ಪವಾದುತರದಲ್ಲಿರ್ದ್ದವನೆಂಬುದು, ನ=ಇಲ್ಲ. ನಿರುಪಾಧಿಕಪರಬ್ರಹ್ಮದಲ್ಲಿ ಏಕೀಕರಿಸಿದ ಲಿಂಗೈಕ್ಯಂಗೆ ಉಪಾಧಿಭ್ರಾಂತಿ ಇಲ್ಲವೆಂಬುದರ್ಥ. ||೫೧||

**ಗ್ರಂಥ||** **ಸರ್ವಾಕಾರೇ ಚಿದಾನಂದೇ ಸತ್ಯರೂಪಿಣಿ ಶಾಶ್ವತೇ ।**
**ಪರಾಕಾಶಮಯೇ ತಸ್ಮಿನ್ ಪರೇ ಬ್ರಹ್ಮಣಿ ನಿರ್ಮಲೇ ॥**

**ಟೀಕು||** ಸರ್ವಾಕಾರೇ=ಸಕಲ ಜಗದಾಕಾರನಾದ, ಚಿದಾನಂದೇ=ಜ್ಞಾನಾನಂದರೂಪನಾದ, ಸತ್ಯರೂಪಿಣಿ=ಸದ್ರೂಪನಾದ, ಶಾಶ್ವತೇ=ನಿತ್ಯನಾದ, ಪರಾಕಾಶಮಯೇ=ಚಿದಾಕಾಶರೂಪನಾದ, ನಿರ್ಮಲೇ=ಅವಿದ್ಯಾದೋಷದೂರನಾದ, ತಸ್ಮಿನ್=ಆ ಪ್ರಸಿದ್ಧನಾದ, ಬ್ರಹ್ಮಣಿ=ಪರಬ್ರಹ್ಮದಲ್ಲಿ, ||೫೨||

ಗ್ರಂಥ॥ **ಏಕೀಭಾವಮುಪೇತಾನಾಂ ಯೋಗಿನಾಂ ಪರಮಾತ್ಮನಾಮ್ ।**
**ಪರಾಪರಪರಿಜ್ಞಾನಪರಿಹಾಸಕಥಾ ಕುತಃ ॥**

**ಟೀಕು॥** ಏಕೀಭಾವಂ=ಏಕತ್ವವನು, ಉಪೇತಾನಾಂ=ಎಯ್ದಿರ್ದ್ದ, ಪರಮಾತ್ಮಾನಾಂ= ಪರಮಾತ್ಮ ರೂಪನಾದ, ಯೋಗಿನಾಂ=ಯೋಗೀಶ್ವರರುಗಳಿಗೆ, ಪರ=ಅನ್ಯವೆಂಬ, ಅಪರ=ಎತ್ತಣವನೆಂಬ, ಪರಿಜ್ಞಾನ=ಅರಿಕೆಯ, ಪರಿಹಾಸಕಥಾ=ಪರಿಹಾಸದನುಡಿ, ಕುತಃ=ಎತ್ತಣದು? ಪರಬ್ರಹ್ಮದಲ್ಲಿ ಏಕವಾದ ಯೋಗೀಶ್ವರರರ್ಗೆ ಭಿನ್ನಭಾವದ ನುಡಿಗೆಡಹುದೆಂಬುದರ್ಥ. ॥೫೩॥

**ಸೂತ್ರ॥** ಬಳಿಕ ಆ ಅರ್ಥವನೆ ವಿಶೇಷಿಸಿ ಸ್ವಯಪರವರಿಯದಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ॥ **ದೇಶಕಾಲಾದ್ಯವಚ್ಛಿನ್ನತೇಜೋರೂಪಸಮಾಶ್ರಯಾತ್ ।**
**ಸ್ವಪರಜ್ಞಾನವಿರಹಾತ್ ಸ್ವಪರಾಜ್ಞಸ್ಥಲಂ ವಿದುಃ ॥**

**ಟೀಕು॥** ದೇಶಕಾಲಾದ್ಯವಚ್ಛಿನ್ನ ತೇಜೋರೂಪ ಸಮಾಶ್ರಯಾತ್=ದೇಶಕಾಲಾದಿಗಳಲ್ಲಿ ಹರಿಹಂಚಿಲ್ಲದೆಯಿರ್ದ್ದ ಚಿತ್ಪ್ರಕಾಶರೂಪವನಾಶ್ರಯಿಸುವದರದೆಸೆಯಿಂದೆ, ಸ್ವಪರಜ್ಞಾನವಿರಹಾತ್= ತನ್ನನು ಪರವನು ಅರಿಯದೆ ಇಹುದರದೆಸೆಯಿಂದೆ, ಸ್ವಪರಾಜ್ಞಸ್ಥಲಂ=ಸ್ವಪರಾಜ್ಞಸ್ಥಲವೆಂದು, ವಿದುಃ=ಅರಿವುತ್ತಿರ್ದ್ದಪರು. ॥೫೪॥

**ಇತಿ ಸ್ವಪರಾಜ್ಞಸ್ಥಲಮ್**

## ೫೬. ಐಕ್ಯಸ್ಥಲೇ ಭಾವಾಭಾವಲಯಸ್ಥಲಮ್

**ಸೂತ್ರ॥** ಬಳಿಕ "ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ।
ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ"॥ ಯೆಂಬ ಕಠವಲ್ಲೀ ಶ್ರುತ್ಯರ್ಥವನು,
"ಭಾವಾಭಾವದ್ವಯಾತೀತಂ ಸ್ವಪ್ನಜಾಗರಣಾತಿಗಮ್।
ಮೃತ್ಯುಜೀವನನಿರ್ಮುಕ್ತಂ ತತ್ತ್ವಂ ತತ್ತ್ವವಿದೋ ವಿದುಃ"॥ಯೆಂಬ ಯೋಗಜಾಗಮಾರ್ಥವನು ಪ್ರಕಟಿಸುತ್ತ ಆ ಸ್ವಯಪರವರಿಯದ ಶಿವಯೋಗಿಗೆ ಭಾವಾಭಾವ ವಿಲ್ಲವೆಂದು ಹೇಳುತ್ತಿರ್ದ್ದಪಂ.

ಗ್ರಂಥ॥ **ತ್ವಂತಾಽಹಂತಾ ವಿನಿರ್ಮುಕ್ತೇ ಶೂನ್ಯಕಲ್ಪೇ ಚಿದಂಬರೇ**
**ಏಕೀಭೂತಸ್ಯ ಸಿದ್ಧಸ್ಯ ಭಾವಾಭಾವಕಥಾ ಕುತಃ**

**ಟೀಕು||** ತ್ವಂತಾಽಹಂತಾ ವಿನಿರ್ಮುಕ್ತೇ=ನೀನು ನಾನುಯೆಂಬುದರಿಂದೆ ಬಿಡಲುಪಟ್ಟ, ಶೂನ್ಯಕಲ್ಪೇ=ಒಪ್ಪಚ್ಚಿ ಶೂನ್ಯಕ್ಕೆ ಸದೃಶವಾದ, ಚಿದಂಬರೇ=ಚಿದಾಕಾಶದಲ್ಲಿ, ಏಕೀಭೂತಸ್ಯ=ಏಕರಸವಾದ, ಸಿದ್ಧಸ್ಯ=ಸ್ವಯಪರವರಿಯದ ಆ ಸಿದ್ಧನಿಗೆ, ಭಾವಾಭಾವ ಕಥಾ=ಭಾವಾಭಾವ ಪ್ರಸಂಗವು, ಕುತಃ=ಎತ್ತಣದು? ||೫೫||

**ಸೂತ್ರ||** ಬಳಿಕ ಆ ಭಾವಾಭಾವಲಯಸ್ವರೂಪವನು ಸೂತ್ರತ್ರಯದಿಂದೆ ಹೇಳುತ್ತಿರ್ದಪಂ.

**ಗ್ರಂಥ||** **ಅಹಂಭಾವಸ್ಯ ಶೂನ್ಯತ್ವಾದಭಾವಸ್ಯ ತಥಾಽಽತ್ಮನಃ ।**
**ಭಾವಾಭಾವವಿನಿರ್ಮುಕ್ತೋ ಜೀವನ್ಮುಕ್ತಃ ಪ್ರಕಾಶತೇ ॥**

**ಟೀಕು||** ಅಹಂಭಾವಸ್ಯ=ನಾನು ಎಂಬ ಭಾವಕ್ಕೆ, ಶೂನ್ಯತ್ವಾತ್=ಶೂನ್ಯವಾದಕಾರಣವಾಗಿ, ಆತ್ಮನಃ="ಅಯಮಾತ್ಮಾಬ್ರಹ್ಮ" ಯೆಂದು ಶ್ರುತಿಸಿದ್ಧವಾದ ಪರಬ್ರಹ್ಮದ, ಅಭಾವಸ್ಯ=ಅಭಾವಕ್ಕೆಯು, ತಥಾ=ಹಾಗೆಯೆ, ಶೂನ್ಯತ್ವಾತ್=ಶೂನ್ಯವಾದ ಕಾರಣವಾಗಿ, ಜೀವನ್ಮುಕ್ತಃ=ಸ್ವಯಪರವರಿಯದೆ ಅಮನಸ್ಕತಂದ್ರಿತಮುದ್ರಾಸ್ಥಿತನಾದ ಜೀವನ್ಮುಕ್ತನು, ಭಾವಾಭಾವವಿನಿರ್ಮುಕ್ತಃ=ಭಾವಾಭಾವಂಗಳಿಂದೆ ಬಿಡಲುಪಟ್ಟಾತನಾಗಿ, ಪ್ರಕಾಶತೇ=ಪ್ರಕಾಶಸ್ವರೂಪಿನಿಂದೆ ಪ್ರಕಾಶಿಸುತ್ತಿರ್ದಪನು.

**ತಾತ್ಪರ್ಯ||** ಸರ್ವಸುಖದುಃಖ ಭೋಕ್ತೃವಾಗಿ ಸುಷುಪ್ತಿಯಲ್ಲಿ ಲಯಿಸುವ ಮೂಲಾಹಂಕಾರ ಉಂಟೆಂಬ ಭಾವದಿಂದೆ ಸರ್ವಸಾಕ್ಷಿಯಾಗಿ ಅವಸ್ಥಾತ್ರಯದಲ್ಲಿ ಹರಿಹಂಚಿಲ್ಲದೆ ಅರಿವ ಚೈತನ್ಯವಿಲ್ಲಾಯೆಂಬ ಅಭಾವದಿಂದೆ ಬಿಡಲುಪಟ್ಟಾತನೆ ಭಾವಾಭಾವರಹಿತನೆಂಬುದರ್ಥ. ||೫೬||

**ಗ್ರಂಥ||** **ಸುಖದುಃಖಾದಿಯೋಗೇಷು ನಾಭಾವೋ ಭಾವ ಏವ ವಾ ।**
**ವಿದ್ಯತೇ ಚಿತ್ಸ್ವರೂಪಸ್ಯ ನಿರ್ಲೇಪಸ್ಯ ಮಹಾತ್ಮನಃ ॥**

**ಟೀಕು||** ನಿರ್ಲೇಪಸ್ಯ="ಅಹಮಿತಿ ಪ್ರಥಮೋಧ್ಯಾಸಃ" ಯೆಂದು ಉತ್ತರಮೀಮಾಂಸಾ ಪ್ರಸಿದ್ಧವಾದ ಮೂಲಾಹಂಕಾರದಲ್ಲಿ ಲೇಪಕನಲ್ಲದೆ, ಚಿತ್ಸ್ವರೂಪಸ್ಯ=ಬರಿಯ ಅರಿವೆ ಸ್ವರೂಪವಾಗುಳ್ಳ, ಮಹಾತ್ಮನಃ=ಮಹಾಪುರುಷನಿಗೆ, ಸುಖದುಃಖಾದಿ ಯೋಗೇಷು=ಸುಖದುಃಖಾದಿಗಳ ಸಂಬಂಧಂಗಳಲ್ಲಿ, ಅಭಾವಃ=ಅಭಾವವು, ಭಾವ ಏವ ವಾ=ಭಾವವಾಯಿತ್ತಾದೊಡೆಯು, ನ ವಿದ್ಯತೇ= ಉಂಟಾಗುತ್ತಿರದು. ||೫೭||

**ಗ್ರಂಥ||** **ಯಸ್ಮಿನ್ ಜ್ಯೋತಿಷಿ ಚಿದ್ರೂಪೇ ದೃಶ್ಯತೇ ನೈವ ಕಿಂಚನ ।**
**ಸದ್ರೂಪಂ ವಾಽಪ್ಯಸದ್ರೂಪಂ ಭಾವಾಭಾವಂ ವಿಮುಂಚತಃ ॥**

**ಟೀಕು||** ಚಿದ್ರೂಪೇ=ಅರಿವೆ ಸ್ವರೂಪವಾಗಿರ್ದ್ದ, ಯಸ್ಮಿನ್ ಜ್ಯೋತಿಷಿ ವಿಷಯೇ=ಆವುದಾನೊಂದು ಪ್ರಕಾಶವಿಷಯವಾಗಿ, ಭಾವಾಭಾವಂ ವಿಮುಂಚತಃ=ಭಾವಾಭಾವವನು ಬಿಡುತ್ತಿರ್ದ್ದ ಶಿವಯೋಗಿಗೆ, ಸದ್ರೂಪಂ ವಾ=[ರೂಪ] ಉಂಟಾಗಿದ್ದವಾಯಿತ್ತಾದಡೆಯು, ಅಸದ್ರೂಪಮಪಿ=[ರೂಪ]ಇಲ್ಲದೆ ಇದ್ದವಾಯಿತ್ತಾದಡೆಯು, ಕಿಂಚನ=ಒಂದು ವಸ್ತುವು, ನೈವ ದೃಶ್ಯತೇ=ಕಾಣಲುಪಡುತ್ತಿರದೆ? ||೫೮||

**ಸೂತ್ರ||** ಬಳಿಕ ಭಾವಾಭಾವಲಯಸ್ಥಲವನು ಮುಗಿಯಿಸುತ್ತಿರ್ದ್ದಪಂ.

ಗ್ರಂಥ|| **ಪ್ರತೀಯಮಾನೌ ವಿದ್ಯೇತೇ ಭಾವಾಭಾವೌ ನ ಕುತ್ರಚಿತ್ ।**
**ಲಿಂಗೈಕ್ಯೇ ಸತಿ ಯತ್ತಸ್ಮಾದ್ಭಾವಾಭಾವಲಯಸ್ಥಲಮ್ ॥**

**ಟೀಕು||** ಪ್ರತೀಯಮಾನೌ=ತೋರುತ್ತಿರ್ದ್ದ, ಭಾವಾಭಾವೌ=ಭಾವಾಭಾವಂಗಳು, ಲಿಂಗೈಕ್ಯೇ ಸತಿ ವಿಷಯೇ=ಶಿವಲಿಂಗೈಕ್ಯನಾದ ಸತ್ಪುರುಷನ ವಿಷಯವಾಗಿ, ಕುತ್ರಚಿತ್=ಒಂದೆಡೆಯಲ್ಲಿಯು, ಯತ್=ಆವುದಾನೊಂದು ಕಾರಣವಾಗಿ, ನ ವಿದ್ಯತೇ=ಉಂಟಾಗುತ್ತಿರದು. ತಸ್ಮಾತ್=ಅದು ಕಾರಣ ವಾಗಿ, ಭಾವಾಭಾವಲಯಸ್ಥಲಂ=ಭಾವಾಭಾವಲಯಸ್ಥಲವೆಂದು, ಉಕ್ತಂ=ಹೇಳಲುಪಟ್ಟಿತ್ತು. ||೫೯||

**ಇತಿ ಭಾವಾಭಾವಲಯಸ್ಥಲಮ್**

## ೫೭. ಐಕ್ಯಸ್ಥಲೇ ಜ್ಞಾನಶೂನ್ಯಸ್ಥಲಮ್

**ಸೂತ್ರ||** ಬಳಿಕ "ಅಥ ಆಪ ಅಪ್ಸು ಅಗ್ನಿಮಗ್ನೌ ವಾಯುಂ ವಾಯೌ ವ್ಯೋಮ್ನಿ
ವ್ಯೋಮ ಲಕ್ಷಯೇತ್।
ಏವಮಂತರ್ಗತಂ ಚಿತ್ತಂ ಪುರುಷೇ ಪ್ರತಿಮುಚ್ಯತೇ।" ಯೆಂಬ ಮೈತ್ರೇಯ ಶ್ರುತ್ಯರ್ಥವನು,
"ಸರ್ವಶೂನ್ಯಂ ನಿರಾಭಾಸಂ ಸಾಮರಸ್ಯಂ ತಥಾ ಭವೇತ್।
ಘೃತೇ ಘೃತಂ ಯಥಾ ನ್ಯಸ್ತಂ ಕ್ಷೀರಂ ಕ್ಷೀರೇ ಯಥೈವ ಚ"|| ಯೆಂಬ ಸರ್ವಜ್ಞಾನೋತ್ತರತಂತ್ರಾರ್ಥವನು ಪ್ರಕಟಿಸುತ್ತ ಸ್ವಯಪರವನರಿಯದಿಹುದರಿಂದೆ ಭಾವಾಭಾವಲಯ ಸಂಪನ್ನನಾದ ಆ ಶಿವಯೋಗಿಗೆ ಅಭೇದದಿಂದೆ ಸುಲಭವಾದ ಜ್ಞಾನಶೂನ್ಯಸ್ಥಲವನು ಸೂತ್ರ ತ್ರಯದಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| **ಪರಾಪರಸಮಾಪೇಕ್ಷಭಾವಾಭಾವವಿವೇಚನಮ್ ।**
**ಜ್ಞಾನಂ ಬ್ರಹ್ಮಣಿ ತನ್ನಾಸ್ತಿ ಜ್ಞಾನಶೂನ್ಯಸ್ಥಲಂ ವಿದುಃ ॥**

**ಟೀಕು॥** ಪರಾಪರಸಮಾಪೇಕ್ಷಭಾವಾಭಾವವಿವೇಚನಂ=ಪರಾಪರಜ್ಞಾನವನು ಲೇಸಾಗಿ ಬಯಸುತ್ತಿರ್ದ್ದ ಭಾವಾಭಾವವಿವೇಕವುಳ್ಳ, ಯದ್ ಜ್ಞಾನಂ=ಆವುದಾನೊಂದು ಜ್ಞಾನವು, ಬ್ರಹ್ಮಣಿ=ಪರಬ್ರಹ್ಮರೂಪನಾಗಿ ಭಾವಾಭಾವಲಯಸಂಪನ್ನನಾದ ಆ ಶಿವಯೋಗಿಯಲ್ಲಿ, ನಾಸ್ತಿ=ಉಂಟಾಗುತ್ತಿರದು. ತತ್=ಅದನು, ಜ್ಞಾನಶೂನ್ಯಸ್ಥಲಂ=ಜ್ಞಾನಶೂನ್ಯಸ್ಥಲವೆಂದು, ವಿದುಃ=ಅರಿವುತ್ತಿರ್ದ್ದಪರು. ॥೬೦॥

**ಗ್ರಂಥ॥** **ಜಲೇ ಜಲಮಿವ ನ್ಯಸ್ತಂ ವಹ್ನೌ ವಹ್ನಿರಿವಾರ್ಪಿತಮ್ ।**
**ಪರೇ ಬ್ರಹ್ಮಣಿ ಲೀನಾತ್ಮಾ ವಿಭಾಗೇನ ನ ದೃಶ್ಯತೇ ॥**

**ಟೀಕು॥** ಜಲೇ=ಉದಕದಲ್ಲಿ, ನ್ಯಸ್ತಂ=ಬೆರಸಲುಪಟ್ಟ, ಜಲಮಿವ=ಉದಕದೋಪಾದಿಯಲ್ಲಿ; ವಹ್ನೌ=ಅಗ್ನಿಯಲ್ಲಿ, ಅರ್ಪಿತಂ=ಇರಿಸಲುಪಟ್ಟ, ವಹ್ನಿರಿವ=ಅಗ್ನಿಯೋಪಾದಿಯಲ್ಲಿ, ಪರೇಬ್ರಹ್ಮಣಿ=ಪರಶಿವಶಬ್ದವಾಚ್ಯವಾದ ಮಹಾಲಿಂಗದಲ್ಲಿ, ಲೀನಾತ್ಮಾ=ಲಯಿಸಿದ ಭಾವಾಭಾವ ಪ್ರಯತ್ನವುಳ್ಳ ಶಿವಯೋಗಿಯು, ವಿಭಾಗೇನ=ಭಿನ್ನಭಾವದಿಂದೆ, ನ ದೃಶ್ಯತೇ=ಜ್ಞಾನಶೂನ್ಯನಾದ ಕಾರಣವಾಗಿ ಕಾಣಲುಪಡುತ್ತಿರನು.

ತಾತ್ಪರ್ಯ॥ ದ್ವೈತಾದ್ವೈತಜ್ಞಾನ ಶೂನ್ಯವಾದ ಈ ಶಿವಾದ್ವೈತದಲ್ಲಿಯ ಜಲ ವಹ್ನಿಗಳ ದೃಷ್ಟಾಂತವು ಆಪೋಜ್ಯೋತಿಸ್ಥಲವಾದ ದೃಗ್ಯುಗೈಕ್ಯದೋಪಾದಿಯಲ್ಲಿ ಸಜಾತೀಯವಾದ ಸಮಾನ ಸಮರಸತ್ವ ಸೂಚಕವಲ್ಲದೆ ಸ್ವರೂಪಹಾನಿ ಸ್ವರೂಪವೃದ್ಧಿಯ ದೃಷ್ಟಾಂತವಲ್ಲವೆಂಬುದರ್ಥ. ॥೬೧॥

**ಗ್ರಂಥ॥** **ಸರ್ವಾತ್ಮನಿ ಪರೇ ತತ್ತ್ವೇ ಭೇದಶಂಕಾವಿವರ್ಜಿತೇ ।**
**ಜ್ಞಾತ್ರಾದಿವ್ಯವಹಾರೋತ್ಥಂ ಕುತೋ ಜ್ಞಾನಂ ವಿಭಾವ್ಯತೇ ॥**

**ಟೀಕು॥** ಭೇದಶಂಕಾವಿವರ್ಜಿತೇ=ದ್ವೈತಶಂಕೆಯಿಂದೆ ಬಿಡಲುಪಟ್ಟ, ಸರ್ವಾತ್ಮನಿ=ಸರ್ವಸ್ವರೂಪುವುಳ್ಳ, ಪರೇತತ್ತ್ವೇವಿಷಯೇ=ಪರತತ್ತ್ವವಿಷಯವಾಗಿ, ಜ್ಞಾತ್ರಾದಿವ್ಯವಹಾರೋತ್ಥಂ=ಜ್ಞಾತೃ ಮೊದಲಾದ ತ್ರಿಪುಟಿಗಳ ವ್ಯವಹಾರದಿಂದೆ ಹುಟ್ಟಿರ್ದ್ದ, ಜ್ಞಾನಂ=ಜ್ಞಾನವು, ಕುತಃ=ಆವೆಡೆಯಲ್ಲಿ ವಿಭಾವ್ಯತೇ=ಭಾವಿಸಲುಪಡುತ್ತಿರ್ದ್ದಪುದು. ಆವೆಡೆಯಲ್ಲಿಯು ಭಾವಿಸಲುಪಡದೆಂಬುದರ್ಥ. ॥೬೨॥

**ಸೂತ್ರ॥** ಬಳಿಕ ಆ ಅರ್ಥವನೆ ಸೂತ್ರತ್ರಯದಿಂದೆ ವಿಶೇಷಿಸುತ್ತಿರ್ದ್ದಪಂ.

**ಗ್ರಂಥ॥** **ನಿರ್ವಿಕಾರಂ ನಿರಾಕಾರಂ ನಿತ್ಯಂ ಸೀಮಾವಿವರ್ಜಿತಮ್ ।**
**ವ್ಯೋಮವತ್ಪರಮಂ ಬ್ರಹ್ಮ ನಿರ್ವಿಕಲ್ಪತಯಾ ಸ್ಥಿತಮ್ ॥**

**ನ ಪೃಥ್ವ್ಯಾದೀನಿ ಭೂತಾನಿ ನ ಗ್ರಹಾ ನೈವ ತಾರಕಾಃ ।**
**ನ ದೇವಾ ನ ಮನುಷ್ಯಾಶ್ಚ ನ ತಿರ್ಯಂಚೋ ನ ಚಾಪರೇ ॥**

**ತಸ್ಮಿನ್ ಕೇವಲಚಿನ್ಮಾತ್ರಸತ್ತಾನಂದೈಕಲಕ್ಷಣೇ ।**
**ತ್ವಂತಾಽಹಂತಾದಿಸಂರೂಢಂ ವಿಜ್ಞಾನಂ ಕೇನ ಭಾವ್ಯತೇ ॥**

**ಟೀಕು॥** ನಿರ್ವಿಕಾರಂ= ವಿಕಾರವಿಲ್ಲದೆ, ನಿರಾಕಾರಂ=ಬಯಲಾಗಿ, ನಿತ್ಯಂ=ಕೇಡಿಲ್ಲದೆ, ಸೀಮಾವಿವರ್ಜಿತಂ=ಕಡೆಯಿಲ್ಲದೆಯಿರ್ದ್ದ, ವ್ಯೋಮವತ್=ಆಕಾಶದೋಪಾದಿಯಲ್ಲಿ, ಪರಮಂ ಬ್ರಹ್ಮ=ಪರಬ್ರಹ್ಮವು, ನಿರ್ವಿಕಲ್ಪತಯಾ ಸ್ಥಿತಂ=ನಿರ್ವಿಕಲ್ಪಕವಹತನದಿಂದೆ ಇರುತ್ತಿರ್ದ್ದ ಅದು. ಪೃಥ್ವ್ಯಾದೀನಿ ಭೂತಾನಿ=ಪೃಥಿವ್ಯಾದಿ ಮಹಾಭೂತಂಗಳು, ನ=ಇಲ್ಲ. ಗ್ರಹಾಃ=ಆದಿತ್ಯಾದಿ ಗ್ರಹಂಗಳು, ನ=ಇಲ್ಲ. ನೈವ ತಾರಕಾಃ=ಅಶ್ವಿನ್ಯಾದಿ ನಕ್ಷತ್ರಂಗಳು ಇಲ್ಲ. ನ ದೇವಾಃ=ವಿಷ್ಣ್ವಾದಿ ದೇವತೆಗಳು ಇಲ್ಲ. ನ ಮನುಷ್ಯಾಃ=ಮನುಷ್ಯರೂ ಇಲ್ಲ. ನ ತಿರ್ಯಂಚಃ=ತಿರ್ಯಕ್ ಜಾತಿಗಳ ಪ್ರಾಣಿಗಳು ಇಲ್ಲ. ಅಪರೇ ನ ಚ=ಉಳಿದುದೇನೂ ಇಲ್ಲ; ಕೇವಲ ಚಿನ್ಮಾತ್ರಸತ್ತಾನಂದೈಕಲಕ್ಷಣೇ=ಕೇವಲ ಚಿನ್ಮಾತ್ರವಾದ ಸದಾನಂದಂಗಳ ಕುರುಹಾಗುಳ್ಳ, ತಸ್ಮಿನ್ ವಿಷಯೇ=ಆ ಬ್ರಹ್ಮವಿಷಯವಾದ, ತ್ವಂತಾಽಹಂತಾದಿ ಸಂರೂಢಂ=ನೀನು ನಾನುಯೆಂಬುದು ಮೊದಲಾದ ವ್ಯವಹಾರದಲ್ಲಿ ಹುಟ್ಟಿರ್ದ್ದ, ವಿಜ್ಞಾನಂ=ವಿಶೇಷಜ್ಞಾನವು, ಕೇನ=ಆವಾತನಿಂದೆ, ಭಾವ್ಯತೇ=ಭಾವಿಸಲುಪಡುತ್ತಿರ್ದ್ದಪುದು? ಆವಾತನಿಂದಲು ಭಾವಿಸಲುಪಡಲಿಲ್ಲವೆಂಬುದರ್ಥ. ॥೬೫॥

**ಸೂತ್ರ॥** ಬಳಿಕ "ಏತದ್ ಜ್ಞೇಯಂ ನಿತ್ಯಮೇವಾತ್ಮಸಂಸ್ಥಂ
ನಾತಃಪರಂ ವೇದಿತವ್ಯಂ ಹಿ ಕಿಂಚಿತ್" ಯೆಂಬ ಶ್ವೇತಾಶ್ವತರ ಶ್ರುತ್ಯರ್ಥವನು,
"ಕೇವಲಂ ಜ್ಞೇಯಮಿತ್ಯುಕ್ತಂ ವೇದಿತವ್ಯಂ ನ ಕಿಂಚನ"ಯೆಂಬ ದೇವೀಕಾಲೋತ್ತರ ತಂತ್ರಾರ್ಥವನು ಪ್ರಕಟಿಸುತ್ತ ಸ್ವಸ್ವರೂಪ ಜ್ಞಾನಿಗೆ ತ್ರಿಪುಟಿ ಶುದ್ಧವಾದ ಜ್ಞಾನಶೂನ್ಯತೆಯನು, ಪಂಚಸೂತ್ರಂಗಳಿಂದೆ ಪ್ರತಿಪಾದಿಸುತ್ತಿರ್ದ್ದಪಂ.

ಗ್ರಂಥ॥ **ಜ್ಞೇಯಾಭಾವಾದ್ವಿಶೇಷೇಣ ಶೂನ್ಯಕಲ್ಪಂ ವಿಭಾವ್ಯತೇ ।**
**ಜ್ಞಾತೃಜ್ಞೇಯಾದಿಭಿಃ ಶೂನ್ಯಂ ಶೂನ್ಯಂ ಜ್ಞಾನಾದಿಭಿರ್ಗುಣೈಃ ॥**

**ಆದಾವಂತೇ ಚ ಮಧ್ಯೇ ಚ ಶೂನ್ಯಂ ಸರ್ವತ್ರ ಸರ್ವದಾ ।**
**ದ್ವಿತೀಯೇನ ಪದಾರ್ಥೇನ ಶೂನ್ಯಂ ಶೂನ್ಯಂ ವಿಭಾವ್ಯತೇ ॥**

**ಟೀಕು॥** ಜ್ಞೇಯಾಭಾವಾತ್=ಎಲ್ಲವನು ಅರಿವ ಅರಿವನೆ ನೆರೆಯರಿಯದ ಬಳಿಕ ಅರಿಯಲು ಯೋಗ್ಯವಾದ ವಸ್ತುವಿಲ್ಲವಾದ ಕಾರಣವಾಗಿ, ವಿಶೇಷೇಣ=ವಿಶೇಷದಿಂದೆ, ಶೂನ್ಯಕಲ್ಪಂ=ಒಪ್ಪಚ್ಚಿ

ಶೂನ್ಯಕ್ಕೆ ಸದೃಶವಾದ ಜ್ಞಾನವು, ವಿಭಾವ್ಯತೇ=ವಿಶೇಷವಾಗಿ ಭಾವಿಸುಲಪಡುತ್ತಿರ್ದ್ದಪುದು. ಜ್ಞಾತೃಜ್ಞೇಯಾದಿಭಿಃ=ಜ್ಞಾತೃಜ್ಞೇಯಾದಿಗಳಿಂದವು, ಜ್ಞಾನಾದಿಭಿರ್ಗುಣೈಃ=ಜ್ಞಾನಾದಿ ಗುಣಗಳಿಂದವು, ಶೂನ್ಯಂ=ಶೂನ್ಯವು, ಆದೌ ಅಂತೇಚ=ಆದಿ ಅಂತ್ಯದಲ್ಲು, ಮಧ್ಯೇಚ=ಮಧ್ಯದಲ್ಲು, ಸರ್ವತ್ರ=ಎಲ್ಲಾ ಎಡೆಯಲ್ಲೂ, ಸರ್ವದಾ=ಆವಾಗವೂ, ದ್ವಿತೀಯೇನ ಪದಾರ್ಥೇನ=ಎರಡನೆಯ ಪದಾರ್ಥದಿಂದಲು, ಶೂನ್ಯಂ=ಶೂನ್ಯವು, ಶೂನ್ಯಂ=ಶೂನ್ಯವಾಗಿಯೆ, ವಿಭಾವ್ಯತೇ=ಭಾವಿಸಲುಪಡುತ್ತಿರ್ದ್ದಪುದು. ||೬೭||

**ಗ್ರಂಥ||** **ಕೇವಲಂ ಸಚ್ಚಿದಾನಂದ ಪ್ರಕಾಶಾದ್ವಯಲಕ್ಷಣಮ್ ।**
**ಶೂನ್ಯಕಲ್ಪಂ ಪರಾಕಾಶಂ ಪರಬ್ರಹ್ಮ ಪ್ರಕಾಶತೇ ॥**

**ಟೀಕು||** ಶೂನ್ಯಕಲ್ಪಂ=ಆ ಶೂನ್ಯಕಲ್ಪಕ್ಕೆ ಒಪ್ಪಚ್ಚಿ ಸದೃಶವಾಗಿ, ಕೇವಲಂ=ಬರಿಯ, ಸಚ್ಚಿದಾನಂದ ಪ್ರಕಾಶಾದ್ವಯಲಕ್ಷಣಂ=ಸತ್ತು ಚಿತ್ತು ಆನಂದಂಗಳ ಪ್ರಕಾಶದಿಂದೆ ಎರಡಿಲ್ಲದೆ ಇರ್ದ್ದ ಕುರುಹುಳ್ಳ, ಪರಬ್ರಹ್ಮ=ಪರಶಿವನು, ಪರಾಕಾಶಂ=ಮಹಾಕಾಶಸ್ವರೂಪವಾಗಿ, ಪ್ರಕಾಶತೇ=ಪ್ರಕಾಶಿಸುತ್ತಿರ್ದ್ದಪಂ. ||೬೮||

**ಗ್ರಂಥ||** **ಶೂನ್ಯಜ್ಞಾನಾದಿಸಂಕಲ್ಪೇ ಶೂನ್ಯಸರ್ವಾರ್ಥಸಾಧನೇ ।**
**ಜ್ಯೋತಿರ್ಲಿಂಗೇ ಚಿದಾಕಾರೇ ಸ್ವಪ್ರಕಾಶೇ ನಿರುತ್ತರೇ ।**
**ಏಕೀಭಾವಮುಪೇತಸ್ಯ ಕಥಂ ಜ್ಞಾನಸ್ಯ ಸಂಭವಃ ॥**

**ಟೀಕು||** ಶೂನ್ಯಜ್ಞಾನಾದಿಸಂಕಲ್ಪೇ=ಶೂನ್ಯಜ್ಞಾನ ಮೊದಲಾದ ಸಂಕಲ್ಪವುಳ್ಳ, ಶೂನ್ಯಸರ್ವಾರ್ಥ ಸಾಧನೇ=ಶೂನ್ಯವಾದ ಸರ್ವಾರ್ಥಂಗಳ ಸಾಧನೆಯುಳ್ಳ, ನಿರುತ್ತರೇ=ತನ್ನದೆಸೆಯಿಂದೆ ಉತ್ತರ ವಿಲ್ಲದೆಯಿರ್ದ್ದ, ಜ್ಯೋತಿರ್ಲಿಂಗೇ=ಪರಮಶಿವಲಿಂಗಜ್ಯೋತಿರೂಪವಾದ, ಚಿದಾಕಾರೇ ಸ್ವಪ್ರಕಾಶೇ= ಚಿದ್ರೂಪವಾದ ಸ್ವಸ್ವರೂಪಪ್ರಕಾಶದಲ್ಲಿ, ನಿರುತ್ತರೇ=ಸರಿಮಿಗಿಲಿಲ್ಲದ, ಏಕೀಭಾವಂ= ಏಕವಹತನವನು, ಉಪೇತಸ್ಯ=ಎಯ್ದಿರ್ದ್ದ ಶಿವಯೋಗಿಗೆ, ಜ್ಞಾನಸ್ಯ ಸಂಭವಃ=ಜ್ಞಾನೋತ್ಪತ್ತಿಯು, ಕಥಂ=ಹೇಗಹುದು? ಹೇಗೆಯೂ ಆಗದೆಂಬುದರ್ಥ. ||೬೯||

**ಸೂತ್ರ||** ಬಳಿಕ "ನೇತಿ ನೇತಿ", ''ಅಸ್ಥೂಲಂ ಅನಣು ಅಹ್ರಸ್ವದೀರ್ಘಪ್ಲುತಮ್'' ಯೆಂಬ ಬೃಹದಾರಣ್ಯಕ ಶ್ರುತ್ಯರ್ಥವನು,

"ಅನಾಖ್ಯೇ ತು ನಿರಾಲಂಬೇ ಹ್ಯಗ್ರಾಹ್ಯೇ ಮಾನವರ್ಜಿತೇ।
ನಿಸ್ತವೇ ಯೋಜಿತೋ ಮುಕ್ತ ಇತಿ ಶಾಸ್ತ್ರಸ್ಯ ನಿಶ್ಚಯಃ"|| ಯೆಂಬ ನಿಃಶ್ವಾಸಕಾರಿಕಾತಂತ್ರಾರ್ಥವನು,

"ಪಶುಪಶುಪತಿಯೋಗೋ ದೃಗ್ಯುಗೈಕ್ಯಪ್ರಯೋಗೋ
ಗಗನಗಗನದೇಶಃ ಸಿಂಧುಸಿಂಧುಪ್ರದೇಶಃ ।
ಸಮಸಮರಸರೂಪೋ ಭಿನ್ನಭಿನ್ನಸ್ವರೂಪೋ
ನಿಶಿ ಸಮರಸಕಾಂತಾವಲ್ಲಭಾಶ್ಲೇಷಕಾಂತಃ"॥ ಯೆಂಬ ತ್ರಯೀತಂತ್ರಯುಕ್ತಿ ಯುಕ್ತಾಭಿಯುಕ್ತೋಕ್ತಾರ್ಥವನು ಪ್ರಕಟಿಸುತ್ತ ಪರಮುಕ್ತನ ಲಕ್ಷಣವನು ಹೇಳಿ ಜ್ಞಾನಶೂನ್ಯಸ್ಥಲವನು ಸಮಾಪ್ತಿಯ ಮಾಡುತ್ತಿರ್ದಪಂ.

ಗ್ರಂಥ॥ **ಯಸ್ಯ ಕಾರ್ಯದಶಾ ನಾಸ್ತಿ ಕಾರಣತ್ವಮಥಾಪಿ ವಾ ।**
**ಶೇಷತ್ವಂ ನೈವ ಶೇಷಿತ್ವಂ ಸ ಮುಕ್ತಃ ಪರ ಉಚ್ಯತೇ ॥**

**ಟೀಕು॥** ಯಸ್ಯ=ಸರ್ವವ ನೇತಿಗಳೆದು ತತ್ತ್ವಾತೀತನಾದ ಆವನಾನೊರ್ವ ಸ್ವಸ್ವರೂಪಸಂಪನ್ನನಿಗೆ, ಕಾರ್ಯದಶಾ=ಕಾರ್ಯಾವಸ್ಥೆಯು, ಅಥಾಪಿ ವಾ=ಅಹಗಲ್ಲವೆ? ಕಾರಣತ್ವಂ=ಕಾರಣವಹತನವು, ನ=ಇಲ್ಲ; ಯಸ್ಯ=ಪರಬ್ರಹ್ಮಪರಶಿವಪರಲಿಂಗಾದಿ ಪರ್ಯಾಯ ನಾಮೋಪಚಾರತೆಯುಳ್ಳ ಆವನಾನೊಬ್ಬ ಸ್ವಸ್ವರೂಪಸಂಪನ್ನನಿಗೆ, ಶೇಷತ್ವಂ=ಉಳುವೆಯಹತನವು ಶೇಷಿತ್ವಂ=ಉಳುಮೆಯಿಲ್ಲದಿಹತನವು, ನ=ಇಲ್ಲ;ಸಃ=ನಿತ್ಯಪರಿಪೂರ್ಣ ಸಚ್ಚಿದಾನಂದ ಸ್ವರೂಪನಾದ ಆತನು, ಪರಮುಕ್ತ ಏವ=ಪರಮುಕ್ತನೆಂದು, ಉಚ್ಯತೇ= ಹೇಳಲುಪಡುತ್ತಿರ್ದಪನು.

**ತಾತ್ಪರ್ಯ॥** "ಅನೀಶಶ್ಚಾತ್ಮಾ ಬಧ್ಯತೇ ಭೋಕ್ತೃಭಾವಾತ್।", "ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ॥" ಯೆಂಬ ಶ್ವೇತಾಶ್ವತರಶ್ರುತಿಯಿಂದಲು,
"ಪಾಶಬದ್ಧೋ ಭವೇಜ್ಜೀವಃ
ಪಾಶಮುಕ್ತಃ ಪರಃ ಶಿವಃ"॥ಯೆಂಬ ವೀರಾಗಮ ವಾಕ್ಯದಿಂದಲು ದೇಶಿಕೋಪದೇಶ ಸ್ವಾನುಭವಂಗಳಿಂದೆಯು ನಿಶ್ಚೈಸಲುಪಟ್ಟ ಮಾಯಾಮಲಬಿಂದುತಿರೋಭಾವ ಕರ್ಮಪಾಶಂಗಳಿಂದೆ ಬಿಡಲುಪಟ್ಟ ಪರಶಿವ ಶಬ್ದವಾಚ್ಯವಾದ ಸ್ವಸ್ವರೂಪಾಭಿವ್ಯಕ್ತಿಯೆ ಪರಮುಕ್ತಿಯೆಂಬುದರ್ಥ. ಈ ಲಿಂಗತ್ರಯವನು ಶಿವಲಿಂಗೈಕ್ಯನ ಅಂಗತ್ರಯಕ್ಕೆ ಕ್ರಮದಿಂದೆ ಸಂಬಂಧಿಸಿಕೊಂಬುದು. ॥೨೦॥

**ಇತಿ ಜ್ಞಾನಶೂನ್ಯಸ್ಥಲಮ್**

## ಶಾಸ್ತ್ರೋಪಸಂಹಾರಃ

**ಸೂತ್ರ॥** ಬಳಿಕ ಶಿವಯೋಗಿಯೆಂಬ ಆಚಾರ್ಯನು ತನ್ನ ಶಿಷ್ಯ ಪ್ರಶಿಷ್ಯರ ಕೂರ್ತ್ತು ಈ ಶಾಸ್ತ್ರೋಪರಮವನು ಸೂಚಿಸುತ್ತ ರೇಣುಕಗಣೇಶ್ವರನು ಉತ್ತರವಿಲ್ಲದೆ ಸುಮ್ಮನಿರ್ದ್ದನೆಂದು ಸೂತ್ರದ್ವಯದಿಂದೆ ಹೇಳುತ್ತಿರ್ದ್ದಪಂ.

**ವೃತ್ತ॥** **ಏತಾವದುಕ್ತ್ವಾ ಪರಮಪ್ರಬೋಧಮದ್ವೈತಮಾನಂದಶಿವಪ್ರಕಾಶಮ್ ।**
**ದೇವ್ಯೈ ಪುರಾ ಭಾಷಿತಮೀಶ್ವರೇಣ ತೂಷ್ಣೀಮಭೂದ್ ಧ್ಯಾನಪರೋ ಗಣೇಂದ್ರಃ ॥**

**ಟೀಕು॥** ಗಣೇಂದ್ರಃ=ರೇಣುಕಗಣೇಶ್ವರನು, ಈಶ್ವರೇಣ=ಪರಮೇಶ್ವರನಿಂದೆ, ದೇವ್ಯೈಃ= ಪಾರ್ವತಿದೇವಿಗೋಸುಗ, ಪುರಾ=ಪೂರ್ವದಲ್ಲಿ, ಭಾಷಿತಂ=ರಹಸ್ಯವಾಗಿ ಹೇಳಲುಪಟ್ಟ, ಆನಂದಶಿವ ಪ್ರಕಾಶಂ=ಶಿವಾನಂದ ಪ್ರಕಾಶಾರ್ಥವಾದ, ಅದ್ವೈತಂ=ಶಿವಾದ್ವೈತರೂಪವಾದ, ಪರಮ ಪ್ರಬೋಧಂ=ಉಪಕ್ರಮೋಪಸಂಹಾರದಲ್ಲಿಯು ಸ್ವಸ್ವರೂಪಜ್ಞಾನವುಳ್ಳ ಪಿಂಡಾದಿ ಜ್ಞಾನಶೂನ್ಯಾಂತ ವಾದ ಈ ವೀರಶೈವಶಾಸ್ತ್ರವನು, ಏತಾವತ್=ಈ ಪ್ರಕಾರವಾಗಿದ್ದುದನಾಗಿ, ಉಕ್ತ್ವಾ=ಅಗಸ್ತ್ಯಮುನಿ ಗೋಸುಗ ಉಪದೇಶಿಸಿ ಹೇಳಿ, ಧ್ಯಾನಪರಃ=ಸ್ವಸ್ವರೂಪಧ್ಯಾನದಲ್ಲಿ ತತ್ಪರನಾಗಿ, ತೂಷ್ಣೀಂ ಅಭೂತ್= ಉತ್ತರವಿಲ್ಲದೆ ಮೌನಿಯಾದನು. ॥೭೦॥

**ಗ್ರಂಥ॥** **ಏವಮುಕ್ತ್ವಾ ಸಮಾಸೀನಂ ಶಿವಯೋಗಪರಾಯಣಮ್ ।**
**ರೇಣುಕಂ ತಂ ಸಮಾಲೋಕ್ಯ ಬಭಾಷೇ ಪ್ರಾಂಜಲಿರ್ಮುನಿಃ ॥**

**ಟೀಕು॥** ಮುನಿಃ=ಅಗಸ್ತ್ಯಮುನಿಯು, ಪ್ರಾಂಜಲಿಃ ಸನ್=ಕೈಮುಗಿದುಕೊಂಡಿದ್ದಾತನಾಗುತಲು, ಏವಮುಕ್ತ್ವಾ=ಈ ಪ್ರಕಾರದಿಂದೆ ಉಪದೇಶಿಸಿ, ಸಮಾಸೀನಂ=ಕುಳಿತಿರ್ದ್ದ, ಶಿವಯೋಗಪರಾಯಣಂ= ಶಿವಯೋಗದಲ್ಲಿ ತತ್ಪರನಾಗಿರ್ದ್ದ, ತಂ ರೇಣುಕಂ=ಆ ರೇಣುಕಗಣೇಶ್ವರನನು, ಆಲೋಕ್ಯ=ನೋಡಿ, ಬಭಾಷೇ=ಕೊಂಡಾಡಿದನು. ॥೭೨॥

**ಅಗಸ್ತ್ಯ ಉವಾಚ॥**

**ಸೂತ್ರ॥** ಬಳಿಕ ಅಗಸ್ತ್ಯ ಮುನಿಯು ರೇಣುಕಗಣೇಶ್ವರನನು ಸಪ್ತಸೂತ್ರಂಗಳಿಂದೆ ಸ್ತುತಿಸುತ್ತಿರ್ದ್ದಪಂ.

**ಗ್ರಂಥ॥** **ಶಿವಯೋಗವಿಶೇಷಜ್ಞ ಶಿವಜ್ಞಾನಮಹೋದಧೇ ।**
**ಸಮಸ್ತವೇದಶಾಸ್ತ್ರಾದಿವ್ಯವಹಾರಧುರಂಧರ ॥**

**ಆಲೋಕಮಾತ್ರನಿರ್ಧೂತಸರ್ವಸಂಸಾರಬಂಧನ ।**
**ಸ್ವಚ್ಛಂದಚರಿತೋಲ್ಲಾಸ ಸ್ವಪ್ರಕಾಶಾತ್ಮವಚ್ಛಿವ ॥**

**ಟೀಕು॥** ಶಿವಯೋಗ ವಿಶೇಷಜ್ಞ=ಶಿವಯೋಗವಿಶೇಷವನು ಬಲ್ಲ, ಶಿವಜ್ಞಾನಮಹೋದಧೇ=ಶಿವಜ್ಞಾನಕ್ಕೆ ಮಹಾಸಮುದ್ರವಾಗಿರ್ದ್ದ, ಸಮಸ್ತವೇದಶಾಸ್ತ್ರಾದಿ ವ್ಯವಹಾರ ಧುರಂಧರ=ಸಮಸ್ತ ವೇದಾಗಮ ಪುರಾಣ ಮೊದಲಾಗುಳ್ಳ ಶಾಸ್ತ್ರಂಗಳ ವ್ಯವಹಾರ ಭಾರವನು ಹೊರುತ್ತಿರ್ದ್ದ, ಆಲೋಕ ಮಾತ್ರ ನಿರ್ಧೂತ ಸರ್ವಸಂಸಾರಬಂಧನ=ನೋಟಮಾತ್ರದಿಂದೆ ಕೊಡಹಲುಪಟ್ಟ ಸಮಸ್ತಜನರ ಸಂಸಾರಬಂಧನವುಳ್ಳ, ಸ್ವಚ್ಛಂದಚರಿತೋಲ್ಲಾಸ=ಸ್ವೇಚ್ಛಾಚಾರದ ಉಲ್ಲಾಸವುಳ್ಳ, ಸ್ವಪ್ರಕಾಶಾತ್ಮವಚ್ಛಿವ=ನಿಜಪ್ರಕಾಶದಿಂದವೆ ಚೈತನ್ಯವುಳ್ಳ ಶಿವನಾಗಿರ್ದ್ದ, ಭೋ ಗಣೇಂದ್ರ=ಎಲೆ ರೇಣುಕಗಣೇಶ್ವರನೆ! ॥೭೪॥

ಗ್ರಂಥ॥ **ಅವತೀರ್ಣಮಿದಂ ಶಾಸ್ತ್ರಮನವದ್ಯಂ ತ್ವದಾನನಾತ್ ।**
**ಶ್ರುತ್ವಾ ಮೇ ಮೋದತೇ ಚಿತ್ತಂ ಜ್ಯೋತಿಃ ಪಶ್ಯೇ ಶಿವಾಭಿದಮ್ ॥**

**ಟೀಕು॥** ತ್ವದಾನನಾತ್=ನಿನ್ನ ಮುಖದದೆಸೆಯಿಂದೆ, ಅವತೀರ್ಣಂ=ಅವತರಿಸಲುಪಟ್ಟ, ಅನವದ್ಯಂ=ದೋಷರಹಿತವಾದ, ಇದಂ ಶಾಸ್ತ್ರಂ=ಈ ವೀರಶೈವ ಶಾಸ್ತ್ರವನು, ಶ್ರುತ್ವಾ=ಕೇಳಿ, ಮೇ ಚಿತ್ತಂ=ಎನ್ನ ಚಿತ್ತವು, ಮೋದತೇ=ಸಂತೋಷಿಸುತ್ತಿರ್ದ್ದಪುದು. ಶಿವಾಭಿದಂ ಜ್ಯೋತಿಃ=ಶಿವಪ್ರಕಾಶವನು, ಪಶ್ಯೇ=ನೋಡುತ್ತಿದ್ದೇನೆ. ॥೭೫॥

ಗ್ರಂಥ॥ **ಅದ್ಯ ಮೇ ಸಫಲಂ ಜನ್ಮ ಗತೋ ಮೇ ಚಿತ್ತವಿಭ್ರಮಃ ।**
**ಸಂಜಾತಾ ಪಾಶವಿಚ್ಛಿತ್ತಿ ಸ್ತಪಾಂಸಿ ಫಲಿತಾನಿ ಮೇ ॥**

**ಟೀಕು॥** ಅದ್ಯ=ಈಗ, ಮೇ ಜನ್ಮ=ಎನ್ನ ಜನ್ಮವು, ಸಫಲಂ=ಸಫಲವಾಗಿರ್ದ್ದ ಅದು. ಅದ್ಯ=ಈಗ, ಮೇ=ಎನ್ನ, ಚಿತ್ತವಿಭ್ರಮಃ=ಚಿತ್ತದ ಭ್ರಾಂತಿಯು, ಗತಃ=ಹೋಯಿತ್ತು. ಅದ್ಯ=ಈಗ, ಪಾಶ ವಿಚ್ಛಿತ್ತಿಃ=ಪಾಶಪಂಚಕಭೇದನವು, ಸಂಜಾತಾ=ಆಯಿತ್ತು. ಅದ್ಯ=ಈಗ, ಮೇ=ಎನ್ನ, ತಪಾಂಸಿ=ತಪಸ್ಸುಗಳು, ಫಲಿತಾನಿ=ಫಲಿಸಲುಪಟ್ಟವು. ॥೭೬॥

ಗ್ರಂಥ॥ **ಇದಾನೀಮೇವ ಮೇ ಜಾತಂ ಮುನಿರಾಜೋತ್ತಮೋತ್ತಮಮ್ ।**
**ಇತಃ ಪರಂ ಮಯಾ ನಾಸ್ತಿ ಸದೃಶೋ ಭುವನತ್ರಯೇ ॥**

**ಟೀಕು॥** ಇದಾನೀಮೇವ=ಈಗಲೆವೆ, ಮೇ=ಎನಗೆ, ಮುನಿರಾಜೋತ್ತಮೋತ್ತಮಂ= ಮುನೀಶ್ವರರೊಳಗೆ ಉತ್ತಮರಾದವರೊಳಗೆ ಉತ್ತಮವಪತನವು, ಜಾತಂ=ಆಯಿತ್ತು. ಇತಃ ಪರಂ=ಇಲ್ಲಿಂದ

ಮೇಲೆ, ಮಯಾಸದೃಶಃ=ಎನ್ನೊಡನೆ ಸಮಾನವಾದಾತನು, ಭುವನತ್ರಯೇ=ಮೂರು ಲೋಕದಲ್ಲಿಯು, ನಾಸ್ತಿ=ಇಲ್ಲ. ||೭೭||

ಗ್ರಂಥ|| ಶಾಸ್ತ್ರಂ ತವ ಮುಖೋದ್ಗೀರ್ಣಂ ಶಿವಾದ್ವೈತಪರಂಪರಮ್ ।
ಮಾಂ ವಿನಾ ಕಸ್ಯ ಲೋಕೇಷು ಶ್ರೋತುಮಸ್ತಿ ತಪಃ ಶುಭಮ್ ॥

ತಪಸಾಂ ಪರಿಪಾಕೇನ ಶಂಕರಸ್ಯ ಪ್ರಸಾದತಃ ।
ಆಗತಸ್ತ್ವಂ ಮಹಾಭಾಗ ಮಾಂ ಕೃತಾರ್ಥಯಿತುಂ ಗಿರಾ ॥

**ಟೀಕು||** ಭೋ ಮಹಾಭಾಗ=ಎಲೈ ಶ್ರೇಷ್ಠನಾದ ಗಣೇಶ್ವರನೆ! ತವ=ನಿನ್ನ, ಮುಖೋದ್ಗೀರ್ಣಂ=ಮುಖದದೆಸೆಯಿಂದೆ ಹೊರಹೊಮ್ಮಿದ್ರ, ಶಿವಾದ್ವೈತಪರಂ=ಶಿವಾದ್ವೈತದಲ್ಲಿ ತತ್ಪರವಾಗಿರ್ದ್ದ, ಪರಂಶಾಸ್ತ್ರಂ=ಶ್ರೇಷ್ಠವಾದ ವೀರಶೈವಶಾಸ್ತ್ರವನು, ಶ್ರೋತುಂ=ಕೇಳಲು, ಲೋಕೇಷು=ಭುವನಂಗಳಲ್ಲಿ ಮಾಂ ವಿನಾ=ನಾ ಹೊರತಾಗಿ, ಕಸ್ಯ=ಆವಾತನಿಗೆ, ಶುಭಂ ತಪಃ=ಲೇಸಾದ ತಪವು, ಪರಿಪಾಕೇನ ತಪಸಾಂ=ತಪಸುಗಳ ಪರಿಪಾಕದಿಂದೆ, ಶಂಕರಸ್ಯ ಪ್ರಸಾದತಃ=ಶಿವನ ಪ್ರಸಾದದದೆಸೆಯಿಂದೆಯು, ಮಾಂ=ಎನ್ನನು, ಗಿರಾ=ವಾಕ್ಯದಿಂದೆ, ಕೃತಾರ್ಥಯಿತುಂ=ಕೃತಾರ್ಥನ ಮಾಡಲು, ತ್ವಂ=ನೀನು, ಆಗತಃ=ಬಂದಿರ್ದ್ದ ಆತನು. ||೭೯||

**ಸೂತ್ರ||** ಬಳಿಕ ಶಿವಯೋಗಿ, ರೇಣುಕಗಣೇಶ್ವರನು ಅಗಸ್ತ್ಯಮುನಿಯ ಕೊಂಡಾಡಿದನೆಂದು ಹೇಳುತ್ತಿರ್ದ್ದಪಂ.

ಗ್ರಂಥ|| ಇತಿ ಸ್ತುವಂತಂ ವಿನಯಾದಗಸ್ತ್ಯಂ ಮುನಿಪುಂಗವಮ್ ।
ಆಲೋಕ್ಯ ಕರುಣಾದೃಷ್ಟ್ಯಾ ಬಭಾಷೇ ಸ ಗಣೇಶ್ವರಃ ॥

**ಟೀಕು||** ಸಃ ಗಣೇಶ್ವರಃ=ಆ ರೇಣುಕಗಣೇಶ್ವರನು, ವಿನಯಾತ್=ಭಕ್ತಿಯ ದೆಸೆಯಿಂದೆ, ಇತಿ=ಈ ಪ್ರಕಾರವಾಗಿ, ಸ್ತುವಂತಂ=ಕೊಂಡಾಡುತ್ತಿರ್ದ್ದ, ಮುನಿಪುಂಗವಂ ಅಗಸ್ತ್ಯಂ=ಮುನಿಶ್ರೇಷ್ಠನಾದ ಅಗಸ್ತ್ಯನನು, ಕರುಣಾದೃಷ್ಟ್ಯಾ=ಕೃಪಾದೃಷ್ಟಿಯಿಂದೆ, ಆಲೋಕ್ಯ=ನೋಡಿ, ಬಭಾಷೇ=ನುಡಿದನು. ||೮೦||

**ಸೂತ್ರ||** ಬಳಿಕ ರೇಣುಕಗಣೇಶ್ವರನು ಈ ಶಾಸ್ತ್ರಮಹತ್ವವನು ಸಪ್ತಸೂತ್ರಂಗಳಿಂದೆ ಹೇಳುತ್ತಿರ್ದ್ದಪಂ.

ಗ್ರಂಥ|| ಅಗಸ್ತ್ಯ ಮುನಿಶಾರ್ದೂಲ ತಪಸ್ಸಿದ್ಧಮನೋರಥ
ತ್ವಾಂ ವಿನಾ ಶಿವಶಾಸ್ತ್ರಸ್ಯ ಕಃ ಶ್ರೋತುಮಧಿಕಾರವಾನ್

**ಟೀಕು॥** ತಪಸ್ಸಿದ್ಧ ಮನೋರಥ=ತಪಸ್ಸಿನಿಂದೆ ಸಿದ್ಧವಾದ ಬಯಕೆಯುಳ್ಳ, ಮುನಿಶಾರ್ದೂಲ=ಮುನಿಶ್ರೇಷ್ಠನಾದ, ಭೋ ಅಗಸ್ತ್ಯ=ಎಲೆ ಅಗಸ್ತ್ಯಮುನಿಯೆ! ತ್ವಾಂ ವಿನಾ=ನೀ ಹೊರತಾಗಿ, ಶಿವಶಾಸ್ತ್ರಸ್ಯ=ಈ ಶಿವಶಾಸ್ತ್ರವ, ಶ್ರೋತುಂ=ಕೇಳಲು, ಕಃ ಅಧಿಕಾರವಾನ್=ಆವಾತನು ಅಧಿಕಾರವುಳ್ಳಾತನು? ಆರೂ ಅಧಿಕಾರಿಗಳಿಲ್ಲವೆಂಬುದರ್ಥ.

**ತಾತ್ಪರ್ಯ॥** "ಏಕೋತ್ತರಶತಂ ಪ್ರೋಕ್ತಾಃ ದೀಕ್ಷಾಭೇದಾ ಮಯಾ ಪುರಾ।
ದೀಕ್ಷಿತಸ್ತಾಸು ಗುರುಣಾ ಭಕ್ತೋऽಸ್ಮಿನ್ನಧಿಕಾರವಾನ್"॥ ಯೆಂದು ಯೋಗಜಾಗಮವಾಕ್ಯವುಂಟಾಗಿ ನಿನ್ನ ಹೊರತಾಗಿ ಅಧಿಕಾರಿಯು ದುರ್ಲಭವೆಂಬುದರ್ಥ. ॥೮೧॥

**ಗ್ರಂಥ॥** **ಪಾತ್ರಂ ಶಿವಪ್ರಸಾದಸ್ಯ ಭವಾನೇಕೋ ನ ಚಾಪರಃ ।**
**ಇತಿ ನಿಶ್ಚಿತ್ಯ ಕಥಿತಂ ಮಯಾ ತೇ ತಂತ್ರಮೀದೃಶಮ್ ॥**

**ಟೀಕು॥** ಭೋ ಅಗಸ್ತ್ಯ=ಎಲೆ ಅಗಸ್ತ್ಯಮುನಿಯೆ! ಭವಾನೇಕಃ=ನೀನೊರ್ವನೆ, ಶಿವಪ್ರಸಾದಸ್ಯ=ಶಿವಪ್ರಸಾದಕ್ಕೆ, ಪಾತ್ರಂ=ಪಾತ್ರನು, ನ ಚಾಪರಃ=ಮತ್ತೊರ್ವನಿಲ್ಲ; ಇತಿ=ಹೀಗೆಂದು, ನಿಶ್ಚಿತ್ಯ= ನಿಶ್ಚೈಸಿ, ಮಯಾ=ಎನ್ನಿಂದೆ, ಈದೃಶಂ ತಂತ್ರಂ=ಈ ಪ್ರಕಾರವಾದ ವೀರಶೈವಾಗಮವು, ತೇ=ನಿನಗೋಸುಗ, ಕಥಿತಂ=ಹೇಳಲುಪಟ್ಟಿತ್ತು. ॥೮೨॥

**ಗ್ರಂಥ॥** **ಸ್ಥಾಪ್ಯತಾಂ ಸರ್ವಲೋಕೇಷು ತಂತ್ರಮೇತತ್ತ್ವಯಾ ಮುನೇ ।**
**ಈದೃಶಂ ಶಿವಬೋಧಸ್ಯ ಸಾಧನಂ ನಾಸ್ತಿ ಕುತ್ರಚಿತ್ ॥**

**ಟೀಕು॥** ಭೋ ಮುನೇ=ಎಲೆ ಅಗಸ್ತ್ಯಮುನಿಯೆ! ತ್ವಯಾ=ನಿನ್ನಿಂದೆ, ಏತತ್ತಂತ್ರಂ=ಈ ಸಿದ್ಧಾಂತವು, ಸರ್ವಲೋಕೇಷು=ಸಮಸ್ತಲೋಕಂಗಳಲ್ಲಿ, ಸ್ಥಾಪ್ಯತಾಂ=ಸ್ಥಾಪಿಸಲುಪಡಲಿ. ಶಿವಬೋಧಸ್ಯ=ಶಿವಜ್ಞಾನಕ್ಕೆ, ಈದೃಶಂ ಸಾಧನಂ=ಈ ಪ್ರಕಾರವಾದ ಸಾಧನವು, ಕುತ್ರಚಿತ್=ಒಂದೆಡೆಯಲ್ಲಿಯು, ನಾಸ್ತಿ=ಇಲ್ಲ. ॥೮೩॥

**ಗ್ರಂಥ॥** **ರಹಸ್ಯಮೇತತ್ಸರ್ವಜ್ಞಃ ಸರ್ವಾನುಗ್ರಾಹಕಶ್ಶಿವಃ ।**
**ಅವಾದೀತ್ಸರ್ವಲೋಕಾನಾಂ ಸಿದ್ಧಯೇ ಪಾರ್ವತೀಪತಿಃ ॥**

**ಟೀಕು॥** ಸರ್ವಜ್ಞಃ=ಸರ್ವವನೂ ಬಲ್ಲ, ಸರ್ವಾನುಗ್ರಾಹಕಃ=ಸರ್ವರನು ಅನುಗ್ರಹಿಸುತ್ತಿರ್ದ್ದ, ಪಾರ್ವತೀಪತಿಃ=ಪಾರ್ವತಿಪತಿಯಾದ, ಶಿವಃ=ಪರಮೇಶ್ವರನು, ಸರ್ವಲೋಕಾನಾಂ=ಸಮಸ್ತಜನರುಗಳ, ಸಿದ್ಧಯೇ=ಭೋಗಮೋಕ್ಷಾದಿಸರ್ವಸಿದ್ಧಿಗೋಸುಗ, ಏತತ್‌ರಹಸ್ಯಂ=ಈ ವೀರಶೈವ ರಹಸ್ಯವನು, ಅವಾದೀತ್=ಹೇಳಿದನು. ॥೮೪॥

**ಗ್ರಂಥ॥** **ತದಿದಂ ಶಿವಸಿದ್ಧಾಂತಸಾರಾಣಾಮುತ್ತಮೋತ್ತಮಮ್ ।**
**ವೇದವೇದಾಂತಸರ್ವಸ್ವಂ ವಿದ್ಯಾಚಾರಪ್ರವರ್ತಕಮ್ ॥**

**ವೀರಮಾಹೇಶ್ವರಗ್ರಾಹ್ಯಂ ಶಿವಾದ್ವೈತಪ್ರಕಾಶಕಮ್ ।**
**ಪರೀಕ್ಷಿತೇಭ್ಯೋ ದಾತವ್ಯಂ ಶಿಷ್ಯೇಭ್ಯೋ ನಾನ್ಯಥಾ ಕ್ವಚಿತ್ ॥**

**ಟೀಕು॥** ತದಿದಂ=ವೀರಶೈವ ಷಡುಸ್ಥಲ ಶಿವಯೋಗಮಾರ್ಗಪ್ರತಿಪಾದಕವಾದ ಆ ಈ ಶಾಸ್ತ್ರವು, ಶಿವಸಿದ್ಧಾಂತ ಸಾರಾಣಾಂ ಉತ್ತಮೋತ್ತಮಂ=ಕಾಮಿಕಾದಿ ವಾತುಲಾಂತವಾದ ಇಪ್ಪತ್ತೆಂಟು ಶಿವಾಗಮಸಾರಂಗಳಿಗೆ ಉತ್ತಮವಾಗಿದ್ದವಕ್ಕೆ ಉತ್ತಮವಾಗಿರ್ದ್ದ, ವೇದವೇದಾಂತ ಸರ್ವಸ್ವಂ=ಚತುರ್ವೇದ ದ್ವಾತ್ರಿಂಶದುಪನಿಷತ್ತುಗಳಿಗೆ ಸರ್ವಸ್ವವಾಗಿರ್ದ್ದ, ವಿದ್ಯಾಚಾರಪ್ರವರ್ತಕಂ=ಜ್ಞಾನಕ್ರೀಗಳನೆ ಪ್ರಕಾಶಿಸುತ್ತಿರ್ದ್ದ, ವೀರಮಾಹೇಶ್ವರಗ್ರಾಹ್ಯಂ=ವೀರಮಾಹೇಶ್ವರರುಗಳಿಂದ ಸ್ವೀಕರಿಸಲುಯೋಗ್ಯವಾಗಿರ್ದ್ದ, ಶಿವಾದ್ವೈತಪ್ರಕಾಶಕಂ=ಶಿವಾದ್ವೈತಪ್ರಕಾಶವಾದ ಈ ಶಾಸ್ತ್ರವು, ಪರೀಕ್ಷಿತೇಭ್ಯಃ= ಪರೀಕ್ಷಿತರಾದ, ಶಿಷ್ಯೇಭ್ಯಃ=ಶಿಷ್ಯರಿಗೋಸುಗ, ದಾತವ್ಯಂ=ಕೊಡಲು ಯೋಗ್ಯವು. ಅನ್ಯಥಾ=ಅಹಗಲ್ಲದೆ, ಕ್ವಚಿತ್=ಒಂದೆಡೆಯಲ್ಲಿಯು, ನ ದಾತವ್ಯಂ=ಕೊಡಲು ಯೋಗ್ಯವಲ್ಲ.

**ತಾತ್ಪರ್ಯ॥** "ಏತಾಃ ಸಂಹಿತಾಃ ನಾನಂತೇವಾಸಿನೇ ಪ್ರಬ್ರೂಯಾತ್, ನಾಸಂವತ್ಸರವಾಸಿನೇ, ನಾಪ್ರವಕ್ತ್ರೇ, ಇತ್ಯಾಚಾರ್ಯ ಆಚಾರ್ಯಃ" ಯೆಂದು ಐತರೇಯ ಶ್ರುತಿಯುಂಟಾಗಿ,
"ಭಕ್ತಸ್ಯೈವಾತ್ಮಶಿಷ್ಯಸ್ಯ ವಿರಕ್ತಸ್ಯ ಮಹಾಮತೇಃ।
ಗುರುಣಾ ಜ್ಞಾನಿನಾ ದೇಯಂ ಆನಂದರಸನಿರ್ಭರಮ್"॥ ಯೆಂದು ಯೋಗಜಾಗಮ ವಾಕ್ಯವುಂಟಾಗಿ ಈ ಶಿವರಹಸ್ಯವನು ಅನಧಿಕಾರಿಗೆ ಹೇಳಬಾರದೆಂಬುದರ್ಥ. ॥೮೬॥

**ಗ್ರಂಥ॥** **ಏತಚ್ಛ್ರವಣಮಾತ್ರೇಣ ಸರ್ವೇಷಾಂ ಪಾಪಸಂಕ್ಷಯಃ ।**
**ಅವತೀರ್ಣೋ ಮಯಾ ಭೂಮೌ ಶಾಸ್ತ್ರಸ್ಯಾಸ್ಯ ಪ್ರವೃತ್ತಯೇ ॥**

**ಪ್ರವರ್ತಯ ಶಿವಾದೇಶಾತ್ ತ್ವಮಪಿ ಜ್ಞಾನಮೀದೃಶಮ್ ।**

**ಟೀಕು॥** ಏತಚ್ಛ್ರವಣಮಾತ್ರೇಣ=ಈ ಶಿವಸಿದ್ಧಾಂತವನು ಕೇಳಿದಮಾತ್ರದಿಂದವೆ, ಸರ್ವೇಷಾಂ=ಸಮಸ್ತರಿಗೂ, ಪಾಪಸಂಕ್ಷಯಃ=ಪಾಪಕ್ಷಯವು. ಅಸ್ಯಶಾಸ್ತ್ರಸ್ಯ=ಈ ವೀರಶೈವ ಶಾಸ್ತ್ರದ ಪ್ರವೃತ್ತಯೇ=ಪ್ರವರ್ತನೆಗೋಸುಗ, ಮಯಾ=ಎನ್ನಿಂದೆಯು, ಭೂಮೌ=ಭೂಭಾಗದಲ್ಲಿ ಅವತೀರ್ಣಃ= ಅವತರಿಸುವತನವಾಯಿತ್ತು. ಶಿವಾದೇಶಾತ್=ಶಿವಾಜ್ಞೆಯದೆಸೆಯಿಂದೆ, ತ್ವಮಪಿ=ನೀನಾಯಿತ್ತಾ ದಡೆಯು, ಈದೃಶಂ ಜ್ಞಾನಂ=ಈ ಪ್ರಕಾರವಾದ ಶಿವರಹಸ್ಯವನು, ಪ್ರವರ್ತಯ=ಪ್ರವರ್ತಿಸು.

**ತಾತ್ಪರ್ಯ॥** "ಯದಾ ಯದಾ ಧರ್ಮಹಾನಿರ್ಭವಿಷ್ಯತಿ ಮಹೀತಲೇ।
ಗಣಾನಾಮವತಾರೋ ಹಿ ತಥಾ ಮಮ ವಿನಿಶ್ಚಿತಃ॥"ಯೆಂದು ಶಾಂಕರ ಸಂಹಿತೆಯಲ್ಲಿ ಶಂಕರವಾಕ್ಯವುಂಟಾದ ಕಾರಣವಾಗಿ ಈ ವೀರಶೈವಧರ್ಮೋದ್ಧಾರಕರೆ ಗಣಾಧೀಶ್ವರರೆಂಬುದರ್ಥ. ॥೮೭॥

**ಸೂತ್ರ॥** ಬಳಿಕ ಶಿವಯೋಗಿಯು ರೇಣುಕಗಣೇಶ್ವರನ ವರ್ತನವನು ಸೂಚಿಸುತ್ತಿರ್ದ್ದಪಂ.

ವಾಕ್ಯಸ್ಪರ್ಶನದರ್ಶನಾದಿ ಸಕಲಕ್ರೀಡಾಕ್ರಿಯಾಭಿರ್ನೃಣಾಂ
ಸರ್ವೇಷಾಂ ಭುವಿ ಭುಕ್ತಿಮುಕ್ತಿಸಹಿತಂ ಯಚ್ಛನ್ಯತೀಶಃ ಸುಖಮ್ ।
ಭುಕ್ತ್ವಾ ಭೋಗಶತಂ ವಿಹೃತ್ಯ ಯುವತಿರ್ನಿತ್ಯೋಪವಾಸಿವ್ರತೀ
ಬಾಲೋನ್ಮತ್ತ ಪಿಶಾಚವದ್ವಿಚರತಿ ಕ್ಷ್ಮಾಯಾಂ ವಿಲಕ್ಷಾಶ್ರಯಃ"॥ ಯೆಂದು ರೇಣುಕಾಗಸ್ತ್ಯ ಸಂವಾದಃ ಸಮಾಪ್ತಮ್.

**ಶ್ರೀ ವೀರಶೈವ ಧರ್ಮನಿರ್ಣಯೇ ಸಿದ್ಧಾಂತಶಿಖಾಮಣಿಟೀಕಾಯಾಂ ಸಿದ್ಧಾಂತಸಂಬೋಧಿನೀ ವ್ಯಾಖ್ಯಾಯಾಂ ಶಿವೈಕ್ಯಸ್ಥಲವಿಷಯನವವಿಧಲಿಂಗಸ್ಥಲಪ್ರಸಂಗೋ ನಾಮ ವಿಂಶತಿಃ ಪರಿಚ್ಛೇದಃ ಸಮಾಪ್ತಃ**

**ಶಿವಯೋಗೀ||** ರೇವಣಾಸಿದ್ಧೇಶ್ವರನಿಂದೆ ಅಗಸ್ತ್ಯಮುನಿಗೆ ಪಿಂಡಾಂಡಾದಿ ವೃತ್ತಿಜ್ಞಾನ ಶೂನ್ಯಾಂತವಾಗಿ ಉಪದೇಶಿಸಿ ಹೇಳಲುಪಟ್ಟ ವೀರಶೈವಸಿದ್ಧಾಂತ ಸಂಗ್ರಹವನು ಶಿವಯೋಗಿಯೆಂಬಾಚಾರ್ಯನು ತನ್ನ ಶಿಷ್ಯ ಪ್ರಶಿಷ್ಯರಲ್ಲಿ ಪ್ರಖ್ಯಾತವನು ಮಾಡಿ ಮುಂದೆ ರೇಣುಕ ವಿಭೀಷಣ ಸಂವಾದವನು ಆ ರೇವಣಾಸಿದ್ಧೇಶ್ವರನೈಕ್ಯವನು ಪಂಚಪಂಚಾಶತ್ಸೂತ್ರಂಗಳಿಂದೆ ಸಂಗ್ರಹಪರಿಸಮಾಪ್ತಿ ಪರ್ಯಂತರವಾಗಿ ಸಂಕೋಚಿಸಿ ಹೇಳುತ್ತಿದ್ದಾನು.

**ಗ್ರಂಥ||** **ಇತ್ಯುಕ್ತ್ವಾ ಪಶ್ಯತಸ್ತಸ್ಯ ಪುರಸ್ತಾದೇವ ರೇಣುಕಃ ।**
**ಅಂತರ್ದಧೇ ಮಹಾದೇವಂ ಚಿಂತಯನ್ನಂತರಾತ್ಮನಾ ।**

**ಟೀಕು||** ರೇಣುಕಃ=ರೇವಣಾಸಿದ್ಧೇಶ್ವರನು, ಇತ್ಯುಕ್ತ್ವಾ=ಈ ಪ್ರಕಾರದಿಂದೆ ವೀರಶೈವ ಧರ್ಮೋಪದೇಶ ವನು ಅಗಸ್ತ್ಯಮುನಿಗೆ ಉಪದೇಶಿಸಿ ಹೇಳಿ, ಪಶ್ಯತಃ=ನೋಡುತ್ತಿರ್ದ್ದ, ತಸ್ಯ=ಆ ಅಗಸ್ತ್ಯಮುನಿಯ, ಪುರಸ್ತಾತ್=ಮುಂದೆ, ಮಹಾದೇವಂ=ಪರಮೇಶ್ವರನನು, ಅಂತರಾತ್ಮನಾ=ಅಂತರ್ಮುಖವಾದ ಚಿತ್ತದಿಂದೆ, ಚಿಂತಯನ್ನೇವ=ಧ್ಯಾನಿಸುತ್ತಲೆ, ಅಂತರ್ದಧೇ=ಅಗಸ್ತ್ಯಮುನಿಗೆ ಮರೆಯಾದನು. ||೧||

**ಗ್ರಂಥ||** **ಅಂತರ್ಹಿತೇ ತದಾ ತಸ್ಮಿನ್ಮುನಿರಾಶ್ಚರ್ಯಸಂಕುಲಃ ।**
**ತಚ್ಛಾಸ್ತ್ರಪ್ರವಣೋ ಭೂತ್ವಾ ಸಮವರ್ತತ ಸಂಯಮೀ ॥**

**ಟೀಕು||** ತದಾ=ಆಕಾಲದಲ್ಲಿ, ತಸ್ಮಿನ್=ಆ ರೇವಣಾಸಿದ್ಧೇಶ್ವರನು, ಅಂತರ್ಹಿತೇ ಸತಿ=ಮರೆಯಾಗಿ ಹೋಗಲಾಗಿ, ಸಂಯಮೀ=ಜಿತೇಂದ್ರಿಯನಾದ, ಮುನಿಃ=ಅಗಸ್ತ್ಯಮುನಿಯು, ಆಶ್ಚರ್ಯಸಂಕುಲಃ ಸನ್=ಆಶ್ಚರ್ಯದಿಂದೆ ಮುಸುಕಲುಪಟ್ಟ ಮನಸ್ಸುಳ್ಳಾತನಾಗುತಲು, ತಚ್ಛಾಸ್ತ್ರಪ್ರವಣಃ=ಆ ವೀರಶೈವ ಶಾಸ್ತ್ರದಲ್ಲಿ ಪ್ರೀತಿಯುಳ್ಳಾತನು, ಭೂತ್ವಾ=ಆಗಿ, ಸಮವರ್ತತ=ಪರಮಾನಂದದಿಂದೆಯ್ದಿದನು. ||೨||

**ಗ್ರಂಥ||** **ಯ ಇದಂ ಶಿವಸಿದ್ಧಾಂತಂ ವೀರಶೈವಮತಂ ಪರಮ್ ।**
**ಶೃಣೋತಿ ಶುದ್ಧಮನಸಾ ಸ ಯಾತಿ ಪರಮಾಂ ಗತಿಮ್ ॥**

**ಟೀಕು||** ಯಃ=ಆವನಾನೊಬ್ಬನು, ವೀರಶೈವಮತಂ=ಅಂಗಲಿಂಗಷಡುಸ್ಥಲರೂಪವಾಗಿ ವೀರಶೈವ ಧರ್ಮ ನಿರ್ಣಯಕ್ಕೆ ಸಮ್ಮತ್ರವಾದ, ಪರಂ=ಸರ್ವೋತ್ಕರ್ಷವಾದ, ಇದಂ ಶಿವಸಿದ್ಧಾಂತಂ=ಶ್ರುತಿ ಸಮ್ಮತ್ರವಾದ ಈ ಶಿವಸಿದ್ಧಾಂತವನು, ಶುದ್ಧಮನಸಾ=ನಿರ್ಮಲಚಿತ್ತದಿಂದೆ, ಶೃಣೋತಿ= ಕೇಳುತ್ತಿದ್ದಾತನು. ಸಃ=ಆತನು, ಪರಮಾಂ ಗತಿಂ=ಪರಮುಕ್ತಿಯನು, ಯಾತಿ=ಎಯ್ದುತ್ತಿರ್ದ್ದಪನು. ||೩||

**ಗ್ರಂಥ||** **ಸ್ವಚ್ಛಂದಾಚಾರರಸಿಕಃ ಸ್ವೇಚ್ಛಾನಿರ್ಮಿತವಿಗ್ರಹಃ ।**
**ಆಸಸಾದ ಪುರೀಂ ಲಂಕಾಂ ರೇಣುಕೋ ಗಣನಾಯಕಃ ॥**

**ಟೀಕು||** ಸ್ವಚ್ಛಂದಾಚಾರರಸಿಕಃ=ನಿರ್ಮಲವಾದ ಸ್ವೇಚ್ಛಾಚಾರದಲ್ಲಿ ರಸಿಕನಾದ, ರೇಣುಕ ಗಣನಾಯಕಃ=ರೇಣುಕಗಣೇಶ್ವರನು, ಸ್ವೇಚ್ಛಾನಿರ್ಮಿತ ವಿಗ್ರಹಃ ಸನ್=ತನ್ನಿಚ್ಛೆಯಿಂದೆ ನಿರ್ಮಿಸಲುಪಟ್ಟ ಶರೀರವುಳ್ಳಾತನಾಗುತಲು, ಲಂಕಾಂ ಪುರೀಂ=ಲಂಕಾಪುರಿಯನು ಆಸಸಾದ=ಎಯ್ದಿದನು. ||೪||

**ಗ್ರಂಥ||**

**ತಮಾಗತಂ ಮಹಾಭಾಗಂ ಸರ್ವಾಗಮವಿಶಾರದಮ್ ।**
**ವಿಭೀಷಣಃ ಸಮಾಲೋಕ್ಯ ಗೇಹಂ ಪ್ರಾವೇಶಯನ್ನಿಜಮ್ ॥**

**ಟೀಕು||** ಆಗತಂ=ಬಂದಿರ್ದ್ದ, ಮಹಾಭಾಗಂ=ಶ್ರೇಷ್ಠನಾದ, ಸರ್ವಾಗಮವಿಶಾರದಂ= ಕಾಮಿಕಾದಿ ಸಕಲಾಗಮಂಗಳಲ್ಲಿ ಕುಶಲನಾದ, ತಂ=ಆ ರೇವಣಾಸಿದ್ಧೇಶ್ವರನನು, ವಿಭೀಷಣಃ=ವಿಭೀಷಣನು, ಸಮಾಲೋಕ್ಯ=ಕಂಡು, ನಿಜಂಗೇಹಂ=ತನ್ನರಮನೆಯನು, ಪ್ರಾವೇಶಯತ್=ಎಯ್ದಿಸಿದನು. ||೫||

**ಗ್ರಂಥ||**

**ಭದ್ರಾಸನೇ ನಿಜೇ ರಮ್ಯೇ ನಿವೇಶ್ಯ ಗಣನಾಯಕಮ್ ।**
**ಅರ್ಘ್ಯಪಾದ್ಯಾದಿಭಿಃ ಸರ್ವೈರುಪಚಾರೈರಪೂಜಯತ್ ॥**

**ಟೀಕು||** ಸಃ=ಆ ವಿಭೀಷಣನು, ರಮ್ಯೇ=ಮನೋಹರವಾದ, ನಿಜೇಭದ್ರಾಸನೇ=ತನ್ನ ಸಿಂಹಾಸನದಲ್ಲಿ, ಗಣನಾಯಕಂ=ಗಣೇಶ್ವರನಾದ ರೇವಣಾಸಿದ್ಧೇಶ್ವರನನು, ನಿವೇಶ್ಯ=ಕುಳ್ಳಿರಿಸಿ, ಅರ್ಘ್ಯಪಾದ್ಯಾದಿಭಿಃ= ಅರ್ಘ್ಯಪಾದ್ಯಮೊದಲಾಗುಳ್ಳ, ಸರ್ವೈಃ ಉಪಚಾರೈಃ=ಸಮಸ್ತೋಪಚಾರಂಗಳಿಂದೆ, ಅಪೂಜಯತ್= ಪೂಜಿಸಿದನು. ||೬||

**ಗ್ರಂಥ||**

**ಪೂಜಿತೇನ ಪ್ರಸನ್ನೇನ ರೇಣುಕೇನ ನಿರೂಪಿತಃ ।**
**ನಿಷಸಾದ ತದಭ್ಯಾಸೇ ಸ ನಿಜಾಸನಮಾಶ್ರಿತಃ ॥**

**ಟೀಕು||** ಸಃ=ಆ ವಿಭೀಷಣನು, ಪೂಜಿತೇನ=ಪೂಜಿಸಲುಪಟ್ಟ, ಪ್ರಸನ್ನೇನ=ಪ್ರಸನ್ನನಾದ ರೇಣುಕೇನ=ರೇವಣಾಸಿದ್ಧೇಶ್ವರನಿಂದೆ, ನಿರೂಪಿತಃ=ಆಜ್ಞಾಪಿಸಲುಪಟ್ಟಾತನನಾಗಿ, ತದಭ್ಯಾಸೇ=ಆ ರೇವಣಾಸಿದ್ಧೇಶ್ವರನ ಸಮೀಪದಲ್ಲಿ, ನಿಜಾಸನಮ್=ನಿಜಾಸನವನು, ಆಶ್ರಿತಃ=ಆಶ್ರಯಿಸಿ, ನಿಷಸಾದ= ಕುಳಿತನು. ||೭||

**ಗ್ರಂಥ||**

**ಆಬಭಾಷೇ ಗಣೇಂದ್ರಂ ತಂ ಕೃತಾಂಜಲಿ ವಿಭೀಷಣಃ ।**
**ಮಾನುಷಾಕಾರಸಂಪನ್ನಂ ಸಾಕ್ಷಾಚ್ಛಿವಮಿವಾಪರಮ್ ॥**

**ಟೀಕು||** ವಿಭೀಷಣಃ=ವಿಭೀಷಣನು, ಮಾನುಷಾಕಾರಸಂಪನ್ನಂ=ಮನುಷ್ಯಸ್ವರೂಪವನು ಎಯ್ದಿ, ಸಾಕ್ಷಾತ್=ಪ್ರತ್ಯಕ್ಷವಾಗಿ, ಅಪರಂ ಶಿವಮಿವ=ಎರಡನೆಯ ಶಿವನೇಕೈಯೆಂಬ ಹಾಂಗೆ ಇರುತ್ತಿರ್ದ್ದ, ತಂ ಗಣೇಂದ್ರಂ=ಆ ರೇಣುಕಗಣೇಶ್ವರನನು, ಕೃತಾಂಜಲಿಃ ಯಥಾ ಭವತಿ ತಥಾ= ಮಾಡಲುಪಟ್ಟ ಹಸ್ತಪುಟಹಣಯಹಗಹುದು ಅಹಗೆ, ಆಬಭಾಷೇ=ಬಿನ್ನಹವ ಮಾಡಿದನು. ||೮||

ಗ್ರಂಥ॥ ರೇಣುಕ ತ್ವಂ ಗಣಾಧೀಶ ಶಿವಜ್ಞಾನಪರಾಯಣ ।
ಅವತೀರ್ಣಂ ಮಹೀಮೇನಾಮಿತಿ ಸಮ್ಯಕ್ ಶ್ರುತಂ ಮಯಾ ॥

ಟೀಕು॥ ಶಿವಜ್ಞಾನಪರಾಯಣ=ಶಿವಜ್ಞಾನದಲ್ಲಿ ತತ್ಪರನಾಗಿರ್ದ್ದ, ಗಣಾಧೀಶ=ಗಣೇಶ್ವರನಾದ, ಭೋ ರೇಣುಕ=ಎಲೈ ರೇವಣಾಸಿದ್ಧೇಶ್ವರನೆ! ತ್ವಾಂ=ನೀನು, ಏನಾಂ ಮಹೀಂ ಪ್ರತಿ=ಈ ಭೂಲೋಕವನು ಕುರ್ತ್ತು, ಅವತೀರ್ಣಂ=ಅವತರಿಸಿದ್ದಾತನಾಗಿ, ಮಯಾ=ಎನ್ನಿಂದೆ, ಸಮ್ಯಕ್=ಲೇಸಾಗಿ, ಇತಿ=ಲೋಕವಾರ್ತೆಯಿಂದೆ, ಶ್ರುತಂ=ಕೇಳಲುಪಟ್ಟಿತ್ತು. ನಾನು ಕೇಳಿದೆನೆಂಬುದರ್ಥ. ॥೯॥

ಗ್ರಂಥ॥ ಮದ್ಭಾಗ್ಯಗೌರವಾದದ್ಯ ಸಮಾಯಾಸ್ತ್ವಂ ಪುರೀಮಿಮಾಮ್ ।
ಕಥಂ ಭಾಗ್ಯವಿಹೀನಾನಾಂ ಸುಲಭಾಃ ಸ್ಯುರ್ಭವಾದೃಶಾಃ ॥

ಟೀಕು॥ ಭೋ ರೇಣುಕ=ಎಲೈ ರೇಣುಕಗಣೇಶ್ವರನೆ! ತ್ವಂ=ನೀನು, ಮದ್ಭಾಗ್ಯಗೌರವಾತ್= ಎನ್ನ ಭಾಗ್ಯದ ಗುರುತ್ವದದೆಸೆಯಿಂದೆ, ಅದ್ಯ=ಈಗ, ಇಮಾಂ ಪುರೀಂ=ಈ ಪಟ್ಟಣವನು, ಸಮಾಯಾಃ= ಎಯ್ದಿದೆ. ತಥಾ ಹಿ=ಅಹಗಹುದಲಾ! ಭಾಗ್ಯವಿಹೀನಾನಾಂ=ಭಾಗ್ಯಹೀನರಿಗೆ, ಭವಾದೃಶಾಃ= ನಿನ್ನೋಪಾದಿಯಾದ ಮಹಾಪುರುಷರು. ಸುಲಭಾಃ ಸ್ಯುಃ= ಆವ ಪ್ರಕಾರದಿಂದೆ ಪಡೆಯಲು ಯೋಗ್ಯವು? ॥೧೦॥

ಗ್ರಂಥ॥ ಮತ್ಸಮೋ ನಾಸ್ತಿ ಲೋಕೇಷು ಭಾಗ್ಯಾತಿಶಯವತ್ತಯಾ ।
ಯಸ್ಯ ಗೇಹಂ ಸ್ವಯಂ ಪ್ರಾಪ್ತೋ ಭವಾನ್ ಸಾಕ್ಷಾನ್ಮಹೇಶ್ವರಃ ॥

ಟೀಕು॥ ಭೋ ರೇಣುಕ=ಎಲೆ ರೇಣುಕಗಣೇಶ್ವರನೆ! ಸಾಕ್ಷಾನ್ಮಹೇಶ್ವರಃ=ಭೂಭಾಗವನೆಯ್ದಿದ ಪ್ರತ್ಯಕ್ಷಪರಮೇಶ್ವರನಾದ, ಭವಾನ್=ನೀನು, ಸ್ವಯಂ=ನಿನ್ನಿಂದವೆ, ಯಸ್ಯ=ಆವನಾನೊರ್ವ, ಗೇಹಂ=ಅರಮನೆಯನು, ಪ್ರಾಪ್ತಃ=ಎಯ್ದಿದ್ದಾತನು; ಅತಃ=ಅದುಕಾರಣವಾಗಿ, ಭಾಗ್ಯಾತಿಶಯ ವತ್ತಯಾ=ಭಾಗ್ಯಾತಿಶಯವುಳ್ಳಾತನಹತನದಿಂದೆ, ಮತ್ಸಮಃ=ಎನಗೆ ಸಮಾನವಾಗಿದ್ದಾತನು, ಲೋಕೇಷು=ಲೋಕಂಗಳಲ್ಲಿ, ನಾಸ್ತಿ=ಇಲ್ಲ. ॥೧೧॥

ಗ್ರಂಥ॥ ಕೃತಾರ್ಥಾ ಮೇ ಪುರೀ ಹ್ಯೇಷಾ ಕೃತಾರ್ಥೋ ರಾಕ್ಷಸಾನ್ವಯಃ ।
ಜೀವಿತಂ ಚ ಕೃತಾರ್ಥಂ ಮೇ ಯಸ್ಯ ತ್ವಂ ದೃಷ್ಟಿಗೋಚರಃ ॥

ಟೀಕು॥ ಭೋ ರೇಣುಕ=ಎಲೆ ರೇಣುಕಗಣೇಶ್ವರನೆ! ತ್ವಂ=ನೀನು, ಯಸ್ಯ ಮೇ=ಆವನಾನೊರ್ವ ಎನ್ನ, ದೃಷ್ಟಿಗೋಚರಃ=ದೃಷ್ಟಿಗೆ ವಿಷಯವಾದಾತನು; ಅತಃ=ಇದು ಕಾರಣವಾಗಿ, ಮೇ=ಎನ್ನ, ಏಷಾ ಪುರೀ=ಈ ಲಂಕಾಪುರಿಯು, ಕೃತಾರ್ಥಃ=ಕೃತಾರ್ಥವಾಗಿರ್ದ್ದ ಅದು, ರಾಕ್ಷಸಾನ್ವಯಃ=ರಾಕ್ಷಸ ಸಂತಾನವು,

ಕೃತಾರ್ಥಃ=ಕೃತಾರ್ಥವಾಗಿರ್ದ್ದ ಅದು; ಮೇ=ಎನ್ನ, ಜೀವಿತಂ=ಬದುಕದು, ಕೃತಾರ್ಥಂ=ಕೃತಾರ್ಥವಾಗಿರ್ದ್ದ ಅದು. ॥೧೨॥

ಗ್ರಂಥ॥ **ಇತಿ ಬ್ರುವಾಣಂ ಕಲ್ಯಾಣಂ ರಾಕ್ಷಸೇಂದ್ರಂ ಗಣೇಶ್ವರಃ ।**
**ಬಭಾಷೇ ಸಸ್ಮಿತೋ ವಾಣೀಂ ವಿಶ್ವೋಲ್ಲಾಸಕರೀಂ ಶುಭಾಮ್ ॥**

**ಟೀಕು॥** ಇತಿ=ಈ ಪ್ರಕಾರದಿಂದೆ, ಬ್ರುವಾಣಂ=ನುಡಿವುತ್ತಿರ್ದ್ದ, ಕಲ್ಯಾಣಂ=ಮಂಗಲ ಸ್ವರೂಪನಾದ, ರಾಕ್ಷಸೇಂದ್ರಂ=ರಾಕ್ಷಸಾಧಿನಾಯಕನಾದ ವಿಭೀಷಣನನು, ಗಣೇಶ್ವರಃ=ರೇಣುಕ ಗಣೇಶ್ವರನು, ಸಸ್ಮಿತಃ ಸನ್=ಮುಗುಳುನಗೆಯೊಡನೆ ಕೂಡಿ ವರ್ತಿಸುತ್ತಿರ್ದ್ದಾತನಾಗುತಲು, ವಿಶ್ವೋಲ್ಲಾಸಕರೀಂ=ಸಮಸ್ತವನೂ ಉಲ್ಲಾಸವ ಮಾಡುತ್ತಿರ್ದ್ದ, ಶುಭಾಂ=ಮಂಗಲವಾದ, ವಾಣೀಂ= ವಕ್ಷ್ಯಮಾಣ ಪ್ರಕಾರವಾದ ವಾಕ್ಯವನು, ಬಭಾಷೇ=ನುಡಿದನು. ॥೧೩॥

ಗ್ರಂಥ॥ **ವಿಭೀಷಣ ಮಹಾಭಾಗ ಜಾನೇ ತ್ವಾಂ ಧರ್ಮಕೋವಿದಮ್ ।**
**ತ್ವಾಂ ವಿನಾ ಕಸ್ಯ ಲೋಕೇಷು ಜಾಯತೇ ಭಕ್ತಿರೀದೃಶೀ ॥**

**ಟೀಕು॥** ಮಹಾಭಾಗ=ಶ್ರೇಷ್ಠನಾದ, ಭೋ ವಿಭೀಷಣ=ಎಲೆ ವಿಭೀಷಣನೆ! ತ್ವಾಂ=ನಿನ್ನನು, ಧರ್ಮಕೋವಿದಂ=ಶಿವಧರ್ಮದಲ್ಲಿ ಪ್ರವೀಣನನಾಗಿ, ಜಾನೇ=ಅರಿವುತ್ತಿರ್ದ್ದೇನೆ. ಲೋಕೇಷು= ಲೋಕಂಗಳಲ್ಲಿ, ತ್ವಾಂ ವಿನಾ=ನೀ ಹೊರತಾಗಿ, ಕಸ್ಯ=ಆವಾತನಿಗೆ, ಈದೃಶೀ ಭಕ್ತಿಃ=ಈ ಪ್ರಕಾರವಾದ ಭಕ್ತಿಯು, ಜಾಯತೇ=ಹುಟ್ಟುತ್ತಿರ್ದ್ದಪುದು. ಆರಿಗೂ ಹುಟ್ಟದೆಂಬುದರ್ಥ. ॥೧೪॥

ಗ್ರಂಥ॥ **ಸಮಸ್ತಶಾಸ್ತ್ರಸಾರಜ್ಞಂ ಸರ್ವಧರ್ಮಪರಾಯಣಮ್ ।**
**ಆಧ್ಯಾತ್ಮವಿದ್ಯಾನಿರತಮಾಹುಸ್ತ್ವಾಂ ರಾಕ್ಷಸೇಶ್ವರ ॥**

**ಟೀಕು॥** ಭೋ ರಾಕ್ಷಸೇಶ್ವರ=ಎಲೆ ವಿಭೀಷಣನೆ! ತ್ವಾಂ=ನಿನ್ನನು, ಸಮಸ್ತಶಾಸ್ತ್ರಸಾರಜ್ಞಂ= ನಿಗಮಾಗಮಾದಿ ಸಕಲಶಾಸ್ತ್ರಸಾರವನು ಬಲ್ಲಾತನನಾಗಿ, ಸರ್ವಧರ್ಮಪರಾಯಣಂ=ಸಕಲಶಿವ ಧರ್ಮದಲ್ಲಿ ತತ್ಪರನಾಗಿ, ಆಧ್ಯಾತ್ಮವಿದ್ಯಾನಿರತಂ=ಶಿವಜ್ಞಾನಯೋಗರೂಪವಾದ ಆಧ್ಯಾತ್ಮವಿದ್ಯೆಯಲ್ಲಿ ತತ್ಪರನನಾಗಿ [ಇದ್ದೀಯೆಂದು] ಆಹುಃ=ಹೇಳುತ್ತಿರ್ದ್ದಪರು. ॥೧೫॥

ಗ್ರಂಥ॥ **ತ್ವದೀಯಧರ್ಮಸಂಪತ್ತಿಂ ಶ್ರುತ್ವಾಽಹಂ ವಿಸ್ಮಿತಾಶಯಃ ।**
**ವ್ರಜನ್ ಕೈಲಾಸಮಚಲಂ ತ್ವದಂತಿಕಮುಪಾಗತಃ ॥**

**ಟೀಕು॥** ಭೋ ವಿಭೀಷಣ=ಎಲೈ ವಿಭೀಷಣನೆ! ತ್ವದೀಯಾಂ=ನಿನ್ನ ಸಂಬಂಧವಾದ ಧರ್ಮ ಸಂಪತ್ತಿಂ=ಧರ್ಮಾಚಾರಸಂಪತ್ತಿಯನು, ಅಹಂ=ನಾನು, ಶ್ರುತ್ವಾ=ಕೇಳಿ, ವಿಸ್ಮಿತಾಶಯಃ ಸನ್=

